ಅರವತ್ತನೆಯ ಪ್ರಕಟಣೆ

# ಸಮಗ್ರ ಸಾಹಿತ್ಯ

## ಸಂಪುಟ : ಎರಡು

## ವಿಚಾರ ಸಾಹಿತ್ಯ

ಗೌರೀಶ ಕಾಯ್ಕಿಣಿ




೧೯೯೪

'SAMAGRA SĀHITYA' by Gourish Kaikini, Gokarna Uttar Kannada ( Karnataka ). Edited by Vishnu Naik and Published by Shri Raghavendra Prakashana Ambarkodla, Ankola - 581 314.

First Impression : May, 1994. Pages : 534 (Including cover)

Price Rs. 125-00 ಬೆಲೆ : ೧೨೫-೦೦. 

ಮುದ್ರಣ :

ಶ್ರೀ ರಾಘವೇಂದ್ರ ಪ್ರಿಂಟರ್ಸ, ಕಾರವಾರ ( ಉ. ಕ. )

---

# ಪರಿವಿಡಿ


ಮೊದಲ ಮಾತು / vi

ಪ್ರಸ್ತಾವನೆ / viii

* ಗಂಡು-ಹೆಣ್ಣು / ೧

* ಪ್ರೀತಿ / ೯೨

* ಜೀವನ ವಿಜ್ಞಾನ ( ಬಾಳಿನ ಗುಟ್ಟು ) / ೧೭೧

* ಮನೋವಿಜ್ಞಾನ-ರೂಪರೇಷೆಗಳು / ೩೩೨

* ಗ್ರೀಕ ದಾರ್ಶನಿಕರು ( ಪಾಶ್ಚಾತ್ಯದರ್ಶನ ವಿಚಾರ ) / ೪೭೩

# ಮೊದಲ ಮಾತು

ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂದಿರುವ, 'ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ'ದ ಎರಡನೆಯ ಸಂಪುಟವೀಗ ಸಿದ್ಧವಾಗಿದೆ. ಪ್ರಥಮ ಸಂಪುಟಕ್ಕೆ ದೊರಕಿದ ಸ್ವಾಗತ-ಮನ್ನಣೆ ಈ ಸಂಪುಟಕ್ಕೂ ದೊರಕುವುದೆಂಬ ವಿಶ್ವಾಸ ನಮಗಿದೆ.

ಈ ಯೋಜನೆಯ ಹಿಂದಿನ ಪ್ರೇರಣೆಯ ಕುರಿತು ಪ್ರಥಮ ಸಂಪುಟಕ್ಕೆ ಬರೆದ 'ಮೊದಲಮಾತಿ'ನಲ್ಲಿ ತಿಳಿಸಿದ್ದೇನೆ. ೧೯೪೦ ರಿಂದ ೫೦ ರ ಅವಧಿಯಲ್ಲಿ ಗೌರೀಶರು ಬರೆದ ನಾಲ್ಕು ವಿಚಾರ ಪ್ರಧಾನವಾದ ಕೃತಿಗಳು ಈ ಸಂಪುಟದೊಳಗೆ ಸೇರಿವೆ. ಗೌರೀಶರ 'ಬಾಳಿನ ಗುಟ್ಟು' ಕೃತಿಯು ಇಲ್ಲಿ 'ಜೀವನವಿಜ್ಞಾನ' ಎಂಬ ಹೆಸರನ್ನು ಪಡೆದುಕೊಂಡರೆ, ೧೯೬೦ ರ ದಶಕದಲ್ಲಿ ಅಂದಿನ 'ಆರಾಧನೆ'ಯೊಳಗೆ 'ಪಾಶ್ಚಾತ್ಯ ದರ್ಶನ ವಿಚಾರ' ಎಂಬ ಶಿರೋನಾಮೆಯಲ್ಲಿ ಪ್ರಕಟವಾದ ಲೇಖನಗಳು 'ಗ್ರೀಕ ದಾರ್ಶನಿಕರು' ಎಂಬ ಹೆಸರಿನಿಂದ ಸೇರ್ಪಡೆಯಾಗಿವೆ. ಇನ್ನುಳಿದ ಮೂರು ಗ್ರಂಥಗಳ ಶಿರೋನಾಮೆಗಳಲ್ಲಿ ಬದಲಾವಣೆ ಮಾಡಿಲ್ಲ.

ಬೇರೆ ಬೇರೆ ಕಾರಣಗಳಿಗಾಗಿ ಬಹುಮಹತ್ವದ ಕೃತಿಗಳೆಂದು ಪರಿಗಣಿಸಲ್ಪಟ್ಟ ಈ ಕೃತಿಗಳು,-ನಾಲ್ಕುದಶಕಗಳ ಹುಡುಕಾಟದ ನಂತರ-ಈಗ ಒಂದೇ ಕಟ್ಟಿನಲ್ಲಿ ಓದುಗರಿಗೆ ಸಿಗುವಂತಾಗಿದೆ. ಗೌರೀಶರ ವಿಸ್ತಾರವಾದ ಜೀವನಾನುಭವಕ್ಕೆ, ಚಿಂತನೆಯ ಕಸುವಿಗೆ, ವೈಚಾರಿಕತೆಯ ಹಿರಿಮೆಗೆ, ನೆನಪಿನ ಶಕ್ತಿಗೆ, ಮಾನವೀಯ ಸ್ಪಂದನಗಳಿಗೆ ಹಾಗೂ ಪದ್ಯಗಂಧ ತುಂಬಿಕೊಂಡ ಗದ್ಯಶೈಲಿಗೆ ಈ ಸಂಪುಟದ ಕೃತಿಗಳು ಮಾದರಿಯಾಗಬಲ್ಲವು.

ಮಾನ್ಯ ಯಶವಂತ ಚಿತ್ತಾಲರ ಅಧ್ಯಕ್ಷತೆಯ ಸಂಪಾದಕ ಸಲಹಾಮಂಡಳಿಯು ನನಗೆ ನೀಡಿರುವ-ನೀಡುತ್ತಿರುವ ಸಹಕಾರಕ್ಕಾಗಿ ನಾನು ಋಣಿಯಾಗಿದ್ದೇನೆ.

ಈ ಸಂಪುಟದಲ್ಲಿ ಸೇರಿರುವ ಮೂರು ಪುಸ್ತಕಗಳನ್ನು ನಮಗೆ ಸಕಾಲದಲ್ಲಿ ದೊರಕಿಸಿ ಕೊಡುವಲ್ಲಿ ಹಿರಿಯರಾದ ಶ್ರೀ ಚೆನ್ನವೀರ ಕಣವಿಯವರು ತುಂಬಾ ನೆರವಾಗಿದ್ದಾರೆ.

ಪೂಜ್ಯರಾದ ಗೌರೀಶರೂ ಅವರ ಕುಟುಂಬದ ಸದಸ್ಯರೂ ಈ ಕಾರ್ಯದಲ್ಲಿಯು ನನ್ನ ಶ್ರಮವನ್ನು ಹಂಚಿಕೊಳ್ಳುತ್ತಿದ್ದಾರೆ.

ನಮ್ಮ ಪ್ರಕಾಶನದ ಬಗ್ಗೆ ಇರುವ ನಂಬಿಕೆ ಹಾಗೂ ಗೌರೀಶರ ಬಗ್ಗೆ ಇರುವ ಗೌರವದಿಂದ ಬಹಳಷ್ಟು ಅಭಿಮಾನಿಗಳು ಈ ಯೋಜನೆಯ ಮಹಾಪೋಷಕರಾಗಿ, ಪೋಷಕರಾಗಿ, ಆಶ್ರಯದಾತರಾಗಿ ಸದಸ್ಯರಾಗಿ (ಪ್ರಕಟಣ ಪೂರ್ವ ಬೆಲೆತೆತ್ತು) ನನಗೆ ಬಲನೀಡಿ ಹರಸಿದ್ದಾರೆ.

ನಿಗದಿತ ಅವಧಿಯೊಳಗೆ ಸಂಪುಟಗಳು ಓದುಗರಿಗೆ ಸಿಗುತ್ತಿರುವುದಕ್ಕೆ ಮುಖ್ಯವಾಗಿ ಮುದ್ರಣ ವಿಭಾಗದ ಹೊಣೆ ಹೊತ್ತ ನನ್ನ ಸಹೋದರ ರಾಮಾ ನಾಯ್ಕ ಹಾಗೂ ಅವರ ಮುದ್ರಣಾಲಯದ ಸಿಬ್ಬಂದಿಗಳ ಸಂಪೂರ್ಣ ಸಹಕಾರವೇ ಕಾರಣವಾಗಿದೆ.

ಈ ಎಲ್ಲ ಬಾಂಧವರ ಉಪಕಾರವನ್ನು ನಾನು ಅತ್ಯಂತ ಗೌರವದಿಂದ ಸ್ಮರಿಸುತ್ತೇನೆ.

೧೦ ಸಂಪುಟಗಳಲ್ಲಿ ಪ್ರಕಟಿಸಬೇಕೆಂದಿರುವ – ೫ ಲಕ್ಷ ರೂಪಾಯಿ ಅಂದಾಜು ವೆಚ್ಚದ–ಈ ಯೋಜನೆಯ ವಿವರವನ್ನು ಪ್ರಕಟಿಸುತ್ತಿದ್ದಂತೆ, ನನಗೆ ನನ್ನ ಪ್ರೀತಿಯ ಹಿತೈಷಿಗಳೂ, ಅಭಿಮಾನಿಗಳೂ ಬರೆದ ಪತ್ರಕ್ಕೆ ಲೆಕ್ಕವಿಲ್ಲ. ವಿಶ್ವವಿದ್ಯಾಲಯಗಳೇ ಹಿಂದೇಟು ಹಾಕುವಂಥ ಕಷ್ಟದ ಕೆಲಸವನ್ನು ಹೊತ್ತುಕೊಂಡ ಧೈರ್ಯಕ್ಕಾಗಿ ಅಭಿನಂದಿಸಿದವರಿದ್ದಾರೆ. ನಿಮ್ಮದು ಸಣ್ಣ ಪ್ರಕಾಶನ ಸಂಸ್ಥೆ, ಅದೂ ಗ್ರಾಮಾಂತರ ಭಾಗದಲ್ಲಿ–ರಾಜಧಾನಿಯಿಂದ ಬಹುದೂರ ಇರುವಂಥದ್ದು, ಸಾಧಕ–ಬಾಧಕ ಯೋಚಿಸಿ ಮುಂದೆ ಹೆಜ್ಜೆ ಹಾಕಿರಿ, ನಿಮ್ಮಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ !' ಎಂದು ನಾಳೆಯ ಬಗ್ಗೆ ಎಚ್ಚರಿಸಿ ; ಬುದ್ಧಿಮಾತು ಬರೆದವರೂ ಇದ್ದಾರೆ.

ನಮ್ಮ ಸರಕಾರವು ಇತ್ತ ಗಮನ ಹರಿಸಬೇಕೆಂಬುದು ನನ್ನ ಅರಿಕೆ. ಸಗಟು ಖರೀದಿಯ ವಿವಿಧ ಅವಕಾಶಗಳನ್ನು ಹೊಂದಿರುವ 'ಸಾರ್ವಜನಿಕ ಗ್ರಂಥಾಲಯ ಇಲಾಖೆ', ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಹೊಣೆ ಹೊತ್ತ 'ಕನ್ನಡ ಮತ್ತು ಸಂಸ್ಕೃತಿ ಇಲಾಖೆ' ಕನ್ನಡ ಗ್ರಂಥೋದ್ಯಮದ ಅಭಿವೃದ್ಧಿಗಾಗಿಯೇ ಇತ್ತೀಚೆ ಅಸ್ತಿತ್ವಕ್ಕೆ ಬಂದ 'ಕನ್ನಡ ಪುಸ್ತಕ ಪ್ರಾಧಿಕಾರ'ಗಳ ಮೂಲಕ ನಮ್ಮ ಸರಕಾರಕ್ಕೆ ಈ ಬಗೆಯ ಮೌಲಿಕ ಗ್ರಂಥಗಳ ಸಾವಿರ ಪ್ರತಿಗಳಲ್ಲಿ ೫೦೦ ನ್ನಾದರೂ ಕೊಳ್ಳಲು ಸಾಧ್ಯವಾಗುವುದಿಲ್ಲವೇ ?... ಸಾಧ್ಯವಾಗುವುದಾದರೆ ಈ ಬಗೆಯ ಹುಚ್ಚುಸಾಹಸಕ್ಕೆ ಮುಂದಾದ ನನ್ನಂಥವರು ಉಳಿದುಕೊಳ್ಳುತ್ತಾರೆ. ಇಲ್ಲದಿದ್ದರೆ ಕತೆಯಾಗುತ್ತಾರೆ.

ಅಂಕೋಲಾ

೨೬–೪–೧೯೯೪

ವಿಷ್ಣು ನಾಯ್ಕ

ಸಂಪಾದಕ–ಪ್ರಕಾಶಕ

# ಪ್ರಸ್ತಾವನೆ

'ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ ಪ್ರಕಟಣೆ' ಯೋಜನೆಗೆ ಪ್ರಸ್ತಾವನೆಯಾಗಬಲ್ಲ ನನ್ನ ಕೆಲವು ಮಾತುಗಳು ಇರಬೇಕು ಎಂದು ಯೋಜನೆಯ ಸಂಚಾಲನ-ಶಕ್ತಿಯಾದ ಮಿತ್ರ ವಿಷ್ಣು ನಾಯ್ಕರು ಬಯಸಿದ್ದಾರೆ. ನಾನು ತುಂಬಾ ಖುಶಿಯಿಂದ, ಹೆಮ್ಮೆಯಿಂದ ಒಪ್ಪಿದ್ದೇನೆ.

ನನ್ನ ಸಾಹಿತ್ಯ ಹಾಗೂ ಬದುಕು ಎರಡರ ಮೇಲೂ ಅಸಾಧಾರಣ ಪ್ರಭಾವ ಬೀರಿದ, ಅವುಗಳಿಗೊಂದು ಆಕಾರ ಕೊಡುವಲ್ಲಿ ಹಿರಿಯ ಪಾತ್ರವಹಿಸಿದ ಒಂದು ಧೀಮಂತ ಚೈತನ್ಯಕ್ಕೆ ಕೃತಜ್ಞಯಿಂದ ತಲೆಬಾಗುವ ಒಂದು ಹೊಸ ಅವಕಾಶವಿದು ಎಂಬ ತಿಳಿವಳಿಕೆ ಈ 'ಪ್ರಸ್ತಾವನೆ'ಯ ಹಿಂದೆ ಕೆಲಸ ಮಾಡಿದ ಪ್ರೇರಣೆಯಾಗಿದೆ ಎನ್ನುವುದನ್ನು ಮೊದಲು ನೆನೆಯ ಬಯಸುತ್ತೇನೆ. ಹಾಗೂ ಈ ಅವಕಾಶವನ್ನು ಒದಗಿಸುವ ಮೂಲಕ ನನ್ನ ಬಗ್ಗೆ ಪ್ರೀತಿ ವಿಶ್ವಾಸಗಳನ್ನು ತೋರಿದ ವಿಷ್ಣು ನಾಯ್ಕರಿಗೆ ವಂದನೆಗಳನ್ನರ್ಪಿಸುತ್ತೇನೆ.

ನನಗೆ ಈ ಯೋಜನೆಯ ಬಗ್ಗೆ ಮೊದಲು ಗೊತ್ತಾದದ್ದು ನಾನು ಕಾರವಾರಕ್ಕೆ ಹೋಗಿದ್ದಾಗ. ಗೌರೀಶರನ್ನು ಸನ್ಮಾನಿಸುವ ಒಂದು ಸಮಾರಂಭವನ್ನು ಹಾಗೂ ಅವರ 'ಬದುಕು-ಸಾಹಿತ್ಯ'ಗಳನ್ನು ಕುರಿತ ವಿಚಾರ ಸಂಕಿರಣವನ್ನು ಜೊತೆಯಾಗಿ ಹಮ್ಮಿಕೊಂಡ ಒಂದು ಕಾರ್ಯಕ್ರಮದಲ್ಲಿ ಉಪಸ್ಥಿತನಿರುವ ಒಂದು ಸಂತೋಷದಾಯಕ ಯೋಗಾಯೋಗ ಒದಗಿಬಂದಿತ್ತು. ಗೆಳೆಯರ ಒತ್ತಾಯಕ್ಕೆ ಆಗ ಕೆಲವು ಮಾತುಗಳನ್ನು ಆಡಿದ್ದೆ : ಕೇವಲ ಮಾತಿನಲ್ಲಿ ಸಂದ ಸನ್ಮಾನ, ಭಾಷಣ ರೂಪದ ವಿಮರ್ಶೆ ಗೌರೀಶರಿಗೆ ತೃಪ್ತಿ ಕೊಡುವಂಥದ್ದಲ್ಲವೆಂದು ತಿಳಿಸುತ್ತ, ವಿಪುಲವಾಗಿ ಸೃಷ್ಟಿಗೊಂಡ ಅವರ ಸಾಹಿತ್ಯದ 'ಸಮಗ್ರ ವಿಮರ್ಶೆ' ನಡೆಯುವುದು ಹಾಗೂ ಆ ವಿಮರ್ಶೆಯನ್ನು ಒಂದು ಬೃಹತ್-ಗ್ರಂಥದ ರೂಪದಲ್ಲಿ ಗೌರೀಶರಿಗೆ ಸಮರ್ಪಿಸುವುದು ಅವರಿಗೆ ಪ್ರಿಯವಾಗಬಹುದಾದ ಸನ್ಮಾನವೆಂದು ಸೂಚಿಸಿದ್ದೆ.

ಸಂದರ್ಭಕ್ಕೆ ಉಚಿತವಾಗಿ ಬಂದ ಈ ಮಾತುಗಳಲ್ಲಿ ಅಂಥ ವಿಶೇಷವಾದದ್ದು ಇಲ್ಲವೇ ಹೊಸತಾದದ್ದು ಏನೂ ಇರಲಿಲ್ಲ. 'ಅಭಿನಂದನ-ಗ್ರಂಥ' ಕನ್ನಡದ ವಾತಾವರಣದಲ್ಲೇ ಇಂದು ನೆಲೆನಿಂತ ಸಂಗತಿಯಾಗಿದೆ. ನನ್ನ ಸೂಚನೆಗೂ ಅಂಥ

ಆಕಾರ ಬಂದದ್ದು ಆಶ್ಚರ್ಯವಲ್ಲವೇನೋ. ಆದರೆ ಜಿಲ್ಲೆಯ ಸಾಹಿತ್ಯಿಕ ಕ್ಷೇತ್ರಕ್ಕೆ ಸದಾ ಲವಲವಿಕೆ ತುಂಬುತ್ತಿರುವ ವಿಷ್ಣು ನಾಯ್ಕ ಹಾಗೂ ಅವರ ಮಿತ್ರರ ಉತ್ಸಾಹ ಇನ್ನೂ ಒಂದು ಹೆಜ್ಜೆ ಮುಂದೆ ಹೋದದ್ದು ಅಥವಾ ಒಳ್ಳೆಯ ಅರ್ಥ ದಲ್ಲಿ 'ಹಿಂದೆ ಹೋದದ್ದು' ಆ ಮೇಲೆ ಗೊತ್ತಾಯಿತು. 'ಸಮಗ್ರ ವಿಮರ್ಶೆ'ಗಿಂತ ಮೊದಲು 'ಸಮಗ್ರ ಸಾಹಿತ್ಯ' ಇರಬೇಡವೆ ? ಕಳೆದ ಐದು ದಶಕಗಳಿಗೂ ಮಿಕ್ಕಿದ ಕಾಲದಲ್ಲಿ ಬರೆದು ಪ್ರಕಟಿಸಿದ, ಆದರೆ ಮರು ಮುದ್ರಣ ಕಾಣದೇ ಈಗ ಸುಲಭವಾಗಿ ಸಿಗಲಾರದ ಪುಸ್ತಕಗಳಲ್ಲಿ; ಪುಸ್ತಕರೂಪದಲ್ಲಿ ಸಂಕಲಿತವಾಗದೇ ಬರೇ ಹಲವಾರು ಪತ್ರಿಕೆಗಳಲ್ಲಿ; ಅಥವಾ ಮುದ್ರಣವನ್ನೇ ಕಾಣದೆ ಇನ್ನೂ ಹಸ್ತಪ್ರತಿಗಳಲ್ಲಿ–ಒಟ್ಟಿನಲ್ಲಿ, ಚೆಲ್ಲಾಪಿಲ್ಲಿಯಾಗಿ ಹರಡಿ ಬಿದ್ದ ಸಾಹಿತ್ಯ ಮೊದಲು ಒಂದೆಡೆ ಬರುವಂತಾಗಬೇಡವೆ ? ಹಾಗೆ ಬರುವಂತೆ ಮಾಡಲು ಈ ಗೆಳೆಯರು ಹಾಕಿಕೊಂಡ ಯೋಜನೆಯು ಕಲ್ಪನೆಯಿಂದ ಎಷ್ಟೊಂದು ಬೆರಗುಗೊಂಡಿದ್ದೆನೆಂದರೆ ಕೇಳಿದಾಗ ನಂಬುವುದು ಕಷ್ಟವಾಯಿತು: ಜಿಲ್ಲೆಯ ಕರ್ತೃತ್ವ ಶಕ್ತಿಗೆ ಈ ಸಾಹಸ-ಸದೃಶ ಯೋಜನೆ ದಕ್ಕಬಹುದೆ ? ಅಥವಾ ಇಲ್ಲದ ಆಸೆ ಹುಟ್ಟಿಸಿ ಬರಿಯ ಮಾತಾಗಿಯೇ ಉಳಿಯಬಹುದೆ ? ಎಂದು ಅಧೀರನಾಗಿದ್ದೆ. ಆದರೀಗ, 'ಇದು ಬರಿ ಮಾತಲ್ಲೋ ಅಣ್ಣಾ' ಎಂದು ಉಲ್ಲಾಸದಿಂದ ಸಾರುತ್ತ ಕುಣಿಯುತ್ತ ಎಂಬಂತೆ ಕಣ್ಣೆದುರು ಬಂದು ನಿಂತು ಬಿಟ್ಟ; ಅಷ್ಟೇಕೆ, ಕೈಯಲ್ಲಿ ಬಂದು ಕುಳಿತು ಬಿಟ್ಟ ಸಂಪುಟ ಎಲ್ಲ ಅನುಮಾನಗಳನ್ನೂ ದೂರ ಮಾಡುವಂಥದ್ದಾಗಿದೆ. ಇಂಥ ಈ ಸಾಹಸಕ್ಕೆ ಕೈ ಹಾಕಿದ ವಿಷ್ಣು ನಾಯ್ಕ ಹಾಗೂ ಅವರ ಪ್ರಕಾಶನ ಸಂಸ್ಥೆಯ ಬಗೆಗೆ; ಅವರ ಬೆನ್ನಾಸರೆಗೆನಿಂತ ಅವರ ಗೆಳೆಯರ ಬಗೆಗೆ; ಪ್ರೋತ್ಸಾಹವಿತ್ತ ಎಲ್ಲ ಜನರ ಬಗೆಗೆ ಅಭಿಮಾನ ಹುಟ್ಟಿಸುವಂತಹದಾಗಿದೆ.

೫೦೦೦ ಪುಟಗಳಷ್ಟು ಗಾತ್ರದ ಸಾಹಿತ್ಯವನ್ನು ೧೦ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಪೂರ್ಣಗೊಂಡಾಗ ನಮ್ಮ ಜಿಲ್ಲೆಯ ಸಾಂಸ್ಕೃತಿಕ ಜೀವನದ ಅಭೂತ ಪೂರ್ವ ಘಟನೆಯಾಗುತ್ತದೆ. ಎನ್ನುವುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಕೈಗೆ ಬಂದ ಎರಡು ಸಂಪುಟವೇ ಅಂಥ ಭರವಸೆಗೆ ಪುಟ ನೀಡುತ್ತದೆ.

ಗೌರೀಶ–ಸಾಹಿತ್ಯದ ಬಹು ಮುಖ್ಯ ಸಾಧನೆ ವೈಚಾರಿಕ ಕ್ಷೇತ್ರಕ್ಕೆ ಸೇರಿದ್ದೆನ್ನ ಬೇಕು. ಗೌರೀಶರು ನಮಗೆ ಮುಖ್ಯರಾಗುವುದೂ, ಪ್ರಿಯರಾಗುವುದು ಒಬ್ಬ ಶ್ರೇಷ್ಠ ವಿಚಾರವಾದಿಯಾಗಿ. ವಿಶ್ವವನ್ನು, ಬದುಕನ್ನು ವಿಚಾರಗಳ ಮೂಲಕ ಅರಿಯುವ ಸಾಮರ್ಥ್ಯ ಮನುಷ್ಯನ ಬುದ್ಧಿಗಿದೆ ಎನ್ನುವುದರಲ್ಲಿ ಎಲ್ಲ ವಿಚಾರ ವಾದಿಗಳಿಗೆ ದೃಢವಾದ ನಂಬಿಕೆಯಿದೆ.

ಪ್ರಶ್ನೆ ಕೇಳಿ ಉತ್ತರ ಪಡೆಯುವ ಹಾಗೂ ಆ ಮೂಲಕ ವಿಚಾರಗಳನ್ನು ಸೃಷ್ಟಿಸುವ 'ವೈಚಾರಿಕ ಪದ್ಧತಿ'ಗೆ ಮನುಷ್ಯನಷ್ಟೇ-ಹಳೆಯ ಇತಿಹಾಸವಿದೆ, ತನ್ನದೇ ಆದ ಪರಂಪರೆಯಿದೆ. ಆದರೂ ಈ 'ಪದ್ಧತಿ'ಯ ಸಾಮರ್ಥ್ಯ, ಯಶಸ್ಸು ತಮ್ಮ ಪರಾಕಾಷ್ಠೆಯನ್ನು ಮುಟ್ಟಿದ್ದು ಮಾತ್ರ ಇತ್ತೀಚಿನ ಶತಮಾನಗಳಲ್ಲೇ ಎನ್ನಬಹುದು. ಈ 'ಪದ್ಧತಿ' ಬೆಳೆದು ಬಂದ ರೀತಿಯ ಪರಿಚಯ-ಸಂಕ್ಷಿಪ್ತವಾದರೂ ಕೂಡ-ಗೌರೀಶ-ಸಾಹಿತ್ಯದ ಮಹತ್ವವನ್ನು, ವೈಶಿಷ್ಟ್ಯವನ್ನು ಅರಿಯಲು ನೆರವಾಗಬಹುದೆಂದು ನನಗೆ ತೋರಿದೆ.

ಮನುಷ್ಯನ ಮೆದುಳಿನಲ್ಲಿ 'ಭಾಷೆ' ಹುಟ್ಟಿದ ಘಟನೆಯಷ್ಟೆ ಅದ್ಭುತವಾದ ಘಟನೆ ಮನುಷ್ಯನ ಭಾಷೆಯಲ್ಲಿ 'ಪ್ರಶ್ನೆ' ಹುಟ್ಟಿದ್ದಿರಬೇಕು. ಪ್ರಾಣಿ ವರ್ಗದಲ್ಲಿ 'ಮನುಷ್ಯ' ಹುಟ್ಟಿಕೊಂಡಿದ್ದರ ಕುರುಹು ಒಂದು ಘಟನೆಯಾದರೆ ಇನ್ನೊಂದು, ಮನುಷ್ಯನಲ್ಲಿ 'ಬುದ್ಧಿ' ಹುಟ್ಟಿಕೊಂಡಿದ್ದರ ಕುರುಹು ಆಯಿತು. ಹಾಗೇದೇ ಮಾನವ ಪ್ರಜ್ಞೆಯ ಇತಿಹಾಸದಲ್ಲಿ 'ಪ್ರಶ್ನೆ' ಹುಟ್ಟಿದ ಕ್ಷಣ 'ಶಬ್ದ' ಹುಟ್ಟಿದ ಕ್ಷಣವಷ್ಟೇ ಕ್ರಾಂತಿಕಾರಿಯಾದುದಾಗಿದೆ.

ಮನುಷ್ಯ ಕೇಳಿಕೊಂಡ ಮೊಟ್ಟ ಮೊದಲ ಪ್ರಶ್ನೆಯಲ್ಲಿ 'ವಿಚಾರ'ದ ಉಗಮವಾಯಿತು; ಚಿಂತನಶೀಲತೆ ಹುಟ್ಟಿಕೊಂಡಿತು. ಜಗತ್ತಿನ ಎಲ್ಲ ಬಗೆಯ ಚಿಂತನಕಾರರಿಗೆ-ವಿಜ್ಞಾನಿ, ದಾರ್ಶನಿಕ, ಅನುಭಾವಿಗಳಿಗೆಲ್ಲ-ವಿಶ್ವದ ಸಮ್ಮುಖದಲ್ಲಿ ನಿಂತು ವಿಸ್ಮಯದಿಂದ 'ಇದು ಏನು?' ಎಂದು ಪ್ರಶ್ನೆ ಕೇಳಿಕೊಂಡ ಮೊಟ್ಟಮೊದಲ ಮನುಷ್ಯನೇ ಮೂಲ ಪುರುಷನಾಗಿದ್ದಾನೆ ಎನ್ನುವುದನ್ನು ನೆನೆಯಬೇಕು. ನೆನೆಯಬೇಕಾದ ಇನ್ನೊಂದು ಸಂಗತಿಯೆಂದರೆ ಮನುಷ್ಯ ತಾನು ಹುಟ್ಟಿದಂದಿನಿಂದಲೂ ಕಂಡುಕೊಂಡ ಅಸಂಖ್ಯ ಉತ್ತರಗಳಿಗೆ ಹೋಲಿಸಿದರೆ ಉತ್ತರಗಳನ್ನು ಆಹ್ವಾನಿಸಿದ ಪ್ರಶ್ನೆಗಳು ಕೇವಲ ಬೆರಳೆಣಿಕೆಯವು : ಏನು ? ಯಾರು ? ಹೇಗೆ ? ಏಕೆ ? ಎಲ್ಲಿ ? ಎಂದು ? ಎಷ್ಟು ? ಎಂದು ಮುಂತಾದ ಅಥವಾ 'ಹೌದು-ಅಲ್ಲ' ಎಂಬಂಥ ಎರಡರಲ್ಲೊಂದು ಉತ್ತರವಾಗಬಲ್ಲ ಪ್ರಶ್ನೆಗಳು. ಇದಕ್ಕೆ ಭಾಷೆಯ ಮಿತಿ ಕಾರಣವಾಗಿರಬಹುದೆ ? ಬುದ್ಧಿಯ ಮಿತಿ ಕಾರಣವಾಗಿರಬಹುದೆ ? ವಾಸ್ತವಕ್ಕಿರುವ ಮಗ್ಗಲುಗಳ ಸ್ವರೂಪವೇ ಅಂಥದ್ದಾಗಿರಬಹುದೆ ?

ನಮ್ಮ ಕುತೂಹಲಕ್ಕೆ ಕಾರಣವಾಗಬೇಕಾದದ್ದು ಪ್ರಶ್ನೆಗಳ ಸೀಮಿತತೆಯಲ್ಲ. ಈ ಸೀಮಿತ ಪ್ರಶ್ನೆಗಳೊಳಗಿಂದಲೇ ಅಪರಿಮಿತ ವಿಚಾರಗಳನ್ನು ಹುಟ್ಟಿಸುವಲ್ಲಿ ಬುದ್ಧಿ ಪ್ರಕಟಿಸಿದ ಅತ್ಯದ್ಭುತ ಶಕ್ತಿ : ಪ್ರಶ್ನೆಗಳು ಸೀಮಿತವಾಗಿರಬಹುದು; ಆದರೆ ಪ್ರಶ್ನೆ

ಯೆತ್ತುವ ರೀತಿಗಳಲ್ಲಿಯು ಮಿತಿ ! ಪ್ರಶ್ನೆಗೆ ಒಳಪಡುವ ವಾಸ್ತವದ ಮಗ್ಗಲುಗಳಿಗೆ ಮಿತಿಯಿದೆಯೇ ? ಪ್ರಶ್ನೆ ಹುಟ್ಟಿಕೊಳ್ಳುವ ಸನ್ನಿವೇಶಗಳಿಗೆ ಮಿತಿಯಿದೆಯೇ ? ಪ್ರಶ್ನೆಯ ಮಟ್ಟಿಗೆ 'ಪ್ರಶ್ನಾತೀತ'ವಾದ ಸಂಗತಿಯೇ ಇಲ್ಲ !

ತನ್ನನ್ನು, ತಾನು ಬಿಟ್ಟಿರದ ಈ ವಿಶ್ವವನ್ನು ವಿಚಾರದ ರೂಪದಲ್ಲಿ, ಜ್ಞಾನದ ರೂಪದಲ್ಲಿ ಪರಿಗ್ರಹಿಸಲು ಮನುಷ್ಯ ತೊಡಗಿಸಿಕೊಂಡ ಬೌದ್ಧಿಕ ಸಾಹಸದ ಗುಟ್ಟೇ ಇಲ್ಲಿದೆ : 'ಸರಿಯಾದ ಉತ್ತರ ಬೇಕಾದರೆ ಸರಿಯಾದ ಪ್ರಶ್ನೆಯನ್ನು ಕೇಳು' ಎನ್ನುವ ಅದರ ಸೂತ್ರದಲ್ಲಿ. ಮನುಷ್ಯ ಜಗತ್ತಿನಲ್ಲಿ ಹುಟ್ಟಿಕೊಂಡ ಪ್ರತಿಯೊಂದು ಕ್ರಾಂತಿಕಾರೀ ವಿಚಾರದ ಹಿಂದೆ ಕ್ರಾಂತಿಕಾರೀ ಪ್ರಶ್ನೆಯಿದೆ ಎಂದರೆ ಅತಿಶಯೋಕ್ತಿ ಆಗಲಾರದು. ಇಂದಿನ ವಿಜ್ಞಾನದಲ್ಲಿ ನಡೆದ ಎಲ್ಲ ಕ್ರಾಂತಿಕಾರೀ ಬೆಳವಣಿಗೆಗಳನ್ನು, ಬುದ್ಧಿಯ ಕಕ್ಷೆಗೆ ಬಂದಿರುವ–ದಂಗು ಬಡಿಸುವಷ್ಟು ಹೊಸ ಜ್ಞಾನ ಕ್ಷೇತ್ರಗಳನ್ನು ಲಕ್ಷಕ್ಕೆ ತೆಗೆದುಕೊಂಡರೆ ನನ್ನ ಮಾತಿನ ಅರ್ಥ ಸ್ಪಷ್ಟ ವಾದೀತು.

ಮನುಕುಲದ ಇತಿಹಾಸವನ್ನು ವಿಚಾರಗಳ ಇತಿಹಾಸವೆಂದು ಅಭ್ಯಾಸ ಮಾಡಿದ ಒಂದು ಪ್ರಖ್ಯಾತ ಪುಸ್ತಕದ ಹೆಸರೇ 'Adventure of Ideas' ('ವಿಚಾರಗಳ ಸಾಹಸ') ಎಂಬುದಾಗಿದೆ. ನನ್ನ ಮೇಲಿನ ಮಾತಿನ ಬೆಳಕಿನಲ್ಲಿ ಈ ಶೀರ್ಷಿಕೆಯನ್ನು 'ಪ್ರಶ್ನೆಯ ಸಾಹಸ'ವೆಂದು ಬದಲಾಯಿಸ ಬಹುದಾಗಿದೆಯೆಂದರೆ ವಿಚಾರಗಳ ವಿಕಾಸದಲ್ಲಿ ಪ್ರಶ್ನೆಗಿರುವ ಮಹತ್ವ ಹೊಳೆದೀತು. ಸ್ವಲ್ಪದರಲ್ಲಿ ಬುದ್ಧಿವಿಚಾರ ಗಳನ್ನು ಸೃಷ್ಟಿಸುವ ತನ್ನ ಮಿತಿಗಳನ್ನು ಕಳಕೊಳ್ಳುವದು ಪ್ರಶ್ನೆ ಕೇಳುವ ತನ್ನ ಸಾಮರ್ಥ್ಯವನ್ನು ಹೆಚ್ಚಿಸುತ್ತ. ಈ ಸಾಮರ್ಥ್ಯವೇ ವೈಚಾರಿಕತೆಯ ಜೀವಾಳ ವಾಗಿದೆ.

ಪ್ರಶ್ನೆಯ ಕಕ್ಷೆಗೆ ಬರುವದು ಈ ವರೆಗೂ ಬಂದಿರದ ಹೊಸ ಜ್ಞಾನ ಕ್ಷೇತ್ರಗಳು ಮಾತ್ರವಲ್ಲ; ಹಳೆಯ ಕ್ಷೇತ್ರಗಳು ಈಗಾಗಲೇ ಕಂಡುಕೊಂಡ ಉತ್ತರಗಳು ಕೂಡ : ಸಾವಿರಾರು ವರ್ಷ ಪ್ರಶ್ನಾತೀತವಾಗಿ ನೆಲೆ ನಿಂತ ವಿಚಾರಗಳು ಬುಡ ಮೇಲಾದದ್ದು ಅವುಗಳನ್ನು ಪ್ರಶ್ನಿಸುವ ಎದೆಗಾರಿಕೆ ಪ್ರಕಟಗೊಂಡಾಗ. ಈ ಎದೆಗಾರಿಕೆಯಿಂದಾಗಿಯೇ ಮನುಷ್ಯ ಜಗತ್ತಿನಲ್ಲಿಂದು ಕೊನೆಯ ಉತ್ತರವೆಂಬುದಿಲ್ಲ. ಯಾಕೆಂದರೆ ಪ್ರಶ್ನೆ ಅಂಥದ್ದಕ್ಕೆ ಎಡೆ ಕೊಡುವದಿಲ್ಲ. ನಮ್ಮ ಕಾಲದ ವೈಚಾರಿಕ ಕ್ರಾಂತಿಯ ಮಹತ್ಸಾಧನೆಯೆಂದರೆ ಎಲ್ಲ ಉತ್ತರಗಳೂ ಕೊನೆಯಲ್ಲಿ ತಾತ್ಪೂರ್ತಿಕ ವಾದವುಗಳು ಎನ್ನುವ ತಿಳಿವಳಿಕೆಯನ್ನು ನಮ್ಮಲ್ಲಿ ಮೂಡಿಸಿದ್ದು. ಇಂಥ ತಿಳಿವಳಿಕೆಯನ್ನು ಮೂಡಿಸಿದ–ಕೋಪರ್ನಿಕಸ್–ಕೆಪ್ಲರ್; ಗೆಲಿಲಿಯೋ-ನ್ಯೂಟನ್-

ಐನ್‌ಸ್ಟೈನ್; ಫ್ರಾಯ್ಡ್-ಯುಂಗ್; ಡಾರ್ವಿನ್; ಮಾರ್ಕ್ಸ್-ರಾಯ್ ಇವರೆಲ್ಲ ವಿಚಾರಗಳ ಇತಿಹಾಸದಲ್ಲಿ ಹುಟ್ಟಿ ಬಂದ ಮಹಾನ್ ಪ್ರಶ್ನಕಾರರಾಗಿದ್ದಾರೆ.

ಗೌರೀಶರ 'ಸಮಗ್ರ ಸಾಹಿತ್ಯ' ಎನ್ನುವ ಈ ಅದ್ಭುತ ವೈಚಾರಿಕ ಸಾಹಸಕ್ಕೆ ಇಂಥ ಪ್ರಶ್ನಕಾರರೇ ಸ್ಫೂರ್ತಿಯಾಗಿದ್ದಾರೆ ಮಾತ್ರವಲ್ಲ ಹಲವು ಸಾರೆ ಅವರೇ ಅದರ ವಿಷಯವೂ ಆಗಿದ್ದಾರೆ. ಇವರು ನಿರ್ಮಿಸಿದ ಒಂದು ಸದೃಢ ಪರಂಪರೆ ಯಲ್ಲೇ ಬೆಳೆದು ಬಂದ ಗೌರೀಶರಲ್ಲಿ ಪ್ರಶ್ನೆಕೆರಳಿಸಿರದ ಕ್ಷೇತ್ರವಿದ್ದಿರಲಾರದು, ವಿಷಯವಿದ್ದಿರಲಾರದು. ತುಂಬಾ ವಿಶಾಲವಾದ, ಅಷ್ಟೇ ವೈವಿಧ್ಯಮಯವಾದ ಅವರ ಸಾಹಿತ್ಯವೇ ಪ್ರಶ್ನೆಯ ಮಹತ್ವಕ್ಕೆ ಜ್ವಲಂತ ಸಾಕ್ಷಿಯಾಗಿದೆ. ತಮ್ಮೊಬ್ಬರ ಸಲುವಾಗಿಯೇ ಕೇಳಿಕೊಂಡ ಪ್ರಶ್ನೆಗಳಲ್ಲ ಅವು; ಸಂಕುಚಿತ ಸ್ವಾರ್ಥವಲ್ಲಿ ಹುಟ್ಟಿ ಕೊಂಡವುಗಳಲ್ಲ. ಅವುಗಳ ಕೇಂದ್ರಲಕ್ಷ್ಯ ನಮ್ಮೊಳಗಿನ ಮನುಷ್ಯನಾಗಿದ್ದಾನೆ. ಮನುಷ್ಯನ ಆಸ್ಥೆಗೆ ಯೋಗ್ಯವಾದುದ್ದೆಲ್ಲವೂ, ನಾವು ಮನುಷ್ಯರಾಗಿ ಬಿಚ್ಚಿ ಕೊಳ್ಳಲು ನೆರವಾಗಬಲ್ಲುದೆಲ್ಲವೂ ಈ ಸಾಹಿತ್ಯಕ್ಕೆ ವಸ್ತು ಒದಗಿಸಿದೆ. ಹಾಗೆಂದೇ ಅದು ನಮಗೆ ತಟ್ಟನೆ ಪ್ರಸ್ತುತವಾಗುತ್ತದೆ.

ಅದು ಕೇಳಿಕೊಂಡ ಪ್ರಶ್ನೆಗಳನ್ನಾಗಲಿ, ಅವುಗಳ ಆಸ್ಥೆಗೆ ಒಳಪಟ್ಟ ವಿಷಯಗಳ ನ್ನಾಗಲೀ 'ಪಟ್ಟಿ' ಮಾಡಲಾರೆ. 'ಪಟ್ಟಿ' ಮಾಡುವ ದುಶ್ಚಟವೇ ಮೊದಲು ಸೃಜನಕಾರ್ಯದ ಪ್ರಥಮ ವೈರಿಯಾಗಿದೆ. ಇಲ್ಲಿ ಕೆಲಸ ಮಾಡಿದ್ದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗು ತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ; ಅಂಥದ್ದರ ಸೋಂಕೂ ಇಲ್ಲಿಲ್ಲ. ಇಲ್ಲಿಯ ಕುತೂಹಲಕ್ಕೆ ಆಸಕ್ತಿಯಿದ್ದದ್ದು ವಾಸ್ತವದ ಬಗೆಗೆ 'ಮಾಹಿತಿ' ಸಂಗ್ರಹಿಸುವುದರಲ್ಲಲ್ಲ-ಬುದ್ಧಿಗೆ ಆ ಶಕ್ತಿಯೂ ಇದೆ. ಬುದ್ಧಿ ತನ್ನನ್ನು ಅಂತಹ ಸಂಗ್ರಹ ಕಾರ್ಯದಲ್ಲೇ ತೊಡಗಿಸಿಕೊಂಡು ಬಿಟ್ಟರೆ ಅದು ಕೇವಲ ಬುದ್ಧಿವಂತಿಕೆ ಯನ್ನು ಮೆರೆಸಬಹುದೇ ಹೊರತು ಬೌದ್ಧಿಕ ಸಾಹಸದ ಅಂತಿಮ ಲಕ್ಷ್ಯವಾದ ಪ್ರಜ್ಞಾವಂತಿಕೆಯನ್ನಲ್ಲ. ಕೇವಲ ಮೆದುಳು (ಪ್ರವೃತ್ತಿ) ಆಗಿದ್ದದ್ದು ಮನಸ್ಸು (ಬುದ್ಧಿ) ಆಗಿ; ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವುದರ ಕಡೆಗೆ ಗೌರೀಶ-ಸಾಹಿತ್ಯದ ತುಡಿತವಿದೆ ಎನ್ನುವುದರಲ್ಲೇ ಅದರ ಹೆಚ್ಚುಗಾರಿಕೆ ಇದೆ. ನಾವು ಕೇವಲ ಬುದ್ಧಿವಂತರಾಗಿ ಉಳಿಯದೇ ಪ್ರಜ್ಞಾವಂತ ರಾಗಿ ತೆರೆದುಕೊಳ್ಳಬೇಕು ಎನ್ನುವುದು ಈ ಮಾನವತಾವಾದಿಸಾಹಿತ್ಯದ ಮುಖ್ಯ ಆಶಯವಾಗಿದೆ. ಮಾನವ ವಿಕಾಸದ ಪರಮಲಕ್ಷ್ಯ ಪ್ರಜ್ಞಾವಂತ ಮನುಷ್ಯನೆಂದೂ, ಮನುಷ್ಯ ಜೀವನದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಹಾಗೂ 'ನೈತಿಕತೆ' ಈ ಸ್ಥಿತಿಯಲ್ಲಷ್ಟೇ ಸಾಧ್ಯವೆಂದೂ ಎಲ್ಲ ಮಾನವತಾವಾದಿಗಳು ನಂಬುತ್ತಾರೆ.

ಮನಸ್ಸು ಪ್ರಜ್ಞೆಯ ಸ್ಥಿತಿಯನ್ನು ಮುಟ್ಟಿದಾಗ ಅದಕ್ಕೆ ಆಸಕ್ತಿ ಹುಟ್ಟುವದು ಬದುಕಿನ 'ಅರ್ಥ'ದಲ್ಲಿ, ಅದರ 'ಅರ್ಥಪೂರ್ಣತೆ'ಯಲ್ಲಿ ಹೊರತು ಅವರ 'ವಾಸ್ತವಿಕತೆ'ಯಲ್ಲಲ್ಲ–ಕೇವಲ 'ವಸ್ತು'ವಾದದ್ದರಲ್ಲಲ್ಲ. 'ನಮ್ಮನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯು' ಎನ್ನುವ ನಮ್ಮ ಪುರಾತನದ ಪ್ರಾರ್ಥನೆ ಹಾಗೂ 'ನಮ್ಮನ್ನು ವಾಸ್ತವಿಕತೆಯಿಂದ ಅರ್ಥಪೂರ್ಣತೆಗೆ ಒಯ್ಯು' (Lead me from facticity to meaning) ಎನ್ನುವ ಮಾನವತಾವಾದಿಗಳ ಕೋರಿಕೆ ಎರಡೂ ಸಮಾನ ಅರ್ಥ ಉಳ್ಳವುಗಳೆಂದು ನಾನು ತಿಳಿಯುತ್ತೇನೆ. ಈ ಅರ್ಥದಲ್ಲಿ ಮನುಷ್ಯನ ಬೌದ್ಧಿಕ ಸಾಹಸದ ಗುರಿ ಕೂಡ ಅಂತಿಮವಾಗಿ 'ಆಧ್ಯಾತ್ಮಿಕ'ವಾಗಿದೆಯೆನ್ನಬಹುದು. ಹಾಗೆಂದೇ ಗೌರೀಶ–ಸಾಹಿತ್ಯವನ್ನು 'ಪ್ರಶ್ನೋಪನಿಷತ್ತು' ಎಂದು ಕರೆಯುವ ತವಕವಾಗುತ್ತದೆ, ಹಾಗೆ ಕರೆಯುವುದರಿಂದ ಅದಕ್ಕೆ ಜನ್ಮವಿತ್ತ ಮನಸ್ಸಿನ ನಿಜ ಸ್ವರೂಪದ ಬಗ್ಗೆ ನಾನು ಹೇಳ ಬಯಸಿದ್ದು ಸ್ಪಷ್ಟವಾದೀತು ಎನ್ನುವ ಆಸೆಯಿಂದ.

'ಪ್ರಶ್ನೆ' ಸ್ವತಃ ತಾನೇ ಪ್ರಜ್ಞೆಯಲ್ಲ, ಬೆಳಕಲ್ಲ, ಆದರೆ ಪ್ರಜ್ಞೆಯ ಸ್ಥಿತಿ ಮುಟ್ಟಿ ಬೆಳಕು ಕಾಣುವ–ತಾನೇ ಬೆಳಕಾಗುವ ಅಭೀಪ್ಸೆಯುಳ್ಳದ್ದು. ಗೌರೀಶ–ಸಾಹಿತ್ಯದ ಅಭೀಪ್ಸ ಚಿಂತನವೂ ಅದೇ : ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ತಡಕಾಟ ಪ್ರಜ್ಞೆಯ ಹಂಬಲವಾಗಿ, ಬೆಳಕಿನ ಹಂಬಲವಾಗಿ ಉತ್ತರೋತ್ತರವಾಗಿದೆ. ಕನ್ನಡದಲ್ಲಿ ಇಂಥದ್ದು ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು. ಕನ್ನಡ ಸಾಹಿತ್ಯಕ್ಕೆ ಉತ್ತರಕನ್ನಡವಿತ್ತ ಅತಿ ದೊಡ್ಡ ಕೊಡುಗೆಯಾದ ಅದಕ್ಕೆ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ಸ್ಥಾನವಿದೆ–ಇದು ನಿರ್ವಿವಾದ.

ನಮ್ಮನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯುವ ಹಂಬಲ ಹೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲೆಯಲ್ಲಿ ಅಡಗಿರ ಬೇಕಾಗುವಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ನಾವು ಒಪ್ಪಿಕೊಂಡರೆ ವಿಷ್ಣು ನಾಯ್ಕ ಹಾಗೂ ಅವರ ಸನ್ಮಿತ್ರರು ತಮ್ಮ ಮೇಲೆ ಹೊತ್ತುಕೊಂಡ 'ಪ್ರಕಾಶನ'ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯದೇ ಇರದು. ಹಾಗೆ ಹೊಳೆಯಿಸುವ ನಮ್ರ ಪ್ರಯತ್ನವಾಗಿದೆ, ಈ 'ಪ್ರಸ್ತಾವನೆ'. 'ಗೌರೀಶ–ಸಾಹಿತ್ಯ'ದ ವಿಮರ್ಶೆ ಅದರ ಉದ್ದೇಶವಲ್ಲ. ಆದರೆ ಆ ಸಾಹಿತ್ಯದ ಸಮಗ್ರ ವಿಮರ್ಶೆಗೆ ಅದು ಆಹ್ವಾನವೀಯುತ್ತದೆ.

**ಯಶವಂತ ಚಿತ್ತಾಲ**

# ಗಂಡು-ಹೆಣ್ಣು

ಗಾರ್ಕಿ, ಚೆಕಾವ್ಹ್, ಟಾಲ್‌ಸ್ಟಾಯಿ-ಈ ಮೂರು ಹೆಸರುಗಳನ್ನು ಅರಿಯ
ದವರಾರು ? ಮೂವರೂ ಪ್ರಪಂಚದಲ್ಲೇ ಹೆಸರಾದ ರಶಿಯಾದ ಹಿರಿಯ
ಕತೆಗಾರರು. ಟಾಲಸ್ಟಾಯಿಯಂತೂ ಕತೆಗಾರರಿಗೂ ಹಿರಿಯ, ಜ್ಞಾನವೃದ್ಧ,
ತಪ್ರೋವೃದ್ಧ ಮತ್ತು ವಯೋವೃದ್ಧ. ಈ ಮೂವರ ಕುರಿತು ಒಂದು ಕತೆಯಿದೆ:
ಒಮ್ಮೆ ಕ್ರಿಮಿಯಾದ ಬೇಲೆಯಲ್ಲಿ ಗಾರ್ಕಿ ಚೆಕಾವ್ಹರು ಅಡ್ಡಾಡುತ್ತಿದ್ದರಂತೆ. ಆಗ
ಅಲ್ಲೇ ಬಿಳಿಮರಳಲ್ಲಿ ತನ್ನ ಬಿಳೀಗಡ್ಡವನ್ನು ತೂರಾಡಲು ಬಿಟ್ಟು ಟಾಲ್‌ಸ್ಟಾಯಿಯು
ಒಳ್ಳೇ ವಿಚಾರಮಗ್ನನಾಗಿ ಕುಳಿತಿದ್ದನಂತೆ. ಮೂವರೂ ಕೂಡಿ ಕೂತುಕೊಂಡು
ಮಾತುಕತೆಗೆ ಮೊದಲು ಮಾಡಿದರು. ಮಿಕ್ಕವರಂತೆ, ಅವರ ಮಾತುಕತೆಯೂ
ಹೆಣ್ಣಿನ ಕುರಿತು ಸಾಗಿತು. ಗಾರ್ಕಿ ಚೆಕಾವ್ ಒಳ್ಳೇ ಹುರುಪಿನಿಂದ ಹರೆಯ
ಹುಮ್ಮಸದಲ್ಲಿ ಮಾತನಾಡುತ್ತಿದ್ದರು. ನುರಿತ ನರೆತ ಟಾಲ್‌ಸ್ಟಾಯಿ ಸದ್ದಿಲ್ಲದೆ
ಕಿವಿಗೊಟ್ಟು ಕೇಳುತ್ತಿದ್ದ. ಹೀಗೆಯೇ ಕೆಲಕಾಲ ಉರುಳಿತು. ಆಗ ಟಾಲ್‌ಸ್ಟಾಯಿ
ಒಮ್ಮೆಲೇ ಅಂದನಂತೆ: 'ಮತ್ತೆ ನಾನು ಹೆಣ್ಣಿನ ಕುರಿತು ದಿಟವನ್ನು ಹೇಳಬೇಕೇ ?
ಅದು ಈಗಲ್ಲ; ನನ್ನ ಒಂದು ಹೆಜ್ಜೆ ಗೋರಿಯಲ್ಲಿರಬೇಕು. ನನ್ನ ಶವಪೆಟ್ಟಿಗೆಯ
ಮುಚ್ಚಳ ತೆಗೆದಿರಬೇಕು. ಆಗ ಹೇಳುವದನ್ನೆಲ್ಲ ಕೇಳಿ ಪೆಟ್ಟಿಗೆಯೊಳಗೆ ಹಾರಿ
ಮುಚ್ಚಳ ಇಕ್ಕಿಕೊಳ್ಳುವೆನು. ಅತನಕ ನನ್ನೊಡನೆ ನೀವು ಬೇಕಷ್ಟು ಅಂದುಕೊಳ್ಳಿ.'

ಜ್ಞಾನಿಯಾದ ಸ್ಟಾಲಸ್ಟಾಯಿಯ ಇಂಗಿತ ತಿಳಿಯಿತೇ ? ಹೆಣ್ಣಿನ ಕುರಿತು ಮಾತ
ನಾಡಲು ಅವನಿಗೆ ಅಷ್ಟು ಬಿಗಿ, ಅಷ್ಟು ದಿಗಿಲು ! 'ಯಾವ ಗಂಡನೂ ತನ್ನ
ಹೆಂಡತಿಯ ಜೀವಮಾನದಲ್ಲಿ ಮದುವೆಯ ಕುರಿತು ಸತ್ಯವನ್ನು ಬರೆಯಲು ಧೈರ್ಯ
ಪಡನು !' ಇದು ಯಾರ ಮಾತು ಗೊತ್ತೇ ? ಪ್ರತಿವಾದಿ ಭಯಂಕರನೂ ಪ್ರಥಿತ
ಯಶಪ್ರತಿಭಾವಂತನೂ ಆದ ಜಾರ್ಜ ಬರ್ನಾರ್ಡಶಾನ ಉದ್ಗಾರವಿದು ! ಅಂದಲ್ಲಿ
ಮಿಕ್ಕವರ ಪಾಡೇನು ? ಆದಾಗ್ಯೂ ಹೆಣ್ಣಿನ ಮಾತೇ ಹಾಗೆ. ಹೆಣ್ಣಿನೊಂದಿಗೆಯೂ

ಗಂಡಸು ನೆಮ್ಮದಿಯಾಗಿ ಬದುಕಲಾರ ! ಹೆಣ್ಣಿನ ಹೊರತಾಗಿಯೂ ಬದುಕಲಾರ ! ಆದ್ದರಿಂದ ಹೆಣ್ಣಿನ ವಿಚಾರ ತುಸು ಚರ್ಚೆ ನಡೆಯದ ಜನವಿಲ್ಲ ; ದಿನವಿಲ್ಲ. ಅಂತೆಯೇ ನಾವೂ ಈ ಸಾಹಸಕ್ಕೆ ಲೆಕ್ಕಣಿ ಮಸೆದಿದ್ದೇವೆ. ಆದರೆ ಒಂದು ಮಾತು. ನಾವು ಇಲ್ಲಿ ನಿರೂಪಿಸುವ ವಿಷಯವೂ, ನಿರ್ವಹಿಸುವ ವಿವೇಚನೆಯೂ, ಹೆಣ್ಣಿನ ವಾಡಿಕೆಯ ಹಾಗೂ ಸರ್ವಸಾಧಾರಣ ಮಾದರಿಗಳ ಮಟ್ಟಿಗೇ ಮರ್ಯಾದಿತ ವಾಗಿದೆ. ಮರ್ಯಾದೆ ಎಲ್ಲಿಯೂ ಉಚಿತ. ಹೆಣ್ಣಿನ ವಿಷಯವಲ್ಲಂತೂ ಅದು ಅನಿವಾರ್ಯ ತಾನೇ !

## ಸ್ತ್ರೀವಾಙ್ಮಯದಲ್ಲಿ ರುಚಿ ಏಕೆ ?

ಹೆಣ್ಣಿನ ಕುರಿತು ವಾಙ್ಮಯ ಅಷ್ಟಿಷ್ಟಲ್ಲ, ಅದರಷ್ಟು ಆಕರ್ಷಕ ವಾಙ್ಮಯ ಬೇರೊಂದಿಲ್ಲ. ಅದರಷ್ಟು ಅವಿಶ್ವಸನೀಯವೂ ಇನ್ನಾವದಿಲ್ಲ. ಹೆಣ್ಣನ್ನು ನಚ್ಚುವಷ್ಟು ಜನ ನಂಬುವವರಿಲ್ಲ ! ಹೆಣ್ಣಿನ ಕುರಿತು ಸಾಹಿತ್ಯದ ವಿಷಯವೂ ಹಾಗೆಯೇ. ಸ್ತ್ರೀವಿಷಯಕ ಸಾಹಿತ್ಯವು ಆಕರ್ಷಕವೂ ಮನೋವೇಧಕವೂ ಇರುವದೆಂಬಲ್ಲಿ ಸಂದೇಹವೇ ಇಲ್ಲ. ಏಕೆಂದರೆ ಆ ಸಾಹಿತ್ಯದ ವಿಷಯ ನಮ್ಮದೇ ಜೀವನದ ಜೀವಾಳದ್ದು. ನಮ್ಮದೇ ಬಾಳಿಗೆ ಆಳವಾಗಿ ಹೊಂದಿಕೊಂಡದ್ದು. ಮಾನವನ ದೋಷ-ದುಷ್ಟತನಗಳ ವಿಷಯವನ್ನು ಅಳವಡಿಸಿಕೊಂಡೇ ಬರೆದ ಹೆಣ್ಣಿನ ವಿಕಾರಗೆಟ್ಟ ಚರಿತ್ರೆಯ ಮಾತು ಬೇರೆ. ಆರೋಗ್ಯವಂತ ಆತ್ಮಕ್ಕೆ ಅಂಥ ವಿಕೃತ ಸ್ತ್ರೀವಾಙ್ಮಯ ಎಂದಿಗೂ ಅರೋಚಕವೇ. ಆದರೆ ಮಿಕ್ಕ ಸ್ತ್ರೀವಾಙ್ಮಯವೆಲ್ಲ ನಮ್ಮ ಆಸಕ್ತಿಯ ಕೇಂದ್ರವೆಂಬುದಕ್ಕೆ ಸಂಶಯವಿಲ್ಲ. ಆದರೆ ಅಂಥ ವಾಙ್ಮಯ ಅವಿಶ್ವಸನೀಯ– ನಂಬಿಗೆಗೆ ನೆಲೆಯಿಲ್ಲದ್ದು–ಎಂಬ ಮಾತು ಅಷ್ಟೇ ಸತ್ಯ. ಅದು ಅವಿಶ್ವಸನೀಯ ವೇಕೆಂದರೆ ಅಂಥ ವಾಙ್ಮಯ ಆತ್ಮವೃತ್ತಪರವಿರುತ್ತದೆ. ಓದಲು ವಿಪರೀತವೆನಿಸಿ ದರೂ ಒಂದು ಮಾತು ನಿಜವಿದೆ : ಎಲ್ಲ ಆತ್ಮವೃತ್ತವೂ ಕಟ್ಟುಕತೆಯೇ ಸರಿ ! ಹಲವು ಸಲ ಆತ್ಮವೃತ್ತದ ದನಿಯು ಸೇಡಿನ ದನಿಯಿರುತ್ತದೆ. ಗೆದ್ದ ಕಲಿಗಳು ಬಾಳನ್ನು ಆಳಿ ಇತಿಹಾಸಕ್ಕೆ ವಸ್ತುವಾಗುತ್ತಾರೆ. ಸೋತ ವೀರರು ತಮ್ಮ ಬಾಳಿನ ಇತಿಹಾಸ ತಾವೇ ಬರೆಯುತ್ತಾರೆ. ಆತ್ಮನಿವೇದನೆಯ ಪ್ರಾಮಾಣಿಕತೆಯ ಅಡಿಗೆ ಆತ್ಮಸಮರ್ಥನೆಯ ಸೂಕ್ಷ್ಮಪ್ರತಾರಣೆಯೂ ಅಡಕವಾಗಿರುತ್ತದೆ. ಆದ್ದರಿಂದ ಗಂಡಸು ಹೆಣ್ಣಿನ ಕುರಿತು ಬರೆಯುವಾಗ ಅಂಥ ಹೊತ್ತಿಗೆಯಲ್ಲಿ ಆತನು ಆಕೆ ಯಿಂದ ಪಟ್ಟ ಗಾಯಗಳ ನೋವು ಕಾಮಗಳೇ ಮಾತನಾಡುತ್ತವೆ. 'ಧಿಕ್ ತಾಂ ಚತಂಚ, ಮದನಂಚ ಇಮಾಂಚ, ಮಾಂಚ !' ಎಂದು ತಪಿಸಿಕೊಳ್ಳುವ. ಕಾ...

ಕೊಳ್ಳುವ ಮಟ್ಟಿಗೂ ಪ್ರತಿಯೊಬ್ಬ ' ಭರ್ತೃ 'ವೂ ' ಹರಿ 'ಯೂ ಭರ್ತೃಹರಿಯೇ ಆಗುತ್ತಾನೆ.

ಹೆಣ್ಣಿನೊಡನೆ ಗಂಡು ಗೆಲವು ಸೋಲಿಗೂ ಕಡೆಯಾದ ಮದುವೆಯಾಗುತ್ತದೆ. ಸೋಲಿಗೂ ಕಡೆಯೆಂಬುದೇಕಂದರೆ, ಮಿಕ್ಕ ಸೋಲುಗಳಲ್ಲಿ ಸೋತವರು ಮತ್ತೆ ಹೋಂಚುಸಾಧಿಸಿ ಗೆಲ್ಲುವ ಆಸೆಗಾದರೂ ಎಡೆಯಿದೆ. ಆದರೆ ಮದುವೆಯೆಂಬ ಗೆಲುವಿನ ಸೋಲಲ್ಲಿ ಕೊನೆಯ ತನಕವೂ ಗಂಡು ಮೌನವ ಜಾಣ್ಮೆಯನ್ನು ಸಾಧಿಸುತ್ತಾನೆ. 'ಮೌನದಲ್ಲೂ ಕೂಡ ಮಾತಿನ ದನಿಯುಂಟು' ಎಂದು ಕವಿ ಅಂದ ಮಾತು ಒಂದು ರೀತಿ ನಿಜವಾಗುತ್ತದೆ. ಗಂಡಿನ ಮೌನದಲ್ಲಿ ಹೆಣ್ಣಿನ ಮಾತಿನ ದನಿಯೇ ಗುಡುಗಿ ಮೊಳಗುತ್ತದೆ. ಇದಾಯಿತು ಗೆಲುವಿನ ರೀತಿ. ಇನ್ನು ಗಂಡು ಸೋತರೆ–ನಿಜವಾಗಿಯೂ ಸೋತರೆ–ಅವನು ಅವಳ ಕುರಿತು ಹೊತ್ತಿಗೆಗಳನ್ನು ಬರೆಯುತ್ತಾನೆ.–ಬರೆಯುತ್ತ ಬಂದಿದ್ದಾನೆ. ಇದರ ಬದಲು ಹೆಣ್ಣೇ ಗಂಡಿನ ಚರಿತ್ರ ಚಿತ್ರವನ್ನು ಮನೋಧರ್ಮದ ವಿವರಣ ವಿಕಲನಗಳನ್ನು ಮನವಾರೆ ಮನಬಿಚ್ಚಿ ಮಾಡಿ ಕೊಡಲು ಹೊರಟಿದ್ದರೆ ಅಂಥ ಪುಸ್ತಕಗಳು ಎಷ್ಟೋ ವೇಧಕವಾಗುತ್ತಿದ್ದವು: ಬೋಧಕವಾಗುತ್ತಿದ್ದವು. ಏಕೆಂದರೆ, ಅಂಜುವ ಹಿಂಜರಿಯುವ ತಿಳುವಳಿಕೆಯು ಹೊಯ್ದಾಟದ ಗಂಡಸಿಗಿಂತಲೂ. ಸಂಶಯಾತ್ಮಕ ಪುರುಷ ಬುದ್ಧಿಗಿಂತಲೂ ಹೆಣ್ಣಿನ ಮನಸ್ಸು ಮನುಷ್ಯ ಸ್ವಭಾವದ ವ್ಯಾಪಾರಗಳನ್ನೆಲ್ಲ ಹೆಚ್ಚು ಆಳವಾಗಿ ಅರಿತು ಹೆಚ್ಚು ಅಂದವಾಗಿ ಚಾಲನಗೊಳಿಸಿ 'ಅಶಿಕ್ಷಿತ ಪಟುತ್ವ'ದ ಎಷ್ಟೋ ಮಿಗಿಲಾದ ತಿಳುವಳಿಕೆಯ ತಿಳಲನ್ನು ತೋರುತ್ತದೆ. ಆದ್ದರಿಂದ ಗಂಡು–ಹೆಣ್ಣಿನ ಕುರಿತು ಮಾಡುವ ಅರ್ಧ–ಸತ್ಯ. ಅಸತ್ಯಗಳ ಸ್ಥೂಲ ಪ್ರದರ್ಶನಕ್ಕಿಂತ ಹೆಣ್ಣು ಗಂಡಿನ ವಿಷಯ ಮಾಡುವ ಸತ್ಯತಥ್ಯಗಳ ಸೂಕ್ಷ್ಮನಿದರ್ಶನವು ಮನಸ್ತತ್ವದ ಹಾಗೂ ಮನುಷ್ಯತ್ವದ ವ್ಯಾಪಕದರ್ಶನಕ್ಕೆ ಹೆಚ್ಚಿನ ಪೂರ್ಣತೆಯನ್ನು ತಂದು ಕೊಡಬಹುದು. ವಿದ್ಯಾವಂತ ಗಂಡಿನ ಜ್ಞಾನಕ್ಕಿಂತ ಬುದ್ಧಿವಂತ ಹೆಣ್ಣಿನ ಚಾತುರ್ಯಕ್ಕೇ ಬಾಳಿನ ಸಲೆ (?) ತಪ್ಪದೇ ಎಟುಕುವದು.

## ಗಂಡು-ಹೆಣ್ಣಿಗೆ ಹೆಣ್ಣು ಕೊನೆಯ ಒಗಟು.

ಆದರೆ ಈ ಬುದ್ಧಿವಂತಿಕೆಯೇ ಹೆಣ್ಣನ್ನು ಮೂಕಳನ್ನಾಗಿ ಮಾಡಿದೆ. ಯಾವ ಹೆಣ್ಣೂ ಕಥೆ, ಕಾವ್ಯ, ಚರಿತ್ರೆಗಳಲ್ಲಿ ತನ್ನನ್ನು ಸಂಪೂರ್ಣವಾಗಿ ಗಂಡಿನಷ್ಟು ಪೂರ್ತಿಯಾಗಿ ತೋರಿಸಿಕೊಳ್ಳುವದಿಲ್ಲ. ಹೆಣ್ಣು ಬರೆದ ವಾಙ್ಮಯದಲ್ಲಿ ಆಕೆಯ ವ್ಯಕ್ತಿತ್ವವು ಪೂರ್ಣ ವ್ಯಕ್ತಿತ್ವವಾಗದಿರುವಷ್ಟು ಸಂಯಮದ ಚಾತುರ್ಯವೇ ಹೆಚ್ಚು

ವ್ಯಕ್ತವಾಗುತ್ತದೆ. ತನ್ನ ಜಾತಿವೈರಿಯೇ—ಹುಟ್ಟು ಹಗೆಯಾದ ಗಂಡೇ-ತನ್ನ ಕುರಿತು ಸಾಹಿತ್ಯವನ್ನು ನಿರ್ಮಿಸುವದು ಅವಳಿಗೆ ಸಂತೋಷ. ನಮ್ಮ ಶತ್ರು ನಮ್ಮ ಕುರಿತು ಬರೆದ ಗ್ರಂಥದಿಂದ ನಮ್ಮ ದೋಷಗಳೊಂದಿಗೆ ಅವನ ರೋಷಕ್ಕೆ ಕಾರಣವಾದ ನಮ್ಮ ಗುಣಾಂಶಗಳೂ ಪ್ರಕಟವಾಗುತ್ತವಲ್ಲವೇ ? ಗಂಡಿನ ಗೊತ್ತು ಗುರಿಗಳನ್ನು ತಿಳಿಯುವ ಹೆಣ್ಣಿನ ಗತ್ತುಗಾರಿಕೆಗೆ ಇದಕ್ಕೂ ಹೆಚ್ಚೇನು ಬೇಕು ? ಅಂತೆಯೇ ಹೆಣ್ಣು ಗಂಡಿನ ಕಾವ್ಯಕ್ಕೆ ಸ್ಫೂರ್ತಿ. ಕಥೆಗೆ ನಾಯಿಕೆ ಇಲ್ಲವೇ ಅರ್ಪಣ ಪತ್ರಿಕೆಗೆ ಅಧಿಕಾರಿಯಾಗುವವರಲ್ಲಿಯೇ ಸಮಾಧಾನಪಡುತ್ತಾಳೆ. ಸ್ತ್ರೀಯ ಚಾರಿತ್ರ್ಯವನ್ನು ಬರೆಯುವದು ಪುರುಷನ ಭಾಗ್ಯವಾಗುತ್ತದೆ !

ಸಾಮಾನ್ಯವಾಗಿಯೂ ಪ್ರತಿಯೊಂದು ಜನ ಗಂಡಿರಲಿ. ಹೆಣ್ಣಿರಲಿ. ಪಕ್ಷಪಾತಿಯಾಗಿರುವದೇ ಸಹಜ. ವ್ಯಕ್ತಿತ್ವದ-ಮನುಷ್ಯತ್ವದ-ಒಂದು ಮೈ, ಒಂದು ಮಗ್ಗಲು, ಒಂದೇ ಮಾರ್ಗ. ಒಂದೇ ಮಟ್ಟವನ್ನೇ ಒಂದು ವ್ಯಕ್ತಿಯು ಅನುಸರಿಸುವದು ವಾಡಿಕೆ. ಈ ವಿಷಯದ ಅರ್ಥವನ್ನಷ್ಟೇ ವ್ಯಕ್ತಿಯು ತಿಳಿಯಬಲ್ಲನು. ಆ ಅರ್ಥವಲ್ಲೂ ಒಂದು ಅಂಶವನ್ನಷ್ಟೇ ಹತ್ತಿರದಿಂದ ಹೊಂದಿಕೆಯಿಂದ ತಿಳಿಯಬಲ್ಲನು. ಆದರೂ ಆ ಅಂಶವನ್ನು ಕೂಡ ಪ್ರಾಮಾಣಿಕವಾಗಿಯಾಗಲೀ ಪೂರ್ಣವಾಗಲೀ ತಿಳಿಯಲೊಲ್ಲನು ! ಅಂಥಲ್ಲಿ ಗಂಡು ಹೆಣ್ಣು ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿಯುವದುಂಟೇ ? ಪಕ್ಷಪಾತವೇ ವ್ಯಕ್ತಿಯ ಸಾಮಾನ್ಯ ಧರ್ಮವಾದಾಗ ಯುದ್ಧ ಸಮಯದಲ್ಲಿ ತಾಟಸ್ಥ್ಯವೂ ನಿಷ್ಪಕ್ಷಚಿತ್ತಸ್ವಾಸ್ಥ್ಯವೂ ಸಾಧ್ಯವೇ ? ಗಂಡು-ಹೆಣ್ಣು ಸಂಬಂಧವೂ ಎಂದಿಗೂ ಒಂದು ಯುದ್ಧಪ್ರಸಂಗವೇ ಸರಿ: ಕೆಲವೊಮ್ಮೆ ಪ್ರಕಟ ಯುದ್ಧ. ಹಲವೊಮ್ಮೆ ಕೂಟಯುದ್ಧ. ಯಾವಾಗಲೂ ಸಾರಿ ಸಾಗುವ ಕಾದಾಟಕ್ಕಿಂತ ಸಾರದೇ ನಡೆಯುವ ಹೋರಾಟವೇ ಹೆಚ್ಚು. ಅಂಥಲ್ಲಿ ಮನದ ಸಮತೂಕ ಉಳಿಯಬಹುದೇ ? ಆದ್ದರಿಂದ ಗಂಡು-ಹೆಣ್ಣಿನ ವಿಷಯ ಬರೆಯುವಾಗ ಯಾವನಾದರೂ ಅವಿವೇಕ ಅತಿರೇಕವನ್ನು ಸಾಧಿಸುತ್ತಾನೆ. ಗಂಡಿಗೆ ಹೆಣ್ಣು ಒಮ್ಮೆ ದಾಸಿ: ಒಮ್ಮೆ ದೇವಿ: ಒಮ್ಮೆ ನರಕದ ಹೆದ್ದಾರಿ: ಒಮ್ಮೆ ಸ್ವರ್ಗದ ಸುಂದರಿ: ಒಮ್ಮೆ ಬರೇ ಭೋಗ ವ್ಯಕ್ತಿ: ಒಮ್ಮೆ ಕೇವಲ ತ್ಯಾಗಮೂರ್ತಿ:.—ಹೀಗೆಲ್ಲ ತಿಳುವಳಿಕೆಯ ತೂಗಾಟವಲ್ಲಿ ಸಿಲುಕಿ ಗಂಡಿನ ಕಣ್ಣಿಗೆ ಹೆಣ್ಣು ಒಂದು ಒಗಟಾಗಿದ್ದಾಳೆ. ಮಾನವ ಜನಾಂಗದ ಕೊನೆಯ ಜಿಜ್ಞಾಸೆ ಮಾನವನ ಕುರಿತೇ ಆಗಿದೆ; ಅದರ ಕೊನೆಯ ಶಾಸ್ತ್ರ ಮನೋವಿಜ್ಞಾನವಾಗಿದೆ: ಮತ್ತು ಈ ಶಾಸ್ತ್ರ–ಜಿಜ್ಞಾಸೆಗಳ ಕೊನೆಯ ವಿಷಯ ಹೆಣ್ಣಾಗಿದೆ !

೨

ಈ ಹೆಣ್ಣಿನ ವಿಷಯವನ್ನು ತಿಳಕೊಳ್ಳುವ ರೀತಿ ಯಾವದು ? ಮೊದಲು ಮಾನವ

ಪ್ರಕೃತಿಯು (ಸ್ವಭಾವವ)ನ್ನು ಅದರ ಮೂಲದ ಪ್ರವೃತ್ತಿಗಳಲ್ಲಿ ವಿಂಗಡಿಸೋಣ; ಬುನಾದಿಯ ಕೆಲವು ನಡತೆಯ ಒಲವುಗಳಲ್ಲಿ, ಅನಿಸಿಕೆ ಮತ್ತು ಬಗೆಗಳ ಒತ್ತಾಯಗಳಲ್ಲಿ ಗುಂಪುಗೂಡಿಸೋಣ. ಇದು ಬರೇ ಅನುಕೂಲತೆಗಾಗಿ, ಕೃತ್ರಿಮ ವಾಗಿಯೇ ಸರಿ. ಆದರೂ ಈ ಗುಂಪುಗೂಡಿಸುವ ವಿಂಗಡಿಕೆಯು ಅವಶ್ಯ. ವ್ಯಕ್ತಿ, ಸಮಾಜ ಮತ್ತು ವಂಶ ಈ ಮೂರು ಬಗೆಯಾಗಿ – ಈ ಮೂರು ಸಂಸ್ಥೆಗಳಿಗೆ ಸಹಾಯಕವೂ ಪ್ರಯೋಜಕವೂ ಆಗುವ ಸ್ವರೂಪದಿಂದ ಮೂಲ ಪ್ರವೃತ್ತಿಗಳನ್ನೂ ಹುಟ್ಟುಗುಣಗಳನ್ನೂ ವರ್ಗೀಕರಿಸೋಣ. ಆಹಾರ, ಹೋರಾಟ, ಪಲಾಯನ ಮತ್ತು ಆಟಪಾಟ – ಇವು ವ್ಯಕ್ತಿಯನ್ನು ಬದುಕಿಸುವ ಹುಟ್ಟು ಪ್ರವೃತ್ತಿಗಳು. ಹಿಂಡುಗೂಡುವಿಕೆ (ಸಹವಾಸ ಪ್ರಿಯತೆ). ಹೊಗಳಿಕೆ ತೆಗಳಿಕೆಯ ಪರಿವೆ (ಪ್ರಶಂಸಾ ಪ್ರಿಯತೆ) ಇವು ಸಮಾಜವನ್ನು ಬದುಕಿಸುವ ಪ್ರವೃತ್ತಿಗಳು. ಮೈಥುನ, ವಾತ್ಸಲ್ಯ (ಸಂತತಿ ಸಂಗೋಪನ) ಇವು ವಂಶವನ್ನು ಮುಂದುವರಿಸುವ ಪ್ರವೃತ್ತಿಗಳು. ಈ ಪ್ರವೃತ್ತಿಗಳ ಕುರಿತು ಸೂಕ್ಷ್ಮವಾದ ಪರಿಭಾಷೆಯ ವಾದ ಪ್ರತಿವಾದಗಳಲ್ಲಿ ನಾವು ಇಲ್ಲಿ ಸೇರಬೇಕಿಲ್ಲ. ನಾವು ವಿಮರ್ಶಿಸಬೇಕಾದ ಪ್ರಶ್ನೆ ಇಷ್ಟೇ. ಮೇಲೆ ಹೇಳಿದ ಈ ಮೂಲ ಪ್ರವೃತ್ತಿಗಳು ಗಂಡು–ಹೆಣ್ಣುಗಳಲ್ಲಿ ಹೆಚ್ಚು ಕಡಿಮೆಯಾಗಿ ಬೇರೆ ಬೇರೆಯಾಗಿ ಬೆಳೆದಿವೆಯೋ ಹೇಗೆ ?

ನಮ್ಮ ಚರ್ಚೆ ವಂಶ ವಿಧಾಯಕ–ಪ್ರವೃತ್ತಿಗಳ ವಿಚಾರದಿಂದಲೇ ಆರಂಭವಾಗಲಿ. ಆ ಪ್ರವೃತ್ತಿಗಳು ಎಲ್ಲಕ್ಕೂ ಮಹತ್ವದವು. ಏಕೆಂದರೆ ಅವುಗಳ ಭಿನ್ನ ಭಿನ್ನ ವ್ಯಾಪಾರಗಳಿಂದಲೇ ಸ್ತ್ರೀ–ಪುರುಷರ ಎಲ್ಲ ಬಗೆಯ ಶಾರೀರಿಕ ಮಾನಸಿಕ, ಹಾಗೂ ಚಾರಿತ್ರಿಕ–ಭೇದಭಾವಗಳ ವಿವಿಧತೆಯು ಹಬ್ಬಿ ಬೆಳೆದಿದೆ.

## ಪ್ರಾಣಿಪ್ರಪಂಚದಲ್ಲಿ ಹೆಣ್ಣಿನ ಸ್ಥಾನ

ಮನುಷ್ಯನನ್ನು ಉಳಿದು ಮಿಕ್ಕ ಪ್ರಾಣಿ–ಪ್ರಪಂಚದಲ್ಲಿ ಗಂಡಿಗಿಂತಲೂ ಹೆಣ್ಣಿಗೆ ಪ್ರಾಧಾನ್ಯ. ಬರೇ ಆಕಾರದಲ್ಲಿ ಮಾತ್ರವಲ್ಲ: ವಂಶವನ್ನು ಮುಂದುವರಿಸುವ ನೇರವಾದ ವಾಹನ ಹೆಣ್ಣು. ಆದ್ದರಿಂದ ಅದಕ್ಕೆ ಪ್ರಾಣಿಜೀವನದಲ್ಲಿ ಅಷ್ಟು ಪ್ರಾಧಾನ್ಯ. ಮನುಷ್ಯಪ್ರಾಣಿಯ ವಂಶದಲ್ಲಿ ಸಂತತಿ ನಿರ್ಮಿತಿಯ ಕಾರ್ಯವು ಹೆಣ್ಣಿನಲ್ಲೇ ಜರಗುತ್ತದೆ. ತನ್ನ ಒಂದಂಶವನ್ನೇ ಬೇರ್ಪಡಿಸಿ. ಮಾರ್ಪಡಿಸಿ ಹೆಣ್ಣು. ಸಂತತಿಯನ್ನುಂಟುಮಾಡುತ್ತಾಳೆ. ಗಂಡಿನ ಕಾರ್ಯ 'ನಿಮಿತ್ತ ಮಾತ್ರ'.– ಆಗಂತುಕ: ಬಹಿರಂಗದ್ದು. ಅದೂ ಅಪರಿಹಾರ್ಯ; ಅವಶ್ಯಕತೆಯುಮಲ್ಲ.

ನಿಸರ್ಗವೂ ವಿಜ್ಞಾನಿಗಳ ಪ್ರಯೋಗಶಾಲೆಯೂ ಈ ವಿಧಾನವನ್ನು ಸಮರ್ಥಿಸಲಿಕ್ಕೆ ಅನ್ಯೋನ್ಯ ಸಹಕಾರ ನೀಡಿವೆ. ಪ್ರಜೋತ್ಪಾದನೆಯ ವ್ಯಾಪಾರದಲ್ಲಿ, ಗಂಡು, ಕೊನೆಗೂ ಎಷ್ಟು ಅನವಶ್ಯಕವೆಂಬುದನ್ನು ಅವೆರಡೂ ಉದಾಹರಣೆಗಳಿಂದ ಸಿದ್ಧಮಾಡಿದ್ದಾವೆ. ಗಂಡು, ಸಮಾಜದಲ್ಲಿ ಸರ್ವಾಧಿಕಾರಿಯಾದರೂ, ನಿಸರ್ಗದಲ್ಲಿ ಅವನ ಸ್ಥಾನ ಗೌಣ. ಈ ಕಟುವಾದ ಸತ್ಯವನ್ನು ವಿಜ್ಞಾನಿಗಳು ಕಂಡಿದ್ದಾರೆ. ವಂಶ ವಿಸ್ತಾರದ ಸೃಷ್ಟಿಕ್ರಮದಲ್ಲಿ ಹೆಣ್ಣು ಪ್ರಥಮ, ಪ್ರಮುಖ, ಮೂಲಭೂತ. ಗಂಡು 'ಪಾರಿಪಾರ್ಶ್ವಕ,' ಪೂರಕ, ಮತ್ತು ಗೌಣ. ಪ್ರಜೋತ್ಪಾದನೆಯ ಇತಿಹಾಸದಲ್ಲಿ ಗಂಡಿನ ಕಾರ್ಯ ಪ್ರತ್ಯೇಕವಾಗಿ ನಿಶ್ಚಿತವಾದದ್ದು ತರುವಾಯದ ತಿದ್ದುಪಡಿ. ಸೃಷ್ಟಿಯ ನಾಟಕಕ್ಕೆ ಹೆಣ್ಣನದೇ ನಾಯಕ-ಪಾತ್ರ; ಗಂಡು ನಿರ್ವಹಿಸುವ ಭೂಮಿಕೆ, ಆನುಷಂಗಿಕ ಮತ್ತು ಪ್ರಾಸಂಗಿಕ. ಗಂಡನ್ನು ಹೆಣ್ಣೇ ಹೊತ್ತು ಹೆತ್ತು ಬದುಕಿನ ಹಾದಿ ಹಿಡಿಸುತ್ತಾಳೆ. ಹೊಸ ಹುಟ್ಟಿನ ದುರಂತ ಕ್ಷಣದಲ್ಲಿ ಗಂಡು ಕಂಗೆಟ್ಟು ಕಳವಳಗೊಂಡು ಅಸಹಾಯವಾಗಿ ಬದಿಗೆ ಕೈ-ಕಟ್ಟಿ ನಿಲ್ಲುತ್ತದೆ. ವಂಶವನ್ನು ವಿಸ್ತರಿಸುವ ಗಂಭೀರ ಕಾರ್ಯದಲ್ಲಿ ಬರೇ ಉಪಕರಣವಾಗಿದ್ದು ಸಲಕರಣೆಗಳನ್ನು ಒದಗಿಸುವ ತನ್ನ ಕೆಲಸ ಎಷ್ಟು ಅಮುಖ್ಯವೆಂಬುದನ್ನು ಆ ಕ್ಷಣಕ್ಕೆ ಆತನು ಮನಗಾಣುತ್ತಾನೆ; ವಂಶದ ಜೀವಸೆಲೆಗೆ ತನಗಿಂತಲೂ ಹೆಣ್ಣು ಎಷ್ಟು ಹತ್ತಿರ, ಎಷ್ಟು ಹೊಂದಿಕೆಯವಳೆಂಬುದನ್ನು ಗಂಡು ತಿಳಿದುಕೊಳ್ಳುತ್ತದೆ; ಜೀವನದ ಮಹಾ ಪ್ರವಾಹವು ಹೆಣ್ಣಿನಲ್ಲಿಯೇ ಪ್ರಕ್ಷುಬ್ಧವಾಗಿ ಹರಿಯುತ್ತದೆ. ಆಕೆಯ ರಕ್ತ-ಮಾಂಸ ದಿಂದಲೇ ಹೊಸ ಸೃಷ್ಟಿ ಹುಟ್ಟಿಬರುತ್ತದೆ. ಅದರಿಂದಲೇ ಜಗತ್ತಿನ ಆದಿ ಜನಾಂಗಗಳೂ ಪ್ರಾಚೀನ ಧರ್ಮಗಳೂ ತಾಯ್ತನವನ್ನು ಅಷ್ಟೊಂದು ಭಯ ಭಕ್ತಿಯಿಂದ ಪೂಜಿಸಿದವು. ಎಂಬೀ ಮಾತು ಗಂಡಿಗೆ ಮನವರಿಕೆಯಾಗುತ್ತದೆ.

ಹೆಣ್ಣಿನ ಈ ಭೂಮಿಕೆಗೆ ತಕ್ಕುದಾಗಿ ಆಕೆಯ ಗುಣದೋಷಗಳು ಬೆಳೆದು ಬಂದಿವೆ. ಹೆಣ್ಣಿನ ಲಜ್ಜೆ ಹಿರಿದು. ಈ ಲಜ್ಜಾಭಾವವು ಆಕೆಯ ಸಂತತಿ ನಿರ್ಮಾಣದ ಉದ್ದೇಶಕ್ಕೇ ಅಂಕಿತವಾಗಿದೆ. ಲಜ್ಜೆಯಿಲ್ಲವಾಗಿದ್ದರೆ ಹೆಣ್ಣು ಯಾವ ಗಂಡಿಗೂ ಒಮ್ಮೆಲೇ ಈಡಾಗುತ್ತಿದ್ದಳು; ಸೋಲುತ್ತಿದ್ದಳು. ಲಜ್ಜೆಯು ಒಂದು ಹಿತವಾದ ಸಹಜ ಸಂಯಮ. ಅದರ ಪ್ರಯೋಜನವೇನೆಂದರೆ, ಕಾಮಕ್ಕೆ ಕಡಿವಾಣ. ಲೈಂಗಿಕ ಆಯ್ಕೆಗೆ ಅದು ಸಹಾಯ. ತನ್ನ ಮಕ್ಕಳ ತಂದೆಯಾಗಲು ತಕ್ಕವನಾದ ಇನಿಯನನ್ನು ಹೆಚ್ಚಿನ ವಿವೇಕದಿಂದ ಆಯ್ದುಕೊಳ್ಳಲು ಲಜ್ಜೆಯು ಹೆಣ್ಣಿಗೆ ಒಂದು ಆಯುಧ. ಆದುದರಿಂದಲೇ ಲಜ್ಜೆಯು ವಧುಗಳಲ್ಲಿಯೂ, ಉಪವರ ಕನ್ಯಕೆಯರಲ್ಲಿಯೂ ನವಯುವತಿಯರಲ್ಲಿಯೂ ವಿಶೇಷ ನೋಡಿ. ಹೆಣ್ಣಿನ ಉದ್ದೇಶ ಕೈಗೂಡಿದ ಮೇಲೆ, ವಧೂವರರ ಕೈಗೆ ಕೈಗೂಡಿ ಮುಂದೆ ತಾಯ್ತನದಲ್ಲಿ ಆಕೆಯ

ಬಾಳು ಸಫಲವಾದೊಡನೆ, ಹೆಣ್ಣಿನ ಲಜ್ಜೆ–ನಾಚಿಕೆ–ಕಡಿಮೆಯಾಗುವದು.

## ಹೆಣ್ಣಿಗೆ ಪ್ರಣಯ ಬೇಕೆ?

ಹಾಗೆಯೇ, ಪ್ರಣಯವ್ಯವಹಾರದಲ್ಲಿ. ಹೆಣ್ಣೇ ಗಂಡಿಗಿಂತ ಚತುರಳು, ಕುಶಲಳು. ಚಾತುರ್ಯಕ್ಕೆ ಸಾವಧಾನತೆ ಅವಶ್ಯ. ಸಾವಧಾನ ಸಂಯಮದಿಂದ ಶಕ್ಯ. ಸಂಯಮ ವಿವೇಕದಿಂದಲೇ ಸಾಧ್ಯ. ವಿವೇಕಕ್ಕೆ ವಿಕಾರವಶತೆ ವೈರಿ. ಸಾಮಾನ್ಯವಾಗಿ ಗಂಡಿಗಿಂತಲೂ ಹೆಣ್ಣು ಮಂದಕಾಮಿ. ಆದ್ದರಿಂದ 'ಇಂದ್ರಿಯ ಗ್ರಾಮದ' ಬಲಕ್ಕೆ 'ಪಂಡಿತ'ನೂ ಸೆಳೆದೊಯ್ಯಲ್ಪಡುವಾಗ ಆತನ ಹೆಣ್ಣು ಅಷ್ಟೊಂದು ದುಡುಕುವದಿಲ್ಲ. ಹೆಣ್ಣಿನ ವಿಕಾರವಶತೆಯು ವಿವೇಕವನ್ನೇ ಮಂಕುಗೊಳಿಸುವಷ್ಟು ತೀವ್ರವಾಗಿ ಬೆಳೆಯುವದಿಲ್ಲ. ಹೆಣ್ಣಿನ ಅನಾದಿಯ ಜಾಣತನದ ಮರ್ಮವಿದು. ಆಕೆ ಸಂಯೋಗದಲ್ಲಿ ತಾಳಬಲ್ಲಳು. ವಿಯೋಗದಲ್ಲಿ ಬಾಳಬಲ್ಲಳು. ಪರವಶನಾದ ಪ್ರಿಯನನ್ನು ಸ್ವಸ್ಥಚಿತ್ತದಿಂದ ಆಳಬಲ್ಲಳು. ಈ ನಿಯಮಕ್ಕೆ ಅಪವಾದವಿಲ್ಲದೇ ಇಲ್ಲ. ಆದರೂ ಸಾಮಾನ್ಯವಾಗಿ ಲೆಕ್ಕ ಹಾಕಿದರೆ, ನೂರಕ್ಕೆ ನಾಲ್ವತ್ತರಷ್ಟು ಹೆಣ್ಣುಗಳು ಒಂದು ಬಗೆಯ ಬಧಿರವೃತ್ತಿಯನ್ನು, ಕಾಮಕ್ಕೆ ಕೆರಳದ ಕರಗದ ಮಂದತ್ವವನ್ನು, ನೆಮ್ಮದಿಯಾಗಿ ಬೆಳಿಸಿಕೊಂಡದ್ದು ಕಂಡುಬರುತ್ತದೆ.

ಪ್ರಾಣಿಸೃಷ್ಟಿಯಲ್ಲಿಯೂ ಹಾಗೆಯೇ. ಎಷ್ಟೋ ಜಾತಿಗಳಲ್ಲಿ ಹೆಣ್ಣು ಪ್ರಣಯಕ್ಕೆ ಪರಾಙ್ಮುಖವಾಗಿರುತ್ತದೆ. ಕಾಮದ ಉದ್ರೇಕಕ್ಕೆ ಉದಾಸೀನವಾಗಿರುತ್ತದೆ. ಹಾಗಿದ್ದರೆ ಹೆಣ್ಣಿಗೆ ದೇಹದ ಸುಖಬೇಡವೇ ? ಬೇಕು. ಲೈಂಗಿಕ ಭೋಗವನ್ನು ಹೆಣ್ಣು ಬೇಡುವಳು; ಬಯಸುವಳು. ಪಡೆದು ಹಿಗ್ಗುವಳು ಆದರೆ ಅದಕ್ಕೂ ಮಿಗಿಲಾಗಿ ಹೆಣ್ಣು ಬಯಸುವದು – ಭೋಗಿಸುವದು, ವಿಪರೀತ ಅಪರಿಮಿತ ಪ್ರಶಂಸೆಯನ್ನು: ತನ್ನ ಬಯಕೆ ಬೇಡಿಕೆಗಳ ಕುರಿತು ಗಂಡು ಪೂರೈಸುವ ಯಥೇಷ್ಟವಾದ ಗಮನವನ್ನು. ಆಕೆ ಕಾಮುಕಳಲ್ಲ: ಕಾಮಿನಿ, ರಮಣಿ, ಕಾಮಿಸಲ್ಪಡುವದರಲ್ಲಿ ರಮಿಸಿಕೊಳ್ಳುವದರಲ್ಲಿ–ಆಕೆಗೆ ಕೊನೆಯಿಲ್ಲದ ಮೆಚ್ಚುಗೆ ! ಗಂಡಿನಿಂದ ಅನುದಿನದ ಆರೈಕೆ, ಅನವರತದ ಓಲೈಕೆ, ಅನುನಯ ಮತ್ತು ಅನುಯಾಯಿತನ ಇವೇ ಹೆಣ್ಣಿಗೆ ಹಿರಿಯ ಹಿಗ್ಗಿನ ಕಾರಣಗಳು. ಹಲವು ಸಮಯ, ಒಬ್ಬನಿಂದ ಬಯಸಲ್ಪಡುವೆನೆಂಬ, ಕಾಮಿಸಲ್ಪಡುವೆನೆಂಬ ಭಾವನೆಯಲ್ಲಿಯೇ ಹೆಣ್ಣು ನಿತಾಂತ ಸುಖವನ್ನೂ ಸಮಾಧಾನವನ್ನೂ ಪಡೆಯುವಳು. ಪ್ರತ್ಯಕ್ಷ ಸಹವಾಸ ಸಮಾಗಮಗಳೂ ಆಕೆಗೆ ಅಷ್ಟು ಬೇಕೆನಿಸುವದಿಲ್ಲ !

ಹೀಗೆ ಪ್ರೀತಿಗಿಂತಲೂ ಪ್ರೀತಿಸಲ್ಪಡುವುದೇ ಹೆಣ್ಣಿಗೆ ಹೆಚ್ಚು ಪ್ರಿಯ. ಇದರ ಮೋಹವು ಕೆಲವೊಮ್ಮೆ ಆಕೆಯ ಸಹಜ ವಿವೇಕವನ್ನೂ ಮೀರಿ ಮೇರೆವರಿದದ್ದುಂಟು. ಗಂಡನ್ನು ಬರಿದೆ ಕೆರಳಿಸಿ, ಆತುರನಾಗಿ ಕಾತರನಾಗಿ ಮಾಡಿ, ಕೊನೆಗೆ ಅಂಜಿ ಹಿಂಜರಿದು ದುರಂತಕ್ಕೆ ಗುರಿಯಾದ ಹೆಣ್ಣಿನ ಕತೆಗಳು ಬೇಕಷ್ಟಿವೆ. ಒಂದೆಡೆಗೆ ವಿಕಾರದ ಮಂದತೆ, ಇನ್ನೊಂದೆಡೆಗೆ ಆರಾಧನಾ ಪ್ರಿಯತೆಯ ತೀವ್ರತೆ–ಇವೆರಡ ರಿಂದ ಇನ್ನೂ ಒಂದು ವಿಶೇಷ ಪರಿಣಾಮವಾಗುವದುಂಟು. ಅದಕ್ಕೆ ಪ್ರೇಮದ ಆಧ್ಯಾತ್ಮಿಕತೆಯೆನ್ನಬಹುದು. ಪ್ರೇಮದ ಆಧ್ಯಾತ್ಮಿಕ ಅಂಶವು ಗಂಡಿಗಿಂತ ಹೆಣ್ಣಿ ನಲ್ಲಿಯೇ ಹೆಚ್ಚು ಸ್ವಾಗತವನ್ನು ಪಡೆಯುತ್ತದೆ. ಗಂಡು ಆಧ್ಯಾತ್ಮಿಕ ಪ್ರೇಮದ ಮಾತನಾಡುವಾಗ ಹಲವೊಮ್ಮೆ ಹೆಣ್ಣನ್ನಾಗಲೀ ತನ್ನನ್ನೇ ಆಗಲೀ, ವಂಚಿಸು ತ್ತಿರುತ್ತಾನೆ. ಆರಂಭಕ್ಕೆ ಅದು ಅನುಕೂಲವೆನಿಸಿದರೂ, ಪ್ರೇಮದಲ್ಲಿಯ ಈ ಆಧ್ಯಾತ್ಮದ ಅಥವಾ ಕಾವ್ಯದ ಅಂಶದಿಂದಲೇ ಗಂಡಿಗೆ ತೃಪ್ತಿಯಾಗದು. ಆತನ ಪ್ರೇಮದಲ್ಲಿ ಆಧ್ಯಾತ್ಮಿಕತೆಗಿಂತ ಶಾರೀರಕತೆಯೇ ಹೆಚ್ಚು. ಕ್ರಮೇಣ (ಇಲ್ಲವೇ ಕೆಲವೊಮ್ಮೆ ಅಕಸ್ಮಾತ್ !) ಗಂಡು ಕಾವ್ಯದಿಂದ ಕಾಮಕ್ಕೇ ಇಳಿಯುತ್ತಾನೆ. ಪ್ರತ್ಯಕ್ಷ ಪ್ರಣಯ ವ್ಯವಹಾರದ ಮಾತೆತ್ತಿ ಹೆಣ್ಣನ್ನು ದಿಗಿಲುಗೊಳಿಸುತ್ತಾನೆ ! ಮುಗಿಲಿನಿಂದ ನೆಲಕ್ಕೆ ಇಳಿಸುತ್ತಾನೆ ! ಆದರೆ ಹೆಣ್ಣಿನ ರೀತಿ ಬೇರೆ. ಆಕೆ ಅಂತರವನ್ನಿಟ್ಟುಕೊಂಡು, ಅಂತರಂಗವನ್ನು ಬಚ್ಚಿಟ್ಟುಕೊಂಡು, ಕೊನೆತನಕ ಗಂಡಿ ನೊಡನೆ ಮಾನಸಿಕ ಪ್ರೇಮವನ್ನು ಮನವಾರೆಯೂ ಮಾಡಬಲ್ಲಳು. ಇಷ್ಟೇ ಅಲ್ಲ. ಗಂಡಿನ ಮೈಸಲಿಗೆಗೆ ಕನಿಕರದಿಂದಾಗಲೀ, ಕೆಲ ಒಂದು ಕಾರಣದಿಂದಾಗಲೀ ಒಪ್ಪಿಯೂ ಅಂತರಂಗದಿಂದಲೂ ನಿರ್ಲಿಪ್ತಳಾಗಿ ಬಾಳಬಹುದು ! ಕಾಡುಕಾಮ ವನ್ನು ಗಂಡು ಪರಿಷ್ಕೃತ ಪ್ರೇಮವಾಗಿ ಮಾಡಬಲ್ಲ. ಆದರೆ ಪ್ರೇಮವನ್ನು ಅನಿರ್ವ ಚನೀಯ ಭಕ್ತಿಯಾಗಿ ಮಾರ್ಪಡಿಸುವ ಮಾಟ ಹೆಣ್ಣಿಗೇ ಶಕ್ಯ !

೩

ಇದರ ರಹಸ್ಯವೇನು ? ಶರೀರ ಸುಖದ ಒತ್ತಾಯ ಹೆಣ್ಣಿಗೆ ಅಷ್ಟೊಂದು ಇರ ಬಾರದೇಕೆ ? ಹೆಣ್ಣಿಗೆ ತಾಯ್ತನವೇ ಜೀವದ ಜೀವಾಳ. ವಾತ್ಸಲ್ಯವೇ ಜೀವನದ ಸ್ಥಾಯೀಭಾವ. ಇನಿಯತನವೂ ಮೈಥುನವೂ ಆನುಷಂಗಿಕ ಗುಣಗಳು; ಸಂಚಾರೀ ಭಾವಗಳು. ಹೆಣ್ಣು ಬಾಳಿನಲ್ಲಿ ರತಿಯು ವಾತ್ಸಲ್ಯಕ್ಕೆ ಪೋಷಕ. ಪ್ರಣಯವು ಮಾತೃತ್ವ ಸಾಧನ. ಹೆಣ್ಣು ಪ್ರಕೃತಿಯಿಂದಲೂ ತಾಯಿ. ಗಂಡು ಪರಿಸ್ಥಿತಿಯಿಂದ ತಂದೆ. ಗಂಡಿನ ಕುರಿತು ಹೆಣ್ಣಿನ ಪ್ರೇಮ ಆಕೆಯ ವಾತ್ಸಲ್ಯದ್ದೇ ಒಂದು ಅಂಗ: ಒಂದು ಪಾಂಗು. ಆರಂಭದಲ್ಲಿ ಅದು ತಾಯ್ತನಕ್ಕೆ ಸಾಧನವಾಗುತ್ತದೆ. ಆಮೇಲೆ

ಅದು ತಾಯ್ತನದ ಒಂದು ಪರಿಯೇ ಆಗುತ್ತದೆ. ಹೆಣ್ಣನ್ನು ಗಂಡಿನೊಡನೆ ಕೂಡಿಸುವ ಎಲ್ಲ ಮೃದುಭಾವನೆಗಳ ಹಾಗೂ ಸ್ನೇಹ ತಂತುಗಳ ಉಗಮವು ಆಕೆಯ ಕಾಮುಕತೆಯಲ್ಲಿ ಇರುವದಿಲ್ಲ; ಲೈಂಗಿಕತೆಯಿಂದ ಬರುವದಿಲ್ಲ; ಪಾತಿವ್ರತ್ಯ, ಪತಿಪ್ರೇಮಗಳ ಉಗಮು ಹೆಣ್ಣಿನ ವಿಧೆಯತನದ ಆತ್ಮಸಮರ್ಪಣದ ಮೂಲಪ್ರವೃತ್ತಿಗಳಲ್ಲಿದೆ. ಆಳಾಗಬೇಕು–ಆಳಲ್ಪಡಬೇಕು–ಮುಂದೆ ಆಳಾಗಿಯೂ ಆಳಬೇಕು–ಎಂಬ ಈ ಅಧಿಕಾರ ಪ್ರವೃತ್ತಿಯ ವ್ಯಸ್ತ ಸ್ವರೂಪವೂ, ತೀವ್ರ ಪ್ರಶಂಸಾಪ್ರಿಯತೆಯ ಸಮಸ್ತ ಒತ್ತಾಯವೂ ಹೆಣ್ಣು ಗಂಡನ್ನು ಅಂಟಿ ಉಳಿಯುವಂತೆ ಮಾಡುತ್ತದೆ. ಇದಲ್ಲದೆ ಪ್ರತಿಯೋರ್ವ ಪತಿಯೂ ಪ್ರಿಯನೂ ಅವನ ಹೆಣ್ಣಿಗೆ ಒಂದು ಬೆಳೆದ ಶಿಶುವಂತೆಯೇ ತನ್ನ ಇನ್ನೊಂದು ಕೂಸಾಗಿಯೇ ತೋರುತ್ತಾನೆ! ಅವನ ಆಹಾರ, ಆರೈಕೆ, ಸಂಗೋಪನೆ, ಸಂಸಾರಗಳ–ಪರಿವೆ ಆಕೆಗೆ ತನ್ನ ತಾಯ್ತನದ ಇನ್ನೊಂದು ಹೊಣೆಯಾಗಿಯೇ ಕಾಣುತ್ತದೆ. ಹೀಗೆ ಅಭಾವಿತವಾಗಿ, ಹೆಣ್ಣು ತನ್ನ ಗಂಡಿನಲ್ಲಿ ಮಗುವಿನ ಒಂದಂಶವನ್ನೂ, ಗಂಡು ತನ್ನ ಹೆಣ್ಣಿನಲ್ಲಿ ತಾಯಿಯ ಕೆಲವಂಶವನ್ನೂ ಕಂಡುದರಿಂದಲೇ ದಾಂಪತ್ಯವು ದೃಢವಾಗುತ್ತದೆ. ಆದರೆ ಆ ವಿಚಾರ ಇಲ್ಲಿ ಬೇಡ. ಹೆಣ್ಣಿನ ಹೃದಯದ ಒಂದು ಪರಿಯನ್ನು ಮಾತ್ರ ನಾವಿಲ್ಲಿ ಪರೀಕ್ಷಿಸಿದ್ದಾಯಿತು.

## ಗಂಡು ಹೆಣ್ಣಿನ ಪ್ರೀತಿಯ ರೀತಿ

ಹೆಣ್ಣಿನ ಕಾಮು (ಮತ್ತೂ ಅದರಿಂದ ರೂಪಗೊಂಡ ಪ್ರೇಮು) ಕಡಿಮೆ ತೀವ್ರ–ಹೆಚ್ಚು–ಮಂದ–ವೆಂದು ಮೇಲೆ ಹೇಳಲಾಯಿತು. ಆದರೆ ಇದು ಸತ್ಯದ ಅರೆಪಾಲು. ಗಂಡಿನ ಪ್ರೀತಿಗೆ ರಭಸ ಹೆಚ್ಚು. ಆದರೆ ವ್ಯಾಪ್ತಿಯೂ ಅಷ್ಟೇ ಕಡಿಮೆ. ಪ್ರೀತಿ ಅವನ ಜೀವನದ ಒಂದು ಭಾಗವನ್ನೂ ಮಾತ್ರ ಆಳುವುದು. ಆದರೆ ಹೆಣ್ಣಿನ ರೀತಿ ಬೇರೆ. ಹೆಣ್ಣಿನ ಬಾಳಿನಲ್ಲಿ ಪ್ರೀತಿಯ ವ್ಯಾಪ್ತಿ ವಿಶಾಲವಾದದ್ದು. ಅವಳ ಬಾಳಿನ ಸಂದು ಮೂಲೆಗಳನ್ನು ತುಂಬಿ ತುಳುಕಿ ಆಕೆಯ ಪ್ರೀತಿ ಹರಿಯುವುದು. ಗಂಡು ಪ್ರೀತಿ (ಹೆಣ್ಣಿನ ಪ್ರೀತಿ) ಇಲ್ಲದೇ ಬಾಳಬಲ್ಲ. ಆದರೆ ಹೆಣ್ಣು ಹಾಗಲ್ಲ. ಹೆಣ್ಣಿನ ಬಾಳು–ನಿಜವಾದ ಬಾಳು– ಪ್ರೀತಿಯಿಂದಲೇ–ಗಂಡಿನ ಪ್ರೀತಿ ಪಡೆದಾಗಲೇ–ಬೆಳೆಯುತ್ತದೆ; ಬೆಳಗುತ್ತದೆ. ಪ್ರಿಯನ ಒಡನಾಟ, ಪ್ರಿಯನ ಹಂಬಲ, ಪ್ರಿಯನಿಗಾಗಿ ಕಳವಳ, ಪ್ರಿಯನ ಪರಿಚರ್ಯೆ, ಕೊನೆಗೆ ಪ್ರಿಯನ ಕುರಿತು ಮಾತುಕತೆ–ಇವು ನಡೆಯುವಾಗಲೇ ಹೆಣ್ಣು ನಿಜವಾಗಿ ಜೀವಂತಳು. ಗಂಡಿನ ಆಕರ್ಷಣ, ಆಸಕ್ತಿ, ಕಣ್ಮನಗಳನ್ನು ಸೆಳೆಯುವ ಚಟುವಟಿಕೆಯೇ ಹೆಣ್ಣು ನಡತೆಯ ನೆಲೆಗ.

ಆದರೆ ಇಲ್ಲಿಯೂ ಒಂದು ಸೂಕ್ಷ್ಮವಿದೆ. ಬಳ್ಳಿಯು ಮರವನ್ನು ಸುತ್ತಿ ಮುತ್ತಿ ಬಾಳುತ್ತಿದ್ದರೂ, ಬಳ್ಳಿಯ ಬದುಕು ಮರದಿಂದ ಬೇರೆ. ಅದರ ಜೀವರಸ ಮರದ ಬೇರಿಂದ ಪುಟಿಯುವದಿಲ್ಲ. ಹೆಣ್ಣಿನ ರೀತಿಯೂ ಹಾಗೆಯೇ. ಗಂಡಿನ ಆಸಕ್ತಿ, ಅಭಿಪ್ರಾಯಗಳು ಹೆಣ್ಣಿಗೆ ಅವಶ್ಯ, ನಿಜ. ಆದರೆ ಗಂಡಿನ ಹೃದಯವೇ ಹೆಣ್ಣಿನ ಬಾಳಿನ ಮಧ್ಯಬಿಂದುವಲ್ಲ. ಗಂಡನ್ನು ಹೆಜ್ಜೆ ಹೆಜ್ಜೆಗೂ ಅವಲಂಬಿಸಿ ಹೆಣ್ಣು ಬದುಕುವದು ಕಂಡುಬಂದರೂ, ಹೆಣ್ಣು ಗಂಡಿಗೆ ಎಂದೂ ಪ್ರತಿಬಿಂಬವಾಗುವದಿಲ್ಲ. ಗಂಡಿನ ಆಧಾರಕ್ಕಾಗಿ, ಆರಾಧನೆಪಡಕೊಳ್ಳಲಿಕ್ಕಾಗಿ, ಮಣಿದು ಅಧಿಕಾರ ನಡೆಸುವದಕ್ಕಾಗಿ, ಹೆಣ್ಣು ಗಂಡಿನ ಮತಕ್ಕೆ ಅನುಯಾಯಿ ಆಗಬಹುದು; ಮಾತಿಗೆ ಅನುಮತಿ ಈಯಬಹುದು. ಗಂಡಿನ ಪ್ರಸನ್ನತೆಯಿಂದ ಮನಸಾರೆ ಧನ್ಯಳಾಗಬಹುದು. ಜೀವಮಾನವೆಲ್ಲ ಗಂಡಿನ ಎರಕದಲ್ಲಿ ತನ್ನ ಬಾಳನ್ನು ಹೊಯ್ಯಲು ಹೆಣಗುತ್ತಿರಬಹುದು. ಆದಾಗ್ಯೂ ತನ್ನ ಅಂತರಂಗದಲ್ಲಿ ಹೆಣ್ಣು ಕೇವಲ ಆತ್ಮನಿಷ್ಠ; ತನ್ನನ್ನು ಮರೆಯದ ತನ್ನತನವನ್ನು ತೊರೆಯದ ನಿಷ್ಠುರ ವ್ಯಕ್ತಿತ್ವವು ಹೆಣ್ಣಿನದು. ಹೊರ ಬದುಕಿನ ವ್ಯವಹಾರಿಕ ಪ್ರಪಂಚದಲ್ಲಿ ಆಕೆಯು ಗಂಡಿಗೆ ಅನುಗಾಮಿಯಾಗಿ ವರ್ತಿಸುವಳು. 'ಧರ್ಮೇ ಚ ಅರ್ಥೇ ಚ ಕಾಮೇ ಚ ನ ಅತಿಚರಾಮಿ' ಎಂದು ಅಗ್ನಿಸಾಕ್ಷಿಯಾಗಿ ಆಣೆ ಹೊತ್ತು ನಡೆಯುವಳು, ಏಕೆಂದರೆ ಗಂಡಿನ ಅಹಂಕಾರಕ್ಕೆ ಮಿತಿಯಿಲ್ಲವೆಂಬುದು ಆಕೆಗೆ ಗೊತ್ತು. ತನ್ನ ವ್ಯಕ್ತಿತ್ವವನ್ನು ಪೂರ್ತಿಯಾಗಿ ಪ್ರತಿಪಾದಿಸಿ ಗಂಡಿನ ತಿರಸ್ಕಾರಕ್ಕೆ ಪಾತ್ರಳಾಗಬಾರದೆಂದೂ ಆಕೆಗೆ ಗೊತ್ತು.

## ಗೆಳೆತನ ಪ್ರೀತಿಯ ಗುಣ

ಪ್ರೀತಿಯ ಕಲೆಯಲ್ಲಿ ಹೆಣ್ಣು ಗಂಡಿಗೂ ಮೀರಿದ ನಿಪುಣೆ. ಆದರೆ ಮೈತ್ರಿಯಲ್ಲಿ ಗಂಡೇ ಹೆಣ್ಣನ್ನು ಹಿಂದೆ ಹಾಕುತ್ತಾನೆ. ಗೆಳೆತನವು ಮುಖ್ಯವಾಗಿ ಗಂಡಿನ ಕಲೆ. (ಸಂಸ್ಕೃತದಲ್ಲಿ ಗೆಳೆಯನೆಂಬ ಅರ್ಥದ ಮುಖ್ಯ ಎರಡು ಶಬ್ದಗಳಲ್ಲಿ ಒಂದು ನಪುಂಸಕ. ಒಂದು ಸ್ತ್ರೀಲಿಂಗ! ಇದರ ಗೂಢವೇನೋ!) ಗಂಡಸರು ಪ್ರಿಯ ಮಿತ್ರರಾಗಬಹುದು. ಹೆಂಗಸರು ಬರೇ ಪರಿಚಿತರೇ ಆಗಿ ಉಳಿಯುವರು. ಕರ್ಣ–ಕೌರವ, ಕೃಷ್ಣಾರ್ಜುನ ದಾಮೋನ–ಪೀಥಿಯಸ್ - ಇಂಥ ಜೀವದ ಗೆಳೆಯರ ಜತೆಗಳು ಹೆಂಗಸರಲ್ಲಿ ಸಿಗಬಲ್ಲವೇ ? ಯಾವ ಹೆಣ್ಣೂ ಇನ್ನೋರ್ವ ಹೆಣ್ಣಿನ ಕುರಿತು ಮನಸಾರೆ ಒಳ್ಳೇ ಮಾತನಾಡಿದ್ದು ನಿಮಗೆ ನೆನಪಿದೆಯೇ ? ಜೀವದ ಗೆಳೆಯರಿಗಿಂತ ಜೀವದ ಗೆಳತಿಯರೆನಿಸಿಕೊಂಡ ಎರಡು ಹೆಣ್ಣುಗಳ ಜತೆಯನ್ನು ಕೆಡಿಸುವದು ತೀರ ಸಲೀಸ. ಅದೇಕೆ ಹಾಗೆ ? ಒಂದು ಹೆಣ್ಣು ಮಿಕ್ಕ

ಹೆಣ್ಣುಗಳ ಕುರಿತು–ಪ್ರಾಯ, ಪ್ರೌಢಿಮೆ, ಪ್ರತಿಷ್ಠೆಯಲ್ಲಿ ತನ್ನ ಸರಿಸಮಾನರಾದ ಹೆಣ್ಣುಗಳ ಕುರಿತು–ಸದಭಿಪ್ರಾಯುವನ್ನು ಆಡಿ ತೋರಿಸಿದರೆ ಅಂದಿಗೆ ಆಕಾಶದ ಗ್ರಹಗಳ ಗತಿಯೇ ಕೆಟ್ಟಿವೆನ್ನಬಹುದು !

ಆದ್ದರಿಂದ ಹೆಂಗಸರು ಕೂಡಿ ಕಲೆತಾಗ ಪರಸ್ಪರರನ್ನು ಬಹಳ ಹೊತ್ತು ಆರಾಧಿಸಲಾರರು. ಎಲ್ಲರೂ ಕೂಡಿ ಬೇರೊಂದು ವಿಷಯುವನ್ನೆತ್ತಿ ಬೇರೊಂದು ಆಸಕ್ತಿಯನ್ನು ಉಂಟುಮಾಡಿಕೊಳ್ಳಬಹುದು. ಉಪಚಾರದ ಹರಟೆಗಳು ತೀರಿದ ಹೆಂದರೆ, ಕೈ-ಬಾಯಿಗಳಿಗೆ ಬೇರೆ ಉಸಾಬರಿ ಉಳಿಯದಿದ್ದರೆ, ಹೆಣ್ಣಿಗೆ ಇನ್ನೊಬ್ಬ ಹೆಣ್ಣಿನ ಸಹವಾಸ ಬೇಸರವೆನಿಸದೇ ಇರದು. ಈ ಬೇಸರದಿಂದ ಪಾರಾಗಲು ಅವರಿಗೆ ಒಂದೇ ದಾರಿ. ಅದೆಂದರೆ, ಗಂಡಿನ ಕುರಿತು ಅವರವರ ಗಂಡಂದಿರ ಕುರಿತು, ಮಾತು ಬೆಳೆಸುವದು. ಇದು ಸೋಜಿಗವೇನೂ ಅಲ್ಲ; ತೀರ ಸಹಜವು. ಏಕೆಂದರೆ ಹಾಲುಂಡ ಬಾಯಿ ಹರಿವ ನೀರಿಗೆ ಹಂಬಲಿಸುವದೇ ? ಪ್ರೇಮ–ಪ್ರಣಯದ ಭಾವದಿಂದ ಉದ್ದೀಪಿತಳಾದ ಹೆಣ್ಣಿಗೆ ಗೆಳೆತನವು ಅದರ ಬದಲು ಅಥವಾ ಅದರ ಇದಿರು ತೀರ ಸಪ್ಪಗೆ ಅನಿಸುವದು. ಅಂತೆಯೇ ಹೆಣ್ಣು ಆಳ ವಾದ–ಎಂದೂ ಅಗಲದ–ಗೆಳೆತನದ ಉದಾಹರಣೆಯಾಗಿರುವದು ಬಹಳವಾಗಿ ವಿರಳವೇ. ಗಂಡಿನ ಪ್ರೀತಿ ಆತನ ಬಾಳಿನ ಒಂದು ಅಂಶ–ಬಾಳಿನಿಂದಲೂ ಬೇರೆ ಯಾದ ಒಂದು ಅಂಶ. ಆದರೆ ಹೆಣ್ಣಿನ ಪ್ರೀತಿ ಆಕೆಯ ಬಾಳಿನ ಸಮಗ್ರ ವಿಶ್ವ. ನಮ್ಮ ಭವಿತವ್ಯವೇ ನಾವಾಗಿದ್ದೇವೆ. ಅಂದ ಮೇಲೆ ಮೈತ್ರಿ ಗಂಡಿನ ಗುಣ; ಪ್ರೀತಿ ಹೆಣ್ಣಿನ ಗುರಿ ಆಗುವದೇ ದಿಟ.

೪

ಮುಂತೆ ಪ್ರೀತಿಯು ಒಂದು ಮೈ. ಈರ್ಷೆ–ಅಸೂಯೆ ಇನ್ನೊಂದು ಮೈ. ಪ್ರೀತಿ ಯಂತೆ ಈರ್ಷೆಯಲ್ಲಿಯೂ ಅಸೂಯೆಯಲ್ಲಿಯೂ ಗಂಡಿನ ಬಗೆ ಹೆಣ್ಣಿನಿಂದ ಬೇರೆ. ಗಂಡು ಪ್ರೀತಿಯಂತೆ ಗಂಡು-ಈರ್ಷೆಯೂ ಹೆಚ್ಚು ರೊಚ್ಚು ರಭಸವುಳ್ಳದ್ದು; ಅದರ ಆವೇಗ ಆವೇಷ ಹೆಚ್ಚು ತೀವ್ರ. ಆದರೆ ಅದರ ಆಯುಷ್ಯವೂ–ಅವಧಿಯೂ ಅಷ್ಟೇ ಕಡಿಮೆ. ಈರ್ಷೆಯನ್ನು ದೀರ್ಘಕಾಲ ಬೆಳೆಸಿಕೊಂಡು ಬರುವ ಗಂಡು ಒಬ್ಬಿಬ್ಬರೇ. ಗಂಡಿನ ಪ್ರೀತಿಯಲ್ಲಿ ಅರ್ಧಪಾಲು ಮಮತ್ವದ್ದು–ತನ್ನದೆಂಬ ಒಡೆ ತನದ ಎಚ್ಚರದ ಭಾವನೆಯದು. ಪ್ರೀತಿ ಇಲ್ಲಿ ಬರೇ ಆತ್ಮಸಮರ್ಪಣ ಮಾತ್ರವಲ್ಲ. ಅದು ಜತೆಗೆ ಆತ್ಮಾಭಿಮಾನದ ವಿಜಯವೂ ವಿಸ್ತಾರವೂ ಅಹುದು. ಆತ್ಮದ ಆಕ್ರ ಮಣವೂ ಅಲ್ಲಿದೆ; ಬೇರೊಂದು ಜೀವ ತನ್ನದಾಗಿ ಮಾಡಿಕೊಂಡು ಎರಡೂ ತಾನೇ

ತಾನಾಗಿ ಆಳುವ ಪ್ರವೃತ್ತಿಯೂ ಅಲ್ಲಿದೆ. 'ಆತ್ಮನಸ್ತು ಕಾಮಾಯ ಏವ' ಭಾರ್ಯೆ ಪ್ರಿಯಳಾಗುತ್ತಾಳೆ. ಬರಿ ಭಾರ್ಯೆಯ ಕಾಮನೆಯಿಂದ ಮಾತ್ರವಲ್ಲವೆಂಬ ಸತ್ಯ ವನ್ನು ಉಪನಿಷತ್ತು ಎಂದೋ ಸಾರಿದೆ. ಈ ಆತ್ಮಕಾಮನೆಯು ಪರರ ಆಕ್ರಮಣ ವನ್ನು ಸಹಿಸಲಾರದು. ತನ್ನ ಗಳಿಕೆ–ತನ್ನ ಗೆಲುವು–ಇನ್ನೊಬ್ಬನ ಮೇಲಾಟದ ಪಟ್ಟಿಗೆ ತುತ್ತಾದೀತೆಂಬ ಗಾಬರಿಯೇ ಈರ್ಷೆ–ಅಸೂಯೆಯ ಹಿಂದಿನ ಪ್ರವೃತ್ತಿ. ಗಂಡಿನ ಒಡೆತನದ ಭಾವನೆಯು ಪ್ರತಿಸ್ಪರ್ಧಿಯನ್ನು ಎಂದಿಗೂ ಸಹಿಸದು. ಗಂಡಿನ ಅಹಂಕಾರ ಅತಿರೇಕದ್ದೂ ಆಕ್ರಮಕವೂ ಇದ್ದುದರಿಂದ, ಅವನು ಹಲವು ಸಲ, ಹೆಣ್ಣಿನ ಮೇಲಿನ ಒಲವೆಲ್ಲ ಬತ್ತಿಹೋದರೂ ತನ್ನ ಒಡೆತನವನ್ನು ಬಿಟ್ಟುಕೊಡಲು ಒಪ್ಪುವದಿಲ್ಲ. ಅಂತೆಯೇ ಗಂಡು 'ಅನಾಘ್ರಾತ ಕುಸುಮ'ವನ್ನೇ ಬಯಸುತ್ತಾನೆ. ಹೆಣ್ಣಿಗೆ ಪ್ರಥಮ ಪ್ರಿಯತಮನಾಗಲು ಅಪೇಕ್ಷಿಸುತ್ತಾನೆ.

## ಹೆಣ್ಣು 'ಅನಸೂಯೆ'ಯೇ ?

ಆದರೆ ಹೆಣ್ಣಿಗೆ ಅಂಥ ಹಟವಿಲ್ಲ. ಮೊದಲು ಬೇರೆ ಹೆಣ್ಣಿಗೆ ಮನಸೋಲದ ಗಂಡೇ ತನ್ನವನಾಗಬೇಕೆಂದು ಹೆಣ್ಣು ತಳಮಳಿಸುವದಿಲ್ಲ. ತನ್ನ ಹಿಂದೆ ಇನ್ನಾವಳನ್ನೂ ಆತ ಮೆಚ್ಚಬಾರದೆಂದೇ ಆಕೆಯ ಹಂಬಲ. ತಾನೇ ತನ್ನವನ ಕೊನೆಯ ಪ್ರಿಯ ತಮೆ ಆಗುವದೇ ಆಕೆಗೆ ಗರ್ವದ ಹಾಗೂ ಗೌರವದ ಸಂಗತಿ ಎನಿಸುವದು. ಹೀಗೆ ಹೆಣ್ಣಿನ ಈರ್ಷೆಗೆ ಒಂದು ಬದಿಗೆ ಕಟ್ಟಿದೆ. ತನ್ನ ನಂತರ ಇಲ್ಲವೇ ತನ್ನೊಡ ನೆಯೇ ಪತಿಯಾಗಲಿ ಪ್ರಿಯತಮನಾಗಲಿ ಇನ್ನಾವಳನ್ನೂ ಪ್ರೀತಿಸಲಾಗದೆಂದು ಮಾತ್ರ ಆಕೆಯು ದಕ್ಷತೆ ವಹಿಸುತ್ತಾಳೆ. ಇಲ್ಲೂ ಆಕೆಯ ಈರ್ಷೆ ಆಕೆಯ ಪ್ರೀತಿಯಂತೆಯೇ ವ್ಯಾಪ್ತಿಯಲ್ಲಿ ವಿಶಾಲವಾಗಿರುತ್ತದೆ. ಅಂದರೆ, ಗಂಡಿನ ಈರ್ಷೆಯಷ್ಟು ಹೆಣ್ಣಿನ ಈರ್ಷೆ ಪ್ರಬಲವೂ, ಪ್ರಖರವೂ ಇರುವದಿಲ್ಲವಾದರೂ, ಅದು ಹೆಚ್ಚು ಗಂಭೀರವೂ, ದೂರಗಾಮಿಯೂ, ಚಿರಕಾಲ ತಾಳುವಂತಹದೂ ಇರುತ್ತದೆ. ಗಂಡು–ಈರ್ಷೆ ಶೀಘ್ರ ಪರಿಣಾಮಿ. ಹೆಣ್ಣು–ಈರ್ಷೆ ದೀರ್ಘ ಪರಿಣಾಮಿ. ತಾನೋರ್ವಳೇ ತನ್ನ ಗಂಡಿನ ಆಸಕ್ತಿ–ಆಕರ್ಷಣೆಗಳ ಕೇಂದ್ರವಾಗಿರಬೇಕೆಂಬ ಭರದಲ್ಲಿ ಹೆಣ್ಣು ತನ್ನ ವಲ್ಲಭನ ಇತರ ಪತ್ನಿ ಪ್ರಿಯತಮೆಯರನ್ನು ಮಾತ್ರವಲ್ಲ, ಆತನ ಗೆಳೆಯರನ್ನೂ ಚುಟ್ಟ. ಬಡಿಗೆ, ಪುಸ್ತಕ, ಪತ್ರಿಕೆ–ಮುಂತಾದ ಆತನ ಮನಸೆಳೆಯುವ ಎಲ್ಲ ನಿರೂಪದ್ರವಿ ವಸ್ತುಗಳನ್ನೂ ಕೂಡ ಸತತವಾಗಿ ದ್ವೇಷಿಸುವದುಂಟು. ಈ ದ್ವೇಷ ಅಸೂಯೆಯ ಭರದಲ್ಲಿ ಆಕೆಯು ತನ್ನ ವಲ್ಲಭನನ್ನು ಆತನ ಗೆಳೆಯರಿಂದ ಬಿಡಿಸಿ ಕೊಳ್ಳಲು ಹೆಣಗುವಳು. ಇದಕ್ಕಾಗಿ ಅವರಲ್ಲಿ ಜಗಳ ಹುಟ್ಟಿಸುವಳು. ಗೆಳೆಯರ

ಕುರಿತು ತನ್ನ ಗಂಡು ಕೆರಳಬೇಕೆಂತಲೇ ಕೆಲವು ಸ್ವೈರವೃತ್ತಿಯ ಹೆಣ್ಣುಗಳು ಆ ಬಡ ಗೆಳೆಯರೊಡನೆ ಸಲಿಗೆಯ ಚಿನ್ನಾಟ ಹೂಡಲೂ ಕಡಿಮೆ ಮಾಡುವದಿಲ್ಲ! ಇನ್ನು ಇಂಥ ಉದಾಹರಣೆಗಳು ಭಾರತೀಯ ಸಮಾಜದಲ್ಲಿ ತೀರ ಕಡಿಮೆ ನಿಜ. ಅವರೆ ನಾವು ಭಾವಿಸುವಷ್ಟು ಕಡಿಮೆಯೂ ಅಲ್ಲವೆಂಬುದೂ ಅಷ್ಟೇ ನಿಜ!

ದಿನನಿತ್ಯದ–ಅತಿಪರಿಚಯದ – ವಾಡಿಕೆಯಿಂದ ಗಂಡು ತನ್ನ ಹೆಣ್ಣಿನ ಕುರಿತು ಉದಾಸೀನನಾಗುವದುಂಟು. ಆಗ ಹೆಣ್ಣು ಆತನಲ್ಲಿ ಮಿತವಾಗಿ ಈರ್ಷೆಯನ್ನು ಹೊತ್ತಿಸಿ, ಅವನ ಆರಿದ ಪ್ರೀತಿಗೆ ಹೊಸ ಕುದಿ, ಹೊಸ ಕಾವು ತಂದು ಕೊಳ್ಳುವಳು. ತನ್ನ ಒಡೆತನಕ್ಕೆ ಭಂಗ ಬರುವ ಭಯವಿದ್ದರೇ ಗಂಡಿಗೆ ಹೆಣ್ಣಿನಲ್ಲಿಯ ಆಸಕ್ತಿ ಹೆಚ್ಚುವದು. ಸಿದ್ಧಿಗಿಂತಲೂ ಸಾಧನೆಯೂ ಗಂಡಿಗೆ ಹೆಚ್ಚು ಪ್ರಿಯವಾಗಿದ್ದರಿಂದ ತನ್ನ ಹೆಣ್ಣನ್ನು ಮತ್ತೆ ಮತ್ತೆ ಗೆಲ್ಲುವ ಸಂದರ್ಭವಿರುವ ತನಕವೇ ಗಂಡಿಗೆ ಆ ಹೆಣ್ಣು ಅಪೇಕ್ಷಣೀಯಳೂ ಪ್ರೇಕ್ಷಣೀಯಳೂ ಆಗುವಳು. ಅವಳ ಪ್ರೀತಿಗೆ ಸುರಕ್ಷಿತ ಪ್ರಾಪ್ತಿಯ ರೂಪ ಬಂದೊಡನೆ, ಅವಳು ಕ್ರಮೇಣ ಉಪೇಕ್ಷಣೀಯಳಾಗುವಳು. ಇದೆಲ್ಲ ರಹಸ್ಯ ಹೆಣ್ಣಿಗೆ ಕಲಿಯದೇ ಗೊತ್ತು. ಆದ್ದರಿಂದಲೇ ಆಕೆ ತನ್ನ ವಿಷಯ ಈರ್ಷೆಗೆ ಎಡೆ ಉಂಟುಮಾಡಿಯಾದರೂ ತನ್ನ ಗಂಡನ್ನು ತನಗಾಗಿ ಉಳಿಸಿಕೊಳ್ಳುವಳು. ಜವ್ವನದ ಜಡ್ಡಿಗೆ ಮದುವೆ ಮದ್ದಾದರೆ, ಮದುವೆಯ ಜಾಡ್ಯಕ್ಕೆ ಮತ್ಸರವೂ ಮದ್ದಾಗುವದು. ಈರ್ಷೆಯ ಈ ಮರ್ಮ ವನ್ನು ಅರಿತ ಹೆಣ್ಣು ತನ್ನ ವಲ್ಲಭನ ಸಾಯಲು ಬಿದ್ದ ಪ್ರೀತಿಯನ್ನು ಜೀವಿತ ಗೊಳಿಸಲು ಕೆಲವು ಮಟ್ಟಿಗೆ ಆತನ ಈರ್ಷೆ ಕೆರಳಿಸುವ ಚುಚ್ಚುಮದ್ದನ್ನು ಪ್ರಯೋಗಿಸುವಳು. ಹೆಣ್ಣಿನ ಈ ಮನೋಧರ್ಮವನ್ನು ಅರಿತ ಜಾಣ ಗಂಡು ಆಕೆಯ ಪ್ರಶಂಸಕರೊಡನೆ, ಆಕೆಯೊಡನೆ ಸಾತ್ವಿಕ ಸಲಿಗೆಯಿಂದ ನಡೆಯುವ ತನ್ನ ಮಿತ್ರರೊಡನೆ, ಅಲ್ಪದ ರಾದ್ಧಾಂತ ಬೆಳಿಸಿ ತನ್ನನ್ನೂ ಆಕೆಯನ್ನೂ ಅನ್ಯಾಯ ದುರಂತಕ್ಕೆ ಈಡು ಮಾಡುವದಿಲ್ಲ; ಮಾಡಬಾರದು.

## ಗಂಡು–ಕಣ್ಣು ಕಂಡ ಹೆಣ್ಣು–ಬೆಲೆ

ಜೀವನಕಲಹದಲ್ಲಿ ನಿಸರ್ಗದಿಂದಲೂ ಹೆಣ್ಣಿಗೆ ಪ್ರತಿಕೂಲ ಹೆಚ್ಚು. ಶಕ್ತಿಯ ಕೊರತೆ ಯನ್ನು ಆಕೆಯುಕ್ತಿಯಿಂದ–ಯುಕ್ತಾಯುಕ್ತ ಎಲ್ಲ ಉಪಾಯಗಳಿಂದ–ಪೂರೈಸಿ ಕೊಳ್ಳಲು ಯತ್ನಿಸುವದು ಸಹಜ. ಗಂಡಿನ ಶಾರೀರಕ ಶ್ರೇಷ್ಠತೆಯ ಹಾಗೂ ಬಲಿಷ್ಠತೆಯ ಇದಿರು ಹೆಣ್ಣು ಆತ್ಮರಕ್ಷಣೆಗಾಗಿ ತನ್ನ ಎಲ್ಲ ಚಾತುರ್ಯಗಳನ್ನು

ಪ್ರಯೋಗಿಸಬೇಕಾಗುತ್ತದೆ. ಹೆಣ್ಣಿಗೆ ತನ್ನ ರಕ್ಷಣೆ ಅವಶ್ಯ; ನಿಯಮಕ್ಕಾಗಿ ಅತ್ಯವಶ್ಯ. ವಂಶವೇ ಆಕೆಯ ಜೀವವನ್ನು ಹೊಂದಿಕೊಂಡಿದೆ. ಪ್ರೀತಿಯ ಅಲ್ಪ ಸುಖಕ್ಕಾಗಿ ಆಕೆಯು ಮಾಡುವ ತ್ಯಾಗವೆಷ್ಟು ? ಗಂಡಿನ ಪ್ರಣಯಭೋಗದ ಒಂದು ಅಂಶಕ್ಕಾಗಿ ಹೆಣ್ಣು ತನ್ನ ಕಣ್ಣೀರು, ನೆತ್ತರ ಮತ್ತು ಕರುಳಿನ ಬೆಲೆಯನ್ನು ತೆರುವಳು. ಆಕೆಯ ಈ ಬಲಿದಾನವನ್ನು ನೆನೆದುಕೊಂಡರೆ ಹೆಣ್ಣು ಕುಟಿಲಳೆಂದು ಹೀಯಾಳಿಸುವದೂ, ಹೆಣ್ಣಿನ ಯುಕ್ತಿವಂತಿಕೆಯನ್ನು ದೂರಿಕೊಳ್ಳುವದು, ಮಾತುಗಾರ್ತಿ-ತಪ್ಪುಗಾರ್ತಿಯೆಂದು ಹಳಿಯುವದೂ ನಮಗೆ ಸ್ವಲ್ಪವೂ ಒಪ್ಪುವದಿಲ್ಲ. ಅಬಲೆಯಾದ ಅವಳಲ್ಲಿಯೇ ನಿಸರ್ಗವು ಇಟ್ಟ ಪ್ರಚಂಡವಾದ ಕಾರ್ಯಭಾರವನ್ನು ನೆನೆದರೆ, ಹೆಣ್ಣಿನೊಡನೆ ಸಹನೆ ತೋರಿಸಿದಷ್ಟೂ ಕಡಿಮೆಯೇ. ಎಷ್ಟು ಸೌಮ್ಯವಾಗಿ ನಡೆದರೂ ಸಾಲದು. ಈ ದೃಷ್ಟಿಯಿಂದ, ಪ್ರಾಚೀನ ಪರಂಪರೆಯಲ್ಲಿ ಹೆಣ್ಣಿನ ಕುರಿತು ಕಂಡುಬರುವ ದಾಕ್ಷಿಣ್ಯಭಾವನೆಯಲ್ಲಿ ತುಂಬ ಅರ್ಥವಿದೆಯೆಂದೇ ಸ್ಪಷ್ಟವಾಗುತ್ತದೆ. ನಾರಿಪೂಜೆಯಾಗುವಲ್ಲಿ ದೇವತೆಗಳು ರಮಿಸುವವೆಂದು ಮನುಸ್ಮೃತಿ ಕೊಂಡಾಡುತ್ತದೆ. ಹೆಣ್ಣಿನ ಅಳಲಿನಿಂದ ವಂಶದ ಬಾಳ್ಕೆ ಸುಡುವದೆಂದು ಲಕ್ಷ್ಮೀಶನು ಎಚ್ಚರಿಸುತ್ತಾನೆ. ಸಂಸ್ಕೃತಭಾಷೆಯಲ್ಲಿ ಹೆಣ್ಣೆಂಬ ಅರ್ಥದ ಹೆಸರುಗಳೆಲ್ಲ ಒಂದೆಡೆಗೆ ಗಂಡಿನ ಭೋಗವೃತ್ತಿಯನ್ನು ಸೂಚಿಸುತ್ತಿದ್ದರೆ ಇನ್ನೊಂದೆಡೆಗೆ ಗಂಡಿಗೆ ಹೆಣ್ಣಿನ ವಿಷಯ ಆಳದಲ್ಲಿರುವ ಆದರವನ್ನು ಮೂಡಿಸುತ್ತವೆ.

ಹೆಣ್ಣು ತನ್ನೊಡನೆ ಬಾಳಿ ಬೆಳೆದರೂ ತನ್ನಿಂದ ತೀರ ಬೇರೆಯೆಂದು ಗಂಡು ಅರಿತು ಬೆರಗಾಗುತ್ತಾನೆ. ಹೆಣ್ಣಿನ ಹೃದಯದ ನೆಲೆಯು ನಿಲುಕುವದಿಲ್ಲವೆಂದೂ ಗಾಬರಿಯಾಗುತ್ತಾನೆ. ಇದಕ್ಕೆ ಕಾರಣ ಹೆಣ್ಣಿನ ಚಾತುರ್ಯ. ಗಂಡಿನ ಬಲವನ್ನು ಅರಿತು ಅವನ ವೃತ್ತಿಗೆ ಸರಿಯಾಗಿ, ವರ್ತನಕ್ಕೆ ಸರಿಯಾಗಿ ತನ್ನ ಧೋರಣವನ್ನು ಪಲ್ಲಟಿಸುವ ಹದ ಹೆಣ್ಣು ಲೀಲೆಯಿಂದ ಕಾಣಿಸುತ್ತಾಳೆ. ಎಷ್ಟೇ ಸರಳ ಹೆಣ್ಣು ಕೂಡ ಈ ವ್ಯವಹಾರದಲ್ಲಿ ಗಂಡಿಗೂ ಅಗಮ್ಯವಾಗಿ ನಡೆಯುವಳು. ಗಂಡಿನ ಮೇಲಿನ ತನ್ನ ಹಿಡಿತವನ್ನು ಗಟ್ಟಿಯಾಗಿ ಇಟ್ಟುಕೊಳ್ಳಲು ಹೆಣ್ಣು ಒಮ್ಮೆ ನಗು, ಒಮ್ಮೆ ಕಣ್ಣೀರು, ಒಮ್ಮೆ ಮುನಿಸು, ಒಮ್ಮೆ ಮೌನ, ಒಮ್ಮೆ ಬಿಂಕ, ಒಮ್ಮೆ ಸಲಿಗೆ-ಹೀಗೆ ಹಲವು ಹದಗಳಲ್ಲಿ ಗಂಡು ಹೃದಯದ ತಂತಿಗಳನ್ನು ಮೀಟಿ ಬಾಳಿನ ರಾಗ ಕೀಸರಗುಡದಂತೆ ನೋಡಿಕೊಳ್ಳುತ್ತಾಳೆ. ಇಂಥ ಪ್ರಸಂಗದಲ್ಲಿ ಸಾಕ್ರೆಟೀಸನ ಸಮಸ್ತ ತತ್ವಪಾಂಡಿತ್ಯವೂ ಝಾಂತೀಪಿಯ ಮುಂದೆ ಮುಕ್ಕಾಗುವದು.

ಅದರೂ ಇದೆಲ್ಲ ವಿಲಾಸ-ವಿಭ್ರಮ-ಮೋಹ-ಮೋಸಗಳ ಚಾತುರ್ಯ ಹೆಣ್ಣಿಗೆ ಅಗತ್ಯ. ಅವಳು ವಹಿಸುವ ಬಾಳಿನ ಹೊಣೆಯ ಹೊರೆಯೆದುರು ಇದೆಲ್ಲ ಕ್ಷಮ್ಯ.

ಹೂವಿನ ಜೇನೆಲ್ಲ ತುಂಬಿಗೂ ಪರಿಮಳವೆಲ್ಲ ರಸಿಕರಿಗೂ ಎಂದಿಗೂ ಸಿಗುವಂತಿದೆ. ಆದರೆ ಹೂವಿನ ಬಾಳು ಕಾಯಿಗಾಗಿ–ಹಣ್ಣಿಗಾಗಿ. ಆ ಕೆಲಸಕ್ಕೆ ಅದು ತನ್ನನ್ನು ಕೊಂಡುಕೊಳ್ಳುತ್ತದೆ. ಬಾಳಿನ ಬಳ್ಳಿಗೂ ಹೆಣ್ಣೊಂದು ಹೂವು. ಹೂವಿನ ಮುದ್ದು ಮಾಟದೊಡನೆಯೇ ಅದರ ಮುಳ್ಳುಗೊನೆಗಳನ್ನೂ ಮುಟ್ಟಿದರೆ ಮುರಿಯುವ, ಮೂಸಿದರೆ ಮಾಸುವ ಅದರ ದುರ್ಬಲತೆಯನ್ನೂ ನಾವು ಒಪ್ಪಿಕೊಳ್ಳಲೇಬೇಕು. ಆದ್ದರಿಂದ ಹೆಣ್ಣಿನ ಚಂಚಲತೆ, ಚಪಲತೆ, ತೋರಿಕೆಯ ವಂಚನೆ–ಇವೆಲ್ಲವುಗಳನ್ನೂ ಗಂಡು ಸಹಿಸಬೇಕು; ಕ್ಷಮಿಸಬೇಕು.



ಕಳೆದ ಪ್ರಕರಣಗಳಲ್ಲಿ ನಾವು ವಿಮರ್ಶಿಸಿದ್ದೇನು ? ವಂಶವಿಧಾಯಕ ಪ್ರವೃತ್ತಿಗಳ ದೃಷ್ಟಿಯಿಂದ ಹೆಣ್ಣು–ಗಂಡುಗಳಲ್ಲಿ ಕಂಡುಬರುವ ಪ್ರಕೃತಿ ಭೇದಗಳು, ಲಜ್ಜೆ, ಚಾತುರ್ಯ, ಪ್ರೀತಿಯ ಕಲೆ, ಮೈತ್ರಿ, ಈರ್ಷೆ ಮತ್ತು ವ್ಯಕ್ತಿತ್ವ ಇವನ್ನೇ ಸಾಮಾನ್ಯವಾಗಿ ನಾವು ಚರ್ಚಿಸಿದೆವು. ಇನ್ನು ವ್ಯಕ್ತಿಗೆ ಸಂಬಂಧಪಟ್ಟ ಪ್ರವೃತ್ತಿಗಳ ದೃಷ್ಟಿಯಿಂದ ಕಂಡುಬರುವ ಭೇದಲಕ್ಷಣಗಳನ್ನೂ ಸ್ವಭಾವವಿಶೇಷಗಳನ್ನೂ ಅರಿತುಕೊಳ್ಳೋಣ.

## ಗಂಡು ಹೆಣ್ಣಿಗಾಗಿ; ಹೆಣ್ಣು ಕೂಸಿಗಾಗಿ.

ಜೀವನದಲ್ಲಿ ಹೆಣ್ಣಿನ ಕಾರ್ಯವೇನು ? ವಂಶವನ್ನು ಕಾಪಾಡಿಕೊಂಡು ಹೋಗುವದು. ಗಂಡಿನ ಕರ್ತವ್ಯವೇನು ? ಹೆಣ್ಣನ್ನೂ ಆಕೆಯಲ್ಲಿ ಮುಂದರಿಯುವ ವಂಶವನ್ನೂ ಕಾಪಾಡಿಕೊಂಡು ಹೋಗುವದು. ಅಂದರೆ ಪ್ರಕೃತಿಯ ನಿಯಮದಂತೆ ಗಂಡು ಹೆಣ್ಣಿನ ಸೇವೆಗೆ, ಹೆಣ್ಣು ವಂಶದ ಸಂತತಿಯ ಸೇವೆಗೆ ಹೂಡಲ್ಪಟ್ಟವರು. ಈ ಸೇವೆಗೂ ಮಿಕ್ಕಿದ ಹಲವು ಕಾರ್ಯಗಳು ಹೆಣ್ಣಿಗೂ, ಗಂಡಿಗೂ ಇದ್ದೇ ಇವೆ. ಆದರೆ ಅವೆಲ್ಲ ಈ ನಿಯತಿಗೆ ವಿಧೇಯವಾಗಿ, ವಿರೋಧವಿಲ್ಲದೇ ನಡೆಯತಕ್ಕವು. ಗಂಡು ಹೆಣ್ಣಿಗಾಗಿಯೂ ಹೆಣ್ಣು ಕೂಸಿಗಾಗಿಯೂ ಬಾಳಲು ಪ್ರೇರಿಸುವ ಪ್ರವೃತ್ತಿಗಳ ವ್ಯಾಪಾರದಲ್ಲಿಯೇ ಹೆಣ್ಣಿನ ಮತ್ತು ಗಂಡಿನ ಆಳವಾದ ಸುಖವಿದೆ. ಈ ಪ್ರವೃತ್ತಿಗಳ ವ್ಯಾಪಾರವು ಬುದ್ಧಿಪೂರ್ವಕ ನಡೆಯುವದಿಲ್ಲ. ಅಸ್ಪಷ್ಟವಾಗಿ ಅರ್ಧಮರ್ಧ ಅರಿವಿನಲ್ಲಿ–ನಮ್ಮ ಉಸಿರಾಟದಂತೆಯೇ–ಈ ಮೂಲ ಪ್ರವೃತ್ತಿಗಳು ನಮ್ಮಿಂದ ಚಟುವಟಿಕೆಗಳನ್ನು ಜರುಗಿಸುವವು; ಮತ್ತು ಈ ಪ್ರವೃತ್ತಿಗಳ ಉದ್ದೇಶ

ಪೂರ್ತಿಯಲ್ಲಿಯೇ ನಮ್ಮ ಬಾಳಿನ ಸ್ವಾಭಾವಿಕ ಸಾರ್ಥಕತೆಯೂ, ಸುಖವೂ ನೆಲಸಿರುವವು.

ಇದರ ಪರಿಣಾಮವಾಗಿ ಗಂಡಿನ ಗುಣಕರ್ಮಗಳು ಗೊತ್ತುಪಟ್ಟಿವೆ. ಗಂಡಿನ ಸ್ವಾಭಾವಿಕ ಉದ್ಯೋಗಗಳೆಲ್ಲ ಸಂರಕ್ಷಣೆ, ಸಂಪಾದನೆ ಮತ್ತು ಸಾಹಸದ ಸಾಧನೆಗೇ ಸಂಬಂಧಪಟ್ಟವು. ಗಂಡಿಗೆ ಮುಖ್ಯವಾಗಿ-ಹೊಟ್ಟೆ ಬಟ್ಟೆಯ ಚಿಂತೆ. ಅವನು ಬಾಳಿನ ಆಹಾರಮಂತ್ರಿಯು. ಅನ್ನದೇವನ ಉಪಾಸಕನು. ಇನ್ನು ಪ್ರತಿಯೊಂದು ಕಡೆಯಲ್ಲಿಯೂ ಗಂಡು ಅನ್ನಕ್ಕಾಗಿ ನೇರವಾಗಿ ಹೆಣಗುವದು ಕಂಡುಬರುವದಿಲ್ಲ ನಿಜ. ಆದರೆ ಎಲ್ಲ ಕಡೆಯಲ್ಲಿಯೂ ಅವನು ಅನ್ನ ಒದಗಿಸಬಹುದಾದ ಕೆಲಸ ಗಳಲ್ಲಿಯೇ ತೊಡಗಿದ್ದು ಕಂಡುಬರುತ್ತದೆ. ಅನ್ನದ ಬದಲು ಇತರ ವಸ್ತು ಗಳಿಗಾಗಿಯೂ ಅವನು ದುಡಿಯುವದು ಏಕೆಂದರೆ, ಆ ವಸ್ತುಗಳು ಧನವನ್ನು ಸಂಪಾದಿಸುತ್ತವೆ. ಮತ್ತು ಇಂದಿನ ಪ್ರಪಂಚದಲ್ಲಿ ಧನವೇ ಅನ್ನದ ಬದಲು ಮೂಲವಾಗಿದೆ. ಪ್ರಾಚೀನ ಕಾಲದಲ್ಲಿ ಧರ್ಮವು ಅನ್ನದ ಮೂಲವಾಗಿತ್ತು. ಆಗ ಗಂಡಸು ಧರ್ಮದ ವೃತ್ತಿಗಳನ್ನು ಕೈಗೊಳ್ಳುತ್ತಿದ್ದನು.

'ಮೃಚ್ಛಕಟಿಕ' ನಾಟಕದಲ್ಲಿ ಮೈತ್ರೇಯನು ತನ್ನ ವಿನೋದಬುದ್ಧಿಯ ಮರ್ಮ ವನ್ನು ಚಾರುದತ್ತನಿಗೆ ಹೇಳುತ್ತಾನೆ: 'ಎರಡು ಸಂಗತಿಗಳು ನನ್ನನ್ನು ನಗಿಸುತ್ತವೆ. ಗಂಡಿನ ಹಾಡುಗಾರಿಕೆ, ಹೆಣ್ಣಿನ ಸಂಸ್ಕೃತ ವಿದ್ಯಾಭ್ಯಾಸ !' ಇದರ ಮರ್ಮವೇನು ? ಭಾಷೆಯ ಅಭ್ಯಾಸ ಗಂಡಿಗೇ ಮೀಸಲು. ಭಾಷೆ ವ್ಯವಹಾರಕ್ಕಾಗಿ-ಉದ್ಯೋಗದ ಸಾಧನ. ಹಾಡು ವಿಲಾಸಕ್ಕಾಗಿ-ಬರೇ ರಂಜನೆಯ ರೀತಿ. ಅದು ಹೆಣ್ಣಿನ ಪ್ರಪಂಚ ಎಂಬುದೇ ಮೈತ್ರೇಯನ ಮಾತಿನ ಇಂಗಿತ. ತಾತ್ಪರ್ಯವೇನೆಂದರೆ, ಗಂಡಿನ ಉದ್ಯೋಗವೆಲ್ಲ ಆಹಾರ ದೊರಕಿಸುವ ಗುರಿಯನ್ನಿಟ್ಟುಕೊಂಡವು. ಇಷ್ಟೇ ಅಲ್ಲ, ಗಂಡು ಸ್ವತಃ 'ಅನ್ನಗತಪ್ರಾಣನು'. ಅಂದರೆ, ಗಂಡಿಗೆ ಅನ್ನವೆಂದರೆ ಮನವಾರೆ ಮೆಚ್ಚಿಗೆ. ಗಂಡು ಹಸಿವೆ ತಾಳಲಾರ. ಅನ್ನದಿದುರು ಹೆಣ್ಣನ್ನೂ ಮರೆಯಬಲ್ಲ. ರಸ ಪೋಷಕ ಸಾಹಿತ್ಯದಲ್ಲಿ ಅವನಿಗೆ ನವರಸಕ್ಕಿಂತ ಷಡ್ರಸಗಳೇ ಹೆಚ್ಚು ಪ್ರಿಯ. ತಿಂಡಿ-ತಿನಸುಗಳ ಮೋಹದಿಂದ ಗಂಡನ್ನು ವಶಪಡಿಸಿಕೊಳ್ಳಲು ಬರುತ್ತದೆ. ಗಂಡಿಗಿರುವಷ್ಟು ಅನ್ನದ ಮೋಹ ಹೆಣ್ಣಿಗಿರುವದಿಲ್ಲ. ಆಕೆಗೆ ಉಣ್ಣುವದಕ್ಕಿಂತ ಅಡಿಗೆ-ಬಡಿಸುವದರಲ್ಲಿ ಹೆಚ್ಚು ಆನಂದ. ಕ್ರೈಸ್ತ ಪುರಾಣದಂತೆ ಮಾನವನ ಪತನ ವೆಂದಾಯಿತು ಗೊತ್ತೇ ? ದೇವರು ಕಟ್ಟುಪಡಿಸಿದ್ದ ಸೇಬಿನಹಣ್ಣನ್ನು ಕಡಿದು ಈವ್ಹಳು ಆದಮನಿಗೆ ಮೊದಲು ತಿನ್ನಲು ಕೊಟ್ಟಳು. ಅಂದಿನಿಂದ ಗಂಡಿನ ಹೊಟ್ಟೆಬಾಕತನವೇ ಆತನ ನಾಶಕ್ಕೆ ಮೂಲವಾಗಿದೆ. ಹೆಣ್ಣು ಅಂದಿನಿಂದಲೂ

ಗಂಡಿನ ಹೊಟ್ಟೆಯನ್ನೇ ಹಿಡಿತವಲ್ಲಿಟ್ಟುಕೊಂಡು ಆತನ ಪಚನ ಶಕ್ತಿಯನ್ನೂ ನೀತಿಯನ್ನೂ ಒಟ್ಟಾಗಿಯೇ ಕೆಡಿಸುತ್ತ ಬಂದಿದ್ದಾಳೆ. ಸಾವಿರಾರು ಗಂಡಂದಿರು, ಒಳ್ಳೇ ಅಡಿಗೆ ಮಾಡುವ ಒಂದೇ ಸದ್ಗುಣಕ್ಕಾಗಿ ತಮ್ಮ ಹೆಂಡಂದಿರಿಗೆ ಮಾರಿ ಹೋಗಿರುತ್ತಾರೆ. ಅವರ ಹೆಣ್ಣಿನ ಆದರ್ಶವೂ ಅಡಿಗೆಯ ಆದರ್ಶವೂ ಹೆಚ್ಚು-ಕಡಿಮೆ ಒಂದೇ.

## ನಾರಿ ಮುನಿದರೆ ಮಾರಿಯೇ ?

ಅನ್ನಕ್ಕಾಗಿ ಹೊರಬಿದ್ದು ದುಡುಕಾಡುವ ಗಂಡು ಹೋರಾಡಬೇಕಾಗುತ್ತದೆ. ಸಂಪಾದನೆಯು ಸಾಹಸದ ಸಾಧನೆಯಾಗುತ್ತದೆ. ಹೀಗೆ ಗಂಡು ಎಂದಿನಿಂದಲೂ ಹೋರಾಟದ ಮೋರಿ. ಹೆಣ್ಣು ಹಾಗಲ್ಲ. ಹೆಣ್ಣಿಗೆ ಸ್ವಾಭಾವಿಕವಾಗಿಯೂ ಆಶ್ರಯ ಬೇಕು, ಹೋರಾಟವಲ್ಲ. ಅದರೆ ಹೆಣ್ಣು ಹೋರಾಡುವದಿಲ್ಲವೆಂದಲ್ಲ. ತನಗಾಗಿ ಹೋರಾಡುವದಿಲ್ಲ. ಪ್ರತ್ಯಕ್ಷ ಹೋರಾಟಕ್ಕೆ ನಿಲ್ಲಬೇಕಾದರೆ ಅದು ಆಕೆಯ ಮಕ್ಕಳ ಬಗ್ಗೆ. ಹೆಣ್ಣಿನಲ್ಲಿ ಕ್ರೂರತೆಯು ತುಡುಗಿದ್ದರೆ ಅದು ಹೀಗೆ ವಂಶರಕ್ಷಣೆಯ ಆಯಕಟ್ಟಿನಲ್ಲಿ ಪ್ರಕಟವಾಗುತ್ತದೆ; ಪ್ರಯೋಜಕವಾಗುತ್ತದೆ. ಆದರೆ ಸಾಮಾನ್ಯವಾಗಿ ಪ್ರತ್ಯಕ್ಷವಾಗಿ ಹೆಣ್ಣು ಹೆಚ್ಚಾಗಿ ಹಿಂಸೆಯ ಬಲವನ್ನು ಕಾಣಿಸುವದಿಲ್ಲ. ಹತ್ಯೆ-ಹಿಂಸೆಗಳಿಗೆ ಎಡೆಗೊಟ್ಟ ಹೆಣ್ಣುಗಳ ಅಪರಾಧಗಳೆಲ್ಲ ಅವರ ದೇಹದ ಅಥವಾ ಮನಸ್ಸಿನ ಸ್ವಾಸ್ಥ್ಯ ಕೆಟ್ಟಾಗಲೇ ಹೆಚ್ಚಾಗಿ ಜರುಗಿದ್ದು ಕಂಡುಬರುತ್ತದೆ. ಹೆಣ್ಣು ಹಿಂಸೆಗೆ ಪ್ರೇರಣೆಯಾಗಬಹುದು. ಹೆಣ್ಣಿಗಾಗಿ ಕೊಲೆ-ಸುಲಿಗೆ, ಕೊಳ್ಳೆ, ಕಾಳಗಗಳು ನಡೆಯಬಹುದು. ಸೀತೆಗಾಗಿ ಲಂಕೆ ಸುಟ್ಟಿತು. ದ್ರೌಪದಿಗಾಗಿ ಮಹಾಭಾರತ ಯುದ್ಧವಾಯಿತು. ಮದನಿಕೆಗಾಗಿ ಶರ್ವಿಲಕನು ತುಡುಗು ಮಾಡಿದನು. ಹಿಡಂಬೆಗಾಗಿ ಭೀಮನು ಎಷ್ಟು ಕೊಲೆಮಾಡಿದನೋ ! ಹೆಲನ್ನಳಿಗಾಗಿ ಟ್ರೊಯದ ನಾಶವಾಯಿತು. ಎಲ್ಲ ಕಾಲ ಎಲ್ಲ ದೇಶಗಳಲ್ಲಿಯ ಹೆಣ್ಣು ಹಲವು ಪಾತಕಗಳಿಗೂ ಘಾಶಕಗಳಿಗೂ ಸ್ಫೂರ್ತಿಯಾಗಿದ್ದಾಳೆ. ಇವೆಲ್ಲ ನಿಜ. ಆದರೂ ಹೆಣ್ಣು ತಾನಾಗಿ ತನ್ನ ಕೈಯಿಂದ ಹಿಂಸೆ-ಹತ್ಯೆಗಳನ್ನು ಎಸಗಿದ್ದು ಅಷ್ಟೊಂದು ಕಂಡುಬರುವದಿಲ್ಲ. ಗಂಡಿನಿಂದ ಮಾಡಿಸಿದ್ದುಂಟು; ಗಂಡು ತಾನಾಗಿ ಹೆಣ್ಣಿಗಾಗಿ ಮಾಡಿದ್ದುಂಟು. ಆದರೆ ಹೆಣ್ಣೇ ಹಿಂಸೆಮಾಡಿದ ಉದಾಹರಣೆಗಳು ಅಷ್ಟು ವಿಪುಲವಿಲ್ಲ. ಅನಾದಿ ಕಾಲದಿಂದಲೂ ಹೋರಾಡಿ ಬಂದ ಗಂಡೇ ಸಹಜವಾಗಿ ಹಿಂಸೆಮಾಡುತ್ತಾನೆ.

ಹಾಗೆಂದೇ ಹೆಣ್ಣು ಗಂಡಿಗಿಂತ ಹೆಚ್ಚು ಸಹನಶೀಲಳು. ಗಂಡಿಗೆ ಸಾಹಸ ಹೆಚ್ಚು;

ಸಹನೆ ಕಡಿಮೆ. ಹೆಣ್ಣಿಗೆ ಸಹನೆ ಹೆಚ್ಚು. ಬದುಕಿನ ಬಿಕ್ಕಟ್ಟುಗಳಲ್ಲಿ ಸೋಲು-ಗೆಲವುಗಳ ನಿಕರ ಪ್ರಸಂಗಗಳಲ್ಲಿ ಗಂಡು ಅಸಾಮಾನ್ಯ ಧೈರ್ಯವನ್ನೂ ಸಾಹಸವನ್ನೂ ಕಾಣಿಸುವನು. ನೋವು ಸಾವುಗಳನ್ನು ಎದುರಿಸುವನು. ಆದರೆ ಸತತವಾದ ಸಹನೆ ಗಂಡಿಗೆ ಅಶಕ್ಯ. ದಿನನಿತ್ಯದ ಕಷ್ಟ-ನಷ್ಟಗಳನ್ನು ತಾಳಿ ದೇಹವನ್ನೂ ಮನಸ್ಸನ್ನೂ ಸವೆಸುವದು-ಅದೂ ಶಾಂತಚಿತ್ತದಿಂದ ಸವೆಸುವದು-ಗಂಡಿಗೆ ಎಂದೂ ಶಕ್ಯವಿಲ್ಲ. ಸಂಸಾರದ ಚಿಕ್ಕಪುಟ್ಟ ಜೀವಕೊರೆಯುವ ಅಡಚಣೆಗಳನ್ನು ಹೆಣ್ಣು ಸುಮ್ಮನೆ ಇದಿರಿಸುತ್ತಾಳೆ. ಕಾಯಿಲೆಗಳನ್ನು ಸದ್ದಿಲ್ಲದೇ ಮೈಯುಂಡುಕೊಳ್ಳುತ್ತಾಳೆ. ಆಕೆಯ ಈ ಕಷ್ಟಸಹನೆಯ ಚಟವನ್ನು ನೋಡಿದರೆ ಇಂಥ ಮೂಕ ಯಾತನೆಗಳಲ್ಲಿಯೇ ಹೆಣ್ಣು ಒಂದು ಗುಪ್ತ ಸುಖವನ್ನು ಪಡೆಯುವಳೋ, ಅನಿಸುವದು! ಗಂಡಿಗೆ ಇದು ಶಕ್ಯವಿಲ್ಲ. ಜಾತಿಯಿಂದಲೇ ಆತನು ಜಂಗಮನು. ಹೊಟ್ಟೆಯ ಹೋರೆಗಾಗಿ ಅಲೆದಾಡುವಂಥವನು. ಒಂದೆಡೆಯಲ್ಲಿ ಕಟ್ಟಿ ಕೂಡ್ರುವದಾಗಲೀ, ಬಿದ್ದಿರುವದಾಗಲೀ, ಆತನಿಂದ ಆಗದು. ನೆಲೆಯೂರಿದ ಬಾಳಿನ ವಾಡಿಕೆ ಇಲ್ಲದ್ದರಿಂದ ಗಂಡು ಬೇನೆಬಿದ್ದಾಗ ಬಹಳೇ ಅಸ್ವಸ್ಥನಾಗುವನು. ತನ್ನ ನೋವು-ನರಳಿಕೆಗಳನ್ನು ಜಗತ್ತಿಗೇ ಸಾರುವನು.

ಆದರೆ ಹೆಣ್ಣಿನಲ್ಲಿ ಇನ್ನೊಂದು ವಿಶೇಷ. ತಾನು ಹೊರಾಡದಿದ್ದರೂ, ಹೋರಾಡುವ ಗಂಡಿನ ವಿಷಯ ಆಕೆಗೆ ಅಚ್ಚುಮೆಚ್ಚು. ಪ್ರೇಮವು ಬಲದ ಪಾಲಲ್ಲ; ಆದರೂ ಹೆಣ್ಣು ಬಲಿಯ ವಶಳು. 'ಗುಣಗಳೇ ಅನುರಾಗದ ಕಾರಣ. ಅಲ್ಲದೇ (ಮತ್ತೆ) ಬಲಾತ್ಕಾರವಲ್ಲ' ಎಂದು ವಸಂತಸೇನೆ ಶಕಾರನನ್ನು ಪ್ರತಿಭಟಿಸಿ ಆಡುತ್ತಾಳೆ. ಆದರೆ ಅನುರಾಗಕ್ಕೆ ಕಾರಣವಾದ ಈ ಗುಣಗಳಲ್ಲಿ ಬಲಾತ್ಕಾರ ಮಾಡಬಲ್ಲ ಸಾಮರ್ಥ್ಯವು ಒಂದು ಅವಶ್ಯ ಅಂಶ. ಹೆಣ್ಣಿಗೆ ಸೌಂದರ್ಯವೇ ಸಾಮರ್ಥ್ಯ-ಗಂಡಿನ ದೃಷ್ಟಿಯಿಂದ. ತದ್ವಿರುದ್ಧ ಹೆಣ್ಣಿನ ಕಣ್ಣಿಗೆ-ಗಂಡಿಗೆ ಸಾಮರ್ಥ್ಯವೇ ಸೌಂದರ್ಯ. ಅದು ಗಂಡುಗಾಡಿ. ಅಂದರೆ ಪ್ರತಿಯೊರ್ವ ಕಾಡು ಕಿಡಿಗೇಡಿಗೂ ಹೆಣ್ಣು ಒಲಿಯುತ್ತಾಳೆಂದಲ್ಲ. ಬೆನ್ನಿಗೆ ಎಲುವಿಲ್ಲದ ನುಣ್ಣನ್ನ ಮಣ್ಣಿನ ಗೊಂಬೆಯಂಥ ಗಂಡಿಗೆ ಹೆಣ್ಣು ಒಲಿಯಲಾರಳು. ತನ್ನೊಂದಿಗೆ ಹೋರಾಡುವ ಗಂಡು ಹೆಣ್ಣಿಗೆ ಗಂಡಾಂತರವೆನಿಸುವನು; ಆದರೂ ತನಗೋಸ್ಕರ ಹೋರಾಡುವ ಗಂಡು ಆಕೆಗೆ ಎಂದಿಗೂ ಪ್ರಿಯನು. ಸಮರ್ಥನೂ ಅಧಿಕಾರ ನಡಿಸಬಲ್ಲವನೂ ಧೀರನೂ ಆದ ಗಂಡೇ ಹೆಣ್ಣಿಗೆ ಸೇರುವನು. ಇದಕ್ಕೆ ಕಾರಣ ಹೆಣ್ಣಿನ ದುರ್ಬಲತೆಯಿರಬಹುದು. ತನ್ನಲ್ಲಿ ಇರದ ಗುಣಕ್ಕಾಗಿ ಜನ ಎಂದಿಗೂ ಹಾತೊರೆಯುವದು ಸಹಜ. ಅಥವಾ ಹೆಣ್ಣಿನಲ್ಲಿ ಹಿಂದೆ ಹೇಳಿದಂತೆ ಒಂದು ವಿಚಿತ್ರ ಪೀಡಾಭೋಗಿಯಾದ ಮನೋಭಾವವಿರಲೂ ಸಾಕು. ಅದರಿಂದಲೇ ಶಕ್ತಿ-ಸಾಮರ್ಥ್ಯಗಳ ದರ್ಶನದಿಂದ

ಹೆಣ್ಣು ಪುಲಕಿತಳಾಗುವಳು. ತಾನೇ ಅಂಥ ಶಕ್ತಿ ಪ್ರದರ್ಶನಕ್ಕೆ ಬಲಿಯಾಗ ದಿದ್ದರೂ ಹೆಣ್ಣು ಅದರಿಂದ ಹಿಗ್ಗುವದೂ ಉಂಟು.

೬

ತಾನು ಗಂಡಿನಂತೆ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯತಕ್ಕದ್ದೆಂಬ ಭಾವ ಇತ್ತೀಚಿಗೆ ಹೆಣ್ಣಿನಲ್ಲಿ ಬೆಳೆದು ಬಂದಿದೆ. ಗಂಡಿನ ದಾಸ್ಯಕ್ಕೆ ಶತಮಾನಗಳಿಂದಲೂ ಸೋತು-ಬೇಸತ್ತ ಜೀವದ ಪ್ರತಿಭಟನೆಯು ಹೆಣ್ಣಿಗೆ ತಾನೂ ಹಣದ ಹವ್ಯಾಸಕ್ಕೆ ಬೀಳಬೇಕೆಂದು ಒತ್ತಾಯಪಡಿಸಿತು. ಆದರೆ ಗಂಡಿನ ಶೌರ್ಯ-ವೀರ್ಯಗಳಿಗೂ ಅಧಿಕಾರ-ಸಾಮರ್ಥ್ಯಕ್ಕೂ ಮೆಚ್ಚಿ ನಲಿಯುವ ಹೆಣ್ಣಿನ ಅತಿ ಪುರಾತನ ವೃತ್ತಿಯು ಇನ್ನೂ ಅಳಿದಿಲ್ಲ-ಅಳಿಯುವಂತೆಯೂ ತೋರುವದಿಲ್ಲ. ಹಣಗಳಿಸಿ ಗಂಡಿಗೂ ಗಂಡಾಗಿ ಬಾಳುವ ಸುಶಿಕ್ಷಿತ ಸುಸಂಸ್ಕೃತ ಆಧುನಿಕ ನಾಗರಿಕ ಹೆಣ್ಣು ಕೂಡ ಗಂಡಿನ ಪ್ರಭಾವಿಯಾದ ವ್ಯಕ್ತಿತ್ವಕ್ಕೆ ತಪ್ಪದೇ ಈಳಾಗುವದೂ, ಪೌರುಷದ ದಾಸ್ಯಕ್ಕೆ ಈಡಾಗುವದೂ ಕಂಡುಬರುತ್ತದೆ. ಇದರ ಅರ್ಥ ಹೆಣ್ಣು ಕಲಿತು ಗಳಿಸಿ ಸ್ವಾತಂತ್ರ್ಯಪಡೆಯಬಾರದೆಂಬುದು ಅಲ್ಲವೇ ಅಲ್ಲ. ಆತ್ಮವಿಕಾಸಕ್ಕೆ ಸಂಧಿಯ ಸಮಾನತೆ, ಕೌಟುಂಬಿಕ ಸಾಮಾಜಿಕ ಸ್ಥಾನಮಾನಗಳಲ್ಲಿ ಗಂಡಿನೊಡನೆ ಸರಿಸಾಟಿತನ ಹೆಣ್ಣಿಗೆ ಸಲ್ಲಲೇ ಬೇಕು. ಆದರೆ ಆಮೇಲೂ ಹೆಣ್ಣು ಸಮರ್ಥ ಹಾಗೂ ಅಧಿಕಾರ ಯುಕ್ತ ಗಂಡಿಗೆ ಒಲಿಯುವಳೆಂಬದಕ್ಕೂ ಸಂದೇಹವಿಲ್ಲ. ಕಲಿತು ಬುದ್ಧಿಬಲಿತ ಹೆಣ್ಣು ಧೀರನೆಂಬ ಮಾತ್ರಕ್ಕೆ ಮೂರ್ಖನನ್ನು ಮದುವೆಯಾದದ್ದು ಉಂಟು. ತನ್ನನ್ನು ಆಳಬಲ್ಲ-ಅನ್ಯಾಯದಿಂದಲ್ಲ-ಗಂಡಿಗೆ ಹೆಣ್ಣು ಆನಂದದಿಂದ ವಶಳಾಗುವಳು.

## ಹೊಸ ಕಾಲದ ಹೆಣ್ಣನ್ನು ಗಂಡು ಆಳಲಾರನೇಕೆ ?

ಇಂದಿನ ಪ್ರಪಂಚದಲ್ಲಿ ಗಂಡಿಗೆ ಹೀಗೆ ವಶವರ್ತಿಯಾಗಿ ಆಳಿಕೊಂಡು ಬಾಳಿಕೊಂಡು ನಡೆಯುವ ಹೆಣ್ಣು ಬಹಳ ತೋರಿಬರುವದಿಲ್ಲ. ಹಿಂದಿನಗಿಂತ ಇಂದು ಹೆಣ್ಣು ಕಡಿಮೆ ವಿಧೇಯತೆಯನ್ನು ಕಾಣಿಸುವಳು. ಇದೆಲ್ಲ ನಿಜ. ಇದಕ್ಕೆ ಅಷ್ಟೇ ನಿಜವಾದ ಕಾರಣ ಒಂದಿದೆ. ಅದೇನೆಂದರೆ, ಗಂಡೂ ಹಿಂದಿನಂತೆ ಇಂದು ಇಲ್ಲ. ಸೀತೆಯ ಆದರ್ಶವನ್ನು ಹೆಂಡತಿಯಲ್ಲಿ ಅಪೇಕ್ಷಿಸುವ ಗಂಡನಾಗುವ ಜಾಣನು ತಾನು ರಾಮನ ಆದರ್ಶಕ್ಕೆ ಹೆಣಗಿದ್ದು ಕಾಣಿಸುವದಿಲ್ಲ. ಎದೆಯ ಕೆಚ್ಚು, ವ್ಯಕ್ತಿತ್ವದ ಬಲ ಗಂಡಿನಲ್ಲಿ ಸಾಮಾನ್ಯವಾಗಿ ಕಡಿಮೆ ಆಗಿದೆ !

ಹೀಗೆ ಗಂಡಿನ ಎದೆಯು ಕೆಚ್ಚು ಕುಗ್ಗಲಿಕ್ಕೂ ವ್ಯಕ್ತಿತ್ವದ ಅಚ್ಚು ಸಡಿಲಿಸಲಿಕ್ಕೂ ಕಾರಣವೇನು ? ಇಂದಿನ ಗಂಡಿಗೆ ಅಂಥ ಮನೋದೌರ್ಬಲ್ಯವೇಕೆ ? ಇದು ಗಂಡಿನ ವ್ಯಕ್ತಿಗತ ದೋಷವಲ್ಲ. ಇಂದಿನ ನಾಗರಿಕತೆಯೇ ಅಂತಹದಾಗಿದೆ. ಪುರಾತನ ಕಾಲದ ಜೀವನ ವಿಶೇಷವಾಗಿ ಕೃಷಿಯದಾಗಿತ್ತು; ಶಾರೀರಿಕ ಶ್ರಮದಾಗಿತ್ತು: ಜನಸಾಮಾನ್ಯರಿಗೆ ಮಿದುಳು-ಬುದ್ಧಿಗಿಂತ ಮೈಕೈಗಳ ಬಲದ ಕೆಲಸವೇ ವಿಶೇಷ ಬೀಳುತ್ತಿತ್ತು. ಇದರಿಂದ ಪ್ರತಿವ್ಯಕ್ತಿಗೂ ಒಂದು ಬೆಲೆಯಿತ್ತು. ಅವನ ಬಲಕ್ಕೆ-ತಕ್ಕ ಸಾಹಸಕ್ಕೆ-ಅವಕಾಶವಿತ್ತು. ಹಳ್ಳಿ, ಕುಟುಂಬ, ಕೈಗಾರಿಕೆ ಮುಂತಾದ ಬದುಕಿನ ಕೇಂದ್ರಗಳಲ್ಲಿ ಎಲ್ಲ ವ್ಯಕ್ತಿತ್ವಕ್ಕೆ ಪ್ರಭಾವವಿತ್ತು. ಆದರೆ ಇಂದಿನ ಪರಿಸ್ಥಿತಿ ಹಾಗಲ್ಲ. ಇಂದಿನದು ಉದ್ದಿಮೆಗಾರಿಕೆಯ ಯುಗ; ಉದ್ಯೋಗ ಪ್ರಧಾನವಾದ ಜೀವನ. ಧನದ ಉತ್ಪಾದನೆ ಒಬ್ಬನ ಶ್ರಮವಲ್ಲ. ಸಾಮುದಾಯಿಕ ದುಡಿತದಿಂದ ಸಮಾಜದ ಸಕಲಸೌಕರ್ಯಗಳೂ ಒದಗುವವು. ಈ ದುಡಿತದಲ್ಲಿಯೂ ವ್ಯಕ್ತಿಯ ಸತ್ವಕ್ಕಿಂತ ಯಂತ್ರದ ಶಕ್ತಿಗೇ ಹೆಚ್ಚು ಮಹತ್ವ. ಪ್ರಚಂಡ ಯಾಂತ್ರಿಕ ವ್ಯವಸ್ಥೆಯಲ್ಲಿ ವ್ಯಕ್ತಿಯೂ ಒಂದು ಕೀಲ, ಒಂದು ಅವಯವ.

ಇದರ ಪರಿಣಾಮವಾಗಿ, ಒಂದೇ ಬಗೆಯ ಕೆಲಸವನ್ನು ಒಂದೇ ಎಡೆಯಲ್ಲಿ ಒಂದೇ ಸವನೆ ಮಾಡುವ ಬೇಸರದ ವಾಡಿಕೆಯ ಗಾಣಕ್ಕೆ ಗಂಡಿನ ಬದುಕು ಹೂಡಿದೆ. ಕಚೇರಿಯ ಕಾರಕೂನ, ಸಾಲೆಯ ಮೇಷ್ಟ್ರ, ಎಂಜಿನ್ ಡ್ರಾಯಿವ್ಹರ್, ಗಿರಣಿಯ ನೇಕಾರ, ಕಾರಖಾನೆಯ ಕೆಲಸಗಾರ, ಬ್ಯಾಂಕಿನ ಬಂಡುವಾಳಗಾರ (ದಲ್ಲಾಳಿ)-ಎಲ್ಲರೂ ಮಾಡಿದ್ದನ್ನೇ ಮಾಡುತ್ತ, ಮಾಡಿದಂತೆಯೇ ಮಾಡುತ್ತ, ಮುದಿಯುವನಕವೂ ಮಾಡುತ್ತ, ಮಾಡಲಾಗದೆಯೂ ಮಾಡುತ್ತ ನುಗ್ಗಾಗಿ ಕುಗ್ಗಿ ಹೋಗುತ್ತಾರೆ. ಇನ್ನೂ ಒಂದು ತೊಡಕಿದೆ-ಇಂದಿನ ಈ ಯಾಂತ್ರಿಕ ಪಡಿಯಚ್ಚಿನ ಬದುಕಿನಲ್ಲಿ ಮಿಕ್ಕ ಅವಯವಗಳಿಗಿಂತ ಮಿದುಳಿಗೇ ವಿಶೇಷ ಪರಿಶ್ರಮ. ಕೃತ್ರಿಮವಾದ ಬೌದ್ಧಿಕ ಕೆಲಸದ ಒತ್ತಾಯದ ಒತ್ತಡದ ಮೂಲಕ ಮಂದಿಯ ಇಚ್ಛಾಶಕ್ತಿಯೂ, ಮಜ್ಜಾಸಂಸ್ಥೆಯೂ ಮುಕ್ಕಾಗಿ ಹೋಗುತ್ತದೆ. ಇಂದಿನ ಗಂಡಿನ ಮಾನಸಿಕ ಶಿಥಿಲತೆಗೂ ಬಧಿರತೆಗೂ ಈ ಔದ್ಯೋಗಿಕ ಯುಗದ ಯಾಂತ್ರಿಕ ಮತ್ತು ಕೃತ್ರಿಮ ಜೀವನವೇ ಕಾರಣ. ಇದರಿಂದ ಗಂಡಿನ ಆತ್ಮವಿಶ್ವಾಸ ನಷ್ಟವಾಗುತ್ತದೆ. ಸಂಘದ ಶಕ್ತಿಯು ಎಷ್ಟು ಹೆಚ್ಚೋ ಅದರ ಸದಸ್ಯರ ಸತ್ವ ಅಷ್ಟು ಕಡಿಮೆ. ಸಾಮೂಹಿಕ ಶ್ರಮದ ಸವಕಳಿಗೆ ತುತ್ತಾಗಿ ಸಾಮಾಜಿಕ ಕರ್ತವ್ಯಗಳ ಸರಪಳಿಯಲ್ಲಿ ಸುತ್ತಾಡುವ ಗಂಡು ನಿಸ್ತೇಜನಾಗದೇ ಮತ್ತೇನು ?

ಇನ್ನು ಈ ಆಧುನಿಕ ಯಾಂತ್ರಿಕ ಸಂಸ್ಕೃತಿಯ ಘಾತಚಕ್ರದಲ್ಲಿ ಗಂಡೊಂದೇ

ಸಿಲುಕಿದೆಯೇ ? ಹೆಣ್ಣಿನ ಬಾಳಿನಲ್ಲಿಯೂ ಇದರಿಂದ ಕ್ರಾಂತಿಯಾಗಿಲ್ಲವೇ ? ಎಂದು ನೀವು ಕೇಳಬಹುದು. ಆದರೆ ಒಟ್ಟಾರೆ ನೋಡಿದರೆ ಹೆಣ್ಣಿಗಿಂತ ಗಂಡೇ ಈ ವಿಷಮಪರಿವರ್ತನೆಯನ್ನು ಹೆಚ್ಚು ಹೊಂದಿದ್ದು ಸ್ಪಷ್ಟವಾಗುತ್ತದೆ. ಸ್ವಲ್ಪ ಆಳವಾಗಿ ನೋಡಿದರೂ ಏಕೆಂಬುದು ಹೊಳೆಯದಿರದು. ಎಂದಿನಿಂದಲೂ ಒಳಿತಿಗಿರಲಿ, ಕೆಡುಕಿಗಿರಲಿ, ಸಮಾಜವು ಪುರುಷ ಪ್ರಧಾನವೇ ಆಗಿದೆ. ಧರ್ಮ, ರಾಜಕಾರಣ, ದುಡ್ಡು-ದುಡಿಮೆ, ಯುದ್ಧ-ಯೋಜನೆ, ಶಿಕ್ಷಣ-ರಕ್ಷಣೆ ಈ ಜನ ಸಮುದಾಯದ ದೊಡ್ಡ ಕೆಲಸಗಳೆಲ್ಲ ಎಂದಿನಿಂದಲೂ ಗಂಡಿನ ಹಿಡಿತದಲ್ಲಿ (ನಡೆವಳಿಕೆ-ನಿರ್ವಹಣೆಯಲ್ಲಿ) ಸಾಗಿ ಬಂದಿವೆ. ಹೆಣ್ಣಿನ ಮನೆ, ಮಕ್ಕಳು, ಕೌಟುಂಬಿಕ ಕಾರ್ಯಕ್ಷೇತ್ರವಷ್ಟೇ ಎಂದಿನಿಂದಲೂ ನಡೆದು ಬಂದಿದೆ. ಆದ್ದರಿಂದ ಹೊರಗಿನ ಬಾಳಿನಲ್ಲಿ ನಾಗರಿಕತೆ-ಆಧುನಿಕತೆಗಳ ಮೂಲಕ ಒದಗಿಬಂದ ಪ್ರಚಂಡ ಬದಲಾವಣೆಗಳ ಸುಳಿಯಲ್ಲಿ ಗಂಡಿನಂತೆ ಹೆಣ್ಣು ಸಿಲುಕಲಿಲ್ಲ, ಅನಾದಿಯಿಂದಲೂ ಬುನಾದಿಯಿಂದಲೂ ಹೆಣ್ಣಿನ ವ್ಯವಸಾಯ ಹೆಚ್ಚುಕಡಿಮೆ ಒಂದೇ ತೆರನಾಗಿದೆ.

## ಹೆಣ್ಣಿನ ಅನಾದಿಯ ದಾಸ್ಯ.

ಆದ್ದರಿಂದ ಜೀವನದ ಕುರಿತು, ಜಗತ್ತಿನ ಕುರಿತು ಇಲ್ಲವೇ ಪ್ರಕೃತಿಯ ಕುರಿತು ಹೆಣ್ಣಿನ ವೃತ್ತಿ-ಪ್ರವೃತ್ತಿಗಳು, ಬಯಕೆ-ಬೇಡಿಕೆಗಳು ಅದೇ ಪರಿಯಾಗಿಯೇ ಸಾಮಾನ್ಯವಾಗಿ ಉಳಿದವು. ಇದರಿಂದ ಇನ್ನೊಂದು ವಿಚಿತ್ರ ಕಂಡುಬರುತ್ತದೆ. ಇತ್ತೀಚೆಯ ಜಾಗ್ರತಿಯಲ್ಲಿ ಸಮತೆ-ಸ್ವಾತಂತ್ರ್ಯದ ಬಗ್ಗೆ; ಬಂಡು ಹೂಡಿದ ಸುಶಿಕ್ಷಿತ ಹೆಣ್ಣು, ಒಂದೆಡೆಗೆ ಗೆಲವು ಪಡೆದಾಗಲೇ ಇನ್ನೊಂದೆಡೆಗೆ ಸೋಲು ಪಟ್ಟಿದ್ದೂ ತೋರುತ್ತದೆ. ಸಮಾಜದಲ್ಲಿ ಎಲ್ಲೆಡೆಯಲ್ಲಿಯೂ ಗಂಡಿನ ಮೇಲುಗೈ ಇರುವನಕವೂ ಹೆಣ್ಣಿಗೆ ಗಂಡಿನ ಅಧೀನತೆ ತಪ್ಪದೆಂಬ ಮಾತು ಮನದಟ್ಟಾಗುತ್ತದೆ. ಮನೆಯಲ್ಲಿ ತಂದೆಯೊಂದಿಗೋ, ಗಂಡನೊಂದಿಗೋ, ಸಮಾನ ಹಕ್ಕುಗಳಿಗೆಂದು ಬಂಡು ಹೂಡಿ ಆರ್ಥಿಕ ಗಳಿಕೆಯ ದಾರಿಹಿಡಿದ ಹೊಸಕಾಲದ ಹೆಣ್ಣು, ಸಮಾಜದಲ್ಲಿ ತನ್ನ ವರಿಷ್ಠ ಅಧಿಕಾರಿಯಾದ ಗಂಡಿನ ಒಲವಿಗಾಗಿ ಹಾತೊರೆಯುವದೂ ಹೆಣಗುವದೂ ಕಂಡುಬರುತ್ತದೆ. ಅಧ್ಯಾಪಿಕೆಯು ಇನಸ್ಪೆಕ್ಟರರ, ಪರಿಚಾರಿಕೆಯು ಡಾಕ್ಟರ-ಸರ್ಜನ್ನರ, ಕಾರ್ಯದರ್ಶಿನಿಯು ಒಡೆಯನ, ಟಂಕಲೇಖಿಕೆಯು ಮ್ಯಾನೇಜರನ, ನಟಿಯು ಕಂಪನಿಯೊಡೆಯನ ಪ್ರಸನ್ನತೆಗಾಗಿ ಮನವಾರೆ ಯತ್ನಿಸುವದು ಕಂಡುಬರುತ್ತದೆ. ಹೀಗೆ ಮನೆಯ ಒಳಗಿನ ದಾಸ್ಯದ ಬದಲು ಹೊರಗಿನ ದಾಸ್ಯವೇ ಹೊಸ ವಿಚಾರದ ಹೆಣ್ಣಿಗೆ ಸ್ವಾತಂತ್ರ್ಯವಾಗಿ ಕಾಣುತ್ತದೆ.

ಈ ವಿವೇಚನೆಯು ಅರ್ಥವಿಷ್ಟೇ-ಹೆಣ್ಣಿನಲ್ಲಿ ಪುರಾತನ ಕಾಲದಿಂದಲೂ, ಪ್ರಕೃತಿಯ ಕಟ್ಟಳೆಯಿಂದಲೂ ಅಧಿಕಾರಶಾಲಿಯಾದ-ಸಾಮರ್ಥ್ಯಶಾಲಿಯಾದ ಗಂಡಿಗೇ ಮೆಚ್ಚುವ ಇಲ್ಲವೇ ಮನಸಾರೆ ವಶವಾಗುವ ಪ್ರವೃತ್ತಿ ಬೆಳೆದಿದ್ದು ಅದು ಪೂರ್ಣ ಇಲ್ಲದಾಗಲು ಇನ್ನೂ ಸಾವಿರಾರು ವರ್ಷಗಳ ನಾಗರಿಕತೆ ಬೇಕು. ಹೆಣ್ಣಿನ ದೇಹದ ಸ್ವಾಭಾವಿಕ ಅಬಲತೆಯೂ, ದೇಹ ಧರ್ಮದಂತೆ ಋತುವಿನಲ್ಲಿಯೂ, ಗರ್ಭಭಾರ-ಪ್ರಸೂತಿ ಕಾಲದಲ್ಲಿಯೂ ಉಂಟಾಗುವ ಅಸಹಾಯಕತೆಯೂ ಹೆಣ್ಣಿಗೆ ಗಂಡಿನ ಸಾಮರ್ಥ್ಯವನ್ನೇ ಆಶ್ರಯಿಸುವಂತೆ ಮಾಡಿವೆ. ಪ್ರಕೃತಿಯ ಈ ಒತ್ತಾಯವೇ ಆಕೆಯ ಮೂಲ ಪ್ರವೃತ್ತಿಯಾಗಿದೆ.

ಅಂತೆಯೇ ಹೆಣ್ಣು ಒಂದೆಡೆಗೆ ತನ್ನ ಹತ್ತಿರದ ತಂದೆ, ಗಂಡ, ಬಂಧುವೇ ಮುಂತಾದ ಸಂಬಂಧವಿದ್ದ ಗಂಡಿನ ವ್ಯಕ್ತಿತ್ವವನ್ನು ನಿಸ್ಸತ್ವವಾಗಿ, ನಿಸ್ತೇಜವಾಗಿ, ಕಂಡರೂ, ಇನ್ನೊಂದೆಡೆಗೆ ತನ್ನ ಉದ್ಯೋಗದಲ್ಲಿಯೋ-ಕಚೇರಿ ಕಾರಖಾನೆಯಲ್ಲಿಯೋ-ತನ್ನನ್ನು ಆಳಬಲ್ಲ ಪ್ರಭಾವುಳ್ಳ ವ್ಯಕ್ತಿತ್ವದ ಗಂಡನ್ನು ಕಂಡುಕೊಳ್ಳುವಳು. ಅಂಥವನ ಪ್ರೇಮವಿಲ್ಲದಿದ್ದರೂ, ವಿಧೇಯತನವನ್ನು ವಿನಯದಿಂದ ಒಪ್ಪಿಕೊಳ್ಳುವಳು. ಅಂಥ ಅಂಕೆ ಆಳಿಕೆಯಿಂದ ಸುಖಿಯೂ ಆಗುವಳು.

ಇದೇ ಮೇರೆಗೆ ಆಧುನಿಕ ಹೆಣ್ಣು ಒಂದು ಸಂಮಿಶ್ರ ಮನೋವೃತ್ತಿಯವಳಾಗಿ ಬೆಳೆದದ್ದು ತೋರುತ್ತದೆ. ಆಕೆಗೆ ಸ್ವಾತಂತ್ರ್ಯದ ಸಮಾನಾಧಿಕಾರವೂ ಬೇಕು: ಪಾರತಂತ್ರ್ಯದ ಸ್ವತಂತ್ರಾಧಿಕಾರವೂ ಬೇಕು. ಸುಲಿಗೆಯ ನಿರ್ದಾಕ್ಷಿಣ್ಯದ ಹಕ್ಕೂ ಬೇಕು. ಸಲಿಗೆಯ ಸ್ತ್ರೀ-ದಾಕ್ಷಿಣ್ಯದ ಸುಖವೂ ಬೇಕು. ಗಂಡು ಮಾಡುತ್ತ ಬಂದವೆಲ್ಲ ಉದ್ಯೋಗ-ವ್ಯವಸಾಯ ಕ್ಷೇತ್ರಗಳಲ್ಲಿ ಆಕೆಗೂ ಸ್ಥಳಬೇಕು. ಸಮಾನಾಧಿಕಾರದೊಂದಿಗೆ ಸಮಾನ ದೃಷ್ಟಿಯಿಂದ ಗಂಡು ಹೆಣ್ಣನ್ನು ನಡಿಸಿಕೊಂಡರೆ ಆಕೆಗೆ ವಿನಯಭಂಗವೆನಿಸುತ್ತದೆ. ಮಾನಹಾನಿಯಾಗುತ್ತದೆ. ಒಂದೇ ಚಾಕರಿಯಲ್ಲಿ ಹೆಣ್ಣು-ಗಂಡು ಕೂಡಿಯೇ ದುಡಿಯುತ್ತಿದ್ದಾಗ್ಯೂ. ಹೆಣ್ಣು ಗಂಡಿನಿಂದ ಮಿಗಿಲಾದ ದಾಕ್ಷಿಣ್ಯವನ್ನು-ಅನುನಯ, ವಿನಯಗಳನ್ನು-ಅಪೇಕ್ಷಿಸುತ್ತಾಳೆ! ಇಬ್ಬರೂ ಒಂದೇ ಕಚೇರಿಗೆ ಬರಹೋಗುವವರಾದರೂ ಹೆಣ್ಣಿಗಾಗಿ ಗಂಡು ಬಸ್ಸಿನಲ್ಲಿ ಸ್ಥಳ ಬಿಟ್ಟುಕೊಡಬೇಕು. ಬಾಗಿಲು ತೆರೆದುಕೊಡಬೇಕು. ಆಗೀಗ ಚಹಾ ಚಾಕಲೇಟು ಕೊಂಡು ಕೊಡಬೇಕು. ಹೀಗೆಲ್ಲ ಹೆಣ್ಣಿನ ಬಯಕೆಗಳಿರುತ್ತವೆ. ಇವೆಲ್ಲ ಸ್ತ್ರೀದಾಕ್ಷಿಣ್ಯದ ಸದರಿನಲ್ಲಿ ಬರುತ್ತವೆ. ಗಂಡಿಗೂ ಇವೆಲ್ಲ ಲಾಂಗೂಲಚಾಲನೆಯಿಂದ ಸುಖವೆನಿಸುತ್ತದೆ. ಆ ಮಾತು ಬೇರೆ. ಇಲ್ಲಿ ವಿಷಯವೆತ್ತಿದ್ದು ದೋಷ ಕಾಣಲು ಅಲ್ಲ. ಪುರಾತನ ಪ್ರವೃತ್ತಿ ಮತ್ತು ಆಧುನಿಕ ಜಾಗೃತಿ, ಔದ್ಯೋಗಿಕ ಪ್ರಗತಿ ಇವುಗಳ ನಡುವೆ ಸಿಕ್ಕ ಹೆಣ್ಣಿನ ಪ್ರಕೃತಿ

ಹೇಗೆ ಪೂರಾಬಚ್ಚಿಯಾಗಿ ನಿಂತಿದೆ ಎಂಬುದೇ ಇಲ್ಲಿ ಮುಖ್ಯ.

## ಪಾತಿವ್ರತ್ಯದ ಬೆಲೆ

ಆದರೆ ಇಲ್ಲಿಯೂ ಇನ್ನೊಂದು ಸೂಕ್ಷ್ಮ ಸಂಗತಿಯನ್ನು ನಾವು ಗಮನಿಸಬೇಕು. ಹೊಸಬಗೆಯ ಗಂಡಿನ ಹಂಗು ಹಳೇತರದ ದಾಸ್ಯದಂತಿಲ್ಲ. ಪುರಾತನ ಪರಂಪರೆಯಂತೆ ಗಂಡಿಗೆ ಹೆಣ್ಣು ಪೂರ್ಣ ದಾಸಿಯಂತಿದ್ದಳು. ಹಾಗೆ ಆಕೆ ನಡಿಸಲ್ಪಡದಿದ್ದರೆ ಅದು ಗಂಡಿನ ಔದಾರ್ಯದ ಇಲ್ಲವೇ ಆರ್ಯವೃತ್ತಿಯ ಲಕ್ಷಣ ಹೆನಿಸುತ್ತಿತ್ತು. ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯವಿಲ್ಲದ್ದರಿಂದ ತನ್ನ ಉಪಜೀವಿಕೆಯ ಒತ್ತಾಯಕ್ಕಾಗಿಯೇ ಸಾಮಾನ್ಯವಾಗಿ ಗಂಡಿನ ವಶವರ್ತಿಯಾಗಬೇಕಿತ್ತು. ಪಾತಿವ್ರತ್ಯದ ಮುಕ್ಕಾಲುಪಾಲು ಈ ಆರ್ಥಿಕ ಅಸಹಾಯತೆ, ಗಂಡಿನ ಹಿಡಿತದಲ್ಲಿನ ಸಮಾಜದ ನಿಂದೆಯ ಭಯ ಇವುಗಳಿಂದ ಕೂಡಿದ್ದು. ಮಿಕ್ಕಭಾಗವು ಮಾತ್ರ ಗಂಡುಹೆಣ್ಣಿನ ಗುಣಾಕರ್ಷಣದ ಅಂಶವಾಗಿತ್ತು.

ಆದರೆ ಹೊಸಜೀವನದಲ್ಲಿ ಹಾಗೆ ಇರುವ ಸಂಭವ ಕಡಿಮೆ. ಗಂಡಿನ ಬಲಾತ್ಕಾರದ ಹಾಗೂ ಅತ್ಯಾಚಾರದ ಭೀತಿ ಇದ್ದರೂ, ಒಟ್ಟಾರೆ ಹೆಣ್ಣಿಗೆ ಹೊಟ್ಟೆಯಪಾಡಿಗಾಗಿ, ಗಂಡನ್ನು ಆಶ್ರಯಿಸಬೇಕೆಂಬ ಒತ್ತಾಯ ಉಳಿದಿಲ್ಲ. ಇಂದು ಗಂಡು ಹೆಣ್ಣು ಬೇರೆ ಬೇರೆ ಕಡೆಗೆ ದುಡಿದೂ ಒಂದೆಡೆಗೆ ಮನೆಮಾಡಿಕೊಂಡು ಸುಖದಿಂದ ಬಾಳುವದನ್ನು ನಾವು ನೋಡುತ್ತೇವೆ. ಇಂಥ ಕುಟುಂಬದಲ್ಲಿ ಅವರನ್ನು ಜತೆಗೂಡಿಸುವ ಮತ್ತು ಜೋಡಿಸುವ ಪಾಶ ಶಾರೀರಕ ಮತ್ತು ಮಾನಸಿಕ ಗುಣಗಳವೇ ಇರುತ್ತವೆ. ಹೆಚ್ಚೆಂದರೆ ಸಂಸ್ಕೃತಿ ಶಿಕ್ಷಣಗಳಿಂದ ಫಲಿತವಾದ ಸಂಯಮವೂ ಇರುತ್ತದೆ. ಸಾಮಾಜಿಕ ಇಲ್ಲವೇ ಆರ್ಥಿಕ ವೈಷಮ್ಯದ ಭೀತಿ ಇರುವದಿಲ್ಲ. ಹೀಗೆ ಹೊಸ ಜೀವನದಲ್ಲಿ ಕಂಡುಬರುವ ಗಂಡು ಹೆಣ್ಣಿನ ಸಂಬಂಧದಲ್ಲಿ ಹೆಣ್ಣು ಗಂಡನ್ನು ಅವಲಂಭಿಸಿ ಇರುವದು ತೋರಿಬಂದರೂ ಅದರಲ್ಲಿ ಒಂದು ಗೌರವವಿರುತ್ತದೆ. ತಾನಾಗಿ ಕಟ್ಟಿಕೊಂಡ ಬಂಧನವದು. ಬಿಡುಗಡೆಯ ದಾರಿ ತೆರೆದಿದ್ದರೂ ಇಟ್ಟುಕೊಂಡ ಬಂಧನವದು. ಇಂಥ ಪರವಶತೆಯಲ್ಲಿ ವಿವಶತೆಯ ಅವಶ್ಯಕತೆ ತೋರುವದಿಲ್ಲ.

ಅಂದಮೇಲೆ ಹೊಸ ಸ್ವಾತಂತ್ರ್ಯವಾಗಲೀ, ಆಧುನಿಕ ನಾಗರಿಕತೆಯ ಜಾಗ್ರತಿಯಿಂದ ತಲೆದೋರಿದ ಆರ್ಥಿಕ ಸಮಾನತೆಯ ಆಂದೋಲನವಾಗಲೀ ಹೆಣ್ಣಿನ ಸ್ವಾಭಾವಿಕ ಪುರುಷಾವಲಂಬಿತನಕ್ಕೆ ಯಾವ ತಡೆ-ತೊಡಕನ್ನೂ ಉಂಟುಮಾಡಿಲ್ಲ.

ಇಷ್ಟೇ ಅಲ್ಲ. ಇಂದಿನ ಅನಿರ್ಬಂಧ–ಸ್ವಚ್ಛಂದ–ಸಂಬಂಧದಲ್ಲಿಯೇ ಹೆಣ್ಣಿನ ಈ ಸಹಜ ಸಿದ್ಧವಾದ ಪೌರುಷೋಪಾಸನೆಯು ಹೆಚ್ಚು ಸ್ಪಷ್ಟವಾಗಿಯೂ ವಿಕಾಸಗೊಳ್ಳುವಂತಿದೆ. ಯಾವ ಆರ್ಥಿಕ ಧಾರ್ಮಿಕ ಇಲ್ಲವೇ ಲೌಕಿಕ-ಪಾರಲೌಕಿಕ–ವಿಧಿ-ನಿಷೇಧಗಳ ಒತ್ತಾಯವಿಲ್ಲದೇ ಹೆಣ್ಣು. ಗಂಡಿನ ಹೃದಯದ ಮತ್ತು ಪ್ರಣಯದ ಆಗ್ರಹಕ್ಕೆ ತಾನಾಗಿ ತನ್ನಾರೆ ವಶವರ್ತಿಯಾಗಿ ಬಾಳುವಂತಿದೆ !

## ೭

ಈ ಹಿಂದೆ ನಮ್ಮ ವಿಷಯದ ಎಳೆಯು ತುಸು ದೂರ ಹರಿದು ಹೋಯಿತು. ಆಧುನಿಕ-ಜೀವನದ ಕೃತ್ರಿಮವಾದ ಆವರಣದ ಪರಿಣಾಮಗಳು ಗಂಡು–ಹೆಣ್ಣಿನ ಅನ್ಯೋನ್ಯ ಸಂಬಂಧಗಳಲ್ಲಿ ಎಂಥ ವ್ಯತ್ಯಾಸ-ವಿಪರ್ಯಾಸಗಳನ್ನು ತಂದಿವೆ ಎಂಬುದನ್ನೇ ಉದ್ದವಾಗಿ ಬಣ್ಣಿಸಲು ತೊಡಗಿದಂತಾಯಿತು. ತಾತ್ಪರ್ಯವೇನಂದರೆ, ಇಂದಿನ ಬದುಕು ನೇರವಾಗಿಲ್ಲ. ಎಂದಿನಿಂದಲೂ ಹೆಚ್ಚಾಗಿ ಗಂಡು ಎಡೆಬಿಡದೆ, ಎಲ್ಲಿಯೂ ಸಡಿಲು ಬಿಡದೆ ಬುದ್ಧಿಯ ಕೆಲಸಕ್ಕೇ ತನ್ನನ್ನು ಹೂಡಿಕೊಳ್ಳಬೇಕಾಗುತ್ತದೆ. ಒಂದೆಡೆಗೆ ಉದ್ಯೋಗ–ವ್ಯವಸಾಯಗಳ ಯಾಂತ್ರಿಕ ಪದ್ಧತಿ. ಇನ್ನೊಂದೆಡೆಗೆ ಈ ಒತ್ತಾಯದ ಬೌದ್ಧಿಕ ಜೀವನದ ಕೃತ್ರಿಮ ಚಟ ಇವೆರಡರ ನಡುವೆ ಗಂಡಿನ ನರಗಳೆಲ್ಲ ಹುರಿಗುಂದಿ ಹೋಗುತ್ತವೆ: ಮಿದುಳು ಮಂಕಾಗುತ್ತದೆ: ಅಂದರೆ ಪೌರುಷದ ಕೆಚ್ಚು ಕುಗ್ಗುತ್ತದೆ: ಆತ್ಮಾಭಿಮಾನ ತಗ್ಗುತ್ತದೆ. ಬೆನ್ನು ಬಗ್ಗುತ್ತದೆ. ಈ ಹೊಸ ಬಾಳು ಗಂಡನ್ನು ಚಾಕರಿಯಾಳಿನ ಚಟುವಟಿಕೆಗೆ ಹೂಡಿ, ಒಂದು ಸೂಕ್ಷ್ಮವಾದ ಮಾನಸಿಕ ದಾಸ್ಯದ ಚಟವನ್ನು ಮೈಯುಣ್ಣಿಸಿ ಬಿಟ್ಟಿದೆ.

ಇದರಿಂದ ಗಂಡಿನ ಹುಟ್ಟುಗುಣವಾಗಿರಬೇಕಾದ ಎದೆಗಾರಿಕೆಯು ಮಸಣಿಸಿ ಹೋಗಿದೆ. ಪೌರುಷ–ಪುರುಷಾರ್ಥಕ್ಕೆ ಬೇಕಾದ ಧೈರ್ಯ ನವೆದು ಹೋಗಿದೆ. ಸಂಕಲ್ಪಶಕ್ತಿಯೂ ಇಚ್ಛಾಶಕ್ತಿಯೂ ಸಡಿಲಾಗಿಬಿಟ್ಟಿದೆ. ಇಂಥ ದೆಸೆಯಲ್ಲಿ ಆತನು ಸ್ವಾಭಾವಿಕವಾಗಿಯೂ ಬಲೋಪಾಸಕಳಾದ ಹೆಣ್ಣನ್ನು ಆಳುವದೆಂತು ? ಜನಸಂದಣಿಯೊಳಗಿಂದ ಮುನ್ನುಗ್ಗಲು. ಸಿನೇಮಾ ಮಂದಿರದಲ್ಲಿ ತಿಕೇಟುಕೊಳ್ಳಲು. ಬಸ್ಸು–ರೇಲುಗಳಲ್ಲಿ ತನ್ನ ಕುಟುಂಬಕ್ಕಾಗಿ ಸ್ಥಳ ಮಾಡಿಕೊಳ್ಳಲು–ಅಷ್ಟೇ ಏಕೆ, ಮನೆಗಾಗಿ ಪೇಟೆಯಿಂದ ತ್ವರೆಯಲ್ಲಿ ಜಿನಸುಗಳನ್ನು ತರಲು. ಗಂಡು ಹೆಣ್ಣಿನ ಎದುರು ಹತವೀರ್ಯನಾಗಿ ಕಾಣಿಸಿಕೊಳ್ಳುತ್ತಾನೆ. ಇಂಥ ಹಲವು ಆಯಕಟ್ಟಿನ ಪ್ರಸಂಗಗಳಲ್ಲಿ ತನ್ನ ಗಂಡನ ಅಚ್ಚುಕಟ್ಟನ್ನು ಒರೆಗೆ ಹಚ್ಚಿ. ಹೆಣ್ಣು ಒಳಒಳಗೇ ಆತನ ಬೆಲೆಕಟ್ಟಿ. ತಲೆತಗ್ಗಿಸಿ ಸುಮ್ಮನಿರುತ್ತಾಳೆ ! ಆದರೆ ಇದೆಲ್ಲ ಮಾತು

ಸುರಕ್ಷಿತವೂ ಸುಸಂಸ್ಕೃತವೂ ಎನಿಸಿಕೊಂಡ ಗಂಡುವರ್ಗದ ಕುರಿತೆಂಬುದು ಮರೆಯಕೂಡದು. ಇಂಥ ದೈನ್ಯ-ಶ್ರಮಜೀವಿ ಗಂಡು ಕಾಣಿಸುವದಿಲ್ಲ. ಇರಲಿ.

## ಹೆಣ್ಣು ಹೋರಾಡುವದಿಲ್ಲವೆ ?

ಇಂದಿನ ಅವಸ್ಥೆ ಹೇಗೂ ಇರಲಿ. ಸಹಜ ಸ್ವಭಾವದಲ್ಲಿ ಗಂಡು ಹೋರಾಟದ ಮುದ್ದರಿಯೆಂಬುದನ್ನು ಹಿಂದೆಯೇ ಹೇಳಿದೆ. ಹಾಗಿದ್ದರೆ ಹೆಣ್ಣು ಹೋರಾಡುವದಿಲ್ಲವೇ ? ಹೆಣ್ಣಿಗೆ ಗೆಲುವೆಂಬುದು ಗೊತ್ತಿಲ್ಲವೆ ? ಒಲಿದು ಸೋಲುವದೇ ಆಕೆಯ ಭಾಗ್ಯವೇ ?

ಅಲ್ಲ ! ಹೆಣ್ಣು ಗೆಲ್ಲುವಳು. ಹೆಣ್ಣಿನ ಗೆಲುವು ಬಹಳೇ ಭದ್ರವಾಗಿ ತಾಳುವದು. ಆದರೆ ಹೆಣ್ಣು ಗೆಲ್ಲುವದು ಪ್ರತ್ಯಕ್ಷ ಹೋರಾಟದಿಂದಲ್ಲ. ಹೆಣ್ಣಿನಲ್ಲಿ ಹೀಗೆ ಇದಿರು ಹೋರಾಟಕ್ಕೆ ಬೇಕಾಗುವ-ನುಗ್ಗಿನಡೆಯುವ ಸಾಹಸವಿಲ್ಲ. ಪರಾಕ್ರಮದ ಧೈರ್ಯ ಹೆಣ್ಣಿನ ಗುಣವಲ್ಲ. ಅವಳ ಗೆಲುವು ಎಡೆಬಿಡದ ಜಿಗುಟುತನದ ಫಲ; ಸತತ ಪರಿಶ್ರಮದ ಹಾಗೂ ಮತ್ತೆ ಮತ್ತೆ ಎತ್ತಿ ಒತ್ತಿ ತೋರಿಸುವ ಛಲದ ಫಲ. ಗಂಡಿನ ಹೋರಾಟ ಹೆಚ್ಚು ಪ್ರಖರ; ಅಷ್ಟೇ ಪ್ರಕಟ. ಆದರೆ ಅದು ಅಷ್ಟೇ ದೀರ್ಘಕಾಲ ನಡೆಯುವಂತಹದಲ್ಲ. ಗಂಡಿನದು ಮಿಂಚಿನ ದಾಳಿ. ಹೆಣ್ಣಿಗಿರುವ ಮವ್ಯಾಸ ಗಂಡಿಗೆ ಇರುವದು ಕಡಿಮೆ. ಇದರಿಂದ ಗಂಡು ಕೂಡಲೇ ಒಡಂಬಡಿಕೆಗಾಗಿ ಸಿದ್ಧನಾಗಲೂ ಒಪ್ಪುವನು. ಎಷ್ಟು ಕಟ್ಟುಸಿಟ್ಟಾಗಿ, ನಿಷ್ಠುರವಾಗಿ ಹೋರಾಡುವನೋ-ಸೆಣಸಾಡುವನೋ-ಅಷ್ಟೇ ಲಗು ಒಪ್ಪಂದ ಮಾಡಿಕೊಳ್ಳಲೂ ಗಂಡು ಅಣಿಯಾಗುವನು. 'ಸಾಮಾನ್ಯ ಒಪ್ಪಂದ'ಕ್ಕಾಗಿ ತನ್ನ ಕೆಲವು ಹಟವನ್ನೂ ಹಕ್ಕುಗಳನ್ನೂ ಬಿಟ್ಟುಕೊಡಲೂ ಗಂಡು ಒಪ್ಪಬಹುದು. ಪಾಂಡವರು ಸಂಧಾನಕ್ಕೆ ಸಿದ್ಧರಾದಷ್ಟು ದ್ರೌಪದಿಯು ಸಿದ್ಧಳಾಗಲಿಲ್ಲವೆಂಬುದನ್ನು ಮರೆಯಬಾರದು.

ಅವನ ಈ ಜಗಳ-ಒಡಂಬಡಿಕೆಗಳ ತವಕ ಹೆಣ್ಣಿನೊಡನೆ ಕಂಡುಬರುವದು ಸಿಟ್ಟಿನ ಭರದಲ್ಲಿ ತನ್ನ ಗಂಡು-ಗಂಡಸುತನದ ಹುಂಬಜಿಂಕದಲ್ಲಿ ಹೆಣ್ಣಿನೊಡನೆ ಸೆಣಸಾಡಿ, ಆಕೆಯನ್ನು ಗಂಡು ಚೆನ್ನಾಗಿ ಥಳಿಸಲೂ ಹಿಂದೆ ಮುಂದೆ ನೋಡುವದಿಲ್ಲ. ಆದರೆ ಕೊನೆಗೆ ಒಪ್ಪಂದದ ಬಿಳೀಬಾವುಟ ಹಾರಿಸಲೂ ಗಂಡು ಸ್ವಲ್ಪವೂ ನಾಚುವದಿಲ್ಲ ! ಅವನ ಕೋಪದ ಆಟೋಪ ಬಿರುಗಾಳಿಯಂತೆ ಬೀಸಿ, ಗುಡುಗಿ, ಮಿಂಚಿ ಮಾಯವಾಗುವದೆನ್ನಬಹುದು.

ಆದರೆ ಹೆಣ್ಣು ಹಾಗಲ್ಲ. ಜಾಹಿರಾತಿನಂತೆ-ಎಡಬಿಡದ ಹಟದಿಂದಲೇ ಮತ್ತೆ ಮತ್ತೆ ಆಡಿ ಗೆಲ್ಲುವ ತಂತ್ರ ಆಕೆಯದು. ಹಲವುಸಲ ಒಂದೇ ಸಂಗತಿಯನ್ನು ಸಾಕಷ್ಟು ಒತ್ತಿ ಹೇಳಿದರೆ, ಗೋಡೆಯ ಹಾಳೆ, ವರ್ತಮಾನ ಪತ್ರ, ಸಿನೇಮಾ ತೆರೆ ಇವೆ ಮುಂತಾದ ಹಲವು ಕಣ್ಣುಗಳನ್ನು ಹಲವು ಸಲ ಸೆಳೆಕೊಳ್ಳುವ ಸ್ಥಳಗಳನ್ನು ಆಕ್ರಮಿಸಿ, ಅದೇ ಸಂಗತಿಯನ್ನು ಮತ್ತೆ ಮತ್ತೆ ಸಾರಿದರೆ ಕೊನೆಗೂ ಜನ ಅದನ್ನು ನಂಬುವರು; ಕೊಳ್ಳುವರು: ಕೈಗೊಳ್ಳುವರು. ಇದೇ ಜಾಹಿರಾತಿನ ತಂತ್ರ. ಈ ಈ ತಂತ್ರ ಹೆಣ್ಣಿಗೆ ಗೆಲುವಿನ ಮೂಲಮಂತ್ರ. ನೀರು ಎಷ್ಟು ಮೃದು ! ಆದರೆ ಎಡಬಿಡದೇ ಹರಿದು ಅದು ಬಂಡೆಯನ್ನು ಕೊರೆದು ಬಯಲನ್ನು ಬರಿದಾಗಿ ಮಾಡುವ ದಿಲ್ಲವೆ ? ನೀರೆಯೂ ನೀರಿನಂತೆಯೇ ತನ್ನ ಮಾತನ್ನೂ, ಮಾಟವನ್ನೂ, ಮನೋಗತವನ್ನೂ ಮತ್ತೆ ಮತ್ತೆ ಗಂಡನೆದಿರು ಅನುವು ದೊರತಾಗೆಲ್ಲ ಕಿರುದನಿಯಲ್ಲಿಯೋ, ಅಳುದನಿಯಲ್ಲಿಯೋ, ನಗೆಮೊಗದಿಂದಲೋ, ಹೊಗೆಮೋರೆಯಿಂದಲೋ ಆಡಿ ಆಡಿ, ಕೊನೆಗೂ ಗಂಡನನ್ನು ಅದಕ್ಕೆ ಒಪ್ಪಿಸಿಕೊಳ್ಳುವ ಹದ ಹೆಣ್ಣಿಗೆ ಸಾಧಿಸಿದ್ದು.

## ಹೆಣ್ಣಿನ ಹಟ ಗಂಡಿನ ಗಂಡಾಂತರ

ದೊಡ್ಡ ಪೆಟ್ಟನ್ನು ಒಮ್ಮೆಲೇ ಸಹಿಸಬಲ್ಲ ಗಂಡು ಪುಟ್ಟ ನೋವನ್ನು ಅನುದಿನವೂ ತಾಳಲಾರ. ಹಾಗೆಯೇ ಆಕಸ್ಮಿಕ ಕ್ಷೋಭವನ್ನು ಎದೆಗಾರಿಕೆಯಿಂದ ಇದಿರಿಸುವ ಗಂಡನು ಹೆಂಡತಿಯ ದಿನನಿತ್ಯದ ಕರಕರೆಯನ್ನೂ. ಕೊರಗಿನ ಕೆರಳಿಕೆಯನ್ನೂ ಸಹಿಸಲಾರ. ಇದು ಹೆಣ್ಣಿಗೂ ಗೊತ್ತು. ಆದ್ದರಿಂದಲೇ ಆಕೆ ತನ್ನ ಹಟದ ಒಂದು ಬಲವಾದ ಪೆಟ್ಟನ್ನು ಕೊಡುವದಕ್ಕಿಂತ ಚಿಕ್ಕ ಒತ್ತಾಯವನ್ನೇ ಎಡಬಿಡದೇ ನಡೆಯಿಸುವ ಉಪಾಯ ಕಂಡುಕೊಂಡಿದ್ದಾಳೆ. ಇದು ಆಕೆಯ ದೇಹದ ಅಬಲತೆಯದೇ ಒಂದು ಪರಿಪಾಕ. ನೇರವಾಗಿ ಆಕೆ ಹೋರಾಡಲಾರಳು. ಹೊಡೆತ ಕೊಡಲಾರಳು. ಈ ಗುಣ ಬರೇ ಹೆಣ್ಣಿಗೇ ಮೀಸಲಲ್ಲ. ಅದು ದುರ್ಬಲತೆಯ ಪರಿಣಾಮವಾದ್ದರಿಂದ, ಎಲ್ಲ ದುರ್ಬಲ ಪ್ರಾಣಿವಂಶಗಳಲ್ಲಿಯೂ, ಜನಾಂಗ-ಜಾತಿಗಳಲ್ಲಿಯೂ, ವ್ಯಕ್ತಿಗಳಲ್ಲಿಯೂ, ಹೊರಗೆ ಹೆರವರೊಂದಿಗೆ-ಗಂಡುಗಳೊಂದಿಗೆ-ಹೋರಾಟದ ಸೂಕ್ಷ್ಮತಂತ್ರವಾಗಿಯೂ ಪ್ರಕಟವಾಗುತ್ತದೆ. ಈ ಸೂಕ್ಷ್ಮತನ ನಡೆನುಡಿಯಲ್ಲಿ ವ್ಯಂಗವಾಗಿಯೂ, ವಕ್ರವಾಗಿಯೂ ಹಲವೊಮ್ಮೆ ಜೀವನವನ್ನೇ ನಡೆಯಿಸುವ ಅಡೆತಡೆಯಾಗಿಯೂ ರೂಪುಗೊಳ್ಳುತ್ತದೆ.

ಪ್ರತೀಕಾರ ಗಂಡಿನ-ಪ್ರಬಲರ-ದಾರಿ. ನಿಃಶಸ್ತ್ರ ಪ್ರತಿಕಾರ, ಸವಿನಯ ನಿರ್ಬಂಧ ಭಂಗ. ಇದು ನಿರ್ಬಲರ-ಹೆಣ್ಣಿನ-ದಾರಿ. ಅಸಹಕಾರ ಅಸಹಾಯರ ಶೂರತನ.

ಗಂಡನ ವಿರುದ್ಧ ಹೆಣ್ಣು ಪ್ರಯೋಗಿಸುವ ಸುಕುಮಾರ ಶಸ್ತ್ರವದು. ಇದು ಪ್ರತೀಕಾರದಷ್ಟೇ–ಅದಕ್ಕೂ ಹೆಚ್ಚು–ಪ್ರಖರ ಮತ್ತು ಪರಿಣಾಮಕರ. ಪ್ರಬಲರಿಗಿಂತ ದುರ್ಬಲರು ನಮ್ಮ ಮೇಲೆ ನಡಿಸುವ ದಬ್ಬಾಳಿಕೆಯು ಹೆಚ್ಚು ಘಾತುಕ; ಅಷ್ಟೇ ಸೂಕ್ಷ್ಮ. ಏಕೆಂದರೆ ದುರ್ಬಲರು ನಮ್ಮಲ್ಲಿಯ ಸದ್ಗುಣಗಳನ್ನೋ ಸದ್ಭಾವಗಳನ್ನೋ ತಮ್ಮ ಕೆಲಸಕ್ಕಾಗಿ ನಮ್ಮ ಬಲದ ಮತ್ತು ಛಲದ ವಿರುದ್ಧ ಉಪಯೋಗಿಸಿಕೊಳ್ಳುತ್ತಾರೆ. ನಮ್ಮ ಅಂತರಂಗವೇ ಅವರ ಯುದ್ಧರಂಗ ವಾಗುತ್ತದೆ. ಇದರಿಂದ ನಮ್ಮ ಪಟ ಹುಸಿಯಾಗಿ ಕಸುವೂ ಕಸವಾಗಿ ಬಿಡುತ್ತದೆ. ಏಕೆಂದರೆ ದುರ್ಬಲರೊಡನೆ ಹೋರಾಡಲು ಹೊರಡುವ ಮೊದಲೇ ನಮ್ಮ ಮನಸ್ಸು ಕದಡಿ ಕಸವಿಸಿಯಾಗಿ ಬಿಡುತ್ತದೆ. ನೆಪೋಲಿಯನ್ ಚಕ್ರವರ್ತಿಯು ಯುರೋಪದ ಭೂಖಂಡವನ್ನೇ ಗೆದ್ದು ಆಳಿದನು. ಆದರೆ ತನ್ನ ರಾಣಿ ಜೊಸೊಫಾಯಿನಳನ್ನು ಕೊನೆಯತನಕವೂ ಅಂಕೆಯಲ್ಲಿಟ್ಟುಕೊಳ್ಳದೇ ಹೋದ! ಆಕೆಯ ದೇಹದ ಅಬಲತೆಯು ಹಾಗೂ ಮನದ ಅಂಜುಬುರುಕತನದ ಮುಂದೆ ಆತನ ಶಕ್ತಿ ಸಾಮರ್ಥ್ಯವೆಲ್ಲ ವ್ಯರ್ಥವಾಯಿತು. ಅವಳು ಪ್ರಯೋಗಿಸುವ ಆಯುಧಗಳನ್ನು ತಡೆಯಲು ಅವನಲ್ಲಿ ತಕ್ಕ ಕವಚವೇ ಇದ್ದಿಲ್ಲ! ಕೆನ್ನೀರ ಕಡಲನ್ನು ಈಸಬಲ್ಲ ಆ ಅಸಹಾಯಶೂರನಿಗೆ ಆಕೆಯ ಕಣ್ಣೀರ ಹನಿಗಳನ್ನು ದಾಟುವದು ದೊಡ್ಡ ಸಂಕಟವಾಗಿತ್ತು!

ಇಂದಿನ ಪರಿಸ್ಥಿತಿಯಂತೂ ಹೆಣ್ಣಿಗೆ ಅನುಕೂಲವೇ ಸರಿ. ಆಧುನಿಕ ಸೌಕರ್ಯಗಳ ವಿರಾಮದ ಬಾಳಿನಲ್ಲಿ ಅರಳುವ ಮಧ್ಯಮ ವರ್ಗದ ಹೆಣ್ಣು ಬಹಳ ಮಕ್ಕಳಿಲ್ಲದ, ಯಾವ ಕೆಲಸವೂ ಇಲ್ಲದ, ಸುಖಾಸೀನ ಸೋಮಾರಿತನದಲ್ಲಿ ಗಂಡಿನ ವಿರುದ್ಧ ಆಯಕಟ್ಟಿನ ಸ್ಥಳವನ್ನೇ ಆಕ್ರಮಿಸಿದಂತಿದೆ. ದಿನದ ಕೆಲಸದಿಂದ ದಣಿದು ಸುಗ್ಗಾಗಿ ಮನೆ ಸೇರಿದ ಗಂಡನು ತನ್ನ ಕೆರಳಿದ–ಬೇಸತ್ತ–ಮನಸ್ಥಿತಿಯಲ್ಲಿ, ಹೆಂಡತಿಯೆಂಬ ಸನಾತನ ಶತ್ರುವನ್ನು ಎದುರಿಸಬೇಕಾಗುತ್ತದೆ. ಆಕೆಯು ತನ್ನ ಎಲ್ಲ ಶಕ್ತಿ–ಶಸ್ತ್ರಗಳನ್ನು ಸಜ್ಜುಗೊಳಿಸಿ, ಹಲವೊಮ್ಮೆ ಬೊಜ್ಜುಗಳಿಸಿ, ಹೋರಾಟಕ್ಕಾಗಿ ಹೊಸ ಹುರುಪಿನಿಂದ ಕಾಯುತ್ತಿರುತ್ತಾಳೆ! ಆಕೆಯ ವೇಷ ಆವೇಶಗಳನ್ನು ಕಂಡು, ಯುದ್ಧಪ್ರಾರಂಭವಾಗುವ ಮೊದಲೇ ಗಂಡು ಸೋತಿರುತ್ತಾನೆ!

## ಅಬಲೆಯ ಬಲ!

'ಇನ್ನೊಮ್ಮೆ ಯತ್ನವಾಡು' ಇದು ಗಂಡಿಗೆ ಗೆಲವಿನ ಗುಟ್ಟು. ಆದರೆ

‘ಇನ್ನೊಮ್ಮೆ ಅತ್ತು ನೋಡು.’ ಇದು ಹೆಣ್ಣಿನ ವಶದ ಸೂತ್ರ. ಹೆಣ್ಣಿನೊಡನೆ ಸೆಣಸಾಟದಲ್ಲಿ ಗಂಡು ಒಮ್ಮೆ ಗೆಲ್ಲಬಹುದು. ಇನ್ನೊಮ್ಮೆ ಗೆಲ್ಲಲೂಬಹುದು. ಕಾಡಿ ಬೇಡಿ ಇದಿರಾಡಿ ಸೋತ ಹೆಣ್ಣು ಕೊನೆಗೆ ‘ಅಶ್ರುವಾಯು’ವನ್ನು ಪ್ರಯೋಗಿಸುವಳು. ನಿಟ್ಟುಸಿರಿನ ಬಿರುಗಾಳಿಯೊಡನೆ ಸುರಿಸುವ ಕಣ್ಣೀರಿನ ಜಡಿಮಳೆಯಲ್ಲಿ ಗಂಡಿನ ಸಿಡಿಗುಂಡುಗಳೆಲ್ಲ ತೋಯ್ದು ಹಾಳಾಗುವವು. ಅವನ ಗಂಡೆದೆಯೂ ಕರಗಿ ತಣ್ಣಗಾಗುವದು. ಕಣ್ಣೀರಿನ ಈ ‘ಪರ್ಜನ್ಯಾಸ್ತ್ರ’ದ ಪ್ರಯೋಗದ ತಂತ್ರ ಹೆಣ್ಣು ಬಹಳ ಚೆನ್ನಾಗಿ ಬಲ್ಲಳು.

ಇರಲಿ. ಹೆಣ್ಣು ಸಾಮಾನ್ಯವಾಗಿ ಕರ್ಮೇಂದ್ರಿಯಗಳ ಕೆಲಸದಲ್ಲಿ ಹಿಂದೆ ಬೀಳುವಳು. ಜ್ಞಾನೇಂದ್ರಿಯಗಳೇ ಆಕೆಯ ಪ್ರಪಂಚ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಎಲ್ಲ ಚಾತುರ್ಯ-ಮಾಧುರ್ಯಗಳೂ ಹೆಣ್ಣಿಗೇ ಮೀಸಲು. ಅಂಬೆಗಾಲಿಡುವದು, ಹೊಟ್ಟೆ ಹೊಸೆದು ಹರಿದಾಡುವದು, ನಡೆಯುವದು, ಬೀಸಿ ಒಗೆಯುವದು, ಹಾರಾಡುವದು, ಜಿಗಿಯುವದು, ಮರ ಮುಂತಾದವುಗಳನ್ನು ಏರುವದು, ಓಡುವದು ಅಥವಾ ಇವೆಲ್ಲ ಚಲನವಲನ ಪ್ರಧಾನವಾದ ಚಟುವಟಿಕೆಗಳ ಆಟಗಳಲ್ಲಿ ಮೇಲಾಗುವದು ಹೆಣ್ಣಿಗೆ ಅಷ್ಟು ನಿಶ್ಚಿತವಾಗಿ ಸಾಧ್ಯವಿಲ್ಲ. ಇವೆಲ್ಲ ಗಂಡಿನ ಕೌಶಲ್ಯ ಕ್ಷೇತ್ರಗಳು. ಇನ್ನು ನಿಯಮಕ್ಕೆ ಅಪವಾದಗಳಿಲ್ಲದಿಲ್ಲ. ಈಜುವದರಲ್ಲಿ, ಅಂಗಸಾಧನೆಯ ಹುರಿಯಾಟಗಳಲ್ಲಿ ಹೆಸರಾದ ಹೆಣ್ಣುಗಳಿದ್ದಾರೆ. ಆದರೆ ಅವರೆಲ್ಲ ಬರೇ ಹೆಸರೆಣಿಕೆಗೇ. ಹೆಣ್ಣಿನ ಜನ ಸಮುದಾಯವೆಲ್ಲ ಇಂಥ ಕೈಕಾಲುಗಳ ಚಟುವಟಿಕೆಗಳಿಂದ ದೂರವಿರುವದು. ಅಂತೆಯೇ ಹೆಣ್ಣು ಹಂಸಗಮನೆ-ಗಜಗಮನೆಯೆಂದು ನಮ್ಮ ಪೂರ್ವಿಕರು ಬಣ್ಣಿಸಿರಬೇಕು. ಈ ಚಟುವಟಿಕೆಗಳೆಲ್ಲ ಆಕೆಯ ಅಲಂಕಾರದ ಹಾಗೂ ಕಲಾವಿಲಾಸದ ರೀತಿಯಲ್ಲಿ ಬರುತ್ತವೆ. ಇವೆಲ್ಲ ಚಟುವಟಿಕೆಗಳಲ್ಲಿ ಗಂಡೇ ಬಲುಮೆಯಿಂದ ನಡೆಯುತ್ತಾನೆ.

ಅಷ್ಟೇ ಅಲ್ಲ. ಹೆಣ್ಣು ಚಲನವಲನಗಳ ಮಟ್ಟಿಗೆ ಹೆಚ್ಚಿನ ಸಂಯಮವನ್ನೂ ಸ್ಥೈರ್ಯವನ್ನೂ ಕಾಣಿಸುತ್ತಿದ್ದರೆ, ಅದಕ್ಕೆ ಪ್ರತಿಯಾಗಿ ಗಂಡು ಆ ಕುರಿತು ವಿಶೇಷ ಮತ್ತು ವಿಪರೀತ ಚಂಚಲತೆಯನ್ನು ತೋರಿಸುತ್ತಾನೆ. ಹೆಣ್ಣು ಅತಿರೇಕದ ಸ್ಥಿತಿಸ್ಥಾಪಕಳಿದ್ದರೆ ಗಂಡು ಅನವಶ್ಯಕವಾಗಿ ಗತಿಪ್ರಿಯನೂ, ಪ್ರಯೋಜನಕ್ಕೂ ಮಿಗಿಲಾಗಿ ಚಂಚಲ ಚಲನವಲನದವನೂ ಆಗಿರುತ್ತಾನೆ. ಅಂತೆಯೇ ಗಲಭೆ ಗೊಂದಲಗಳಿಗೆಲ್ಲ ಗಂಡೇ ಮುಂದಾಳು. ಹೆಣ್ಣು ‘ಗುಂಡ’ರಾಗುವದು ಕಂಡು ಬರುವದಿಲ್ಲ. ಹೆಣ್ಣು ‘ಗೃಹಿಣಿ’ಯಾಗಿರುವದೂ ಅದಕ್ಕಾಗಿಯೇ ಸರಿ. ಪೇಟೆಯ ಪಾರುಪತ್ಯ, ಸಂತೆಯ ಸಂದಣಿ, ಸಂಚಾರದ ಚಾಕರಿ ಇವೆಲ್ಲ ಎಂದಿಗೂ ಗಂಡಿನ

ಪೋರೆಗಳಾಗಿಯೇ ಉಳಿದಿವೆ. ಹೊಸಯುಗದ ಹೆಣ್ಣು ತನ್ನ ಮನೆಯ ಒಡತಿಯಾಗಿ ಮಡಿಯುವದರ ಬದಲು, ಆಪ್ತ ಕಾರ್ಯದರ್ಶಿಯಾಗಿಯೋ, ಅಧ್ಯಾಪಿಕೆಯಾಗಿಯೋ. ಟಂಕಲೇಖಿಕೆಯಾಗಿಯೋ ಕಚೇರಿಯಲ್ಲಿಯ ಕೋಣೆಯ ಸಿಂಗಾರವನ್ನೇ ಹೆಚ್ಚಿಸುತ್ತಾಳೆ. ಈಗಿತ್ತಲಾಗಿ ಪ್ರವಾಸ ಸೌಕರ್ಯಕ್ಕೆ ಸೌಂದರ್ಯದ ಕಳೆಯನ್ನೂ ಸೌಕುಮಾರ್ಯದ ಕಳೆಯನ್ನೂ ಪೂರೈಸಲು ವಿಮಾನ ಸಾರಿಗೆಯಲ್ಲಿ (Air Hostess) ಏರ್ಪಾಡು ಆಗಿದೆ. ಆಕೆಯ ಕೆಲಸವಾದರೂ, ವಿಮಾನದಲ್ಲಿ ಇರುವಷ್ಟು ಸಮಯ ಪ್ರಯಾಣಿಕರ ಯೋಗಕ್ಷೇಮವನ್ನು ನೋಡಿಕೊಳ್ಳುವದೇ ಇರುತ್ತದೆ. ಅಂದರೆ ಒಂದೆಡೆಗೆ ಕೂತಿರುವದು. ವಿಶೇಷ ಮೈ ಕೈಗಳ ಸಡಿತವಿಲ್ಲದ ವ್ಯವಸಾಯದಲ್ಲಿ ತೊಡಗಿರುವದು ಹೆಣ್ಣಿಗೆ ಯಾವಾಗಲೂ ಇಷ್ಟ.

ಅಂತೆಯೇ ಯುದ್ಧದಲ್ಲಿ ಪ್ರತ್ಯಕ್ಷ ರಣರಂಗದಲ್ಲಿ ಕಾದಾಡಲು ಹೆಣ್ಣು ಹೋಗುವದು ಕಡಿಮೆ. ಯುದ್ಧಖಾತೆಯ ಹಲವು ಕಚೇರಿಗಳಲ್ಲಿ ಆಕೆ ಕೆಲಸ ಮಾಡುವಳು; ಇಲ್ಲವೇ ಯುವಕ–ಪುರುಷರೆಲ್ಲ ಸೈನ್ಯ ಸೇರಿ ತೆರವುಬಿದ್ದ ನಾಗರಿಕ–ಸೌಕರ್ಯದ ವಿವಿಧ ಉದ್ಯೋಗಗಳಲ್ಲಿ ಆಕೆ ಸೇರಿ ದುಡಿಯಬಹುದು; ಕೊನೆಯದಾಗಿ ಮನೆಯಲ್ಲಿಯೇ ಕುಳಿತು ಸೈನಿಕರಿಗಾಗಿಯೋ, ಯುದ್ಧಕೈದಿ–ಗಾಯಾಳು–ರೋಗಿಗಳಿಗಾಗಿಯೋ ಕಾಲು ಚೀಲಗಳನ್ನು ಬಟ್ಟೆ–ಬೂಟುಗಳನ್ನು ತಯಾರಿಸುವಳು.

ಇತಿಹಾಸಕಾಲದಲ್ಲಿಯೂ, ಹೆಣ್ಣು ಸೇನಾಪತಿಯಾಗಿ ಕಾದಾಡಿದ್ದು ಕಡಿಮೆಯೇ. ಜೋನ್ ಆಫ್ ಆರ್ಕ, ಝಾಂಸೀ ಲಕ್ಷ್ಮೀಬಾಯಿ, ಕಿತ್ತೂರ ಚೆನ್ನಮ್ಮ, ಇವೆಲ್ಲ ಹೆಸರುಗಳನ್ನು ಇಲ್ಲಿ ನೆನಪಿಟ್ಟುಕೊಂಡೇ ಈ ಮಾತು ಬರೆದಿದೆ. ನಮ್ಮಲ್ಲಿಯ ರಜಪೂತ ವೀರಾಂಗನೆಯರ ಸಾಹಸ ತಮ್ಮ ಗಂಡು ಜನವನ್ನೆಲ್ಲ ತಿಲಕಹಚ್ಚಿ ಯುದ್ಧಕ್ಕೆ ಕಳಿಸಿ, ತಾವು ಉರಿಯುವ ಚಿತೆಯಲ್ಲಿ ಜೀವಂತ ಹಾರಿಕೊಂಡು ಸುಟ್ಟು ಸಾಯುವದರಲ್ಲಿಯೇ, 'ಜೋಹಾರ' ಮಾಡುವದರಲ್ಲಿಯೇ ಹೆಚ್ಚು ಕಂಡು ಬರುತ್ತದೆ. ವೀರಗಲ್ಲುಗಳೆಲ್ಲ ಕನ್ನಡ ದೇಶದಲ್ಲಿ ಗಂಡಿನಪಾಲಿಗೆ. ಹೆಣ್ಣಿನ ಅಮರ ಧೈರ್ಯದ ಸ್ಮಾರಕಗಳೆಲ್ಲ ಮಾಸ್ತಿಗಳು. ಇರಲಿ.

## ಆಲಸ್ಯದಲ್ಲಿ ಲಾಸ್ಯ

ಈ ಶಾರೀರಿಕ ಚಟುವಟಿಕೆಯಲ್ಲಿ ಹಿಂಜರಿಯುವದರ ಇನ್ನೊಂದು ಪರಿಣಾಮವೆಂದರೆ ಹೆಣ್ಣಿನಲ್ಲಿ ಆಲಸಿಕೆ – ಸೋಮಾರಿತನ ಹೆಚ್ಚು. ಆಕೆ ಸ್ವಭಾವದಿಂದಲ್ಲವಾದರೂ ಶರೀರದ ಬಲದಿಂದ ಮಂಥರೆ, ಮಂದಾಲಸೆ! ಆದರೆ ಈ ಆಲಸಿಕೆಯ ಮೂಲಕವೇ

ಆಕೆಯು ಹೆಚ್ಚು ಘಾತುಕಿ. ಅಲಸಿಕೆಯಲ್ಲಿ ಅಲ್ಲದ ಲಾಲಸೆ ಮೊಳೆತು ಬಲಿಯುವ ಭೀತಿ ಹೆಚ್ಚು. ಮೈ ಮುರಿದು ಚಟುವಟಿಕೆಯಲ್ಲಿ ತನುಮನದಿಂದಲೂ ತೊಡಗಿದವರಿಗೆ ಕಾಮುಕತೆಯಾಗಲೀ ವಿಷಯ ಲೋಲುಪತೆಯಾಗಲೀ ತಲೆದೋರಲು ಅವಕಾಶ-ಅನುಕೂಲತೆಗಳು ಸಹಸಾ ಸಿಗುವದಿಲ್ಲ. ಹಿಡಿದ ಕಾರ್ಯದ ಆಲೋಚನೆ, ಕಾರ್ಯಕ್ಕಾಗಿ ರೂಪಿಸುವ ಕಲ್ಪನೆ ಇವುಗಳಲ್ಲಿಯೇ ವ್ಯಕ್ತಿಯ ಲಕ್ಷವೆಲ್ಲಶೇಖರಿಸಿ ಶ್ರಮಪಡುತ್ತಿದ್ದರೆ ಅದರಿಂದಲೇ ಮನಃಶುದ್ಧಿಯೂ ಮನಃಶಾಂತಿಯೂ, ಮನಃಶಕ್ತಿಯೂ ಬೆಳೆಯುವವು. ಆದರೆ ಅಲಸಿಕೆ, ಮೈಮನದ ಬಿಡುವು-ಬೇಸರಿಕೆಗಳೇ ಎಲ್ಲ ಪಾಪಲೋಭಗಳಿಗೆ ತಂದೆ-ತಾಯಿಗಳು. ಬೇಸರಿಕೆಯನ್ನು ಕಳೆಯಲು ಹೊಣೆಯಿಲ್ಲದ, ಹೊರೆಯಾಗದ, ಏನಾದರೊಂದು ಹಗುರಾದ, ಹುರುಪಾದ ಚಟುವಟಿಕೆ ಅಲಸಿಕೆಯವರಿಗೆ ಬೇಕೆನಿಸುತ್ತದೆ. ಆಗ ಸಲ್ಲದ ಯೋಜನೆಗಳು ಹೊಸತಾಗಿ ಬರುವವು. ಮತ್ತು ಈ ನಾವಿನ್ಯವೇ ಯಾವದೇ ಮೋಹದ ಅಭೇದ್ಯ ಶಕ್ತಿಯಾಗಿರುತ್ತದೆ.

ಹೆಣ್ಣಿಗೆ ಅಲಸಿಕೆ ಸಹಜ. ಈ ನಾವಿನ್ಯದ ಮೋಹವೂ ಅಷ್ಟೇ ಸ್ವಾಭಾವಿಕ. ಜಿಂಕೆಯೊಡನೆ ಆಡುವದು ಆಕೆಗೆ ಒಂದು ಸೊಗಸಿನ ಚೆನ್ನಾಟವಾಗುವದು. ಹೀಗೆ ಹೆಣ್ಣಿನ ಆಲಸ್ಯವು ಅಬಾಧಿತವಾಗಿ ಅಭಿಸಾರಕ್ಕಾಗಲೀ ವ್ಯಭಿಚಾರಕ್ಕಾಗಲಿ ಆಕೆಯನ್ನು ಎಳೆಯುವ ಸಂಭವವಿದೆ. ಅದರ ಅರ್ಥ-ಪ್ರತಿಯೊರ್ವ ಹೆಣ್ಣು ಅಡ್ಡ ಹಾದಿಗೆ-ತಪ್ಪು ಹೆಜ್ಜೆಗೆ ಇಳಿಯುತ್ತಾಳೆಂದಲ್ಲ. ಅಲಸಿಕೆಯು ಸೈತಾನನ ಕೈಗೆಲಸಕ್ಕೆ ತಕ್ಕ ಅನುವೆಂಬುದು ನಿಜವಿದ್ದರೆ, ಇಂಥ ಘಾತುಕ ಅವಸ್ಥೆಯು ಗಂಡಿಗಿಂತ ಹೆಣ್ಣಿಗೇ ಬರುವ ಸಂಭವ ಹೆಚ್ಚು. ಮದುವೆಯ ಮೊದಲು ಊರಿಗೆಲ್ಲ ಮಾಟಗಾರ್ತಿಯೆಂದು ಹೆಸರಾಗಿ ಹಿರಿಯರ ರೊಚ್ಚಿಗೂ ಹರೆಯದವರ ರುಚಿಗೂ ಆಸ್ಪದರಾದ ಎಷ್ಟೋ ಹೆಣ್ಣುಗಳು, ಮದುವೆಯಾದ ಮೇಲೆ, ಮಡದಿಯರಾಗಿ ತಮ್ಮ ತಮ್ಮ ಮನೆಮಕ್ಕಳ ಒಡತಿಯರಾದ ಮೇಲೆ, ಮಾದರಿಯ ಮುತ್ತೈದೆಯರಾಗಿ ಬಾಳನ್ನು ಸುಖವಾಗಿ ಸಾಗಿಸುವದು ಕಂಡುಬರುತ್ತದೆ. ಇದರ ರಹಸ್ಯವಿಷ್ಟೇ-ಗಂಡನ್ನು ಆಕರ್ಷಿಸುವ ಹೆಣ್ಣಿನ ಸಹಜ ಮನೋಧರ್ಮ ವಯೋಧರ್ಮಗಳಿಗೆ ಹೊಸ ಯೌವನದಲ್ಲಿ ಅನುಕೂಲ ಅವಕಾಶವು ದೊರೆತು ವಿವಿಧ ವಿಲಾಸ ವಿಭ್ರಮಗಳಿಗೆ ಆರಂಭವಾಗುತ್ತದೆ- ಮಾಗಿಯ ಮೊದಲು ಮರಗಳೆಲ್ಲ ಹೂತು ಅರಳಿ " ವಿರಾಗಿ ಭೃಂಗ "ಗಳಿಗೆ " ಕಂಪಿನ ಕರೆ " ಯನ್ನು ಸರಾಗವಾಗಿ ಸಾರುವಂತೆ ಕಾತು ಹಣ್ಣಾಗುವ ಹದ ಬಂದಾಗ ಹೂಗಳ ಬೆಡಗು ಬಣ್ಣಗಳಿಗೆ ಎಲ್ಲಿ ಆಸ್ಕರ ?

ಆದರೆ ಇಷ್ಟೊಂದು ನಿಜ. ಹಾದಿತಪ್ಪಿ ಹೆಜ್ಜೆ ಇಡಲು ಗಂಡು ದುಡುಕುತ್ತಿದ್ದರೂ

ಅವಕ್ಕೆ ಅಸುವು ಸಿಗುವದು ಹೆಣ್ಣಿನ ಅನುಮತಿಯಿಂದಲೇ. ಹೆಣ್ಣಿನ ಪ್ರಕಟ ಇಲ್ಲವೇ ಮೂಕ ಉತ್ತೇಜನವಿಲ್ಲದೇ ಯಾವ ಗಂಡೂ ಕಾಮಾಚಾರಕ್ಕಾಗಲಿ ಸ್ವೈರವೃತ್ತಿಗಾಗಲೀ ಒಮ್ಮೆಲೇ ಇಳಿಯಲಾರನು. ಒಮ್ಮೆ ಅನುವು ಸಿಕ್ಕರೆ ಗಂಡು ಯಾವ ಪಾತಕಗಳಿಗೂ ಇಳಿದು ಹೆಣ್ಣನ್ನು ಹಾಳುಗೆಡಿಸುವ ನೀಚನಾಗಬಹುದು. ಆದರೆ ಬಲಾತ್ಕಾರದ ಪ್ರಸಂಗಗಳನ್ನು ಬಿಟ್ಟರೆ, ಗಂಡು ತಾನಾಗಿ ಹೆಣ್ಣಿನೊಡನೆ – ತನಗೆ ತಾತ್ಸಾರ ಮಾಡಬಹುದಾದ ಹೆಣ್ಣಿನೊಡನೆ – ಅತಿಪ್ರಸಂಗ ಮಾಡಲು ಧೈರ್ಯಪಡುವದಿಲ್ಲ. ಅಂತೆಯೇ ಹೆಣ್ಣಿನ ಹಿತದಂತೆ ಗಂಡಿನ ಹೊಣೆಗಾರಿಕೆಯ ದೃಷ್ಟಿಯಿಂದಲೂ ಹೆಣ್ಣನ್ನು ಅಲಸಿಕೆಯಲ್ಲಿ ಇಡುವದು ಗಂಡಾಂತರದ್ದು ! ಸುಖದಂತೆ ಶೀಲದ ಹಾದಿಯೂ ಕಾರ್ಯತತ್ಪರತೆಯದೇ ಸರಿ. ●

## ೨

ಇದುವರೆಗಿನ ಚರ್ಚೆ ವ್ಯಕ್ತಿ ಹಾಗೂ ವಂಶಗಳ ದೃಷ್ಟಿಯಿಂದ ಗಂಡು – ಹೆಣ್ಣಿನ ಪ್ರಕೃತಿ–ವಿಕೃತಿಗಳ ವಿವರಗಳ ಕುರಿತಾಯಿತು. ಸಾಮಾನ್ಯವಾಗಿ ವ್ಯಕ್ತಿಯನ್ನು ವ್ಯಕ್ತಿಯ ರೂಪದಲ್ಲಿ ವಂಶವನ್ನು ಉಳಿಸಿ ನಡೆಯಿಸುವ ಮೂಲಪ್ರವೃತ್ತಿಗಳಲ್ಲಿ ಗಂಡಿಗೆ ಲಭಿಸಿರುವ ಶ್ರೇಷ್ಠತೆಯು ಪ್ರತ್ಯಕ್ಷವೇ ಇದೆ– ಅಷ್ಟೇ ಸ್ವಾಭಾವಿಕವೂ ಆಗಿದೆ. ಆದರೆ ಸಮಾಜವನ್ನು ಮಾನವ ಸಮುದಾಯವನ್ನು ಉಳಿಸಿ ಬೆಳಿಸಲು ಉಪಯೋಗಿಯಾಗುವ ಮೂಲ ಪ್ರವೃತ್ತಿಗಳಲ್ಲಿ ಹೆಣ್ಣೇ ಶ್ರೇಷ್ಠಳಾಗಿರುತ್ತಾಳೆ. ಅಂಥ ಸಾಮಾಜಿಕ ಗುಣದೋಷಗಳಿಗೆ ಪ್ರೇರಕವಾಗುವ ಪ್ರವೃತ್ತಿಗಳ ವಿಷಯ ಇನ್ನು ಚರ್ಚೆ ಮಾಡೋಣ.

ಗಂಡಿಗಿಂತಲೂ ಹೆಣ್ಣು ಹೆಚ್ಚು ಸಾಮಾಜಿಕಳು: ಸಮಾಜಪ್ರಿಯಳು. ಮಂದಿಯೊಡನೆ ತಾನೂ ಕಲೆತು, ಮಂದಿಗೂ ತನ್ನೊಡನೆ ಕಲೆಯಲು ಅನುವು ಮಾಡಿಕೊಡುವಳು. ಹೆಣ್ಣಿನಲ್ಲಿ ಏಕನಿಷ್ಠ ಗೆಳೆತನ ವಿರಳವೆಂದರೂ, ಹಲವು ಜತೆಗಾತಿಯರೊಡನೆ ಒಡನಾಡಿ ತುಂಬ ಸುಖಪಡೆಯುವ ಸಹವಾಸಪ್ರಿಯತೆ ಆಕೆಯಲ್ಲಿದೆ. ಏಕಾಂತವೂ ಏಕಾಕಿಯಾಗಿರುವದೂ ಆಕೆಗೆ ಅಷ್ಟು ಸೇರದು. ಪರಿವಾರ, ಜನಸಂದಣಿ, ಕ್ಲಬ್ಬು, 'ಸಮಾಜ' 'ಮಂಡಳ'ಗಳ ಆಕರ್ಷಣ ಆಕೆಗೆ ಹೆಚ್ಚು. ಜಾತ್ರೆಯ ಜನಜಂಗುಳಿಯಲ್ಲಿ ತನ್ನನ್ನು ಮರೆತು ಹೆಣ್ಣು ಸಮರಸಳಾಗಿಬಿಡುತ್ತಾಳೆ. ನಾಟಕ, ಸಿನೇಮಾಕ್ಕೆ ಹೋಗುವ ಮುನ್ನ ಆಕೆಯು ಕೇಳುವ ಪ್ರಶ್ನೆ–'ಯಾವ ಕಥೆ ? ಯಾವ ಚಿತ್ರ ? ಎಷ್ಟು ಚಂದ ?' ಎಂಬುದಲ್ಲ; ಯಾವ ನಾಟಕ ಸಿನೇಮಾಕ್ಕೆ ಬಹಳ ಜನ ನೋಡಲು ಹೋಗುತ್ತಾರೆಂಬುದೇ ಆಕೆಯ ಮಹತ್ವದ ಸಂಗತಿ. ಹಲವು ಮೆಚ್ಚಿದ ಪುಸ್ತಕವಾಗಲೀ, ಚಿತ್ರಪಟವಾಗಲೀ, ಉಪಹಾರಗೃಹವಾಗಲೀ, ಸೀರೆಯ ಮಾದರಿಯಾಗಲೀ ಆಕೆಗೆ ಬೇಕು–ಅದೂ ಜನರೆಲ್ಲ ಮೆಚ್ಚಿದರೆಂದೇ ಬೇಕು. ಚರಖಾ–ಖಾದಿ ಹಿಂದೀ ಪ್ರಚಾರದಲ್ಲಿ ಹುಚ್ಚು ಹುಮ್ಮಸದಿಂದ ಮುಂದೆ ನುಗ್ಗುವ ಮಂದಿಯಲ್ಲಿ ಹೆಣ್ಣಿಗೆ ಹಿಂದೆ ಹಾಕುವವರು ಯಾರೂ ಇಲ್ಲ. ವಯೋವೃದ್ಧ ಹೆಂಗಸರು ಕೂಡ ಕಂಕುಳಲ್ಲಿ 'ಪಹಲೀಕಿತಾಬ' ಇಟ್ಟುಕೊಂಡು ಶಿಕ್ಷಣ ವರ್ಗಗಳಿಗೆ ಭಕ್ತಿಯಿಂದ ಓಡುವದನ್ನು ನೀವು ನೋಡಿರಬಹುದು ! ಹೀಗೆ ಗಂಡಿಗಿಂತಲೂ ಹೆಣ್ಣಿನ ಮೇಲೆ ಲೋಕಮತದ ಪ್ರಭಾವ ಬಹಳ ಬೇಗ ಆಗುತ್ತದೆ.

ಅದೇ ಮೇರೆಗೆ ಹೆಣ್ಣಿಗಿಂತ ಗಂಡಿಗೆ ಈ ಜನ ಮರುಳುತನ ಕಡಿಮೆಯೆನ್ನಬಹುದು.

ಅದಕ್ಕೆ ಪ್ರತಿಯಾಗಿ ಹಲವು ಸಲ ಗಂಡು ತನ್ನದೇ ಆದ ಪಂಥವನ್ನೋ ಪದ್ಧತಿಯನ್ನೋ ಆರಂಭಿಸುವದುಂಟು. ಅನುಸರಿಸುವದುಂಟು: 'ಮೂರನೇ ದಾರಿ'ಯು 'ಮುರಾರಿ'ಯು ಗಂಡಸೆಂಬುದು ನೆನಪಿಡಬೇಕು. ಹಾಗೆಯೇ ಗಂಡಿಗೆ ಏಕಾಂತಪ್ರಿಯತೆ ಹೆಚ್ಚು: ಒಂಟಿಯಾಗಿ ಇರಬಲ್ಲನು. ಜಗತ್ತಿನ ಸಾಧು–ಸಂತ, ಯೋಗಿ–ಮಹಂತರಲ್ಲಿ ಗಂಡೇ ಹೆಚ್ಚು. ಮೀರಾಬಾಯಿ, ಸೇಂಟ ಥೆರೆಸಾ ಮುಂತಾದವರು ಅಪವಾದ-ಯೋಗಸಾಧನೆ ತಪಾನುಷ್ಠಾನಗಳಿಗೆ ಅಗತ್ಯವಿರುವ ಏಕಾಂತ ಸೇವನೆಯು ಹೆಣ್ಣಿನ ಪ್ರಕೃತಿಗೇ ಒಗ್ಗದು. ಅಂತೆಯೇ ಆಕೆ ಗೃಹಿಣಿ. ವಾನಪ್ರಸ್ಥ. ಸಂನ್ಯಾಸ ಹೆಣ್ಣಿಗೆ ಮೀಸಲಿಲ್ಲ. ಇಲ್ಲಿ ಇನ್ನೊಂದು ವಿಚಾರ–ಹೆಣ್ಣಿಗೆ ಜತೆ ಒಡನಾಟ ಬೇಕು. ಅದೂ ಕೆಲಕಾಲದ ಮಟ್ಟಿಗೆ ಇತರ ಹೆಣ್ಣಿನೊಡನೆಯಾದರೂ: ಚಿರಕಾಲದ ಬಗ್ಗೆ ಗಂಡಿನೊಡನೇ ಬೇಕು. ವೈರಾಗ್ಯವೆತ್ತಿ ಯಾರಾದರೂ ಹೆಣ್ಣು ಯೋಗಿನಿಯಾದರೂ ಆಕೆಯ ಆರಾಧ್ಯದೈವತವು ರಾಮನೋ ಕೃಷ್ಣನೋ (ಹೆಚ್ಚಾಗಿ ಕೃಷ್ಣನೇ!) ಆಗಿರುವದು ಕಂಡುಬರುತ್ತದೆ. ಸ್ತ್ರೀ ಭಕ್ತರು ಸ್ತ್ರೀ ದೈವತವನ್ನು ಆರಾಧಿಸಿದ್ದು–ಅಂದರೆ ತಮ್ಮ ಇಷ್ಟ ದೈವತವೆಂದು ಅನನ್ಯವಾಗಿ ಪೂಜಿಸಿದ್ದು ಬಹಳೇ ಕಡಿಮೆ. ಕಾಂತಭಕ್ತಿ, ಮಧುರಭಕ್ತಿ ಇವೆಲ್ಲ ಹೆಣ್ಣು ಹೃದಯದ ಅವತಾರಗಳು! ಇದು ಸಹಜವೇ ಸರಿ. ಹೆಣ್ಣಿಗೆ (ಇಹದಲ್ಲಿಯಾಗಲಿ, ಪರದಲ್ಲಿಯಾಗಲಿ,) ಗಂಡಿನ ರಕ್ಷಣೆಯೂ ಯಾವಾಗಲು ಆತನ ಮುಂದಾಳುತನವೂ ಅವಶ್ಯವೆನಿಸುತ್ತದೆ – ಅಂತೆಯೇ ಗಂಡನೇ ದೇವರಾಗಬೇಕು ! ಕೊನೆಗೆ ಗಂಡುದೇವರಾದರೂ ಬೇಕು.

## ಕುಂತಿಯ ಶಾಪ ನಿಜವೆ ?

ಈ ಸಮಾಜಪ್ರಿಯತೆಯ ಇನ್ನೊಂದು ಪರಿಣಾಮವೆಂದರೆ, ಆಕೆಯ ವಾಚಾಳಿತನ. ಗಂಡಿಗಿಂತ ಹೆಣ್ಣು ಹೆಚ್ಚು ಮಾತುಗುಳಿ. ಗುಟ್ಟು ರಟ್ಟುಮಾಡುವವರಲ್ಲಿ ಹೆಣ್ಣು ಗಟ್ಟಿಗಳೆಂದು ಲೋಕಾಪವಾದವೇ ಇದೆ. ಹೆಣ್ಣಿನ ನಾಲಿಗೆಯಲ್ಲಿ ಎಳ್ಳು ನೆನೆಯದೆಂದು ಗಾದೆಯ ಮಾತೇ ಇದೆ. ಆದರೆ ರಹಸ್ಯಗಳನ್ನು ಬಚ್ಚಿಡುವಮಟ್ಟಿಗೆ ಹೆಣ್ಣು ಹೀಗೆ ದುರ್ಬಲಳೆಂದು ಹೇಳಲು ಬರುವಂತಿಲ್ಲ. ತನ್ನ ಎದೆಯಾಳದಲ್ಲಿ ಅಸಾಧ್ಯ ದುಃಖವನ್ನೂ ಗಂಭೀರ ರಹಸ್ಯವನ್ನೂ ಹುದುಗಿಸಿಟ್ಟುಕೊಂಡು ಆಯುಷ್ಯವೆಲ್ಲ ಆ ಕುರಿತು ಮಾತಿಲ್ಲದೇ ಕಳೆಯುವ ಹೆಂಗಸರಿದ್ದಾರೆ ! ಮೂಕ ವೇದನೆಯನ್ನೂ ಸಹಿಸುವದಂತೂ ಗಂಡಿಗಿಂತ ಹೆಣ್ಣಿಗೇ ಹೆಚ್ಚು ಸ್ವಾಯತ್ತಿಂದು ಹೋಗಿದೆಯೆಂಬುದನ್ನು ಹಿಂದೆಯೇ ಹೇಳಲಾಗಿದೆ. ಕರ್ಣನ ರಹಸ್ಯವನ್ನು ಕೊನೆಯತನಕವೂ ಬಚ್ಚಿಟ್ಟ ಕುಂತಿಯ ಗಂಭೀರ ಮೂರ್ತಿ ಮಹಾಭಾರತಕ್ಕೇ ಹಿನ್ನೆಲೆಯಾಗಿ ನಿಂತಿದೆ.

ಹೆಣ್ಣಿನ ಹೃದಯ ಒಂದು ಸಮಾಧಿ–ಎಷ್ಟೋ ಸಂತಪ್ತ, ಅಸಂತೃಪ್ತ ಆಶೆ–ಆಕಾಂಕ್ಷೆಗಳು, ವಿಕಾರ–ವೇದನೆಗಳು, ಹಂಬಲ–ಹಳಹಳಿಗಳು ಅಲ್ಲಿ ಹತ್ತಿಕ್ಕಿ ಹತವಾಗಿ ಬಿದ್ದಿವೆ. ಪುರುಷಪ್ರಧಾನವಾದ ಈ ಪ್ರಪಂಚದಲ್ಲಿ ಹೆಣ್ಣಿಗೆ ಈ ಮನೋದಮನ ಅನಾದಿಯಿಂದಲೂ ಮೈಯುಂಡು ಬಂದಿದೆ. 'ಒಳ ಒಳಗೆ ಕುದಿವ ಭೂಕಂಪ'ವಿದ್ದರೂ ಮೇಲೆ ಹುಲ್ಲಿನ ಹಸಿರು ತಂಪನ್ನೂ ಹೂವಿನ ನರುಗಂಪನ್ನೂ ಹಬ್ಬಿಸುವ ಭೂಮಿತಾಯಿಯಂತೆಯೇ ಹೆಣ್ಣಿನ ಹೃದಯ.

ಈ ದಮನ ಮಿಕ್ಕ ಹೆಣ್ಣುಗಳಿಗಿಂತಲೂ ಸುಸಂಸ್ಕೃತ. ಮೇಲ್ವರ್ಗದ ಗರತಿಯರಲ್ಲಿ ವಿಶೇಷ. ಇದಕ್ಕೆ ಚಿಕ್ಕದೊಂದು ಉದಾಹರಣೆ ಸಾಕು. ಸಮಾಜವು ಆಕೆಯ ಮೇಲೆಯೇ ಹೆಚ್ಚಾಗಿ ಹೇರಿದ ನಿಯಮ–ನಿರ್ಬಂಧಗಳ ನೈತಿಕ ಒತ್ತಾಯದಿಂದ ಹೆಣ್ಣಿನ ದಮನವು ಅತಿರೇಕವಾಗಿ ಆಕೆಯಲ್ಲಿ ಮಾನಸಿಕ ವಿಕೃತಿಗಳು ಒದಗಿಬರುವ ಸಂಭವ ಹೆಚ್ಚು. ಭೂತ ಸಂಚಾರ, ಸ್ವಪ್ನ ದೃಷ್ಟಾಂತ, ಮಜ್ಜಾತಂತುಗಳ ವಿಕೃತಿ–ಇವೆಲ್ಲ ಬಾಧೆಗಳಿಗೆ ಗಂಡಿಗಿಂತ ಹೆಣ್ಣು ಬಲಿಯಾಗುವದು ಹೆಚ್ಚು. ಇಂಥವುಗಳಲ್ಲಿ ಹುಚ್ಚಿನ ಉದಾಹರಣೆಯನ್ನೇ ತೆಗೆದುಕೊಂಡರೆ, ಸಾಧಾರಣವಾಗಿ ಕಂಡುಬರುವ ಒಂದು ಸಂಗತಿಯೇನೆಂದರೆ, ವೇಶ್ಯೆ ಅಥವಾ ಸ್ವೈರವೃತ್ತಿಯ ಕೀಳುತರಗತಿಯ ಒಂದು ಹುಚ್ಚಿಗಿಂತಲೂ, ಮೇಲ್ವರ್ಗದ ಸಾಧು ತರಗತಿಯ ಹುಚ್ಚಿಯ ವಿಕಾರಗೆಟ್ಟ ಬಡಬಡಿಕೆ ಹೆಚ್ಚು ಅಪದ್ಧ, ಅಶ್ಲೀಲ ಹಾಗೂ ಅಸಹ್ಯವೆನಿಸುವದು. ಅದೇಕೆ ? ಕಾರಣ ಸ್ಪಷ್ಟವಿದೆ. ಹುಚ್ಚಿನಲ್ಲಿ ಮನೋದಮನದ ನಿಯಂತ್ರಣವೇ ಇಲ್ಲವಾಗಿ ಬಿಡುತ್ತದೆ. ಆಗ ಅದುವರೆಗಿನ ದಮಿತವಾದ ವಿಕಾರಗಳೆಲ್ಲ ಹೊರಹೊಮ್ಮುತ್ತವೆ. ಮೇಲ್ವರ್ಗದ ಶಿಷ್ಟಾಚಾರ ಸುಸಂಸ್ಕಾರಗಳಲ್ಲಿ ಬೆಳೆದ ಹೆಣ್ಣಿನ ಮನೋದಮನ ಆತ್ಮಸಂಯಮ ಎಷ್ಟು ಪಾಲು ಬಿಗಿಯೋ, ಮಿಗಿಲೋ, ಅಷ್ಟುಪಟ್ಟು ಆಕೆ ಹುಚ್ಚಾಗಿದ್ದು, ಹೊರಬರುವ ವಿಕಾರಗೆಟ್ಟ ಬಡಬಡಿಕೆಯ ಅಶ್ಲೀಲ–ಅಸಹ್ಯತೆಗಳ ತೀವ್ರತೆ ಹೆಚ್ಚು. ಈ ಉದಾಹರಣೆಯಿಂದ ಹೆಣ್ಣಿಗೆ ದಮನ ಹೆಚ್ಚು ಎಂಬುದು ಮನವಟ್ಟಾಗುವದು.

## ಇಂಗಿತಜ್ಞರ 'ಮುಖ ಸಾಮುದ್ರಿಕ'

ಈ ಆತ್ಯಂತಿಕ ಉದಾಹರಣೆಯನ್ನು ಬಿಟ್ಟರೆ ಹೆಣ್ಣಿನ ಮನೋದಮನ ಇನ್ನೊಂದು ಪರಿಣಾಮವನ್ನು ನಾವು ಸಾಮಾನ್ಯವಾಗಿ ಕಾಣುವದು ಆಕೆಯ ಭಾವನೆವ್ಯಂಜನೆ. ಇದರ ಪ್ರತ್ಯಕ್ಷ ಪ್ರಭಾವವೆಂದರೆ ಆಕೆಯ ಭಾವವ್ಯಂಜನೆ. ಅಂದರೆ ವಿವಿಧ ಭಾವಭಂಗಿಗಳನ್ನು ಮುಖದಮೇಲೆ ವ್ಯಕ್ತವಾಗಿ ಬಿಂಬಿಸುವ ಬಗೆ. ಹೆಣ್ಣಿನ

ನಾಲಿಗೆಯಷ್ಟೇ ಮುಖಭಾವವೂ ಚಂಚಲ, ಅಳು-ಅಂಜಿಕೆ, ನಗು-ನಲವು, ಮುನಿಸು-ಮೂದಲಿಕೆ, ಬೆರಗು-ಬೆದರಿಕೆ ಇವೆಲ್ಲ ಅಲೆ-ಅಲೆಯಾಗಿ, ಛಾಯೆ-ಛಾಯೆಯಾಗಿ ಹೆಣ್ಣಿನ ಮೋರೆಯಲ್ಲಿ-ಕಣ್ಣಿನಲ್ಲಿ ಮೂಡಿ ಆಡುವವು. ತಾತ್ಕಾಲಿಕ ಭಾವ ಪರಿವರ್ತನಗಳನ್ನು ಹೀಗೆ ಪ್ರವಾಹಿಯಾಗಿ, ಪ್ರಕಟವಾಗಿ, ಪ್ರತಿಬಿಂಬಿಸುವ ಶಕ್ತಿಯೊಡನೆಯೇ ಪರರ ಮನೋಗತವನ್ನೂ, ಅಂತರಂಗದ ಇಂಗಿತವನ್ನೂ, ಅವರವರ ಮುಖಲಕ್ಷಣಗಳಿಂದ ತಟ್ಟನೆ ತಪ್ಪದೇ ಊಹಿಸುವ ಶಕ್ತಿಯೂ ಹೆಣ್ಣಿನಲ್ಲಿ ಗಂಡಿಗಿಂತಲೂ ವಿಶೇಷವಾಗಿ ಕಂಡುಬರುತ್ತದೆ. ತನ್ನ ಒಡನಾಡಿ ಹೆಂಗಸರ ಮುಖಮುದ್ರೆ-ಕಣ್ಸನ್ನೆಗಳಿಂದ ಅವರ ಎದೆಯಾಳದ ಭಾವನೆಗಳನ್ನು ಊಹಿಸಿಕೊಳ್ಳುವಂತೆಯೇ ಗಂಡಸಿನ ಅಂತರಂಗವನ್ನು ಕೂಡಲೇ ಅರಿತುಕೊಳ್ಳುವ ಈ ಹದ ಹೆಣ್ಣಿಗೆ ಹೆಚ್ಚಾಗಿ ಸಾಧ್ಯವಿದೆ. ಗಂಡನ ಮುಖಮುದ್ರೆಯಿಂದಲೇ ದಿನದ ಸುಖದುಃಖಗಳ 'ಗ್ರಹಚಾರ'ದ ಗಣಿತಹಾಕುವ 'ಸಾಮುದ್ರಿಕ'ವು ಹೆಣ್ಣಿಗೆ ಒಳ್ಳೇ ಹಸ್ತಗತವಾಗಿದೆ. ಅಂತೆಯೇ ತನ್ನ ಸಿಟ್ಟು ಹೊರಹೊಮ್ಮುವ ಮೊದಲೇ ಹೆಂಡತಿಯು ಅದನ್ನು ಮರೆಯಿಸುವದನ್ನೂ, ಸಂಶಯವು ತಲೆಯೆತ್ತುವ ಮೊದಲೇ ಅವರ ನಿರಸನದ ಮಾತನ್ನು ಹೆಣ್ಣು ಸಹಜವಾಗಿ ಆಡುವದನ್ನೂ, ತನ್ನ ಬೇಕು-ಬೇಡಗಳ ಹೊಲವರಿತು ಮುಂಚಿತವಾಗಿಯೇ ಹಾಗೆ ನಡೆಯುವದನ್ನೂ ಕಂಡು ಎಷ್ಟೋ ಗಂಡಂದಿರು ಬೆರಗಾಗುವದುಂಟು.

ಇದರ ಇನ್ನೊಂದು ಫಲವೆಂದರೆ-ಚತುರ ಗಂಡಿಗಿಂತಲೂ ಚತುರ ಹೆಣ್ಣಿಗೆ ಇತರ ಹೆಣ್ಣುಗಳ ಹಾಗೂ ಹೆಚ್ಚಾಗಿ ಇತರ ಗಂಡಸರ ಸ್ವಭಾವದ ಪರಿಜ್ಞಾನವು ಬಹು ಬೇಗ ಆಗುತ್ತದೆ. ತನ್ನ ಗಂಡನ ಇಷ್ಟ ಮಿತ್ರರಲ್ಲಿ ದುಷ್ಟನಾರು, ಶತ್ರುವಾರು ಎಂಬುದನ್ನು ಜಾಣ ಹೆಂಡತಿ ಮೊದಲೇ ಊಹಿಸುತ್ತಾಳೆ. ತನ್ನ ಮನೋಗತವನ್ನು ಹೆಣ್ಣು ಹೇಗೆ ಕಾಣಿಸಿ, ಹೆರವರನ್ನು-ಹೆಚ್ಚಾಗಿ ಗಂಡಸನ್ನು-ನಂಬಿಸಬಲ್ಲಳೋ ಹಾಗೆಯೇ ಹೆರವರ ಹಾಗೂ ಗಂಡಸಿನ ಬಹಿರಂಗದ ಹಾವಭಾವಗಳ ಆಳಕ್ಕೆ ಇಣಿಕಿ ನೋಡಿ ಹೆಣ್ಣು ಆತನ ಅಂತರಂಗವನ್ನು ಅರಿಯಬಲ್ಲಳು. ಆದ್ದರಿಂದ ಹೆಣ್ಣು ಪರರನ್ನು ವಂಚಿಸುವಷ್ಟು ತಾನು ಪರರಿಂದ ವಂಚಿತಳಾಗುವದಿಲ್ಲ. ಇದೇನು ಕಟ್ಟುನಿಟ್ಟು ನಿಯಮವಲ್ಲ. ತೀರ ಅಪರಿಚಿತ ವ್ಯಕ್ತಿಗಳಿಂದ ಹೆಣ್ಣು ಸಂಪೂರ್ಣ ಮೋಸ ಹೋಗುವದುಂಟು,-ಹೋದದ್ದುಂಟು. ರಾವಣನ ಸನ್ಯಾಸ ವನ್ನು ಸಾಧುವೆಂದು ಸೀತೆ ನಂಬಿ ಮೋಸ ಹೋಗಲಿಲ್ಲವೇ ?

ಆದರೂ ಒಮ್ಮೆ ಪರಿಚಿತರಾದಮೇಲೆ ಪರಿವಾರದವರಾದವರಲ್ಲಿ ಗಂಡಿಗಿಂತ ಹೆಣ್ಣು ಇನ್ನೊಬ್ಬರನ್ನು ಹೆಚ್ಚು ಅರಿತುಕೊಳ್ಳಬಲ್ಲಳು. ಇದರಿಂದ ಗಂಡಿಗಿಂತಲೂ

ಹೆಣ್ಣನ್ನು ಮೋಸಗೊಳಿಸುವದು ಹೆಚ್ಚು ಬಿಗಿಯಾಗುವದು. ಇದರ ಕಟು ಅನುಭವ ಎಷ್ಟೋ ಗಂಡಂದಿರಿಗೂ ಬಾರದೇ ಇಲ್ಲ. ತನ್ನ ತಪ್ಪು ಮುಚ್ಚಿಕೊಳ್ಳಲು ಎಷ್ಟೇ ಅಚ್ಚುಕಟ್ಟು ಸುಳ್ಳನ್ನು ಹೆಣೆದರೂ ಅದರ ಬಲೆಯೆಲ್ಲ ಹೆಂಡತಿಯ ಕಣ್ಣೆದುರು ಕಡಿದುಹೋಗುವ ಕಂಗೆಡಿಸುವ ಪ್ರಸಂಗಗಳು ಎಷ್ಟೋ ಗಂಡಂದಿರಿಗೆ ಬಂದಿವೆ !

ಈ ಸಹವಾಸದ ಪ್ರಿಯತೆ ಅಥವಾ ಸಾಮಾಜಿಕತೆಯೊಂದಿಗೇ ಹೆಚ್ಚು ಕಡಿಮೆ ಕೂಡಿರುವ ಗುಣವೆಂದರೆ-ಭೀರುತನ, ಅಂಜಿಕೆ. ಅಂಜಿಕೆಯದೇ ಇನ್ನೊಂದು ಛಾಯೆಯೆಂದರೆ-ಹಿಂಜರಿಕೆ, ಹಿಂದುಳಿಯುವಿಕೆ, ಯಾವದೇ ಸಂಗತಿಯಲ್ಲಿ ತಾನೇ ಉಪಕ್ರಮ ಮಾಡದಿರುವಿಕೆ. ಜೀವನದಲ್ಲಿ ಉಪಕ್ರಮ ಆರಂಭಗಳು ಗಂಡಿನ ಹೊಣೆ ಅನುಕರಣ, ಅನುಸರಣ ಹೆಣ್ಣಿನಹೆಜ್ಜೆ. ಹೀಗೆ ಗಂಡಿಗೆ ಮುಂದಾಗಲು ಬಿಡುವದು, ಗಂಡಿನಿಂದಲೇ ಮೊದಲು ಹೆಜ್ಜೆಯನ್ನು ಬಯಸುವದು, ಪ್ರೇಮ ಪ್ರಪಂಚದಲ್ಲಿಯೂ ಅಷ್ಟೇ ಸ್ಪಷ್ಟವಾಗಿ ಕಂಡು ಬರುತ್ತದೆ. ಗಂಡಿಗೆ ಸಲ್ಲುವ ಪ್ರಾಧಾನ್ಯ-ಪ್ರಭುತ್ವಗಳ ಅನುವು ಹೆಣ್ಣಿನ ಹಿಡಿಕೆಯಲ್ಲಿಯೇ ಇದೆ. ನೂರಕ್ಕೆ ತೊಂಭತ್ತು ಉದಾಹರಣೆಗಳಲ್ಲಿ ಗಂಡು 'ಪ್ರೀತಿಮಾಡುತ್ತಾನೆ !' ಹೆಣ್ಣು 'ಪ್ರೀತಿ ಮಾಡಲ್ಪಡುತ್ತಾಳೆ' ಅಥವಾ ಗಂಡಿಗೆ ತನ್ನನ್ನು ಪ್ರೀತಿಸಲು ಬಿಡುತ್ತಾಳೆ. ಹೆಣ್ಣಿನ ಸ್ವಭಾವದ ಈ ಮರ್ಮವನ್ನು ಅರಿಯದ ಗಂಡು ಕೆಲವೊಮ್ಮೆ ದಾರುಣ ದುರಂತಕ್ಕೆ ಗುರಿಯಾಗುವದುಂಟು.

ಹೊಸ ಪ್ರೇಮದ ಉನ್ಮಾದದಲ್ಲಿ ಕಾಮನೆಯ ನವೀನತೆಯ ಮದ್ಯವು ಗಂಡಿಗೆ ತನ್ನ ಪ್ರೇಮವನ್ನು ಹೆಣ್ಣಿನೆದುರು ವ್ಯಕ್ತಮಾಡಲು ಧೈರ್ಯವೀಯುವಷ್ಟು ಉದ್ರೇಕಗೊಳಿಸದೇ ಹೋದರೆ ಆ ಬಡಪಾಯಿಯು ಮನವಿದ್ದರೂ ಮನ ಬಿಚ್ಚಲು ಬಾಯಿ ಇಲ್ಲದೇ, ಅವನ ಪ್ರೇಮಯಾಚನೆಗಾಗಿಯೇ ದಾರಿ ಕಾಯುತ್ತಿರುವ ಮುಗುದೆಯಾದ ಹೆಣ್ಣನ್ನು ವರ್ಷಗಟ್ಲೆ ಕ್ರೂರವಾದ ಪ್ರತೀಕ್ಷೆಯಲ್ಲಿಯೇ ನಿಲ್ಲುವಂತೆ ಮಾಡಬಹುದು. ಇತ್ತ ಮದುವೆಯ ಸಾಹಸಕ್ಕೆ ಎಡೆಯಿಲ್ಲದೇ ಮಡದಿಯಾಗೆಂದು ಆಕೆಯ ಕೈ ಹಿಡಿಯಲು ಧೈರ್ಯವಡದೇ ಎಣಿಕೆ ಹಾಕುತ್ತ, ಗಳಿಕೆ ಮಾಡುತ್ತ, ಮೀನ ಮೇಷ-ನೋಡುತ್ತ. ಬದುಕಿನ ಪ್ರಯೋಗಗಳಲ್ಲಿಯೇ ಬಾಳುವ ಸಂಧಿಯನ್ನು ಕಳೆದುಕೊಳ್ಳುತ್ತ ಗಂಡು ಕಾಲಹರಣ ಮಾಡುತ್ತಿದ್ದಾಗಲೇ. ಅವನಿಗಾಗಿ ಹಾತೊರೆದು ಸೋತ ಹೆಣ್ಣು ಗಂಭೀರಳಾಗಿ ಬುದ್ಧಿ ಕಲಿತು ಮತ್ತೊಬ್ಬ ವ್ಯವಹಾರಿಕ ಎದೆ ಗಾರನನ್ನು ವರಿಸಿ. ತನ್ನ ಒಂಟಿಬಾಳಿನ ಒಗಟನ್ನು ಮದುವೆಯ ಗಂಟಿಕ್ಕಿಕೊಂಡು ಬಿಡಿಸಿಕೊಳ್ಳಬಹುದು ! ಹಾಗಾಗದಿರುವಂತೆ ಗಂಡು ಉಪಕ್ರಮದ ಎದೆಗಾರಿಕೆ ಯನ್ನು ಮೊದಲೇ ತಕ್ಕ ಸಮಯಕ್ಕೆ ಕಾಣಿಸಬೇಕು. ಇಂಗಿತಜ್ಞಳಾದ ಹೆಣ್ಣು ಗಂಡಿನ ಅಂತರಂಗವನ್ನು ಅಂತರಂಗದಲ್ಲಿಯೇ ಅರಿತಿದ್ದರೂ ಬಹಿರಂಗದಲ್ಲಿ ಆತನೇ

ಮೊದಲು ತನ್ನ ನಚ್ಚು–ಮೆಚ್ಚನ್ನು ನಿಚ್ಚಳವಾಗಿ ನಡೆನುಡಿಯಲ್ಲಿ ಒಡಮೂಡಿಸ ಬೇಕೆಂದೇ ಹೆಣ್ಣಿನ ಹವಣಿಕೆ ಇರುತ್ತದೆ.

ಈ ಹವಣಿಕೆಗೆ ಕಾರಣ ಹೆಣ್ಣಿನ ಅಂಜಿಕೆ. ಹೆಣ್ಣಿಗೆ ಒಂದೆಡೆಗೆ ಮಿತಿಮೀರಿದ ಆತ್ಮಗೌರವವಿದ್ದರೆ, ಇನ್ನೊಂದೆಡೆಗೆ ಅಷ್ಟೇ ಆತ್ಮವಿಶ್ವಾಸದ ಅಭಾವವಿರುತ್ತದೆ. ಆಕೆಗೆ ತನ್ನ ನಿರ್ಧಾರ ತನಗೇ ಇರುವದು ಕಡಿಮೆ. ದೇಹದ ದುರ್ಬಲತೆಯೂ, ದಾಸದ ಪರತಂತ್ರವೂ ಆಕೆಯ ಹೆಬಲದಲ್ಲಿ ಯಾವಾಗಲೂ ಹೊರೆಯಾಗಿ ನಿಲ್ಲುತ್ತವೆ. ಈ ಶಾರೀರಿಕ ವ್ಯವಹಾರಿಕ ಪರಾವಲಂಬನೆಯು ಆಕೆಯ ಸಾಹಸದ ಮೊನೆಯನ್ನೆ ಸವೆದು ಮೊಂಡ ಮಾಡುತ್ತದೆ. ಬಂಡಾಯದಿಂದಲೂ ಹೊಸ ಉಪಕ್ರಮದಿಂದಲೂ ಹಿಂಜರಿಯುವಂತೆ–ದೂರ ಹಿಂಮುಳಿಯುವಂತೆ ಮಾಡುತ್ತವೆ. ಅಸಹ್ಯ ಅನ್ಯಾಯದಡಿಗೂ ಮೂಕವಾಗಿ ಬಾಳನ್ನು ಸಾಗಿಸುವ, ದೈನ್ಯ–ದುಃಖ ದಲ್ಲಿಯೂ ದಿನ ದೂಡುವ ಹೆಣ್ಣಿನ ಸಹನೆಗೆ ಹೊಸ ಚಟುವಟಿಕೆಯ ಕುರಿತು ಇರುವ ಅಳುಕೇ ಕಾರಣವೆನ್ನಬಹುದು.

## ಹಿಂಬಾಲಿಕೆಯ ಬಾಲಿಕೆ

ಇದರಿಂದಲೇ ಗಂಡಿಗಿಂತ ಹೆಣ್ಣು ಹೆಚ್ಚು ಪರಂಪರಾಪ್ರಿಯಳು; ಸಂಪ್ರದಾಯ ಶರಣಳು; ರೂಢಿಮೂಢಳು; ಅಂತೆಯೇ ಗತಾನುಗತಿಕಳು. ಗಂಡಿಗಿಂತಲೂ ಹೆಚ್ಚು ಧಾರ್ಮಿಕಳು. ವಿಧಿನಿಯಮ–ವ್ರತವೈಕಲ್ಯಗಳ ಬಂಧನಗಳಲ್ಲಿ–ಬಿಗಿದುಳಿಯುವದು ಹೆಣ್ಣಿಗೆ ಬೇಕೆನಿಸುವದು. ಪರಿಚಿತವಾದದನ್ನೇ ಅನುಚರಿಸಿ ಪ್ರಸಿದ್ಧವಾದುದನ್ನೇ ಅನುಕರಿಸಿ ಪುರಾತನವನ್ನೇ ಆಚರಿಸುತ್ತಾ ಹೆಣ್ಣು ಪ್ರಶಸ್ತವಾಗಿ ಬಾಳುವಳು. ಹೊಸ ಮಾಟ ಹೊಸ ಮಾದರಿಗಳನ್ನು ಆಕೆ ಎತ್ತಿಕೊಳ್ಳುವದಾದರೂ ಒಮ್ಮೆಗೇ ಅಲ್ಲ. ಒಳಿತೆಂದು ಅಂತೂ ಅಲ್ಲವೇ ಅಲ್ಲ. ಹಲವು ಹೆಂಗಸರು ಹೋದ ಹಾದಿ ಯಲ್ಲಿಯೇ ಆಕೆಯೂ ಹುರುಪಿನಿಂದ ಹೆಜ್ಜೆ ಇಡುವಳು. ಒಟ್ಟಾರೆ ಹೆಣ್ಣಿಗೆ ರೂಢಿಬಲ ಬೇಕು. ಹಳೆಯ ರೂಢಿಯಿರಲಿ; ಹಲವರ ರೂಢಿಯಿರಲಿ; ಈ ಸನಾತನ ವೃತ್ತಿಯು ಎಂಥ ಆಧುನಿಕ ಅದ್ಯಶಿಕ್ಷಿತ–ಸುಸಂಸ್ಕೃತ ಹೆಣ್ಣಿಗೂ ಬಿಟ್ಟಿಲ್ಲ. ಯಾವ ಹೊಸ ಚಳವಳಿಯನ್ನು ಹೆಣ್ಣು ಮೊದಲು ಎಷ್ಟು ಸಂದೇಹದಿಂದ ನೋಡುವಳೋ ಕೊನೆಗೆ ಅಷ್ಟೇ ಸಂಭ್ರಮದಿಂದ ನಡೆಸುವಳು. ಅಂತೆಯೇ ಹೊಸ 'ವಾದ'ಗಳಿಗೂ ಹೊಸ 'ವೈಶಿಷ್ಟ್ಯ'ಗಳಿಗೂ ಹೆಣ್ಣು ಗಂಡಿಗಿಂತ ಹೆಚ್ಚು ಲಗು ಮನಸೋಲುವಳು. ಸಾಧುಸಂತರ ಶಿಷ್ಯಮಂಡಳಿಗಳಲ್ಲಿಯೂ ನಿಸರ್ಗೋಪಚಾರ, ಮಾನಸೋಪಚಾರ

ಮುಂತಾದ ಹೊಸ ಚಿಕಿತ್ಸೆಗಳ ಬೇನಿಗರಲ್ಲಿಯೂ ಗಂಡಿಗಿಂತ ಹೆಣ್ಣಿನ ಸಂಖ್ಯೆ ಬಹಳ.

ಗಂಡು ಸರ್ವಸಾಧಾರಣಪಾತಳಿಯಿಂದ ಒಮ್ಮೆಲೇ ವಿಚಾರವಿಲ್ಲದೇ ದೂರಾಗ ಬಲ್ಲನು; ದುಡುಕಬಲ್ಲನು. ಆದರೆ ಹೆಣ್ಣು ಸಾಮಾನ್ಯತೆಯ ಹಾಗೂ ವ್ಯಾವಹಾರಿಕತೆಯ ಪದವನ್ನು ಬಿಟ್ಟು ಕದಲಲು ಒಲ್ಲಳು. ಇದರ ಇನ್ನೊಂದು ಪರಿಣಾಮವೆಂದರೆ, ಗಂಡು–ಗಂಡಿನಲ್ಲಿ ಎಷ್ಟು ಭೇದ–ವೈವಿಧ್ಯಗಳಿರುವವೋ ಅಷ್ಟು ಹೆಣ್ಣು–ಹೆಣ್ಣಿನಲ್ಲಿ ಸಹಸಾ ಕಂಡುಬರುವದಿಲ್ಲ. ಒಂದು ಹೆಣ್ಣನ್ನು ಅರಿತುಕೊಂಡರೆ ಹೆಚ್ಚು ಕಡಿಮೆ ಆಕೆಯ ಜಾತಿಯ ಎಲ್ಲರನ್ನು ತಿಳಕೊಂಡಂತೆಯೇ. ತೋರಿಕೆಯ ಭೇದವಿದ್ದರೂ ಮೂಲದಲ್ಲಿ ಹೆಣ್ಣು ಜನವೆಲ್ಲ ಒಂದೇ ಪಡಿಯಚ್ಚಿನಲ್ಲಿ ಮೂಡಿದಂತೆ ಇರುವರು. ಆದರೆ ಗಂಡಿನ ಬಗೆ ಬೇರೆ. ಪ್ರಯೋಗ, ಪ್ರಯತ್ನ, ಪ್ರಾಪಂಚಿಕ ಸಂದರ್ಭ, ಪರಾಕ್ರಮದ ಆವಶ್ಯಕತೆ ಇವೆಲ್ಲವುಗಳ ಒತ್ತಾಯದಿಂದ ಗಂಡಿನ ಪ್ರಕೃತಿಯಲ್ಲಿ ಬಹಳ ಪಲ್ಲಟಕ್ಕೆ ಎಡೆಯಾಗಿದೆ. ಆದ್ದರಿಂದ ಗಂಡಿನಂತೆ ಗಂಡು ಇರುವದೂ ತೋರುವದೂ ಕಡಿಮೆ. ಬದಲಾಗುವ ಪರಿಸ್ಥಿತಿಗಳೂ, ಉದರ ನಿರ್ವಾಹದ ಉಪಯೋಗ ಉದ್ಯೋಗಗಳೂ, ಅವುಗಳಿಂದ ಮಾರ್ಪಟ್ಟ ಶಿಕ್ಷಣ ಸಂಸ್ಕಾರಗಳ ಬೇರ್ಪಾಟಗಳೂ ಗಂಡಿನ ವ್ಯಕ್ತಿತ್ವವನ್ನೂ ಬಿಡಿಬಿಡಿಯಾಗಿ–ಬಹಳ ಮಾದರಿಯಾಗಿ ರೂಪಗೊಳಿಸಿವೆ. ಆದರೆ ಇದೆಲ್ಲ ಸ್ಥಿತಿ–ಗತಿಯ ವ್ಯತ್ಯಾಸ ಹೆಣ್ಣಿನ ಪಾಲಿಗೆ ಹಿಂದಿನಿಂದಲೂ ಬಂದಿಲ್ಲ. ಪೂರ್ವಾರ್ಜಿತವಾಗಿ ಬಂದ ಮನೆಗೆಲಸವೇ ಆಕೆಯ ಪ್ರಧಾನ ಉದ್ಯೋಗ. ಅನುರೂಪ ವರನನ್ನೋ ವಲ್ಲಭನನ್ನೋ ಹುಡುಕಿ ಪಡಕೊಂಡು ತನ್ನ ಮಕ್ಕಳನ್ನು ಸಂಗೋಪಿಸುವದೇ ಆಕೆಯ ಅನಾದಿಕಾಲದ ಅಗತ್ಯದ ಕಾರ್ಯ. ಹೆಣ್ಣು ಜಾತಿಗೆಲ್ಲ ಬಹಳವಾಗಿ ಇದೊಂದೇ ಉದ್ಯೋಗ–ಕಾರ್ಯ ಮೀಸಲಾಗಿ ಹೂಡಿಬಂದ ಮೂಲಕ, ಎಲ್ಲ ಹೆಣ್ಣು ಒಂದೇ ಎರಕದಲ್ಲಿ–ಒಂದೇ ಅಚ್ಚಿನಲ್ಲಿ ಹಾಕಿ ತೆಗೆದಂತೆ ಸಾವಿರಾರು ವರ್ಷಗಳಿಂದಲೂ ಬೆಳೆದು ಬಂದಿದ್ದಾರೆ. ಇದರಿಂದ ಸಾಮಾನ್ಯವಾಗಿ ಹೆಣ್ಣಿನ ಸ್ವರೂಪ ಬೇರೆಬೇರೆಯಾಗಿದ್ದರೂ ಸ್ವಭಾವ ಒಂದೇ ಪರಿಯಾಗಿರುತ್ತದೆ. ಆಕೃತಿ ಭಿನ್ನವಾದರೂ ಪ್ರಕೃತಿ ಒಂದೇ. ಮೋರೆಯ ಚಂದ ಬಗೆಬಗೆಯಾದರೂ ಮನದ ಬಗೆಯು ಅಂದ ಒಂದೇ ತೆರನಾಗಿದೆ.

## ಗಂಡು ಅನೇಕ ನಿಸ್ಪೃಹನೇಕೆ ?

ಗಂಡಿನ ಶೃಂಗಾರವೃತ್ತಿಗೆ–ಪ್ರೇಮದಲ್ಲಿ ವಿಶಿಷ್ಟತೆ ಇರದಿರುವದಕ್ಕೆ ಇನ್ನೂ ಒಂದು

ಕಾರಣವಿರಬಹುದೇನೋ ! ಗಂಡು ಹೆಣ್ಣಿನಿಂದ ಹೆಣ್ಣಿಗೆ, ಹಗುರಾಗಿ ಹಳಹಳ ವಿಲ್ಲದೇ ಪ್ರೀತಿಗಾಗಿ ಹಾಯುವದನ್ನು ಕಂಡರೆ, ಅವನಿಗೆ ಪ್ರೀತಿಯ ಮಟ್ಟಿಗೆ ಹೆಣ್ಣು ಹೆಣ್ಣಿನ ಭೇದವಿಶೇಷವೆನಿಸುವದಿಲ್ಲವೆಂತಲೇ ಹೇಳಬೇಕಾದೀತು. ನಾವಿನ್ಯದ ಹಾಗು ಲಾವಣ್ಯದ ಹೊಸ ಮೋಹ ವಾಡಿಕೆಯಿಂದ ಕಡಿಮೆಯಾದ ಮೇಲೆ ಭೃಂಗವೃತ್ತಿಯ ವಿಲಾಸಿ ಗಂಡಿಗೆ ಹೊಸ ವಲ್ಲಭೆಯು ದೇಹವಲ್ಲಿಯೂ ಹಳೇ ವಲ್ಲಭೆಯ ಆತ್ಮವೇ ಅನುಭವಕ್ಕೆ ಬಂದು ಇನ್ನೂ ಹೊಸ ಕೆಳದಿಯನ್ನು ಹುಡುಕಲು ಆತನು ಆತುರನಾಗುವನು. ಇಂಥ ವಿಟಪುರುಷನಿಗೆ ಹೊಸದೊಂದು ಹೆಸರನ್ನಷ್ಟೇ ನೆನಪಿಡುವ ಆಯಾಸವೇ ಹೊರತು ಅವರು ಪ್ರಣಯ ತಂತ್ರದಲ್ಲಿ ಯಾವ ಹೊಸ ಪಾಠವನ್ನೂ ಕಲಿಯಬೇಕಾಗುವದಿಲ್ಲ !

ಈ ದೃಷ್ಟಿಯಿಂದ ನಮ್ಮ ಭಾರತೀಯ ಲಾಕ್ಷಣಿಕರು ನಾಯಕಾ ನಾಯಿಕಾ ಭೇದವನ್ನು ಕಲ್ಪಿಸುವಾಗಲೂ ಇದೇ ಅನುಭವವನ್ನೇ ಗಮನಿಸಿದಂತಿದೆ. ಶರೀರ ಸೌಂದರ್ಯದ ಮಟ್ಟಿಗೆ ಪದ್ಮಿನಿ. ಶಂಖಿನಿ, ಹಸ್ತಿನಿ ಮುಂತಾದ ಮಾದರಿಗಳನ್ನು ಕಾಮಸೂತ್ರಕಾರರು ಕಲ್ಪಿಸಿದರೂ ಸ್ವಭಾವ ಭೇದದ ಮಟ್ಟಿಗೆ ಎರಡೇ ಮಾದರಿ ಗಳನ್ನು ಅವರು ಬಣ್ಣಿಸಿದರು–ಒಂದು ಮುಗ್ಧೆ; ಇನ್ನೊಂದು ಪ್ರಗಲ್ಭೆ. ಹಾಗೆಯೇ ಪ್ರೇಮಿಕೆಯರೂ ಇವೆರಡಕ್ಕೆ ಸರಿಹೋಗುವಂತೆ ಎರಡೇ ವಿಧವಾಗಿ ಗಣಿಸಲಾಗಿದೆ– ಒಂದು ಅಭಿಸಾರಿಕೆ. ಸರಳ–ಸಹಜ. ದಿಟ್ಟತನದಲ್ಲಿ ಪ್ರೇಮಪರವಶಳಾಗಿ ತನ್ನ ರಮಣನಿದ್ದೆಡೆಗೆ ನಡೆದು ಹೋಗುವವಳ ಮಾದರಿ; ಇನ್ನೊಂದು ವಾಸಕಸಜ್ಜೆ– ಪ್ರಗಲ್ಭತೆಯ ಪ್ರೌಢಿಮೆಯಲ್ಲಿ ಮಾನಿನಿಯಾಗಿ ತನ್ನ ಅಂತಃಪುರದಲ್ಲಿಯೇ ರಮಣನಿಗಾಗಿ ಕಾಯುವವಳ ಮಾದರಿ.

ಆದರೆ ನಾಯಕರಲ್ಲಿ ಮಾತ್ರ ನಾಲ್ಕು ವಿಧ ಮಾಡಲು ಅನುವಾಯಿತು. ನಾಯಕತ್ವಕ್ಕೆ ಅವಶ್ಯವಾದ ಧೀರತನ. ಒಂದು ಸಾಮಾನ್ಯ ಧರ್ಮವಾಗಿಟ್ಟು ಕೊಂಡು, ಉದಾತ್ತ, ಉದ್ಧತ, ಶಾಂತ ಮತ್ತು ಲಲಿತ ಎಂಬ ನಾಲ್ಕು ಪ್ರಕಾರದ ಪೌರುಷ ಭೇದಗಳನ್ನು ನಮ್ಮ ಪೂರ್ವಿಕರು ಬಣ್ಣಿಸಿದರು. ಇವುಗಳಲ್ಲಿಯೂ ಕಲಬೆರಕೆಯ–ಹಲಬೆರಕೆಯ ರೂಪಗಳೂ ಹೇರಳವಾಗಿ ಗಂಡಿನಲ್ಲಿ ಕಂಡುಬರುತ್ತವೆ.

ಹೀಗೆ ಹೆಣ್ಣಿಗೆ ಸಾಧಾರಣವಾಗಿ ಒಂದೇ ಸತ್ವ–ಒಂದೇ ಬಗೆಯ ವ್ಯಕ್ತಿತ್ವ ಪರಂಪರೆ ಯಿಂದ ಬೆಳೆದು ಬಂದಿದೆ. ಇದೇನು ತ್ರಿಕಾಲಾಬಾಧಿತವೇನೂ ಅಲ್ಲ. ಸಾಮಾಜಿಕ ಜೀವನದಲ್ಲಿ ಆಮೂಲಾಗ್ರಪರಿವರ್ತನವಾದರೆ, ಆರ್ಥಿಕವ್ಯವಸ್ಥೆಯಲ್ಲಿ ಪುನರ್ಘಟನೆ ಯಾದರೆ ಕ್ರಮೇಣ ಹೆಣ್ಣಿನ ಬದುಕಿನ ಹೊಸದೊಂದು ಪರಂಪರೆಯು ಬೆಳೆದು

ಸಾಗಿ ಹೆಣ್ಣು ಸತ್ವದ ಹೊಸ ಮಾದರಿ ಮಾರ್ಪಡಲು ಮುಂದೆ ಯಾವ ಅಡ್ಡಿಯೂ ಇಲ್ಲ. ಆದರೆ ಇಂದಿಗೆ ಇದೇ ವಸ್ತುಸ್ಥಿತಿ. ಗಂಡಿನ ವ್ಯಕ್ತಿತ್ವದ ವೈವಿಧ್ಯ ವೈಶಿಷ್ಟ್ಯ ಪೂರ್ಣವಾದ ಪ್ರಕಾರಗಳು ಹೆಣ್ಣಿನಲ್ಲಿ ಕಂಡು ಬರುವದಿಲ್ಲ. ಇದರ ಒಂದು ಅನುಕೂಲ ಮೇಲೆ ಹೇಳಿದಂತೆ ಗಂಡಿನ ಭೃಂಗವೃತ್ತಿಗೂ ಸ್ತ್ರೀ ಸಹವಾಸದ ರುಚಿಭೇದಕ್ಕೂ ಕಾರಣವಾಗಿದ್ದರೆ, ಇನ್ನೊಂದು ಪ್ರತಿಕೂಲ ಹೆಣ್ಣಿನ ಬಾಳಿಗೆ ಬಾಧಕವಾಗಿದೆ. ಹೆಣ್ಣಿಗೆ ಎಲ್ಲ ಗಂಡೂ ಒಂದೇ ಬಗೆಯಾಗಿ ತೋರುವದೇ ಇಲ್ಲ. ಪರಿಚಯ–ಪ್ರಣಯಪ್ರೇಮಗಳು ಹೆಜ್ಜೆ ಹೆಜ್ಜೆಯಾಗಿ ಬೆಳೆದು ಒರ್ವ ಗಂಡಿನೊಡನೆ ಆಕೆಯ ಬಾಳು ಹೊಂದಿಕೊಂಡು ಹದಗೊಂಡು ಸಾಗುವಾಗ ಒಮ್ಮೆಲೇ ಆತನಿಂದ ಆಗಲಿ ಪ್ರೇಮ ಭಂಗವನ್ನು ಪಟ್ಟು ಬದುಕುವ ಪ್ರಸಂಗ ಬಂದರೆ ಹೆಣ್ಣು ಅಸಹ್ಯ ಯಾತನೆಯನ್ನು ತುಂಬಿಕೊಳ್ಳಲು ಅಶಕ್ಯವಾದ ಕೊರತೆಯನ್ನು ಅನುಭವಿಸುತ್ತಾಳೆ. ಹೊಸದೊಂದು ಪುರುಷ ಸಹವಾಸ ಆಕೆಗೆ ಅತ್ಯಂತ ದುಷ್ಕರವಾಗುತ್ತದೆ. ಹೊಸ ಗಂಡು ವ್ಯಕ್ತಿತ್ವದ ಹಿಡಿತವನ್ನು ಅರಿತು ಕೊಳ್ಳುವದು ಬಹಳೇ ಕಷ್ಟವಾಗುತ್ತದೆ. ಒಂದು ವಿಶಿಷ್ಟ ವ್ಯಕ್ತಿಯ ಪ್ರತಿಮೆಯು ಒಮ್ಮೆ ಆಕೆಯ ಹೃದಯದಲ್ಲಿ ಬಿಂಬಿಸಿ ನಿಂತರೆ ಆಕೆ ಆಯುಷ್ಯವನ್ನೆಲ್ಲ ಅದರ ಹಂಬಲದಲ್ಲಿಯೇ ಕಳೆಯುತ್ತಾಳೆ. ಯಾವ ಹೊಸ ಬದುಕಿಗೆ ಹೋದರೂ ಆಕೆಯು ತನ್ನ ನಷ್ಟ ಪ್ರೇಮದ ಪುತ್ಥಳಿಯನ್ನೇ ನೆನೆದು ನವೆಯುತ್ತಾಳೆ.

ಮೇಲೆ ಹೇಳಿದುದರ ತಾತ್ಪರ್ಯ–ಹೆಣ್ಣು ಯಾವಾಗಲೂ ಏಕನಿಷ್ಠಳಾಗಿಯೇ ಉಳಿಯುವವಳೆಂದಲ್ಲ; ಐವರು ಪತಿಗಳನ್ನು ಏಕಕಾಲಕ್ಕೆ ವರಿಸಿದ ದ್ರೌಪದಿಯ ಕತೆಯನ್ನು ಅಪವಾದವೆಂದು ಬಿಟ್ಟರೂ ಹೆಣ್ಣು ಹಲವರೊಡನೆ ಅಲ್ಲವಾದರೂ ಕೆಲವರೊಡನೆ ಪ್ರೇಮಸಂಬಂಧವನ್ನು ಇಟ್ಟುಕೊಂಡು ಬಂದುದುಂಟು. ಆದರೆ ಒಂದೇ ಸಮಯ ಒಂದಕ್ಕಿಂತ ಹೆಚ್ಚು ಪ್ರೇಮ ಸಂಬಂಧವನ್ನು ಹೆಣ್ಣು ಬೆಳಿಸಿಕೊಳ್ಳ ಲಾರಳು. ಗಂಡು ಹಾಗಲ್ಲ; ಆತ ಹಲವು ಪತ್ನಿಯರನ್ನೋ ಉಪಪತ್ನಿಯರನ್ನೋ ಪ್ರೇಮಿಕೆಯರನ್ನೋ ಏಕ ಕಾಲಕ್ಕೆ ಬೇರೆಬೇರೆಯಾಗಿ ಮನವಾರೆ ಮೆಚ್ಚಬಲ್ಲ; ಮೆಚ್ಚಿಸಬಲ್ಲ. ಆತನ ಶಾರೀರಕ–ಮಾನಸಿಕ ವೃತ್ತಿಗಳೇ ಅದಕ್ಕೆ ಅನುಕೂಲವಿರುತ್ತವೆ. ಅಲ್ಲದೇ ಹಿಂದೆ ಅಂದಂತೆ ಹೆಣ್ಣುತನದಲ್ಲಿ ಮೂಲಭೂತ ವೈವಿಧ್ಯ ಅಷ್ಟೊಂದು ಕಂಡುಬರುವದಿಲ್ಲವಾದ್ದರಿಂದಲೂ, ಗಂಡು ಹಲವು ಹೆಂಗಸರನ್ನು ಕಾಮಿಸಿ ಪ್ರೇಮಿಸಿ ಸುಖಿಯಾಗುವ ಹದವನ್ನು ನುರಿಸಿಕೊಳ್ಳಬಲ್ಲ. ಈ ಹದಕ್ಕೇ ನಮ್ಮ ಪ್ರಾಚೀನ ಕವಿಗಳು "ಸೌಭಾಗ್ಯ" ವೆಂದು ಕರೆದರು. ಅನೇಕ ಸ್ತ್ರೀಯರ ಪ್ರೇಮಾದರಕ್ಕೆ ಪಾತ್ರನಾಗಬಲ್ಲವನೇ "ಸುಭಗ".

ಆದರೆ ಈ ಸೌಭಾಗ್ಯ ಹೆಣ್ಣಿನದಲ್ಲ. ದುಷ್ಯಂತನಿಗೆ ದುರಂತವಿಲ್ಲದಿದ್ದರೂ ಶಕುಂತಲೆಗೆ

ದುಃಖ ತಪ್ಪಿದ್ದಿಲ್ಲ. ಅಂದರೆ, ಹೆಣ್ಣಿಗೆ ಪ್ರತಿಯೊಂದು ಬೇರೆ ಪ್ರೇಮಸ್ಥಾನವೂ ಹೊಸದಾಗಿಯೇ ಮೊದಲಾಗಬೇಕು. ಒಬ್ಬ ರಮಣನನ್ನೋ ವಲ್ಲಭನನ್ನೋ ಅಗಲಿ ಕಳಕೊಂಡ ನಂತರವೇ ಆಕೆ ಇನ್ನೊಬ್ಬ ಇನಿಯನ ಸನಿಯಕ್ಕೆ ಹೋಗಬಲ್ಲಳು. ಗಂಡಿನಂತೆ ಗಂಡು ಇರುವದು ವಿರಳವಾಗಿರುವದರಿಂದ ಹೆಣ್ಣಿಗೆ ಪ್ರೇಮದ ಮಾರ್ಗ ಸರಳವಾಗುವದಿಲ್ಲ. ಪ್ರತಿಯೊಂದು ಗಂಡಸೂ ಒಂದು ಹೊಸ ಒಗಟಾಗಿ ಅದನ್ನು ಬಗೆಹರಿಸಲು ಹೊಸ ಯತ್ನ ಬೇಕಾಗುತ್ತದೆ. ಒಬ್ಬರೊಡನೆ ಸಂಬಂಧ ಬಲಿಯಿತೆಂದರೆ ಹೆಣ್ಣಿನ ಸಮಗ್ರ ವ್ಯಕ್ತಿತ್ವ–ಜೀವನ ಸತ್ವವೆಲ್ಲ ಏಕಮುಖವಾಗಿ ಆತನೊಡನೆ ಹೊಂದಿಕೊಳ್ಳುತ್ತದೆ. ಆಗ ಮಿಕ್ಕವರ ಸಂಬಂಧ ಸಡಿಲಾಗಿಯೂ ಸಪ್ಪಗಾಗಿಯೂ ಅಷ್ಟಕಷ್ಟೇ ಉಳಿಯುತ್ತದೆ. ಋತುವಿಗೊಂದು ರತಿಯಿದ್ದರೂ ರತಿಗೆ ಒಂದೇ ರಮಣನಾಗುತ್ತಾನೆ. ಹೊಸ ರತಿಗೆ ಹೊಸ ಋತುವೇ ಬರಬೇಕು. ಹೆಣ್ಣಿನ ಈ ಬಗೆಯು ಶ್ರೀ ಮಾಸ್ತಿಯವರ ಒಂದು ಅತ್ಯುತ್ಕೃಷ್ಟತೆಯಾದ 'ಗೌತಮಿ ಹೇಳಿದ ಕತೆ'ಯಲ್ಲಿ ಚಂದವಾಗಿ ಬಿಂಬಿತವಾಗಿದೆ. ತಾತ್ಪರ್ಯವೇನಂದರೆ ಹೆಣ್ಣಿನ ಪ್ರೀತಿ ಏಕಾಂತಿಕ. ಅದಕ್ಕೆ ಒಮ್ಮೆಗೆ ಒಂದೇ ಗುರಿ: ಇದಕ್ಕೆ ಒಂದೇ ಕಾರಣ. ಗಂಡಿನ ವ್ಯಕ್ತಿತ್ವದ ಹೊಸ ಹೊಸ ಮಾದರಿಯೇ ಸರಿ.

## ಹೆಣ್ಣಿಗೆ ಮತವಿದೆಯೆ ?

ಹೀಗೆ ಸಾಮಾಜಿಕತೆಯಿಂದ ಹೆಣ್ಣೆಲ್ಲ ಒಂದೇ ಪಡಿಯಚ್ಚಿನಲ್ಲಿ ಮೂಡುವದು ಒಂದು ಪರಿಣಾಮವಾದರೆ, ಅದರ ಇನ್ನೊಂದು ಪರಿಣಾಮ ಹೆಣ್ಣಿನ 'ಪರಪ್ರತ್ಯಯನೇಯಬುದ್ಧಿ'–ಅಂದರೆ ಸಮಾಜದ ಪ್ರಶಂಸೆ ಪ್ರಸನ್ನತೆಗಾಗಿ ಆಕೆಯು ಹಿಡಿಯುವ ಹವ್ಯಾಸ. ನಾಲ್ಕು ಜನ (ಅಂದರೆ ನೆರೆಹೊರೆಯ ಹೆಣ್ಣು) ನಡೆದಂತೆ ನುಡಿದಂತೆ ತಾನು ನಡೆಯದಿದ್ದರೆ ನಾಲ್ಕು ಜನರ ಮೆಚ್ಚಿಗೆಗೆ ತಾನು ಬರಲಾರೆನೆಂಬ ಆಳವಾದ ಅಂಜಿಕೆ! ಈ ಪರಪ್ರಶಂಸಾಪ್ರೇಮವು ಹೆಣ್ಣನಲ್ಲಿ ಒಂದು ಬಲವಾದ ಆವೇಶವಾಗಿದೆ. ಗಂಡು ನೆರೆಹೊರೆಯ ಇಲ್ಲವೇ ನೆರವಿಯ ಮಾತುಮತಗಳಿಗೆ ಅಷ್ಟೊಂದು ಮಹತ್ವ ಕೊಡುವದಿಲ್ಲ. ತನ್ನ ಮೂಗಿನ ನೇರಕ್ಕೆ ಆತ ನಡೆಯಬಲ್ಲ. ಆದರೆ ಹೆಣ್ಣಿಗೆ ಅದು ಕಷ್ಟ. ಪತಿಯ ಸೇವೆ, ವಲ್ಲಭನ ಆರಾಧನೆ, ಮಕ್ಕಳ ಆರೈಕೆ ಇವೆಲ್ಲ ಮುಗಿದು ಉಳಿದ ಸಮಯವೆಲ್ಲ ಹೆಣ್ಣು ಸಾಮಾಜಿಕ ಪ್ರಶಂಸೆಯ ಪ್ರಾಪ್ತಿಗಾಗಿಯೇ ಕಳೆಯುವಳು, ನೆರೆಮನೆಯವರು ಫೋಟೋ ತೆಗಿಸಿಕೊಂಡರೆ, ಸತ್ಯನಾರಾಯಣ ಮಾಡಿಸಿದರೆ. ಇವಳೂ ಅದನ್ನೇ ಮಾಡಬೇಕು.

ದೊಡ್ಡ ಶಹರಗಳಲ್ಲಿ ದಿನಗಟ್ಟಲೆ ಕ್ರಿಕೆಟ ಪಂದ್ಯಾಟಗಳು ನಡೆಯುವದುಂಟು. ಆಗ

ನೋಡಬೇಕು ಹೆಣ್ಣಿನ ಈ ಪರಪ್ರಶಂಸಾಪ್ರಿಯತೆಯ ಚಿತ್ರವನ್ನು. ಅಡಿಯಿಂದ ಮುಡಿಯತನಕ ಸಿಂಗರಿಸಿಕೊಂಡು ೫-೧೦ ರೂಪಾಯಿಗಳ ಟಿಕೇಟು ತೆಗೆಯಿಸಿಕೊಂಡು ತಮ್ಮ ಗಂಡಂದಿರ 'ಗೌರವರಕ್ಷೆ'ಯಲ್ಲಿ ತಾಸುಗಟ್ಲೆ ಉರಿಬಿಸಿಲಿನಲ್ಲಿ ನಿಯಮಿತವಾಗಿ ಹೋಗಿ ಕುಳಿತು ಈ ಮಾನಿನಿಯರು ಪಂದ್ಯಾಟಗಳನ್ನು ನೋಡಿ ಬರುವರು; ಅಂಥವರಲ್ಲಿ ಕೆಲವರು ಕೊನೆಗೂ ಒಳ್ಳೇ ಸೋಜಿಗದಿಂದ ಆಟಗಾರನು ಚಂಡಿನ ಹಿಂದೆ ಓಡದೇ ಬರೇ ಎರಡು ಕೋಲುಗಳ ನಡುವೆ ಮತ್ತೆ ಮತ್ತೆ ಏಕೆ ಓಡಾಡುತ್ತಾನೆಂದು ಗಂಭೀರವಾಗಿ ಗಂಡಂದಿರನ್ನು ಕೇಳುವದೂ ಉಂಟು ! ಇಂಥವರ ಅಜ್ಞಾನವೆಷ್ಟು ಮೇಲೋ ಅವರ ಸೌಂದರ್ಯವೂ ಅಷ್ಟೇ ಮಿಗಿಲೂ ಇರುವದುಂಟು ! ಹೀಗಿದ್ದರೂ ಹಲವು ವಾರಗಳ ತನಕವೂ ಏನೂ ಬೇಸರವಿಲ್ಲದೇ, ತನಗೆ ಏನೂ ತಿಳಿಯದ ಚಟುವಟಿಕೆಯನ್ನು ತಾಸುಗಟ್ಲೆ ನೋಡಲು ಗಾಳಿ ಮಳೆ ಬಿಸಿಲು ಬೀದಿಗಳ ಆಯಾಸವನ್ನು ನಗುತ್ತ ಸಹಿಸುವ ಈ ಹೆಂಗಸರ ನಿಷ್ಠೆಯ ಮೂಲವೆಲ್ಲಿ ? ಪ್ರತಿಯೋರ್ವ ಹೆಂಗಸೂ ಮತ್ತೊಬ್ಬಳನ್ನು ಅನುಕರಿಸಲು ಹೋಗಿ ಆಟವನ್ನು ಕಾಣುವದಕ್ಕಿಂತ ಆಟದ ಬೈಲಲ್ಲಿ ತನ್ನನ್ನು ಮಿಕ್ಕ ತನ್ನವರೊಡನೆಯೇ ಕಾಣಿಸಿಕೊಳ್ಳುವದಕ್ಕಾಗಿ ಹವ್ಯಾಸ ಪಡುವಳು. ಹಾಗೇ ಹೋಗದಿದ್ದರೆ ತನಗೆಲ್ಲಿ ಕುಂದೋ ಎಂದು ಭಾವಿಸುವಳು. ಪ್ರಶಂಸಾಪ್ರೀತಿಯ ಇದಕ್ಕೂ ಪ್ರಕಟವಾದ ಪ್ರದರ್ಶನ ಬೇಕೇ ?

ಹೆಣ್ಣಿನ ಈ ಸಮಾಜಪ್ರಿಯತೆಯಿಂದ ಇಲ್ಲವೇ ಸಾಮಾಜಿಕ ಪ್ರವೃತ್ತಿಯಿಂದ ಹಲವು ಗುಣಗಳು ಆಕೆಯಲ್ಲಿ ಮೈಗೊಂಡಿವೆ. ಮಂದಿಯೊಡನೆ ವ್ಯಾವಹಾರಿಕ ಸಂಬಂಧಗಳನ್ನು ಒಳ್ಳೇ ಕೌಶಲ್ಯದಿಂದ ನಿರ್ವಹಿಸುವ ಕಲೆ ಹೆಣ್ಣಿಗೆ ಸಹಜ ಸಾಧ್ಯ. ಹತ್ತಿರದ, ಸುತ್ತಲಿನ ಹೆಣ್ಣುಗಳೊಡನೆ-ಅವರ ಪರಿವಾರದೊಡನೆ ತನ್ನ ಗಂಡಿಗಿಂತ ಹೆಣ್ಣು ಪರಿಚಯವನ್ನೂ ಸಲಿಗೆಯನ್ನೂ ಬೆಳೆಸಿಕೊಳ್ಳಬಲ್ಲಳು. ಅಕ್ಕ-ಪಕ್ಕದ ಮನೆಯ ಗಂಡಂದಿರು ಜಗಳಾಡಿದ್ದರೂ-ಮಾತು ಬಿಟ್ಟಿದ್ದರೂ ಹೆಣ್ಣುಗಳು ಮೈತ್ರಿಯಿಂದಲ್ಲದಿದ್ದರೂ ವೈರವಿಲ್ಲದೇ ಬದುಕಬಲ್ಲರು: ಮನೆ ವಾರ್ತೆಯ ಅಡಚಣೆ ಬಂದರೆ ಒಬ್ಬರಿಂದೊಬ್ಬರು ಕಡತರುವ ಇಲ್ಲವೇ ಕೊಡಕೊಳ್ಳುವ ವ್ಯವಹಾರವನ್ನು (ಗಂಡಂದಿರಿಗೆ ತಿಳಿಸದೇ ಅಥವಾ ಕೆಲವೊಮ್ಮೆ ಅವರ ಮೂಕ ಸಮ್ಮತಿಯಿಂದಲೇ!) ನಡೆಸಬಲ್ಲರು. ಸದ್ಯ ಜಾತೀಯತೆಯ ಉಗ್ರವಾದ ಕಲಹ ಕೇವಲ ಗಂಡಸರ ಗುಂಡುಬುದ್ಧಿಯು ಉಂಟುಮಾಡಿದ ಗಂಡಾಂತರ ! ಯಾವ ಜಾತಿಯದೇ ಇರಲಿ, ಯಾವ ಧರ್ಮದ್ದೇ ಇರಲಿ. ಹೆಣ್ಣು ಜನ ಗಂಡಿಗಿಂತಲೂ ಕೂಡಿ ಒಡನಾಡುವದು ಹೆಚ್ಚು. ಇದೇ ರೀತಿ ಅತಿಥಿಸತ್ಕಾರ, ಉಪಚಾರ ಶಿಷ್ಟಾಚಾರ ವಿಧಿಗಳಲ್ಲಿ ಗಂಡಿಗಿಂತ ಹೆಣ್ಣಿಗೆ ತಾತ್ಪರ್ಯ ಹೆಚ್ಚು. ಇವೆಲ್ಲವೂ ಸಾಮಾಜಿಕ

ನಡತೆಯ ಕಟ್ಟುಗಳು.

## ಮಾನಿನಿಯ ಮಹಿಮೆ

ಇವರದೇ ಇನ್ನೊಂದು ಮಗ್ಗಲು ಬಿಂಕ, ಇಲ್ಲವೇ ಆತ್ಮಾಡಂಬರ ನಾಲ್ಕು ಜನ ತನ್ನ ನೋಡಬೇಕು–ನೋಡಿ ಮೆಚ್ಚಬೇಕು ಎಂಬ ಲವಲವಿಕೆ! ಇದು ಹೆಣ್ಣಿನಲ್ಲಿ ಸದಾಕಾಲವೂ ಜಾಗೃತವಾಗಿರುತ್ತದೆ. ಸ್ವಾಭಿಮಾನದಲ್ಲಿ ಗಂಡಿಗಿಂತಲೂ ಹೆಣ್ಣಿನ ಕೈ (ಅಲ್ಲ ಕಣ್ಣು ?) ಮೇಲೆ. ಇದರಿಂದ ತನ್ನ ನಡೆನುಡಿಯ ಗುಣದೋಷಗಳನ್ನು-ತನ್ನೊಡನೆ ಸಂಪರ್ಕವಿಡುವ ಹೆಣ್ಣು ಗಂಡುಗಳ ವರ್ತನದ ತಪ್ಪುತಡೆ ತಾರತಮ್ಯಗಳನ್ನೂ ಹೆಣ್ಣು ಗಂಡಿಗಿಂತಲೂ ಹೆಚ್ಚು ಎಚ್ಚರದಿಂದ ನಿರೀಕ್ಷಿಸುವಳು. ಪರೀಕ್ಷಿಸುವಳು. ತನ್ನ ಶಾರೀರಿಕ ದುರ್ಬಲತನ ಮತ್ತು ಅರ್ಥಿಕ ಪರಾಧೀನತನಗಳ ಆಳವಾದ ಅರಿವು ಹೆಣ್ಣಿನಲ್ಲಿದೆ. ಅದ್ದರಿಂದ ಇತರ ಯಾವದೇ ನ್ಯೂನಗಂಡವುಳ್ಳ ವ್ಯಕ್ತಿಯಂತೆ ಹೆಣ್ಣು ತನ್ನ ಗೌರವವನ್ನು ಸ್ಥಾಪಿಸಲೂ ಸಂರಕ್ಷಿಸಲೂ ಎಂದಿಗೂ ದಕ್ಷಳಾಗಿರುತ್ತಾಳೆ. ಆಕೆ ಎಂದಿಗೂ ಮಾನಿನಿ–ಮಹಿಳೆ; ಮಾನ ಮಹತ್ವಗಳಿಗಾಗಿ ಹೆಣಗುವಾಕೆ.

ಇವರ ಫಲವೆಂದರೆ ಹೆಣ್ಣಿಗೆ ತನ್ನ ಚಿಕ್ಕ ಪುಟ್ಟ ಗುಣಗಳ ಅರಿವು ಕೂಡ ಸಂಪೂರ್ಣವಿರುತ್ತದೆ. ತನ್ನ ಸದ್ಗುಣ–ಸೌಂದರ್ಯಗಳ ಗರ್ವವಂತೂ ಆಕೆಗೆ ಇದ್ದೇ ಇರುತ್ತದೆ. ಇದಕ್ಕೂ ಮುಂದೆ ಹೋಗಿ ತನ್ನ ಲೋಪ ದೋಷಗಳನ್ನೇ ಗುಣವಾಗಿ ಕಾಣಿಸುವ ಇಲ್ಲವೇ ಅವುಗಳನ್ನು ಅಡಗಿಸಿ ಅಳವಡಿಸಿಕೊಳ್ಳುವ ನಡೆನುಡಿ, ವೇಷ–ಭೂಷೆಗಳ ಹೊಸ ರೀತಿಯನ್ನೇ ಆಕೆ ಉಂಟುಮಾಡುವಳು! ಹೀಗೆ ಎಷ್ಟೋ ಸಲ ಸಮಾಜದಲ್ಲಿ ಅಗ್ರಗಣ್ಯರಾದ ಹಲವು ಮಹಿಳೆಯರು ಹೊಸ ಪ್ರಸಾದನಪದ್ಧತಿಯನ್ನು ಕೇವಲ ತಮ್ಮ ಅನುಕೂಲತೆಗಾಗಿ ಬಳಕೆಯಲ್ಲಿ ತಂದು ಮುಂದೆ ಇತರ ಸ್ತ್ರೀ ಸಮಾಜವು ಅವುಗಳನ್ನೇ ಸಂಭ್ರಮದಿಂದ ಅನುಕರಿಸಿದ್ದುಂಟು. ಇದೇ ಮೇರೆಗೆ ಆತ್ಮಪ್ರದರ್ಶನದ ಮೋಹಕ್ಕೆ ಬಿದ್ದು ವಾಚಾಳಿತನವನ್ನೂ ಅನುಕರಣದ ಮೂಲಕ ಕುರುಡು ರೂಢಿಯನ್ನೂ ಆಕೆ ಮೈಜಟವಾಗಿ ಮಾಡಿಕೊಳ್ಳುವಳು. ಹೊಸದೊಂದು ಪ್ರಾಂತಕ್ಕೆ ಚಾಕರಿಗಾಗಿ ವರ್ಗಾಂತರಿಸಲ್ಪಟ್ಟ ಗಂಡಸಿಗಿಂತ ಆತನ ಹೆಂಡತಿ ಅಲ್ಲಿಯ ಭಾಷೆ–ವೇಷ–ವ್ಯವಹಾರಗಳನ್ನು ಹೆಚ್ಚು ತ್ವರೆಯಿಂದ ಮತ್ತು ತತ್ಪರತೆಯಿಂದ ಕಲಿಯುವದು ಕಂಡುಬರುತ್ತದೆ. ಇದರಿಂದಲೇ ಸಾಮಾಜಿಕ ವಿದ್ಯೆ–ಕಲೆಗಳಲ್ಲಿ ಗಂಡಿಗಿಂತಲೂ ಹೆಣ್ಣು ಎಂದಿಗೂ ಮುಂದೆ. ಚತುರಸಂಭಾಷಣೆ ಸುಶಿಕ್ಷಿತ ಗಂಡಿಗಿಂತ ಸುಶಿಕ್ಷಿತ ಹೆಣ್ಣಿಗೇ ಹೆಚ್ಚು ಲೀಲೆಯಿಂದ ಸಧ್ಯ. ವ್ಯವಸಾಯದ

ಕಲೆ ಕೈಗಾರಿಕೆಗಳಲ್ಲಿ ಹೆಣ್ಣಿಗಿಂತ ಗಂಡಿನ ಕೈಮೇಲೆ. ಆದರೆ ಲಲಿತಕಲೆಯಲ್ಲಿಯೂ ಭಾಷಾನೈಪುಣ್ಯದಲ್ಲಿಯೂ ಹೆಣ್ಣು ಹೆಚ್ಚು ಮುಂದುವರಿಯುವದುಂಟು. ಗಣಿತವಿಜ್ಞಾನದಂಥ ವಿಷಯಗಳಲ್ಲಿ ಹೆಣ್ಣಿಗೆ ರುಚಿ ಕಡಿಮೆ. ಇವಕ್ಕೆ ಇತರ ಕಾರಣಗಳಿವೆ. ಆದರೆ ಇಲ್ಲಿ ಹೇಳಬೇಕಾದುದೆಂದರೆ ಅಂಥ ವಿಷಯಗಳಿಗೆ ಏಕಾಂತ ಸಾಧನೆ ಮತ್ತು ಚಿಂತನಶಕ್ತಿ ಬೇಕು. ಹೆಣ್ಣಿಗೆ ಅಂಥ ಪರಿಶ್ರಮ ರುಚಿಸುವದಿಲ್ಲ. ಆದರೆ ಭಾಷೆಯೇ ಮುಂತಾದ ಸಂಸ್ಕೃತಿಪ್ರಧಾನವಾದ ವಿಷಯಗಳಲ್ಲಿ ಹೆಣ್ಣಿಗೆ ಅಭಿರುಚಿ ಸಹಜ.

ಸಂಸ್ಕೃತಿಯೆಂದೊಡನೆ ಇನ್ನೊಂದು ಸಂಗತಿ ನೆನಪಾಯಿತು. ಸಾಮಾಜಿಕ ಸಂಬಂಧಗಳಲ್ಲಿ ಯಶವನ್ನೂ ಶ್ರೇಯವನ್ನೂ ಪಡೆಯುವ ಹಟ ಹೆಣ್ಣಿಗೆ ಹೆಚ್ಚಿದ್ದದ್ದರಿಂದ ಆಕೆಯಲ್ಲಿ ವಿನಯ, ಸಾತ್ವಿಕತೆ, ಸೇವಾವೃತ್ತಿ. ಪರೋಪಕಾರ, ಸಹಾನುಭೂತಿ– ಇವೇ ಮುಂತಾದ ಸಾಮಾಜಿಕ ಸದ್ಗುಣಗಳು ಗಂಡಿಗಿಂತಲೂ ಹೆಚ್ಚಾಗಿಯೂ ಸಹಜವಾಗಿಯೂ ಬೆಳೆದುಬಂದಿವೆ. ಯಾವ ಸದ್ಗುಣಗಳನ್ನು ಗಂಡು ಯತ್ನದಿಂದ ಕಲಿತುಕೊಳ್ಳಬೇಕಾಗುವದೋ ಅವು ಹೆಣ್ಣಿಗೆ ಕೆಲವೊಮ್ಮೆ ಹುಟ್ಟುಗುಣವಾಗಿ ಬರುತ್ತವೆ. ಶಿಕ್ಷಣದ ಗುರಿ ಸಂಯಮವಾಗಿದ್ದರೆ, ವಿದ್ಯೆ ವಿನಯವನ್ನೇ ಕೊಡುವದಿದ್ದರೆ, ಮತ್ತು ವಿನಯ–ಸಂಯಮಗಳೇ ಸಂಸ್ಕೃತಿಯ ತಳಹದಿಯಾಗಿದ್ದರೆ ಹೆಣ್ಣಿಗೆ ಸಂಸ್ಕೃತಿಯು ಹತ್ತಿರವೆಂತಲೇ ಹೇಳಬೇಕು. ಅಂದರೆ ನಾರಿಯರಲ್ಲಿ ಮಾರಿಯರಿಲ್ಲವೆಂತಾಗಲೀ ಒರಟತನ ಮರುಳತನ ಗಂಡಿನದೇ ಸೊತ್ತೆಂದಾಗಲೀ ಹೇಳುವ ಹೇತುವಿಲ್ಲ. ಆದರೆ ಸಮಾಜಪ್ರಿಯತೆಯ ಫಲವಾಗಿ ಹೆಣ್ಣಿನಲ್ಲಿ ನಡೆನುಡಿ ನಯ–ನಂಬಿಗೆಗಳು ಹೆಚ್ಚು ರೂಪಗೊಂಡಿವೆಯೆಂದರೆ ತತ್ವತಃ ತಪ್ಪಾಗದು.

## ಹೆಣ್ಣು ಬಾಳೆ; ಗಂಡು ತೆಂಗು

ಗಂಡಿಗಿಂತ ಹೆಣ್ಣಿಗೆ ಅಧಿಕಾರಲಾಲಸೆ ಹೆಚ್ಚು: ಮಹತ್ವಾಕಾಂಕ್ಷೆ ಹೆಚ್ಚು: ಪ್ರಪಂಚದಲ್ಲಿ ಮೇಲ್ತರಗತಿಯನ್ನು ಮುಟ್ಟಬೇಕೆಂಬ ಹಟ ಆಕೆಯಲ್ಲಿರುತ್ತದೆ. ಎಷ್ಟೋ ಸಲ ಹೆಣ್ಣಿನ ಈ ಹಟವೇ ಆಕೆಯ ಗಂಡನಿಗೆ ಹುರುಪಾಗಿ ಅವನ ಅಭ್ಯುದಯಕ್ಕೆ ಕಾರಣವಾಗುತ್ತದೆ–ಅಧಃಪಾತಕ್ಕೂ ಮೂಲವಾಗುವದುಂಟು. ಹಲವು ಸಲ ತಾನೇ ಬುದ್ಧಿಬಲದಿಂದಲೋ ವಿದ್ಯಾಬಲದಿಂದಲೋ ಸಮಾಜದಲ್ಲಿ ಪ್ರಾಧಾನ್ಯ–ಪ್ರತಿಷ್ಠೆಗಳನ್ನು ಪಡಕೊಳ್ಳುವದು ಬಿಗಿಯಾಗಿದ್ದ ಮೂಲಕ ಹೆಣ್ಣು ತನ್ನ ಗಂಡನನ್ನೇ ಆಧಾರವಾಗಿ ಇಟ್ಟುಕೊಂಡು ತನಗಾಗಿ ಸನ್ಮಾನದ ಸ್ಥಾನವನ್ನು ಪಡೆದುಕೊಳ್ಳುವಳು. ಆಸ್ಥಾನದಲ್ಲಿ ಪ್ರತಾಪ ನಡೆಯಿಸುವ ಸರದಾರನಿರಲಿ, ಆಫೀಸಿನಲ್ಲಿ ಪ್ರಚಂಡನೆನಿಸುವ

ಕಾರಕೂನನಿರಲಿ, ಅಂತಃಪುರದಲ್ಲಿ ಹೆಂಡತಿಯು ಕೈಗೆ ತನ್ನ ಮೂಗುದಾಣ– ಕಡಿವಾಣಗಳನ್ನು ಕೊಟ್ಟು ಆಕೆ ಕುಣಿಸಿದಂತೆ ಮಣಿಸಿದತ್ತ ನಡೆದಾಡುವದು ಕಂಡುಬರುವದು. ಅಂಥ ಆಳಬಲ್ಲ ಹೆಣ್ಣು ತನ್ನ ಮಹತ್ವಾಕಾಂಕ್ಷೆಯನ್ನು ಗಂಡಿ ನಿಂದಲೇ ಪೂರೈಸಿಕೊಳ್ಳುವಳು. ಗಂಡನ ಸಂಪಾದನೆ ಸನ್ಮಾನಗಳು ಬೆಳೆದಂತೆ ಆಕೆಯ ಅಂತಸ್ತು ಏರುವದು. ಅಂತರಂಗವು ಅರಳುವದು ! ಹೀಗೆ ತಾನೇ ಸತ್ತೆ ಸಂಪತ್ತಿನ ಗದ್ದುಗೆಯನ್ನು ಆಕ್ರಮಿಸುವದಕ್ಕಿಂತ ತನ್ನ ಗಂಡನ ಸಿಂಹಾಸನದ ಹಿಂದಿನ ಶಕ್ತಿಯಾಗಿ ಸೂತ್ರಚಾಲನೆ ಮಾಡುವದೇ ಹೆಣ್ಣಿನ ಹಿಂಜರಿಕೆಯ ಸ್ವಭಾವಕ್ಕೆ ಹೆಚ್ಚು ಸೇರುವದು.

ಇದರಿಂದ ಕಂಡುಬರುವ ಇನ್ನೊಂದು ಪರಿಣಾಮವೆಂದರೆ ಹೆಣ್ಣು ತನ್ನ ವರಿಷ್ಠ ರೆದುರು ಬಹಳೇ ಕನಿಷ್ಠಳಾಗಿಯೂ ಕನಿಷ್ಠರೆದುರು ಬಹಳೇ ವರಿಷ್ಠಳಾಗಿಯೂ ನಡೆದುಕೊಳ್ಳುವಳು. ಒಂದೆಡೆಗೆ ಹೆಣ್ಣುತನದ ಸ್ವಾಭಾವಿಕ ಸಂಗತಿಗಳಲ್ಲಿ ಎಲ್ಲ ಹೆಣ್ಣು ಸರಿಸಮಾನವಾಗಿಯೇ ನಡೆದುಕೊಂಡರೂ, ಸಾಮಾಜಿಕ ಪ್ರತಿಷ್ಠೆಯ ಪ್ರಸಂಗಗಳಲ್ಲಿ ತನ್ನ ಸ್ಥಾನ–ಮಾನಗಳ ದರ್ಪದ ಬಗ್ಗೆ ಹೆಣ್ಣು ಬಹಳೇ ಜಾಗ್ರತ ಳಾಗಿರುವಳು. ಜಾಜ್ವಲ್ಯ ಈರ್ಷೆಯನ್ನು ಕಾಣಿಸುವಳು. ಕಲೆಕ್ಟರನು ತನ್ನ ಆಪ್ತ ಕಾರ್ಯದರ್ಶಿಯೊಡನೆ ಕೆಲವೊಮ್ಮೆ ಸಲಿಗೆಯಿಂದ ನಡೆಯಬಹುದು; ಆದರೆ ಕಲೆಕ್ಟರನ ಹೆಂಡತಿ ಕಾರ್ಯದರ್ಶಿಯ ಹೆಂಡತಿಯೊಡನೆ ಶಕ್ಯವಿದ್ದಷ್ಟು ಅಂತರ ವಿಟ್ಟುಕೊಂಡೇ ಅಂತಸ್ತು ಅರಿತುಕೊಂಡೇ ನಡೆಯುವಳು, ಸಾಮಾನ್ಯವಾಗಿ ಹೆಣ್ಣು ಒಂದೇ ವರ್ಗದವರೊಂದಿಗೆ ತೀರ ಸಮರಸಳಾಗುವದುಂಟು. ಗಂಡಸರಲ್ಲಿ ಯಾದರೂ ವಯೋಮಾನದಿಂದ ಮೂರುನಾಲ್ಕು ಗುಂಪುಗಳಾಗುವವು. ಮಕ್ಕಳು ತರುಣರೊಡನೆಯೂ ತರುಣರು ವೃದ್ಧರೊಡನೆಯೂ ಕೂಡುವದು ಕಡಿಮೆ. ಅದರಲ್ಲಿಯೂ ಬಾಲ್ಯ-ತಾರುಣ್ಯಗಳ ನಡುವಿನ ಒಂದು ಅಸಡ್ಡಾಳ ಅವಸ್ಥೆಯು ಗಂಡಸು ತೊಗಲುಬಾವಲಿಯಂತೆ ಅತ್ತ ಪಶುವೂ ಅಲ್ಲದೇ, ಇತ್ತ ಪಕ್ಷಿಯೂ ಅಲ್ಲದೆ ಎಲ್ಲೆಡೆ ಯಿಂದಲೂ ಅಸಡ್ಡೆಗೆ ಎಡೆಯಾಗುವದುಂಟು. ಹತ್ತರಿಂದ ಇಪ್ಪತ್ತು ವರ್ಷ ಪ್ರಾಯ ದೊಳಗಿನ ಗಂಡು ಇಂಥ ಶೋಚನೀಯ ಸ್ಥಿತಿಯಲ್ಲಿರುತ್ತಾನೆ. ಅತ್ತ ಮಕ್ಕಳೊಡ ನೆಯೂ ಆತ ಕೂಡಿ ರಮಿಸಲಾರ; ಇತ್ತ ತರುಣರೂ ಆತನನ್ನು ಕೂಡಿಸಿಕೊಳ್ಳ ಲಾರರು-ಗಮನಿಸಲಾರರು.

ಆದರೆ ಹೆಣ್ಣಿಗೆ ಈ ಅವಸ್ಥೆಯಿಲ್ಲ. ಒಂದು ಪರಿವಾರದಲ್ಲಿ ಬಾಲ್ಯಾವಸ್ಥೆಯನ್ನು ಕಳೆದ ಮೇಲೆ ಪ್ರಾಯಕ್ಕೆ ಬಂದ ಎಲ್ಲ ಹೆಂಗಸರೂ ಒಂದೇ ರೀತಿಯಾಗಿ ನಡಕೊಳ್ಳುವರು. ಗಂಡು ಮೆಲ್ಲನೆ ತೆಂಗಿನಂತೆ ಬೆಳೆದರೆ ಹೆಣ್ಣು ಒಮ್ಮೆಲೇ

ಬಾಳೆಯಂತೆ ಪ್ರೌಢಳಾಗಿ ಬಿಡುವಳು. ಹರೆಯ ಹುಡುಗಿಯೊಡನೆಯೂ ಹಿರಿಯ ಹೆಣ್ಣು ಮನಬಿಚ್ಚಿ ನಡೆನುಡಿಯುವಳು. ಹೆಣ್ಣು ನಿನ್ನೆ ಹುಡುಗಿಯಾದವಳು ನಾಳೆ ಒಮ್ಮೆಲೇ ಬೆಳೆದ ಹೆಣ್ಣಾಗುವಳು. ತಾಯಿ–ಅಕ್ಕ–ಅತ್ತೆ ಅಜ್ಜಿಯರೊಡನೆ ಸಮಸಾಟಿಯಾಗಿ ಬಾಣಸ ಪ್ರಶ್ನೆಗಳ ಚರ್ಚೆಯಲ್ಲಿ ಕೂಡುವಳು. ಈ ಸಜಾತೀಯ 'ಸಾಮ್ಯವಾದ' ಗಂಡಿನಲ್ಲಿ ತೋರಿ ಬರುವದಿಲ್ಲ.

## ವಿನಯದ ವೈಷಮ್ಯ

ಆದರೆ ಗಂಡು ತನ್ನ ಸಾಮಾಜಿಕ ಸ್ಥಾನಮಾನಗಳನ್ನು ಅರಿತೂ ಮರೆತಂತೆ ನಡೆದು ಇತರ ಕನಿಷ್ಠವರ್ಗದ ಗಂಡಿನೊಡನೆ ಕೂಡಲು ಕಡಿಮೆಯೆನಿಸಿಕೊಳ್ಳುವದಿಲ್ಲ. ಆದರೆ ಹೆಣ್ಣು ಈ ಸಾಮಾಜಿಕ ತಾರತಮ್ಯವನ್ನು ಅಷ್ಟು ಬೇಗ ಮರೆಯುವದಿಲ್ಲ. ಕೆಳಗಿನವರೆದುರಿಗೆ ಔದಾರ್ಯಕ್ಕಾಗಿ ಕೆಲವೊಮ್ಮೆ ಮರೆತರೂ, ಮೇಲಿನವರೆದುರಿಗೆ ತನ್ನ ಮಟ್ಟ–ಮರ್ಯಾದೆಗಳ ಕುರಿತು ಒಳ್ಳೇ ದಕ್ಷಳಿರುತ್ತಾಳೆ. ಗಂಡನನ್ನೂ ಲಕ್ಷ ಕೊಡುವಂತೆ ಒತ್ತಾಯ ಪಡಿಸುತ್ತಾಳೆ. ! ಹೆಂಡತಿ ಸಕಾಲದಲ್ಲಿ ಕಿವಿದುಂಬಿಸದಿದ್ದರೆ ಎಷ್ಟೋ ಗಂಡಂದಿರಿಗೆ ತಮ್ಮ ಸ್ಥಾನಮಾನಗಳ ಅರಿವಾಗಲೀ ಪರಿವೆಯಾಗಲೀ ಅನಿಸುವದೇ ಇಲ್ಲ !

ಇದೇ ಕಾರಣದಿಂದ ಹೆಣ್ಣಿನಲ್ಲಿ ವಿನಯವೂ ಹೆಚ್ಚು. ತನ್ನ ಸರಿಸಾಟಿಯೆನಿಸಿದ ಸಮಾಜದಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚು ವಿನಯವನ್ನು ಪ್ರಕಟಿಸುವಳು. ಈ ವಿನಯದ ಒಂದು ಮಗ್ಗುಲಿಗೆ ತಾಯ್ತನದ ಔದಾರ್ಯವೂ ಇರುವದುಂಟು. ಇತರರನ್ನು ಉಪಚರಿಸುವದರಲ್ಲಿ ಅದು ಹೆಚ್ಚು ಪ್ರಕಟವಾಗುತ್ತದೆ. ತನ್ನ ಕುರಿತು ಸಮಾಜವು ಒಳ್ಳೇ ಅಭಿಪ್ರಾಯವನ್ನೇ ಪಡಬೇಕೆಂಬ ಹಂಬಲ ಹೆಣ್ಣಿಗೆ ಹೆಚ್ಚಿರುವದರಿಂದ ಆಕೆಯ ವಿನಯದಲ್ಲಿ ತತ್ಪರತೆ ಹೆಚ್ಚು–ಒಣ ಉಪಚಾರ ಕಡಿಮೆ. ಹಾಗೆಯೇ ಆಕೆಯ ಅಹಂಕಾರ–ಆತ್ಮಾಭಿಮಾನವು ಉದ್ಧಟತನವಾಗುವ ಬದಲು ದಯೆಯಾಗಿಯೂ ಸಹಾನುಭೂತಿಯಾಗಿಯೂ ವ್ಯಕ್ತವಾಗುತ್ತದೆ. ಔದಾರ್ಯವು ದಾಕ್ಷಿಣ್ಯವು ಒಂದು ದೊಡ್ಡಸ್ತಿಕೆಯ ಲಕ್ಷಣವಾದ್ದರಿಂದ ಹೆಣ್ಣು ತನ್ನ ವ್ಯಕ್ತಿತ್ವವನ್ನು ಆ ರೀತಿಯಲ್ಲಿಯೇ ಸ್ಥಾಪಿಸುತ್ತಾಳೆ.

ಅದ್ದರಿಂದ ಒಟ್ಟಾರೆ ಹೆಣ್ಣಿನ ವ್ಯಕ್ತಿತ್ವದಲ್ಲಿ ಒಳಿತಿಗೆ ಪೋಷಕವಾಗುವ ಗುಣಗಳು ಬೆಳೆಯಲು ಅನುವು ಹೆಚ್ಚು. ಮೂಲದಲ್ಲಿಯೇ ಆಕೆ ಅಬಲಳಾಗಿದ್ದು, ಪ್ರಕೃತಿಯಿಂದಲೇ ಆಶ್ರಯವನ್ನೂ ಆಧಾರವನ್ನೂ ಬಯಸಿ ಪಡೆದು ಜೀವಿಸಬೇಕಾದ

ಪರಿಸ್ಥಿತಿಯು ಹೆಣ್ಣಿನದಾಗಿದ್ದರಿಂದ ಅದಕ್ಕೆ ಅನುಕೂಲವಾಗಿಯೇ ಆಕೆಯ ಮನಃಸ್ಥಿತಿಯು ಮಾರ್ಪಟ್ಟು ಬಂದಿದೆ. ಅಂತೆಯೇ ಸಾಮಾಜಿಕತೆಗೆ ಪೋಷಕವಾಗುವ ಗುಣಗಳಿಗೆಲ್ಲ ಹೆಣ್ಣು ನೆಲೆಯಾಗಿದ್ದಾಳೆ. ಬಿಂಕದೊಡನೆ ಬಿನ್ನಾಣವನ್ನೂ ಮುನಿಸಿನೊಡನೆ ಮಾರ್ದವವನ್ನೂ ಆಗ್ರಹದೊಡನೆ ಆರ್ಜವವನ್ನೂ ಆಕೆ ಕೂಡಿಸಬಲ್ಲಳು. ಅಂತೆಯೇ ಗಂಡಿಗೆ ಆಕೆಯು ಹೆಮ್ಮೆಯೂ ಹರುಷವನ್ನೇ ಕೊಡುತ್ತದೆ. ಹಟವೂ ಹುರುಪನ್ನೇ ನೀಡುತ್ತದೆ. ಆಕೆಗೆ ಸಹಜವಾದ ಸೌಮ್ಯತನವೂ ರಮ್ಯತವೂ ನೀತಿಗೆ ಉಪಕಾರಿಯಾಗುತ್ತವೆ. ಬೇಂದ್ರೆಯವರನ್ನುವಂತೆ ಆಕೆಯು 'ದಿನದಿನಕೆ ನವಜಯವನ್ನು ಕೋರುವಾಕೆ' ಯಾಗಿದ್ದರೂ 'ಮಂಗಲವೆ ಬಾ' ಎಂದು ಕರೆಯುವಾಕೆಯೂ ಅಹುದು !

ಇವೆಲ್ಲ ಗುಣಗಳ ಪರಿಪಾಕವಾಗಿ ಆಕೆಯಲ್ಲಿ ಭಾವಿಕತನವೂ ಧಾರ್ಮಿಕತನವೂ ಹೆಚ್ಚು ಪ್ರಕಟಗೊಂಡಿವೆ. ಆಕೆಯಲ್ಲಿ ಭಾವನೆಗಳ ಸೆಳೆತವು ಎಂದೂ ತೀವ್ರವಾಗಿದ್ದುದರಿಂದ ಧರ್ಮದ ಕರೆಗೆ ಹೆಣ್ಣು ಬಲವಾಗಿ ಬೇಗನೇ 'ಓ' ಗುಡುತ್ತಾಳೆ. ಸಮಾಜ ವ್ಯವಸ್ಥೆಯ ಪ್ರಭಾವದಿಂದ ಗಂಡಿಗಿಂತ ಹೆಣ್ಣಿನಲ್ಲಿ ಕಾಮುಕ ಪ್ರವೃತ್ತಿಗಳ ದಮನವು ವಿಶೇಷವಾಗಿ ನಡೆದುಬಂದಿದೆ. ಈ ದಮನದ ಮೂಲಕ ಆಕೆಯಲ್ಲಿ ಒಂದು ಅಸ್ಪಷ್ಟ ಭಾವಾವೇಶವು-ಭಕ್ತಿಗೆ ಅನುಕೂಲವಾಗುವ ಒಂದು ಉದ್ದೀಪನವು–ಸದಾ ಸಂಗ್ರಹಿತವಾಗಿರುತ್ತದೆ. ಅದು ಯಾವದೇ ವ್ಯಕ್ತಿ, ವಿಭೂತಿ, ಪ್ರತೀಕ, ದೈವತವನ್ನು ಆರಾಧನೆಯ ಇಲ್ಲವೇ ಆಳವಾದ ಆಸಕ್ತಿಯ ಕೇಂದ್ರವಾಗಿ ಮಾಡಿಕೊಂಡು ಕೃತಾರ್ಥವಾಗುತ್ತದೆ. ನೃತ್ಯ, ಸಂಗೀತ, ಸಮಾಜಸೇವೆ, ಶಿಕ್ಷಣ, ಕಮ್ಯುನಿಷ್ಟ ಪ್ರಚಾರ-ಮುಂತಾದವುಗಳಿಗೆ ಸಮ್ಮ ಜೀವನವನ್ನೇ ಮಾರಿಕೊಂಡು ಆ ಕಾರ್ಯದಲ್ಲಿ ಕಾಯುಕಷ್ಟ ಮಾಡಿ ಸುಖಿಯಾಗುವ ಹೆಣ್ಣನ್ನು ನಾವು ನೋಡಬಹುದು. ಯಾವದನ್ನು ಗಂಡು ಬರೇ ಮೆಚ್ಚಬಲ್ಲನೋ ಅದನ್ನೇ ಹೆಣ್ಣು ತನುಮನದಿಂದ ಪೂಜಿಸಬಲ್ಲಳು. ಗಂಡಿನ ಭೋಗದ ವಿಷಯು ಹೆಣ್ಣಿಗೆ ಭಕ್ತಿಯ ವಿಷಯುವಾಗಬಹುದು. ಆಕೆಯು ತತ್ವದ ಆಸಕ್ತಿಯು ಗುರುವಿನ ಆರಾಧನೆಯಾಗಿ ಪರಿಣಮಿಸಬಹುದು. ಇದರಿಂದ ಬೌದ್ಧಮತದಿಂದ ಕ್ಯಾಥೋಲಿಕ ಮಠಗಳ ತನಕವೂ ಅನೇಕ ಧರ್ಮಸಂಸ್ಥೆಗಳ ಅಧಃಪತನಕ್ಕೆ ಹೆಣ್ಣು ಕಾರಣವಾಗಿದ್ದುಂಟು.

ಹೆಣ್ಣಿನ ಧಾರ್ಮಿಕ ಭಾವನೆಗೆ ಇನ್ನೂ ಒಂದೆರಡು ಸೂಕ್ಷ್ಮ ಕಾರಣಗಳಿವೆ. ಗಂಡಿಗಿಂತ ಹೆಣ್ಣು ಹೆಚ್ಚು ಪ್ರೇಮಜೀವಿಯೆಂಬುದನ್ನು ಹಿಂದೆಯೇ ಹೇಳಿದೆ. ಬಾಳಿನಲ್ಲಿ ವಿಷಕಲಿಸುವ ವಿಯೋಗ ದುಃಖವನ್ನು ಹೆಣ್ಣು ಬಹಳಕಾಲ ಬಹಳ ತೀವ್ರವಾಗಿ ಅನುಭವಿಸಬಲ್ಲಳು. ಹಾಗೆಯೇ ಅಗಲಿಹೋದ ಪ್ರಿಯ ಜನರ ಪುನರ್ಮಿಲನಕ್ಕಾಗಿ ಹೆಣ್ಣು ಗಂಡಿಗಿಂತಲೂ ಹೆಚ್ಚು ಉತ್ಕಟ ಉತ್ಕಂಠೆಯಿಂದ

ತಪಿಸಬಲ್ಲಳು. ಈ ಕಳೆದು ಹೋದ ಪ್ರಿಯಜನರ ಪುನರ್ಮಿಲನದ ಆಳವಾದ ಆಶೆಯೇ ಹೆಣ್ಣು ಅಮರತ್ವವನ್ನಾಗಲೀ, ಪುನರ್ಜನ್ಮವನ್ನಾಗಲೀ ನಂಬುವಂತೆ ಮಾಡುತ್ತದೆ. ಜನ್ಮಾಂತರದ ಪ್ರೇಮದ ಸಾಫಲ್ಯಕ್ಕಾಗಿ ಹಾರೈಸಿ, ಹರಕೆ ಹೊತ್ತು, ತಪವನ್ನಾಚರಿಸುತ್ತ ಕಾದುನಿಂತ ಮಹಾಶ್ವೇತೆಯ ಚಿತ್ರವನ್ನು ಬಾಣಭಟ್ಟನು ಬರೆದು ತನ್ನ ಕಾದಂಬರಿಯನ್ನೇ ಹೆಣ್ಣಿನ ಈ ಅಮರ ಶ್ರದ್ಧೆಯ ಹಾಗೂ ಅನನ್ಯ ನಿಷ್ಠೆಯ ಸ್ಮಾರಕವಾಗಿ ಮಾಡಿರುತ್ತಾನೆ. ಗಂಡು ತರ್ಕದಿಂದ ಊಹಿಸಬಲ್ಲ ಆತ್ಮದ ಶಾಶ್ವತತೆಯನ್ನು ಹೆಣ್ಣು ತನ್ನ ಹೃದಯದ ಉತ್ಕಟಭಾವನೆಯ ಬಲದಿಂದ ಅನಿಸಿಕೊಳ್ಳಬಲ್ಲಳು. ಸಾವನ್ನು ಒಪ್ಪಿಕೊಳ್ಳಲೊಲ್ಲದ ವ್ಯಕ್ತಿಯ ಅಹಂಕಾರವೇ ಆತ್ಮದ ಅಮರತ್ವವನ್ನು ಕಲ್ಪಿಸಿಕೊಂಡದ್ದರಿಂದ, ಗಂಡಿಗಿಂತಲೂ ಮಿಗಿಲಾಗಿ ಅಹಂಕಾರವುಳ್ಳ ಹೆಣ್ಣು ಅಂಥ ಅಮರತ್ವವನ್ನೂ ಅದಕ್ಕೆ ಸಾಧನವೆನಿಸಿದ ಆಧ್ಯಾತ್ಮಿಕ ಸಾಧನೆಯನ್ನೂ ಅತ್ಯಂತವಾಗಿ ಮನಗಂಡಿದ್ದರೆ ಏನೂ ಸೋಜಿಗವಲ್ಲ.

## ಭಕ್ತಿ ಯಾರಿಗೆ ಸುಲಭ

ಸ್ವಭಾವದಿಂದಲೇ ಗಂಡು ಮಣಿಸಿ ಆಳುವಂಥವನು; ಆದರೆ ಹೆಣ್ಣು ಒಲಿಸಿ ಆಳುವಾಕೆಯು. ಇದರಿಂದ ಎಲ್ಲಿ ಗಂಡು ತನ್ನ ನಿಯಂತ್ರಣವನ್ನು ಸ್ಥಾಪಿಸಲು ಹೆಣಗುವನೋ ಅಂಥ ನಿಸರ್ಗದ ಶಕ್ತಿಯನ್ನು ಹೆಣ್ಣು ನಿಯತಿಯೆಂದು ನಮಸ್ಕರಿಸಿ ಆರಾಧಿಸಲು ಬಯಸುವಳು. ಗಂಡಿಗಿಂತಲೂ ಹೆಣ್ಣು ನಿಸರ್ಗಕ್ಕೆ ಹೆಚ್ಚು ಹತ್ತಿರಳೂ ನೈಸರ್ಗಿಕ ಶಕ್ತಿಗೆ ಹೊಂದಿಕೊಂಡವಳೂ ಆಗಿದ್ದರಿಂದ ಆಕೆಗೆ ನಿಸರ್ಗದ ವ್ಯಾಪಾರಗಳೆಲ್ಲ ಒಂದು ದಿವ್ಯಶಕ್ತಿಯ ಲೀಲೆಯಾಗಿ ಕಾಣುವದು ಸಹಜವೇ ಸರಿ. ಇದಲ್ಲದೆ ದೇಹದಿಂದ ಅಶಕ್ತಳಾದ ಹೆಣ್ಣು ಸರ್ವಶಕ್ತವಾದ ಒಂದು ಸಂರಕ್ಷಣೆಯ ಕಲ್ಪನೆಯನ್ನು ಹೆಚ್ಚಿನ ಮನೋಭಾವದಿಂದ ಮಾಡಬಲ್ಲಳು. ಭಯಚಕಿತವಾದ ಹೆಣ್ಣು ಹೃದಯವು ಜಗತ್ತಿನ ಹಾಗೂ ಜೀವನದ ಜಟಿಲತೆಯ ಜಂಜಾಟಗಳ ಜಾಲದಲ್ಲಿ ಸಿಲುಕಿ ಜಗತ್ತಿನ ಪರವಾದ ಒಂದು ಶಕ್ತಿಯ ಅನುಗ್ರಹ ಕ್ಕಾಗಿ ಪ್ರಾರ್ಥಿಸುವದು. ಏಕಾಂತವೇ ಅಸಹ್ಯವಾಗಿದ್ದ ಹೆಣ್ಣು ಸಾಮಾಜಿಕ ಸಮಾಗಮವು ಅಶಕ್ಯವಾದಾಗ ಒಂದು ದೈವೀ ಸನ್ನಿಧಿಯನ್ನು ಮನಸಾರೆ ಬಯಸುವಳು.

ಹೀಗಿದ್ದರಿಂದ ಶ್ರದ್ಧೆಯ ಇಲ್ಲವೇ ನಿಷ್ಠೆಯ ಯಾವುದೇ ಹೊಸ ಸಂಸ್ಥೆಯನ್ನಾಗಲೀ, ಸಂಪ್ರದಾಯವನ್ನಾಗಲೀ ಹೆಣ್ಣು ಮೊದಲಿಗೆ ಬರಮಾಡಿ ಕೊಳ್ಳುವಳು. ಹಾಗೆಯೇ ಹಿಂದಿನ ಉಪಾಸನೆಯ ಪಂಥವನ್ನಾಗಲೀ, ಎಷ್ಟೇ ಹಳೆಯದಾದರೂ ಆಕೆ ಬಿಡಲು

ಇಷ್ಟಪಡುವದು ಕಡಿಮೆ. ಗಂಡು ತನ್ನ ಹೊರವೋರೆಯಾದ ಸಾಹಸದಿಂದ ತಾನು ಒಪ್ಪಿಕೊಂಡ ಇಲ್ಲವೇ ಕಂಡುಕೊಂಡ ಧರ್ಮತತ್ವಕ್ಕೆ ಇಲ್ಲವೇ ಆಧ್ಯಾತ್ಮಿಕ ಮತಕ್ಕೆ ಒಂದು ಸಂಸ್ಥೆಯು ಇಲ್ಲವೇ ಮತಸಾಂಪ್ರದಾಯದ ಸ್ವರೂಪವನ್ನು ಕೊಡಲು ಹವಣಿಸುವನು. ಆದರೆ ಹೆಣ್ಣು ತನ್ನ ಆತ್ಮೋದ್ಧಾರವನ್ನೇ ಮುಖ್ಯ ವಾಗಿಟ್ಟುಕೊಂಡು ಸಾಗುವಳು. ಗಂಡು ಗುರುವಾಗುವವರಲ್ಲಿ ಮತಾಚಾರ್ಯನೂ ಧರ್ಮಪ್ರವರ್ತಕನೂ ಸಿಗುವವರಿಂದ ಧನ್ಯತೆಯನ್ನು ಅನುಭವಿಸುವನು. ಆದರೆ ಹೆಣ್ಣು ಕೇವಲ ಭಕ್ತಳಾಗಿ–ಭಕ್ತಿಪರವಶಳಾದ ಯೋಗಿನಿಯಾಗಿ–ದೇವರ ದಾರಿಯಲ್ಲಿ ನಡೆಯುವವರಲ್ಲಿಯೇ ಸುಖಿಯಾಗುವಳು. ಕೆಲವೊಮ್ಮೆ ಇಂಥ ಹೆಣ್ಣು ಹೃದಯದ- ಅಂದರೆ ಭಾವನಾಮಯವೂ ಅಂತರ್ಮುಖವೂ ಆದ ಮನೋವೃತ್ತಿಯ ಆರ್ತ ಭಕ್ತರು ತಮ್ಮಮಟ್ಟಿಗೆ ತಾವು ಇರಲು ಬಯಸಿದರೂ, ಅವರ ಪುರುಷಾರ್ಥಿ ಗಳಾದ ಶಿಷ್ಯರು ತಮ್ಮ ಗುರುವನ್ನು ಸಂಸ್ಥೆಯಾಗಿ ಮಾಡಿ ಅವರ ಬೋಧನೆಯನ್ನು ಒಂದು ಸಾಧನೆಯ ಸಾಂಪ್ರದಾಯವಾಗಿ ಕಟ್ಟಿ ಪರದೊಂದಿಗೆ ಇಹವನ್ನೂ ಸಾಧಿಸುತ್ತಾರೆ. ರಾಮಕೃಷ್ಣ ಪರಮಹಂಸರು ಏಕಾಂತಸೇವಿಗಳೂ ಕಾಲೀಮಾತೆಯ ಆರ್ತಭಕ್ತರಾಗಿ ದಕ್ಷಿಣೇಶ್ವರಿಯಲ್ಲಿಯೇ ಉಳಿದರೂ, ಸ್ವಾಮಿ ವಿವೇಕಾನಂದರು ವೇದಾಂತಕೇಸರಿಗಳಾಗಿ ಮೂರೂ ಖಂಡಗಳಲ್ಲಿ ರಾಮಕೃಷ್ಣರ ಸಂದೇಶವನ್ನು ಗರ್ಜಿಸಿ ಮೊಳಗಿ ಒಂದು ಸಮಾಜ ಸೇವೆಯ ಪ್ರಚಂಡ ಸಂಸ್ಥೆಯನ್ನೇ ಕಟ್ಟಿದರು ! ಇರಲಿ.

ಹೀಗೆ ಒಂದೆಡೆಗೆ ಗಂಡು ಆದರ್ಶವಾದಿಯೂ ಹೆಣ್ಣು ವ್ಯವಹಾರ ಬುದ್ಧಿಯವಳೂ ಎಂದು ಕಂಡರೂ, ಇನ್ನೊಂದೆಡೆಗೆ ಗಂಡು ಪುರುಷಾರ್ಥವಾದಿಯೂ, ಹೆಣ್ಣು ಪರಮಾರ್ಥ ಪ್ರಿಯಳೂ ಆಹುದು. 'ಪುರುಷಾರ್ಥ' ಶಬ್ದವೇ ಬಹಳ ಮಾರ್ಮಿಕ ವಿದೆ. ಸ್ತ್ರೀಗೆ ಪುರುಷಾರ್ಥವಿಲ್ಲ ! ಆದರೆ ಗಂಡಿನ ಆದರ್ಶವಾದವೂ ಪುರುಷಾರ್ಥವೂ ಅಪಯಶದ ಪರಂಪರೆಯನ್ನು ಬಹುಕಾಲ ತಡೆದು ನಿಲ್ಲದು. ಗೆಲುವಿನ ರಥ ವನ್ನೇರಿಯೇ ಗಂಡಿನ ಮನೋರಥವು ಮುಂದುವರಿಯುವದು. ಗಂಡಿನ ಆಶೆಗೆ ಎತ್ತರ ಹೆಚ್ಚಿದಂತೆಯೇ ತಳದ ಆಧಾರ ಅಷ್ಟೊಂದು ಭದ್ರವಿರುವದಿಲ್ಲ. ಅಂದರೆ ಎಲ್ಲ ರೀತಿಯಿಂದಲೂ ಹತಾಶನಾದ ಗಂಡು ಬದುಕನ್ನೇ ಭಾರವಾಗಿ ಕಾಣುತ್ತಾನೆ. ಕಂಗೆಡಿಸಿ ಕಗ್ಗತ್ತಲೆಯಲ್ಲಿ ನಿರಾಶೆಯ ನಿಬಿಡ ನಿಶೆಯಲ್ಲಿ ಗಂಡು ಮುಂದುಗಾಣದೇ ಬಾಳಿನ ಆಶೆಯನ್ನೇ ಬಿಟ್ಟು ಆತ್ಮಹತ್ಯೆ ಮಾಡಿಕೊಳ್ಳಬಹುದು.

## ಹೆಣ್ಣಿನ ಆಶಾವಾದ

ಆದರೆ ಹೆಣ್ಣಿನ ಆಶಾವಾದ ಜನುಗು ಇನ್ನಷ್ಟೇ ಜಿವುಟೂ ಅಹುದು. ಉಕ್ಕಿನ

ತಂತಿಗೆ ಬಿರುಸು ಹೆಚ್ಚಿರುವಂತೆ ಬಿರುಕೂ ಹೆಚ್ಚು–ತುಂಡಾಗುವ ಭಯ ಹೆಚ್ಚು. ಹೆಣ್ಣಿನ ಆಶೆ ರೇಶಿಮೆಯ ಎಳೆ ಒಮ್ಮೆಲೇ ಪೆಟ್ಟಿಗೆ ಹರಿಯುವದಿಲ್ಲ: ಕೋಮಲವಿದ್ದರೂ ದುರ್ಬಲವಲ್ಲ. ಕಷ್ಟನಷ್ಟಗಳ ಭಾರದಡಿಗೂ ಅದು ತಾಳಬಲ್ಲದು. ಪ್ರಪಂಚದ ಎಲ್ಲ ಆಶೆ ಆಕಾಂಕ್ಷೆಗಳು ಬೂದಿಯಾಗಿಹೋದರೂ, ಬದುಕಿನ ಶುಭವೆಲ್ಲ ಮಣ್ಣುಪಾಲಾದರೂ, ಹೆಣ್ಣು ಇಹದ ದೈನ್ಯದಲ್ಲಿ ಪರದ ಪುಣ್ಯವನ್ನು ಕಂಡುಕೊಂಡು ದೇವರಿಗೆ ಮೊರೆಯಿಟ್ಟು ಮೋಕ್ಷವತ್ತ ಮೊರೆಯಿಟ್ಟು ಭಗವದನುಗ್ರಹಕ್ಕಾಗಿ ಅಂಗಲಾಚಿ ತನ್ನ ಶೂನ್ಯ ಹೃದಯದಲ್ಲಿ ಅದಷ್ಟು ಶಾಂತಿಯನ್ನೂ ಶಕ್ತಿಯನ್ನೂ ತಂದುಕೊಂಡು ತಾಳ್ಮೆಯಿಂದ ಬಾಳುವಳು. ತಿತಿಕ್ಷೆ ಗಂಡಿಗೆ ಬಹಳ ಮಟ್ಟಿಗೆ ಅಶಕ್ಯ ! ಸುಖದ ನಂಬಿಗೆ ಇಲ್ಲದೆ ಗಂಡು ದುಃಖವನ್ನು ಸಹಿಸಲಾರ. ಹೆಣ್ಣಿಗೆ ಅಂಥ ಆಗ್ರಹವಿಲ್ಲ. ಮೊದಲು ಸಾವಧಾನ, ಆಮೇಲೆ ಸಮಾಧಾನ ಇದು ಜಾಣ ಹೆಣ್ಣಿನ ಜೀವನದ ಸೂತ್ರ.

ಅಂದಮೇಲೆ ಗಂಡಿಗಿಂತ ಹೆಣ್ಣಿನಲ್ಲಿ ದೇವ-ಧರ್ಮ, ಪುಣ್ಯ-ಪರಲೋಕ, ಪರಮಾತ್ಮ–ಪರಮಾರ್ಥಗಳ ಪ್ರಭಾವಕ್ಕೆ ಮನೋವೃತ್ತಿ ಹೆಚ್ಚು ಅನುಕೂಲವೆಂದಾಯಿತು. ಅಂತೆಯೇ ಆಕೆ ಸಹಧರ್ಮಚಾರಿಣಿ. ಗಂಡಿನ ಯಾವ ಧರ್ಮಕಾರ್ಯಕ್ಕೂ ಹೆಂಡತಿಯ ಸಹಾಯ ಸಹಕಾರ್ಯ ಬೇಕು. ಗಂಡು ಅಧರ್ಮಿಯಾದರೂ, ಅಕರ್ಮಿಯಾದರೂ ನಡೆದೀತು; ಹೆಂಡತಿಯ ಧರ್ಮ ಪುಣ್ಯಗಳು ಆಕೆಯೊಂದಿಗೆ ಪತಿಯನ್ನೂ ಸಂತತಿಯನ್ನೂ ಕುಲವನ್ನೂ ಉದ್ಧರಿಸುವವೆಂದು ನಮ್ಮ ಪೂರ್ವಿಕರು ನಂಬಿದ್ದರು. 'ಹೆಣ್ಣು ಕೆಟ್ಟರೆ ?...' ಎಂಬುದೇ ಅರ್ಜುನನಿಗೆ ಭೀಕರ ಪ್ರಶ್ನೆಯಾಯಿತು !

ಹೆಣ್ಣಿನ ಸ್ವಭಾವ ಭೇದಗಳನ್ನು ವರ್ಣಿಸುವಾಗ ಗಂಡಿನ ಸ್ವಭಾವದ ಕುರಿತು ನಮ್ಮ ಪ್ರಾಚೀನ ಲಾಕ್ಷಣಿಕರು ಇಟ್ಟುಕೊಂಡ ನಾಯಕ ಭೇದಗಳನ್ನು ಈ ಹಿಂದೆ ಎತ್ತಿ ಹೇಳಲಾಯಿತು. ಆದರೆ ಅದಕ್ಕೂ ಆಳದಲ್ಲಿ ಹೋಗಿ ಗಂಡಿನ ವ್ಯಕ್ತಿತ್ವಕ್ಕೆ ಸಾಮಾಜಿಕ ಜೀವನದ ಪೇಚು–ಪೆಟ್ಟುಗಳ ತೆಕ್ಕೆ-ತಿಕ್ಕಾಟಗಳಲ್ಲಿ ತದೆದು ನಿಲ್ಲುವಂತೆ ಬೆಳೆದು ಬರುವ ಕೆಲವೊಂದು ರೂಪಗಳನ್ನು ಸ್ವಭಾವದ ಸ್ಥೂಲ ಸ್ವರೂಪಗಳನ್ನು ಇಲ್ಲಿ ಬಣ್ಣಿಸಿದರೆ ಅಪ್ರಸ್ತುತವಾಗಲಿಕ್ಕಿಲ್ಲವೆಂದು ನಂಬಬಹುದಷ್ಟೇ !

ಮೊದಲು ವ್ಯಕ್ತಿತ್ವದ ಮಾತನ್ನೇ ತಿಳಿಯಲು ಯತ್ನಿಸೋಣ. ವ್ಯಕ್ತಿತ್ವವೆಂದರೇನು ? ವ್ಯಕ್ತಿತ್ವವು ರೂಪವಲ್ಲ. ಶೀಲವಲ್ಲ. ಕೆಲವೊಂದು ಗುಣವಲ್ಲ. ಆದರೆ ರೂಪ ಗುಣ ಶೀಲಗಳೆಲ್ಲವೂ ವ್ಯಕ್ತಿತ್ವದ ಅಂಗಗಳಾಗಿಯೇ ಅಂಶಗಳೆನಿಸುವವು. ಸಾಮಾನ್ಯವಾಗಿ

ಶೀಲವೆಂದೊಡನೆಯೇ ಶಿಷ್ಟರೂ ಅವರನ್ನು ಕಾಡುವ ದುಷ್ಟರೂ ನೆನಪಿಗೆ ಬರುತ್ತಾರೆ! ಆದರೆ ವ್ಯಕ್ತಿತ್ವ ಇವಕ್ಕೂ ವ್ಯಾಪಕವಾದದ್ದು: ಒಳಿತು-ಕೆಡುಕು ನಡತೆ ಕೇವಲ ವ್ಯಾವಹಾರಿಕ ಪಾತಳಿಯ ಅನುಕೂಲ ಪ್ರತಿಕೂಲಗಳಿಂದಲೇ ಅಳೆಯಲಾಗುತ್ತದೆ. ಈ ಅನುಕೂಲ ಪ್ರತಿಕೂಲಗಳು ತಾತ್ಕಾಲಿಕವಿರಬಹುದು-ದೀರ್ಘಕಾಲಿಕವಿರಲೂಬಹುದು. ಕೆಲವೊಂದು ನಡತೆಯ ಪರಿಣಾಮ ಅನುಕೂಲವಾಗಿಯೋ ಪ್ರತಿಕೂಲವಾಗಿಯೋ ಕೆಲವೇ ಜನಕ್ಕೆ ಸ್ವಲ್ಪವೇ ಕಾಲ ಅನುಭವಕ್ಕೆ ಬರಬಹುದು ಅಥವಾ ಹಲವಾರು ಜನಕ್ಕೆ ಬಹಳ ಕಾಲಾವಧಿಯ ತನಕವೂ ಸುಖದುಃಖ ಹಿತಾಹಿತಗಳಿಗೆ ಕಾರಣವಾಗಲೂಬಹುದು. ಒಟ್ಟಾರೆ ನಡತೆಯ ಈ ವ್ಯಾವಹಾರಿಕ ಸ್ವರೂಪದ ಅನುಕೂಲ ಪ್ರತಿಕೂಲಗಳನ್ನೇ ಗಮನಿಸಿಕೊಂಡು ಮನುಷ್ಯನು ಶಿಷ್ಟ ದುಷ್ಟರೆಂಬ ಎರಡು ವರ್ಗಗಳನ್ನು ಮಾಡಿಕೊಂಡು ಬಂದಿರುತ್ತಾನೆ.

## ಸ್ವಭಾವದ ವರ್ಗೀಕರಣ ಸಾಧ್ಯವೆ?

ಆದರೆ ಈ ವರ್ಗೀಕರಣವೂ ಬಹಳೇ ಕಟ್ಟುನಿಟ್ಟಾಗಿ ಇರುವದಿಲ್ಲ. ಶಿಷ್ಟ-ದುಷ್ಟರನ್ನು ವಿಂಗಡಿಸುವದು ಆಡು-ಕುರಿಗಳನ್ನು ಬೇರ್ಪಡಿಸಿದಷ್ಟು ಸುಲಭ ಕೆಲಸವಲ್ಲ. ಸಜ್ಜನರಲ್ಲಿಯೂ ಕೆಲವು ಕೀಳು, ಕೆಡಕು, ಕುಂದು, ಕೊರತೆ ಇರುವದುಂಟು. ದುರ್ಜನರಲ್ಲಿಯೂ ಒಂದೆರಡು ಒಳಿತು ಗುಣಗಳು ಕಾರ್ಮುಗಿಲ ಮಿಂಚಿನಂತೆ ತೋರಿಬರುವದುಂಟು. ವೈಯಕ್ತಿಕ ಜೀವನದಲ್ಲಿ ಕರ್ತವ್ಯನಿಷ್ಠ ತಂದೆಯಾಗಿ, ಮಮತೆಯುಳ್ಳ ಪತಿಯಾಗಿ, ನಂಬಿಗಸ್ತ ಗೆಳೆಯನಾಗಿ ಇರುವ ವ್ಯಕ್ತಿಯೂ ಸಾಮಾಜಿಕ ಜೀವನದಲ್ಲಿ ಲೋಭಿಯೂ ಲಾಭಬಡಕನೂ, ಲಂಚಗುಳಿಯೂ, ಹೊಣೆಗೇಡಿಯೂ, ದಬ್ಬಾಳಿಕೆಯ ದೈತ್ಯನೂ ಆಗಿ ಜನರ ಕೋಪ-ಶಾಪಕ್ಕೆ ಆಸ್ಪದನಾಗುವದುದನ್ನು ನಾವು ಕಂಡಿಲ್ಲವೇ? ಹಾಗೆಯೇ ವ್ಯಕ್ತಿಗತವಾಗಿ ತಿಳಿಗೇಡಿಯೆಂದೂ ಉಂಡಾಡಿಯೆಂದೂ ವ್ಯಸನಿ ವಿಲಾಸಿ ಇಲ್ಲವೇ ವ್ಯಭಿಚಾರಿಯೆಂದೂ 'ಕೀರ್ತಿ' ಪಡೆದ ಕಲಿಪುರುಷನು ತನ್ನ ಊರಿಗೋ, ಸಮಾಜಕ್ಕೋ ಆಯಕಟ್ಟಿನಲ್ಲಿ ನೆರವಾಗಲು ಜೀವನದ ಹಂಗುದೊರೆದು ಹೆಣಗಾಡಿದ್ದನ್ನೂ ನಾವು ಕೇಳಿಲ್ಲವೆ? ತುರ್ಕಸ್ಥಾನದ ಹೊಸ ಹುಟ್ಟಿಗೆ ತಂದೆಯೆನಿಸಿಕೊಂಡ ಕಮಾಲ ಪಾಶಾನ ಚರಿತ್ರ ಇಲ್ಲಿ ನೆನಪಿಗೆ ಬರದೇ ಇರಲಾರದು. ಒಟ್ಟಾರೆ ಶಿಷ್ಟ-ದುಷ್ಟರನ್ನು ತಪ್ಪದೇ ವಿಂಗಡಿಸಲು ಒಮ್ಮೆಲೇ ಬರುವಂತಿಲ್ಲ. ಮೇಲಾಗಿ ಇನ್ನೂ ಒಂದು ಸೂಕ್ಷ್ಮವಿದೆ. ಇಂದಿನ ಶಿಷ್ಟನು ನಿನ್ನೆಯತನಕ ದುಷ್ಟನಾಗಿದ್ದು, ಇಂದಿನ ದುಷ್ಟನು ನಾಳೆ ಶಿಷ್ಟನಾಗಬಲ್ಲನೆಂಬುದರ ಉದಾಹರಣೆಗಳೂ ಹಲವು ಉಂಟು!

ಆದರೆ ಅದೇನೇ ಇದ್ದರೂ ವ್ಯಕ್ತಿತ್ವವೆಂಬುದು ಶಿಷ್ಟ ದುಷ್ಟರನ್ನು ಒಳಪಡಿಸಿಕೊಂಡು ನಿಂತ ಸತ್ವವು. ರಾಮನಲ್ಲಿ ಇದ್ದಂತೆ ರಾವಣನಲ್ಲಿಯೂ, ಕೃಷ್ಣನಲ್ಲಿ ಇದ್ದಂತೆ ದುರ್ಯೋಧನನಲ್ಲಿಯೂ ಪ್ರಭಾವಿಯಾದ ವ್ಯಕ್ತಿತ್ವ ರೂಪಗೊಂಡಿತ್ತು. ಅವರೆಲ್ಲರೂ 'ಮಹಾನುಭಾವರು'! ಇಂಥ ವ್ಯಕ್ತಿತ್ವ ಸಾಮಾಜಿಕತೆಯ ಪರಿಪಾಕವಾಗಿದ್ದರೂ, ಮೂಲತಃ ವೈಯಕ್ತಿಕ ಸತ್ವ ಹಾಗೂ ಸಾಧನೆಯದೇ ಒಂದು ಎರಕ, ದಂಡೆಗಳೂ ನದಿಯ ಪಾತ್ರಕ್ಕೆ ಆಕಾರವನ್ನು ಕೊಡುತಿದ್ದರೂ, ಪ್ರವಾಹದ ಆಳ ಅಗಲವೂ ವೇಗ ಒತ್ತಡವೂ ಆ ದಂಡೆಗಳನ್ನು ರೂಪಗೊಳಿಸುವದಿಲ್ಲವೆ? ಹಾಗೆಯೇ ವ್ಯಕ್ತಿ ಮತ್ತು ಸಮಾಜ ಇವೆರಡರ ಕ್ರಿಯೆಪ್ರತಿಕ್ರಿಯೆಗಳಿಂದಲೇ ವ್ಯಕ್ತಿತ್ವವು ಒಡಮೂಡುತ್ತದೆ. ಸಾಮಾಜಿಕ ಜೀವನವಿಲ್ಲದೇ ವ್ಯಕ್ತಿತ್ವವಿಲ್ಲ. ಏಕಾಕಿಯಾಗಿ ಏಕಾಂತದಲ್ಲಿ ಗುಡ್ಡದಲ್ಲಿಯೋ ಗವಿಯಲ್ಲಿಯೋ ಮನುಷ್ಯ ಬಾಳಿ ಬೆಳೆದರೆ (ಅಂಥ ಇರುವಿಕೆಗೆ ಬಾಳು-ಬೆಳವಣಿಗೆ-ಯೆಂಬ ಹೆಸರು ಸಲ್ಲುವಂತಿದ್ದರೆ!) ಆ ಪ್ರಾಣಿಗೆ ವ್ಯಕ್ತಿತ್ವವೇ ಇರುವದಿಲ್ಲ! ಪಶು ಪಕ್ಷಿಗಳಂತೆಯೇ ಆತನ ಅಸ್ತಿತ್ವ. ತನ್ನತನದ ಅರಿವೇ ವ್ಯಕ್ತಿತ್ವದ ನೆಲೆ. ಈ ಅರಿವಾಗುವದು ಹಲವರ ನಡುವೆಯೇ, ಹೆರವರ ಇದುರಿಗೇ. ಆದ್ದರಿಂದ ವ್ಯಕ್ತಿತ್ವದ ವಿಕಾಸಕ್ಕೆ ಸಮಾಜವೇ ಅಧಿಷ್ಠಾನ. ನಾವು ಬಿಡಿವ್ಯಕ್ತಿಯೆಂದು ಬಾಳುವದು ಸಮಾಜದಲ್ಲಿಯೇ ಸರಿ. ನಾವು ಒಂಟಿಯೆಂದೆನಿಸುವದು ಮಂದಿಯ ಸಂಪರ್ಕದಿಂದಲೇ ಸರಿ!

## ವ್ಯಕ್ತಿತ್ವದ ಲಕ್ಷಣ

ಇಂಥ ವ್ಯಕ್ತಿತ್ವದ ಒಂದು ಮುಖ್ಯ ಲಕ್ಷಣವೆಂದರೆ ಸಾಮಾಜಿಕ ಪ್ರಭಾವ. ತಾನು ಹೋದಲ್ಲಿ, ಹೊಂದಿಕೊಂಡಲ್ಲಿ, ನಾಲ್ಕು ಜನರ ಕಣ್ಣು ಮನಗಳನ್ನು ಸೆಳೆದು ಇಟ್ಟುಕೊಳ್ಳುವ ಶಕ್ತಿ ತನ್ನದೇ? ಈ ಪ್ರಶ್ನೆಯ ಉತ್ತರವೇ ತನ್ನ ವ್ಯಕ್ತಿತ್ವದ ಗಮಕವು. ಯಾವದೆ ಅಲೌಕಿಕ ಇಲ್ಲವೇ ಅಸಾಮಾನ್ಯ ಕೃತ್ಯವಾಗಲೀ ಗುಣವಿಶೇಷವಾಗಲೀ ಇಲ್ಲದೆ, ಸಾಮಾನ್ಯರಲ್ಲಿಯೂ ಒಡೆದೆದ್ದು ಕಾಣುವ ಬದುಕಿನ ಮಾದರಿಯೇ ವ್ಯಕ್ತಿತ್ವವು. ಹಾದಿಹೋಕರಿಗಾಗಿ ಇಷ್ಟೊಂದು ವ್ಯಾಖ್ಯೆ ಸಾಕು.

ಈ ವ್ಯಕ್ತಿತ್ವವನ್ನು ಮಾರ್ಪಡಿಸುವದರಲ್ಲಿ ಮನುಷ್ಯನ ಜೀವನದಲ್ಲಿ ಭಯ ಪ್ರವೃತ್ತಿಯು ಬಹಳೇ ದೊಡ್ಡ ಕೆಲಸ ಮಾಡುತ್ತದೆ. ನಿರ್ಭಯನಿದ್ದಷ್ಟು ಮನುಷ್ಯ ಸುಖಿಯಾಗುತ್ತಾನೆ. ಅಭಯದಿಂದಲೇ ಸತ್ವಸಂಸಿದ್ಧಿ. ಸಾಮಾಜಿಕ ಸ್ಥಿತ್ಯಂತರಗಳು, ನೈಸರ್ಗಿಕ ಶಕ್ತಿಗಳು, ಆರ್ಥಿಕ ಅವಸ್ಥಾಂತರಗಳು—ಇವೆಲ್ಲ ಪ್ರಚಂಡ ಸಂಗತಿಗಳ ಇದುರಿಗೆ ವ್ಯಕ್ತಿಯು ಅಸಹಾಯನಾಗಿ ಬದುಕಿ ಬೆಳೆದು ಭಯದೊಡನೆ

ಒಡನಾಡುತ್ತಾನೆ: ಹೆಣಗಾಡುತ್ತಾನೆ. ಆದ್ದರಿಂದ ವ್ಯಕ್ತಿಯ ಮನೋರಚನೆಯಲ್ಲಿ ಭಯದ ಪ್ರಭಾವವು ಪ್ರಚಂಡವಿರುತ್ತದೆ. ಕೆಲವರ ವ್ಯಕ್ತಿತ್ವಕ್ಕೆ ಈ ಭಯವೆಂಬುದೇ ಹಿನ್ನೆಲೆಯಾಗಿ ಒಂದು ವಿಕಾರವಾದ ಎರಕ ಹೊಯ್ದಂತೆ ಕಂಡುಬರುತ್ತದೆ. ಅವರ ಬಾಳಿನ ಭಯವೆಲ್ಲ ಸಂಶಯದ ವೃತ್ತಿಯಾಗಿ ಸ್ಫುಟವಾಗುತ್ತದೆ. ಎಷ್ಟೋ ಜನ ಸ್ವಭಾವತಃ ಇಂಥ ಸಂಶಯ ವೃತ್ತಿಯವರಿರುವದನ್ನು ನಾವು ನೋಡುತ್ತೇವೆ. ಇಂಥವರ ಬದುಕು ಕೊನೆಗೂ ಕಸಿಕರಕ್ಕೆ ಕಾರಣವು. ಸಂಶಯವೃತ್ತಿಯು ಯಾವ ರಸವಲ್ಲಿಯೂ ಕಸ ಕಲಿಸುವ–ವಿಷಗಲಿಸುವ–ದುಷ್ಟಶಕ್ತಿ. ಕುಟುಂಬ ಸ್ವಾಸ್ಥ್ಯವನ್ನು ಮನೆತನಗಳ ಘನವಂತಿಕೆಯನ್ನು, ಉದ್ಯೋಗ ವ್ಯವಸಾಯಗಳ ನೈಪುಣ್ಯ–ಯಶಸ್ವತೆಗಳನ್ನು, ಅದೇಕೆ ? ರಾಷ್ಟ್ರೀಯ ಜೀವನವನ್ನೇ ಸಂಶಯದ ವೃತ್ತಿಯು ಕೆಡಿಸುವ ಸುರಂಗದಂತೆ ಸಿಡಿಮದ್ದಿನಂತೆ ಇದೆ. ಸಂಶಯವೃತ್ತಿಯ ಜನ ಯಾವಾಗಲೂ ಅಸಂತುಷ್ಟರೂ ಅಸಮಾಧಾನಿಗಳೂ ಇರುತ್ತಾರೆ. ಆದರೆ ಈ 'ಅಸಂತೋಷವು ಏಳ್ಗೆಯ ಮೂಲ'ವಲ್ಲ. ಆಮೂಲವನ್ನೇ ಕೀಳುವ ಶೂಲ ! ಈ ಅಸಂತೋಷವು ಒಂದು ಅನುದಿನ ಕುದಿಯುವ ಸಂತಾಪವಾಗಿ ತನ್ನ ದುಃಖ ಗಳಿಗೆ ಪರರನ್ನೇ ಹೊಣೆಯಾಗಿ ಭಾವಿಸುತ್ತ ತನ್ನ ಸುತ್ತಲೆಲ್ಲ ಒಳಸಂಚಿನ ಬಲೆಯನ್ನೇ ಕಲ್ಪಿಸಿ ಇನ್ನೂ ಹೆಚ್ಚು ದುಃಖ ದುರಂತಗಳಿಗೆ ಮುಳುವಾಗುತ್ತದೆ. ಸಂಶಯಕ್ಕೆ ತಕ್ಕ ಕಾರಣವೇ ಬೇಕಾಗುವದಿಲ್ಲ. ಜಗತ್ತಿನಲ್ಲಿ ಕಾರಣವಿಲ್ಲದೇ ಕಾರ್ಯ ವಾಗುವದಿದ್ದರೆ ಅದು ಸಂಶಯದ ಬೆಳವಣಿಗೆಯೇ ಅನ್ನಬೇಕು ! ಅಷ್ಟೊಂದು ಅಲ್ಪ ಕಾರಣದಿಂದ ಹುಟ್ಟಿ ಅಕಾರಣವಾಗಿ ಸಂಶಯವು ವೃದ್ಧಿಗೊಳ್ಳುತ್ತದೆ ! ಒಂದು ಸನ್ನೆ, ಒಂದು ನೋಟ, ಒಂದು ಮಾತು, ಒಂದು ಊಹೆ ಸಾಕು ಸಂಶಯದ ಹುಟ್ಟಿಗೆ. ಮಿಕ್ಕ ಯಾವ ಕೆಲಸಕ್ಕೂ ಅಯೋಗ್ಯರಾಗದ, ಮನುಷ್ಯರು ಸಂಶಯವನ್ನು ಹುಟ್ಟಿಸಬಲ್ಲರು: ಹೆಚ್ಚಿಸಬಲ್ಲರು. ಹಲವರ ಬಾಳನ್ನು ಹವಗೆಡಿಸಿ ಅವರೊಂದಿಗೆ ತಾವೂ ಹಾಳಾಗಬಲ್ಲರು !

ಈ ಸಂಶಯವೃತ್ತಿಯ ಪರಿಣಾಮವಾಗಿ ಹಲವು ಜನ ಗೌಪ್ಯಗೋಪನಕ್ಕೆ ತೊಡ ಗುವರು: ಮುಚ್ಚಿಡುವ, ಬಚ್ಚಿಡುವ ಬುದ್ಧಿಯವರಾಗುವರು. ಸರಳವಾಗಿ, ಪ್ರಕಟ ವಾಗಿ ನಾಲ್ಕು ಜನ ಕಾಣುವಂತೆ ಕೇಳುವಂತೆ ಯಾವ ಸಾಮಾನ್ಯ ಕೆಲಸವನ್ನೂ ಮಾಡತಕ್ಕ ಸಾಮಾನ್ಯ ಮಾತನ್ನು ಆಡರು. ಚಿಕ್ಕಪುಟ್ಟ ಸಂಗತಿಗಳಿಗೂ ಮಿತಿ ಮೀರಿದ ಗೌಪ್ಯ ! ಗುಜುಗುಟ್ಟದ ಹೊರತು ಇಂಥವರ ಮಾತುಕತೆಯೇ ನಡೆಯದು. ತನ್ನಂತೆ ಪರರೆಂದು ಭಾವಿಸುವದನ್ನು ಸರ್ವಜ್ಞನು ಬೋಧಿಸುವ ಮೊದಲೇ ಎಲ್ಲರೂ ಬಲ್ಲರು. ಆದ್ದರಿಂದ ಈ ಗೌಪ್ಯಗೋಪನದ ಜನರು ಪರರನ್ನೂ ಅಂಥವರೆಂದೇ ಭಾವಿಸಿ ನಡೆಯುವರು. ಪರರ ಸರಳ ಮಾತಿಗೂ ಒಂದು

ವಿಶೇಷ ಅರ್ಥವನ್ನೋ, ವಿಚಿತ್ರ ಧ್ವನಿಯನ್ನೋ ಕಲ್ಪಿಸುವದು ಇವರಿಗೆ ಬಹಳೇ ಸಹಜ ಚಟ. ತನ್ನ ವಿಕಾರ ವಿಚಾರಗಳನ್ನೆಲ್ಲ ಪತ್ತಿಕ್ಕಿ ಮುದುಗಿಸಿಡುವವರೊಂದಿಗೆ ಇತರರ ವಿಕಾರ ವಿಚಾರಗಳನ್ನು ಹೊಳವಿನಿಂದ ಹುಡುಕಾಡುವ ಕಲೆ ಈ ಗೌಪ್ಯ ಗೋಪಕರಿಗೆ ಮೈಯುಂಡು ಹೋಗಿರುತ್ತದೆ. ಹೆರವರು ಆಡಿದ ಮಾತಿಗಿಂತ ಆಡದಿದ್ದ ಮಾತುಗಳನ್ನೂ, ಮಾಡಿದ ಒಳಿತಿಗಿಂತ ಮಾಡದಿದ್ದ ಕೆಡುಕುಗಳನ್ನು ಇವರು ಚೆನ್ನಾಗಿ ಊಹಿಸಿ ಅರಿತುಕೊಳ್ಳಬಲ್ಲರು ! ಈ ಗುಣ ಹದವಾಗಿದ್ದರೆ ಇಂಗಿತಜ್ಞತೆಯೆನಿಸುವದು–ವ್ಯವಹಾರದಲ್ಲಿ ಮುಂದಿಯ ಮನಸ್ಸನ್ನು ಮೊದಲೇ ಅರಿತುಕೊಂಡು ಆಮೇರೆಗೆ ನಡೆದು ಯಶವನ್ನೂ ಶ್ರೇಯವನ್ನೂ ಪಡೆಯಲು ಈ ಇಂಗಿತಜ್ಞತೆ ಅತ್ಯಂತ ಉಪಯುಕ್ತವು. ಇಂಥ ಗೌಪ್ಯಗೋಪನ ವೃತ್ತಿಯವರು ತಮ್ಮ ಮುಖಮುದ್ರೆ ಹಾವಭಾವಗಳಲ್ಲಿ ಅಂತರಂಗದ ಯಾವ ಭಾವವನ್ನು ಹೊರಹೊಮ್ಮಲು ಕೊಡದಂತೆ ಧೂರ್ತತೆಯಿಂದ ನಡೆಯಬಲ್ಲರು ! ಸಿಟ್ಟನ್ನು ಅಡಗಿಸಿ ನಗಬಲ್ಲರು ! ಸ್ವೈರಾಚಾರಿಯಾಗಿಯೂ ಬಹಳ ನಾಚಬಲ್ಲರು ! ದುರಾಲೋಚನೆಗಳನ್ನು ಅಡಗಿಸಿಟ್ಟು ಸಂಭಾವಿತರಾಗಿ ಕಾಣಿಸಿಕೊಳ್ಳಬಲ್ಲರು !

## ಸಂಶಯಾತ್ಮರ ಅವತಾರಗಳು

ಇಂಥವರು ಇನ್ನೊಬ್ಬ ಖಿಲಪುರುಷನ ಮುಂದಿನ ಹೊಂಚು–ಹೆಜ್ಜೆಯನ್ನು ಊಹಿಸ ಬಲ್ಲರು--ಅದಕ್ಕೆ ತಕ್ಕ ಉಪಾಯವನ್ನೂ ಹೂಡಿಡಬಲ್ಲರು. 'ಕಳ್ಳರ ಹೆಜ್ಜೆ ಕಳ್ಳನೇ ಬಲ್ಲ' ಎಂಬ ಮಾತಿನ ಇಂಗಿತವೂ ಇದೇ. ಹೀಗೆ ಮಿತವಾಗಿದ್ದರ ಗೌಪ್ಯಗೋಪನ ವೃತ್ತಿಯೂ ಅದರ ಹಿಂದಿನ ಸಂಶಯವೃತ್ತಿಯೂ ಕೂಡಿಯೇ ಇಂಗಿತಜ್ಞತೆಯಾಗಿ, ವ್ಯಕ್ತಿಗೂ ಸಮಾಜಕ್ಕೂ ಹಿತಕಾರಿಯಾಗಬಲ್ಲವು. ದೂರದರ್ಶಿತನವೂ, ಪ್ರಸಂಗಾವ ಧಾನವೂ, ತೀಕ್ಷ್ಣ ನಿರೀಕ್ಷಣ, ನಿರೂಪಣದಿಂದ ಗೌಪ್ಯದುಷ್ಟತನವನ್ನು ಕಂಡು ಹಿಡಿಯುವ ಶಕ್ತಿಯೂ ಇಂಥ ಹಿತಮಿತವಾದ ಸಂಶಯವೃತ್ತಿಯ ಫಲಗಳು.

ಸಂಶಯವೃತ್ತಿಯ ಜನಕ್ಕೆ ಬೇರೆಯವರ ಮನಸ್ಸಿನ ಒಳಸುಳುವು ಸೆಳವುಗಳೆಲ್ಲವೂ ಹೊಳೆಯುತ್ತವೆ. ಚಿಕ್ಕಪುಟ್ಟ ಘಟನೆಗಳು, ಮಿಕ್ಕವರ ಲಕ್ಷಕ್ಕೆ ಬಾರದ ಸಂಗತಿಗಳು, ಮುಂದಿಯ ನಡೆನುಡಿಯ ಸೂಕ್ಷ್ಮವಿಶೇಷಗಳು–ಇವೆಲ್ಲವೂ, ಹಿತಮಿತವಾದ ಸಂಶಯವೃತ್ತಿಯವನ ತೀಕ್ಷ್ಣ ನಿರೀಕ್ಷಣೆಗೆ ಮಹತ್ವದ ವಸ್ತುವಾದಗಳಾಗಿ ಕಾಣುತ್ತವೆ. ಆದರೆ ಇವೆಲ್ಲವೂ ಸಂಶಯವಿಲ್ಲದ ಸರ್ವಸಂತುಷ್ಟ ಇಲ್ಲವೆ ಸರಳ ಹೃದಯದ ವ್ಯಕ್ತಿಗೆ ಕೊನೆಯವರೆಗೂ ಗಮನಕ್ಕೆ ಬಾರದೆ ಹೋಗುವದುಂಟು.

ಆದ್ದರಿಂದ ಒಂದು ರೀತಿಯಲ್ಲಿ ನೋಡಿದರೆ ಸರಳಹೃದಯದ ಸಜ್ಜನರು ಹಲವು ಸಲ ಅಭಾವಿತರಾಗಿಯೇ ಬಹಳೇ ಘಾತಕ್ಕೆ ಕಾರಣರಾಗುವದುಂಟು. ಅವರ ಈ ವ್ಯಕ್ತಿಗತ ಸರಳತನವೇ ಎಷ್ಟೋ ಸಲ ಸಾರ್ವಜನಿಕ ಕಪಟಾಚಾರಣೆಗೂ ಕುಟಿಲ ವ್ಯವಹಾರಕ್ಕೂ ಇಂಬು ಕೊಡುವದುಂಟು. ಒಂದು ಸಂಸ್ಥೆಯಲ್ಲಿ ಒಬ್ಬ ಸರಳ ಹೃದಯಿಯೆಂದು ಹೆಸರಾದ ಸಜ್ಜನನಿರುತ್ತಾನೆಂದು ಭಾವಿಸೋಣ. ಅವನಿಂದ ಎರಡು ಬಗೆಯಿಂದ ಗಂಡಾಂತರ ತಲೆದೋರುತ್ತದೆ. ಒಂದೇ ಆತನು ಧೂರ್ತರ ದುರ್ಯೋಜನೆಗಳಿಗೆ ತಿಳಿಯದೇ ಬಲಿಯಾಗುತ್ತಾನೆ–ತಾನೇ ಅನರ್ಥಕ್ಕೆ ತುತ್ತಾಗುತ್ತಾನೆ. ಇಲ್ಲದೇ ದುಷ್ಟರ ಸಾಧನೆಗೆ ಒಳ್ಳೇ ತೆರೆಯಾಗುತ್ತಾನೆ. ಅಂದರೆ ಸ್ವತಃ ಸರಳ ಸಜ್ಜನನಿದ್ದುದರಿಂದ ಆತನು ತನ್ನಂತೆ ಪರರೆಂದು ಬಗೆಯುತ್ತಾನೆ. ಆದರೆ ಇದರಿಂದ ಕೈಲಾಸ ಜನ್ನಾಣವಾಗುವದಿಲ್ಲ! ಶಠರಿಗೂ ಕಪಟಿಗಳಿಗೂ ಆತನಿಂದ ತಿಳಿಯದೆ ಆಶ್ರಯ ದೊರೆಯುತ್ತದೆ. ಸಾರ್ವಜನಿಕರೂ, ಇಂಥ ಸಂಸ್ಥೆಯಲ್ಲಿ ತಾವೆಲ್ಲ ನಂಬಿದ ಸಜ್ಜನನೋರ್ವನಿರುತ್ತಾನೆಂದು ಕಂಡು ಸಂಸ್ಥೆಯ ವರ್ತನೆ ವ್ಯವಹಾರಗಳ ಕುರಿತು ಹೆಚ್ಚು ಶಂಕಿಸುತ್ತುವದಿಲ್ಲ. ಇದರಿಂದ ಸರಳ ಹೃದಯದ ಸಜ್ಜನನನ್ನು ಮುಂದೆ ಇಟ್ಟುಕೊಂಡು ಸಂಧಿಸಾಧಕರೂ, ಲೋಕ ವಂಚಕರೂ ತಮ್ಮ ದುರಾಲೋಚನೆಗಳನ್ನೂ ದೂರಾಲೋಚನೆಗಳನ್ನೂ ಆತಂಕವಿಲ್ಲದೆ ಈಡೇರಿಸಿಕೊಳ್ಳಲು ಅನುವಾಗುತ್ತದೆ. ಹೀಗೆ ವ್ಯಕ್ತಿಗತ ಸಾಧುತ್ವ, ಸಾರ್ವಜನಿಕ ದುಷ್ಟತನ ಸಂಧಿ ಸಾಧನೆಗೆ ನೆರವಾಗುತ್ತದೆ! ಇದರ ತಾತ್ಪರ್ಯ, ಸಂಸ್ಥೆಗಳಲ್ಲಿ ಸಾಧುಗಳೇ ಇರಬಾರದೆಂದಲ್ಲ! ಇರಲಿ.

ಕೆಲವು ಜನ ಸ್ವಭಾವದಿಂದಲೂ ಕದ್ದುಮುಚ್ಚುವ ವೃತ್ತಿಯವರೂ, ಕಪಟವರ್ತನೆಯವರೂ, ಡಾಂಭಿಕರೂ, ವಂಚಕರೂ ಇರುವದು ಕಂಡುಬರುತ್ತದೆ. ಆದರೆ ಮತ್ತೆ ಕೆಲವರು ಬಿಚ್ಚು ಮನಸ್ಸಿನವರೂ, ಸಹಜವಾಗಿ ನಂಬುವಂಥವರೂ ಇರುತ್ತಾರೆ. ಸಮಾಜದ ಸದ್ಯದ ಅವಸ್ಥೆಯಲ್ಲಿ ವಿಪರೀತದ ಬಿಚ್ಚುಮನಸ್ಸು ಹಿತವಲ್ಲ. ಕೆಲಮಟ್ಟಿಗೆ ಕದ್ದುಮುಚ್ಚಾಟವು ತೀರ ಅವಶ್ಯ. ತಮ್ಮ ಪ್ರತಿಯೊಂದು ವಿಚಾರವನ್ನೂ ವಿಕಾರವನ್ನೂ ವ್ಯಕ್ತಪಡಿಸುವ ಮತ್ತೂ ತಮ್ಮ ವ್ಯಕ್ತಿಗತ ಸಂಗತಿಗಳನ್ನೆಲ್ಲ ತಾಳಗೆಟ್ಟ ತರದಲ್ಲಿ ಮಂದಿಯೆದುರು ಮಾತನಾಡುವವರು ನಿಜವಾಗಿಯೂ ಮೂಢರು. ಮಂದಿಗೆ ಕೊಡಕೂ ಎಣಿಸಿಕೊಳ್ಳುವರು. ಸ್ವಲ್ಪಮಟ್ಟಿಗೆ ಸಂಶಯ ವೃತ್ತಿಯುಳ್ಳವನು ಯೋಗ್ಯ ಕಾರಣವಿಲ್ಲದೇ ಏನನ್ನೂ ಒಮ್ಮೆಲೇ ನಂಬಲಾರನು. ಮಂದಿಯ ಮಾತಿನಿಂದ ಏನನ್ನೂ ಗೃಹೀತವಾಗಿ ಒಪ್ಪಿಕೊಂಡು ನಡೆಯಲಾರನು. ಅದ್ದರಿಂದ ಇಂಥವನು ಮೋಸ ಹೊಂದುವದೂ ವಂಚನೆಗೊಳ್ಳುವದೂ ಕಡಿಮೆ. ಆದರೆ ಬಿಚ್ಚಿದೆದೆಯ ನಿಷ್ಕಪಟಿಯು ಇತರರನ್ನೂ ಹಾಗೆಯೇ ನಿಷ್ಕಪಟಿಯೆಂದು

ಭಾವಿಸಿ ಸುಲಭವಾಗಿ ವಂಚಿತನಾಗುತ್ತಾನೆ !

## ಡಂಭಾಚಾರಿಯ ಡೊಂಬವಿದ್ಯೆ

ಭೀತಿಯಿಂದ ಇನ್ನೊಂದು ಪರಿಣಾಮವೂ ಕಂಡುಬರುತ್ತದೆ. ಅಜ್ಞಾನಿಯೂ ಗೊಡ್ಡುತನದವನೂ ಆದ ವ್ಯಕ್ತಿಯು ತನಗಿಂತ ಮೇಲಿನ ಇಲ್ಲವೇ ಮಿಗಿಲಾದ ಜ್ಞಾನದ ಮತ್ತು ಸ್ಥಾನಮಾನದ ಜನರ ಆಚಾರ ಉಪಚಾರಗಳನ್ನೂ ಸಭ್ಯತೆಯ ರೂಪರೀತಿಗಳನ್ನೂ ಕಪಿಯಂತೆ ಅನುಕರಿಸುವದುಂಟು. ತಾನು ಇದ್ದುದಕ್ಕಿಂತ ಹೆಚ್ಚಿನ ಒಳಿತನ್ನು ಸೋಗಿನಂತೆಯಾದರೂ ತೋರಿಸಿಕೊಳ್ಳುವದುಂಟು. ಪರರ ಪ್ರಶಂಸೆಗೆ ಪಾತ್ರನಾಗಬೇಕೆಂಬ ಬಯಕೆಯು ಸಾಮಾಜಿಕ ಜೀವನದ ಎಷ್ಟೋ ಸೌಕರ್ಯಗಳಿಗೆ ಕಾರಣವಾಗಿದೆ. ಆದಾಗ್ಯೂ, ಗೊಡ್ಡುತನದಿಂದಲೂ, ಅರಿವಿಲ್ಲದ ಆಳವಿಲ್ಲದ ಅನುಕರಣದಿಂದಲೂ, ಉಚಿತವಲ್ಲದ ನಡತೆಯಿಂದ, ಹಾಗೂ ತನ್ನ ದೊಡ್ಡ ಹಣವಂತಿಕೆಯೊಡನೆ, ಚಿಕ್ಕ ಬುದ್ಧಿವಂತಿಕೆಯನ್ನೂ ಅನವಶ್ಯಕ ಆಢ್ಯತೆಯಲ್ಲಿ ಪ್ರದರ್ಶಿಸುವದರಿಂದ ವ್ಯಕ್ತಿಯು ಡಾಂಭಿಕ ಆಢ್ಯತೆಯ ಒಂದು ಮಾದರಿಯಾಗಿ ನಿಲ್ಲುತ್ತಾನೆ ! ಇಂಥ ಡಂಭದ ಹುಂಜನ ಆತ್ಮಸಂಭಾವನೆಯೂ ಅಹಂಮನ್ಯತೆಯೂ, ಗ್ರಾಮ್ಯವರ್ತನದ ಪ್ರೌಢಪ್ರದರ್ಶನವೂ ಹಾಸ್ಯಾಸ್ಪದವಾಗಿ ಕಾಣುತ್ತದೆ; ಅಥವಾ ಸಾತ್ವಿಕ ಸಂತಾಪವನ್ನೇ ಕೆರಳಿಸುತ್ತದೆ. ಇಂಥವನ ಬುದ್ಧಿಯಾಗಲೀ, ಮಾನಸಿಕ ಶಕ್ತಿಯಾಗಲೀ ಅಲ್ಪವೇ ಇರುತ್ತದೆ. ಆದರೆ ಅಪ್ರಮಾಣದಲ್ಲಿ ಈತನು ತೋರಿಸುವ ಆತ್ಮಪ್ರೌಢಿಮೆಯು ಅಸಿರ್ಥಾವವು ಅತ್ಯಂತ ಹುಚ್ಚುತನವಾಗಿ ಕಾಣುವದು. ನಮ್ಮ ಆದರವನ್ನು ಸಲ್ಲಿಸಬಹುದಾದ ಯಾವ ಗುಣವೂ ಈತನಲ್ಲಿ ಇರುವದಿಲ್ಲ. ಆದರೂ ಮಂದಿಯ ಆದರಕ್ಕೆಲ್ಲ ತಾನೇ ಅಧಿಕಾರಿಯೆಂದು ಈತನು ದೃಢವಾಗಿಯೇ ನಂಬುತ್ತಾನೆ ! ತಿಳಿಯದ ವಿಷಯದಲ್ಲಿ ಜ್ಞಾನವನ್ನೂ, ಸಲ್ಲದ ಸಂಗತಿಯಲ್ಲಿ ಅಭಿಪ್ರಾಯವನ್ನೂ, ಎರವಲವಾಗಿ ಎತ್ತಿಕೊಂಡ ಮತವಾದಗಳನ್ನು ನವ ನಾಗರಿಕತೆಯ ಕುರುಡು ಅನುಕರಣವನ್ನು ವ್ಯಕ್ತಪಡಿಸಲು ಹೆಣಗಿ ಅಪಹಾಸ್ಯಕ್ಕೆ ಗುರಿಯಾದರೂ ತಿಳಿಯದೆ ಈ ಬಡಪಾಯಿಯು ಬಾಳುತ್ತಾನೆ ! ಕಾದಂಬರಿಕಾರರೂ ಕತೆಗಾರರೂ ಇಂಥ ಡಂಭಾಡಂಬರದ ಸ್ವಭಾವದ ಹಾಸ್ಯಾಸ್ಪದ ಪಾತ್ರಗಳನ್ನು ಹೇರಳವಾಗಿ ಆಯ್ದು ಚಿತ್ರಿಸುವದುಂಟು.

ಈ ಡಂಭಾಚಾರದ ಜನಕ್ಕೆ ಇಂಗ್ಲೀಷ ಭಾಷೆಯಲ್ಲಿ ಒಂದು ಸುಟಿಯಾದ ಪುಟ್ಟ ಹೆಸರು ಬಳಿಕೆಯಲ್ಲಿದೆ. Snob ಎಂದು. ಇಷ್ಟೊಂದು ಚಿಕ್ಕ ಶಬ್ದದಲ್ಲಿ ಅಡಕವಾದ ಅರ್ಥವನ್ನು ಒಂದೇ ಪದದಲ್ಲಿ ಕನ್ನಡಕ್ಕೆ ಇಳಿಸುವದು ಬಿಗಿಯೇ ಸರಿ. ಡಂಭಾಚಾರ,

ವಂಚಕವರ್ತನೆ. ಅಹಂಮನ್ಯತೆ, ಅಜ್ಞಾನದ ಶೂನ್ಯ ಸಂಪಾದನೆ ಇವೆಲ್ಲ ಲಕ್ಷಣ ಗಳಲ್ಲಿ ಈ 'ಸ್ನೋಬ್'ತನದಲ್ಲಿ ಬರುತ್ತವೆ. ಇಂಥ ಡಂಭಾಚಾರಿಯನ್ನು ಗುರುತಿಸುವದೆಂತು ? ಸಾಮಾಜಿಕ ಯಶಸ್ವಿತೆಯು ಈತನ ಬದುಕಿನ ಹೆಗ್ಗುರಿ ಸಮಾಜದಲ್ಲಿ ಆದಷ್ಟು ಮನ್ನಣೆಯನ್ನು ಪಡೆಯಬೇಕೆಂಬುದೇ ಇವನ ಅಟ್ಟಹಾಸ, ಹವ್ಯಾಸ. ಪ್ರತಿಯೊಬ್ಬ ವ್ಯಕ್ತಿಯೂ ಮಂದಿಯ ಮೆಚ್ಚುಗೆ ಮನ್ನಣೆಗಳನ್ನು ಪಡೆಯಲು ಹೆಣಗುತ್ತಾನೆ. ಅದು ಸ್ವಾಭಾವಿಕವೇ ಸರಿ. ಪ್ರಶಂಸೆಗೆ ಪರಾಙ್ಮುಖ ನಾದವನು ಶಿಶುವಾಗಲೀ, ಪಶುವಾಗಲೀ ಋಷಿಯಾಗಲೀ ಇರಬೇಕು. ಶಿಶುಗಳಿಗೂ ಮಂದಿಯ ಕಣ್ಣು ತನ್ನ ಕಡೆಗೆ ಸೆಳಕೊಳ್ಳುವ ಹಟವಿದ್ದೇ ಇರುತ್ತದೆ. ಋಷಿಯೂ ಇನ್ನೊಬ್ಬ ಋಷಿಯಿಂದ ಮನ್ನಣೆಯನ್ನು ಪಡೆಯಲು ಹಾತೊರೆಯುವದುಂಟು. ಅಂದರೆ ಪರರ ಪ್ರಶಂಸೆ ಪ್ರೋತ್ಸಾಹ ಇಲ್ಲವೇ ಪ್ರಭಾವ ಪೂಜೆ ಬೇಡವೆಂದು ಯಾರಿಗೂ ಇಲ್ಲ. ಆದಾಗ್ಯೂ ಸಾಮಾನ್ಯವಾಗಿ ಪ್ರಶಂಸಾಪೇಕ್ಷಿಗಳು ಮಂದಿಯ ಮುಂದೆ ತಮ್ಮ ದೋಷಗಳನ್ನು ಮುಚ್ಚಲೂ ಗುಣಗಳನ್ನು ಹೆಚ್ಚಿಸಿ ತೋರಿಸಲೂ ಯತ್ನಿಸುತ್ತಾರೆ. ಆದರೆ ಡಂಭಾಚಾರಿಯು ತನ್ನ ದೋಷವೇ ಒಂದು ವಿಶೇಷ ಗುಣವೆಂದು ಕಾಣಿಸಲು ಹೆಣಗುತ್ತಾನೆ; ತನ್ನಲ್ಲಿ ಎಂದೂ ಇಲ್ಲದ ಗುಣವನ್ನು ತಾನೇ ಕಂಡುಕೊಂಡು ಅದನ್ನು ಮಂದಿಯ ಮುಂದೆ ಬಿಂಬಿಸಲು ಹವ್ಯಾಸ ಪಡುತ್ತಾನೆ ! ಯಾವದೇ ಒಂದು ಬಗೆಯ ಸಜ್ಜನಿಕೆ, ಶಿಷ್ಟಾಚಾರ ಸಾಧುವರ್ತನದ ಕಲ್ಪನೆಯನ್ನು ಇಂಥವನು ಕಟ್ಟಿಕೊಳ್ಳುತ್ತಾನೆ. ಆ ಕಲ್ಪನೆಯೂ ಮಸುಕಾಗಿಯೇ ಇರುತ್ತದೆ.

ಇಂಥ ಸದ್ಗೃಹಸ್ಥತನದ ಪಡಿಯಚ್ಚಿನಲ್ಲಿ ತನ್ನನ್ನು ಎರಕ ಹೊಯ್ಯಲು ಆತನು ಜೀವಮಾನವೆಲ್ಲ ಯತ್ನಿಸುತ್ತಾನೆ. ಆದರೆ ಬಾಳಿನ ಪರಿಜ್ಞಾನವೇ ಆತನವದು ಕೆಳ ಮಟ್ಟದ್ದಿರುತ್ತದೆ: ತೀರ ಗೊಡ್ಡು ಹಳ್ಳಿಗಾಡಾಗಿರುತ್ತದೆ. ಜತೆಗೆ ಮಂದಿಯ ಸ್ವಭಾವದ ಕುರಿತು ಆತನ ಅನುಮಾನ ಪ್ರಮಾಣಗಳೂ ಅಷ್ಟೇ ಕೀಳಾಗಿರುತ್ತವೆ. ಹಣದಿಂದಲೋ, ಹೆದರಿಕೆಯಿಂದಲೋ, ಹೊಗಳಿಕೆಯಿಂದಲೋ ಮಂದಿವಶ ವಾಗುವರು. ಮಂದಿಯ ಮೇಲೆ ವರ್ಚಸ್ಸು ಬೀರಬಹುದು, ಎಂದೇ ಆತನು ಗ್ರಹಿ ಸುತ್ತಾನೆ. ಅದ್ದರಿಂದ ತನ್ನ ವರಿಷ್ಠರ ಇದುರು ತೀರ ನಿಕೃಷ್ಟನಾಗಿಯೂ, ಕನಿಷ್ಠರ ಇದಿರು ತೀರ ವರಿಷ್ಠವಾಗಿಯೂ ಆತನು ನಡಕೊಳ್ಳುತ್ತಾನೆ. ತನ್ನದೇ ಒಂದು ಅಳತೆಯಿಂದ ಸಮಾಜದಲ್ಲಿ ಮನ್ನಣೆಯ ತಾರತಮ್ಯಗಳನ್ನೂ ತರಗತಿಗಳನ್ನೂ ಆತನು ಕಟ್ಟಿಕೊಂಡು ಆ ನಡುವೆ ತನ್ನ ಅಂತಸ್ತು ಗೊತ್ತುಪಡಿಸುವದರಲ್ಲಿಯೇ ಸುಗ್ಗಾಗಿ ಹೋಗುತ್ತಾನೆ ! ತನ್ನ ಮೇಲಿನವರೆಂದು ತಿಳಿದವರೊಂದಿಗೆ ವಿನಯ ತನ್ನ ಕೆಳಗಿನವ ರೆಂದು ತಿಳಿದವರೊಡನೆ ಉದ್ಧಟವ್ಯವಹಾರ ಇಂಥ ಡಂಭಾಚಾರಿಯ ನಡಾವಳಿ.

ಸುಳ್ಳು ಸ್ತುತಿಯ ಮಾದಕ ಗಂಧವನ್ನು ಸುತ್ತಲೂ ಸವಿಯಲಿಕ್ಕೆ ಈತನು ಹಾತೊರೆಯುತ್ತಾನೆ. ತನಗೆ ಸಲ್ಲಿಸಲಾಗುವ ಇಂಥ ಸ್ತುತಿಯು ಮಿತಿಗೆಟ್ಟರೂ ಈತನಿಗೆ ಗೊತ್ತಾಗುವದಿಲ್ಲ. ಹಲವೊಮ್ಮೆ ತಾನೇ ಬೇರೆಯವರಿಂದ ಒತ್ತಾಯಪಡಿಸಿ ಇಂಥ ಸ್ತುತಿಯನ್ನು ಮುಂದಿಯಿಂದ ಪಡಕೊಂಡು ಈತನು ತಣಿಯುತ್ತಾನೆ! ಇವರ ಪರಿಣಾಮವಾಗಿ ಒಂದು ಅಸಮಂಜಸವಾದ ಉದಾರತೆಯನ್ನೂ ಈತನು ಪ್ರಕಟಿಸುವದುಂಟು. ತನಗಿಂತ ವರಿಷ್ಠರಿಂದ ತನಗೆ ದೊರೆಯದಿರುವ ಮನ್ನಣೆ ಯನ್ನು ಕನಿಷ್ಠರಿಂದ ಪಡೆಯಬೇಕೆಂಬ ಹವ್ಯಾಸವಿದ್ದವರಿಂದ, ಇಂಥ ದಂಭವಂತನು ಕಾಲ, ಅಕಾಲ, ಪಾತ್ರ ಅಪಾತ್ರಗಳೆಂಬ ತಾರತಮ್ಯವಿಲ್ಲದೆ ಔದಾರ್ಯವನ್ನೋ ಐಶ್ವರ್ಯವನ್ನೋ ಪ್ರದರ್ಶಿಸಲಿಕ್ಕೆ ಹೋಗುವನು. ಉಪಹಾರಗೃಹದಲ್ಲಿ ಪರಿ ಚಾರಕರಿಗೆ ನಾಲ್ಕಾಣೆ 'ಬಕ್ಷೀಸು' ಕೊಡುವಲ್ಲಿ ಒಂದು ರೂಪಾಯಿ ಒಗೆಯುವದು, ಮತ್ತೂ ಆತನಿಂದ 'ರಾವಸಾಬ್ ಸಲಾಂ!' ಆ ಎಂದು ಹೇಳಿಸಿಕೊಳ್ಳುವದು ಈತನಿಗೆ ಮೆಚ್ಚುಗೆ. ಊರಿಗೆ ಬಂದ ನಾಟಕ ಮಂಡಳಿಯಿಂದ ಹೇಗೋ 'ಫ್ರೀ' ಪಾಸು ತರಿಸಿಕೊಂಡು ಕೊನೆಗೆ ಅವರಿಗೆ ೧೦–೨೦ ರೂಪಾಯಿ ಕಾಣಿಕೆಯಾಗಿ ಕೊಡುವದೂ ಈತನಿಗೆ ಯೋಗ್ಯವೆನಿಸುವದು! ಅತ್ತ ಮನೆಯಲ್ಲಿ ಚಾಕರಿ ಆಳುಗಳ ಸಂಬಳ ಕಡಿಮೆ ಇದ್ದರೂ ಬಾಕಿ ಬಿದ್ದರೂ ಅದನ್ನು ತುಂಬಿಕೊಡುವ ಅವಶ್ಯಕತೆ, ಅನಿಸುವದಿಲ್ಲ ಈ ಮಹಾಶಯನಿಗೆ!

## ದುಡ್ಡಿನಿಂದ ದೊಡ್ಡಸ್ತನ

ನಿಜವಾದ ಸಭ್ಯಗೃಹಸ್ಥನು ಜನಸಂದಣಿಯಲ್ಲಿ ಯಾರ ಕಣ್ಣಿಗೂ ಬೀಳದಂತೆ ಒತ್ತಟ್ಟಿಗೆ ನಿಲ್ಲುತ್ತಾನೆ. ಇಲ್ಲವೇ ಸುಮ್ಮನೆ ನುಸುಳಿ ಪಾರಾಗುತ್ತಾನೆ. ಆದರೆ ದಂಭಾಚಾರಿಯು ಹಾಗಲ್ಲ. ತನ್ನ ಅಸ್ತಿತ್ವವನ್ನು ಆತನು ಎಂದೂ ಮರೆಯುವದಿಲ್ಲ. ಮಂದಿಯ ಮುಂದೆ ಅದನ್ನು ಮರೆಸಲೂ ಮರೆಯುವದಿಲ್ಲ. ಸಾರ್ವಜನಿಕ ಪ್ರಸಂಗಗಳಲ್ಲಿ, ಸತ್ಕಾರ ಸಮಾರಂಭಗಳಲ್ಲಿ ಇಂಥ ವ್ಯಕ್ತಿ ಒಂದು ಬದಿಗೆ ಕುಳಿತಿರುವದು ಯಾರು ಕಂಡಿಲ್ಲ. ಎಲ್ಲರ ಕೈ ಕುಲುಕುತ್ತ ಎಲ್ಲ ಮಾತು ಕತೆಗಳಲ್ಲಿಯೂ ಆಸ್ಥೆಯಿಂದ ಭಾಗವಹಿಸಿ ಬಾಯ್ತುಂಬ ನಗುತ್ತ ತನ್ನ ಕಡೆಗೆ ಎಲ್ಲರ ಕಣ್ಣು ಕಿವಿಗಳನ್ನೂ ಎಳೆಕೊಳ್ಳುತ್ತ ಕೊನೆಗೆ ಎಲ್ಲರ ಸಂತಾಪಕ್ಕೂ ಕಾರಣವಾಗುವ ದಂಭಾಚಾರಿಯನ್ನು ಯಾರು ನೋಡಿಲ್ಲ? ಒಮ್ಮೆ ನೋಡಿ ಆತನ ನೋಟದಿಂದ ಪಾರಾಗಲು ಯಾರು ಹೆಣಗಾಡಿಲ್ಲ? ತನ್ನದೇ ಮನೆಯಲ್ಲಿ ಅತಿಥಿಗಳನ್ನು ಸತ್ಕರಿಸುವಾಗಲೂ ಆತನ ನಡತೆ ಇದೇ ರೀತಿ. ಔಚಿತ್ಯಗೆಟ್ಟು 'ಔದಾರ್ಯದ ಉರುಳಿನ'ಲ್ಲಿ ಮಂದಿಯನ್ನು ಸಿಲುಕಿಸಿ ಇಡುವದು

ಈತನ ಹೊಂಚು. ಹಸಿದ, ಬಳಲಿದ, ದಿಕ್ಕಿಲ್ಲದ ಬಡಪಾಯಿಗಳು ಈತನ ಬಾಗಿಲಿನಿಂದ ಬರಿಗೈಯಿಂದಲೇ ಹಿಂದಿರುಗುವರು. ಆದರೆ ಫಂಡು ನಿಧಿಗಳಿಗೂ, ಸತ್ಕಾರ-ಉತ್ಸವಗಳಿಗೂ ಈತನ ಕೊಡಗೈಯ ಕಾಣಿಕೆ ತಪ್ಪುವದಿಲ್ಲ.

ಡಂಭಾಚಾರಿಯು ಸಾಮಾನ್ಯವಾಗಿ ಹಣದಿಂದಲೇ ಜನರ ಪರೀಕ್ಷೆ ಮಾಡುವ ಜಾಣ. ಯಾರು ಎಷ್ಟು ಧನಿಕರೋ ಅಥವಾ ಧನಿಕರನ್ನು ಆಳುವ ಸತ್ತಾವಂತರೋ, ಅವರು ಎಷ್ಟರ ಮಟ್ಟಿಗೆ ಬುದ್ಧಿವಂತರು, ನಿಜವಾದ ಬುದ್ಧಿಶಕ್ತಿ ಇಲ್ಲವೇ ಜ್ಞಾನಪಾಂಡಿತ್ಯಗಳಿಗೆ ಈತನ ಭಂಡಸಾಲೆಯಲ್ಲಿ ಯಾವ ಬೆಲೆಯೂ ಇಲ್ಲ. ಇದರಿಂದ ಯಾವ ಪುಸ್ತಕಕ್ಕೆ ಹಲವು ಜನರ ಬೇಡಿಕೆಯೋ, ಅದನ್ನೇ ಈತನು ಓದುವಾತನು. ಕಲೆಯ ಬಹುಜನ ಪ್ರಿಯತೆಯಿಂದಲೂ, ಕಲಾವಿದನ ಲೌಕಿಕ ಅಭಿವೃದ್ಧಿಯಿಂದಲೂ ಈತನು ಕಲಾಕೃತಿಯನ್ನು ಮೆಚ್ಚುವಾತನು. ಹಾಗೆಯೇ ಯಾವದೇ ವಿಷಯದಲ್ಲಿ ತಜ್ಞನ ಸಲಹೆ ಅಗತ್ಯವೆನಿಸಿದರೂ ಈತನು ತಜ್ಞನ ಅನುಭವ ಇಲ್ಲವೇ ಪರಿಜ್ಞಾನಕ್ಕಿಂತ, ಆತನ ಬಿರುದು ಬಿನ್ನಾಣಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುವಾತನು. ಇಂಥವನೊಂದಿಗೆ ಯಶಸ್ವಿಯಾಗುವದು ಬಹಳ ಸುಲಭ. ತನ್ನಂತೆ ಪರರೆಂದು ಇಂಥ ಡಂಭಾಚಾರಿಯು ಭಾವಿಸುವನಾದ್ದರಿಂದ ನಾವೂ, ಒಳ್ಳೇ ಪ್ರದರ್ಶನ ಸಾಧಿಸಿದರೆ, ಬೆಲೆಯುಳ್ಳ ವೇಷ-ಭಾಷೆ, ಕಾರು-ಕಚೇರಿ, ಮನೆ ತುಂಬ ಚಾಕರಿಯಾಳುಗಳನ್ನು ಇಟ್ಟು ನಮ್ಮ ಆಢ್ಯತೆಯನ್ನು ಸಜ್ಜಾಗಿ ಕಣ್ಣು ಕುಕ್ಕುವಂತೆ ಕಾಣಿಸುವ ಹದ ಕಲಿತುಕೊಂಡರೆ ಸಾಕು–ಇಂಥ ಅಹಂಮನ್ಯ ಡಂಭವಂತ ಗೊಡ್ಡು ಗೌರವಸ್ಥರನ್ನು ನಮ್ಮ ಕಾರ್ಯಕ್ಕೆ ಹೂಡಬಹುದು.

ಇನ್ನು ಇಂಥ ಡಂಭಾಚಾರಿಯಲ್ಲಿಯೂ ಒಂದು ಗುಣವಿದೆ. ಆ ಗುಣ ಅವನ ಡಂಭಿಕತನದ್ದೇ ಫಲ. ಇಂಥ ಡಾಂಭಿಕನು ತನ್ನ ಮಕ್ಕಳಿಗೆ ಆದಷ್ಟು ಆಧುನಿಕ ಮತ್ತು ಉಚ್ಚ ಶಿಕ್ಷಣ ಕೊಡಲು ಯಾವ ವೆಚ್ಚಕ್ಕೂ ಹಿಂಜರಿಯುವದಿಲ್ಲ. ಮಗಳಿದ್ದರೆ, ಆಕೆಯನ್ನು ಐ. ಸಿ. ಎಸ್. ಅಧಿಕಾರಿಗೋ ಇನ್ನಾವ ಉನ್ನತ ವ್ಯಕ್ತಿಗೋ ಅಭಿಜಾತ ಕುಲದ ವರನಿಗೋ ಆಕೆಯನ್ನು ಕೊಟ್ಟು, ವರನ ಶೀಲಕ್ಕಿಂತಲೂ ಶ್ರೀಮಂತಿಕೆಗೋ ಶ್ರೇಷ್ಠ ಪದವಿಗೋ ಮೆಚ್ಚಿ ಕೃತಾರ್ಥನಾಗುತ್ತಾನೆ. ಮಗನಿದ್ದರೆ, ಆತನಿಗೆ ಉಚ್ಚ ಶಿಕ್ಷಣ ಕೊಟ್ಟು ಪದವೀಧರನಾಗಿ ಮಾಡುವದೇ ಇಂಥವನ ಧ್ಯೇಯವಿರುತ್ತದೆ. ಇದರಿಂದ ಒಂದು ದಾರುಣ ಪರಿಣಾಮವೂ ಒದಗಿ ಬರುತ್ತದೆ. ತನಗೆ ವಂಚಿತವಾದ ಸಂಸ್ಕೃತಿ ಶಿಕ್ಷಣಗಳನ್ನು ತನ್ನ ಮಗನು ಪಡೆದು ನಿಜವಾದ ಸದ್ಗೃಹಸ್ಥನಾಗಲೆಂದು ಡಾಂಭಿಕನು ಹವ್ಯಾಸಪಟ್ಟರೂ, ಕೊನೆಗೆ ಅಂಥ

ಸುಸಂಸ್ಕೃತ ಸುಶಿಕ್ಷಿತನಾದ ಸದ್ಗೃಹಸ್ಥ ಮಗನು ತಂದೆಯನ್ನೇ ತಿರಸ್ಕರಿಸುತ್ತಾನೆ-ಶಿಕ್ಷಣ ಸಂಸ್ಕಾರದೊಂದಿಗೆ ತಂದೆಯ ಕುರಿತು ತಿರಸ್ಕಾರವೂ ಬೆಳೆದು ಬರುತ್ತದೆ! ಇವನ್ನು ಕಂಡು ತಂದೆ ವ್ಯಥೆಪಟ್ಟುಕೊಳ್ಳುತ್ತಾನೆ! ಅಪರೆ ಬೋಧವೇನೂ ಪಡೆಯುವದಿಲ್ಲ!

ಇನ್ನೂ ಪುರುಷರ ಬೇರೊಂದು ಮಾದರಿ ಇದೆ. ಅಂಜುಬುರುಕುತನದ ವಿರುದ್ಧ ವೃತ್ತಿಯು ಈ ಮಾದರಿಯದು. ಈ ಮಾ ದ ರಿ ಯ ವ ನು ನಾಚುವದಿಲ್ಲ; ಹಿಂಜರಿಯುವದಿಲ್ಲ. ಅನುವು ಒದಗಿದಾಗೆಲ್ಲ ಹಲವೊಮ್ಮೆ ಒದಗಿಸಿಕೊಂಡರೂ, ತನ್ನ ಸಾಮರ್ಥ್ಯವನ್ನು ಪ್ರದರ್ಶಿಸುವದೇ ಇವನಿಗೆ ಎಂದಿಗೂ ಮೆಚ್ಚಿಗೆ. ಮಂದಿಯನ್ನು ಆಳಬೇಕೆಂದು ಇವನ ಯತ್ನ. ಲೋಕಪ್ರಿಯತೆಗಿಂತಲೂ ಲೋಕಭಯಂಕರನಾಗುವದೇ ಇವನಿಗೆ ಇಷ್ಟ. ತನ್ನ ಹತ್ತಿರದವರ ಮೇಲೆ ವರ್ಚಸ್ವವನ್ನು ಹೇರುವದು, ಪ್ರಭುತ್ವ ನಡೆಯಿಸುವದು, ಇವನ ಉದ್ದೇಶ. ಇವರ ಲಕ್ಷಣವೆಂದರೆ, ಬಿಂಕದ ಹಾಗೂ ಬಲದ ಬಡಿವಾರ–ಯಾವಾಗಲೂ ಜಂಬ ಕೊಚ್ಚಿಕೊಳ್ಳುವದು: ಹುಂಜದಂತೆ ಹೋರಿಯಂತೆ ಹೋರಾಡುವದು. ಮಾತಿಗೂ ಮುಂದೆ ಮುಷ್ಟಿಯ ಯುಕ್ತಿವಾದ ಇವನದು. ಅಳ್ಳೆದೆಯವರನ್ನೂ, ಅಶಕ್ತರನ್ನೂ ಅಂಜಿಸಿ ಅಂಕೆಯಲ್ಲಿಟ್ಟು ನಡೆಯಿಸುವದರಲ್ಲಿ ಇವನು ತತ್ಪರನು. ಬಲಾತ್ಕಾರವೇ ಇವನ ಪ್ರಭಾವದ ತಂತ್ರ. ಇವನ ಮಾದರಿಗೆ ಪುಂಡತನವೆನ್ನಬಹುದು. ದಂಭಾಚಾರಿಯಂತೆ ಇವನ ಉದ್ದೇಶವೂ ಪ್ರಭಾವಶಾಲಿಯಾಗಬೇಕೆಂಬುದೇ. ಆದರೂ ಪರಿಸ್ಥಿತಿಯ ಪದವರಿತು, ಹಿತವಾದ ಸಹಕಾರ ಸಹಾಯಗಳು ಸಲುವಳಿಯಿಂದ ಲೋಕೋಪಯೋಗಿಯಾಗಿ ಮಂದಿಯ ಮುಂದಾಳು ಆಗುವದು ಇವನ ಮಾರ್ಗವಲ್ಲ ಯಾವ ಪ್ರಸಂಗವೇ ಇರಲಿ. ಬಲಾತ್ಕಾರದಿಂದಲೇ ಹಿಡಿತದಲ್ಲಿ ತರುವ ಹಟ ಇವನದು. ಎಂಥ ಪ್ರಶ್ನೆಯೇ ಬರಲಿ, ಅದರ ಬಿಕ್ಕಟ್ಟನ್ನು ಬಿಡಿಸುವ ಬದಲು ಬಲುಮೆಯಿಂದ ಕಡಿದು ಹಾಕುವದೇ ಚಟ ಇವನದು.

## ಪುಂಡರೂ ತಲೆತಿರುಕರೂ

ಪುಂಡರ ಜಂಭದ ಹುಂಜಾಟ ಈ ತರದಾಯಿತು. ಜಂಭದ ಇನ್ನೂ ಒಂದು ಪ್ರಕಾರವಿದೆ. ಅದು ಬರೇ ಬಾಯ್ಬಡಿದುಕೊಂಡು ಆಯುಕಟ್ಟಿಗೆ ಬಾಯ್ಬಿಡುವ ಪಲಾಯನ ಪಟುಗಳ ವ್ಯರ್ಥ ವಲ್ಗನೆ, ಜೊಳ್ಳು ಜಲ್ಪನೆ, ಈ ಜಂಭದಲ್ಲಿ ಪರವಂಚನೆಗಿಂತ ಆತ್ಮವಂಚನೆಯೇ ವಿಶೇಷವಿರುತ್ತದೆ. ಸತ್ಯವನ್ನು ಇದಿರಾಗದೇ ಅದರಿಂದ ಪಾರಾಗುತ್ತಿರುವಾಗಲೂ ಅದರ ಕುರಿತೂ ಕೂಡ ಆಡಂಬರದ ಆಶ್ವಾಸನ

ಗಳನ್ನು ಮಾಡಿ ತನ್ನನ್ನೇ ತಾನು ಒಡಂಬಡಿಸಿಕೊಳ್ಳುವದು ಇಂಥ ಪಲಾಯನ ಪಟುಗಳ ಲಕ್ಷಣ. ಉತ್ತರಕುಮಾರನ ಸರಳವಾದ ಹೇಡಿತನ ಇವರದಲ್ಲ, ಅಶ್ವತ್ಥಾಮನ ವಕ್ರಗತಿ ಇವರದು. ಪೌರುಷದ ಆಢ್ಯತೆ ಆಡಂಬರ ಇವರು ಬೇಕಷ್ಟು ಕಾಣಿಸುವರು. ಆದರೆ ಪ್ರತ್ಯಕ್ಷ ಕಾರ್ಯರಂಗವನ್ನು ತಪ್ಪಿಸಿಕೊಳ್ಳಲು ಸಾಕಷ್ಟು ಸಬಲ ಕಾರಣವನ್ನು ಹುಡುಕಿಡುವರು. 'ತಾನು ಆಗ ಇದ್ದಿದ್ದರೆ–' 'ತಾನು ಅವನಾಗಿದ್ದರೆ–' ಇಂಥ ಮಾತುಗಳೇ ಇವರ ನಾಲಿಗೆಯಲ್ಲಿ ನಲಿದಾಡುವದನ್ನು ನಾವು ನೋಡಬಹುದು. ಅಲ್ಲದೆ, ಇವರದೂ ಇನ್ನೂ ಒಂದು ಚಾಳಿ ಇದೆ. ಪ್ರಿಯವಾದ ವಸ್ತುಸ್ಥಿತಿಯನ್ನು ತಾವೇ ಸರಿಯಾಗಿ ತಿಳಿದುಕೊಳ್ಳಲು ಒಲ್ಲರು. ಕೆಲವೊಂದು ಕಲ್ಪಿತ ಸಂಗತಿಗಳನ್ನು ಆರೋಪಿಸಿ, ಜಟಿಲವಾದ ವಸ್ತುಸ್ಥಿತಿಯನ್ನು ಸರಳವೆಂತಲೂ, ಬಿಕ್ಕಟ್ಟಿನ ಪರಿಸ್ಥಿತಿಯನ್ನು ಸಲಿಸವೆಂತಲೂ ಭಾವಿಸಿ ಅದಕ್ಕೆ ಅಗ್ಗದ ಉಪಾಯಗಳು ಸೂಚಿಸುವವರಲ್ಲಿ ಇವರು ನಿಪುಣರು. ಇಂಥವರು ಆತ್ಮ ಸಮರ್ಥನೆಯಲ್ಲಿ ಒಳ್ಳೇ ಚತುರರು–ಸಂಧಿ ಸಾಧಿಸದಿರುವವರಲ್ಲಿ ಒಳ್ಳೇ ಆತುರರು. ತಮ್ಮ ಮೂಲದ ಅನಿಚ್ಛೆಯನ್ನೂ ಅಶಕ್ತತೆಯ ಭಯವನ್ನು ಮುಚ್ಚಿಕೊಳ್ಳಲಿಕ್ಕೆ– ಅದೂ ಸಪ್ರಮಾಣವಾಗಿ ಸನ್ಮಾನದಿಂದ ಮುಚ್ಚಿಕೊಳ್ಳಲಿಕ್ಕೆ ಅವರು ಬಹಳೇ ಹೆಣಗುವರು. ಇಂಥವರು ಕೆಲ ಸಲ ಹಲವರನ್ನು ಮಂಕುಗೊಳಿಸಬಹುದು; ಕೆಲವರಾದರೂ ಇವರ ಬಣ್ಣ ಬಯಲಿಗೆ ಎಳೆಯದೇ ಹೋಗುವದಿಲ್ಲ.

ಪುರುಷರಲ್ಲಿ ಇನ್ನೂ ಒಂದು ಪ್ರಕಾರವಿದೆ. ಪುರುಷರೆಂದೇ ಉಂಟಾದ ಪ್ರಕಾರವಲ್ಲ,– ಸಾರ್ವಜನಿಕ ಸಾಹಚರ್ಯದ ಅವಕಾಶ ಪುರುಷರಿಗೇ ಹೆಚ್ಚಾಗಿ ಸಿಗುವದರಿಂದ ಈ ಪ್ರಕಾರಗಳನ್ನು ಪುರುಷರಲ್ಲಿಯೇ ವಿಶೇಷ ಬೆಳೆದು ಬರುವವು, ಇಷ್ಟೇ. ತಾರತಮ್ಯ, ನಿರೀಕ್ಷಣ ಹಾಗೂ ತಾಳ್ಮೆ ಇವು ಕಡಿಮೆಯಿದ್ದ ತಿಳುವಳಿಕೆಯ ಜನರಲ್ಲಿ ಇಚ್ಛಾ ಶಕ್ತಿಯೇ ತೀವ್ರವಾಗಿದ್ದರೆ, ಅವರು ಹಠವಾದಿಗಳೂ ಖಂಡಿತ ಮತವಾದಿಗಳೂ ಆಗುವದುಂಟು. ಯಾವದೇ ಸಂಗತಿಯ ಕುರಿತು ತೀವ್ರವಾದ ಮತವನ್ನೂ ಬೆಳಸಿಕೊಂಡು ಸದಾಕಾಲವೂ ಅದನ್ನು ಆಡಿ ತೋರಿಸುವ ವಾಡಿಕೆ ಇದ್ದ ಈ ಜನರು 'ತಲೆತಿರುಕ'ರೆನಿಸಿಕೊಳ್ಳುವರು. 'ತಲೆತಿರುಕ' ತನವೆಂದರೆ, ಮನಸ್ಸಿನಲ್ಲಿ ಒಂದೇ ವೃತ್ತಿ ಇಲ್ಲವೇ ಅಭಿಪ್ರಾಯ ಸ್ಥಿರವಾಗಿ ನಿಂತು ಇಡೀ ಬಾಳನ್ನೇ ಅದು ಆಳತೊಡಗುವದು. ಇವರಿಗೆ ಬಂಡಿಬಗೆಯ ಹುಚ್ಚರೆನ್ನಬಹುದು. ಇಂಥವ ರನ್ನು ಗುರುತಿಸುವದು ಸುಲಭ. ಜನಸಾಮಾನ್ಯರಿಂದ ಬೇರೆಯಾದ ಒಂದು ಚಿಕ್ಕ ಕಿರಿದಾಗಲೀ ಹಿರಿದಾಗಲೀ ವಿಕೃತಿಯು ಅಥವಾ ಆಕ್ಷಿಪ್ತ ವೃತ್ತಿಯು ಇವರ ನಡತೆಯಲ್ಲಿ ವ್ಯಕ್ತವಾಗುವದು, ಇವರು ಮೂರ್ಖರಿರುವದಿಲ್ಲ. ಹಲವೊಮ್ಮೆ ಒಳ್ಳೇ ಆಶೋತ್ತರವುಳ್ಳ ಬಾಳು ಇವರದಾಗಿರುತ್ತದೆ. ಇವರಲ್ಲಿ ಕಲ್ಪನಾಶಕ್ತಿ, ನಿರ್ಮಾಪಕ

ಶಕ್ತಿ. ಮತ್ತೂ ಅದನ್ನು ಪ್ರಕಟಗೊಳಿಸುವ ಶಕ್ತಿ. ಇವೆಷ್ಟು ಒಳ್ಳೇ ವಿಪುಲವಾಗಿರುವದೂ ಕಂಡುಬರುತ್ತದೆ. ಆದರೆ ವ್ಯಾವಹಾರಿಕ ದೃಷ್ಟಿಯ ಅಭಾವದಿಂದಲೂ, ಯೋಗ್ಯ ಕರ್ತೃತ್ವದ ಕೊರತೆಯಿಂದಲೂ ಅವರ ಯೋಜನೆಗಳು ವ್ಯರ್ಥವಾಗುತ್ತದೆ. ಆಗ ಆಚಾರಕ್ಕಿಂತ ಪ್ರಚಾರವೇ ಅವರ ಗುರಿಯಾಗಿಬಿಡುತ್ತದೆ. ಇಂಥವರು ವಿಚಾರಕ್ರಾಂತಿಯ ಅಗ್ರದೂತರಾಗುತಾರೆ. ಆದರ್ಶವನ್ನು ಕಂಡು, ಆದೇಶವನ್ನು ಕೊಟ್ಟು ಸಿದ್ಧಾಂತಗಳನ್ನು ಶೋಧಿಸಿ ಸಾರುವ ಸ್ವಪ್ನಜೀವಿಗಳು ಈ ತಲೆತಿರುಕರ ಕೋಟೆಯಲ್ಲಿಯೇ ಹುಟ್ಟುತ್ತಾರೆ. ದಕ್ಷಿಣೋತ್ತರವಾಗಿ ವ್ಯಾಪಿಸಿದ ಭಾರತೀಯ ಸಾಮ್ರಾಜ್ಯಕ್ಕೆ, ಉತ್ತರದಲ್ಲಿಯ ದಿಲ್ಲಿಯು ಯೋಗ್ಯ ರಾಜಧಾನಿಯಲ್ಲವೆಂಬ ಯುಕ್ತವಾದ ವಿಚಾರ ಮಹಮ್ಮದ ತಘಲಕನಿಗೆ ತೋಚಿತು. ಆದರೆ ವಿಚಾರದ ಎಲ್ಲ ಸಾಂಗೋಪಾಂಗ ಪರಿಶೀಲನೆಗೆ ಆತನಲ್ಲಿ ತಾಳ್ಮೆಯಾಗಲೀ, ತಾರತಮ್ಯದ ತಿಳುವಳಿಕೆಯಾಗಲೀ ಇದ್ದಿಲ್ಲ. ಅದ್ದರಿಂದ ದಿಲ್ಲಿಯಿಂದ ದೌಲತ್ತಾಬಾದದ ತನಕವೂ ಪಟ್ಟಣಿಗರನ್ನೇ ಸ್ಥಳಾಂತರಿಸುವ ಮೊಂಡಹಟಕ್ಕೆ ಬಿದ್ದು ಇತಿಹಾಸ ಪ್ರಸಿದ್ಧ 'ಹುಚ್ಚ ಮಹಮ್ಮದ'ನೆನಿಸಿಕೊಂಡನು !

## ಮತಾಂಧನ ಮಾದರಿ

ತಲೆತಿರುಕರ ಕೋಟಿಗೂ ಆಚೆಯ ಕೋಟಿ ಮತಾಂಧರದು. ಇವರಿಗೆ ಮತ ಒಂದೇ ಅತ್ಯಂತಿಕ ಏಕಾಂತಿಕವಾಗಿರುವದಿಲ್ಲ. ಅದಕ್ಕೆ ಒಂದು ಅಂಥ ಆವೇಶವನ್ನು ಕೊಡುವಂತೆ ಮಾನಸಿಕ ಸ್ಥಿತಿಯಲ್ಲಿಯೇ ಒಂದು ಪ್ರಳಯವೆದ್ದಿರುತ್ತದೆ. ತಲೆತಿರುಕನು ತನ್ನ ಮಟ್ಟಿಗೆ ಮಾತ್ರ ಅಪಯಶಸ್ವಿಯೋ, ನಗೆಗೀಡೋ ಆಗುತ್ತಾನೆ. ಆದರೆ ಮತಾಂಧನು ತನ್ನವರನ್ನೂ ತನ್ನ ದುರ್ದೆಶೆಗೆ ಈಡು ಮಾಡುತ್ತಾನೆ. ಮತಾಂಧನ ಮನೋವೃತ್ತಿಯೂ ತೂಕ ತಪ್ಪಿದ್ದು, ಅಲ್ಲದೆ ವಿಷಮವಾದ ಭಾವನಾಕ್ಷೋಬದ ವಿಕಾರಗೆಟ್ಟ ಸ್ಥಿತಿಯದು. ಮತಾಂಧನ ಜೀವನ ಪ್ರವಾಹವು ಒಂದು ವಿಶಾಲವಾದ ಪಾತ್ರದಲ್ಲಿ ಸರಾಗವಾಗಿ ಹರಿಯುವ ಬದಲು ಇಕ್ಕಟ್ಟಿನ ಕೊಟ್ಟಿಯಲ್ಲಿ ರಭಸದಿಂದ ನುಗ್ಗುವದು. ಇವರಿಂದ ಮತಾಂಧರಲ್ಲಿ ಎರಡು ವಿಶೇಷಗಳು ಒಮ್ಮೆಲೇ ಕಾಣುವವು. ತಾನು ಹಿಡಿದ ಮತದ ಹಿಂದೆ ಮೆಚ್ಚಿದ ಸಂಗತಿಯಲ್ಲಿ ಮಿತಿಮೀರಿದ ಪ್ರಚಂಡ ಕಾರ್ಯೋತ್ಸಾಹದ ಪ್ರೇರಕಶಕ್ತಿ–ಹಾಗೆಯೇ ಅದರ ಬಾಹಿರ ಇತರ ಸಂಗತಿಗಳಲ್ಲಿಯೂ ಕಾರ್ಯಕ್ಷೇತ್ರಗಳಲ್ಲಿಯೂ ಯಾವ ಆಸಕ್ತಿಯೂ ಇಲ್ಲದ ನಿಷ್ಠುರವಾದ ವಿರಕ್ತಿ. ಈ ಮಾತನ್ನು ಓದಿದೊಡನೆ ಇಂಗ್ಲಂಡದ ಕ್ರಾಮವೆಲ್ ಮತ್ತು ಹಿಂದುಸ್ಥಾನದ ಔರಂಗಜೇಬರ ನೆನಪಾಗದೇ ಇರದು.

ಮತಾಂಧತೆ ನಿಷ್ಠುರವಿರುತ್ತದೆ, ನಿರ್ದಯವಿರುತ್ತದೆ, ನಿರ್ಬಂಧವನ್ನೂ ನೀತಿಯನ್ನೂ ಲೆಕ್ಕಿಸುವದಿಲ್ಲ. ಇದೆಲ್ಲ ನಿಜ. ಆದರೂ ಅಂಥ ಮತಾಂಧತೆ ಯಾವದೊಂದು ಲೋಕಹಿತದ ಸಾರ್ವಜನಿಕ ಇಲ್ಲವೇ ರಾಷ್ಟ್ರೀಯ ಕಲ್ಯಾಣದ ಉದ್ದೇಶವ ಕುರಿತು ಇದ್ದರೆ ಅದರಿಂದ ಅಷ್ಟೇ ಅಪೂರ್ವವಾದ ಅಮೂಲ್ಯವಾದ ಲಾಭವೂ ಆಗುತ್ತದೆ. ಹಿಟ್ಲರನ ಮತಾಂಧತೆ ಜರ್ಮನರ ಸರ್ವನಾಶಕ್ಕೆ ಕಾರಣವಾದರೂ, ಸ್ಟಾಲಿನ್ನನ ಮತಾಂಧತೆಯು ಕಮ್ಯುನಿಷ್ಟ ಕರ್ಮಠತೆಯ ಕರ್ಮಯೋಗದಿಂದ ರಶಿಯನ್ನ ಮಾನವ ಕೋಟಿಯ ಅಭ್ಯುದಯಕ್ಕೆ ಸಾಧನವಾಯಿತು. ಅಂಥವಾದ ಪ್ರೇರಕಶಕ್ತಿಯ ಲಾಭ, ಅದು ಅಂಟಿಕೊಂಡ ಮತದ ಸಾಧಕ ಇಲ್ಲವೇ ಬಾಧಕ ಸ್ವರೂಪದಿಂದಲೇ ತಾರಕವಾಗಬಹುದು ಮಾರಕವೂ ಆಗಬಹುದು. ಆದ್ದರಿಂದ ದೇಶದ ಎಷ್ಟೋ ರಾಜಕೀಯ ಪ್ರಗತಿಯು ಇಂಥ ಮತಾಂಧರಿಂದಲೇ ಕೈಗೂಡುವದು. ನೆಲೆಗೊಂಡ ಸತ್ತೆ ಇಲ್ಲವೇ ಸಮಾಜ ವ್ಯವಸ್ಥೆಯ ದುಷ್ಟತೆಯ ವಿರುದ್ಧ ಹಾಗೂ ಜನಸಾಮಾನ್ಯರ ನಿಷ್ಕ್ರಿಯ ಜಡತೆಯ ವಿರುದ್ಧ ಹೋರಾಡಿ ಮುಂದರಿಯಲು ಕೆಲವಟ್ಟಿಗಾದರೂ ಮತಾಂಧತೆಯ ರೊಚ್ಚಿನ ಮತ್ತು ಕೆಚ್ಚಿನ ರಭಸವು ಬೇಕು. ಸಮಾಧಾನದ ಸ್ಥಿರಪ್ರಜ್ಞರಿಂದ ಈ ಮಾತು ಸಾಧ್ಯವಿಲ್ಲ.

ಪುರುಷ ಸ್ವಭಾವದಲ್ಲಿ ಇನ್ನೊಂದು ಮಾದರಿಯನ್ನು ನಾವು ನೋಡಬಹುದು. ಈ ಮಾದರಿಯು ಎರಡು ವಿಧವಾಗಿರುತ್ತದೆ. ಅದು ಅವರವರ ಬಾಳಿನ ಒಳನೋಟವನ್ನು ಕಾಣಿಸುತ್ತದೆ. ಜನರು ಆಶಾವಾದಿಗಳಾಗಲೀ ನಿರಾಶಾವಾದಿಗಳಾಗಲೀ ಇರುವದುಂಟು. ಆಶಾವಾದಿಯು ಉತ್ಸಾಹಿಯೂ ಇರುತ್ತಾನೆ. ಕಾರ್ಯತತ್ಪರವಾದ ಚೈತನ್ಯ ಅವನದು. ಆಗುಹೋಗುಗಳ ಹೊಳಪಿನ ಬದಿಯನ್ನೇ ಆತನು ನೋಡುತ್ತಾನೆ. ಇರುಳಿನ ಕತ್ತಲೆಯಿಂದ ಕುಗ್ಗುವದಿಲ್ಲ. ತಾರೆಗಳ ಹೂಬೆಳಕಿನಿಂದ ಹಿಗ್ಗುತ್ತಾನೆ. ಬರಲಿರುವ ಸುಖದ ಹಂಬಲದಿಂದ ಬಂದ ದುಃಖವನ್ನು ನಗುತ್ತ ನುಂಗುತ್ತಾನೆ. ಇವನಿಗೆ ಬದುಕಿನಲ್ಲಿ ಹಿತವೂ, ಮಿತವೂ, ಸುಖವೂ ಕಾಣುತ್ತದೆ. ಈತನ ಆಶೆಯ ಬುಗ್ಗೆ ಯಾವಾಗಲೂ ಪುಟಿಯುತ್ತಿರುತ್ತದೆ. ಎಷ್ಟೇ ಕಷ್ಟನಷ್ಟಗಳ ಸುಳಿಯಲ್ಲಿ ಸಿಲುಕಿದ್ದರೂ, ಬದುಕಿನ ಹೊರೆ ಎಷ್ಟೇ ಭಾರವಿದ್ದರೂ, ಹೋರೆ ಎಷ್ಟೇ ಬೇಸರವಿದ್ದರೂ, ಆವರಣ ಎಷ್ಟೇ ಹೊಲಸಿದ್ದರೂ ಇವನು ಸಮಾಧಾನಿಯಿರುತ್ತಾನೆ. ಇಷ್ಟೆ ಅಲ್ಲ ಬರೇ ಬಾಳಿನಲ್ಲಿಯೇ ಸಂತುಷ್ಟನಿರುತ್ತಾನೆ.

### ನಿರಾಶಾವಾದಿ ಎಂಥವನು ?

ಆದರೆ ನಿರಾಶವಾದಿ ಹೀಗಲ್ಲ. ಅವನದು ಉದಾಸೀನ ವೃತ್ತಿ; ವೈರಾಗ್ಯದ ನಿವೃತ್ತಿ–

ಪ್ರೀತಿಯ ಪ್ರವೃತ್ತಿಯಲ್ಲ. ಇವನಿಗೆ ಬೆಳಕೇ ಬದುಕು ಎಂಬ ಹುಂಬವಿಲ್ಲ. ಬಾಳುವುದು ಇವನಿಗೆ ಸಾಹಸದ ಸಿರಿಯಲ್ಲ. ಬರೇ ಸಹನೆಯ ಪರಿ. ಇವನು ಗೋಳಾಡದಿದ್ದಾಗೆಲ್ಲ ಬರೇ ಗಂಭೀರ. ಪ್ರಪಂಚದ ಹೊಲಸಿನ ಬದಿಯನ್ನೇ ನೋಡಿ ಮೈ ಮುದುಡಿಕೊಳ್ಳುತ್ತಾನೆ. ನಿಟ್ಟುಸಿರು ಬಿಡುತ್ತಾನೆ. ಬದುಕಿನಲ್ಲಿ ಕೆಡಕು-ಕುಹಕ. ಕೋಲಾಹಲ-ಹಾಲಾಹಲ, ಕಲಹ-ಪರಿತಾಪ, ಯಶ-ಅಪಮಾನ, ಜಾಡ್ಯ-ಮೌಢ್ಯಗಳೇ ಇವನಿಗೆ ಕಾಣುತ್ತವೆ. ಜಗತ್ತಿನಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚಿದೆಯೆಂದು ನಂಬುತ್ತಾನೆ. ನಮ್ಮ ಹುಟ್ಟು ಹೆತ್ತವರ ನೋವು: ಸಾವು ನಮ್ಮ ನೋವು ಶ್ರೇಯದ ಇಷ್ಟದ ಬೆಲೆ ಶ್ರಮದ ಕಷ್ಟ: ಪ್ರೀತಿಗೆ ವಿರಹದ ಶಾಪ: ಭೋಗಕ್ಕೆ ರೋಗದ ಭೀತಿ-ಹೀಗೆಲ್ಲ ಒಂದು ಒಳಿತಿಗೆ ಹಲವು ಕೆಡಕುಗಳ ಬೆನ್ನೆಲೆಯನ್ನು ಕಟ್ಟಿ ನಿರಾಶಾವಾದಿಯು ಕಳವಳಗೊಳ್ಳುತ್ತಾನೆ. ಉಭಯ ಸಂಕಟಕ್ಕೆ ಇದಿರಾದರೆ, ಬಿಡುಗಡೆಯ ದಾರಿಯ ಬದಲು ಎರಡಕ್ಕೂ ಮಿಗಿಲಾದ ಮೂರನೇ ಮಹಾಸಂಕಟವನ್ನೇ ಆತನು ಹಂಬಲಿಸುತ್ತಾನೆ. ಇವೆರಡು ಮಾದರಿಯವರಲ್ಲಿ ಬದುಕಿ ಗೆಲ್ಲಬಲ್ಲವನು ಯಾರೆಂಬುದನ್ನು ನಾವು ಸಹಜವಾಗಿ ಊಹಿಸಬಹುದು.

ಪುರುಷ ಸ್ವಭಾವದ ಇನ್ನೂ ಎರಡು ಮಾದರಿಗಳಿವೆ. ನಮ್ಮ ಪುರಾಣಗಳು ಅರ್ಜುನನೋರ್ವನೇ ನರನೆಂದರು. ಅಂದರೆ ಮಿಕ್ಕವರೆಲ್ಲರೂ ನಾರಿಯರೆಂದೇ ? ಹಾಗಲ್ಲ. ಪ್ರತಿವ್ಯಕ್ತಿಯೂ ಅರ್ಧನಾರಿನರೇಶ್ವರನೇ ಸರಿ. ಪ್ರತಿ ಗಂಡಿನಲ್ಲಿಯೂ ಹೆಣ್ಣು ಮನೋಧರ್ಮದ ಕೆಲವಂಶವೂ. ಪ್ರತಿಹೆಣ್ಣಿನಲ್ಲಿಯೂ ಗಂಡು ಮನೋಧರ್ಮದ ಕೆಲವಂಶವೂ ಇದ್ದೇ ಇರುತ್ತದೆ. ಶರೀರಭೇದದಿಂದ ಹೆಣ್ಣು ಗಂಡು ಸ್ಥೂಲವಾಗಿ ಸ್ಪಷ್ಟವಿದ್ದರೂ, ಮನೋಧರ್ಮದಲ್ಲಿ ಅಷ್ಟೊಂದು ಭೇದ ಸೂಕ್ಷ್ಮವಾಗಿ ಬೇರ್ಪಟ್ಟಿರುವದಿಲ್ಲ. ಇದರಿಂದ ನಾವು ನಮ್ಮ ಪರಿಚಿತರಲ್ಲಿಯೂ ಪರಿವಾರದವರಲ್ಲಿಯೂ ಗಂಡಸಿನಲ್ಲಿಯೂ ಕೂಡ ಪೌರುಷಿಗಳೂ ಸ್ತ್ರೈಣರೂ ಎಂದು ಭೇದ ಮಾಡಬಹುದು. ಪೌರುಷಿಯು ಕಾರ್ಯತತ್ಪರನೂ, ಚಟುವಟಿಕೆಯವನೂ. ಸತ್ವಶಾಲಿಯೂ. ರಭಸದವನೂ ಆಕ್ರಮಕ ವೃತ್ತಿಯವನೂ ವ್ಯಾವಹಾರಿಕ ಪ್ರಪಂಚದಲ್ಲಿ ಒಳ್ಳೇ ಆಸ್ಥೆಯುಳ್ಳವನೂ ತನ್ನ ಜೀವನ ಮತ್ತು ಜಗತ್ತಿನ ಮೇಲೆ ನಿಯಂತ್ರಣ ದಿಗ್ದರ್ಶನವನ್ನು ಮಾಡಬಯಸುವಂಥವನೂ, ಸಾಮರ್ಥ್ಯ ಹಾಗೂ ಪ್ರಭಾವವನ್ನೇ ಗುರಿಯಾಗಿ ಇಟ್ಟುಕೊಂಡವನೂ ಸಂಪತ್ತು ಪ್ರತಿಷ್ಠೆ ಹಾಗೂ ಲೌಕಿಕ ಸಾಧನ ಸೌಕರ್ಯಗಳನ್ನು ಗಳಿಸಲು ಹೆಣಗುವವನೂ ಇರುತ್ತಾನೆ. ಅಂದರೆ ಪ್ರತಿಯೊಬ್ಬ ಪುರುಷ ಗಂಡಸೂ ಇವೆಲ್ಲವನ್ನೂ ಪಡೆದವನೆಂದಲ್ಲ. ಕೆಲವಾದರೂ ಈ ಲಕ್ಷಣಗಳು ಅವನಲ್ಲಿ ವ್ಯಕ್ತವಾಗದೇ ಹೋಗುವದಿಲ್ಲ. ಇಂಥವನಲ್ಲಿ ವಿಚಾರಗಳೂ ಯೋಜನೆಗಳೂ ಆವೇಶಯುಕ್ತವಾಗಿ ಬರುತ್ತವೆ. ತನ್ನ

ಮತ ಸಿದ್ಧಾಂತಗಳ ಕುರಿತು ಈತನು ಪಕ್ಷಪಾತಿಯಾಗಿರುತ್ತಾನೆ. ಸಹಸಾ ಮತಾಂತರಕ್ಕೆ ಒಳಪಡುವದಿಲ್ಲ. ವಿರೋಧಿಗಳನ್ನು ಪ್ರತಿಭಟಿಸುವದರಲ್ಲಿ ನಿಶ್ಚಯಿಯಾಗಿರುತ್ತಾನೆ. ಜೀವನವನ್ನೂ ಜಗತ್ತನ್ನೂ ತನ್ನ ವಿಕಾರ ಭಾವನೆಗಳಿಗಿಂತ ವಿಚಾರಬುದ್ಧಿಯಿಂದಲೇ ಸಾಮಾನ್ಯವಾಗಿ ಅವಲೋಕಿಸುತ್ತಾನೆ. ಹಾಗೆಯೇ ತನ್ನ ಬಲಕ್ಕಾಗಿಯೂ, ಬುದ್ಧಿಗಾಗಿಯೂ, ಯಶಕ್ಕಾಗಿಯೂ ಪ್ರಶಂಸೆ ಪಡೆಯಬೇಕೆಂದು ಇವನಿಗೆ ಅನಿಸುತ್ತದೆ.

## ಸ್ತ್ರೈಣರ ಲಕ್ಷಣ

ಆದರೆ ಸ್ತ್ರೈಣ ಸ್ವಭಾವದವನು ಹಾಗಲ್ಲ. ಇವನು ವಿಶೇಷವಾಗಿ ಭಾವನಾಮಯನಾಗಿರುತ್ತಾನೆ. ಒಮ್ಮೆಲೇ ಪ್ರಭಾವಿತನಾಗುತ್ತಾನೆ: ಇಂಗಿತಜ್ಞನಾಗಿರುತ್ತಾನೆ: ವೇದನೆ ಸಂವೇದನೆಗಳು ಇವನಿಗೆ ಹೆಚ್ಚು; ತಾತ್ವಿಕನೂ ಸಾತ್ವಿಕನೂ ಇರುತ್ತಾನೆ; ಅಂತಃಪ್ರೇರಣೆಯನ್ನು ಇವನು ನಂಬುತ್ತಾನೆ; ಕಲ್ಪಕನಾಗಿರುತ್ತಾನೆ. 'ವಾದ'ಗಳ ಪ್ರೀತಿ ಇವನಿಗಿರುತ್ತದೆ. ಭಾವೋನ್ಮಾದ ಇವನಿಗಿರುತ್ತದೆ; ಸೌಮ್ಯನೂ, ಸಭ್ಯನೂ, ಚತುರನೂ, ತಾಳ್ಮೆಯುಳ್ಳವನೂ ಆಗಿರುತ್ತಾನೆ. ಆತ್ಮಸಮರ್ಥನೆಗಿಂತ ಆತ್ಮಸಮರ್ಪಣೆ ಇವನಿಗೆ ಸಹಜ. ಅಂದರೆ ತನ್ನ ಹಟವನ್ನೇ ಸಾಧಿಸುವ ಬದಲು ಮತಭೇದಕ್ಕಿಂತ ಮತಾನುಕೂಲವನ್ನೇ ಹೊಂದಿಸಿಕೊಳ್ಳುತ್ತಾನೆ. ಇವನು ರಸಿಕನೂ, ಅಭಿರುಚಿಸಂಪನ್ನನೂ, ಸ್ವಚ್ಛಂದಿಯೂ, ಆದರ್ಶಪ್ರಿಯನೂ, ತತ್ವಪ್ರತಿಪಾದಕನೂ, ನಿರ್ಧಾರ–ನಂಬಿಗೆಗಳಲ್ಲಿ ಚಂಚಲನೂ ಆಗಿರುತ್ತಾನೆ. ಇವನಿಗೆ ಸಂಘರ್ಷ ಬಿಕ್ಕಟ್ಟು ಕಾಯಕಷ್ಟ ಸೇರದು. ಸುಖಸೌಕರ್ಯ ಪ್ರಸನ್ನ ವಾತಾವರಣ, ವಿಲಾಸ–ವಿರಾಮ ಇವನಿಗೆ ಪ್ರಿಯ. ಇವನು ಸೊಗಸುಗಾರ. ಸೌಂದರ್ಯ, ಅಚ್ಚುಕಟ್ಟು, ಉತ್ತಮತೆ ಇವನಿಗೆ ಮೆಚ್ಚಿಗೆ. ಪರಿಮಾಣಕ್ಕಿಂತ ಗುಣಕ್ಕೆ ಇವನು ಹೆಚ್ಚು ಮನ್ನಣೆ ಕೊಡುವವನು. ಜೀವನದ ಬಿರುಸು ಇವನಿಗೆ ಒಗ್ಗದು. ದೃಢನಿಶ್ಚಯ ಸತತ ಪರಿಶ್ರಮ ಇವನಿಗೆ ಸಾಧ್ಯವಿಲ್ಲ. ಸಾಹಸದ, ಪ್ರಯೋಗದ, ತೀರ ಹೊಸ ದುಡುಕಿನ ವ್ಯವಹಾರ ವ್ಯವಸಾಯ ಇವನಿಗೆ ಒಪ್ಪಿಗೆಯಿಲ್ಲ. ಹೊಣೆಗಾರಿಕೆಯ ಮೇಲ್ವರ್ಗದ ಅಧಿಕಾರವೂ ಇವನಿಗೆ ಬೇಕೆನಿಸದು. ಸುಶಿಕ್ಷಿತವಾದ ನಿಯಮಿತವಾದ ಪ್ರಾಪ್ತಿಯುಳ್ಳ, ಒಳ್ಳೇ ನಿಯಂತ್ರಣದ ಕೆಳಗಿನ ಕೆಲಸ ಇವನಿಗೆ ಅನುಕೂಲ. ಮಂದಿಯ ಮೆಚ್ಚಿಗೆ ಮನವಾರೆ ಬಯಸುವನು. ಇತರರನ್ನು ಪ್ರತ್ಯಕ್ಷ ಆಳುವದಕ್ಕಿಂತ ಅವರ ಮೇಲೆ ಪ್ರೀತಿ ದಾಕ್ಷಿಣ್ಯಗಳ ವಕ್ರಪ್ರಭಾವವನ್ನು ಬೀರುವದು ಇವನ ರೀತಿ.

ಮೇಲೆ ಕೊಟ್ಟ ಮಾದರಿಗಳು ಆತ್ಯಂತಿಕ ರೂಪದವು. ನಮ್ಮ ಒಡನಾಡಿಗಳಲ್ಲಿ

ಕೇವಲ ಪೌರುಷಿ ಇಲ್ಲವೇ ಕೇವಲ ಸ್ತ್ರೈಣ ವ್ಯಕ್ತಿ ಸಿಗುವದು ವಿರಳ. ಅವರೆ ಇವೆರಡೂ ಮಾದರಿಯ ಲಕ್ಷಣಗಳಲ್ಲಿ ಕೆಲವೊಂದು ಅಂಶ ಹೆಚ್ಚಾಗಿದ್ದ ಜನರು ಸಾಮಾನ್ಯವಾಗಿ ತೋರಿಬರುವರು. ಅಂಥವರ ಒಂದೆರಡು ಲಕ್ಷಣಗಳನ್ನು ಕಂಡು, ಮಿಕ್ಕವುಗಳನ್ನು ಊಹಿಸಿ ಅದಕ್ಕೆ ತಕ್ಕಂತೆ ನಮ್ಮ ವರ್ತನವಿಡಲು ಅನುಕೂಲ ವಾಗುವದು. ಇದಲ್ಲದೆ ಇನ್ನೂ ಒಂದು ಸಂಗತಿ ವ್ಯಕ್ತವಾಗುವದೇನೆಂದರೆ, ಸಂಸ್ಕೃತಿಗೆ ಪೋಷಕವಾಗುವ ಗುಣಗಳೆಲ್ಲ ಸ್ತ್ರೈಣತೆಯ ಲಕ್ಷಣಗಳೋ ಎಂದೆನಿಸುವದು. ಹೀಗೆ ಸಂಸ್ಕೃತಿ-ರುಚಿರಸಿಕತೆ ಇವೆಲ್ಲ ಹೆಣ್ಣುತನವೆಂದು ನಾಚಿಕೊಂಡು ಎಷ್ಟೋ ವೊಂದು ಗಂಡು ವಿಚಾರದವರು ಹುಂಬ ಸಾಮರ್ಥ್ಯದ ಪೂಜೆ ಕಟ್ಟುವ ಅತ್ಯಾಚಾರಿಯೂ ಬಲಾತ್ಕಾರಿಯೂ ಆದ ಬದುಕಿನ ರೀತಿಯನ್ನು ರೂಢಿಗೊಳಿಸಿ ಜಗತ್ತಿನ ಶಾಂತಿ-ಸುಖಕ್ಕೆ ಭಂಗ ತಂದದ್ದುಂಟು. ಅದರೆ ಪೌರುಷಿಯಾದ ಗುಣಗಳ ಹಂದರದ ಮೇಲೆ ಸ್ತ್ರೈಣವೆನಿಸುವ ಸದ್ಗುಣಗಳನ್ನು ಅರಳಿಸಿದರೇನೇ ಬದುಕಿನ ಬಳ್ಳಿ ಒಪ್ಪಾಗಿ ಹಚ್ಚುವದು. ವ್ಯಕ್ತಿತ್ವ ಒಂದು ಕತ್ತಿಯಂತೆ ಅದಕ್ಕೆ ಅಚ್ಚು ಕೆಚ್ಚಿನ ತೀಕ್ಷ್ಣ ಅಲಗೂ ಅವಶ್ಯವೆ; ಜತೆಗೆ ಮೃದುವಾದ ಒರೆ ಹಾಗೂ ಮಾಟವಾದ ಹಿಡಿಕೆಯೂ ಅಷ್ಟೇ ಅವಶ್ಯ.

ಇನ್ನೂ ಒಂದು ಬಗೆಯಾಗಿ ಪುರುಷರ ವರ್ಗೀಕರಣ ಮಾಡಲು ಬರುವದು. ಕೆಲವರು ಬಹಿರ್ಮುಖರಿರುತ್ತಾರೆ; ಕೆಲವರು ಅಂತರ್ಮುಖರಿರುತ್ತಾರೆ. ಬಹಿರ್ಮುಖರು ಹೊರ ಪ್ರಪಂಚದಲ್ಲಿ ಜೀವನದ ಮತ್ತು ಜಗತ್ತಿನ ವಿಷಯ ವ್ಯಾಪಾರಗಳ ವಿವರಗಳಲ್ಲಿ ಆಸಕ್ತಿ ಉಳ್ಳವರಿರುತ್ತಾರೆ. ಅಂತರ್ಮುಖರು ತಮ್ಮೊಳಗೇ ತಾವಾಗಿ ಮಾನಸಿಕ ಇಲ್ಲವೆ ಕಾಲ್ಪನಿಕ ಪ್ರಪಂಚದಲ್ಲಿ ಮಗ್ನರಾಗಿ ರುತ್ತಾರೆ.-ಈ ಅಂತರ್ಮುಖತೆ ಹಗಲುಗನಸು ಕಾಣುವ ಮೈಗಳ್ಳನದೂ ಇರ ಬಹುದು. ಆತ್ಮಾನುಸಂಧಾನಪರನಾದ ಅನುಭಾವಿಯದೂ ಇರಬಹುದು. ಸಾಮಾನ್ಯವಾಗಿ ಬಹಿರ್ಮುಖರು ಕೆಲಸಗಾರರು-ಕಾರ್ಯಕರ್ತರು; ಅಂತರ್ಮುಖಿ ಗಳು ಚಿಂತನಶೀಲರು; ವಿಚಾರಪರರು, ತಾತ್ವಿಕರು

## ಬಹಿರ್ಮುಖ ಅಂತರ್ಮುಖ

ಕಾರ್ಯಕರ್ತನು ವ್ಯಾವಹಾರಿಕ ಪಾತಳಿಯಲ್ಲಿಯೇ ವಿಚಾರ ಮಾಡುತ್ತಾನೆ. ಉಪಯುಕ್ತತೆಯೇ ಆತನ ಎಲ್ಲ ಅಭ್ಯಾಸ, ಜಿಜ್ಞಾಸೆ ಹಾಗೂ ಕಲ್ಪನೆಯ ಅಡಿಗಲ್ಲು. ಘನವಾದ ಸ್ಥೂಲವಾದ ಸತ್ಯದ ಆಧಾರವಿಲ್ಲದ ಯಾವ ಕೆಲಸವನ್ನೂ ಇವನು

ಕಾಣಲಾರನು. ಇವನಿಗೆ 'ಗುರುರೇವ ಜಗತ್ಸರ್ವಂ'-ಅಂದರೆ ಜಗತ್ತೇ ಈತನ ಗುರು ಹಾಗೂ ಬುದ್ಧಿ ಕಲಿಸುವ ಗ್ರಂಥ. ನೇರವಾಗಿ ತನ್ನ ಹಾಗೂ ಪರರ ಜೀವನದಿಂದ ಇವನು ಬೋಧ ಪಡೆದು ಬಲ್ಲವನಾಗುವನು. ಆದರೆ ಅಂತರ್ಮುಖನಾದ ಚಿಂತನಶೀಲ ತಾತ್ವಿಕನು ಹಾಗಲ್ಲ. ಅವನಿಗೆ ವ್ಯಾವಹಾರಿಕ ಕಾರ್ಯಕರ್ತನಿಗಿಂತ ಜ್ಞಾನ ಹೆಚ್ಚಿದ್ದರೂ ಅದೆಲ್ಲ ಗ್ರಂಥಗಳಿಂದ ಬಂದದ್ದು. ಬಹಿರ್ಮುಖನು ಮಾಡಬಲ್ಲ ವಿಚಾರವಂತನು. ವಾಸ್ತವ ಪ್ರಸಂಗಗಳನ್ನೂ ಪ್ರಶ್ನೆಗಳನ್ನೂ ಇದುರಿಸಿಯೇ ಬಿಡಿಸಬಲ್ಲನು. ಘಟನೆಗಳಲ್ಲಿ ತೊಡಗಿಯೇ ಸುಖಿಯಾಗಬಲ್ಲನು. ಆದರೆ ಅಂತರ್ಮುಖನು ಚೆಂದವಾದ ಸೂಕ್ಷ್ಮವಾದ ತತ್ವಸಿದ್ಧಾಂತಗಳ ಜಾಲವನ್ನೇ ಹೆಣೆಯಬಲ್ಲನು. ಸಾಕ್ಷಿಯಾಗಿ ಜೀವನವನ್ನೆಲ್ಲ ನೋಡಿ ವಿಮರ್ಶಿಸಿ ಜಾಣತನದ ಮಾತನ್ನು ಮಾತಿನ ಜಾಣತನವನ್ನೂ ವ್ಯಕ್ತಪಡಿಸಬಲ್ಲನು. ಜಗತ್ತಿನ ದಾರ್ಶನಿಕರೂ, ಕವಿಗಳೂ, ಕಲಾವಿದರೂ. ಮತಪ್ರವರ್ತಕರೂ ಇಂಥವರು. ಕಾರ್ಲ ಮಾರ್ಕ್ಸನು ಲಂಡನ ಪಟ್ಟಣದಲ್ಲಿ ಬ್ರಿಟಿಶ ಮ್ಯೂಝಿಯಮದ ಗ್ರಂಥಾಲಯದಲ್ಲಿ ಕುಳಿತು ಸಾಮ್ಯವಾದದ ಸ್ವಪ್ನವನ್ನು ಚಿತ್ರಿಸಿದನು. ಅದನ್ನು ಸತ್ಯಸೃಷ್ಟಿಯಾಗಿ ಮಾರ್ಪಡಿಸಿ ಒಂದು ಹೊಸಯುಗದ ವಸ್ತುಪಾಠವನ್ನು ಜಗತ್ತಿಗಾಗಿ ಕಲಿಸಲು ರಶಿಯನ್ನ ಕ್ರಾಂತಿಯನ್ನು ಯಶಸ್ವಿಗೊಳಿಸಲು ಪ್ರಚಂಡ ಕರ್ಮಯೋಗಿಯಾದ ಲೆನಿನ್ನನೇ ಬೇಕಾಯಿತು.

ಅಂದಮೇಲೆ ಅಂತರ್ಮುಖರು ನಿರುಪಯೋಗಿಯೆಂತಲ್ಲ. ವಿಚಾರವಿಲ್ಲದೆ ವ್ಯವಹಾರ ಕುರುಡು: ವ್ಯವಹಾರ ತಪ್ಪಿದ ವಿಚಾರವೂ ಬರಡು. ಅಂತರ್ಮುಖರು ಜೀವನದ ಸೌಂದರ್ಯವನ್ನು ಕಂಡು ಮಂಗಲವನ್ನು ಸೂಚಿಸುತ್ತಾರೆ. ಬಹಿರ್ಮುಖರು ಜೀವನದ ಸತ್ವಕ್ಕೆ ಅಂಥ ಸೌಂದರ್ಯ-ಮಾಂಗಲ್ಯದ ರೂಪವನ್ನು ಕೊಡುತ್ತಾರೆ. ಅಂತರ್ಮುಖರ ಸ್ಫೂರ್ತಿ ಬಹಿರ್ಮುಖರ ಕೀರ್ತಿಗೆ ಕಾರಣವಾಗುತ್ತದೆ. ಪೈಗಂಬರ-ಅಬೂಬಕರ್, ಪರಮಹಂಸ--ವಿವೇಕಾನಂದ, ವಿದ್ಯಾರಣ್ಯ-ಹರಿಹರ, ಮಹಾತ್ಮಾಜಿ-ಸರದಾರ ಪಟೇಲ- ಇಂಥ ದ್ವಂದ್ವ ಮೂರ್ತಿಗಳು ಇಲ್ಲಿ ನೆನಪಿಗೆ ಬರುತ್ತವೆ.

ಬಹಿರ್ಮುಖನು ಹೊರಪ್ರಪಂಚದ ಸಂಗತಿಗಳಿಗೆ ಸೆಳೆಯಲ್ಪಟ್ಟು ಪ್ರಸಿದ್ಧಿಯ ಬೆಳಕಿಗೆ ಗುರಿಯಾಗುತ್ತಾನೆ. ಅಂತರ್ಮುಖನು ಒಳಬದುಕಿನ ಅನುಭವದಲ್ಲಿ ತೊಡಗಿದ್ದು ತನ್ನ ಅಂತರಂಗದ ಬೆಳಕಿನಲ್ಲಿಯೇ ನಿದಿಧ್ಯಾಸದಿಂದ ನಡೆಯುತ್ತ ಏಕಾಕಿಯೂ ಏಕಾಂತಸೇವಿಯೂ ಆಗುತ್ತಾನೆ. ಹೀಗೆ ಅಂತರ್ಮುಖನು ವಿಚಾರಶೀಲನಾಗಿ ಬದುಕಿನ ಬೀದಿಯ ಬದಿಗೆ ನಿಂತರೂ, ತಾತ್ಕಾಲಿಕ ಕಾರ್ಯದಿಂದ ದೂರವಿದ್ದರೂ, ತನ್ನ ದೂರದರ್ಶಿಯಾದ ದೂರಾಲೋಚನೆಯಿಂದ, ಚಿಕ್ಕ

ಕಾರ್ಯತತ್ಪರರಿಗೆ ನಿಜವಾಗಿಯೂ ಬಹಳ ಸಹಾಯ ಮಾಡಬಹುದು–ಮಾಡುವದೂ ಅಹುದು. ಇವರಿಂದ ಬಹಿರ್ಮುಖನು, ಅಂತರ್ಮುಖರನ್ನು ಕೆಲವೊಮ್ಮೆ ಪ್ಮೃಗಳ್ಳರೆಂದೂ ಮನದ ಮುಂಡಿಗೆ ತಿನ್ನುವ ಕನವರಿಕೆಯವರೆಂದೂ ಟೀಕಿಸಿದರೂ, ಅನುವು ಬಂದಾಗ ಅಂಥವರಿಂದಲೇ ಮಾರ್ಗದರ್ಶನ ಪಡೆಯುವನು. ಸಾಧಾರಣ ವಾಗಿ ಬಹಿರ್ಮುಖನು ತನ್ನ ವಿಚಾರದ ಬುತ್ತಿಯನ್ನು ಎರವಲವಾಗಿಯೇ ತಂದಿರುತ್ತಾನೆ. ಇತರರ ಸಲಹೆಸೂಚನೆಗಳನ್ನು ಸ್ವಾಗತಿಸಲು ಯಾವಾಗಲೂ ಉತ್ಸುಕನಿರುತ್ತಾನೆ. ವಿಚಾರದ ನೆವದಿಂದಲೂ ಅವನಿಗೆ ಕಾಲಹರಣ ಸೇರದು; ಆದ್ದರಿಂದ ಕಾಲಕೆಳಗಷ್ಟೇ ನೋಡಿ ಕೆಲಸಕ್ಕೆ ದುಡುಕಿಬಿಡುತ್ತಾನೆ. ತನ್ನ ವಿಚಾರ ಭೂಮಿಕೆಯನ್ನು ಕ್ರಮಕ್ರಮವಾಗಿ ಕಟ್ಟಿಕೊಳ್ಳುತ್ತಾನೆ. ಇಲ್ಲವೇ ತನಗಾಗಿ ವಿಚಾರ ಮಾಡಲು ಹೆರವರಿಗೆ ಬಿಟ್ಟುಕೊಡುತ್ತಾನೆ! ಗತಿಪ್ರಿಯನಿದ್ದವರಿಂದ ಪ್ರಗತಿಪ್ರಿಯನೂ ಇರುತ್ತಾನೆ. ಪ್ರತಿಕೂಲತೆ ಬಂದಂತೆ ಹುರುಪುಗೊಂಡು ಹೊಸ ಆರಂಭ ಮಾಡುತ್ತಾನೆ. ತನ್ನಂಥ ಇತರ ಕಾರ್ಯಕರ್ತರ ನೆರವನ್ನು ಯೋಗ್ಯ ವಿಚಾರಶೀಲರ ಬೆಂಬಲವನ್ನೂ ಪಡೆದು ಗುಂಪುಗೂಡಿ ಕೆಲಸ ಮಾಡುತ್ತಾನೆ. ಅವರೆ ಅಂತರ್ಮುಖನು ತನ್ನ ಒಡಲಿನಿಂದಲೇ ರೇಶಿಮೆ ನೂಲುವ ಹುಳದಂತೆ ತನ್ನ ವಿಚಾರಗಳ ಜಾಳಿಗೆಯಲ್ಲಿಯೇ ಸುತ್ತಿಕೊಂಡಿರುತ್ತಾನೆ. ಅವನ ಚಟುವಟಿಕೆಗಳಲ್ಲಿ ತನಗಾಗಿಯೇ ಪ್ರತಿಕೂಲತೆಯಿಂದ ಇನ್ನಿಷ್ಟು ಸಂಕೋಚಪಟ್ಟು ಆವೆಯಂತೆ ಒಳಒಳಗೇ ಮುದುಡಿಕೊಳ್ಳುತ್ತಾನೆ. ಮಂದಿ ತನ್ನನ್ನು ತಿಳಿಯಲಾರರೆಂದು ಹಿಗ್ಗಿ ಹೆಮ್ಮೆ ಪಡುತ್ತಾನೆ; ಇಲ್ಲವೇ ತಿಳಿಯಲೊಲ್ಲರೆಂದು ಕುಗ್ಗಿ ದುಮ್ಮಾನದಲ್ಲಿರುತ್ತಾನೆ. ಒಟ್ಟಾರೆ ಏಕಾಂತದಲ್ಲಿಯೇ ಸಂಸಾರಸಾಗರದಲ್ಲಿಯ ಒಂದು ನಡುಗಡ್ಡೆಯಂತೆ ಬಾಳುತ್ತಾನೆ.

## ಗತಾನುಗತಿಕೋ ಲೋಕಃ

ಗಂಡಿಗಿಂತ ಹೆಣ್ಣು ಗತಾನುಗತಿಕಳೆಂದು ಹಿಂದೆಯೇ ಹೇಳಿದೆ. ಆದರೆ ಗಂಡೆಂಬ ಮಾತ್ರಕ್ಕೆ ಎಲ್ಲರೂ ಸ್ವತಂತ್ರ ವಿಚಾರಿಗಳೂ ಸ್ವೇಚ್ಛಾಚಾರಿಗಳೂ ಎಂದು ತಿಳಿಯುವದು ತಪ್ಪು. ಗಂಡಿನಲ್ಲಿಯೂ ಪ್ರವಾಹಪತಿತರೇ ಹೆಚ್ಚು. ಬಹುಶಃ ಎಲ್ಲ ಪುರುಷರೂ ತಮ್ಮ ಯುಗದ ಪರಂಪರೆಗೆ ಒಳಪಟ್ಟೇ ಬಾಳಬಲ್ಲರು. ಪ್ರಚಲಿತ ರೂಢಿಯ ವಿರುದ್ಧ ಇಲ್ಲವೇ ಹೊರತಾಗಿ ನಡೆಯಲು ಬಹುಸಂಖ್ಯ ಗಂಡಸರು ಹೆದರುತ್ತಾರೆ. ಹೊಸ ರೀತಿಯಲ್ಲಿ ನಡೆಯಲು ಹೊಸ ವಿಚಾರಗಳನ್ನು ಅಡಿತೋರಿಸಲೂ ಸಾಮಾನ್ಯ ಸದ್ಗೃಹಸ್ಥನು ಅಂಜುತ್ತಾನೆ. ತಾನು ನಂಬಿದ ಇಲ್ಲವೆ

ಅನುಸರಿಸುವ ಆಚಾರಗಳೆಲ್ಲ ತನ್ನ ಸ್ವಂತ ಬುದ್ಧಿಯ ಆಯ್ಕೆಯವೇ ಎಂದು ಆತನು ಭಾವಿಸುತ್ತಾನೆ. ಆದರೆ ವಸ್ತುತಃ ಅವನ ವಿಚಾರಗಳು ಅವನ ನೆರೆಹೊರೆಯವರಿಂದಲೋ, ಕೇರಿಯ ಇಲ್ಲವೇ ಕಚೇರಿ-ಕಟ್ಟೆಯ ಮಾತುಕತೆಗಳಿಂದಲೋ ನಿನ್ನೆ ಓದಿದ ಪತ್ರಿಕೆಯಿಂದಲೂ ಆರಗಿಸಿಕೊಂಡವು ಇರುತ್ತವೆ. ಅವನ ಆಚಾರವು ಸಮಾಜದ, ಅವನ ಜಾತಿಯ, ಇಲ್ಲವೇ ಜತೆಗಾರರ ನಡತೆಯ ವಾಡಿಕೆಯಿಂದಲೇ ಅನುಕರಿಸಿದ್ದಿರುತ್ತದೆ. ಕೆಲವೊಮ್ಮೆ ತನ್ನದೇ ಸ್ವತಂತ್ರ ನಡತೆಯನ್ನು ನಂಬಿಗೆಯನ್ನು ಆತನು ಅಧ್ಯತೆಯಿಂದ ಪ್ರದರ್ಶಿಸುವದುಂಟು. ಆಗಲೂ ಅದು ಅವನದೇ ಆಗಿರುವದಿಲ್ಲ. ಅವನ ಪ್ರಶಂಸೆಗೆ ಪಾತ್ರವಾದ ಒಂದು ಪ್ರಪಂಚದ್ದಾಗಿರುತ್ತದೆ. ಪುರಾಣಿಕರಲ್ಲಿ ಬೆಳೆದ ಯುವಕ ಸಂಗೀತಗಾರನೋ ಸಾಹಿತಿಯೋ ಸಾಮ್ಯವಾದಿಯೋ ಆಗಿ ತಲೆತುಂಬ ಕೂದಲು ಬಾಯಿತುಂಬ ಸಿಗರೇಟ ಹೊಗೆ ಇಟ್ಟುಕೊಂಡು ಮನೆಯ ಹಿರಿಯರನ್ನು ಕೆರಳಿಸಬಹುದು. ಆದರೆ ಅವನದೇ ಆದ ಸಂಗೀತಗಾರರ, ಸಾಹಿತಿಗಳ ಇಲ್ಲವೇ 'ಕಾಮರೆಡ'ರ ಒಂದು ಪ್ರಪಂಚದ ಪರಂಪರೆಯಲ್ಲಿಯೇ ಆತನು ನಡೆಯುತ್ತಿರುತ್ತಾನೆ.

ನಿಜವಾದ ಹೊಸ ವಿಚಾರ ಹೊಸ ಕಲ್ಪನೆ ಬಂದೊಡನೆ ಸಾಮಾನ್ಯ ಸದ್ಗೃಹಸ್ಥನು ಗಾಬರಿಯಾಗುತ್ತಾನೆ. ಬುದ್ಧಿವಾದ, ಸಂತತಿನಿಯಮನ, ನಿಃಶಸ್ತ್ರೀಕರಣ ಅಷ್ಟೇಕೆ ವಾರದ ರೇಡಿಯೋ ಕಾರ್ಯಕ್ರಮದಲ್ಲಿ ತಿದ್ದುಪಡಿ ಇಂಥ ವಿಚಾರಗಳ ಕುರಿತು ಸ್ವಂತ ನಿರ್ಣಯ ಕೊಡುವ ಒತ್ತಾಯ ಬಂದರೆ ಅವನು ದಿಗಿಲುಗೊಳ್ಳುತ್ತಾನೆ ಅಥವಾ ಸಿಟ್ಟಿಗೇಳುತ್ತಾನೆ.

ಇದರಿಂದ, ಸಾಮಾನ್ಯ ಗಂಡಸು ಸಂಪ್ರದಾಯ ಶರಣತನವನ್ನೇ ಹಿರಿಯ ಸದ್ಗುಣವೆಂದು ತಿಳಿಯುತ್ತಾನೆ. ನಡೆ, ನುಡಿ, ನೀತಿ, ವಾದ, ಉಡಿಗೆ ಎಲ್ಲ ಚಿಕ್ಕ ದೊಡ್ಡ ಸಂಗತಿಗಳಲ್ಲಿಯೂ ಹಾಗೆಯೇ ಸರಿ. ಸಜ್ಜನನೆಂದರೆ ಯಾರು ? ತನ್ನ ಸಮಾಜದ ನಿಯಮಗಳನ್ನು ಅನುಸರಿಸುತ್ತ ತನ್ನ ಸಂಪ್ರದಾಯದ ಧರ್ಮದಲ್ಲಿ ನಂಬುತ್ತ. ತನ್ನ ಮನೆತನಕ್ಕೆ ತಕ್ಕಂತೆ ಮಕ್ಕಳನ್ನು ಪೋಷಿಸಿ ಶಿಕ್ಷಣ ಕೊಟ್ಟು, ತನ್ನ ದೇಶವೇ ಜಗತ್ತಿನ ಉತ್ತಮ ದೇಶವೆಂದು ತಿಳಿಯುತ್ತ ಬಾಳುವವನೇ ಸಾಮಾನ್ಯವಾಗಿ ಸಜ್ಜನನೆಂದು ಎಣಿಸಲಾಗುತ್ತದೆ. ನೆರೆಹೊರೆಯವರು ಬಾಳಿದಂತೆ ಬಾಳಿ ಅವರು ನಿಷ್ಕಲಂಕ ಜೀವನದವನಾಗುತ್ತಾನೆ. ಇಂಥವನ ಮನಸ್ಸು ಬರೇ ಪರಿಸ್ಥಿತಿಯ ಇಲ್ಲವೇ ಪರಿಪಾಟಿಯ ನೆರೆಯಲ್ಲಿಯೇ ನಡೆಯುತ್ತದೆ. ಪಶುಗಳಿಗೆ ಹೇಗೆ ಕೆಲವು ಚಟುವಟಿಕೆಗಳು ರೂಢಿಯಿಂದ ಸ್ವಾಭಾವಿಕವಾಗಿ ಯಾಂತ್ರಿಕವಾಗುವವೋ ಹಾಗೆಯೇ ಈ ಸಜ್ಜನನಿಗೆ ನಡೆನುಡಿ ಊಟ-ಉಡಿಗೆ, ಆಚಾರ-ಉಪಚಾರಗಳ ಕೆಲವು ಪಡಿಯಚ್ಚುಗಳು ದೃಢವಾಗಿ ಬಿಡುತ್ತವೆ. ಅವನ್ನು ತಾನೂ

ತಪ್ಪುವದಿಲ್ಲ. ಯಾರು ತಪ್ಪಿದರೂ ತಾಳಲಾಗುವದಿಲ್ಲ.

ಆದರೆ ಪ್ರತಿಭಾವಂತನು ಹಾಗಿರುವದಿಲ್ಲ. ಅವನ ವ್ಯಕ್ತಿತ್ವ ತನ್ನದೇ ಆದ ದಾರಿಯನ್ನು ಹಿಡಿಯುತ್ತದೆ. ಇಲ್ಲವೇ ಹುಡುಕುತ್ತದೆ. ಅವನ ಚೈತನ್ಯ ಅವನ ಬುದ್ಧಿಶಕ್ತಿಯ ಸರ್ವಗಾಮಿಯಾದ ತೀವ್ರತೆ ತೀಕ್ಷ್ಣತೆಗಳು ಪದ್ಧತಿಯ ಪಂಜರದ ಗಿಳಿಯಾಗಿ ನಲಿಯಲು ಶಕ್ಯವಿರುವದಿಲ್ಲ. ಸಮಾಜದ ರೀತಿ ರೂಢಿಗಳು ಅವನಿಗೆ-ಅವನ ವ್ಯಕ್ತಿತ್ವದ ವಿಕಾಸಕ್ಕೆ-ಅಡೆತಡೆಯಾಗುತ್ತವೆ. ಆಗ ಅವನು ಅನಿವಾರ್ಯವಾಗಿ ಅವುಗಳೊಡನೆ ಹೋರಾಡುತ್ತಾನೆ. ಇಂಥವರು ಪರಿಸ್ಥಿತಿಯ ಆಳಾಗುವದಿಲ್ಲ. ಪರಿಸ್ಥಿತಿಯನ್ನು ಆಳುತ್ತಾರೆ. ತಮ್ಮ ಬಯಕೆಗೆ, ಬದುಕಿಗೆ ತಕ್ಕಂತೆ ಪರಿಸ್ಥಿತಿಯನ್ನು ಮಣಿಸಿ ಅಣಿಗೊಳಿಸಿಕೊಳ್ಳುತ್ತಾರೆ. ಜಗತ್ತಿನ ಯುಗಪ್ರವರ್ತಕರೂ, ಶಕಕರ್ತರೂ, ಧರ್ಮಸಂಸ್ಥಾಪಕರೂ, ಶೋಧಕರೂ ಈ ವರ್ಗದವರು. ಅವರ ಸಮಕಾಲೀನರು ಅವರನ್ನು ಪಾಷಂಡಿಗಳೆಂದೂ, ಕಿಡಿಗೇಡಿಗಳೆಂದು ಜರೆದರು. ಆದರೆ ಇತಿಹಾಸವು ಅವರಿಗಾಗಿ ಹೊಸ ಪುಟಗಳನ್ನು ಬರೆಯಿತು. ಮನ್ವಂತರಗಳ ಭಾಗ್ಯವನ್ನು ಅವರು ತೆರೆದರೂ. ಮುಂದಿನವರು ಅವರನ್ನು ಪೂಜಿಸಿದರು. ಇಷ್ಟು ದೊಡ್ಡವರ ಮಾತೇಕೆ ? ಸಾಮಾನ್ಯ ಜನರಲ್ಲಿಯೂ ಇಂಥ ಹೊಸ ಕಲ್ಪನೆ, ಹೊಸ ಸೌಕರ್ಯ ಹೊಸ ಪರಿಪಾಟಿಯನ್ನು ಸಾಹಸದಿಂದ ಅನುಸರಿಸಿ ಅವನ್ನೇ ಮುಂದೆ ಮಂದಿಗೆ ಒಂದು ಮಾದರಿಯಾಗುವಂತೆ ಮಾಡುವ ಮುಂದಾಳುಗಳೆನಿಸಿಕೊಳ್ಳುವರು.

ವಾಡಿಕೆಯಿಂದ ಸಿಡಿದು, ರೂಢಿಯ ನಡಾವಳಿಯನ್ನು ಮುರಿದು ಮುನ್ನುಗ್ಗುವವನೇ ಹೊಸ ಹಾದಿ ಹುಡುಕುವಾತನು. ನಿಂದೆ ವಿರೋಧ ನಷ್ಟಗಳನ್ನು ಲೆಕ್ಕಿಸದೇ ನಿಶ್ಚಯದಿಂದ ನಡೆದು ಹೊಸ ಬದುಕನ್ನು ರೂಢಿಗೊಳಿಸುವವನು. ಮೊದಲು ಹೋಟೆಲ್ಲು ತೆರೆದ ಬ್ರಾಹ್ಮಣನು, ಮೊದಲು ಸಾಲೆಗೆ ಸೇರಿದ ಬಾಲವಿಧವೆಯು. ಮೊದಲು ಉದ್ಯೋಗಕ್ಕೆ ಇಳಿದ ಸುಶಿಕ್ಷಿತೆಯು ಇವರೆಲ್ಲ ಮೊದಲಿಗರು ತಮ್ಮ ಮಟ್ಟಿಗೆ ಕ್ರಾಂತಿಕಾರರೇ, ಯುಗಪ್ರವರ್ತಕರೇ ಸರಿ. ಹಿಂದೆ ಆದಂತೆಯೇ ಮುಂದೂ ಆಗಬೇಕು. ಹಿಂದಿನವರ ಹೊರತಾಗಿ ಮುಂದೇನೂ ಮಾಡಲಾಗದು-ಎಂಬುವ ಹಳೇ ಹಳವಂಡದ ಜನ ಸ್ಥಿತಿಸ್ಥಾಪಕರು-ಪ್ರತಿಗಾಮಿಗಳು ಪ್ರಗತಿವಿರೋಧಿಗಳು. ಇಂಥ ಸಂಪ್ರದಾಯ ಶರಣರನ್ನು ಸದಾಚಾರ ಸಂಪನ್ನರನ್ನು ಜಗತ್ತು ಮರೆತು ಮುಂದೆ ನಡೆಯುತ್ತಿದೆ. ವಿಶೇಷವಾಗಿ ಪರಂಪರೆಯನ್ನು ಮುರಿಯುವ ಮೂರ್ತಿ ಭಂಜಕರಿಗಾಗಿಯೇ ಜಗತ್ತು ಸ್ಮಾರಕಗಳನ್ನು ಕಟ್ಟಿಸುತ್ತದೆ !

### ಆಧುನಿಕರನ್ನು ಗುರುತಿಸುವಿರಾ ?

ಕೊನೆಯದಾಗಿ ಆಧುನಿಕ ಪುರುಷನದೊಂದು ಮಾದರಿ ಕಲ್ಪಿಸುವೆನು. ಇದು

ಮಾದರಿಯೆಂದರೆ ಅನುಕರಿಸಬೇಕಾದ ಆದರ್ಶವೆಂದಲ್ಲ. ಇಂದಿನ ಗಂಡು ಸಾಧಾರಣ ಯಾವ ಅಚ್ಚಿನವನೆಂಬುದರ ಒಂದು ಸ್ಥೂಲ ಚಿತ್ರವಿದು. ಆಧುನಿಕನಿಗೆ ತೆರವಿಲ್ಲದ ತ್ವರೆ. ಅವಸರದ ಚಟುವಟಿಕೆ ಅವನ ಲಕ್ಷಣ. ಯಾವ ಗಂಭೀರ ವಿಚಾರವೂ, ಬುದ್ಧಿಯ ಯಾವ ಸೂಕ್ಷ್ಮವ್ಯಾಪಾರವೂ ಅವನಿಗೆ ದೀರ್ಘಕಾಲ ರುಚಿಸದು. ಪ್ರಾಚೀನರಂತೆ ಆತನು ಮಹಾಕಾವ್ಯಗಳನ್ನು ದೀರ್ಘ ಕಾದಂಬರಿಗಳನ್ನೂ ಓದಿ ಸವಿಯಲಾರ. ಮಾರುದ್ದ ಪತ್ರಗಳನ್ನು (ಪ್ರಣಯ ಪತ್ರಗಳನ್ನೂ !) ಬರೆಯಲಾರ. ಮಾತಿನ ಜಂಜಾಟ ಆತನಿಗೆ ತಲೆಬೇಸರ. ಅಲ್ಲದೆ ಅಲಂಕಾರ ಆಡಂಬರ ಅವನ ಓದು–ಬರಹಕ್ಕೆ ಒಗ್ಗದು. ಚಟುವಟಿಕೆಯೇ ಪ್ರಧಾನವಾದ ಮನೋರಂಜನೆ ಅವನದು. 'ಇಂಗ್ಲಂಡದ ಮಕ್ಕಳಲ್ಲಿ ಪ್ರತಿಯೊಬ್ಬರೂ ಈಜಲು, ಸಾಯಿಕಲ್ ನಡೆಸಲು, ಮತ್ತೂ ಮೋಟರ ಓಡಿಸಲು ಕಲಿಯಲಿಕ್ಕೇ ಬೇಕೆಂದು' ಮೊನ್ನೆಯೇ ಅಲ್ಲಿಯ ವರಿಷ್ಠ ಧರ್ಮಾಧಿಕಾರಿಗಳೊಬ್ಬರು ಹೇಳಿದರು. ಬಾಯಬಲ್ಲಿನ ಹತ್ತು ಆದೇಶಗಳಿಗೂ ಮೀರಿದ ಇದೊಂದು ಹನ್ನೊಂದನೇ ಆದೇಶ !

ಗಂಭೀರಚಿಂತನೆಯೊಂದಿಗೆ ಸಾತ್ವಿಕ ಮನೋರಂಜನೆಯೂ ಅಧುನಿಕನಿಗೆ ಸೇರದು. ಅದ್ಭುತರಸ ಆತನಿಗೆ ಮೆಚ್ಚುಗೆ. ಸಾಹಸ, ಚಿತ್ತೋದ್ರೇಕ, ರಹಸ್ಯ–ಇವೇ ಪ್ರಧಾನವಾದ ಕಥಾವಾಙ್ಮಯ ಅವನ ನಿತ್ಯ ವಚನ. ಅದೂ ಆದಷ್ಟು ಸಂಕ್ಷಿಪ್ತ ಸ್ವಲ್ಪದರಲ್ಲಿ ಸ್ವಾರಸ್ಯ ಇದು ಆಧುನಿಕ ಅಭಿರುಚಿಯ ಅರ್ಥ ! ಸಣ್ಣ ಕತೆ, ಏಕಾಂಕ, ಭಾವಗೀತೆ, ಸಿನೇಮಾ ಸಂಗೀತ, ಇಂಜಕ್ಷನ್ ಚಿಕಿತ್ಸೆ, ಇಲೆಕ್ಟ್ರಿಕ್ ಉಪಕರಣಗಳು, ರೇಡಿಯೋ ಪ್ರಚಾರ–ಇವೇ ಆಧುನಿಕ ಜೀವನದ ಶೀಘ್ರತೆಯ ಉದಾಹರಣೆಗಳು. ಆಹಾರದಲ್ಲಿ ವ್ಹಿಟಮಿನ್, ಪೇಯದಲ್ಲಿ ಮಾದಕ ದ್ರವ್ಯಗಳು, ವಾಚನದಲ್ಲಿ ಆರಾಣೆ ಮಾಲೆಯ ಪುಸ್ತಕಗಳು, ವಿವಾಹದಲ್ಲಿ ಸಾಹಚರ್ಯ, ವಿವಾದದಲ್ಲಿ ಸಾಮ್ಯವಾದ ಹಾಗೂ ರಾಜಕಾರಣದಲ್ಲಿ ಸರ್ವಾಧಿಕಾರ, ಆಧುನಿಕ ಗಂಡಸಿನ, ರುಚಿವೈಚಿತ್ಯ್ರದ ವಿಚಿತ್ರ ಚಿತ್ರ ! ಆಧುನಿಕ ಹಾದಿಹೋಕನ ಧರ್ಮಗ್ರಂಥ ಅಥವಾ ಜ್ಞಾನಕೋಶವೆಂದರೆ ಅವನು ಓದುವ ವೃತ್ತಪತ್ರ. ಅದರಲ್ಲಿಯೂ ಅವನು ಅತ್ಯಂತ ಆಸ್ಥೆಯಿಂದ ಅವಲೋಕಿಸುವ ಅಂಶವೆಂದರೆ ಕೆಲಸಬೇಕೆಂಬ ಜಾಹೀ ರಾತುಗಳು, ಆಟ ಪಂದ್ಯಾಟಗಳ ವರ್ಣನೆಗಳು, ಹಾಗೂ ಕುದುರೆ ಜೂಜಿನ ಪರಿಣಾಮಗಳು. ಅದರಲ್ಲಿಯೂ ಮೂರ್ಖರು ಘಟಸ್ಫೋಟದ ವರದಿಗಳನ್ನೂ ಧೂರ್ತರು ಹಣ–ಹುಂಡಿಗಳ ಟಿಪ್ಪಣೆಗಳನ್ನೂ ಕರ್ತವ್ಯಬುದ್ಧಿಯಿಂದ ಓದುವ ದುಂಟು ! ಇವರ ರಾಜಕೀಯ ಜ್ಞಾನದ ಹಣೆಬರಹ ಪತ್ರಿಕೆಗಳ ಸುದ್ದಿ ಸ್ತಂಭಗಳ ತಲೆಬರಹಗಳನ್ನೇ ಅವಲಂಬಿಸಿರುತ್ತದೆ.

ಆಧುನಿಕ ಗುಣಗಳೂ ಕೆಲವು ಇವೆ. ಅವನು ವ್ಯವಹಾರಚಾತುರನು ! ಹುತ್ತ

ಬಡಿದು ಸುತ್ತಾಡುವವನಲ್ಲ. ನೇರವಾಗಿ ತನ್ನ ಮಾತು ತಿಳಿಸಿ ಮತ ಕೊಟ್ಟು ಹಿತ ಸಾಧಿಸುವವನು. ನಿಯಮಿತತನ, ಸಮಯಸೂಚಕತೆ ಇವನಿಗೆ ಅವಶ್ಯವಾಗಿ ಮೈಗೂಡಿ ಚಟವಾಗಿವೆ. ಯಂತ್ರದಂತೆ ಶಿಸ್ತಿನಿಂದ ನಡೆಯಬಲ್ಲ. ಅಭಿಮಾನದೊಂದಿಗೆ ವಿನಯ, ಪುಸ್ತಕಪಾಂಡಿತ್ಯದೊಡನೆ ಜೀವನದ ಅನಭಿಜ್ಞತೆ ದಾಂಪತ್ಯದೊಡನೆ ಸ್ವೈರಾಚಾರ, ಸ್ವಾರ್ಥದೊಡನೆ ಸಮಾಜಸೇವೆ ಹಾಗೂ ವಿಮರ್ಶಕ ಬುದ್ಧಿಯೊಡನೆ ಕುರುಡು ಭಾವಿಕತೆ ಇವೆಲ್ಲ ವಿರೋಧಿ ದ್ವಂದ್ವಗಳ ನಿತ್ಯ ಸಮಾಸವಾಗಿದೆ ಅವನ ವ್ಯಕ್ತಿತ್ವ ! ಆಧುನಿಕನಿಗೆ ಸಾಮಾನ್ಯವಾಗಿ ಪದವಿಯ ವ್ಯಾಮೋಹ ಹೆಚ್ಚು, ಪರೀಕ್ಷೆಯ ವರ್ಚಸ್ಸು ಅವನ ಶಿಕ್ಷಣದ ಮೇಲೆ ಹೆಚ್ಚು. 'ತಜ್ಞ'ರ ಮೇಲೆ ಬಹಳ ಶ್ರದ್ಧೆ !

## ಘನವಂತರ ಮಕ್ಕಳು

ಇದಕ್ಕೆ ಅಪವಾದವಿಲ್ಲದಿಲ್ಲ. ಇಂದಿನ ಜಗತ್ತಿನ ಹಲವು ಅಸಾಮಾನ್ಯ ಹಾಗೂ ಸರ್ವಶ್ರೇಷ್ಠರಾದ ವ್ಯಕ್ತಿಗಳು ಯಾವ ಪದವಿ ಪರೀಕ್ಷೆ ಇಲ್ಲವೇ ನಿಯಮಿತ ಶಿಕ್ಷ ಸಂಸ್ಕಾರ ಪಡೆಯದೇ ಮೇಲಾಗಿರುವ ಹಣಕಾಸಿನ ವ್ಯವಹಾರ, ಸಾಹಿತ್ಯಪ್ರಪಂಚ, ರಾಜಕೀಯ ಕಾರ್ಯರಂಗ, ಕಲೆ ಕೈಗಾರಿಕೆ, ಉದ್ಯೋಗ, ವಿಜ್ಞಾನ ಇವೆಲ್ಲ ಕ್ಷೇತ್ರಗಳಲ್ಲಿಯೂ ಅಂಥ ಸ್ವಯಂಭೂ ವಿಭೂತಿಗಳು ಮಿಂಚಿದ್ದಾರೆ-ಮೆರೆಯುತ್ತಿದ್ದಾರೆ. ಇಂಥ ಸ್ವಯಂಭೂ ವಿಭೂತಿಗಳ ವ್ಯಕ್ತಿತ್ವ ಒಳ್ಳೇ ಬಲಿಷ್ಠವಿರುತ್ತದೆ. ಮಿತ್ರರಿಗಾಗಿ ನೋಡದೆ, ಶತ್ರುಗಳನ್ನು ಲೆಕ್ಕಿಸದೆ ಪ್ರತಿಕೂಲ ಪರಿಸ್ಥಿತಿಯನ್ನು ಹಣ್ಣುಗೊಳಿಸಿ ಬಾಳನ್ನು ಆಳುವ ಶಕ್ತಿ ಅವರ ಮನಸ್ಸು ಪಡೆಯಿತು. ಇದರಿಂದ ಅವರ ಸತ್ವ ಹುರಿಗೊಂಡಿತು. ಹಿರಿದಾಯಿತು. ಆದರೆ ಎಷ್ಟೋ ಸಲ ಇಂಥ ಮಹಾಪುರುಷರ ಮಕ್ಕಳು ಬಹಳೇ ದುರ್ಬಲರೂ ತೀರ ಸಾಮಾನ್ಯರೂ ಇರುವದು ಕಂಡುಬರುತ್ತದೆ. ತಂದೆಯ ಉತ್ತರಕ್ಕೆ ಅವರು ಏರುವದು ಕಷ್ಟವಾಗುತ್ತದೆ. ತಂದೆಯಂತೆ ಪ್ರತಿಕೂಲತೆ ಇದಿರಿಸುವ ಕಷ್ಟದ ಸ್ಥಿತಿ ಈ ಮಕ್ಕಳಿಗಿರುವದಿಲ್ಲ. ತಂದೆಯ ಘನತೆ ಇವರ ಬದುಕಿನ ದಾರಿಯನ್ನು ಸುಗಮ ಮಾಡಿರುತ್ತದೆ. ಮೇಲಾಗಿ ಪ್ರಪಂಚವೇ ಮನೆಯಾದ ಮಹಾ ಪುರುಷನಿಗೆ ತನ್ನ ಮನೆಯ ಪ್ರಪಂಚಕ್ಕೆ ಲಕ್ಷ ಕೊಡಲು ಅವಕಾಶವಾಗಲೀ ಆತುರವಾಗಲೀ ಇರುವದಿಲ್ಲ. ಇವೆಲ್ಲ ಕಾರಣಗಳಿಂದ ಘನವಂತರ ಮಕ್ಕಳು ತೀರ ಸಾಧಾರಣರಾಗುವರು.

ಆದರೆ ಈ ಮಾತಿಗೂ ಅಪವಾದಗಳಿವೆ. ಸಾಮಾನ್ಯವಾಗಿ ಮೊಗಲ ಚಕ್ರವರ್ತಿಗಳಲ್ಲಿ ಬಾಬರನಿಂದ ಔರಂಗಜೇಬನತನಕವೂ ತಂದೆಯಂತೆಯೋ ಮಗನು ಹಿರಿತನವನ್ನು

ಸಾಧಿಸಿಕೊಂಡರು. ಆದರೂ ಬಾಬರನಷ್ಟು ಚಾರಿತ್ರ್ಯದ ಕೆಚ್ಚು ಹುಮಾಯೂನ ನಿಗಿದ್ದಿಲ್ಲ. ಅಕಬರನ ಸತ್ವ ಜಹಾಂಗೀರನಲ್ಲಿ ಅಷ್ಟೊಂದು ಉಳಿದಿಲ್ಲ. ಔರಂಗಜೇಬನ ಪೀಳಿಗೆಯಂತೂ ದುರ್ಬಲವೇ ಆಯಿತು. ಇಂಗ್ಲಂಡದ ಮೊದಲನೇ ಮತ್ತೂ ಕೊನೆಯ ಸರ್ವಾಧಿಕಾರಿಯಾಗಿಹೋದ ಕ್ರಾಮವೆಲ್ಲನ ಮಗ ತೀರ ಸಾಮಾನ್ಯನಿದ್ದನು. ಆದರೆ ಹಿರಿಯ ಪಿಟ್ಟನಷ್ಟೇ ಮಹತ್ವ ಮಹಾತ್ಮ್ಯಗಳನ್ನು ಕಿರಿಯ ಪಿಟ್ಟನು ಗಳಿಸಿದನು. ಶಹಾಜಿಗಿಂತ ಶಿವಾಜಿಯು ಶೌರ್ಯ ಸಾಹಸದಲ್ಲಿ ಒಂದು ತೂಕ ಹೆಚ್ಚೇ ಆಗಿ ಶತಕರ್ತನೆಂದುಕೊಂಡನು. ಆದರೂ ಸಂಭಾಜಿಯೂ ಅವನ ಮಗ ಶಾಹೂ ಉತ್ತರೋತ್ತರ ದುರ್ಬಲ ಸತ್ವದವರಾಗಿ ಹೋದರು. ಮೋತಿಲಾಲ ನೆಹರೂ ಅವರ ಸುಪುತ್ರ ಜವಾಹರಲಾಲರ ಮಹಿಮಾಮಯ ಮೂರ್ತಿಯು ನಮ್ಮ ಇದುರಿಗೇ ಇದೆ. ಶಿವಾಜಿ–ಪಿಟ್ಟರಂಥವರ ಉದಾಹರಣೆ ತಂದೆಯ ಪರೋಕ್ಷದಲ್ಲಿಯೇ ಪ್ರತ್ಯಕ್ಷ ಪ್ರೋತ್ಸಾಹವಿಲ್ಲದೆಯೇ ಬೆಳಿಸಿಕೊಂಡ ವ್ಯಕ್ತಿತ್ವದ್ದಾಗ ಬಹುದು. ಆದರೆ ನೆಹರೂ ಪಿತಾಪುತ್ರರ ಉದಾಹರಣೆ ಹಾಗಿಲ್ಲ. ತಂದೆಯ ಇದುರಿಗೇ ತಂದೆಯ ಉತ್ತರಾಧಿಕಾರಿಯಾಗಿ ಮಗನು 'ರಾಷ್ಟ್ರಪತಿ'ಯಾದನು. ತಂದೆಗೂ ಹಿರಿದಾಗಿ ದಿಗಂತ ಕೀರ್ತಿವೆತ್ತು ಮೆರೆದನು. ಆದರೆ ಇಲ್ಲಿಯೂ ಸೂಕ್ಷ್ಮದೃಷ್ಟಿಗೆ ಮೋತಿಲಾಲರ ಕೆಚ್ಚು–ಕಸುವು ಪ್ರಚಂಡ ಇಚ್ಛಾಶಕ್ತಿಯ ಪ್ರತಾಪ ಜವಾಹರಲಾಲರಲ್ಲಿ ಉಳಿದಿಲ್ಲವೆಂದೇ ಕಾಣುತ್ತದೆ. ಪ್ರತಿಕೂಲತೆಗಳನ್ನು ಪ್ರತಿಭಟಿಸಿ ಪ್ರಭಾವಿಯಾದ ವ್ಯಕ್ತಿತ್ವ ಜವಾಹರಲಾಲರದಲ್ಲ; ಸಕಲ ಸೌಕರ್ಯಗಳ ಸನ್ನಾಹ ದಿಂದಲೇ ಸತ್ವಸಂಪನ್ನರಾಗಿ ಮುಂದೆ ಬಂದರು. ಮಹಾತ್ಮರ ಮಕ್ಕಳು ಯಾವ ದೊಡ್ಡ ವ್ಯಕ್ತಿತ್ವವನ್ನು ಪಡೆದಂತಾಗಿದೆ ? ಹಿರಿಯ ಮಗ ಅಬ್ದುಲ್ಲಾ ಗಾಂಧಿ ಯಂತೂ ಮಹಾತ್ಮನಾದ ದುರ್ದೈವಿಯೆನಿಸಿಕೊಂಡನು. ಲೋಕಮಾನ್ಯ ತಿಲಕರ ಅಲೌಕಿಕ ವಿಭೂತಿಮತ್ತ್ವವು ಅವರ ತಲೆತಿರುಕ ಮಕ್ಕಳಲ್ಲಿ ಸ್ವಲ್ಪವೂ ಬಾರದೇ ಹೋಯಿತು. ವಿಶಾಲವಾಗಿ ಬೆಳೆದ ಮರವು ತಾನೇ ಸುತ್ತಲಿನ ಗಾಳಿ ನೀರು ಮಣ್ಣು ಗೊಬ್ಬರಗಳ ಎಲ್ಲ ಸತ್ವ ಹೀರಿ ಬಲಿತು ಪ್ರಚಂಡವಾಗುತ್ತದೆ. ಅದರ ನೆಳಲಲ್ಲಿ ಅಂಥ ಮರ ಮತ್ತೊಂದು ಬೆಳೆಯಲಾರದು. ದೊಡ್ಡವರ ಮಕ್ಕಳೂ ಹಾಗೆಯೇ.

ಇವೇ ಕಾರಣಗಳು ಇಂದಿನ ಪೀಳಿಗೆಯು ಹಿಂದಿನ ಪೂರ್ವಜರಿಗಿಂತ ಸತ್ವಶೂನ್ಯರಾಗಿ ಕಾಣುವದರ ಇತ್ಯರ್ಥ ಮಾಡುತ್ತವೆ. ಇಂದಿನ ಗಂಡು ದುರ್ಬಲವೇಕೆಂಬುದರ ವಿವೇಚನೆ ಹಿಂದೆಯೇ ಮಾಡಲಾಗಿದೆ ಇರಲಿ. ಇದುವರೆಗಿನ ಗಂಡು ಸ್ವಭಾವದ ಮಾದರಿಗಳ ವರ್ಣನೆ, ಒಂದು ಬೀಸು ನೋಟದ ಭೇದ ಲಕ್ಷಣವೇ ಹೊರತು ಕಟ್ಟುನಿಟ್ಟಾದ ವರ್ಗೀಕರಣವಲ್ಲವೆಂದು ಇಲ್ಲಿಗೆ ಮುಗಿಸುತ್ತೇವೆ.

## ೨

ಗಂಡು ಹಿರಿದೋ ಹೆಣ್ಣು ಹಿರಿದೋ ? ಈ ಪ್ರಶ್ನೆ ಎಂದಿನಿಂದಲೂ ನಮ್ಮ ಎದುರಿಗೆ ನಿಂತಿದೆ. ಜೀವನದ ಬಗೆಹರಿಯದ ಪ್ರಶ್ನೆಗಳಲ್ಲಿ ಇದೂ ಒಂದು ಎಂದುಕೊಂಡು ನಾವು ಹಲವುಸಲ ಅದರಿಂದ ಬಿಡುಗಡೆ ಪಡೆಯುತ್ತೇವೆ. ಆದರೆ ನಾವು ಪ್ರಶ್ನೆಯನ್ನು ಬಿಟ್ಟರೂ ಪ್ರಶ್ನೆ ನಮ್ಮನ್ನು ಬಿಡುವಂತಿಲ್ಲ. ವಿಶೇಷವಾಗಿ ಹಿರಿಮೆಯ ಕುರಿತು ಈ ಹೆಚ್ಚು ಕಡಿಮೆಯ ಪ್ರಶ್ನೆ ತಲೆಯೆತ್ತುವದು. ಬುದ್ಧಿಯ ಇಲ್ಲವೇ ವಿಚಾರದ ಕ್ಷೇತ್ರದಲ್ಲಿ 'ಎಷ್ಟೆಂದರೂ ಹೆಣ್ಣು ಬುದ್ಧಿ !' ಎಂಬ ಉದ್ಗಾರವು ಯಾವ ತಿಳಿಗೇಡಿ ಗಂಡಿನ ಬಾಯಿಗೂ ಹಗುರಾಗಿ ಬರುವದು ನಾವು ಕೇಳಬಹುದು. ಇದಕ್ಕೆ ವಿಪರೀತವಾಗಿ ಕೆಲವು ಬಲ್ಲವರು–ಅದೂ ಹೆಣ್ಣಿನ ಹವ್ಯಾಸಕ್ಕೆ ಬಿದ್ದು "ಬುದ್ಧಿ ಕಲಿತು ತಲೆಕೆಡಿಸಿ ಕೊಂಡವರು 'ಸಾಕಪ್ಪಾ ! ಹೆಣ್ಣಿನ ವಿಚಾರ !' 'ಸ್ತ್ರೀ ಬುದ್ಧಿಃ ಪ್ರಲಯಂಕರೀ', ಎಂದು ಹಿರಿಯರು ಹೇಳುವದು ಸುಳ್ಳೋ ?" ಎಂದು ಕೆರಳಿ ಆಡುವದನ್ನೂ ನಾವು ಕೇಳುವದುಂಟು.

### ಯಾರು ಹೆಚ್ಚು ಯಾರು ಕಡಿಮೆ ?

ಇವೆರಡೂ ಅತಿವಾದಗಳು. ಸತ್ಯ ನಡುವಿನ ಹದವಾಗಿದೆ. ಯಾರು ಹೆಚ್ಚು ಯಾರು ಕಡಿಮೆ ಎಂಬ ಅಳತೆಯೇ ಒಂದು ಬಗೆಯಾಗಿ ಅವಿವೇಕದ್ದು. ಹೆಚ್ಚು ಕಡಿಮೆ ಯಾತರ ನೆಲೆಯಿಂದ. ಯಾವ ನಿಟ್ಟಿನಿಂದ ? ಪ್ರಪಂಚದಲ್ಲಿ ವ್ಯಕ್ತಿ ಇರಲಿ ವಸ್ತುವಿರಲಿ ಪ್ರತಿಯೊಂದಕ್ಕೂ ಅದರ ಸ್ಥಾನ ಅದಕ್ಕೆ ತಕ್ಕಮಾನ ಇದ್ದೇ ಇದೆ. ಕತ್ತಿಯ ಕೆಲಸ ಕುಡುಗೋಲಿಗೂ, ಕತ್ತೆಯ ದುಡಿತ ಕುದುರೆಗೂ ಸಾಧ್ಯವಿಲ್ಲ. ಹಾಗೆಯೇ ವ್ಯಕ್ತಿ ವ್ಯಕ್ತಿಯೂ ಅವ ತನ್ನ ತನ್ನ ಕ್ಷೇತ್ರದಲ್ಲಿ ಶ್ರೇಷ್ಠನೇ ಸರಿ. ಒಂದೇ ಕ್ಷೇತ್ರದಲ್ಲಿ ಒಂದೇ ಕ್ರಮದಲ್ಲಿ ಕಾರ್ಯಕಾರಿಯಾಗುವ ವ್ಯಕ್ತಿಗಳನ್ನೇ ನಾವು ತಾರತಮ್ಯದ ತಕ್ಕಡಿಯಲ್ಲಿ ತೂಗಬಹುದು. ಆದ್ದರಿಂದ ಹೆಣ್ಣು ಗಂಡಿನ ವ್ಯಕ್ತಿತ್ವ–ಕರ್ತವ್ಯಗಳ ಯೋಗ್ಯತೆ ತಮ್ಮ ತಮ್ಮ ಮಟ್ಟಿಗೆ ಅದ್ವಿತೀಯವೇ ಸರಿ. ಕ್ರಿಯೆ ಮತ್ತೂ ಪ್ರತಿಕ್ರಿಯೆ ಪರಸ್ಪರ ವಿರುದ್ಧ ಮತ್ತೂ ಪರಿಸಮಾನವೆಂದು ನ್ಯೂಟನನು ಸಾರಿದನು. ಹೆಣ್ಣು ಗಂಡೂ ಇದೇ ನ್ಯೂಟನ್ನನ ನಿಯಮದಂತೆ ಅನ್ಯೋನ್ಯ ಸಮ್ಮುಖವಾಗಿಯೂ, ಸರಿಸಮಾನವಾಗಿಯೂ, ಪರಿಪೂರಕವಾಗಿಯೂ ಇರುವ ಎರಡು ಶಕ್ತಿಗಳು. ಆದ್ದರಿಂದ ತತ್ವತಃ ಅವರೀರ್ವರಲ್ಲಿ ಹೆಚ್ಚು ಕಡಿಮೆ ಎಣಿಸುವದು ಉಚಿತವಲ್ಲ.

ಆದರೂ ಬುದ್ಧಿಶಕ್ತಿಯಲ್ಲಿ ಹೆಣ್ಣು–ಗಂಡಿನ ವ್ಯತ್ಯಾಸವೇನಿರಬಹುದೆಂಬುದನ್ನು ಅರಿತುಕೊಳ್ಳುವದು ಸೋಜಿಗವಾಗುವದು. ಒಂದು ಮಾತನ್ನು ಒಪ್ಪಿಕೊಳ್ಳಬೇಕು. ಗಂಡಿರಲಿ ಹೆಣ್ಣಿರಲಿ ಮೂಲಭೂತ ಪ್ರವೃತ್ತಿಗಳು ಪಲ್ಲಟಿಸುವದಿಲ್ಲ. ಅನುಭವ ಇಲ್ಲವೇ ಅನುಶಾಸನ (ಶಿಕ್ಷಣ) ದಿಂದ ಅವು ಬೇರ್ಪಡುವದಿಲ್ಲ. ಹೆಣ್ಣು ಗಂಡುಗಳಲ್ಲಿ ಚಟ ಇಲ್ಲವೇ ವಾಡಿಕೆಯು ಹಾಗೂ ಬುದ್ಧಿಶಕ್ತಿಯು ಬೆಳವಣಿಗೆ ಆಗುವದು ನಿಜ. ಈ ಬೆಳವಣಿಗೆಯೂ ಮೂಲ ಪ್ರವೃತ್ತಿಗಳ ತಳಹದಿಯ ಮೇಲೆಯೇ ಆಗುತ್ತದೆ. ಇನ್ನು ಗಂಡು–ಹೆಣ್ಣುಗಳಲ್ಲಿ ಈ ಬುದ್ಧಿಯ ಪರಿಪಾಕವು ಹೇಗೆ ವ್ಯತ್ಯಾಸ ಪಡುವದೋ ನೋಡೋಣ.

ಗಂಡಿನಲ್ಲಿ ಬುದ್ಧಿ ಹೆಚ್ಚು ವ್ಯಾಪಕವಾಗಿದೆ, ಉನ್ನತವಾಗಿದೆ. ಹಲವಾರು ತಲೆ ಮಾರುಗಳಿಂದಲೂ ಗಂಡು ವಿವಿಧ ವಿಚಿತ್ರವಾದ ವಿಶಾಲ ಜಗತ್ತಿನಲ್ಲಿ ಕಾರ್ಯ ರಂಗಕ್ಕೆ ಎಳೆಯಲ್ಪಟ್ಟಿದ್ದಾನೆ. ಗಂಡು ಹೊಸ ಸನ್ನಿವೇಶಗಳನ್ನು ಹೊಸ ವಿಕಾರಹೇತುಗಳನ್ನೂ ಇದಿರಾಗುತ್ತ ಬಂದಿದ್ದಾನೆ. ಇಂಥ ಹೊಸ ಸ್ಥಿತಿಗಳಿಗೆ ಹಳೇ ಪ್ರವೃತ್ತಿಗಳ ಸ್ಥಿರವಾದ ಪ್ರತಿಕ್ರಿಯೆ, ಪ್ರತ್ಯುತ್ತರಗಳು ಸಾಲದಾದವು. ಆದ್ದರಿಂದ ಅವಶ್ಯಕತೆಯಿಂದಲೇ ಪ್ರಾಪ್ತಪರಿಸ್ಥಿತಿಗೆ ಹೊಸದೊಂದು ಸಮರ್ಪಕ ಪ್ರತಿಕ್ರಿಯೆ ಯನ್ನು ಯಶಸ್ವಿಯಾಗಿ ಸಲ್ಲಿಸುವ ಒಂದು ಮಣಿಬಲ್ಲತನದ ಶಕ್ತಿಯು ಗಂಡಿನ ಮನಸ್ಸಿನಲ್ಲಿ ಬೆಳೆದು ಬಂದಿತು. ಈ ಶಕ್ತಿಯೇ ಬುದ್ಧಿ. ಪ್ರಚೋದಕ ಪರಿಸ್ಥಿತಿಗೆ ಒಂದಕ್ಕಿಂತ ಹೆಚ್ಚು ಪ್ರತಿಕ್ರಿಯೆ ಸಲ್ಲಿಸಬಲ್ಲ ಶಕ್ತಿಯೇ ಬುದ್ಧಿಮತ್ತೆಯು. ಹೊಸ ಪ್ರಪಂಚದ ಸ್ಥಿತ್ಯಂತರಗಳ ಒತ್ತಾಯಕ್ಕೆ ಗಂಡಿನ ಮನಸ್ಸಿಗೆ ಈ ಬುದ್ಧಿಯ ಹೊಸ ಪಾಕ ಹೊಸ ಪುಟ ಬಂದಿತು.

ಮೂಲ ಪ್ರವೃತ್ತಿಯೂ ಬುದ್ಧಿವಂತವಾಗಬಲ್ಲದು. ಅಂದರೆ ಪ್ರವೃತ್ತಿಯಿಂದ ಬಂದ ಪ್ರತಿಕ್ರಿಯೆಯೂ ಸಮರ್ಥವೂ ಸಮರ್ಪಕವೂ ಸಮಯೋಚಿತವೂ ಆಗ ಬಹುದು. ಆದರೆ ಅದಕ್ಕೆ ಪ್ರಚೋದಕವಾದ ಪರಿಸ್ಥಿತಿ ಪರಂಪರಾಗತವಿರಬೇಕು. ಶತಮಾನಗಳಿಂದಲೂ ಒಂದೇ ಬಗೆಯಾಗಿ ಇದಿರಿಸುತ್ತ ಬಂದ ಸಮಸ್ಯೆ ಸನ್ನಿವೇಶ ಗಳಿಗೆ ಮಾತ್ರ ಮಾನವನ ಮೂಲ ಪ್ರವೃತ್ತಿ ತಪ್ಪದೇ ಉತ್ತರ–ಉಪಾಯಗಳನ್ನು ಸಲ್ಲಿಸಬಹುದು. ಇಷ್ಟೇ ಅಲ್ಲ. ಇಂಥ ಪರಂಪರಾಗತ ಪುರಾತನ ಸಂದರ್ಭಗಳಲ್ಲಿ ಬುದ್ಧಿಯ ಹೊಸ ಹಂಚಿಕೆಯ ಸಂದಿಗ್ಧ ಪ್ರಯೋಗಕ್ಕಿಂತ ಮೂಲ ಪ್ರವೃತ್ತಿಯ ಕೆಲಸವೇ ಹೆಚ್ಚು ಪರಿಣಾಮಕಾರಿಯೂ ಸಮರ್ಪಕವೂ ಶ್ರೇಯಸ್ಕರವೂ ಆಗುವದುಂಟು.

## ಹೆಣ್ಣು ಹೆಡ್ಡವೇ ?

ಬುದ್ಧಿ ಪ್ರವೃತ್ತಿಗಳ ಈ ಭೇದವನ್ನು ನೆನಪಿಟ್ಟರೆ ಗಂಡು ಹೆಣ್ಣಿನ ಪ್ರಜ್ಞೆಯ ತಾರತಮ್ಯ ತಿಳಿಯಲು ಸುಲಭವಾಗುವದು. ಹೆಣ್ಣಿನ ಬಾಳಿನ ನಡುಕಟ್ಟಿನ ಕೆಲಸಗಳೆಲ್ಲ ಬಹಳೇ ಪುರಾತನ ಕಾಲವವೂ ಸನಾತನವಾಗಿ ನಡೆದು ಬಂದವೂ ಆಗಿವೆ. ಪ್ರತಿಯೊಬ್ಬ ಹೆಣ್ಣು ಕೂಡ ಆ ಸಮಸ್ಯೆಗಳನ್ನು ಇತಿಹಾಸದ ಆದಿಯಿಂದಲೂ ಸ್ಮರಣದ ತೆಕ್ಕೆಗೆ ನಿಲುಕುವತನಕವೂ ತಪ್ಪದೇ ಇದುರಿಸಿ ಈಡೇರಿಸಿ ಬಂದಿದ್ದಾಳೆ. ಆ ಸಮಸ್ಯೆಗಳೇನು ? ಪ್ರಿಯತಮನನ್ನೋ ಪತಿಯನ್ನೋ ಪಡೆಕೊಳ್ಳುವದು ಮತ್ತು ಮಕ್ಕಳನ್ನು ಕಾಪಾಡಿಕೊಳ್ಳುವದು. ಇವೆರಡು ಸಮಸ್ಯೆಗಳು ಇಂದಿಗೂ ಹೆಣ್ಣಿಗೆ ಜೀವಾಳದ ಮಹತ್ವದವೇ ಸರಿ. ದೊಡ್ಡ ನಗರಗಳ ಹೊರತು ಎಲ್ಲ ಕಡೆಯ ಹೆಣ್ಣಿನ ಬಾಳಿನಲ್ಲಿಯೂ ನಗರಗಳಲ್ಲಿ ಕೂಡ ಮಧ್ಯಮವರ್ಗದವರ ಹೊರತು ಮಿಕ್ಕ ಎಲ್ಲ ತರಗತಿಯ ಹೆಣ್ಣುಗಳಿಗೂ ಇವೆರಡು ಸಮಸ್ಯೆಗಳು ನಡುಕಟ್ಟಿನ ಮರ್ಮದವಾಗಿವೆ. ಈ ಅನಾದಿ ಪ್ರಾಪ್ತವಾದ ಸಮಸ್ಯೆಗಳ ಕುರಿತು ಪ್ರಕೃತಿಯಿಂದಲೇ ಹೆಣ್ಣಿನಲ್ಲಿ ಸಹಜಸಿದ್ಧವಾದ ಪ್ರವೃತ್ತಿ–ಪ್ರತಿಕ್ರಿಯೆಗಳು ವಿಕಾಸಗೊಂಡು ಬಂದಿವೆ. ಇಂಥ ವಿಷಯದ ಆಳವಾದ ತಾನಾಗಿ ಬಂದ ತಿಳುವಳಿಕೆ ಹೆಣ್ಣಿಗೆ ಕೆಲವು ಸಲ ಬಾಧಕವಾದರೂ, ಸಾಧಾರಣವಾಗಿ ಹಿತಸಾಧಕವಾಗಿಯೇ ಕುಶಲವಾಗಿಯೇ ಪರಿಣಮಿಸಿ ಬಂದಿದೆ.

ಆದ್ದರಿಂದಲೇ ಗಂಡಿಗಿಂತ ಹೆಣ್ಣಿನ ಪ್ರವೃತ್ತಿ–ಪ್ರತಿಕ್ರಿಯೆಗಳಲ್ಲಿ ಏಕಾಗ್ರತೆ, ಹಾಗೂ ಸಮರ್ಪಕತೆ ಹೆಚ್ಚು. ಪ್ರವೃತ್ತಿಯಿಂದಲೇ ಆಕೆ ಕೈಕೊಳ್ಳುವ ನಿಶ್ಚಯಗಳಲ್ಲಿ ಹೊಯ್ದಾಟ ಕಡಿಮೆ. ಗಂಡು ಹೆಚ್ಚು ವಿಚಕ್ಷಣ, ವಿಲಕ್ಷಣ, ವಿಮರ್ಶಕ, ವಿವೇಚಕ–ಹೆಚ್ಚು ಸಂಶಯಾತ್ಮ. ಅವನ ಪ್ರವೃತ್ತಿಗಳ ಹದ–ಹದನ ಮುರಿದು ಮೊಂಡವಾಗಿ ಆ ಬದಲು ಹಲವು ಪ್ರತಿಕ್ರಿಯೆಗಳಿಗೆ ಅನುಕೂಲವಾಗುವಂತೆ ಮಣಿಯುಬಲ್ಲತನ ಬೆಳೆದು ಬಂದಿದೆ. ಇದರಿಂದ ತಾತ್ಕಾಲಿಕ ಆಪತ್ಕಾಲಿಕ ನಿರ್ಣಯ ಆತನು ಕಳಕೊಂಡಿದ್ದಾನೆ. ಸತ್ಯದ ಸಂಕಟಕ್ಕೆ ಸಿಲುಕಿ ತೊಳಲುವಾಗ ಹರಿಶ್ಚಂದ್ರನಿಗಿಂತ ತಾರಾಮತಿಗೇ ಮಾರಿಕೊಳ್ಳುವ ಹಂಚಿಕೆ ಮೊದಲು ತಟ್ಟನೆ ಹೊಳೆಯಿತು. ಸರ್ವಸ್ವವನ್ನು ಸೋತು ತೆಪ್ಪಗೆ ತಲೆಕೆಳಗೆ ಹಾಕಿ ಕೂತ ಪಾಂಡವರ ಪೇಚನ್ನು ಸಡಿಲಿಸಿ ದ್ರೌಪದಿಯೇ ಶಸ್ತ್ರಾಸ್ತ್ರಗಳನ್ನು ತನ್ನ ಯುಕ್ತಿವಾದದಿಂದ ಗೆದ್ದುಕೊಂಡಳು. ಹೀಗೆ ಪ್ರತ್ಯುತ್ಪನ್ನ ಮತಿ ಹೆಣ್ಣಿನಲ್ಲಿ ಹೆಚ್ಚು. ಹೆಣ್ಣಿನ ಇದುರಿಗಂತೂ ಗಂಡು ಮತ್ತೂ ಪೆಚ್ಚು. ಹೇಗೆ ಮಾತಾಡಬೇಕು, ಏನು ಮಾಡಬೇಕು–ಪ್ರಸಂಗವನ್ನು ಹೇಗೆ ತೂಗಿಸಿಕೊಂಡು ಹೋಗಬೇಕು–ಎಂಬುದೇ ಗಂಡಿನ ತಲೆ ತಿನ್ನುತ್ತದೆ.

ಗಂಡಿನಿದುರು ಹೆಣ್ಣು ಹಾಗೆ ಹತಪ್ರಭಳಲ್ಲ; ತನ್ನ ಮೇಲೆ ಆಕೆಯ ಹಿಡಿತ ಹೆಚ್ಚು; ವ್ಯವಹಾರ ಚಾತುರ್ಯವೂ ಹೆಚ್ಚು. ವಿಶೇಷವಾಗಿ, ತನ್ನೆದುರಿಗಿದ್ದ ಪ್ರಶ್ನೆ ಗಂಡಸನ್ನು ಒಲಿಸಿಕೊಳ್ಳುವ, ಒಲಿದವನನ್ನು ಉಳಿಸಿಕೊಳ್ಳುವ, ಇಲ್ಲವೆ ಕೂಡಿ ಸಂಸಾರ ಹೂಡುವ ಕುರಿತಿನದಾದರೆ, ಆಗ ಹೆಣ್ಣು ಯೋಜನೆಯಲ್ಲಿ ಹೆಚ್ಚು ಚತುರಳೂ, ಕಾರ್ಯದಲ್ಲಿ ಹೆಚ್ಚು ತ್ವರಿತಳೂ, ಇರುತ್ತಾಳೆ. ಪ್ರಣಯದ ಕೂಟಯುದ್ಧದಲ್ಲಿ ೨೦ ವರ್ಷದ ಕೆಳಗಿನ ಹೆಣ್ಣು ಕೂಡ ೨೦ ವರ್ಷದ ಕಿಶೋರನಿಗೆ ಸರಿಗಟ್ಟಲಾರಳು. ಗಂಡು ಹೆಣ್ಣು ಪ್ರಣಯಪಾಶದಲ್ಲಿ ಸಿಲುಕಿದಾಗ ನಿರೀಕ್ಷಿಸಿರಿ, ಗಂಡು ಎಷ್ಟೇ ಹಿರಿಯನಿರಲಿ. ಹೆಣ್ಣು ಎಷ್ಟೇ ಕಿರಿಯಳಿರಲಿ ಯಾರು ಯಾರ ಬೆರಳಿಸುತ್ತಲೂ ಮಣಿಯುವರೆಂದು ಸ್ಪಷ್ಟವಾಗುತ್ತದೆ. ಹೆಣ್ಣು ಗಂಡಸನ್ನು ತನ್ನ 'ಅನುಯಾಯಿ'ಯಾಗಿ ಕುಣಿಸಿ ದಣಿಸುತ್ತಾಳೆ. ಇಂಥ ಕೆಲವು ಸಂಗತಿಗಳು ಹೆಣ್ಣಿಗೆ ಹುಟ್ಟಿಗೂ ಮುಂಚಿತವಾಗಿ ಗೊತ್ತು. ಆದರೆ ಗಂಡು ಕಠಿಣ ಅನುಭವದಿಂದಲೂ, ಕಟುವಾದ ಭ್ರಮನಿರಸನದಿಂದಲೂ ಅವನ್ನು ಕಲಿತುಕೊಳ್ಳುತ್ತಾನೆ.

ಹೆಣ್ಣು ಆಡಿತೋರಿಸುವದಕ್ಕೂ ಒಡಮೂಡಿಸುವದಕ್ಕೂ ಹೆಚ್ಚು ಕಂಡುಕೊಳ್ಳುತ್ತಾಳೆ. ಆದರೆ ಗಂಡು ಕಂಡುಕೊಳ್ಳುವದಕ್ಕೂ ಹೆಚ್ಚಾಗಿ ಆಡಿತೋರಿಸುತ್ತಾನೆ, ಒಡಮೂಡಿಸುತ್ತಾನೆ. ಹೆಣ್ಣಿಗೆ ಉದ್ದೇಶ ಹೆಚ್ಚು, ಉದ್ಗಾರ ಕಡಿಮೆ. ಗಂಡಿಗೆ ಉದ್ಗಾರ ಹೆಚ್ಚು, ಉದ್ದೇಶ ಕಡಿಮೆ. ಅನಿಸಿದ್ದನ್ನೆಲ್ಲ ತನಗೆ ತಾನೇ ತಿಳಿಯಾಗಿ ಪ್ರತಿಪಾದಿಸಿಕೊಳ್ಳಲೂ ಹೆಣ್ಣು ಅರಿಯಳು. ಹೆಣ್ಣು ವಸ್ತುವಿಲ್ಲದೆಯೂ ವಿಚಾರ ಮಾಡಬಲ್ಲಳು. ಪೂರ್ವಯೋಜನೆ ಇಲ್ಲದೆಯೇ ಸುಳ್ಳಾಡಬಲ್ಲಳು. ಸುಳ್ಳನ್ನು ಕಟ್ಟಿ ಲೀಲಾಜಾಲವಾಗಿ ಹೇಳುವವರಲ್ಲಿ ಗಂಡಿಗಿಂತ ಹೆಣ್ಣೇ ಚುರುಕು ಹೆಚ್ಚು! ಸಿಕ್ಕಿ ಬೀಳುವಂಥ ಪೇಚಿನ ಪ್ರಸಂಗದಲ್ಲಿ ಹಲವೊಮ್ಮೆ ಗಂಡು ಪೆಚ್ಚುಬೀಳುತ್ತಾನೆ. ಆದರೆ ಹೆಣ್ಣು ಕ್ಷೋಭೆಗೊಳ್ಳದೇ 'ಸ್ಪಷ್ಟೀಕರಣ' ಮಾಡುತ್ತಾಳೆ, 'ತಿಳುವಳಿಕೆ' ಕೊಡುತ್ತಾಳೆ!

ಬಾಲೆಯು ಬೆಳೆಗೆ ಬಾಳೆಯಂತೆ. ಬಾಲನು ತಾಳೆಯಂತೆ ಬೆಳೆಯುವನು. ಗಂಡಿಗಿಂತ ಹೆಣ್ಣು ಭರದಿಂದ ವಯಸ್ಸಿಗೆ ಬರುವಳು. ಕೌಮಾರ್ಯದಿಂದ ಯೌವನಕ್ಕೆ ಬರುವ 'ಪೌಗಂಡಾವಸ್ಥೆ'ಯ ಅವಧಿ ಹೆಣ್ಣಿಗೆ ಕಡಿಮೆ. ದೇಹದ ಭಾರದ ಪ್ರಮಾಣದಲ್ಲಿ ಗಂಡಿಗಿಂತಲೂ ಹೆಣ್ಣಿನ ಮಿದುಳಿನ ಪ್ರಮಾಣ ಹೆಚ್ಚು. ಬಹುಶಃ ಹೆಣ್ಣಿನ ರಭಸದ ಪೌಗಂಡಾವಸ್ಥೆಯು ಮೂಲತಃ ಹಾಗಿದ್ದಿಲ್ಲವೇನೋ. ಪುರಾತನ ಕಾಲದಿಂದಲೇ, ಪ್ರಾಯ ಬರುವದರೊಳಗೆ ತಾಯ್ತನವನ್ನು ತರುವ ಒತ್ತಾಯದ ವಾಡಿಕೆಗೆ ಬಲಿಯಾಗಿ ಹೆಣ್ಣು ಹೀಗೆ ತ್ವರೆಯಿಂದ ಯೌವನಕ್ಕೆ ತಲ್ಪುವಂತೆ

ಆಗಿರಬಹುದು. ಅಂದರೆ ಋತುವತಿಯಾದಮಾತ್ರಕ್ಕೆ ಅಥವಾ ಆಗುವ ಮುಂಚೆಯೇ ಗಂಡಿನ ಬಲತ್ಕಾರಕ್ಕೆ ಹೆಣ್ಣು ತಾಯಿಯಾಗುವ ಪ್ರಸಂಗಗಳು ಅನಾದಿಯಿಂದಲೂ ಹೆಚ್ಚಾಗಿ ಒದಗಿ ಬಂದಿರಬಹುದು. ಅದರಿಂದ ಕ್ರಮೇಣ ಹೆಣ್ಣಿನ ಶಾರೀರಕ ಮಾನಸಿಕ ಬೆಳವಣಿಗೆಯು ವೇಗಬರದಿಂದ ಹೆಚ್ಚಿರಬೇಕು. ಆಧುನಿಕ ಗಂಡಸು ಮದುವೆಗೆ ಮುಟ್ಟುವ ವಯೋಮಾನದ ಅರ್ಧಕ್ಕೇ ಹಿಂದಿನ ಗಂಡು ತಂದೆಯಾಗಲು ಸಾಮರ್ಥ್ಯ ಪಡೆಯುತ್ತಿದ್ದನು. ಇಂದಿಗೂ ಮದುವೆಯ ಯೋಗ್ಯತೆಗೆ ಆರ್ಥಿಕ ಪರಿಸ್ಥಿತಿಯೇ ಅಡ್ಡ ಬರುವದೇ ಹೊರತು ಗಂಡಿನ ಶಾರೀರಕ ಸ್ಥಿತಿಯು ಎಂದಿನಂತೆ ಮುಂಚಿತವಾಗಿಯೇ ಯೋಗ್ಯತೆಯನ್ನು ಪಡಕೊಳ್ಳುತ್ತದೆ.

## ಋತು-ಪ್ರಾಯ

ಪೌಗಂಡಾವಸ್ಥೆ–ಋತುಪ್ರಾಪ್ತಿಯು ಪ್ರಾಯ ಶಾರೀರಿಕವಷ್ಟೇ ಅಲ್ಲ. ಮಾನಸಿಕವೂ ಇರುತ್ತದೆ. ಗಂಡಿನಲ್ಲಿಯೂ ಅದು ಒಬ್ಬೊಬ್ಬರಿಗೆ ಒಂದೊಂದು ರೀತಿ ಇರುತ್ತದೆ. ಕೆಲವರು ಮುಂಚಿತವಾಗಿಯೇ 'ಪ್ರಾಯಕ್ಕೆ ಬರುತ್ತಾರೆ.' ಕೆಲವರು ವಿಲಂಬದಿಂದ ಮತ್ತೂ ಕೆಲವರು ಕೊನೆತನಕವೂ ವಯಸ್ಸಾದರೂ ಪ್ರಾಯಕ್ಕೆ ಬರುವದಿಲ್ಲ! ಜಗತ್ತನ್ನೂ ಜೀವನವನ್ನೂ ಜಟ್ಟಿಗತನದಿಂದ ಇದುರಿಸಲಿಕ್ಕೆ ತಕ್ಕವನೆನಿಸುವದೇ ಪ್ರಾಯಕ್ಕೆ ಬಂದವನ ಲಕ್ಷಣ. ಈ ಲಕ್ಷಣ ನಮಗಿಂತ ನಮ್ಮ ಪೂರ್ವಜರಲ್ಲಿ ಹೆಚ್ಚು ಮುಂಚಿತವಾಗಿಯೇ ಬರುತ್ತಿತ್ತು. ಅಂದಿನ ಪರಿಸ್ಥಿಯಲ್ಲಿ ಗಂಡು–ಹೆಣ್ಣು ತಮ್ಮ ಸಂಸಾರದ ಭಾರವನ್ನು ಹೊರಲು ತಕ್ಕದಾದ ಶಾರೀರಿಕ ಮಾನಸಿಕ ಸಾಮರ್ಥ್ಯವನ್ನು ತ್ವರೆಯಿಂದ ಬೆಳಿಸಿಕೊಳ್ಳುತ್ತಿದ್ದರು. ಆದರೆ ಸದ್ಯದ ಸ್ಥಿತಿ ಹಾಗಿಲ್ಲ. ಸಾಮಾಜಿಕ ನಾಗರಿಕತೆಯೂ ವೈಯಕ್ತಿಕ ಸಂಸ್ಕೃತಿಯೂ ಬೆಳವಂತೆ ಜೀವನದ ಜಟಿಲತೆ ಕುಟಿಲತೆಗಳು ಬಹುಮುಖವಾಗಿ ಬೆಳೆದಿವೆ. ಅವರ ಇದುರಿಗೆ ವ್ಯಕ್ತಿಯ ಅಸಹಾಯತೆಯೂ ಪ್ರೌಢತೆಗೆ ಮುಟ್ಟುವ ಅವಧಿಯೂ ಬೆಳೆಯ ತೊಡಗಿದೆ. ನಮ್ಮ ಅನಾದಿಯ ಸರಳ ಪ್ರವೃತ್ತಿಗಳ ಕೆಲವೇ ಆದ ಯುಕ್ತಿ ಪ್ರಯುಕ್ತಿಗಳಿಗೆ ಆಧುನಿಕ ಜಗತ್ತು ದಿನನಿತ್ಯವೂ ಹೆಚ್ಚು ಹೆಚ್ಚು ಸಂಕೀರ್ಣ ವಾಗುತ್ತಿವೆ. ಇದರಿಂದ ನಮ್ಮಲ್ಲಿ ಪ್ರೌಢತೆಯು ಹಿಂದಿನವರಷ್ಟು ವೇಗ ಇಲ್ಲವೇ ಬಲುಮೆಯಿಂದ ಬರುವದಿಲ್ಲ. ಸದ್ಯಕ್ಕೆ ನಡುವಯಸ್ಸಿನ ಮಟ್ಟು ದಾಟುವ ಮುಂಚೆ ಮನಸ್ಸಿನ ಪ್ರೌಢತೆಯನ್ನು (ಪ್ರಾಯಸ್ಥಿಕೆಯನ್ನು) ಮುಟ್ಟುವ ಮಂದಿ ಕೆಲವರೇ ಸರಿ! ಇಂಥ ಅಪ್ರಾಯಸ್ಥ ಮನಸ್ಸಿನ ಜನಸಮುದಾಯ ಇಂದಿನ ಜಗತ್ತಿನಲ್ಲಿ

ಹೆಚ್ಚಾಗಿದ್ದರಿಂದಲೇ ಕುರುಡು ಮತಪ್ರಚಾರಕ್ಕೂ ಸರ್ವಾಧಿಕಾರಿಗಳ ಅವತಾರಕ್ಕೂ ಅನುಕೂಲವಾಗಿದೆ.

ಗಂಡಿನ ಮನಸ್ಸಿನ ಪ್ರಾಯ-ಪ್ರೌಢತೆಯ ಈ ಪದಗೇಡು ಹೆಣ್ಣಿನಲ್ಲಿ ಕಂಡುಬರುವದಿಲ್ಲ. ಹೆಣ್ಣಿನ ಬಾಳು ಬಹುಮಟ್ಟಿಗೆ ಸರಳ-ಸಹಜಸಂಗತಿಗಳಿಂದ ಕೂಡಿ ಸೀರಾಗಿ ಸಾಗಿದ್ದು. ಆದ್ದರಿಂದ ಆಕೆ ಶರೀರದೊಂದಿಗೆ ಮನಸ್ಸಿನಿಂದಲೂ ಮುಂಚಿತವಾಗಿಯೇ ಪ್ರೌಢಳಾಗುವಳು. ಇವರಿಂದ ಸಾಮಾಜಿಕ ನಡೆ-ನುಡಿಯ ಕಟ್ಟುನಿಟ್ಟುಗಳನ್ನೂ, ಸೌಂದರ್ಯಗಳನ್ನೂ ಆಕೆ ಕೂಡಲೆ ಕಲಿತುಕೊಳ್ಳುವಳು. ಶಾಲೆಯ ಶಿಕ್ಷಣದಲ್ಲಿಯೂ ಕೂಡ ಪೌಗಂಡಾವಸ್ಥೆಯಲ್ಲಿರುವ ಮಕ್ಕಳಲ್ಲಿ ಹುಡಿಗಿಯೇ ತನ್ನ ವಯಸ್ಸಿನ ಹುಡುಗನಿಗಿಂತ ಹೆಚ್ಚು ಚತುರಳು ಕುಶಲಳೂ ಕಾಣುವಳು. ಹೀಗೆ ಪ್ರಾಯಕ್ಕೆ ಬರುವ ಅವಧಿಯಲ್ಲಿ ೧೦-೨೦ ವರ್ಷದೊಳಗಿನ ವಯೋಮಾನದಲ್ಲಿ ಗಂಡಿಗಿಂತ ಹೆಣ್ಣೇ ಬುದ್ಧಿಯ ಬೆಳವಣಿಗೆಯಲ್ಲಿ ಭರದಿಂದ ಸಾಗುವಳು. ಬೇಗನೇ ತನ್ನ ಪೂರ್ಣ ವಿಕಾಸವನ್ನು ಸಾಧಿಸುವಳು.

ಆದರೆ ಇದಕ್ಕೆ ಇನ್ನೊಂದು ಬದಿಯೂ ಇದೆ. ಪ್ರಾಪಂಚಿಕ ಪ್ರಯತ್ನ ಪ್ರಯೋಗಗಳ ಒತ್ತಾಯಕ್ಕೆ ಬಲಿಯಾದ ಗಂಡು ಮೆಲ್ಲನೆ ಸಾಗಿದರೂ ಬಹುಕಾಲ ಮಾನಸಿಕ ಬೆಳವಣಿಗೆಯನ್ನು ಹೊಂದುತ್ತಲೇ ನಡೆಯುವನು. ಆದರೆ ಹೆಣ್ಣು ಹಾಗಲ್ಲ. ಹುಟ್ಟಿನೊಂದಿಗೆ ಬಂದ ಬುದ್ಧಿ ಸುಟ್ಟರೂ ಹೋಗುವದಿಲ್ಲವೆಂಬ ನಾಣ್ಣುಡಿಯು ಹೆಣ್ಣಿಗೆ ಹೆಚ್ಚು ಒಪ್ಪುತ್ತದೆ. ಬೇಗನೆ ಬೆಳವಣಿಗೆಯನ್ನು ಮುಗಿಸಿಕೊಂಡ ಹೆಣ್ಣು ಬದಲಾವಣೆಯನ್ನು ಹೊಂದುವದಿಲ್ಲ. ಗಂಡು ಬದಲಾವಣೆಯನ್ನು ಮೆಚ್ಚಿಕೊಳ್ಳುವಂತೆ, ಹೆಣ್ಣು ಬುನಾದಿಯ ನಡಾವಳಿಯನ್ನು ಅಂಟಿಕೊಳ್ಳುತ್ತಾಳೆ. ಇದರಿಂದ ಗಂಡು ಕ್ರಾಂತಿಯ ಅಗ್ರನೂತ-ಪ್ರಗತಿ-ಪರಿವರ್ತನದ ಪ್ರವರ್ತಕ. ಹೆಣ್ಣು ಮಾನವವಂಶದ ಪರಂಪರೆಯ ಪ್ರಾಣಾಧಾರ, ಸ್ಥಿತಿಸ್ಥಾಪಕಶಕ್ತಿ.

## ಹೆಣ್ಣು ಮತ್ತು ಕ್ರಾಂತಿ

ಇದರ ಇನ್ನೊಂದು ಮಗ್ಗುಲಾಗಿ ಹೆಣ್ಣಿನಲ್ಲಿ ಭಾವನೆಯ ಸಂಕೋಚವೂ ವಿಚಾರದ ಅಪರ್ಯಾಪ್ತತೆಯೂ ಇರುತ್ತವೆ. ಅಂದರೆ ಹೆಣ್ಣಿನ ಉದ್ರಿಕ್ತವಾದ ಭಾವನೆಗಳು ಬಹುಕಾಲ ತೀವ್ರವಾಗಿ ತಡೆಯಬಲ್ಲವು. ಹಾಗೆಯೇ ತೀರ ಹೊಸ ಹೊಸ ವಿಚಾರಗಳೂ ಶುದ್ಧಜ್ಞಾನದ ಪ್ರಮೇಯ-ಪ್ರತಿಪಾದನೆಗಳೂ ಹೆಣ್ಣು ಬುದ್ಧಿಗೆ

ತೋಚಲಾರವು; ತಿಳಿಯಲಾರವು. ಹೆಣ್ಣಿನ ರುಚಿ ವೈಚಿತ್ರ್ಯದ ಸಂಗತಿಗಳು ಹೆಚ್ಚಾಗಿ ಕೌಟುಂಬಿಕ ಪಾರಿವಾರಿಕ ಪರಿಚಯದವು. ಆಕೆಯ ಆವರಣವೂ ಕುಟುಂಬದ ಮನೆಯೇ. ಹೆಣ್ಣಿನ ಬುದ್ಧಿ ನಿಸರ್ಗದಷ್ಟೇ ಗಹನ ಗಂಭೀರ: ಆದರೆ ಮನೆಯ ನಾಲ್ಕು ಗೋಡೆಗಳಷ್ಟೇ ಸಂಕುಚಿತ! ಯಾವದೇ ತಜ್ಞನು ತನ್ನ ಜ್ಞಾನದ ವಿಶೇಷ ಪ್ರಭುತ್ವದ ಕ್ಷೇತ್ರವನ್ನು ಪ್ರೀತಿಸುವಂತೆಯೇ ಹೆಣ್ಣು ಪರಂಪರಾಗತ ಆಚಾರ–ವಿಚಾರವನ್ನು ಪ್ರೀತಿಸುವಳು. ಮಾನಸಿಕ ವ್ಯಾಪಾರದಲ್ಲಿಯೂ ನೀತಿಯಲ್ಲಿಯೂ ಹೆಣ್ಣು ಅಷ್ಟು ಪ್ರಯೋಗಪ್ರಿಯಳಲ್ಲ. 'ಪ್ರಣಯ–ಸ್ವಾತಂತ್ರ್ಯ'ದಲ್ಲಿ ಬಿದ್ದ ಹೆಣ್ಣು ಕೂಡಹಾಗೆ ಸ್ವೈರ ನಡೆಯುವದು ಅಷ್ಟೊಂದು ಸ್ವಾತಂತ್ರ್ಯ ಪ್ರೇಮಕ್ಕಾಗಿ ಅಲ್ಲ. ಹೊಣೆಗಾರನಾದ ಗಂಡನೊಬ್ಬನೊಡನೆ ನಿರಾಮಯವಾದ ದಾಂಪತ್ಯಜೀವನವನ್ನು ಸಾಧಿಸಲು ಹತಾಶಳಾಗಿಯೇ ಆಕೆಯು ಪ್ರಣಯದ ಸ್ವೈರಾಚಾರಕ್ಕೆ ಅಣಿಯಾಗುತ್ತಾಳೆ–ಸ್ವಾಸ್ಥ್ಯಗೆಟ್ಟು ನಾಲಿಗೆಯು ಸಾತ್ವಿಕ ಆಹಾರ ಬಿಟ್ಟು ತೀವ್ರವಾದ ರುಚಿ ವೈಚಿತ್ರ್ಯಕ್ಕೆ ಹಾತೊರೆದಂತೆ! ಇದಕ್ಕೆ ಸಾಕ್ಷಿಯೆಂದರೆ,–ಸಾಧ್ಯವಿದ್ದರೆ ತಾನು ಮೆಚ್ಚಿದ ಯಾವದೇ ಗಂಡಸರನ್ನು ಆಕೆ ದೃಢವಾಗಿ ತನ್ನ ಮನೆ ಮಕ್ಕಳ ಮುಂದ್ದು ಮಾಟದಲ್ಲಿ ತನ್ನೊಡನೆ ತನ್ಮಯ ಮಾಡಲು ಎಂಥ ಸ್ವೈರವೃತ್ತಿಯ ಹೆಣ್ಣುಕೂಡ ಆಳವಾಗಿ ಬಯಸುತ್ತಾಳೆ.

ಹೊಸಹರೆಯ ಹುರುಪು ಹುಮ್ಮಸದಲ್ಲಿ ಒಂದು ಹೆಣ್ಣು ರಾಜಕೀಯ ಸುಧಾರಣೆಗಳ ಇಲ್ಲವೇ ಸಾಮಾಜಿಕ ಕ್ರಾಂತಿಯ ಉಗ್ರ ಉಪಾಸನೆಯಿಂದ ಉದ್ರೇಕಗೊಳ್ಳಬಹುದು. ಅಖಿಲ ಮಾನವಕೋಟಿಯನ್ನೇ ಉದ್ಧರಿಸಲು ತನ್ನ ಹೃದಯದ ಮೃದು ಭಾವನೆಗಳನ್ನು ತೀವಿಯಾಗಿ ಚೆಲ್ಲಬಹುದು. ಆದರೆ ಇದು ಆಕೆಯ ಯಥಾರ್ಥ ಸ್ವರೂಪವಲ್ಲ. ತನಗೆ ಪ್ರಾಮಾಣಿಕನಾದ ಪ್ರಭಾವಿಯಾದ ಒಬ್ಬ ಗಂಡು ಒಡನಾಡಿಯು ದೊರೆತನೆಂದರೆ, ವಿಶ್ವಪ್ರೇಮದ ಕ್ರಾಂತಿಕಾರಿಣಿಯಾದ ಹೆಣ್ಣು ಕ್ರಮೇಣ ತನ್ನ ಕಾರ್ಯಕ್ಷೇತ್ರವನ್ನು ಕುಗ್ಗಿಸುತ್ತ ಸಾಮುದಾಯಿಕ ಸಾಧನೆಯಿಂದ ಹಿಂಜರಿಯುತ್ತ ತನ್ನೊಂದಿಗೆ ತನ್ನ ಸಹಕಾರಿಯಾದ ಗಂಡಸನ್ನೂ ಅಸ್ಪಷ್ಟ ವಿಶ್ವಪ್ರೇಮದಿಂದ ಮೆಲ್ಲಗೆ ಬಿಡಿಸಿಕೊಂಡು ಕುಟುಂಬದ ಸಂಕುಚಿತವಾದರೂ ಉತ್ಕಟವಾದ ನಿಷ್ಠೆಗೆ ಮಣಿದು ದಣಿಯಲು ಕಲಿಸುವಳು. 'ನಿನಗಾಗಿ ಪ್ರಪಂಚವನ್ನೇ ಬಿಡಬಲ್ಲೆ, ಓ ನನ್ನ ನಲ್ಲೆ!' ಎಂದು ಅನಭಿಜ್ಞನಾದ ತರುಣನು ಪ್ರಣಯದ ಉನ್ಮಾದದಲ್ಲಿ ಹೆಣ್ಣಿನ ಕೈ ಹಿಡಿದು ಉದ್ಗರಿಸುವನು. ಮುಂದೆ ಕೈಹಿಡಿದ ಹೆಣ್ಣಿಗಾಗಿ ಗಂಡನಾದ ಅವನು ಹಾಗೆಯೇ ಮಾಡಿ ಕಾಣಿಸುವನು.

ನಿಜವಾಗಿ ಹಿತವಾದ ಸುಧಾರಣೆಯು ಮನೆಯಲ್ಲಿಯೇ ಮೊದಲಾಗುವದೆಂಬ

ಮಾತು ಹೆಣ್ಣು ಹುಟ್ಟಾ ಬಲ್ಲಳು. ವಿಚಾರ ಮಾಡುವ ಗೋಜಿಗೆ ಹೋಗದೆಯೂ ಬಲ್ಲಳು. ಆದ್ದರಿಂದಲೇ ಆಕೆಯು ಆದರ್ಶವಾದಿಯಾಗಿ ಆಕಾಶಪುಷ್ಪಕ್ಕಾಗಿ ಅಲೆದಾಡುವ ಗಂಡನ್ನು ತನ್ನ ಮಕ್ಕಳ ಅನನ್ಯ ಆರಾಧಕನನ್ನಾಗಿ ಮಾರ್ಪಡಿಸುವಳು ! ನಿಸರ್ಗವು ಕಾಯಿದೆ ಕಾನೂನು ರಾಜ್ಯ–ರಾಷ್ಟ್ರಗಳ ಕುರಿತು ಕಾಸಿನ ಪರಿವೆಯನ್ನೂ ಮಾಡುವದಿಲ್ಲ; ಕುಲ ಮತ್ತು ಮಕ್ಕಳು ಇವೇ ನಿಸರ್ಗದ ಅಚ್ಚುಮೆಚ್ಚಿನ ವಿಷಯ ಸದ್ಯಕ್ಕೆ ಕುಲದ ಕ್ಷೇಮದ ಈ ಕಾರ್ಯದಲ್ಲಿ ನಿಸರ್ಗವು ತಪ್ಪಿದಂತೆ ಇದೆ. ಅದಕ್ಕೆ ಕಾರಣ, ಹೆಣ್ಣು ನಿಸರ್ಗವನ್ನು ಇಂದಿನಮಟ್ಟಿಗೆ ಮರೆತಂತಿದೆ. ಆದರೆ ಬಹುಕಾಲ ನಿಸರ್ಗವನ್ನು ಸೋಲಿಸುವದು ಶಕ್ಯವಿಲ್ಲ !

ಪುರುಷರ ಪ್ರತಿಭೆಗೆ ಮೆಚ್ಚಬೇಕು. ಸ್ತ್ರೀಯರ ಪ್ರತಿಮೆಗೆ ಮೆಚ್ಚಬೇಕು–ಎಂದು ಹೊಸದೊಂದು ಜಾಣ್ಣುಡಿಯನ್ನು ಮಾಡುವ ಮೋಹ ಬುದ್ಧಿಯು ಬಿಂಕದ ಗಂಡಿಗೆ ಆಗುವದುಂಟು. ಆದರೆ ಮಾರ್ಮಿಕವಾಗಿ ನೋಡಿದರೆ, ಈ ನುಡಿಯಲ್ಲಿ ಜಾಣ್ಮೆ ಎಷ್ಟು ? ಹೆಣ್ಣು ಹುಟ್ಟ ತಿಳುವಳಿಕೆ ತರುತ್ತಾಳೆ. ಕೆಲವು ಗಂಡು ತಿಳುವಳಿಕೆಯನ್ನು ಗಳಿಸಿಕೊಳ್ಳುತ್ತಾರೆ. ಆದರೆ ಹಲವು ಗಂಡು ತಿಳುವಳಿಕೆಯನ್ನು ಎರವಲ ತರುತ್ತಾರೆ. ಇಲ್ಲವೇ ಬರಿದೇ ತಿಳುವಳಿಕೆ ಹೇರಲ್ಪಡುತ್ತಾರೆ. ತಿಳಿದವರೆಂದು ಕರೆಯಿಸಿಕೊಳ್ಳುತ್ತಾರೆ !

## ಹೆಣ್ಣಿನ ಅಭಿರುಚಿ

ಹೀಗಿದ್ದರೂ ಹೆಣ್ಣಿನ ಮನಸ್ಸು ಗಂಡಿನಿಂದ ಕೆಲಮಟ್ಟಿಗೆ ಬೇರೆ ಬಗೆಗಳನ್ನು ಬೆಳಿಸಿಕೊಂಡಿದೆ. ಬುದ್ಧಿಯ ಕ್ಷೇತ್ರದಲ್ಲಿಯೂ ಕೂಡ ಹೆಣ್ಣಿನ ಬಗೆ ಗಂಡಿನಿಂದ ತುಸು ಬೇರೆ. ಅಮೂರ್ತವಾದ ಶುದ್ಧ ತಾತ್ವಿಕ ವಿಚಾರದಲ್ಲಿ ಗಂಡಿನಷ್ಟು ನಿರಾಯಸವಾಗಿ ಹೆಣ್ಣಿನ ಬುದ್ಧಿ ಹರಿದಾಡುವದಿಲ್ಲ. ವಿವರಗಳನ್ನೂ ಘಟನೆಗಳನ್ನೂ ಬಿಡಿಸಂಗತಿಗಳನ್ನೂ ಕಂಡು ನೆನಪಿಡುವ ತೀಕ್ಷ್ಣ ಬುದ್ಧಿ ಅವಳದು. ಆದರೂ ಅಂಥ ಘಟನೆ–ವಿವರಗಳ ಸಮನ್ವಯ ಮಾಡಿ–ಅನ್ವಯಾರ್ಥ ಹೂಡಿ ವ್ಯಾಪಕ ಸಿದ್ಧಾಂತಗಳನ್ನು ತೆಗೆಯಲಾಗಲೀ ಸ್ವತಂತ್ರ ಮೌಲಿಕವಾದ ಉಪಪತ್ತಿಗಳನ್ನು ಹುಡುಕಲಾಗಲೀ ಹೆಣ್ಣಿಗೆ ಅಷ್ಟೊಂದು ಬಾರದು. ನಮ್ಮಲ್ಲಿ ಸ್ತ್ರೀಯರಿಗಾಗಿಯೇ ನಡೆಯುವ ಶಿಕ್ಷಣ ಸಂಸ್ಥೆಗಳಲ್ಲಿ ಮಿಕ್ಕ ಎಲ್ಲ ವಿಷಯಗಳಿಗೆ ಅಧ್ಯಾಪಿಕೆಯರಿದ್ದರೂ, ವಿಜ್ಞಾನ, ತತ್ವಜ್ಞಾನ, ಗಣಿತ, ಸಂಸ್ಕೃತ ಮುಂತಾದವುಗಳಿಗೆ ಅಧ್ಯಾಪಕರೇ ಇರುವುದುಂಟು.

ಹೆಣ್ಣಿಗೆ ಪ್ರಕ್ರಿಯೆ–ಪದ್ಧತಿಗಳಿಗಿಂತಲೂ ವ್ಯಕ್ತಿಯಲ್ಲಿ ಹೆಚ್ಚು ಆಸ್ಥೆ–ಆಸಕ್ತಿ. ಅವಳು ಸಮಸ್ಯೆಗಳನ್ನು ಚರ್ಚಿಸುವದಿಲ್ಲ. ಗಂಡಿನ ವಿಷಯವನ್ನೇ ಚರ್ಚಿಸುತ್ತಾಳೆ. ಏಕೆಂದರೆ ಹೆಣ್ಣಿಗೆ ಗಂಡೇ ಒಂದು ಸಮಸ್ಯೆ. ವ್ಯಾಪಕ ವ್ಯವಹಾರಗಳ ಸುಳಿ ಗಾಳಿಯಲ್ಲಿ ಬಿದ್ದು ಕಾರ್ಯ–ಕಾರಣ–ಕ್ರಮ ಕ್ರಿಯೆ ಪ್ರತಿಕ್ರಿಯೆಗಳನ್ನೂ ಗಂಡು–ಹೆಣ್ಣುಗಳನ್ನು ತಿಳಿದು ವ್ಯವಹರಿಸುವದು ಗಂಡಿನ ಹಣೆಬರಹವಾಗಿದೆ. ಯಾವದೊಂದು ತತ್ತ್ವವನ್ನು ಇಲ್ಲವೇ ಹೊಸ ವಿಚಾರವನ್ನು ಕುರಿತು ಒಂದು ಪುಸ್ತಕ ತೆರೆದು ಗಂಡು ಅದರಲ್ಲಿ ತನ್ಮಯತೆಯಿಂದ ತೊಡಗಬಹುದು. ಆದರೆ ಹೆಣ್ಣು ಓದುವ ಪುಸ್ತಕ ಕತೆಯಾಗಿರಬೇಕು.–ಗಂಡಿನ ಕತೆಯಾಗಿರಬೇಕು: ಅದೂ ಗಂಡು ಹೆಣ್ಣಿಗೆ ಸೋತ ಕತೆಯಾದರೆ ಇನ್ನಿಷ್ಟು ಚಂದ! ಕೇವಲ ಮೂರ್ತ ಗೋಚರ ಸಂಗತಿಗಳನ್ನೇ ಅರಿಯಬಲ್ಲಳಾದ್ದರಿಂದ ಹೆಣ್ಣು ಭೌತಿಕ ಸಾಮಾಜಿಕ ಇಲ್ಲವೆ ಆರ್ಥಿಕ ಕಾರಣಗಳಿಂದ ಒದಗುವ ಮನುಷ್ಯನ ವಶವನ್ನು ಮೀರಿದ ವ್ಯಾಪಾರಗಳ ಹಿಂದೆಯೂ, ದೈವೀ ವ್ಯಕ್ತಿಗಳ ಇಲ್ಲವೇ ದಿವ್ಯ ಇಚ್ಛಾಶಕ್ತಿಗಳ ಕೈವಾಡವಿದೆಯೆಂದೇ ಸಹಜವಾಗಿ ನಂಬುವಳು. ಸ್ವಭಾವದಲ್ಲಿ ಹೆಣ್ತನ ಇರುವವರೆಲ್ಲ ಹೀಗೆಯೇ. ಮಹಾತ್ಮರು ಕೂಡ ಬಿಹಾರದ ಭೂಕಂಪವು ಅಸ್ಪೃಶ್ಯತೆಯ ನಿವಾರಣವಾಗದಿರುವದಕ್ಕೆ ವ್ಯಕ್ತವಾದ ದೈವೀಪ್ರಕೋಪವೆನ್ನ ಲಿಲ್ಲವೇ? ಅವನ್ನು ಸಾವಿರಾರು 'ಗಾಂಧಿ ಜನ' ನಂಬಲಿಲ್ಲವೆ?

ಜಗತ್ತಿಗೆ ಹೆಣ್ಣು ಪ್ರತಿಭೆಯನ್ನು ಪೂರೈಸಿದ್ದು ತೀರ ಕಡಿಮೆ. ಇದನ್ನು ಕಂಡು ಗಂಡು ಬಹಳೇ ಸಮಾಧಾನಪಟ್ಟಿದ್ದಾನೆ. ಸಂಶೋಧಕರಾದ ವಿಜ್ಞಾನಿಗಳಲ್ಲಿ ಹೆಣ್ಣು ಜನವೆಷ್ಟು? ರೇಡಿಯಂ ಶೋಧದಿಂದ ಒಬ್ಬ ಮೆಡಮ್ ಕ್ಯೂರಿಯೇ, ಶಿಕ್ಷಣ ಪದ್ಧತಿಯ ಶೋಧದಿಂದ ಒಬ್ಬ ಮೊಂಟೆಸೋರಿಯೇ ಹೆಸರಾಗಿದ್ದಾರೆ. ವಿಜ್ಞಾನಿಗಳ ಪ್ರತಿಭಾವಂತ ಸಂಶೋಧಕರ ಹೆಂಡಂದಿರಾಗಿ ಅವರ ಕಾರ್ಯಕ್ಕೆ ಸ್ಫೂರ್ತಿಯನ್ನೋ ಸಹಕಾರವನ್ನೋ ನೀಡಿ ಹೆಣ್ಣು ಪ್ರತಿಭೆಯ ಶ್ರೇಯದಲ್ಲಿ ಪಾಲುಗಾರ್ತಿಯಾಗಿರ ಬಹುದು. ಆದರೆ ತಾನೇ ಅಂಥ ಪ್ರತಿಭೆಯ 'ನವೋನವೋನ್ಮೇಷ'ವನ್ನು ಪ್ರಕಟಿಸಿದ್ದು ವಿರಳವೆ.

ಕಲೆಯ ಪ್ರಪಂಚದಲ್ಲಿಯೂ ಹಾಗೆಯೇ. ಪ್ರಿಯ ಶಿಷ್ಯೆ. ಲಲಿತೆ. ಕಲಾವಿದೆ ಆಗುವದು ಇಂದುಮತಿಯ ಗುಣ. ಆದರೆ ಗುರುವಾಗುವ ಧರ್ಮ ಅಜರಾಜನದೇ ಸರಿ. ಕಲೆಯ ಉಪಾಸನೆ ಜೀವೋಪಾಸನೆ ಹೆಣ್ಣಿನ ಸೊತ್ತು. ನಿಜ. ಆದರೆ. ಕಲೆಯ ನಿರ್ಮಿತಿ ಗಂಡಿನದೇ ಶಕ್ತಿಯಾಗಿದೆ ಗಂಡಿಗಿಂತ ಹೆಚ್ಚು ಹೆಣ್ಣು ಸಂಗೀತ ಕಲಿಯುತ್ತಿದ್ದರೂ, ಹೆಣ್ಣಿಗಿಂತ ಗಂಡೇ ಹೆಚ್ಚಾಗಿ ಸಂಗೀತ ದಿಗ್ದರ್ಶನವನ್ನೂ ಹೊಸ

ಸ್ವರಾಲಾಪರಚನೆಯನ್ನೂ ರಾಗ–ರೀತಿಗಳನ್ನೂ ಉಂಟು ಮಾಡುವನು. ಕಲೆಯು ಚೆಲುವಿಗೆ ಸಂಬಂಧಪಟ್ಟಿದ್ದು. ಭಾವನೆಗಳ ಉದ್ರೇಕದ ಅನುಕೂಲತೆಯಿಂದ ಪುಟಿದು ಪುಟಗೊಳ್ಳುವಂತಹದು. ಅಂದರೆ ಹೆಣ್ಣಿನ ಹೃದಯ ಅದಕ್ಕೆ ಹೆಚ್ಚು ಹದ ಆದಾಗ್ಯೂ, ಗಂಡಿಗೆ ಈ ಕಲಾಕಲ್ಪಕ ಪ್ರತಿಭೆಯು ವಿಕಾಸ–ವಿಲಾಸಗಳು ಸಹಜ ಸಿದ್ಧವಾಗಿವೆ !

## ಮಾತೃತ್ವ ಮತ್ತು ಪ್ರತಿಭೆ

ಇದರ ಕಾರಣವೇನು ? ಪ್ರತಿಭೆಯಾಗಿ ಮಿಂಚಲಿಕ್ಕೆ ಮನಸ್ಸಿನಲ್ಲಿ ಪ್ರಚಂಡ ಚೈತನ್ಯದ ಸಂಚಯವಾಗಬೇಕು. ಬುದ್ಧಿ–ಭಾವನೆಗಳಿಗೆ ಅಲೌಕಿಕ ಉದ್ದೀಪನೆಯ ಸಂದರ್ಭವಾಗಲಿ ಸಂಸ್ಕಾರವಾಗಲಿ ಹೆಣ್ಣಿಗೆ–ಮನೆಯ ನಾಲ್ಕು ಗೋಡೆಗಳಲ್ಲಿಯೇ ನಿಂತ ಹೆಣ್ಣಿಗೆ–ಎಂದಿನಿಂದಲೂ ದೊರೆತಿಲ್ಲ. ಅಲ್ಲದೆ ಪ್ರಚಂಡ ಚೈತನ್ಯದ ಸಂಚಯವೂ ಆಕೆಯ ಮನಸ್ಸಿನಲ್ಲಿ ಸಂಗ್ರಹವಾಗುವಂತಿಲ್ಲ. ಆಕೆಯ ಮನದ ಶಕ್ತಿಯು ದೇಹದ ಸತ್ವದೊಡನೆಯೇ ತಾಯ್ತನದ ತಪಾಚರಣೆಗೆ ವ್ಯಯವಾಗುತ್ತ ಬಂದಿದೆ. ಆದ್ದರಿಂದ ಹೊಸ ಜೀವವನ್ನೊಂದು ಹೊತ್ತು ಹೆತ್ತು ಸಲಹುವ ಜೀವಂತನಿರ್ಮಿತಿಯ ಕಾರ್ಯವೇ ಆಕೆಯ ಪ್ರಜ್ಞೆ–ಪ್ರತಿಭೆಗಳ ಕೆಲಸವಾಗಿ ಬಿಟ್ಟಿದೆ. ಹೀಗೆ ಮಾತೃತ್ವ ಮತ್ತು ಪ್ರತಿಭೆ ಇವೆರಡರಲ್ಲಿಯೂ ಒಂದು ಬಗೆಯ ದ್ವಂದ್ವ ಸಂಘರ್ಷವಿದೆ. ಆದ್ದರಿಂದ ಯಾವ ಹೆಣ್ಣು ಅಸಾಮಾನ್ಯ ಬುದ್ಧಿಶಕ್ತಿಯನ್ನು ಪ್ರಕಟಿಸಲಾರಳು. ಅಂಥವಳಿದ್ದರೆ ಆಕೆಯು ಮಾತೆಯಾಗಲು ತಪ್ಪಿರಬೇಕು. ನಿಸರ್ಗದ ನಿಯತ ಕಾರ್ಯಕ್ಕೆ ದ್ರೋಹ ಬಗೆದಿರಬೇಕು. ಅಷ್ಟರಮಟ್ಟಿಗೆ ಆಕೆಯ ಮನಸ್ಸು ವಿಕೃತವಾಗಿರಬೇಕು. ಸಮತೋಲವಿಲ್ಲದೆ ಘಾತುಕವಾಗಿ ಸ್ವಾಸ್ಥ್ಯ ಕೆಟ್ಟಿದ ಹೆಣ್ಣಿನ ಮನಸ್ಸಿಗೇ ಅಲೌಕಿಕ ಬುದ್ಧಿ–ಮತ್ತೆ ಇಲ್ಲವೇ ಪ್ರತಿಭೆ ಸಾಧ್ಯ. ಆದ್ದರಿಂದ ಸಾಮಾನ್ಯವಾಗಿ ಹೆಣ್ಣಿನಲ್ಲಿ ಹುಚ್ಚರೂ, ಪ್ರತಿಭಾವಂತರೂ, ಸಾಧುವಂತರೂ ಕಡಿಮೆಯೇ. ಅವರದು ಸಾಮಾನ್ಯವಾದ ಸರ್ವಮಾನ್ಯವಾದ ವಿವೇಕದ ವ್ಯಾವಹಾರಿಕ ವಿಚಾರದ ತಿಳುವಳಿಕೆಯು ಪಾತಳಿ.

ಆದರೆ ಹೀಗೆ ಹೆಣ್ಣಿಗೆ ಪ್ರತಿಭೆ ಇಲ್ಲವೆಂಬುದರಲ್ಲಿ ನಮ್ಮದೂ ಒಂದು ದೋಷವಿರಬಹುದು. ಪ್ರತಿಭೆಯೆಂಬುದರ ವ್ಯಾಪ್ತಿ–ವ್ಯಾಪ್ತಿಗಳೇ ನಾವು ಸಂಕುಚಿತವಾಗಿ ಪುರುಷ ಪಕ್ಷಪಾತಿಯಾಗಿ ತಿಳಿದಿರಬಹುದು. ರಾಜಕಾರಣದಲ್ಲಿ, ರಾಷ್ಟ್ರನಿರ್ಮಾಣದಲ್ಲಿ ರಸಪ್ರಪಂಚದ ಇಲ್ಲವೇ ಯುದ್ಧೋಪಕರಣಗಳ ಶೋಧನಿರ್ಮಾಣದಲ್ಲಿ ಹೇಗೊ

ಹಾಗೆಯೇ ತಾಯ್ತನದಲ್ಲಿಯೂ ಅಷ್ಟೇ ಪ್ರತಿಭೆ ಇರುವದೆಂದು ಏಕೆ ಅನ್ನಬಾರದು ? ಸವ್ಯ ಸಾಚಿತ್ವವೇ ಪ್ರತಿಭೆಯ ಒರೆಗಲ್ಲಾಗಬಾರದು. 'ಧೀಮಂತರಿಗೆ ಬಾರದ ವಿಷಯವೆಂಬುದಿಲ್ಲ' ಎಂದು ಕಣ್ವನ ನಿಮಿತ್ತವಾಗಿ ಕಾಲಿದಾಸನೆಂದಿದ್ದರೂ ಈ ಸರ್ವಾವಧಾನಿತನದಿಂದಲೇ ಪ್ರತಿಭೆಯ ನಿರ್ಣಯವಾಗಬಾರದು. ಎಲ್ಲ ಕೆಲಸಗಳನ್ನೂ ಒಂದೇ ಕೌಶಲ್ಯದಿಂದ ಮಾಡುವದಕ್ಕಿಂತಲೂ, ತನ್ನ ವಯಸ್ಸಿಗೂ, ಜಾತಿ (ಹೆಣ್ಣು-ಗಂಡುತನ)ಗೂ ಉಚಿತವಾದ ಕಾರ್ಯ ಕರ್ತವ್ಯಗಳನ್ನು ಅವಷ್ಟು ಉತ್ತಮತೆಯಿಂದ ನೆರವೇರಿಸುವ ನೈಪುಣ್ಯವೇ ಪ್ರತಿಭೆಯ ದ್ಯೋತಕವಾಗಬೇಕು.

## ನಮ್ಮ ಕಾಲದಲ್ಲಿ ಪ್ರತಿಭೆಯು ಹ್ರಾಸವಾಯಿತೇ ?

ಈ ವಿಷಯದಲ್ಲಿ ನಮ್ಮದೊಂದು ಅನ್ಯಾಯವಾಗುತ್ತದೆ. ನಮ್ಮ ಕಾಲಮಾನದಲ್ಲಿ ಪ್ರತಿಭೆಯು ಹ್ರಾಸವಾಗಿದೆಯೆಂದು ನಾವು ವ್ಯರ್ಥವಾಗಿ ತಿಳಿಯುತ್ತೇವೆ. ಕಲ್ಪನೆಯಲ್ಲಿ ರಮ್ಯವೆನಿಸುವ ಗತಿಸಿಹೋದ ಯುಗದ ಪ್ರತಿಭೆಯ ಮಾದರಿಗಳೇ ನಮಗೆ ಯುಕ್ತವೆನಿಸುತ್ತವೆ. ಇದು ಯೋಗ್ಯವಲ್ಲ. ಒಂದಕ್ಕೆ ಯಾವ ಕಾರ್ಯಕ್ಷೇತ್ರಗಳಲ್ಲಿ ಪ್ರತಿಭೆಯು ಅರಳಿ ಅಚ್ಚರಿಗೊಳಿಸಿತೋ ಅವೇ ಕ್ಷೇತ್ರಗಳಲ್ಲಿ ಅದೇ ಪ್ರತಿಭೆಯ ಪಡಿಯಚ್ಚನ್ನು ನಾವು ಬಯಸಿ ಬೇಸರಪಡಿಸುತ್ತೇವೆ. ಅಂದು ಸಾಹಿತ್ಯ-ಕಲೆಗಳಲ್ಲಿ ಉಜ್ವಲ ಕೃತಿಯಾಗಿ ಮೆರೆದಾಡಿದ ಮನಃಶಕ್ತಿಯೇ ಇಂದು ಉದ್ಯೋಗ-ವಿಜ್ಞಾನದ ಜಟಿಲವ್ಯಾವಹಾರಿಕ ಪ್ರಪಂಚದಲ್ಲಿ ಹೆಚ್ಚು ಹೆಚ್ಚು ವಿಸ್ತಾರದಿಂದ ವ್ಯಯವಾಗುತ್ತಿರಬಹುದು. ನಮ್ಮ ಹೊಸ ಜ್ಞಾನ ಮತ್ತು ಭೌತಿಕ ಸಾಮರ್ಥ್ಯದಿಂದ ನಮ್ಮ ಸುತ್ತಲಿನ ಪ್ರಪಂಚವನ್ನೇ ಹೊಸದಾಗಿ ಪುನರ್ಘಟಿಸುವ ಪ್ರಚಂಡ ಸಾಹಸದಲ್ಲಿ ನಾವು ಬಂದು ತೊಡಗಿದ್ದೇವೆ. ನಮ್ಮಲ್ಲಿ ಹಿಂದಿಗಿಂತ ಹೆಚ್ಚು ಪಟ್ಟು ಶೋಧಕರು ಕಲ್ಪಕರ, ವಿಜ್ಞಾನಿಗಳು ಅಂತರ್‌ರಾಷ್ಟ್ರೀಯ ವ್ಯವಹಾರದ ಜಾಗತಿಕ ಕಾರ್ಯನಿರ್ವಾಹದ ಸಂಸ್ಥೆಗಳ ಸಂಘಟಿಕರು, ಖಂಡಗಳನ್ನೇ ತಮ್ಮ ಅಖಂಡ ಪ್ರಭಾವದಲ್ಲಿ ತರುವ ಆರ್ಥಿಕ ವ್ಯವಹಾರದ ಧೂರ್ತ ಧನಿಕರು ಇಂದು ನಮ್ಮಲ್ಲಿ ಸಿಗುತ್ತಾರೆ. ಇದೇ ಸಮಯ ಪ್ರಚಂಡ ಕಾರ್ಯಯುಗದಲ್ಲಿ ಮತ್ತೆ ವಾಲ್ಮೀಕಿ, ಶೇಕ್ಸಪಿಯರ, ಪ್ಲೇಟೋ-ಶಂಕರಾಚಾರ್ಯ; ಇಲ್ಲವೇ ತ್ಯಾಗರಾಜ, ಬಂದೋವ್ಹೆನ್‌ರನ್ನ ಅಪೇಕ್ಷಿಸುವದೆಂದರೆ ಮಾನವನ ಮನಃಶಕ್ತಿಗೆ ಅನ್ಯಾಯವಾದೀತು !

ಇನ್ನೂ ಒಂದು ಮಾತು. ಪ್ರತಿಭೆಯು ಪ್ರಕಟವಾಗುವದು ಯಾವಾಗಲೂ ಸುಶಿಕ್ಷಿತರಾದ ಅಲ್ಪಸಂಖ್ಯರಲ್ಲಿಯೇ. ಗಂಡಿರಲಿ ಹೆಣ್ಣಿರಲಿ ಅವರವರ ಜನಸಂಖ್ಯೆ

ಯಲ್ಲಿ ಶಿಕ್ಷಣ ಹೊಂದಿದ ವರ್ಗಗಳಲ್ಲಿಯೇ ಮಾತ್ರ ಪ್ರತಿಭಾವಂತರು ವ್ಯಕ್ತವಾಗುವರು. ಆದ್ದರಿಂದ ಹೆಣ್ಣು–ಗಂಡಿನಲ್ಲಿ ಪ್ರತಿಭೆಯ ಮಟ್ಟಿಗೆ ತುಲನೆ ಮಾಡುವ ಮೊದಲು ಈ ಇವೆರಡೂ ಜನರಲ್ಲಿ ಸುಶಿಕ್ಷಿತರ ಸಂಖ್ಯಾಬಲ ಸರಿ ಸಮಾನವಿರಲಿಕ್ಕೆಬೇಕು. ಗಂಡುಜನರಲ್ಲಿಯ ಪ್ರತಿಭಾಶಾಲಿಗಳು ಲಕ್ಷಗಟ್ಲೆ ಸುಶಿಕ್ಷಿತ ಹೆಣ್ಣಿನಿಂದ ಬಂದವರು. ಆದರೆ ಹೆಣ್ಣು ಜನರಲ್ಲಿ ಪ್ರತಿಭಾವತಿಯರು ನೂರುಗಟ್ಲೆ ಸುಶಿಕ್ಷಿತೆಯರೊಳಗಿಂದ ಉದಿಸಿದವರು. ಈಗಿನಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಹೆಣ್ಣು ಕಲಿತು ಮುಂದೆ ಬಂದರೆ ಆ ಪ್ರಮಾಣದಲ್ಲಿ ಅವರಲ್ಲಿಯ ಪ್ರತಿಭಾವತಿಯರ ಸಂಖ್ಯೆಯೂ ಬೆಳೆಯುವದು. ಗಂಡು ಹೆಣ್ಣುಗಳಲ್ಲಿ ಪ್ರತಿಭೆ ಯಾರಿಗೆ ಹೆಚ್ಚೆಂಬುದನ್ನು ಕೇಳುವ ಮೊದಲು ಅವರವರ ಜನಸಂಖ್ಯೆಯ ಮಾನಕ್ಕೆ ಬೀಳುವ ಪ್ರತಿಭಾಸಂಪನ್ನರ ಪ್ರಮಾಣವನ್ನು ತಿಳಕೊಳ್ಳಬೇಕು. ಯೋಗ್ಯ ಸಂಧಿ ಮತ್ತೂ ಶಿಕ್ಷಣವನ್ನು ಒದಗಿಸಿದರೆ ಹೆಣ್ಣುಜನವೂ ಸಾಕಷ್ಟು ಪ್ರತಿಭೆಯನ್ನು ಜೀವನದ ವಿವಿಧ ಕ್ಷೇತ್ರಗಳಲ್ಲಿ–ಜ್ಞಾನ, ಕಾರ್ಯ, ಕಲೆಗಳ ಕ್ಷೇತ್ರದಲ್ಲಿ–ಗಂಡುಗಳಿಗೆ ಸರಿಸಾಟಿ ಯಾಗಿ ಕಾಣಿಸಬಹುದು. ಈಗಲೇ ಈ ವಿಷಯ ಗಂಡಿಗೇ ಅನುಕೂಲವಾಗಿ ತೀರ್ಪು ಕೊಡುವದು ತೀರ ತಪ್ಪು !

## ಹೆಣ್ಣು ಅರಸಿಕಳೆ ?

ಆದರೆ ಒಂದು ಸಂಗತಿ ನಿಜ. ಕಲಾನಿರ್ಮಿತಿಗೆ ಅವಶ್ಯವಾದ ಅತ್ಯಂತಿಕ ಶಾರೀರಕ ಚೈತನ್ಯ– ದೀರ್ಘಕಾಲದ ಏಕಾಗ್ರಪರಿಶ್ರಮದ ಶಕ್ತಿ–ಹೆಣ್ಣಿನಲ್ಲಿ ಇರುವದು ವಿರಳ. ಇವಲ್ಲದೆ ಸೌಂದರ್ಯ ದೃಷ್ಟಿಯೂ ಗಂಡಿಗಿಂತ ಹೆಣ್ಣಿಗೆ ಮಂದವೆನ್ನ ಬೇಕು. ಈ ಮಾತಿಗೆ ಗಾಬರಿಯಾಗಬೇಕಿಲ್ಲ. ಸೌಂದರ್ಯ ವಿಮರ್ಶೆ ಗಂಡು ಕಣ್ಣಿನ ಪ್ರಪಂಚ. ಒಂದು ಬಗೆಯ ಅಧ್ಯಾತ್ಮಿಕ ಉನ್ಮಾದವನ್ನು ಕೆರಳಿಸಿ ಕಲಾ ಕೃತಿಯನ್ನು ಕಲ್ಪಿಸುವ ಸೌಂದರ್ಯ ಸಮಾಧಿಯಲ್ಲಿ ತನ್ಮಯವಾಗುವ ರಸಮಯತೆ ಹೆಣ್ಣಿನಲ್ಲಿ ಗಂಡಿನಲ್ಲಿರುವಷ್ಟು ತೀವ್ರವಿರುವದಿಲ್ಲ. ಗಂಡು ಕೇವಲ ರಸಾ ನಂದದ ಅನುಭೂತಿಗಾಗಿಯೇ ಸೌಂದರ್ಯದ ಸಾಧನೆ ಮಾಡುವನು. ಆದರೆ ಹೆಣ್ಣಿಗೆ ಸೌಂದರ್ಯ ಒಂದು ಸಾಧನ ಸಾಧ್ಯವಲ್ಲ. ಗಂಡಿನ ಹೃದಯವನ್ನು ವಶಪಡಿಸಿಕೊಳ್ಳಲು ಹೆಣ್ಣಿಗೆ ಸೌಂದರ್ಯ ಒಂದು ಸಾಮರ್ಥ್ಯ. 'ಶಿವನನ್ನು ಒಲಿಸಿಕೊಳ್ಳಲು ಅಸಮರ್ಥಳಾದ ಸತಿಯು ತನ್ನ ರೂಪವನ್ನು ಮನವಾರೆ ಹಳಿದು ಕೊಂಡಳು. ಏಕಂದರೆ ಪ್ರಿಯೆಯಾಗುವವಳಿಗೆ ಸೌಭಾಗ್ಯದ ಫಲ ಕೊಡುವದೇ ಸೌಂದರ್ಯದ ಧರ್ಮ' ಎಂದು ಕಾಲಿದಾಸನು ಕುಮಾರಸಂಭವದಲ್ಲಿ

ಉದ್ಗರಿಸುತ್ತಾನೆ. (ನಿನ್ನಿಂದ ಕೂಪಂ ಹೃದಯೇನ ಪಾರ್ವತಿ। ಪ್ರಿಯೇಷು ಸೌಭಾಗ್ಯಫಲಾ ಹಿ ಚಾರುತಾ ॥) ಅಂದರೆ ಸೌಂದರ್ಯದ ಸಂವೇದನೆಯ ಮಟ್ಟಿಗೆ- ಅಷ್ಟೇಕೆ ಎಲ್ಲ ಶೃಂಗಾರ ಸಂವೇದನೆಯ ಮಟ್ಟಿಗೂ ಹೆಣ್ಣಿನ ಹೃದಯ ಗಂಡಿಗಿಂತಲೂ ಮಂದವಾಗಿ ಉತ್ತೇಜನ ಪಡೆಯುವಂಥದು. ಸೌಂದರ್ಯಕ್ಕಿಂತ ಸಾಮರ್ಥ್ಯವನ್ನೇ ಹೆಚ್ಚಾಗಿ ಹೆಣ್ಣು ಗಂಡಿನಲ್ಲಿ ಬಯಸುತ್ತಾಳೆ. ಸುಕುಮಾರ ಸುಂದರನಾದ ಕಾಮಿಯೂ ಕೂಡ ಹಲವೊಮ್ಮೆ ತಾನು ಆರಾಧಿಸುವ ಹೆಣ್ಣು ತನ್ನಂಥ ಸದ್ದುಮುದ್ದಾದ ಕಾಮದೇವನನ್ನು ಬಿಟ್ಟು ತೀರ ಅಸಡ್ಡಾಳವಾಗಿ ಕಾಣುವ ಕಾ ಮ ರೇ ಡ ನ ನ್ನೋ ಕ್ಲೀನರನ್ನೋ ಮೆಚ್ಚಿದ್ದನ್ನು ಕಂಡು ಹೌಹಾರುವದುಂಟು! ನಿಸರ್ಗವೇ ಹೆಣ್ಣನ್ನು ಸಂರಕ್ಷಣೆಗಾಗಿ ಸಾಮರ್ಥ್ಯ ಪೂಜಕಳನ್ನಾಗಿ ಮಾಡಿದೆ. ಆದ್ದರಿಂದ ಸೌಂದರ್ಯ ಪ್ರೇಮ ಹೆಣ್ಣಿಗೆ ಸಹಜವಲ್ಲ.

ಆದರೆ ಗಂಡು ಸಹಜವಾಗಿಯೇ ಸೌಂದರ್ಯಪ್ರಿಯನು, ರೂಪ ರಸಿಕನು. ಒಲವಿಗಿಂತಲೂ ಚಲುವನ್ನೇ ಅರಸುವಾತನು. ಇದಕ್ಕೆ ಕಾರಣ ಚೆಲುವು ಬರೇ ಆನಂದದ ಆಶ್ವಾಸನವೀಯುತ್ತದೆಂದಲ್ಲ. ಚೆಲುವು ತನು ಮನ ತುಂಬಿತುಳುಕುವ ಆರೋಗ್ಯ ಸ್ವಾಸ್ಥ್ಯದ ಚಿತ್ರವು; ಶರೀರಸಂಪತ್ತಿನ ಸುವರ್ಣಮುದ್ರೆಯು! ಇದಲ್ಲದೆ ಹೆಣ್ಣು ವಶಪಡಿಸಿಕೊಳ್ಳುವದಕ್ಕಿಂತಲೂ ವಶವಾಗುವದನ್ನು ಬಯಸುವಳು. ಆಕ್ರಮಣಕ್ಕಿಂತಲೂ ಆತ್ಮೀಯತೆಯ ಆಕರ್ಷಣ ಉಳ್ಳವಳು. ಆದ್ದರಿಂದ ಕಲಾತ್ಮತೆಯ ಜೀವಾಳವಾದ ರಸಲೋಲುಪತೆಯನ್ನು ಹೆಣ್ಣು ಕಳಕೊಳ್ಳುವಳು. ಇದರ ಪರಿಣಾಮವೆಂದರೆ ಕಲಾಕೃತಿಯನ್ನು ತಾನೇ ರಚಿಸುವದಕ್ಕಿಂತ ಗಂಡು ರಚಿಸುವಂತೆ-ಅದೂ ತನ್ನ ಕುರಿತು ರಚಿಸುವಂತೆ!-ಆಕೆ ಪ್ರೇರಣೆಸುವಳು.

ಯಾರಿಗೆ ಗೊತ್ತು? ಗಂಡಿಗೆ ಹೆಣ್ಣು ಚಲುವೆಯಾಗಿ ಕಾಣುವಂತೆ ಹೆಣ್ಣಿಗೆ ಗಂಡು- ಅಹಂಕಾರಿಯೂ ಅಸಡ್ಡಾಳನೂ ಆದ ಗಂಡು-ಅಷ್ಟೊಂದು ಚೆಲುವಾಗಿ ಕಲಾಕೃತಿಗೆ ಸ್ಫೂರ್ತಿ ಕೊಡುವಷ್ಟು ಚೆಲುವಾಗಿ ತೋರುವದಿಲ್ಲವೇನೋ! ಇದಲ್ಲದೆ, ಇನ್ನೊಂದು ಪ್ರಶ್ನೆ. ಹೆಣ್ಣು ತಾನೇ ಚೆಲುವಿನ ತೆನೆಯಾಗಿರುವಾಗ ಕಲೆಯಲ್ಲಿ ಹೊಸದೊಂದು ನಿರ್ಜೀವ ಚೆಲುವನ್ನು ಏಕೆ ಹುಡುಕಬೇಕು? ಸಜೀವ ಸೌಂದರ್ಯವು ಯಾವದೇ ಅತ್ಯುತ್ತಮ ಶಿಲ್ಪ ಸೌಂದರ್ಯಕ್ಕಿಂತ ಎಂದಿಗೂ ಶ್ರೇಷ್ಠವು. ಅಷ್ಟೇ ಏಕೆ? ಸೌಂದರ್ಯವು ಬುದ್ಧಿಗಿಂತಲೂ ಕೂಡ ಹೆಚ್ಚು ಉದಾತ್ತವಾಗಿದೆ, ಭವ್ಯ ದಿವ್ಯವಾಗಿದೆ. ಸಜೀವ ಸೌಂದರ್ಯವು ಹೀಗೆ ಕಲೆಗಿಂತಲೂ ಜ್ಞಾನಕ್ಕಿಂತಲೂ ಶ್ರೇಷ್ಠವೇಕೆಂದರೆ ಅದು ಕಲೆಗೆ ಪ್ರೇರಣೆಯಾಗಿದೆ. ಜ್ಞಾನಕ್ಕೆ ಪ್ರಯೋಜನೆಯಾಗಿದೆ. ಸತ್ಯವನ್ನು ಸುಂದರವಾಗಿ ಮಾರ್ಪಡಿಸುವದೇ ಶಿವವಾದ ಶುಭವಾದ ಕೆಲಸ

ಜೀವನವು ಸುಂದರವಾಗಿದ್ದಾದರೆ ಅದು ಬೇರೆ ಬುದ್ಧಿವಂತವಾಗಬೇಕಿಲ್ಲ; ಅದರೆ ಅದು ಬುದ್ಧಿವಂತವೇ ಆಗಿದ್ದರೆ ಸುಂದರವಾಗಲು ಯತ್ನಿಸುತ್ತದೆ! ಗಂಡಿನಲ್ಲಿ ಇದು ಯತ್ನ. ಹೆಣ್ಣಿನಲ್ಲಿ ಇದು ಯಶ!

## ಈ ಸ್ವಭಾವ ಭೇದವು ಶಾಶ್ವತವೇ?

ಇನ್ನು ಕೊನೆಯದೊಂದು ಪ್ರಶ್ನೆ ಉಳಿಯಿತು. ಹೆಣ್ಣು ಗಂಡಿನ ಈ ಮನೋಧರ್ಮದ ವ್ಯತ್ಯಾಸ ಮೂಲಭೂತವೇ? ಅಪರಿಹಾರ್ಯವೇ? ಈ ವ್ಯತ್ಯಾಸಗಳು ಕೇವಲ ಅನುವಂಶಿಕವಾಗಿವೆಯೋ ಅಥವಾ ಅರ್ಜಿತವಾದವೆ? ಈ ಪ್ರಶ್ನೆಗೆ ಒಮ್ಮೆಲೇ ಒಂದೇ ಉತ್ತರ ಸಾಧ್ಯವಿಲ್ಲ. ಆದರೂ ಇಷ್ಟೊಂದು ಹೇಳಬಹುದು. ಈ ವ್ಯತ್ಯಾಸಗಳೆಲ್ಲ ಹೆಣ್ಣು ಗಂಡಿನ ಮೂಲ ಪ್ರವೃತ್ತಿಗಳ ಶಾರೀರಕ ರಚನೆಯು ಹಾಗೂ ದೇಹ ಧರ್ಮಗಳ ಹುಚ್ಚು ಚಟಗಳೊಡನೆ ಕೂಡಿ ಬಂದಿವೆಯಾದರೂ ಅವು ಬಹುಭಾಗ ಸಾಮಾಜಿಕ ಸಂಸಾರದ ಫಲವಾಗಿ ಬಂದು ವೈಯಕ್ತಿಕವಾಗಿ ಸಂಪಾದಿಸಲ್ಪಟ್ಟಿರುವವು. ಕೆಲವೊಂದು ಕಾಲಖಂಡದಲ್ಲಿ ಕೆಲವೊಂದು ಭೂಖಂಡದಲ್ಲಿ ಗಂಡು ಸಾವಿರಾರು ಬಗೆಯ ಪಾರಿವಾರಿಕ ಪರಿಸ್ಥಿತಿಗಳ ಪ್ರಭಾವಗಳನ್ನು ಬೀರಿ ತನ್ನ ಉಪಯೋಗ ಉಪಭೋಗಗಳಿಗಾಗಿ ಕೆಲವೊಂದು ಆದರ್ಶಗಳನ್ನು ಹೆಣ್ಣು ಜೀವನದ ಮೇಲೆ ಹೇರಿ ಬಂದುದರ ಪರಿಪಾಕವಾಗಿಯೇ ಹೆಣ್ಣು ಗಂಡಿನ ಮೂಲದ ವ್ಯತ್ಯಾಸವು ಜಟಿಲ ಕುಟಿಲ ವೈಷಮ್ಯಗಳ ವಿಕೃತ ರೂಪ ತಾಳಿದೆ. ಗಂಡಿಗೆ ವ್ಯಕ್ತಿತ್ವದ ವಿಕಾಸಕ್ಕೆ ವಿಚಾರದ ಸ್ವಾತಂತ್ರ್ಯಕ್ಕೆ ವ್ಯವಹಾರದ ಸರ್ವತಂತ್ರಕ್ಕೆ ಆಸ್ಪದವಿದೆ. ಆದರೆ ಹೆಣ್ಣಿಗೆ ಶತಮಾನಗಳಿಂದಲೂ ವಿಧೇಯತೆ, ವಿನಯ, ಬರೇ ವಸಪು ವೈಯ್ಯಾರಗಳನ್ನೇ ಕಲಿಸಲಾಗಿದೆ. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬುದು ಕೇವಲ ಮನುವಿನದೇ ಅಲ್ಲ, ಎಲ್ಲ ಮಾನವಸಮಾಜದ ಶಾಸನವಾಗಿ ಬಂದಿದೆ.

ಆದರೆ ಈ ವಿಷಮ ಸ್ಥಿತಿಯು ಪಲ್ಲಟಿಸಿದಲ್ಲಿ ಗಂಡು ಹೆಣ್ಣಿನಲ್ಲಿಯ ವೈಷಮ್ಯ ತಾರತಮ್ಯಗಳು ಇಲ್ಲವಾ–ಗುತ್ತಲಿವೆ. ಔದ್ಯೋಗಿಕರಣದ ಆಧುನಿಕ ಸಮಯದಲ್ಲಿ ಸಾಮಾಜಿಕ ಸಮಾನತೆಯ ಅಧಿಕಾರಯುಗದಲ್ಲಿ ಹೆಣ್ಣು ಗಂಡಿನೊಡನೆ ನಿಜವಾಗಿಯೂ ಸಹಚಾರಿಣಿಯಾಗುತ್ತಿದ್ದಾಳೆ. ಯಂತ್ರ ಸೌಕರ್ಯಗಳು ಶಾರೀರಿಕ ಶ್ರಮವನ್ನು ಸಾಮಾಜಿಕ ಸಹಕಾರ ಸಂಘಟನೆಗಳು ವೈಯಕ್ತಿಕ ವರ್ಚಸ್ಸನ್ನು ಕಡಿಮೆ ಮಾಡಹತ್ತಿದಂತೆ, ಕಾಯಿದೆ, ವೈದ್ಯಕ, ಶಿಕ್ಷಣ, ಶಾಸನ, ಉದ್ಯೋಗ, ಅಷ್ಟೇ ಏಕೆ ಸೈನಿಕ ನಾವಿಕ ವೈಮಾನಿಕ ಕ್ಷೇತ್ರಗಳಲ್ಲಿ ಕೂಡ ಲಿಂಗಭೇದದಿಂದ ಬಂದ ಮಾನಸಿಕ ನೈತಿಕ ತಾರತಮ್ಯಗಳು ಕಾಣದಾಗುತ್ತವೆ ಮತ್ತು ಅಂಥ

ವ್ಯತ್ಯಾಸಗಳು ಒಂದು ಪಾಲು ಪ್ರಕೃತಿ ಮೂರು ಪಾಲು ಸಂಸ್ಕೃತಿಯಿಂದಾಗಿದ್ದ
ಮೂಲಕ ಉತ್ತರೋತ್ತರ ಹೊಸ ಸಮಾಜರಚನೆಯಲ್ಲಿ ಗಂಡು ಹೆಣ್ಣಿನ ಗುಣ
ಶೀಲಗಳಲ್ಲಿ ಸಮಾನತೆಯು ಬರುವದು.

ಇಂದಿಗೆ ಗಂಡಿಗೆ ಸರಿಸಾಟಿಯಾಗುವವರಲ್ಲಿ ಹೆಣ್ಣು ಸಾಧಿಸಿದ ಪ್ರಗತಿ ನೋಡಿದರೆ
ನೀತಿ ಬಲ್ಲವರು ಗಾಬರಿಯಾಗುವಂತಿದೆ. ಅಬಲ-ಕೋಮಲಳಾದ ಹೆಣ್ಣಿನ ಗಡಸು
ಗಂಡಸುತನ ಗಂಡಿಗೂ ನಾಚಿಸುವಂತಿದೆ-ಎಂದು ಸಮಾಜದ ಧುರೀಣರು ಬೊಟ್ಟು
ಕಚ್ಚಿಕೊಳ್ಳುವಂತಿದೆ. ಹೀಗೆ ಔದ್ಯೋಗಿಕ ಆಧುನಿಕ ಜೀವನದಲ್ಲಿ ಹೆಣ್ಣು ಗಂಡನ್ನು
ಪೂರ್ಣವಾಗಿ ಅನುಕರಿಸಿದರೆ, ಆಕೆಯ ಮಾನಸಿಕ ಮತ್ತೂ ನೈತಿಕ ಲಕ್ಷಣಗಳೆಲ್ಲ
ಗಂಡಿನಂತಾಗಿಬಿಡಬಹುದು. ಆದರಿಂದ ಜೀವನದ ಅರ್ಥ ಮಾಧುರ್ಯವೇ
ಲೋಪವಾಗಬಹುದು. ಆದರೆ ಹೆಣ್ಣು ಇಂಥ ಹೆಡ್ಡತನ ಮಾಡಲಿಕ್ಕಿಲ್ಲ. ಇಂದಿನ
ಅನುಕರಣದ ಅವಸ್ಥೆ ಮುಗಿದೀತು. ಅನುಕರಣ ಒಂದು ಬಗೆಯ-ಕನಿಷ್ಟ
ಬಗೆಯ-ಸ್ತುತಿ; ಕನಿಷ್ಠರು ಶ್ರೇಷ್ಠರಿಗೆ ಮಾಡಿ ತೋರಿಸುವ ಸ್ತುತಿ ! ಗಂಡು
ತನ್ನಿಂದ ಇಂಥ ಸ್ತುತಿಯನ್ನು ಪಡೆಯಲು ಪಾತ್ರನಲ್ಲವೆಂದೇ ಹೆಣ್ಣು ಬೇಗನೆ
ಮನಗಾಣಬಹುದು ! ಬರೀ ಬೌದ್ಧಿಕತೆಯೆಂದರೆ ಬುದ್ಧಿವಂತಿಕೆಯಲ್ಲವೆಂದು ಆಕೆ
ಬುದ್ಧಿ ಕಲಿಯಬಹುದು.

## ಸುಖದ ಸೂತ್ರ

ಸುಖವು, ಸೌಂದರ್ಯದಂತೆ, ಪೂರ್ಣತೆಯಂತೆ ನಮ್ಮ ನಮ್ಮ ಸಹಜ ವ್ಯಕ್ತಿತ್ವ
ವನ್ನು ಪೂರ್ತಿಯಾಗಿ ವಿಕಾಸ ಮಾಡಿಕೊಳ್ಳುವವರಲ್ಲಿಯೇ ಇದೆ. ತನ್ನ
ಮನೋಧರ್ಮಕ್ಕೆ ಪ್ರಕೃತಿಗೆ ವಿರೋಧಿಯಾದ ಬಾಳಿನಿಂದ ಶಾಂತಿಸಿಗದು. ಮತ್ತು
ಅಶಾಂತಿಗೆ ಸುಖವೆಲ್ಲಿಯದು ? ಆದ್ದರಿಂದ ಛಲಕ್ಕೆ ಬಿದ್ದು ಅಪೂರ್ಣ ಗಂಡ
ಸಾಗುವದಕ್ಕಿಂತ ತನ್ನ ಬಲದಿಂದ ಪರಿಪೂರ್ಣ ಹೆಂಗಸಾಗುವದೇ ಶ್ರೇಯಸ್ಕರವೆಂದು
ಹೆಣ್ಣು ತಿಳಿಯಬಹುದು. ಹೊಸ ಸ್ವಾತಂತ್ರ್ಯದೊಂದಿಗೆ ಹೆಣ್ಣಿನ ಇದುರಿಗೆ ಹೊಸ
ಸಮಸ್ಯೆಗಳು ಬಂದಿವೆ. ಇವು ಅವರ ಹಳೇ ದಾಸ್ಯದ ತೊಡಕುಗಳಿಗಿಂತ ಹೆಚ್ಚಿನ
ಜಿಡುಕಿನವು, ತೊಡಕಿನವು. ಆದರೆ ಇವುಗಳ ಬಗೆಹರಿಕೆಯಲ್ಲಿ ಗಂಡಿನ ಸಹಾಯ
ಬಯಸುವದು ಸರಿಯಲ್ಲ. ಹೊಸ ಕಾಲದ ಹೆಣ್ಣಿನ ಬಾಳನ್ನು ಕವಡಿ ಗಾಬರಿ
ಗೊಳಿಸುವ ಘಾಸಿಗೊಳಿಸುವ ಸ್ಥಿತ್ಯಂತರಗಳನ್ನೆಲ್ಲ ಕೇವಲ ಸಹಾನುಭೂತಿಯಿಂದ
ಅರಿತು ನೆರವಾಗುವಷ್ಟು ಜಿನುಗಾದ ಜಾಣ್ಮೆ ಗಂಡಿನ ಯಾಂತ್ರಿಕ ಮತ್ತೂ ಸ್ಥೂಲ
ಬುದ್ಧಿಯಲ್ಲಿ ಇರುವದಿಲ್ಲ. ಹೊಸ ಬಿಡುಗಡೆಯನ್ನು ಗಳಿಸಿಕೊಂಡ ಹೆಣ್ಣು ತನ್ನ

ದಾದ ಹೊಸ ತಿಳುವಳಿಕೆಯಿಂದಲೇ–ತಪ್ಪಿ ತಿದ್ದಿ ತಿಳಿಯಾದ ತಿಳುವಳಿಕೆಯಿಂದಲೇ- ಈ ಹವಗೆಡಬಹುದಾದ ಹೊಸ ಪರಿಸ್ಥಿತಿಯು ಕಂಗೆಡಿಸುವ ಕೂಟ ಪ್ರಶ್ನೆಯನ್ನು ಬಿಡಿಸಿಕೊಳ್ಳಬೇಕು. ಹೆಚ್ಚಾಗಿ ಅವಳು ಈ ಬಿಡುಗಡೆಯನ್ನು ಪಡೆಯುವಳು. ನಿಸರ್ಗದಿಂದ ಜಾಣ್ಮೆಯನ್ನೂ ನಿಯತಿಯಿಂದ ತಾಳ್ಮೆಯನ್ನು ಪಡೆದು ಬಂದ ಹೆಣ್ಣು ಯಾವ ಶಕ್ತಿಯಿಂದ ಸ್ವಾತಂತ್ರ್ಯವನ್ನು ಸಾಧಿಸಿಕೊಂಡಳೋ ಅದೇ ಶಕ್ತಿಯಿಂದಲೇ ತನ್ನ ಸ್ವಾತಂತ್ರ್ಯವು ತಂದೊಡ್ಡಿದ ಸಮಸ್ಯೆಗಳನ್ನೂ ಸಾವಧಳಾಗಿ ಬಗೆಹರಿಸಿಕೊಳ್ಳದೇ ಇರಲಾರಳು.

ಇದುವರೆಗೆ ಹೆಣ್ಣು ಕಮಲ; ಗಂಡು ಭ್ರಮರವಾಗಿ ಜೀವನ ಸಾಗಿತು. ಇದರಿಂದ ಗಂಡಿಗೆ ಜೇನೆಲ್ಲ ಸಿಕ್ಕರೂ ಹೆಣ್ಣಿನ ಪಾಲಿಗೆ ಕದಡಿದ ಕೆಸರೇ ಉಳಿಯಿತು. ಇದರಿಂದ ಬಾಳಿನ ಕೊಳದಲ್ಲಿ ಕೊಳೆ ತುಂಬಿತು. ಇನ್ನೂ ಮುಂದೆ ಪ್ರೇಮ ಮತ್ತೂ ಜ್ಞಾನದಿಂದ ಪ್ರೇರಿತವಾದ ಹೊಸ ಬದುಕಿನಲ್ಲಿ ಹೆಣ್ಣೊಂದು ಮೃಣಾಲವಾದರೆ ಗಂಡೊಂದು ಮರಾಳವಾಗಿ ಸಂಸಾರದ ಸರೋವರದ ಸಿರಿಯನ್ನೂ ಸೊಬಗನ್ನೂ ಹೆಚ್ಚಿಸುವದು. ಕಮಲವೂ ಸ್ವತಂತ್ರ; ಹಂಸವೂ ಸ್ವತಂತ್ರ. ಅವರೀರ್ವರ ಸ್ವಚ್ಛಂದ ಆನಂದದಲ್ಲಿ ಯಾವ ಸ್ಪರ್ಧೆಯೂ ಇಲ್ಲ! ಈ ಕಮಲ ಹಂಸದ ನಿಸ್ಪೃಹವಾದರೂ ನಿಕಟ ಸಾಹಚರ್ಯದ ಚಿತ್ರವೇ ಗಂಡು–ಹೆಣ್ಣಿನ ಹೊಸ ಭಾಗ್ಯದ ಪ್ರತೀಕವೆನ್ನಬಹುದು.

ಸಂಸಾರದ ರಥಕ್ಕೆ ಹೆಣ್ಣು ಗಂಡು ಎರಡು ಚಕ್ರಗಳೆಂಬ ಹೇಳಿಕೆಯ ಮಾತು ಹಳೆಯದಾಯಿತು. ಚಕ್ರಗಳು ಸಮಾನವಿದ್ದರೂ ಸಮಾಂತರವಾಗಿ ಸಾಗುತ್ತವೆ. ಹೊಸ ಕಾಲದ ಹೆಣ್ಣು ಗಂಡಿನ ಸ್ಥಾನಮಾನ ಇಗ್ಗಾಲಿಯ (ಬಾಯಸಿಕಲ್) ಚಕ್ರಗಳಂತೆ ಗಂಡು ಮುಂದೆ ಹೆಣ್ಣು ಹಿಂದೆ–ಹೀಗಿದ್ದರೂ ಮುಂದರಿಯುವ ಗತಿ ಮತ್ತೂ ವೇಗವಲ್ಲ ಹಿಂದಿನ ಗಾಲಿಯಿಂದಲೇ ಬರುವದು ದಿಶೆಯನ್ನು ಕಾಯ್ದು ದಾರಿ ಕಾಣಿಸುವದು ಮುಂದಿನ ಕಾರ್ಯ, ಪ್ರಗತಿಗೆ ಎರಡೂ ಅತ್ಯವಶ್ಯ, ಪರಸ್ಪರ ಪೂರಕ. ಇನ್ನು ಒಂದು ಹೋಲಿಕೆ, ಹೆಣ್ಣು ಎಡ ಗಂಡು ಬಲ ಅನ್ನುವದುಂಟು. ಬಲಗೈಯ ಬಲಕ್ಕೆ ಅವಶ್ಯವಾದ ರಕ್ತ ಎಡಗೈಯ ಧಮನಿಯೊಳಗಿಂದಲೇ ಪುಟಿದು ಹರಿಯುತ್ತದಲ್ಲವೇ ? ಬಾಳೆಂಬ ಬಂಟನಿಗೆ ಗಂಡು ತ್ರಾಣವಾದರೆ ಹೆಣ್ಣು ಪ್ರಾಣ !

# ಪ್ರೀತಿ

## ಕವಿಯ ಎಚ್ಚರಿಕೆ

ಒಲವೆಂಬ ಹೊತ್ತಗೆಯ ಓದಬಯಸುವ ನೀನು
ಬೆಲೆ ಎಷ್ಟು ಎಂದು ಕೇಳುವಿಯೊ ಹುಚ್ಚ !
ಹಗಲಿರುಳು ದುಡಿದರೂ ಹಲಜನುಮ ಕಳೆದರೂ
ನೀತೆತ್ತಲಾರೆ ಬರಿ ಅಂಚೆ ವೆಚ್ಚ !

ನಮ್ಮ ಕನ್ನಡದ ವರಕವಿ **ಅಂಬಿಕಾತನಯ ದತ್ತರು** ಪ್ರೀತಿಯ ಪುಸ್ತಕವನ್ನು ಓದಲು ಬಯಸುವ ಹುಚ್ಚರಿಗಾಗಿ ತೆಗೆದ ಎಚ್ಚರಿಕೆಯ ಉದ್ಗಾರವಿದು ! ಈ ಪುಸ್ತಕವನ್ನು ಅರ್ಥ ಮಾಡಿ ಅರಗಿಸಿಕೊಳ್ಳುವದಿರಲಿ, ಅದನ್ನು ಓದಲು ಪಡಕೊಳ್ಳುವದೂ ಒಂದು ಭಾಗ್ಯ. ಆ ಭಾಗ್ಯಕ್ಕಾಗಿಯೂ ಕೂಡ ಮನುಷ್ಯನು ಅದೆಷ್ಟು ತಪಿಸಬೇಕೆಂಬುದನ್ನು ಕವಿತಿಲಕರು ಮಿಂಚಿನಲ್ಲಿ ಮೂಡಿಸಿದಂಥ ನಾಲ್ಕು ಮಾತುಗಳಲ್ಲಿ ನಮ್ಮ ಕಣ್ಣುಕಟ್ಟುವಂತೆ ಬಣ್ಣಿಸಿದ್ದಾರೆ. ಅಂಚೆವೆಚ್ಚಕ್ಕೇ ಜನ್ಮಾಂತರಗಳ ಪರಿಶ್ರಮ ಬೇಕೆಂದ ಮೇಲೆ ಈ ಪುಸ್ತಕವೂ ಅದರ ವಿಷಯವಾದ ಪ್ರೀತಿಯೂ ಎಷ್ಟು ಅಮೂಲ್ಯವೆಂಬುದನ್ನು ಮತ್ತೆ ಹೇಳಬೇಕೇ ?

ಅಂಚೆವೆಚ್ಚದ ತಲೆಭಾರದ ಈ ಮಾತಿನಲ್ಲಿ ಇನ್ನೂ ಒಂದು ಸ್ವಾರಸ್ಯವಿದೆ. ಪುಸ್ತಕವನ್ನು ಕಳುಹಿಸುವವರು ಅದರ ಅಂಚೆಯ ವೆಚ್ಚವನ್ನು ಗ್ರಾಹಕರಿಂದಲೇ ಕೊಳ್ಳುವರು. ಪ್ರೀತಿಯ ಬರಹವೆಲ್ಲವೂ ಒಂದು ರೀತಿ ಹಾಗೆಯೇ. ಅಂಚೆಕಟ್ಟೆಯ ಕಟ್ಟುನಿಟ್ಟುಗಳ ಪರಿವೆಯಿಲ್ಲದೆ ಪ್ರೀತಿಯ ಪತ್ರಗಳನ್ನು ಪುಟಗಟ್ಲೆ ಬರೆಯುವ ಉದ್ದಾಮ ಪ್ರೇಮವೀರರು ಎಷ್ಟಿಲ್ಲ ! ಇಂಥವರ ಪ್ರೀತಿಯ ಹೊತ್ತಗೆಯಲ್ಲಿ ನಾಟ-ಪೇಡ್ (ತೆರ-ಹೊತ್ತ) ಅಂಚೆಯೇ ಅಲ್ಲವೇ ? ಅರ್ಥವು ವಾಚ್ಯವಿರಲಿ ಸೂಚ್ಯವಿರಲಿ; ಪ್ರೀತಿಯು ನಾಟಪೇಡ್ ಪತ್ರದಂತೆಯೇ ಸರಿ ! ಗಳಿಕೆ ಇಲ್ಲದ ನಿರುದ್ಯೋಗಿಗಳಿಗೇ ಪ್ರೇಮ ಪತ್ರಗಳನ್ನು ಬರೆಯುವ ಅವಕಾಶವೂ ಆವೇಶವೂ

ಹೆಚ್ಚು ! ಹಾಗೆಯೇ ಬರೆದ ಪತ್ರಗಳ ಅಂಚೆವೆಚ್ಚ ಹೊರುವ ಬಲವೂ ಕಡಿಮೆ ! ತನ್ನ ಪ್ರೀತಿಯ ಸಂದೇಶವನ್ನು ಹಾಯುವ ಮುಗಿಲಿನಲ್ಲಿ ಗಾಳಿಗೆ ತೂರಿಬಿಡುವ ಕೆಲಸಗೇಡಿಯಾದ ಯಕ್ಷನು ಜಗತ್ತಿನ ಇಂಥ ಎಲ್ಲ ಪ್ರಣಯ 'ಪತ್ರಿಕೋದ್ಯಮಿ' ಗಳಿಗೆ ಆದಿಪುರುಷನು ! ಅಂದಿನಿಂದಲೂ ಪ್ರೀತಿಯ ಸಂದೇಶವೆಲ್ಲ ತೆರಲಾರದ ಅಂಚೆವೆಚ್ಚದ ಭಾರವನ್ನು ಹೊತ್ತುಕೊಂಡೇ ಪ್ರಿಯ ಜನರ ಬಳಿಗೆ ಸಾರುವಂತಿದೆ ! ಈ ವಿವಶತೆಯಲ್ಲಿಯೂ ಒಂದು ವಿಶೇಷತೆಯು ಇದೆ. ತನ್ನ ಪ್ರೀತಿಗಾಗಿ ಪ್ರಿಯ ತಮನೋ–ತಮೆಯೋ ಮಾಡುವ ಪ್ರತೀಕ್ಷೆಯು ಎಷ್ಟು ಆತುರದ್ದೆಂಬುದರ ಪರೀಕ್ಷೆಗೆ ನಾಟಪೇಡ್ ಪತ್ರಕ್ಕಿಂತ ಹೆಚ್ಚು ದಿವ್ಯವಾದ ಉಪಾಯವು ಮತ್ತಾವುದು ? ತನ್ನ ಪ್ರೀತಿಯ ಸಂದೇಶದ ಅಂಚೆವೆಚ್ಚವನ್ನು ಪ್ರಿಯ ಜನವು ತೆರುವಷ್ಟು ತತ್ಪರತೆ ತೋರಿಸುವದೋ ಇಲ್ಲವೋ ಎಂಬುವದರಿಂದಲೇ ಅವರ ಪ್ರೀತಿಯ ತಾತ್ಪರ್ಯವು ತನ್ನಾರೆ ತಿಳಿಯುವದಲ್ಲವೇ ?

ಇರಲಿ. ಇದಾಯಿತು ನಗೆಯ ಮಾತು. (ಮಾತಿಗೆ ನಗಲೇ ಬೇಕಾಗಿಲ್ಲ ಮತ್ತೆ !) ಸೂಕ್ಷ್ಮ ಸೂಚ್ಯ ಅರ್ಥದಿಂದಲೂ ಪ್ರೀತಿಯು ನಾಟಪೇಡ್ ಟಪಾಲಿನಂತೆಯೇ. ಪ್ರೀತಿಸುವದು–ಯಾವ ಪ್ರತಿಫಲ ಪ್ರತ್ಯಾಶೆಯ ಲೆಕ್ಕ ಹಾಕದೆ ಪ್ರತೀಕಾರ ಪ್ರತಿಬಂಧವನ್ನೂ ಲೆಕ್ಕಿಸದೇ ಪ್ರೀತಿಸುವದು–ಮಾತ್ರ ವ್ಯಕ್ತಿಯ ವಶದ ಮಾತು– ಅಲ್ಲ ವಶಕ್ಕೂ ಮಿಕ್ಕಿದ ಮಾತು ! ತನ್ನ ಅವಶ್ಯವಾದ ವಿವಶವಾದ ಪ್ರೀತಿಯ ಸ್ವೀಕಾರ ಪುರಸ್ಕಾರ ಪರಿಷ್ಕಾರಗಳೆಲ್ಲ 'ಅನ್ಯ'ರ ವಶದ ವಿಷಯ ! ಪ್ರೀತಿಗೆ ಬೆಲೆಕಟ್ಟುವದೂ ಕೊಡುವದೂ ಅವರ ಹೃದಯದ ಸಂಸ್ಕಾರದ ಫಲ. ನಾಟ–ಪೇಡ್ ಪತ್ರ ನಮಗಾಗಿಯೇ ಬರುತ್ತದೆ. ಆದರೆ ನಾವಾಗಿ ಹಣತೆತ್ತು ಪಡೆದ ಹೊರತು ಅದು ನಮ್ಮದಾಗುವದಿಲ್ಲ ! ಪ್ರೀತಿಯ ಪರಿಯೂ ಹಾಗೆಯೇ ! ಪ್ರತಿಯೊಂದು ಪ್ರಿಯ ವ್ಯಕ್ತಿಯೂ ತನ್ನ ಪಾಲಿನ ಪ್ರೀತಿಯನ್ನು ತ್ಯಾಗದಿಂದ, ಸೇವೆಯಿಂದ, ಶ್ರಮದಿಂದ, ತಪಸ್ಸಿನಿಂದ, ಆರಾಧನೆಯ ವ್ರತದಿಂದ ಗಳಿಸಿಕೊಳ್ಳಬೇಕಾಗುತ್ತದೆ ! ಅಂತೆಯೇ ಒಲವೆಂಬ ಹೊತ್ತಗೆಯ ಅಂಚೆವೆಚ್ಚ ಅಷ್ಟೊಂದು ಭಾರಿಯಾಗಿದೆ !

ಕವಿವರ್ಯರು ಮುಂದಿನ ಸೊಲ್ಲಿನಲ್ಲಿ ಆ ಹೊತ್ತಗೆಯ ಒಳನೋಟವನ್ನು ಸ್ವಲ್ಪವರಲ್ಲಿ ನಿರೂಪಿಸುತ್ತಾರೆ. ಅದೆಷ್ಟು ಸೋಜಿಗವೆಂದು ನೋಡಿರಿ :–

ಬೆವರು ಹನಿಯಲಿ ಕೆಲವು ಕಣ್ಣೀರಿನಲಿ ಹಲವು
ನೆತ್ತರದಿ ಬರೆದುದಕೆ ಲೆಕ್ಕವಿಲ್ಲ
ಚಿತ್ರ ಚಿತ್ರಾಕ್ಷರದ ಲಕ್ಷ ಪತ್ರಗಳುಂಟು
ನಕ್ಷತ್ರ ಓದುತಿವೆ ಮರೆತ ಸೊಲ್ಲ !

ಎಂಥ ಅದ್ಭುತರಮ್ಯ ಪುಸ್ತಕವಿದು ! ಲಕ್ಷಾಂತರ ಪುಟಗಳಲ್ಲಿ ಬರೆದ ಸೊಲ್ಲಿಗೆ ಲೆಕ್ಕವಿಲ್ಲ ! ಅವನ್ನು ಓದುವವು ಯಾರು ? ಇಂದ್ರನ ಸಾವಿರ ಕಣ್ಣುಗಳಂತೆ ಎವೆಯಿಕ್ಕದೆ ಮಿನುಗುವ ಸಾವಿರದ ನಕ್ಷತ್ರಗಳೇ ಈ ಪುಸ್ತಕದ ಮರೆತು ಹೋದ ಸೊಲ್ಲನ್ನು ಓದುವವು !

ಪ್ರೀತಿಗಾಗಿ ಮುಡಿತ, ಪ್ರೀತಿಗಾಗಿ ದುಃಖ, ಪ್ರೀತಿಗಾಗಿ ದುರಂತ ದುರ್ಘಟನೆ ! ಮಹಾಕಾವ್ಯದಿಂದ ಹಳ್ಳಿಯ ಹಾಡಿನತನಕ ಪ್ರತಿಯೊಂದು ಕಥನ, ಪ್ರತಿಯೊಂದು ಕವನ, ಕಲ್ಪನೆಯಲ್ಲಿ ಕೆತ್ತಿರಲಿ, ಕಲ್ಪನೆಯಲ್ಲಿ ಕೊರೆದಿರಲಿ–ಪ್ರೀತಿಯು ಅನಾದಿ ಅನಂತ ಲೇಖವು ಬೆವರು ಕಣ್ಣೀರು ಮತ್ತು ನೆತ್ತರಗಳಿಂದಲೇ ವಿಚಿತ್ರವಾಗಿ ಬರೆದು ಬಂದಿವೆ. ಪ್ರೀತಿಗಾಗಿ ಪಟ್ಟಣಗಳು ಉರಿದಿವೆ, ದಂಡಯಾತ್ರೆಗಳು ನಡೆದಿವೆ; ಸಿಂಹಾಸನಗಳು ಉರುಳಿವೆ; ಯುದ್ಧಗಳು ಎಸಗಿವೆ; ಜಗತ್ತಿನ ಇತಿಹಾಸ–ಮಾನವ ಜೀವನದ ಮಹಾಭಾರತ–ಪ್ರೀತಿಯ ರಸದಲ್ಲಿಯೇ ಅದ್ದಿ ಅರಳಿದಂತಿದೆ.

ಆದರೆ ನಕ್ಷತ್ರ ನೇತ್ರಗಳು ಓದುವ ನಕ್ಷತ್ರಗಳಷ್ಟು ಪ್ರಾಚೀನವಾದ ಪ್ರೀತಿಯ ಪುಸ್ತಕವನ್ನು ನಾವು ಇಲ್ಲಿ ಓದಲು ಹೊರಟಿಲ್ಲ. ಇಷ್ಟು ಭವ್ಯತೆಯ ಭಾಷೆ ನಮ್ಮ ಈ ಪುಟ್ಟ ಪುಸ್ತಕದ್ದಲ್ಲ. ನಾವು ವರರೂ ಅಲ್ಲ. ಕವಿಗಳೂ ಅಲ್ಲ, ನಕ್ಷತ್ರಗಳನ್ನು ಓದುವರೆಂಬ ಭರವಸೆಯೂ ನಮಗಿಲ್ಲ. (ಚಿತ್ರಪಟಗಳ 'ನಕ್ಷತ್ರ'ಗಳು ಕೂಡ ಈ ಬಡ ಪುಸ್ತಕವನ್ನು ಓದುವರೋ ಇಲ್ಲವೋ ಎಂಬ ಭಯವಿದೆ ನಮಗೆ;) ಓರ್ವ ಸಾಮಾನ್ಯ ಸಹೃದಯನು ಇತರ ಸಾಮಾನ್ಯ ಸಹೃದಯರಿಗಾಗಿ ಎಲ್ಲ ಸಹೃದಯತೆಗೂ ಆಧಾರವಾದ, ಎಲ್ಲ ಹೃದಯಗಳಿಗೂ ಸಾಮಾನ್ಯವಾದ ಪ್ರೀತಿಯೆಂಬ ಭಾವನೆಯ ತರಹ, ತರಗತಿ ತಥ್ಯ, ತತ್ವಗಳ ಕುರಿತು ತಿಳಿದಷ್ಟು ತಿಳಿಸಲು ಬರುವಷ್ಟು ತಿಳಿಯಾಗಿ ಮಂಡಿಸಿದ ಮಾತುಗಳಿವು. ಹೃದಯಗಳ ಹಂದರದ ಮೇಲೆ ಮುಲುಸಾಗಿ ಹಬ್ಬಿ ಬೆಳೆದ ಬಾಳಿನ ಬಳ್ಳಿಯಲ್ಲಿ ತಿಳಿಲಾಗಿ ಹರಿದಾಡಿ ಕುಡಿಯಾಗಿ ಕೊನರಿ ಹೂವಾಗಿ ಅರಳಿ ಹಣ್ಣಾಗಿ ಪಾಕವನ್ನು ಪಡೆಯುವ ಪ್ರೀತಿಯೆಂಬ ರಸಭಾವದ ರೂಪ ರೀತಿಯನ್ನು ಸರಸವಾಗಿ ರಸಿಕರಿಗೆ ಅರುಹಲು ಹೊರಟ ಹರಟೆಯಿದು. ಇದರಲ್ಲಿ ಚಿತ್ರ ಚಿತ್ರಾಕ್ಷರಗಳು ಇಲ್ಲ. ಲಕ್ಷಪತ್ರಗಳೂ ಇಲ್ಲ. ಓದುತ್ತ ಬೇಸತ್ತು ನಡುವೆಯೇ ಸೊಲ್ಲುಮರೆತು ಕಣ್ಣಿಗೆ ನಕ್ಷತ್ರಗಳು ಕವಿದರೂ ಸರಿಯೇ ! ಹಾಗೆ ಆದಲ್ಲಿ ಅದು ವಿಷಯದಲ್ಲಿ ರಸವಿಲ್ಲವೆಂದಲ್ಲ: ನಮ್ಮ ಒಕ್ಕಣೆಯಲ್ಲಿ ಕಸುವಿಲ್ಲವೆಂದು ತಿಳಿಯಬೇಕು. ನಾರದ ಭಕ್ತಿಸೂತ್ರಗಳಲ್ಲಿ ಈಶ್ವರನ ವ್ಯಾಖ್ಯೆ 'ಅನಿರ್ವಚನೀಯ ಪ್ರೇಮಸ್ವರೂಪ'ನೆಂದು ಬಂದಿದೆ. ಪ್ರೇಮದ ವ್ಯಾಖ್ಯೆಯೂ ಅದೇ ಸರಿ. ಅದೂ ಈಶ್ವರನಂತೆ ಅನಿರ್ವಚನೀಯವೇ ಸರಿ.

ಅಂದರೆ ಅದರ ಸ್ವರೂಪದ ಸವಿಸ್ತರ ವರ್ಣನೆ ಸುಲಭವಲ್ಲ. ಸವಿಯುವದು ಎಷ್ಟು ಸಲಿಸವ್ರೋ ಸವಿಯನ್ನು ತಿಳಿಸಿ ಹೇಳುವದು ಅಷ್ಟೇ ಬಿಗಿ. ಅದಾಗ್ಯೂ ಸವಿಯನ್ನು ಬಣ್ಣಿಸಬೇಕೆಂಬ ಹುಚ್ಚುಹವ್ಯಾಸ ಬೇರೆ ಉಳಿಯುತ್ತದೆ ! ಪ್ರೀತಿಯ ರೀತಿಯೂ ಅದೇ ಮಾದರಿ.

## ವಸಂತ ಸೇನೆಯ ವರ

'ರಮತಾಂ, ರಮತಾಂ ಮಾ ಕಸ್ಯಚಿತ್ ಪ್ರೀತಿಚ್ಛೇದೋ ಭವತು !' (ನಲಿಯಲಿ, ನಲಿಯಲಿ, ಯಾರ ಪ್ರೀತಿಯ ಛೇದವೂ ಆಗದಿರಲಿ !) ಇದಕ್ಕೂ ಮಿಗಿಲಾದ ಆಶೀರ್ವಾದ ಇನ್ನಾವದು ? ಸಾವಿರವರ್ಷಗಳ ಆಚೆಯಿಂದಲೂ ಪ್ರೇಮ-ಮಯವಾದ ಒಂದು ಹೆಣ್ಣು ಹೃದಯದಿಂದ ಈ ಉದ್ಗಾರವು ಎದೆಯಿಂದ ಎದೆಗೆ ಪಡಿನುಡಿಯುತ್ತ ಮೊಳಗುತ್ತ ಬಂದಿದೆ. ಮಾನವ ಪ್ರೀತಿಯ ಅಜರಾಮರ ರೂಪಕದ ನಿತ್ಯ–ನೂತನಳಾದ ನಾಯಿಕೆ ವಸಂತ ಸೇನೆಯು ಅಂತರಾಳದಿಂದಲೂ ಉದ್ಗರಿಸಿದ ಆಶೀರ್ವಾದವಿದು ! ಪ್ರೀತಿಯ ಛೇದದ ಕರುಣ ದಾರುಣವಾದ ಕಥೆಯನ್ನು ಕ್ರೌಂಚಮಿಥುನಗಳ ವಿರಹ ವ್ಯಥೆಯಿಂದ ಸ್ಫೂರ್ತಿಗೊಂಡ ಆದಿಕವಿಯು ಲೋಕದ ಶೋಕವೇ ಶ್ಲೋಕವಾಗುವಂತೆ ಮಾಡಿ ಇನ್ನೊಂದು ಅಜರಾಮರ ಕಾವ್ಯದಲ್ಲಿ ಹಾಡಿದ್ದಾನೆ. ಶಕುಂತಲೆಯ ಪ್ರೀತಿ, ಹೆಲನ್ನಳ ಪ್ರೀತಿ, ರೋಮಿಯೋ–ಜ್ಯೂಲಿಯೆತರ ಪ್ರೀತಿ, ಲೈಲಾ-ಮಜ್ನು ಅವರ ಪ್ರೀತಿ, ಶಾಹಜಹಾ–ಮಮತಾಜಳ ಪ್ರೀತಿ–ಪ್ರಪಂಚದ ಎಲ್ಲ ದೇಶಗಳ ಎಲ್ಲಕಾಲಗಳ ಚರಿತ್ರೆಯ ಬಣ್ಣದ ಪುಟಗಳಲ್ಲಿ ಪ್ರೀತಿಯು ಚಿನ್ನದ ಎಳೆಯಂತೆ ಹಾಸುಹೊಕ್ಕಾಗಿ ನೆಯ್ದು ಬಂದಿದೆ. ಇಂಥ ಪ್ರೀತಿಯ ಇಂಗಿತವೇನು ? ಸಂಗತಿಯೇನು ?

ಮಾನವನ ಅನುಭವವು ಅನೇಕ ರೂಪವಾಗಿದೆ. ಸುಖವಾಗಿ ದುಃಖವಾಗಿ, ಜ್ಞಾನವಾಗಿ, ಉನ್ಮಾದವಾಗಿ, ಉತ್ಸಾಹವಾಗಿ, ಕಾಮ ಕ್ರೋಧಾದಿ ವಿಕಾರಗಳ ವಿಕೋಪವಾಗಿ, ವಿನೋದವಾಗಿ ಒಂದಲ್ಲ ಎರಡಲ್ಲ ದೇವರ ಅವತಾರಗಳಿಗಿಂತಲೂ ಅನೇಕ ರೂಪವಾಗಿ ಮಾನವನ ಅನುಭವವು ವ್ಯಕ್ತವಾಗುತ್ತಿದೆ. ಇವೆಲ್ಲ ರೂಪಗಳಲ್ಲಿ ಪ್ರೀತಿಯೆಂಬ ಅನುಭವವು ಅಲೌಕಿಕವಾದದ್ದು. ಅನುಭವದ ಅವತಾರಗಳಲ್ಲಿ ಅದು ಕೃಷ್ಣವತಾರವೆನ್ನಬಹುದು. ಪ್ರೀತಿಯಷ್ಟು ರಂಜಕವೂ ರೋಚಕವೂ ಆದ ಅನುಭವವು ಜೀವನದಲ್ಲಿ ಬೇರೊಂದಿಲ್ಲ. ಆದ್ದರಿಂದಲೇ ಇಂಗ್ಲೀಷ ಕವಿಯೋರ್ವನು ಹಾಡಿದ್ದಾನೆ. 'ಇಟ ಈಜ ಬೆಟರ್ ಟು ಹ್ಯಾವ ಲವ್ಡ್ ಆ್ಯಂಡ ಲೊಸ್ಟ ದ್ಯಾನ್ ನೆವರ ಟು ಹ್ಯಾವ ಲವ್ಡ್ ಎಟ್ ಆಲ್' (ಪ್ರೀತಿಸಿ ಕಳದುಕೊಳ್ಳುವದಾದರೂ

ಲೇಸು: ಪ್ರೀತಿಯಿಲ್ಲದೇ ಬಾಳುಕಳೆಯುವದು ಬೇಡ) ಪ್ರೀತಿ ಮಾಡಿ ಅದಕ್ಕೆ ಪ್ರತಿಫಲ ಸಿಗದೇ ಭಂಗಪಟ್ಟುಕೊಂಡು ಕಂಗೆಟ್ಟವನು ಅಭಾಗಿಯೇ ಸರಿ. ಆದರೆ ಯಾರು ಎಂದೂ ಪ್ರೀತಿಸಿಲ್ಲವೋ ಅವನಂಥ ದುರ್ದೈವಿಯು ಜಗತ್ತಿನಲ್ಲಿ ಬೇರೊಬ್ಬನಿಲ್ಲ ! ಎಲ್ಲದೇಶದ ಎಲ್ಲಕಾಲದ ಬದುಕಿನ ಎಲ್ಲ ಮಟ್ಟದ ಜನರಿಗೂ ಪ್ರೀತಿಯೆಂಬ ಅನುಭವವು ಸರಿಯಾಗಿ ಸೊಗಸಾಗಿ ಸೋಜಿಗವಾಗಿ ಅನಿಸುವದು.

ಅಂದಮೇಲೆ ಇಷ್ಟೊಂದು ರಮ್ಯವಾದ ರಹಸ್ಯಮಯವಾದ ಅನುಭವದ ಮೂಲವೇನು ? ವಿಕಾಸವೆಂತು ? ಈ ವಿಷಯದ ಕುರಿತು ಗಮನ ಕೊಟ್ಟವರು ತೀರ ಕಡಿಮೆ ಜನ. ಪ್ರೀತಿಯ ಅನುಭವ ಎಷ್ಟು ವ್ಯಾಪಕ ಸ್ವರೂಪದ್ದೋ ಅದರ ಅಭ್ಯಾಸವು ಅಷ್ಟೇ ವಿರಲ. ಅಷ್ಟೇ ಅಪರೂಪವಾದದ್ದು. ಈ ಮಾತು ಪ್ರೀತಿಯಷ್ಟೇ ಸೋಜಿಗವಲ್ಲವೇ ? ಬಾವಿಯಲ್ಲಿ ಬಿದ್ದವರು ಮೇಲೆ ಕೆಳಗೆ ನೀರು ಗುಟಕರಿಸುತ್ತ ತೇಲಾಡಿದರೂ ಬಾವಿಯ ಆಳವನ್ನು ಅಳೆಯುವರೇ ? 'ಪ್ರೀತಿಯಲ್ಲಿ ಬೀಳು'ವವರೂ ಹಾಗೆಯೇ !

ಛೇ ! ಇದೆಲ್ಲ ಬರೇ ಮಾತಿನ ಮಲ್ಲಿನಾಥಿಯು. ಪ್ರೀತಿಯು ಏನೆಂಬುದು ನಮಗೆಲ್ಲ ಗೊತ್ತು ! ಅದು ಹೊಸತೇನೂ ಅಲ್ಲ. ಎಂದಿನಿಂದಲೂ ಪುರುಷರು ಸ್ತ್ರೀಯರನ್ನು ಬಯಸುತ್ತ ಬಂದಿದ್ದಾರೆ; ಸ್ತ್ರೀಯರು ಪುರುಷರನ್ನು ವರಿಸುತ್ತ ಬಂದಿದ್ದಾರೆ, ಮೆಚ್ಚುತ್ತ ಬಂದಿದ್ದಾರೆ. ಪ್ರೀತಿಯ ಒಂದು ಮೈ ಆ ಬಯಕೆ, ಇನ್ನೊಂದು ಮೈ ಈ ಮೆಚ್ಚುಗೆ. ಪ್ರೀತಿಯ ಆವೇಶದಲ್ಲಿ ಪ್ರಣಯದ ಉನ್ಮಾದದಿಂದ ಪ್ರಿಯತಮೆಯ ಪ್ರಸನ್ನತೆಗಾಗಿ ಪುರುಷರು ಉದಾತ್ತನಾಗುತ್ತಾನೆ, ಉನ್ನತಿಗೇರುತ್ತಾನೆ. ಬಾಳು ಸಪ್ಪಗಾಗಿ ಒಂದು ಸಿವುಡು ಸಿಪ್ಪೆಯಾಗಿ ಕೊನೆಗೊಳ್ಳಬಹುದು. ಆದರೆ ನಡುವೆ ಪ್ರೀತಿಯ ಬುಗ್ಗೆಯು ಆ ಬಾಳಿನಲ್ಲಿ ಒಡೆದು ಚಿಲ್ಲುವರಿದರೆ, ಆ ಒಲವಿಗೆ 'ಕೊರಡು ಕೊನರುವದು'. ಬಾಳು ಮುಗಿಯುವ ಮುಂಚೆ ಒಮ್ಮೆ ಪ್ರೀತಿಯ ದಿವ್ಯ ಸ್ಪರ್ಶದಿಂದ ಜೀವವು–ಪ್ರತಿಯೊಂದು ಪ್ರಿಯ ಜನವು-ಒಂದು ಭಂಗುರವಾದರೂ ಭವ್ಯವಾದ ಉತ್ತಮತೆಯ ಹತ್ತಿರ ಹಾಯ್ದು ಧನ್ಯವೆನಿಸಿಕೊಳ್ಳುವದು ! ಲಕ್ಷ್ಮಿಯನ್ನು ಒಲಿಸುವ ಉದ್ಯೋಗವು ಪುರುಷಸಿಂಹನನ್ನು ಹುಟ್ಟಿಸುವದು. ಶ್ರೀಗಾಗಿ ಸಾಹಸವು ಉದಯಿಸುವದು. ಸೀತೆಗಾಗಿ ಸಾಗರಕ್ಕೆ ಸೇತುಬಂಧವಾಗುವದು. ವಸಂತಸೇನೆಗಾಗಿ ಚಾರುದತ್ತನು ಶೂಲವನ್ನು ಸಮಾಧಾನದಿಂದ ಏರಲು ಸಿದ್ಧನಾಗುವನು ! ತನ್ನ ಪ್ರೀತಿದೇವತೆಯ ಪೂಜೆಯ ಸಾಹಿತ್ಯಕ್ಕಾಗಿ ಪುರುಷನು ಮಾಡದ ಪಾಪವಿಲ್ಲ. ಓಡದ ದೂರವಿಲ್ಲ. ಕಾಡದ ವೈರಿ ಇಲ್ಲ. ಹಾಡದ ಕಾವ್ಯವಿಲ್ಲ. ತೊಡದ ಪಂಥವಿಲ್ಲ. ಬಿಡದ ಸ್ವಾರ್ಥವಿಲ್ಲ. ಪಡದ ಸಾಹಸ–

ಸಂಕಟವಿಲ್ಲ! ಹಿಡಿಂಬೆಗಾಗಿ ಮಡಿಯುವ ಭೀಮನಿಂದ ಮುಂತಾಗಿ ಎಲಿಝಾಬೆಥ ರಾಣಿಗಾಗಿ ಪೃಥ್ವಿಪ್ರದಕ್ಷಣೆ ಮಾಡಿಬರುವ ನೌಕಾಸೇನಾಪತಿಗಳ ತನಕ ಪುರಾಣೇತಿಹಾಸಗಳು ಪ್ರೀತಿಯು ಪ್ರೇರಿಸುವ ಅಲೌಕಿಕ ಸಾಧನೆಯ ಉದಾಹರಣೆಗಳನ್ನೇ ಸಾರುತ್ತವೆ. ಶರ್ವಿಲಕನನ್ನು ಕಳವಿಗಾಗಿ ಪ್ರಚೋದಿಸುವ ಪ್ರೀತಿಯು ಅವನ ಮದನಿಕೆಯ ಮೋಚಕ್ಕಾಗಿ ಕಳವನ್ನು ಒಪ್ಪಿಕೊಳ್ಳುವಂತೆ ಪ್ರಾಮಾಣಿಕತೆಯನ್ನು ಪ್ರೇರಿಸುತ್ತದೆ! ಪರಾಕ್ರಮದ ಬಿಚ್ಚುಗತ್ತಿಗೆ ಪ್ರೀತಿಯೇ ವಜ್ರದ ಹಿಡಿಕೆಯಾಗಿದೆ!

ಬಾಳು ಎಂದಾದರೂ ಒಂದು ದಿನ ತೀರುವದೇ ಸರಿ. ಆದರೆ ಆ ಮೊದಲು ಪ್ರೀತಿಯು ಮನುಷ್ಯನನ್ನು ಅಲ್ಪಕಾಲವಾದರೂ ಒಂದು ಘನತೆಗೆ ಒಯ್ದು ತಲ್ಪಿಸುತ್ತದೆ. ಪ್ರೀತಿಯ ಈ ಶಕ್ತಿಯ ರಹಸ್ಯವೇನು? ಸೂಜಿಗಲ್ಲಿನ ಸೋಂಕಿಗೆ ಸೂಜಿ ಕುಣಿಯುವಂತೆ, ಓರೆಗಣ್ಣುಗಳ ಮೇಲೆ ಮಿನುಗುವ ಕುರುಳುಗಳನ್ನು ಕಂಡು ನೆರೆಯ ಹುಡುಗನ ಮೈಯು ಜುಮ್ಮೆನ್ನುವದೇಕೆ? ಕೋಮಲ ಕೈ ಬೆರಳುಗಳ ಮೃದುಸ್ಪರ್ಶವು ಭುಜದ ಮೇಲೆ ಆದೊಡನೆ ತರುಣ ರಕ್ತದ ಎದೆಯು ಝಲ್ಲೆನ್ನುವುದೇಕೆ? ಪುರುಷನು ಪ್ರೀತಿಸುವನೇಕೆ?

ಮನುಷ್ಯ ಜೀವನದಲ್ಲಿ ಸೋಜಿಗಗಳು ಹಲವು ಇರುತ್ತವೆ. ಆದರೆ ತುಸು ತಟಸ್ಥ ವೃತ್ತಿಯಿಂದ ನೋಡಿದರೆ ಎಲ್ಲಕ್ಕೂ ಮಿಗಿಲಾದ ಸೋಜಿಗವು ಯಾವದು ಕಾಣುವದು ಬಲ್ಲಿರಾ? ಅದು ಸ್ತ್ರೀಯನ್ನು ಅನುಸರಿಸುವದರಲ್ಲಿ ಪುರುಷನ ತತ್ಪರತೆ!–ಮುದಿ ಹುಚ್ಚಿಗೆ ಒಂದು ನರೆಗೂದಲಿನಷ್ಟು ಅಂತರ ಬಿಟ್ಟು ಈಚೆಗಿನ ವಯಸ್ಸಿನ ಯಾವ ಮಟ್ಟದಲ್ಲಿಯೇ ನಿಂತಿರಲಿ, ಪುರುಷನು ಸ್ತ್ರೀಯನ್ನು ಅರಸಲೂ ಆರಿಸಲೂ ವರಿಸಲೂ ತಾನು ಜನ್ಮ ಸಿದ್ಧ ಅಧಿಕಾರಿಯೆಂದೇ ನಿರ್ಧರಿಸಿ ನಡೆಯುವನು. ಇನ್ನು ಇದೊಂದೇ ಸೋಜಿಗವೆಂದು ತಿಳಿಯುವದೂ ತಪ್ಪಾದೀತು. ಇದಕ್ಕೆ ಸರಿಯಾಗಿ ತೂಗುವ ಇನ್ನೊಂದು ಸೋಜಿಗವೂ ಇದೆ. ಅದು ಯಾವದೆಂದರೆ ಪುರುಷನ ಗಮನಕ್ಕೆ ಗುರಿಯಾಗಬೇಕೆಂಬ ಸ್ತ್ರೀಯ ತತ್ಪರತೆ!–ಚಿತೆಯ ಈಚೆಗಿನ ವಯಸ್ಸಿನ ಯಾವ ಮಟ್ಟದಲ್ಲಿಯೇ ಇರಲಿ ಸ್ತ್ರೀಯು ತಾನು ಪುರುಷನ ಅನುನಯ ಪರಿಣಯಗಳಿಗೆ ಎಂದಿಗೂ ಯೋಗ್ಯಳೆಂದೇ ಮನಗಂಡಿರುತ್ತಾಳೆ. ಇತ್ತ ಹೆಣ್ಣನ್ನು ಪ್ರೀತಿಸಲಿಕ್ಕೆ ಮೀರಿದ ವಯಸ್ಸು ತನ್ನದೆಂದು ಒಪ್ಪಿಕೊಳ್ಳುವ 'ಪುರುಷೋತ್ತಮ'ನು ವಿರಳವಾದರೆ, ಅತ್ತ ಗಂಡಸನ್ನು ಆಕರ್ಷಿಸಲು ಅಶಕ್ಯವಾದ ರೂಪವು ತನ್ನದೆಂದು ಒಪ್ಪಿಕೊಳ್ಳುವ 'ರಮಣಿ' (?)ಯೂ 'ಅಪರೂಪ'ಳೇ ಸರಿ!

## ರತಿಗೆ ಋತು ಬೇಕೆ ?

ಕಾಮರತಿಗೆ ವಸಂತಋತುವೇ ಬೇಕೆಂಬ ಕಡ್ಡಾಯ, ಕವಿಗಳ ಕಟ್ಟಳೆಯಲ್ಲಿ. ಪ್ರೀತಿಯ ಆವಿರ್ಭಾವಕ್ಕೆ ಆಯುಷ್ಯದ ಯಾವ ಅವಸ್ಥೆಯೂ ಅನುಕೂಲವೇ ಸರಿ. ನಡುಹರೆಯದ ಎಂಟನೇ ಎಡ್ವರ್ಡನಿಗೆ ಮೂರು ಸಲ 'ಘಟಸ್ಫೋಟಿತ'ಳಾದ ಸಿಂಪಸನ್ನಳೇ ಮೆಚ್ಚಿಗೆ ಆಗಿಲ್ಲವೇ ? ಪಿಠಾಪುರದ ಸುಂದರಿ ಸೀತಾದೇವಿಗೆ ಏಳು ಮಕ್ಕಳ ತಂದೆ ಗ್ವಾಲ್ಹೇರದ ಭೂಪನೇ ಅನುರೂಪನೆನಿಸಿಲ್ಲವೇ ? ಚೀನದ ಕ್ರಾಂತಿ ಪುರುಷರಾಗಿ ಹೋದ ಡಾ|| ಸನ್‌ಯೆತ್ ಸೇನರ ೫೦ ವರುಷವನ್ನು ದಾಟಿದ ವಿಧವೆಯು ೩೦ ರ ಒಳಗಿರುವ ಓರ್ವ ತರುಣ ಅಮೇರಿಕನ್ ಸೈನಿಕನನ್ನು ವರಿಸಿದ್ದು ಪ್ರಸಿದ್ಧವಾಗಿಲ್ಲವೇ ? ಅಷ್ಟು ದೂರವೇಕೆ ? ವಯೋವೃದ್ಧ ಸಿನೇಮಾ ನಟಿ ದುರ್ಗಾ ಖೋಟೆಯು ಹಚ್ಚಹರೆಯ ಮುಸ್ಲಿಮ ವೈಮಾನಿಕನನ್ನು ಮದುವೆ ಯಾಗಿರುವಳೆಂದು ಪ್ರಸಿದ್ಧವಾಗಿಲ್ಲವೇ ? ಕಿಶೋರಿ ಅರುಣಾ ಕೃಪಲಾನಿಯು ೪೦ ರ ಮನೆಯಲ್ಲಿ ನಿಂತ ಬ್ಯಾರಿಸ್ಟರ ಅಸಫ ಅಲಿಯನ್ನು ಮನವಾರೆ ಪ್ರೀತಿಸಿ ವರಿಸಿದ್ದು ಯಾರಿಗೆ ಗೊತ್ತಿಲ್ಲ ? ನೈಷ್ಠಿಕ ಬ್ರಹ್ಮಚಾರಿಗಳೆಂದೆನಿಸಿಕೊಂಡ (?) ನರಿಮನ್-ಬ್ರೆಳ್ವಿಯವರು ಮುಪ್ಪಿನ ಅಂಗಳದಲ್ಲಿ ನಿಂತು ಮದುವೆಯ ಹೊಸ್ತಿಲನ್ನೇರಿಲ್ಲವೇ ? ಆಯುಷ್ಯದ ಇಳಿಜಾರಿನಲ್ಲಿ ನಡೆಯುತ್ತಿದ್ದ ಅಂಬೇಡಕರ-ಗಾಡಗೀಳರು 'ಪಚ್ಚ ಪಸಿಯ' ಪ್ರೀತಿ-ವಿವಾಹವನ್ನೇ ಮಾಡಿಕೊಂಡಿಲ್ಲವೆ ?

ಇವೆಲ್ಲ ಉದಾಹರಣೆಗಳು ಕಾಣಿಸುವದೇನು ? ಕಾಮನ ಶರಸಂಧಾನಕ್ಕೆ ಪ್ರೇಮದ ಅನುಸಂಧಾನಕ್ಕೆ ಆಯುಸ್ಸು ಒಂದಿದ್ದರೆ ಸರಿ, ವಯಸ್ಸಿನ ಅಡೆ ತಡೆ ಇಲ್ಲ. 'ತರುಣಃ ತಾವತ್ ತರುಣೀ ರಕ್ತಃ ವೃದ್ಧಃ ತಾವತ್ ಚಿಂತಾಮಗ್ನಃ' ಎಂದು ಶಂಕರಾಚಾರ್ಯರು ಹಾಡಿ ಹಾಕಿಕೊಟ್ಟ ವರ್ಗೀಕರಣವು ಬರೇ 'ಚರ್ಪಟ ಪಂಜರಿ'ಯೇ ಸರಿ. ವೃದ್ಧನು ಚಿಂತಾಮಗ್ನನಾಗುವದೂ ತರುಣೀ ಲಗ್ನಕ್ಕಾಗಿಯೇ !

ಸಂಸಾರದ ದೃಷ್ಟಾಂತಗಳನ್ನು ಮೇಲೆ ಕೊಟ್ಟಾಯಿತು; ಸಾಹಿತ್ಯದಲ್ಲಿಯೂ ಇವುಗಳ ಪ್ರತಿಬಿಂಬಗಳು ಸಾಕಷ್ಟು ಸಿಗುವವು. ರೂಪಸುಂದರಿ ಡೆಸ್ಡೆಮೆನಾ ವರಿಸಿದ್ದು ಯಾರನ್ನು ? ವಯಸ್ಕನೂ ಕಪ್ಪು ಕುರುಪಿಯೂ ಆದ ಅಥೆಲ್ಲೋನನ್ನು. ವಸಂತ ಸೇನೆಯು ತನುಮನ ಧನದಿಂದಲೂ ಕಾಮಿಸಿದ್ದು ಯಾರನ್ನು ? ಪ್ರೌಢನಾದ, ಹೆಂಡತಿಮಕ್ಕಳಿದ್ದ ದರಿದ್ರ ಚಾರುದತ್ತನನ್ನು. ಶಕುಂತಲೆಯ ಹೃದಯವನ್ನು ಗೆದ್ದ ನಾಯಕನು ಯಾರು ? ತಾರುಣ್ಯದಾಚೆಗೆ ನಿಂತ ದುಷ್ಯಂತನು. ಅತ್ತ ಟಾಲ ಸ್ಟಾಯಿಯ ಜಗತ್ಪ್ರಸಿದ್ಧ ನಾಯಿಕೆ ಎನ್ನಾಕರೇನಿನಾ ಮೆಚ್ಚಿದ್ದು ಯಾರನ್ನು ?

ತನಗಿಂತಲೂ ತರುಣನಾದ ಪ್ರಿಯಕರನನ್ನು ! ತಾತ್ಪರ್ಯವಿಷ್ಟೇ. ಸ್ತ್ರೀ-ಪುರುಷರು ರೂಪ. ಗುಣ. ಪ್ರಾಯ ಏನೇ ಇರಲಿ; ಅನುವು ದೊರೆತಾಗ ಅನುರಾಗವನ್ನು ತೋರಲು ಸದಾ ಸಿದ್ಧರು. !

ಮನುಷ್ಯಜೀವನದಲ್ಲಿ ಹೆಣ್ಣನ್ನು ಅವಲೋಕಿಸಿ ತೂಗಿನೋಡುವ ಗಂಡಿನ ನೋಟದಷ್ಟು ಎಡೆಬಿಡದೇ ಎಚ್ಚರವಾಗಿರುವ ಚಟುವಟಿಕೆ ಬೇರೊಂದಿಲ್ಲ. ಇದು ಅತಿಶಯೋಕ್ತಿಯಲ್ಲ. ಭಯದ ಕಾತರತೆಯಿಂದ, ಜಯದ ಆತುರತೆಯಿಂದ, ನಯದ ಚತುರತೆಯಿಂದ, ಪ್ರಣಯದ ಅಧೀರತೆಯಿಂದ. ಸಲಿಗೆಯ ಮಧುರತೆಯಿಂದ, ಪ್ರಶಂಸೆಯ ರಸಿಕತೆಯಿಂದ. ಸೌಂದರ್ಯದ ಸರಸತೆಯಿಂದ, ತಿರಸ್ಕಾರದ ಕುಟಿಲತೆಯಿಂದ. ವಿಮರ್ಶೆಯ ಮಾರ್ಮಿಕತೆಯಿಂದ, ಔದಾರ್ಯದ ಕರುಣತೆಯಿಂದ, ವಿಕಾರದ ವಿವಶತೆಯಿಂದ,-ಹೀಗೆ ಒಂದಲ್ಲ ಎರಡಲ್ಲ ಸಾವಿರ ಕಣ್ಣುಗಳಿಂದ 'ಇಂದ್ರಿಯಗಳ ಇಂದ್ರ'ನಾದ ಪುರುಷನು ಸ್ತ್ರೀಯನ್ನು ಕಂಡುಕೊಳ್ಳುವ ನೆಪವನ್ನಾಗಲೀ ಅನುವನ್ನಾಗಲೀ ಹೋಗಗೊಡುವದಿಲ್ಲ ! ಇದರ ಮರ್ಮವನ್ನು ಚನ್ನಾಗಿ ಬಲ್ಲವರೇ ಚಿತ್ರಪಟಗಳಲ್ಲಿ. ಸಾಪ್ತಾಹಿಕ-ಮಾಸಿಕಗಳಲ್ಲಿ. ಭಿತ್ತಿ ಪತ್ರಕಗಳಲ್ಲಿ, ಜಾಹಿರಾತುಗಳಲ್ಲಿ. ವ್ಯಾಪಾರೀ ಸಂಸ್ಥೆಗಳಲ್ಲಿ. ಉಪಹಾರ ವಿಶ್ರಾಂತಿ ಗೃಹಗಳಲ್ಲಿ ಜನರ ಕಣ್ಮನಗಳನ್ನು ಸೆಳೆಯಬೇಕಾದ ಎಲ್ಲ ಸ್ಥಳಗಳಲ್ಲಿ ಪುರುಷರ ಸ್ವಭಾವ ಸಿದ್ಧವಾದ ಈ ಲಂಪಟತನವನ್ನು ಪೂರ್ತಿಯಾಗಿ ಉಪಯೋಗಿಸಿಕೊಳ್ಳಲು ತಪ್ಪುವದಿಲ್ಲ. ಆದ್ದರಿಂದ ಕಚೇರಿ. ಬಸ್ಸು-ನಿಲ್ದಾಣ. ಬೀದಿ-ಕೂಟ, ಆಟದ ಬಯಲು, ದೇವಸ್ಥಾನ. ಅಶ್ವತ್ಥ ಕಟ್ಟೆ. ಕ್ಲಬ್ಬು-ಕಾಲೇಜು. ಸಭೆ-ಸಮ್ಮೇಲನ. ಥಿಯೇಟರು. ಆಸ್ಪತ್ರೆ, ಕಾಂಗ್ರೆಸಭವನ, ಕಮ್ಯುನಿಷ್ಟ ಕ್ಯಾಂಟೀನು, ವಾಚನಾಲಯ. ಶಾಲೆ-ಶಿಬಿರ, ಹಡಗ-ವಿಮಾನ ಎಲ್ಲೆಡೆಗಳಲ್ಲಿ ಈ ಸ್ತ್ರೀ ಶೋಧಕ ಪುರುಷ ದೃಷ್ಟಿಯ ಪ್ರದರ್ಶನವೂ ಈ ದೃಷ್ಟಿಯನ್ನು ಕೆರಳಿಸಬೇಕೆಂಬ ಹೊರಳಿಸಬೇಕೆಂಬ ಸ್ತ್ರೀಸುಲಭ ಚಾಪಲ್ಯ ಚಾಂಚಲ್ಯದ ನಿದರ್ಶನವೂ 'ಕಣ್-ಗೊಳಿ'ಸುತ್ತದೆ !

## ಈ ಪ್ರಯತ್ನವೇಕೆ ?

ಪುರುಷನೆಂಬ ತಕ್ಕ ಪಶುವಿನ ಈ ನೋಟವು ತನ್ನ ಭಕ್ಷ್ಯವನ್ನು (ಸ್ತ್ರೀಯನ್ನು) ಪ್ರತಿಯೊಂದು ದೆಸೆಯಿಂದಲೂ ಹಿಂಬಾಲಿಸಲು ಅರಳಿ ಅರಸುತ್ತಿರುತ್ತದೆ. ಅವನ ಮಾತುಕತೆಯು ಅದೇ ಅನಾದಿಯಾದ ಅನಂತವಾದ ಬೇಟದ ಬೇಟೆಯ ಸುತ್ತಲೂ ಸುಳಿಯುತ್ತಿರುತ್ತದೆ. ಅವನ ಹರಟೆಯ ಕೂಟದಲ್ಲಿ ಹೆಣ್ಣಿನ ಕುರಿತು ಹೆಣ್ಣುಗಂಡಿನ ಸಂಬಂಧದ ಕುರಿತು ಅದರ ಅಂಗೋಪಾಂಗಗಳ ವಿರೂಪ-

ಕೂರೂಪಗಳ ಕುರಿತು ಒಮ್ಮೆಯಾದರೂ ಒಂದಾದರೂ ಹಾಸ್ಯದ ಮಾತು ನಡೆಯದೇ ಹೋಗುವುದಿಲ್ಲ. ಅವನು ಅವಳು ಮತ್ತು ಇನ್ನೊಬ್ಬನು ಅಥವಾ ಇವನು ಇವಳು ಹಾಗೂ ಮತ್ತೊಬ್ಬಳು ಈ ಮಾದರಿಯ 'ಮೂರು ಮಗ್ಗಲಿನ' ಕತೆಯಿಲ್ಲದೇ ಯಾವ ಲಲಿತಸಾಹಿತ್ಯವೂ ಲಲಿತವೆನಿಸುವದಿಲ್ಲ. ರಸಗಳಲ್ಲಿ ಶೃಂಗಾರ, ಕವಿಗಳಲ್ಲಿ ಕಾಲಿದಾಸ, ಈಶ್ವರೋಪಾಸನೆಯಲ್ಲಿ ಭಕ್ತಿ, ಭಕ್ತಿಯಲ್ಲಿಯೂ ಮಧುರ ಭಕ್ತಿ, ಅವತಾರಗಳಲ್ಲಿ ರಾಧಾಕೃಷ್ಣ, ಋತುಗಳಲ್ಲಿ 'ವಿರಹಿಜನ ಹೃತ್‌ಶೂಲ'ವಾದ ವಸಂತಮಾಸ,-ಹೀಗೆ ಸ್ತ್ರೀ ಪುರುಷ ಸಂಬಂಧವ ಸಂಪರ್ಕವಿದ್ದ ಸಂಗತಿಗಳೇ ರಸಿಕರೆನಿಸುವವರಿಗೆ ನಮ್ಮಲ್ಲಿ ಮೆಚ್ಚಿಗೆಯಾಗುತ್ತದೆ. ಅರಸಿಕರು ಅಶ್ಲೀಲ ಲೈಂಗಿಕ ಅಪಹಾಸ್ಯಕ್ಕೆ ಹಲ್ಲುಕಿರಿಯುವವರಾದರೆ ರಸಿಕರು ಲಿಂಗವಿಜ್ಞಾನ ಮತ್ತು ದಮಿತ ಕಾಮದ ಮನೋಗಂಡಗಳ ಕುರಿತು ಬಾಯಿ ಚಪ್ಪರಿಸಿಕೊಳ್ಳುತ್ತ ಚರ್ಚಿಸುವರು! ಕೊನೆಗೆ ಹೀಗೆ ಕಾಮ-ಪ್ರೇಮಗಳ ವ್ಯಾಮೋಹದಿಂದ ಮಾತನ್ನು ಮೈಲಿಗೆ ಮಾಡಿಕೊಳ್ಳುವ ಮಂದಮತಿಗಳನ್ನು ಮೂದಲಿಸಿಯಾದರೂ ಮಡಿವಂತರೆನಿಸಿ ಕೊಳ್ಳುವ ಮಹನೀಯರು, ಆ ಕುರಿತು ತಮ್ಮ 'ವಿರೋಧ ಭಕ್ತಿ'ಯನ್ನು ಪ್ರಕಟಿಸುವರು! ಶಂಕರಾಚಾರ್ಯರ ಅದ್ವೈತ ವೇದಾಂತದ ವಿತಂಡವಾದ ದಲ್ಲಿಯೂ ಕೊನೆಗೆ ಉಭಯ ಭಾರತಿಯು ಸ್ತ್ರೀ ಪುರುಷ ಸಂಬಂಧ ವಿಷಯಕ ಪ್ರಶ್ನೆಗಳನ್ನೆತ್ತಿ ಈ ಬ್ರಹ್ಮಚಾರಿ ಸನ್ಯಾಸಿಯನ್ನು ಘಮಗೊಳಿಸತೊಡಗಿದಳೆಂದು ಉಲ್ಲೇಖವಿದೆ. ಮಾತು ಬಂದಾಗ ಸೋತು ಹೋಗುವ ಜಾಣತನಕ್ಕಿಂತ ಮಾತು ಸೋತಾಗ ಜಾಣತನವು ಬರುವದು ಲೈಂಗಿಕ ಲಗ್ನವಿಷಯಕ ಶೃಂಗಾರ ಕಾಮುಕ ಕುಚೇಷ್ಟೆಗಳಿಂದಲೇ ಎಂಬುವದು 'ವಿನ್ಯದೋಗ್ಟಿ'ಯಿಂದ 'ಸುರಾಮತ್ತ ಕಲಹ'ದ ತನಕವೂ ಎಲ್ಲ ಎಡೆಗಳಲ್ಲಿ ಪಡೆಯಬಹುದಾದ ಅನುಭವವು! ಇವರ ನೀತಿ-ಅನೀತಿ ಇಷ್ಟ-ಅನಿಷ್ಟಗಳನ್ನು ಇಲ್ಲಿ ಯೋಚಿಸುವದಿಲ್ಲ. ಮಂದಿಯು ಅದೂ ಗಂಡು ಮಂದಿಯು, ಮಾತುಗಳೂ, ಕತೆಗಳೂ ಹಿಡಿತ ತಪ್ಪಿದಾಗೆಲ್ಲ ಸಡಿಲು ಬಿಟ್ಟಲ್ಲೆಲ್ಲ ಕಾಮ-ಕಾಮಿನಿಯರ ಕುರಿತೇ ಹಾಯುವದು ಒಂದು ಸಾಧಾರಣವಾದ ಅವಲೋಕನೆಯು. ಇಷ್ಟೇ ಇಲ್ಲಿ ಸೂಚಿಸುವದಿದೆ. ಪುರುಷನ ಕಲ್ಪನೆಯು ಪತಂಗವು ಅದೇ ಮೋಹಚುಂಬಕ ಜ್ಯೋತಿಯ ಸುತ್ತಲೂ ಹಾರಾಡುವದು. ಋಷಿಯಿಂದ ಪಶುವಿನ ತನಕ ಈ ಪ್ರವೃತ್ತಿಯು ಪ್ರಕಟವಾಗುವದೇಕೆ? ಲಾಂಛಿತ ಲಾಲಸೆಯ-ಈ ಕಲಂಕಿತ ಕಾಮನೆಯ ಮೂಲವೇನು?

ಪ್ರೀತಿಯ ಪ್ರವೃತ್ತಿಯು ಯಾವ ಯಾವ ಮಟ್ಟಗಳೊಳಗಿಂದ ಹಾಯ್ದು ಮೆಟ್ಟಿಲು ಗಳನ್ನು ಹತ್ತಿ ನಾಗರಿಕ ಸುಸಂಸ್ಕೃತ ಮಾನವರಲ್ಲಿ ಇಂಥ ಕಾವ್ಯಮಯ ರಮಣೀಯತೆಯನ್ನೂ ವೈಭವದ ವಿಲಾಸವನ್ನೂ ಉಜ್ವಲವಾದ ಮಹತ್ವವನ್ನೂ

ಹೊಂದುವ ಹಿರಿಮೆಗೆ ಏರಿತು ?

ಈ ಪ್ರಶ್ನೆಗಳಿಗೆ ಉತ್ತರಕೊಡುವ ಉಪದ್ವ್ಯಾಪಕ್ಕೆ ನಾವು ದುಡುಕುವದಿದೆ. ಈ ಪ್ರಶ್ನೆಗಳನ್ನು ನಾವೇ ಕೇಳಿಕೊಳ್ಳುತ್ತೇವೆ. ಪ್ರೀತಿಯ ಜ್ಯೋತಿಯಲ್ಲಿ ಬೆಳಕು ಕಂಡವರಾಗಲಿ, ಬೆರಳು ಸುಟ್ಟುಕೊಂಡವರಾಗಲೀ ಇವುಗಳನ್ನು ಕೇಳುವದಿಲ್ಲ! ಕೇಳುವ ಬಿಡುವಾಗಲೀ ಬಯಕೆಯಾಗಲೀ ಅವರಿಗೆಲ್ಲಿದೆ ? ಹಳ್ಳದ ಸೆಳುವಿಗೆ ಸಿಕ್ಕಿ ಸಾಗುವವರಿಗೆ ಅದರ ಆಳ–ಅಗಲ ಉಕ್ಕು ದಿಕ್ಕುಗಳನ್ನು ಅರಿತುಕೊಳ್ಳುವ ತೆರಪು–ತಾಳ್ಮೆಗಳು ಎಲ್ಲಿವೆ ? ದಂಡೆಗೆ ನಿಂತು ನೋಡುವ ಜಡ ಬುದ್ಧಿಯವರಿಗೇ ಈ ವಿಚಾರ ಸೂಚಿಸುವದು. ಅಂತೆಯೇ ಈ ಪ್ರಯತ್ನವು.

ಒಂದು ಸಂಗತಿಯ ಸಂದರ್ಭವನ್ನು ಸರಿಯಾಗಿ ಅರಿತು ಅದರ ಅನುಪೂರ್ವಿಯನ್ನು ಬದಿಯ ಬೆನ್ನಿನ ಹೊಂದಿಕೆಗಳನ್ನು ಮನಗಂಡರೆ ಅದರ ಅರ್ಥವೂ ಕಾರ್ಯವೂ ತಿಳಿದುಬರುವದು. ಪ್ರೀತಿಯನ್ನು ಪರಿಶೀಲಿಸುವ ನಮ್ಮ ಪ್ರಯತ್ನವೂ ಹಾಗೆಯೇ ಸಾಗಬೇಕು. ಅಂದರೆ ಪ್ರಾಣಿಯ ಜೀವನ ಕ್ರಮದಲ್ಲಿ ಪ್ರೀತಿಯ ಮೂಲವು ಎಲ್ಲಿಂದ ? ಶೀಲವು ಯಾವ ರೀತಿಯಿಂದ ? ಅದರ ಸಂದರ್ಭ–ಸಂಪರ್ಕಗಳು ಯಾತರೊಂದಿಗೆ ? ಇವೆಲ್ಲ ಸಂಗತಿಗಳನ್ನು ಬಲ್ಲೆವಾದರೆ ಪ್ರೀತಿಯ ಧರ್ಮವೇನು ? ಕಾರ್ಯವು ಯಾವದು ? ಸಾರ್ಥಕತೆ ಯಾತರಲ್ಲಿ ? ಇತ್ಯರ್ಥವು ಹೇಗೆ ಎಂಬುದೆಲ್ಲವು ತಿಳಿವಳಿಕೆಗೆ ನಿಲುಕಲಿಕ್ಕೆ ಅನುವಾಗಬಹುದು.

ಆದ್ದರಿಂದ ಆ ಕುರಿತು ತಿಳಿದುಕೊಳ್ಳೋಣವೇ ? 

## ೨

## ಪ್ರೀತಿಯ ಮೂಲ

ವ್ಯಕ್ತಿಯಲ್ಲಿ ಅನುಕ್ರಮವಾಗಿ ಅದಲುಬದಲಾಗಿ ತಲೆದೋರುವ ಮತ್ತು ತಲೆ ತಿನ್ನುವ ಪ್ರವೃತ್ತಿಗಳು ಎರಡು. ಒಂದು ಹಸಿವೆ, ಇನ್ನೊಂದು ಒಲವು ಇಲ್ಲವೆ ಪ್ರೀತಿ. ವ್ಯಕ್ತಿಯ ಜೀವನದಲ್ಲಿ ಇವೆರಡು ಪ್ರೇರಣೆಗಳು ಜಾಗೃತವಾಗಿ ಕೆಲಸ ಮಾಡುವವರ ಫಲವಾಗಿ ಮಾನವ ಸಮಾಜದ ಜೀವನವೇ ಒಟ್ಟಾರೆ ಅನ್ನಪೋಷಣೆ ಮತ್ತು ಪ್ರಜೋತ್ಪಾದನೆ ಇವೆರಡು ಬಿಂದುಗಳ ಸುತ್ತಲೂ ಸುಳಿಯುತ್ತದೆ. ಅನ್ನ ಸಂತತಿಗೆ ಸಾಧನ. ಸಂತತಿ ಮತ್ತೆ ಅನ್ನಕ್ಕೆ ಸಾಧನ. ನಾವು ಉಣ್ಣುವದೇತಕ್ಕೆ ? ಬದುಕಲಿಕ್ಕೆ: ಬದುಕಿ ಬೆಳೆಯಲಿಕ್ಕೆ: ಬೆಳೆದು ತಾಯ್ತನದಲ್ಲಿಯೋ ತಂದೆತನದಲ್ಲಿಯೋ ನಮ್ಮ ಸ್ವಾಭಾವಿಕವಾದ ಪೂರ್ಣತೆಯನ್ನು ಪಡೆಯಲಿಕ್ಕೆ. 'ಆತ್ಮನೇ ಪುತ್ರನಾಗುವನು.' ಎಂದು ಉಪನಿಷತ್ತೇ ಸಾರುವದು. ವಂಶವೃದ್ಧಿಗೆ ದೇಹವು ಒಂದು ಸಾಧನ. ಆ ಸಾಧನಕ್ಕೆ ಅನ್ನವು ಪೋಷಕವಸ್ತು. ಇದೇಮೇರೆಗೆ ತಾಯ್ತನ, ತಂದೆತನ ಬರುವವರ ಪರಿಣಾಮವೇನು ? ಸಂತತಿಯಲ್ಲಿ ನಾವು ಸಾಧಿಸುವದೇನು ? ನಮ್ಮ ನರೆಯುತ್ತಲಿರುವ-ನಾಶಹೊಂದಲಿರುವ–ಮಾಂಸಪಿಂಡದಿಂದ ಹೊಸ ಜೀವನವನ್ನು ಪಿಂಗಡಿಸಿ ವಿಕಾಸಗೊಳಿಸುವದು; ನಾವು ಸತ್ತರೂ ನಮ್ಮ ಈ ಅಂಶ ಬೇರೆಯಾಗಿ ಬೆಳೆದು ತನ್ನ ಅನ್ನವನ್ನು ಪಡೆಯುವ ಬಲವನ್ನು ತಳೆದು ಬಾಳಿನ ಬಳ್ಳಿಯನ್ನು ನಳನಳಿಸುವ ಕುಡಿಕೊಂಬುಗಳೊಡೆಸಿ ಲೋಕದಲ್ಲಿ ಬಿತ್ತರಿಸುವದು ಯಾರಿಗೆ ಗೊತ್ತು ? ನಮ್ಮಿಂದ ಬೇರಾದ ಈ ಅಂಶವು ನಮಗಿಂತಲೂ ಮಿಗಿಲಾಗಿ ಎಂದಿಗಿಂತಲೂ ಅಂದು ಚಂದವಾಗಿ ವಂಶದ ಬಿತ್ತರದೊಂದಿಗೆ ಗುಣದ ಎತ್ತರವನ್ನು ಉತ್ತರೋತ್ತರ ಸಾಧಿಸಲೂ ಅಹುದು. 'ಮಮ ಏವ ಅಂಶಃ ಜೀವಲೋಕೇ ಜೀವಭೂತ ಸನಾತನಃ' ಎಂದು ಭಗವಂತನು ಭಗವದ್ಗೀತೆಯಲ್ಲಿ ಅಂದದ್ದು ಒಳ್ಳೇ ಸ್ವಾರಸ್ಯದ ಮಾತು. ಜೀವಲೋಕದಲ್ಲಿ ಜೀವಿಯಾಗಿ ಹುಟ್ಟುವ ಪ್ರತಿ ಜೀವಾಂಶವೂ ಸನಾತನವಾಗಿದೆ. ದೀಪದಿಂದ ದೀಪ ಉರಿದು ಜ್ಯೋತಿಯು ಕುಂದದೆ ಬೆಳಕಿನ ಬಳ್ಳಿಹಬ್ಬುವಂತೆ ಪೀಳಿಗೆಯಿಂದ ಪೀಳಿಗೆಗೆ ನಮ್ಮ ಜೀವ ನಿರಂತವಾಗಿ ಮುಂದ ರಿಯುವದು. ಹೀಗೆ ಸತತವಾಗಿ ಬಾಳುವದೇ ಸಂತತಿಯು.

ಈ ಸಂತತಿಯ ಆದಿಯೆಲ್ಲಿ ? ಆದಿಜೀವವು ಅಣು ಕೋಶ ವು. ಏಕಪೇಶೀಯ ಜೀವಾಣು. ಅಂಥ ಒಂದು ಅಲ್ಪದರಲ್ಲಿ ಅಲ್ಪವಾದ ಮೂಲದ ಅಣುಕೋಶವನ್ನು

ತ್ರಿಗೆದುಕೊಳ್ಳೋಣ. ಅಲ್ಲಿ ಸಂತತಿ ಅಥವಾ ಪ್ರಜೋತ್ಪಾದನೆಯು ಹೇಗೆ ಜರುಗುವದು? ಪ್ರೀತಿಯ ಹುಟ್ಟು ಎಲ್ಲಿಂದ? ಪ್ರಣಯದ ಮೂಲ ಅಲ್ಲಿಂದಲೇ ಇರುವದೇ?

ಮೂಲದ ಅಣುಕೋಶವು ದೇವರಂತೆಯೇ ಸೃಷ್ಟಿಸುವದು. ದೇವರು 'ಬಹುಸ್ಯಾಂ' ಅಂದೊಡನೆ ತಾನೇ ಬಹಳ ಬಗೆಯಾದ ವರ್ಣನೆ ವೇದಾಂತದಲ್ಲಿದೆ. ಅಣುಕೋಶವೂ ಒಡೆದು ಎರಡಾಗುವದು. ಅದರ ಬೆಳವಣಿಗೆಯೇ ಅದರ ಒಡೆತಕ್ಕೆ ಕಾರಣವಾಗುವದು. ಅಣುಕೋಶಕ್ಕೆ ಹೊರಮೈಯೇ ಪೋಷಣೆಯ ಇಂದ್ರಿಯವು. ಒಳಗಿನ ಸತ್ವವೆಲ್ಲ ಅದರ ಜೀವಾಳ. ಸತ್ವವು–ಒಳಗಿನ ದ್ರವ್ಯವು–ಬಲಿತು ದೊಡ್ಡದಾದಂತೆ ಹೊರಮೈಯು ಪೂರೈಸುವ ಪೋಷಣೆ ಸಾಲದಾಗುತ್ತದೆ. ಅಥವಾ ಹೊರಮೈಯು ಒದಗಿಸಬಲ್ಲ ಪೋಷಣೆಯ ಪ್ರಮಾಣವನ್ನು ಮೀರಿ ಒಳಗಿನ ಸತ್ವ-ದ್ರವ್ಯವು ಪರಿಮಾಣದಲ್ಲಿ ಬೆಳೆಯುತ್ತದೆ. ಇದು ಅವೆರಡರ ತ್ವರೆಯ ತಾರತಮ್ಯದ ಫಲ. ಒಳಗಿನ ಸತ್ವ ಯಾವ ಭರದಲ್ಲಿ ಬಲಿತು ಬೆಳೆಯುವದೋ ಆ ತ್ವರೆಯಲ್ಲಿ ಹೊರಮೈಯು ಅನ್ನವನ್ನು ಒದಗಿಸಲಾರದು. ಇದರಿಂದ ಮೈಯನ್ನು ಒಡೆದು ಸತ್ವ ಎರಡು ಪಾಲಾಗುತ್ತದೆ. ಒಡಕಿನ ಬಿರುಕನ್ನು ಮುಚ್ಚಿಕೊಂಡು ಹೊರಮೈಯು ಹಬ್ಬುತ್ತದೆ. ಪೋಷಣೆ ಸಂವರ್ಧನೆಗಳ ಪ್ರಮಾಣ ಸಮತೋಲವಾಗುತ್ತದೆ. ಪ್ರತಿ ಪಾಲಿನ ಗಾತ್ರಕ್ಕೆ ಸರಿಯಾಗಿ ಸುತ್ತಲೂ ಅನ್ನ ಪೂರೈಕೆಯ ಮೈಯು ದೊರೆಯುತ್ತದೆ. ಹೀಗೆ ಒಳದ್ರವ್ಯ–ಹೊರಮೈ ಇವೆರಡರ ಸರಿಹೊಂದಿಕೆಯಾಗುವದೆಂದರೇ ಒಂದು ಕೋಶವು ಎರಡಾಗುವದು. ಕೋಶವು ತಾನೆ ಪೃಥಕ್ಕರಣ ಹೊಂದಿ ಪಿತೃತ್ವವನ್ನು ಪಡೆಯುತ್ತದೆ! ಎರಡು ಜೀವ ಕೂಡಿ ಒಂದಾಗುವ ಇಂಬಿನಲ್ಲಿ ಮೂರನೆಯದೊಂದು ಜೀವ ಹುಟ್ಟಿ ಬರುವ ಬದಲು ಒಂದು ಜೀವವೇ ಎರಡಾಗುತ್ತದೆ. ತನ್ನ ಸಂತತಿಗೆ ತಕ್ಕ ಸಂಪತ್ತಿ ಮಾಡಿಕೊಳ್ಳುವದು ಮನುವಿನ ಮಕ್ಕಳ ಧರ್ಮವಾದರೆ. ತನ್ನ ಸಂಪತ್ತಿಗೆ ತಕ್ಕ ಸಂತತಿ ಮಾರ್ಪಡಿಸಿಕೊಳ್ಳುವದು ಅಣುವಿನ ಮಕ್ಕಳ ಧರ್ಮ.

ಅಣುಕೋಶದ ಈ ಕ್ರಿಯೆಯಲ್ಲಿ ಪ್ರಜೋತ್ಪಾದನೆಯ ಪೃಥಕ್ಕರಣವಿದೆ. ಆದರೆ ಲಿಂಗಭೇದದ ವರ್ಗೀಕರಣವಿಲ್ಲ. ಅಂಗಭೇದವಾಗುವದೇ ಹೊರತು ಲಿಂಗಭೇದವಾಗುವದಿಲ್ಲ. ಆದ್ದರಿಂದ ಪ್ರೀತಿಯ ಇಂಗಿತವೂ ಇಲ್ಲ. ವಿಯೋಗದಲ್ಲಿ ಶೃಂಗಾರವೂ ಇರಬಹುದು. ಆದರೆ ಪ್ರೀತಿಯಿರುವದು ಸಂಯೋಗದಲ್ಲಿಯೇ. ಅಣುಕೋಶವು 'ಇರಲಾರೆನೇಕಾಕಿ' ಎಂದು 'ನನ್ನಾಕೆಯನ್ನು' 'ಬಾ' ಎನ್ನುವದಿಲ್ಲ. ತಾನೇ ಎರಡಾಗಿ ಬೆಳೆಯುತ್ತದೆ! ಒಂದಾಗುವದು ಪ್ರೀತಿ; ಎರಡಾಗುವದು ಬರೇ ಸಂತತಿ.

ಜೀವದ ಸಾತತ್ಯಕ್ಕಾಗಿ ನಿಸರ್ಗವು ಈ ಸೇಂದ್ರಿಯ ಸತ್ವದ ಪೃಥಕ್ಕರಣದ ತಂತ್ರವನ್ನು ರಚಿಸಿರುತ್ತದೆ. ಜೀವಕೋಶವು ಹೀಗೆಯೇ ಹಲವು ಪಟ್ಟಾಗಿ ಬೆಳೆದು ಒಂದು ಸೇಂದ್ರಿಯ ಸತ್ವವನ್ನು ಅಸಂಖ್ಯ ಅಣುಕೋಶಗಳ ಸಂಘಟನೆಯಾದ ಒಂದು ಸಜೀವ ದೇಹವನ್ನು ರೂಪಗೊಳಿಸುತ್ತದೆ. ಬೀಜ–ಗರ್ಭ–ಶಿಶು–ಮಾನವ ಈ ಸ್ವರೂಪದಲ್ಲಿ ಜೀವವಿಕಾಸವಾಗುವದು ಇದೇ ಕ್ರಮ. ಬೀಜ–ಕುಡಿ–ಮೊಗ್ಗೆ–ಹೂ–ಮಿಡಿ–ಕಾಯಿ–ಈ ಕ್ರಮವೂ ಇದೇ ವಿಕಾಸದ ಇನ್ನೊಂದು ರೂಪ. ರೂಪದಿಂದ ರೂಪ ಅದರಿಂದ ಪ್ರತಿರೂಪ. ಹೀಗೆ ಸತ್ವದ ಸಿದ್ಧಿ, ವಂಶದ ವೃದ್ಧಿ.

ಆದರೆ ಈ ನಡುವೆ ಕೆಲವೊಮ್ಮೆ ಒಂದು ಚಮತ್ಕಾರವು ಒದಗಿಬರುತ್ತದೆ. ಒಂದು ಏಕಪೇಶಿಪ್ರಾಣಿಯ (ಅಣುಕೋಶದ) ಒಡೆದು ಬೇರೆಬೇರೆಯಾದ ಅಂಶಕೋಶಗಳೆಲ್ಲ ಬಿಡಿಬಿಡಿಯಾಗಿ ಬದುಕುವ ಬದಲು ಒಂದು ಪುಂಜವಾಗಿ ಅಂಟಿಕೊಂಡಿರುತ್ತವೆ. ಅಂಟಿಸಂಘ ಒಂದು ಜಿಗುಟು ದ್ರವದ ಆವರಣದಲ್ಲಿ ಅವು 'ವಸಾಹತು' ಮಾಡಿ ಒಟ್ಟಾಗಿಬಾಳುತ್ತವೆ. ಆಗ ಅವುಗಳ ಕಾರ್ಯದಲ್ಲಿ ಒಂದು ಸೋಜಿಗದ ವ್ಯತ್ಯಾಸ ಒಮ್ಮೆಲೇ ಕಂಡುಬರುತ್ತದೆ. ಈ ವ್ಯತ್ಯಾಸವು ಒಂದು ವರ್ಗೀಕರಣವು. ಪೃಥಕ್ಕರಣ ಪಡೆದ ಬಿಡಿ ಅಂಶಗಳು ಹಿಂದೆ ಇಡಿಯಾದ ಅಣುಕೋಶಗಳಾಗಿಯೇ ಕೆಲಸ ಮಾಡುತ್ತಿದ್ದವು. ಆದರೆ ಈ ಪುಂಜಗಳಾಗಿ ಒಟ್ಟು ಬದುಕುವ ಅಂಶಕೋಶಗಳಲ್ಲಿ ಕೆಲಸದ ವರ್ಗೀಕರಣವು ಒಮ್ಮೆಲೇ ನೆಲೆಗೊಳ್ಳುತ್ತದೆ. ಹೊರಮುಗ್ಗಲಿನ ಅಥವಾ ಹೊರಸುತ್ತಿನ ಕೋಶಗಳೆಲ್ಲ ಪೋಷಣೆಯ ಅಂದರೆ ಅನ್ನದ್ರವ್ಯದ ಪೂರೈಕೆಯ ಕೆಲಸವನ್ನೇ ವಿಶೇಷವಾಗಿ 'ಕೈ' ಗೊಳ್ಳುತ್ತವೆ. (ಅವುಗಳಿಗೆ ಕೈಗಳೆಲ್ಲಿ ? ಮೈಗೊಳ್ಳುತ್ತವೆ ಎನ್ನುವದೇ ಲೇಸು !) ಮತ್ತು ಒಳಮುಗ್ಗಲಿನ ಅಥವಾ ಒಳಸುತ್ತಿನ ಕೋಶಗಳು ಸಂತತಿಯ ಪ್ರಜೋತ್ಪಾದನೆಯ ಕೆಲಸಕ್ಕೆ ಮೀಸಲಾಗುತ್ತವೆ. ಅಣುಕೋಶಗಳ ಈ 'ವಸಾಹತು' 'ಪರಸ್ಪರಂಭಾವಯಂತಃ'ರಾಗಿ ಒಂದು ಸಾಮಾಜಿಕ ಸಂಘಟನೆಯಂತೆ ದುಡಿಯುವ. ಅನ್ಯೋನ್ಯ ಸಹಕಾರಿಗಳಾಗಿ ಪರಸ್ಪರಾವಲಂಬಿಗಳಾಗಿ ಕೆಲಸ ಮಾಡುವ ಅಂಗಗಳ ಸಂಘವಾಗುತ್ತದೆ.

ಆದರೆ ಇವು ಕೆಲವೊಮ್ಮೆ ಕಂಡುಬರುವ ಸೋಜಿಗಗಳು. ಸಾಮಾನ್ಯವಾಗಿ ಅಣುಕೋಶವು ಇಬ್ಭಾಗವಾಗಿಯೇ ಬೇರೆಬೇರೆ ಮರಿಕೋಶಗಳು ಬೆಳೆಯುತ್ತವೆ. ಈ ಕೋಶದ ಪೃಥಕ್ಕರಣವೇ ಸಾರ್ವತ್ರಿಕವಾಗಿ ಕಂಡುಬರುವ ಜೀವವಿಕಾಸದ ಕ್ರಮವು. ಹೀಗಿದ್ದರೂ ಇದೊಂದೇ ಕ್ರಮ ಸಾಲದು. ಹಲವು ಪೀಳಿಗೆಗಳು ಆದಮೇಲೆ ಭಾಗವಾಗಿ ಬೇರೆಯಾಗಿ ಬೆಳೆಯುವ ಈ ಬಗೆಯು ಮತ್ತೆ ಮತ್ತೆ ಹಲವುಸಲ ಒದಗಿ ಬಂದಮೇಲೇ ಈ ಭಾಗ–ವಿಭಾಗ–ಉಪಭಾಗಗಳಾಗುತ್ತ

ನಡೆದ ಜೀವಕೋಶದ ಅಂಶೋಪಅಂಶಗಳಲ್ಲಿ ಮುಂದೆ ಹೊಸ ಕೋಶವನ್ನು ಕಟ್ಟಲು ಕಸುವೇ ಕುಗ್ಗುವದು ಕಾಣುತ್ತದೆ. ಮತ್ತೆತಾನೇ ಒಡೆದು ಬಿಡಿಯಾಗಿ ಇಡಿಯಾಗಿ ಎರಡು ಅಣುಕೋಶಗಳಾಗಿ ಬದುಕಲು ಬೇಕಾಗುವ ಬಲವೇ ಅವುಗಳಲ್ಲಿ ಉಳಿದಿರುವದಿಲ್ಲ.

ಆ ಮಟ್ಟಕ್ಕೆ ಇಳಿದಾಗ ಹೊಸದೊಂದು ಮಾರ್ಪಾಟು ಆಗುವದು ಕಂಡು ಬರುತ್ತದೆ. ಜೀವವಿಕಾಸಕ್ರಮದ ಒಂದು ಘಟ್ಟವು ಇಲ್ಲಿಂದ ಆರಂಭವಾಗುತ್ತದೆ. ಎರಡು ದುರ್ಬಲ ಅಣುಕೋಶಗಳು (ಏಕ ಪೇಶೀಯ ಜೀವಿಗಳು) ಕೂಡುತ್ತವೆ; ಎರಡೂ ತಮ್ಮ ಒಳಕೇಂದ್ರದಿಂದ ಸಜೀವ ದ್ರವ್ಯದ ಒಂದು ದ್ರವದ ಎರಕವನ್ನು ಹೊರಗೆ ಹೊಯ್ಯುತ್ತವೆ ! ಈ ಹೊರಚೆಲ್ಲಿದ ಜೀವಾಂಶದ ದ್ರವವು ಒಂದರದು ಇನ್ನೊಂದರೊಳಗೆ ಅದಲು ಬದಲಾಗಿ ಸೇರುತ್ತದೆ. ಆಮೇಲೆ ಅವು ಅವೆರಡು ಕೂಡಬಂದ ಅಣುಕೋಶಗಳು ದೂರ ಸರಿಯುತ್ತವೆ. ಸೋಜಿಗವೆಂದರೆ ಈ ಸಾಮೀಪ್ಯದ ಸಂಯೋಗದಿಂದ–ಈ ಹತ್ತಿರದ ಹೊಂದಿಕೆಯಿಂದ–ಈ ಜೀವ ದ್ರವ್ಯವುಳ್ಳ ದ್ರವದ ವಿನಿಮಯದಿಂದ ಆ ಎರಡೂ ದುರ್ಬಲ ಅಣುಕೋಶಗಳು ವಿಚಿತ್ರವಾಗಿ ನವಬಲವನ್ನು ಪಡೆಯುತ್ತವೆ. ಎರಡು ಕಸುವಿಲ್ಲದ ಕೋಶಗಳ ಕೂಡುವಿಕೆಯು ಇಬ್ಬರಿಗೂ ಕಸುವು ಕೊಡುವ 'ಕಾಯಕಲ್ಪ' ದಂತಾಗುತ್ತದೆ ! ಈ ಹೊಸ ಕಸುವಿನ ಕುರುಹು ಏನು ? ಅವು ಮತ್ತೆ ಪ್ರಾಥಮಿಕ ಅಣುಕೋಶದಂತೆಯೇ ಪೃಥಕ್ಕರಣ ಹೊಂದಿ ಭಾಗವಾಗಿ ಬೇರೆಯಾಗಿ ಬೆಳೆಯಲು ಭರದಿಂದ ತೊಡಗುತ್ತವೆ. ಈ ಭಾಗಾಕಾರದಿಂದ ಗುಣಾಕಾರ ಬೆಳೆಯುವ ಸೋಜಿಗದ 'ಬೀಜ' ಗಣಿತವು ಮತ್ತೆ ಕೆಲವು ಪೀಳಿಗೆಗಳತನಕವೂ ಸಾಗುತ್ತದೆ !

'ವರ್ಣಸಂಕರ'ವು ನರಕದ ದಾರಿಯೆಂದು ಅರ್ಜುನನು ಹೆದರಿ ಹೌಹಾರಿರಬಹುದು. ಆದರೆ ಪ್ರಾಣಿಶಾಸ್ತ್ರದ ತೀರ್ಮಾನ ಹಾಗಿಲ್ಲ. ಇದಕ್ಕೆ ಮೇಲೆ ಹೇಳಿದ ಈ ಎರಡು ಭಿನ್ನ ಜೀವಾಣುಕೋಶಗಳ ಅನ್ಯೋನ್ಯ ಸುಯೋಗದ ಈ 'ಕಾಯಕಲ್ಪ'ವೇ ಸಾಕ್ಷಿ. ಕಸುವಿಲ್ಲದ ಎರಡು ಜೀವಕೋಶಗಳು ತಮ್ಮ ತಮ್ಮ ಜೀವರಸವನ್ನು ಅದಲುಬದಲಾಗಿ ಹೀರಿಕೊಂಡು ಹೊಸ ಸತ್ವ ಹೊಸ ಶಕ್ತಿಯನ್ನು ಪಡೆದು ಮತ್ತೆ ಪಟ್ಟುಪಟ್ಟಾಗಿ ಪುಟಿದು ಬೆಳೆಯುತ್ತವೆ. ನಮ್ಮ ಮನುಷ್ಯ ಸಮೂಹಗಳಲ್ಲಿ ಹೇಗೋ ಜೀವಾಣುಕೋಶಗಳಲ್ಲಿಯೂ ಹಾಗೆಯೇ–ಮದುವೆಯಿಂದ ಮನುಷ್ಯನು ಹೆಚ್ಚು ಬಲಿಷ್ಠನಾಗುತ್ತಾನೆ. ಹರೆಯೊಂದಿಗೆ ಹಿರಿತನವೂ ಹುಚ್ಚು ಹುಡುಗಾಟಿಕೆಯು ಬದಲು ಹೊಸ ಹುಮ್ಮಸದ ಹಟವೂ ಹೆಮ್ಮೆಯೂ ಮನುಷ್ಯನಲ್ಲಿ ಬಂದು ಹೊಣೆಯ ಹೊರೆಗೆ ಹೆಗಲನ್ನು ಹಚ್ಚಲು ಅಣಿಯಾಗುತ್ತಾನೆ.

ಮದುವೆ ಮದುವಣಿಗರನ್ನು ಮದು'ಮಗ' ಮತ್ತು 'ಮಗಳನ್ನು' ಮನುಷ್ಯರನ್ನಾಗಿ ಮಾರ್ಪಡಿಸುವದು. ಎರಡು ಬೇರೆಬೇರೆ ಜೀವಿಗಳ ಸಂಯೋಗ (ದಾಂಪತ್ಯ) ಒಂದು ಸಮರ್ಥ ಸಂಸ್ಥೆಯನ್ನು ಕಟ್ಟುವದು. ಹಾಗೆಯೇ ಎರಡು ವಂಶಗಳು ಕಲಿಬೆರೆತರೆ ಭಿನ್ನನಾಡಿಯ ಭಿನ್ನನೆತ್ತರದ ಜನ ಕೂಡಿ ಬೆರೆತು ಬಾಳಿದರೆ ಅವರಿಂದ ಉಂಟಾದ ಮಿಶ್ರವಂಶವು ಹೊಸ ಸತ್ವವನ್ನು ಪಡೆದು ಬೆಳೆಯುತ್ತದೆ. ಇರಲಿ.

ನಾವು ಪ್ರೀತಿಯ ಮೂಲವನ್ನು ಹುಡುಕಿಕೊಂಡು ಹೊರಟಿದ್ದೆವಲ್ಲವೇ ? ಜೀವಾಣು ಕೋಶದ ಸಂತತಿಯುತ್ಪಾದನೆಯಲ್ಲಿ ಪ್ರೀತಿಯ ಪೂರ್ವರೂಪವಾದ ರತಿಯು ಅಥವಾ ಕಾಮದ ಕಾಯಕವು ಕಂಡುಬರುವಂತಿಲ್ಲವೆಂಬುದನ್ನು ನೋಡಿ ಆಯಿತು. ನಡುನಡುವೆ ಒಂದೇ ಅಣುಕೋಶ ಒಡೆದು ಎರಡಾಗುವದರ ಕ್ರಮದಲ್ಲಿ ವ್ಯತ್ಯಾಸವಾಗಿ ಎರಡು ಕೋಶಗಳು ಅನ್ಯೋನ್ಯವಾಗಿ ಜೀವರಸದ ವಿನಿಮಯವನ್ನು ಮಾಡುವವು. ಅನಂತರ ಭರದಿಂದ ಒಡೆದು ಪೀಳಿಗೆಯಾಗಿ ಬೆಳೆಯುವವು. ಹಾಗೆಯೇ 'ವಸಾಹತು'ಗಳ ರೂಪದಲ್ಲಿ ಜೀವಾಣುಪುಂಜಗಳು ಒಂದು ಒಟ್ಟು ಜೀವವಾಗಿ ಬದುಕುವ ಉದಾಹರಣೆಗಳೂ ಇರುವವು. ಅಂಥಲ್ಲಿ ಹೊರಸುತ್ತಿನ ಕೋಶಗಳು ಅನ್ನಪೋಷಣೆಯನ್ನೂ ಒಳಸುತ್ತಿನವು ಸಂತತಿಯುತ್ಪಾದನೆಯನ್ನೂ ತಮ್ಮ ಕಾರ್ಯವಾಗಿ ನಡೆಯಿಸುವವು. ಬಿಡಿಯಾದ ಸರಳವಾದ ಏಕಪೇಶೀಯ ಅಣುಕೋಶದಲ್ಲಿ ಕಂಡುಬರದ ಈ ಶ್ರಮವಿಭಾಗವು ಅಥವಾ ಕಾರ್ಯದ ವರ್ಗೀಕರಣವು ಜೀವಾಣುಪುಂಜದಲ್ಲಿ ಕಂಡುಬರುವದು.

## ಎಂಡೊರಿನಾ ಮತ್ತು ಪೆಂಡೊರಿನಾ

ಇಷ್ಟೆಲ್ಲ ಇದ್ದರೂ ಇನ್ನೂ ಈ ಅವಸ್ಥೆಯಲ್ಲಿ ವಿಜಾತೀಯವಾದ ವ್ಯಕ್ತಿಗಳ ಅಥವಾ ಜೀವಿಗಳ ಮೈಥುನವನ್ನು ಹೋಲುವಂಥ ಯಾವ ವ್ಯಾಪಾರವೂ ಇರುವದಿಲ್ಲ. ಭಿನ್ನಜಾತಿಯ (ಅಂದರೆ ಲಿಂಗದ) ಈ ಸಂಯೋಗವೇ ಪ್ರೀತಿಯ ಮೂಲವೂ ಪುಷ್ಪವೂ ಫಲವೂ ಆಗಿದೆ. ಈ ಬಗೆಯ ವಿಷಮ ವ್ಯಕ್ತಿ ಸಮಾಗಮದ ಕ್ರಿಯೆಯು ಮೇಲೆ ವಿವರಿಸಿದ ಅಣುಕೋಶಗಳ ಸಂತತಿ ಕ್ರಮದಲ್ಲಿ ಬರುವದಿಲ್ಲ. ಆದರೂ ಮೇಲೆ ಜೀವಾಣು 'ಪುಂಜಗಳ' ಮಾತು ಬಂದಿದೆಯಲ್ಲವೆ ? ಆ ಪುಂಜಗಳಲ್ಲಿ ಹಲವು ಪ್ರಕಾರಗಳಿರುವವು. ಅವುಗಳಲ್ಲಿ ಪೆಂಡೊರಿನಾ ಅಥವಾ ಎಂಡೊರಿನಾ ಎಂಬ ಒಂದು ಪ್ರಕಾರವಿದೆ. ಈ ಪುಂಜಗಳು ಅತ್ಯಂತ ಕೆಳಮಾದರಿಯ 'ಸೇಂದ್ರಿಯ ಸಜೀವ ಸಂಸ್ಥೆ'ಗಳು (ಇವುಗಳಿಗೆ 'ಪ್ರಾಣಿ' ಎನ್ನುವದೂ ಸರಿಯಲ್ಲ; ಕೇವಲ

'ಸಜೀವ ಸಂಸ್ಥೆ' ಅನ್ನುವದೇ ಲೇಸು !) ಈ ಪುಂಜ ಜೀವಿಗಳಲ್ಲಿ ಮೈಥುನ ಅಥವಾ ಅಸಮ ಜೀವಿಗಳ ಸಂಯೋಗಕ್ಕೆ ಹೋಲಬಹುದಾದ ಸಂಗತಿಯು ಜರಗುವದು ಕಂಡು ಬರುತ್ತದೆ. ಅದೇನು ನೋಡೋಣ.

ಪೆಂಡೊರಿನಾ ಪ್ರಂಜ ಜೀವಿಯಲ್ಲಿ ಪ್ರತಿಯೊಂದು ಅಣುಕೋಶವೂ ಎರಡು ಬಿಡಿಯಾದ ಇಡಿಯಾದ ಮರಿಕೋಶಗಳಾಗಿ ಒಡೆಯುವ ಬದಲು, ಹಲವು 'ಲಘುತಮ ಭಾಜ್ಯಗಳಾಗಿ' ತೀರಸಣ್ಣ ತುಣುಕುಗಳಾಗಿ ನುಚ್ಚು ನೂರಾಗುತ್ತವೆ. (ಅಣುಕೋಶವೇ ಬರಿಗಣ್ಣಿಗೆ ಕಾಣದಷ್ಟು ಸಣ್ಣ ವಸ್ತು; ಅದರ ಈ ನುಚ್ಚುನೂರಾದ ತುಣುಕುಗಳು ಇನ್ನೆಷ್ಟು ಸಣ್ಣವಿರಬಹುದು ? ಓದುಗರ ಊಹೆಗೇ ಇದನ್ನು ಬಿಟ್ಟಿದ್ದೇನೆ !) ಈ ಅನೇಕ ಚಿಕ್ಕ ತುಣುಕುಗಳು ಮೊದಲು ಎಲ್ಲ ಒಂದೇ ಮಾದರಿಯಾಗಿರುತ್ತವೆ. ಈ ತುಣುಕುಗಳಲ್ಲಿ ಎರಡು ಒಂದಾಗಿ ಬೆರೆತ ಹೊರತು ಹೊಸ ಅಣುಕೋಶ ಉಂಟಾಗುವದೇ ಇಲ್ಲ ! ಎರಡೆರಡು ತುಂಡುಗಳು ಕೂಡಿ ಒಂದು ಕೋಶವು ಪೂರ್ಣವಾಗುತ್ತದೆ. ಇದಕ್ಕೆ ಏನು ಸಜಾತೀಯ ಸಂಯೋಗವೆನ್ನೋಣವೇ ? ಹೊಸಹುಟ್ಟಿಗೆ ಎರಡು ಅಣು-ತುಣುಕುಗಳು ಬೇಕು. ಆದರೆ ಎರಡೂ ಒಂದೇ ಬಗೆಯವೆಂದೂ ತೋರುತ್ತದೆ !

ಇನ್ನು ಎಂಡೊರಿನಾದ ಕುಲಕತೆ ? ಇಲ್ಲಿಯೂ ಪ್ರತಿ ಕೋಶವು ಒಡೆಯುವದು-ಅನೇಕ ಭಾಗಗಳಾಗಿ ಒಡೆಯುವದು. ಆದರೆ ಈ ಭಾಗಗಳೆಲ್ಲ ವಿಷಮ ಪ್ರಕಾರದವು:- ಕೆಲವು ದೊಡ್ಡವು ಮತ್ತು ಮಂದ ತೆಪ್ಪಗೆ ಬಿದ್ದಿರುವಂಥವು: ಅದರೆ ಬೇರೆ ಕೆಲವು ಸಣ್ಣವು ಮತ್ತು ಸ್ವಚ್ಛಂದ ಚಟುವಟಿಕೆಯುಳ್ಳಂಥವು ! ತುಣುಕುಗಳೆಲ್ಲ ಕೆಲವು ಹಾಗೆ ಕೆಲವು ಹೀಗೆ. ಇನ್ನು ಮುಂದಿನ ಸೋಜಿಗವೆಂದರೆ, ಈ ಕುಲದಲ್ಲಿ ಯಾವದೇ ಎರಡು ತುಣುಕುಗಳು ಕೂಡುವಂತಿಲ್ಲ. ಒಂದು ದೊಡ್ಡ ಮತ್ತು ಒಂದು ಸಣ್ಣ ತುಣುಕುಗಳು ಬೆರೆಯುವವು. ಚಟುವಟಿಕೆಯುಳ್ಳ ಸಣ್ಣ ಅಂಶವು ಮಂದವಾದ ದೊಡ್ಡ ಅಂಶದಲ್ಲಿ 'ವಿಲೀನೀಕರಣ' ಹೊಂದುವದು. ಆಗಲೇ ಹೊಸ ಅಣು ಕೋಶವು ಉಂಟಾಗುವದು ! ಈ ವಿಷಮಾಂಶ ಸಂಯೋಗಕ್ಕೆ ಮೈಥುನವೆನ್ನೋಣವೇ ? ವಿಜಾತೀಯ ಅಂದರೆ ವಿರುದ್ಧ ರೂಪ ಗುಣಗಳಿದ್ದ ಎರಡು ಅಂಶಗಳು ಕೂಡಿ ಒಂದಾಗಿ ಹೊಸಹುಟ್ಟು ಮುಂದಾಗುವದು. ಇಲ್ಲಿ ಮಿಥುನವಿದೆ; ಅಂದರೆ ಇದೂ ಮೈಥುನವೇ ?

ಅಹುದು. ಪೆಂಡೊರಿನಾದಲ್ಲಿ ಮೊದಲು ಮಾಡಿದ ಪ್ರಯೋಗವು ಇಲ್ಲಿ ಸಫಲವಾಯಿತೆನ್ನಬಹುದು. ಎಂಡೊರಿನಾದಲ್ಲಿಯೇ ನಿಸರ್ಗವು ಮೊತ್ತ-ಮೊದಲು ಲಿಂಗ

ಭೇದವನ್ನು ಶೋಧಿಸಿಕೊಂಡಿತು. ವಿಶ್ವದ ಆದಿಯಲ್ಲಿ ಕೂಟಸ್ಥನೂ ಸ್ಥಾಣುವೂ ಆದ ಪುರುಷ; ಅವನ ಇದುರು ಚಂಚಲವೂ ತ್ರಿಗುಣಾತ್ಮಕವೂ ಆದ ಪ್ರಕೃತಿ. ಹೀಗೆ ನಿತ್ಯ ಮಿಥುನ ಒಂದು ಬ್ರಹ್ಮಾಂಡ ನಿರ್ಮಾಣಕ್ಕೆ ಕಾರಣವಾಯಿತೆನ್ನುವರು ನಮ್ಮ ವೇದಾಂತಿಗಳು. ಆ ಮಾತು ಸಟಿಯೋ ದಿಟವೋ. ಪ್ರಕೃತಿ–ಪುರುಷರ ಏಕಾಂತದಲ್ಲಿ ಇಣಿಕಿ ನೋಡಲು ಎದೆಪಟ್ಟ ವೇದಾಂತಿಗಳೇ ಅದನ್ನು ಬಲ್ಲರು ! ಆದರೆ ವಿಜ್ಞಾನಿಗಳು ನಿಸರ್ಗದ ಏಕಾಂತವನ್ನು ಭಂಗಮಾಡಿ ಲಿಂಗಭೇದದ ಮೂಲ ಮಟ್ಟವನ್ನು ಕಂಡುಕೊಂಡಿದ್ದಾರೆ. ಎಂಡೊರಿನಾ ಜೀವಾಣುಪುಂಜದ ಸಂತತಿ ಯುತ್ಪಾದನೆಯು ಎಲ್ಲ ಪ್ರಾಣಿಪ್ರಪಂಚದ ದಾಂಪತ್ಯ ಪರಂಪರೆಯ ಆದಿಯ 'ಪ್ರಕೃತಿ–ಪುರುಷ' ಸಂಯೋಗ ! ವೇದಾಂತಿಗಳು ಬಣ್ಣಿಸುವ 'ಪುರುಷ' ಲಕ್ಷಣವೆಲ್ಲ ದೊಡ್ಡ–ಮಂದ–ನಿಷ್ಕ್ರಿಯ ಅಣು–ಅಂಶಕ್ಕೆ ಇದೆ; ಹಾಗೆಯೇ 'ಪ್ರಕೃತಿ' ಲಕ್ಷಣವೆಲ್ಲ ಚಿಕ್ಕ ಚಟುವಟಿಕೆಗಾರ ಅಣು-ಅಂಶಕ್ಕೆ ಇದೆ. ಹೀಗೆ ಲಿಂಗಭೇದದ ಉಗಮವನ್ನು, ದಾಂಪತ್ಯದ ಆದಿಯನ್ನು, ಮೈಥುನದ ಮೂಲವನ್ನು ನಿಸರ್ಗವು ನಿರ್ಮಿಸಿ ಕೊಂಡದ್ದು ಎಂಡೊರಿನಾ ಜೀವಾಣುಪುಂಜದಲ್ಲಿ !

ಮೊದಲೇ ಇದ್ದ ಅಂಶದೊಳಗೆ ಮೊದಲೇ ಇದ್ದ ಇನ್ನೊಂದು ಅಂಶವು ಸೇರಿ ಒಂದಾದ ಹೊರತು ಹೊಸದೊಂದು ಅಣುವು ಉಂಟಾಗುವದಿಲ್ಲ. ಅಣುವಿನ ಈ ನಡತೆ ಘನವಾದ ಪಾಠವನ್ನೇ ಕಲಿಸುವದಿಲ್ಲವೇ ? ಹೊಸತು ಹೊಸತು ಎಂಬುವದು ಆಕಾಶದಿಂದ ಆಕಾರತಾಳಿಬರುವದೇ ? ಶೂನ್ಯ ಸಂಪಾದನೆಯೋ ? ಅಲ್ಲ. ಹಳೆಯುದನ್ನು ಒಳಸೇರಿ ಹಳೆಯುದರಲ್ಲಿ ತಳವೂರಿ ಹಳೆಯುದರ ಸತ್ವ ಹೀರಿಯೇ ಹೊಸತು ಹೊಸತಾಗುತ್ತದೆ. ಹಳೆಯ ಹತ್ತಿಯ ಹಳೆಯ ನೂಲನ್ನೇ ಹಾಸು-ಹೊಕ್ಕಾಗಿ ಹೊಸೆದು ಹೊಸತು ಬಟ್ಟೆಹುಟ್ಟುವದಿಲ್ಲವೇ ? ಹಾಗೆಯೇ ಹಳೆಯುದರ ಹೊಟ್ಟೆಯಿಂದ ಹಳೆಯುದರ ಹುರುಳನ್ನುಂಡು ಹೊಸತು ಹೊರಡುತ್ತದೆ. ಆದರೆ ಹಳೆ–ಹೊಸತಿನ ಈ ಹುರುಳಿನ ಹೊಂದಿಕೆಯ ಪಾಠವನ್ನು ತರುಣರು ತಿಳಿಯುವದು ತಾರುಣ್ಯವು ತೀರಿದಾಗಲೇ ! ಇರಲಿ.

ಜೀವಾಣುಪುಂಜಗಳಲ್ಲಿ ಪ್ರತಿಯೊಂದು ಅಣು–ಕೋಶವು ಈ ಸೂಕ್ಷ್ಮ ಅಂಶ ಗಳನ್ನುಂಟುಮಾಡುತ್ತದೆ. ಆದರೆ ಜೀವ ವಿಕಾಸದ ಮೇಲಿನ ಮೆಟ್ಟಲುಗಳನ್ನು ಏರಿದಂತೆ ಹೆಚ್ಚು ಹೆಚ್ಚು ಸಂಕೀರ್ಣವಾದ ಸೇಂದ್ರಿಯ ಜೀವಿಗಳಲ್ಲಿ ಅವುಗಳ ದೇಹದ ಕೆಲವೊಂದು ಭಾಗಗಳೇ ಈ ಸೂಕ್ಷ್ಮ ಜೀವಾಣು ಅಂಶಗಳನ್ನು ಉಂಟು ಮಾಡಲು ಮೀಸಲಾಗಿ ದುಡಿಯುತ್ತವೆ. ಅಂಥ ಜೀವಾಣು–ಅಂಶಗಳು ಹೆಚ್ಚಿನ ವಿಶೇಷತೆಗಳುಳ್ಳವಾಗಿರುತ್ತವೆ. ಎರಡು ಪ್ರಕಾರದ ಜೀವಾಣು–ಅಂಶಗಳು ಹೆಚ್ಚು

ಒಂದರಿಂದೊಂದು ವಿಭಿನ್ನವಾಗಿಯೂ ತೀರ ವಿಶಿಷ್ಟ ಗುಣಧರ್ಮಗಳುಳ್ಳವಾಗಿಯೂ ಮಾರ್ಪಡುತ್ತವೆ. ಈ ಅಣು ಅಂಶಗಳೇ ಮುಂದಿನ ಮೇಲ್ಮಟ್ಟದ ಪ್ರಾಣಿಗಳಲ್ಲಿ ಮುತ್ತು 'ರೇತಸ್ಸು'ಗಳ ರೂಪವನ್ನು ಪಡೆಯುತ್ತವೆ. ರಜಸ್ಸು ಮತ್ತು ರೇತಸ್ಸು ಎರಡೂ ಪರಸ್ಪರ ವಿರುದ್ಧ ವಿಶೇಷಗಳುಳ್ಳ ಅಣು ಅಂಶಗಳು. ಆದರೆ ಈ ವಿಷಮ ವಿರುದ್ಧ ದ್ರವ್ಯಗಳು ಇನ್ನೂ ಹಲವು ಜಾತಿಯ ಪ್ರಾಣಿಗಳಲ್ಲಿ ಒಂದೆ ಶರೀರದಲ್ಲಿಯೇ ಉಂಟಾಗುತ್ತವೆ. ಅದೂ ಒಂದೇ ಜನಕ ಜೀವಿಯಿಂದ ಉಂಟಾಗುತ್ತವೆ. ಮಣ್ಣು–ಹುಳ, ಓಯ್‌ಸ್ಟರ–ಜಾತಿಯ ಮೀನು, ಹೆರಿಂಗ ಜಾತಿಯ ಮೀನು, ಇವೆಲ್ಲ ಈ ಬಗೆಯವು. ಇವುಗಳಲ್ಲಿ ಗಂಡು ಹೆಣ್ಣು ಎಂಬ ಎರಡು ಬಗೆಯ ದೇಹಗಳಿಲ್ಲ. ಒಂದೇ ದೇಹವು ಎರಡೂ ಪ್ರಕಾರದ ಜೀವಾಣು ಅಂಶಗಳನ್ನು ರಜಸ್ಸು ಮತ್ತು ರೇತಸ್ಸುಗಳೆಂದದ ದ್ರವ್ಯಗಳನ್ನು ಉಂಟು ಮಾಡುತ್ತದೆ.

ನಿಸರ್ಗವು ಒಮ್ಮೆಲೇ ಗಂಡು–ಹೆಣ್ಣು ಬೇರೆಬೇರೆ ಮಾಡಲಿಲ್ಲ. ಎರಡೂ ಬಗೆಯ ಜೀವಾಣು ಅಂಶಗಳನ್ನುಂಟುಮಾಡುವ ಕಲೆಯನ್ನು ಸಾಧಿಸಿದರೂ ಅವುಗಳಿಗಾಗಿ ಎರಡು ಬೇರೆಯಾದ ಲಿಂಗಭೇದದ ಶರೀರಗಳನ್ನು ನಿರ್ಮಿಸುವ ಮೊದಲು ನಿಸರ್ಗವು ಅನುಮಾನಿಸಿದಂತೆ ತೋರುತ್ತದೆ.

## ಲಿಂಗಭೇದವೆಲ್ಲಿಂದ ?

ಹಾಗಾದರೆ ಲಿಂಗಭೇದದ ಭಿನ್ನಲಿಂಗದ ದೇಹಗಳ ಅತ್ಯಂತ ಮೊದಲಿನ ಮಟ್ಟ ಎಲ್ಲಿ ಕಂಡುಬರುತ್ತದೆ ? ಸಿನ್‌ಗೇಮ ಎಂಬ ಒಂದು ಜಾತಿಯ ಜಂತು ಇದು ಸ್ವತಂತ್ರವಾಗಿ ಬಾಳಿಬದುಕುವ ಜೀವಿಯಲ್ಲ. ಹಕ್ಕಿಗಳ ಒಳಮೈಯಲ್ಲಿ ಅವುಗಳ ಜೀವದಮೇಲೆ ಜೀವಿಸುವ ಒಂದು ಜಂತು. ಈ ಜಂತುವಿನಲ್ಲಿ ಕಂಡುಬರುವ ಸೋಜಿಗವೇನು ? ಈ ಜಾತಿಯಲ್ಲಿ ದೊಡ್ಡದೊಂದು ದೇಹ ಹೆಣ್ಣಿನದು–ಹೆಣ್ಣೆನ್ನುವದೇಕೆಂದರೆ, ಅದು 'ಅಂಡ'ಗಳನ್ನು (ರಜಸ್ಸನ್ನು) ಉಂಟುಮಾಡುತ್ತದೆ. ಹೆಣ್ಣಿಗಿಂತ ಚಿಕ್ಕದಾದ ಇನ್ನೊಂದು ದೇಹ: ಇದು ಗಂಡಿನದು. ಈ ಚಿಕ್ಕದೇಹವು ದೊಡ್ಡ ದೇಹದ ಮಗ್ಗುಲಲ್ಲಿ ಶಾಶ್ವತವಾಗಿ ಅಂಟಿಕೊಂಡಿರುತ್ತದೆ ! ಈ ಪುಟ್ಟ ದೇಹವು ಆ ದೊಡ್ಡ ದೇಹದ 'ಯಜಮಾನ'ರೆಂತ ಯಾರೂ ಹೇಳಲಾರರು ! ಮುಂದೆ ಮಾನವಕೋಟಿಯಲ್ಲಿ ಅಷ್ಟೊಂದು ಜಂಭದ ಹುಂಜದಂತೆ ಸಡಗರದಿಂದ ಮೆರೆಯುವ ಗಂಡಿನ ಆದಿಯ ಅವತಾರವು ಇಷ್ಟೊಂದು ಅಲ್ಪದೆಂಬುವದು ಯಾರಿಗೂ ಗೊತ್ತಾಗದು. ಈ ವಾಮನಾವತಾರದಲ್ಲಿ ಗಂಡು ದೇಹವು ಹೆಣ್ಣು

ದೇಹಕ್ಕೆ ಹೊಂದಿದ್ದರೆ ರೇತಸ್ಸನ್ನು (ಬೀಜವನ್ನು) ಉಂಟುಮಾಡುವ ಒಂದು ಅವಯವವೆಂಬಂತೆ ತೋರುವದು. (ಊರಿಗೆಲ್ಲ ನರಸಿಂಹಾವತಾರಿಯಾಗಿ ಉರಿಯುವ ಗಂಡ ಹೆಂಡತಿಗೆ ಹೆದರುವ ವಾಮನಾವತಾರಿಯಾಗಿ ಆಕೆಯ 'ಗಂಡು-ಮೆಟ್ಟಿ'ಗೆ ತಾನೇ 'ಬಲಿ' ಯಾಗಿ ಪಾತಾಳ ಸೇರುವದು ಮಾನವ ಕೋಟಿಯಲ್ಲಿಯೂ ಕಡಿಮೆ ಕಂಡುಬರುವದಿಲ್ಲ. ಇಂಥ ಪತ್ನೀವ್ರತ ಪತಿಗಳೆಲ್ಲ ಈ ಆದಿ ಅವಸ್ಥೆಯ ಸಿಸಗೇಮು ಗಂಡಿನ ಬಿರುದನ್ನೆ ಮುಂದರಿಸುವರೆನ್ನಬೇಕು.)

ಕ್ರಿಮಿಕೀಟಗಳಲ್ಲಿ ಎಲ್ಲ ಹೀಗೆಯೇ. ಹೆಣ್ಣೇ ಪ್ರಶಸ್ತ, ಪ್ರಚಂಡ ಮತ್ತು ಪ್ರತಾಪವತಿ. ಉದಾಹರಣೆಗೆ, ಬೊನೆಲ್ಲಿಯಾದಂಥ ಕಡಲು-ಹುಳಗಳಲ್ಲಿ ಹೆಣ್ಣು ದೇಹ ನಾಲ್ಕು ಅಂಗುಲ ಉದ್ದವಿರುತ್ತದೆ. ಹಾಗೆಯೇ ಗಾತ್ರದಲ್ಲಿಯೂ ಒಳ್ಳೇ ಪ್ರಶಸ್ತವಿರುತ್ತದೆ. ಗಂಡು ತೀರ ಕಂಗೆಟ್ಟ ಕಸ. ಹೆಣ್ಣಿಗಿಂತಲೂ ನೂರು ಪಾಲು ಚಿಕ್ಕ ದೇಹದ ಜೀವಿ. ಹಾಗಾದರೆ ಈ ದಂಪತಿಯ ಸಮಾಗಮವು ಎಂತು ? ಅದೂ ಒಂದು ಅಪೂರ್ವ ಸಂಗತಿ ! ಈ ಪುಟ್ಟ ಪ್ರಾಣಿಗಳಾದ ಗಂಡುಗಳು ಹೆಣ್ಣು ದೇಹದ ಪಚನ ನಲಿಕೆಯನ್ನು ಒಳಸೇರುತ್ತವೆ. ಅದರೊಳಗಿಂದ ಸರಾಗವಾಗಿ ಹೆಣ್ಣಿನ ದೇಹದೊಳವನ್ನು ಹೊಕ್ಕುತ್ತವೆ: ಮತ್ತು ಅಲ್ಲಿರುವ ಅಂಡಗಳಲ್ಲಿ (ರಜಸ್ಸಿನ ಕಣಗಳಲ್ಲಿ) ತಮ್ಮ ಬೀಜಾಣುಗಳನ್ನು ಬಿಟ್ಟು ಕೃತಾರ್ಥರಾಗುತ್ತವೆ ! ಗಂಡಿನ ಹೃದಯದಲ್ಲಿ ಹೆಣ್ಣಿಗೆ ಎಂದು ಸ್ಥಾನವು ದೊರೆಯುವದೋ ಅಂದೇ ಆಕೆಯು ಅವನ ಹೆಂಡತಿಯಾಗುವಳೆಂದು ನಮ್ಮ ಸಾಹಿತಿಗಳು ಸಾರುವರು. ಈ 'ಸ್ಥಾನಿಕ' ಮಹತ್ವ ಮನುಷ್ಯರಲ್ಲಿ ಮೇಲೆ ಬಣ್ಣಿಸಿದ ಕ್ರಿಮಿಗಳಲ್ಲಿ ಗಂಡಿಗೆ ಹೆಣ್ಣಿನ ಉದರದಲ್ಲಿ ಉದಾರಾಶ್ರಯ ದೊರೆತಾಗಲೇ ಗೃಹಸ್ಥಾಶ್ರಮದ ಶ್ರಮವು ಆರಂಭವಾಗುತ್ತದೆ.

ಕೀಟಗಳಲ್ಲಿಯೂ ಹೀಗೆಯೇ. ಹೆಣ್ಣು ಕೀಟವು (ಸೊಣವು) ಯಾವಾಗಲೂ ಗಂಡಿಗಿಂತ ಗಟ್ಟಿಯೂ ಗಾತ್ರದಲ್ಲಿ ದೊಡ್ಡದೂ ಆಗಿರುತ್ತದೆ. ಪಾತರಗಿತ್ತಿಯು ತನ್ನ ಸಂಗಾಡಿ ('ಪಾತರಗಾರ ?') ಗಿಂತ ಹತ್ತು ಪಟ್ಟು ಭಾರವೂ ಹದಿನೈದು ಪಟ್ಟು ದೀರ್ಘವೂ ಇರುತ್ತದೆ.

ಹಾಗಾದರೆ ಹೆಣ್ಣು 'ಅಬಲೆ' ಯಾದದ್ದು ಎಂದಿನಿಂದ ? ಪಕ್ಷಿಗಳ ಮತ್ತು ಪಶುಗಳ ಪ್ರಪಂಚವು ಪ್ರಾರಂಭವಾದಂದಿನಿಂದ ಪಕ್ಷಿಪಶುಗಳಲ್ಲಿ ಮಾತ್ರ ಗಂಡು ಶ್ರೇಷ್ಠ. ಈ ಶ್ರೇಷ್ಠತ್ವವು ಗಂಡಿಗೆ ಬಂದ ಕಾರಣವೇನು ? ಸಂತತಿಯುತ್ಪಾದನೆಯ ಕಾರ್ಯದಲ್ಲಿ ಇನ್ನು ಹೆಣ್ಣೇ ಬಹುಭಾಗದ ಹೊರೆಯನ್ನೂ, ದೊಣೆಯನ್ನೂ, ಹೊರುವದು ಕಂಡುಬರುತ್ತದೆ. ಈ ಹೊರುವ ಹೆರುವ ಹೋರೆಯ ಮೂಲಕ

ಹೆಣ್ಣಿನ ಪ್ರೈಕ್ಷೆ ಕಟ್ಟಿದಂತಾಗುತ್ತದೆ, ಬದುಕಿನ ಕಣದಲ್ಲಿ. ಬಾಳಿನಲ್ಲಿ ಬಹುಕಾಲ ಪುನಃ ಪುನಃ ಹೆಣ್ಣು ಅಸಹಾಯಳೂ ಅಶಕ್ತಳೂ ಆಗಿ ಉಳಿಯುತ್ತಾಳೆ. ಪಾಲನೆ ಪೋಷಣೆ ಮತ್ತು ಸ್ವಸಂರಕ್ಷಣೆಗಳನ್ನು ಕೂಡ ಹೆಣ್ಣು ತನ್ನಷ್ಟಕ್ಕೆ ತೂಗಿಸಿಕೊಂಡು ಹೋಗದಂತಾಗುತ್ತದೆ. ಆದರೆ ಕೇವಲ 'ಹುಟ್ಟಿಸುವ ಸ್ವಾಮಿ ತ್ವ' ನಾದ ಗಂಡು ಸ್ವತಂತ್ರನೂ ಸ್ವಚ್ಛಂದನೂ ಆಗಿ ಉಳಿಯುತ್ತಾನೆ. ರಘುವಂಶದ ರಾಜರ ಪ್ರಜೆಗಳಂತೆ ಗಂಡು 'ಕೇವಲ ಜನ್ಮಹೇತು' ವಾಗಿ ಉಳಿಯುತ್ತಾನೆ. ಆದ್ದರಿಂದ ಪ್ರೀತಿಯು ವ್ಯಾಪದಲ್ಲಿಯೂ, ಸ್ಮರನ ಸ ಮ ರ ರಂಗದಲ್ಲಿಯೂ, ಗಂಡಿನದೇ ಮೇಲುಗೈ ಆಗುತ್ತದೆ. ಬೇಟದ ಬೇಟೆಯಲ್ಲಿ ಅವನೇ ಅಬಲೆಗಾಗಿ ಬಲಿಯೊಡ್ಡುತ್ತಾನೆ. ಪ್ರ ಣ ಯ ದೇ ವ ತೆ ಯ ನ್ನು ಪ್ರಸನ್ನಪಡಿಸುವದಕ್ಕಾಗಿ ಯಾವ ಸಾಹಸಕ್ಕೂ ಎರಗುತ್ತಾನೆ. ಅವನ ಯುದ್ಧದ ಪತಾಕೆಯಾಗಿ ಅವನ ನೌಕೆಯ ಧ್ರುವಚಿಕ್ಕೆಯಾಗಿ, ಅವನ ಯಜ್ಞದ ಅಖಂಡ ಶಿಖೆಯಾಗಿ ಹೆಣ್ಣು ನಿಂತಿರುವಾಗ ಗಂಡು ಅವಳ ರಕ್ಷೆಗಾಗಿ ಎದೆಯ ಕೋಟೆಕಟ್ಟಿ ಸಾವಿನ ಕದಂಕವನ್ನು ದಾಟಿ ಬಾಳಿನ ಬಯಲಲ್ಲಿ ನಿರಂತರದ ಹೋರಾಟ ಹೂಡಿ ಸತ್ತೆಯನ್ನು ಯಶಸ್ಸನ್ನು ಕೀರ್ತಿಯನ್ನು ಕೊನೆಗೆ ತಿಂಗಳ ಸಂಬಳವನ್ನಾದರೂ ತಂದು ಅವಳ ಅಡಿಯಲ್ಲಿಯೋ ಉಡಿಯಲ್ಲಿಯೋ ಇಡುತ್ತಾನೆ !

ಹೀಗೆ ಗಂಡಿಗೆ ಪ್ರಾಧಾನ್ಯ ಮತ್ತು ಪ್ರಾಬಲ್ಯ ಬಂದದ್ದು ಇತ್ತೀಚೆಗೆ: ಅಂದರೆ ನಿಸರ್ಗವು ಪಶು ಪಕ್ಷಿ ಜೀವನದ ಮಟ್ಟಕ್ಕೆ ಪ್ರಾಣಿಯ ವಿಕಾಸವನ್ನು ತಂದು ಮುಟ್ಟಿಸಿದ ಮೇಲೆ. ಆ ಮೊದಲಿನ ಕ್ರಮದಲ್ಲಿನ ಹೆಣ್ಣೇ ಪ್ರಬಲೆ ಎಂಬುದನ್ನು ನಾವು ನೋಡಿದೆವು. ಗಂಡಿಗೆ ಕೇವಲ ಹುಟ್ಟಿಸುವ ಹೊಣೆಯನ್ನು ಮಾತ್ರ ಬಿಟ್ಟು ಸ್ವಾಮಿತ್ವವನ್ನು ಕೊಡದಂತೆ ಹೆಣ್ಣು ಉಗ್ರವಾಗಿ ಜಾಗ್ರತೆವಹಿಸುವ ಉದಾಹರಣೆಗಳು ನಿಸರ್ಗದಲ್ಲಿ ಕಡಿಮೆ ಇಲ್ಲ. ಹಲವು ಪ್ರಾಣಿ ಜಾತಿಗಳಲ್ಲಿ ಮೈಥುನ ಅಥವಾ ರಜೋ ರೇತಃಸಂಯೋಗದ ಕ್ರಿಯೆಯಲ್ಲಿಯೇ ಗಂಡಿಗೆ ಗಂಡಾಂತರ ಒದಗುವದು ಉಂಟು ! ಬೀಜಾಣುಗಳನ್ನು ಅಂಡಾಣುಗಳಲ್ಲಿ ಬಿಟ್ಟೊಡನೆ ಗಂಡು ಮಡಿಯುವದುಂಟು. ಅ ದ ಕ್ಕೆ (ಹೆಣ್ಣು 'ಮಡದಿ'ಯೆಂದೆನಿಸಿಕೊಂಡಳೇ ?) ಸಂಯೋಗವು ಮುಗಿದೊಡನೆಯೇ ಹೆಣ್ಣು ಪ್ರಾಣಿ ಗಂಡು ಪ್ರಾಣಿಯನ್ನು ತಿಂದು ಬಿಡುವದುಂಟು ! (ನಿಜವಾಗಿಯೂ ಇಂಥಲ್ಲಿ ಹೆಣ್ಣು ಗಂಡಿನ ಪ್ರಾಣ-ಪ್ರಿಯಳಾಗುವಳು !)ಇಂಥ ಉದಾಹರಣೆಗಳನ್ನು ಕೊಡುತ್ತ ಹೋಗುವದು ಇಲ್ಲಿ ಸಲ್ಲದು. ಇದು ಕೇವಲ ಪ್ರಾಣಿಶಾಸ್ತ್ರದ ಗ್ರಂಥವಲ್ಲ. ಪ್ರೀತಿಯ ಮೂಲ-ಶೀಲಗಳನ್ನು ಅರಿತುಕೊಳ್ಳುವ ಮಟ್ಟಿಗೆ ಮೈಥುನ ಲಿಂಗಭೇದಗಳ ವಿಕಾಸದ ಮಟ್ಟುಗಳನ್ನು ಇಲ್ಲಿ ಓಟದ ನೋಟದಲ್ಲಿ ಅವಲೋಕಿಸುವದಿದೆ.

## ‘ಪೃಥಾ-ಪ್ರಸವ’ ಮತ್ತು ನಿಸರ್ಗದ ನಿಷೇಧ

ತೀರ ಕೆಳಮಟ್ಟದ ಕೆಳವಾದರಿಯ ಜೀವಿಗಳಲ್ಲಿ ಹೀಗೆ, ಗಂಡಿನ ಭೂಮಿಕೆ ಹೆಣ್ಣಿಗೆ ವಿಧೇಯವಾಗಿ ಇರುವದನ್ನು ನೋಡಿದರೆ ಒಂದೆರಡು ಪ್ರಶ್ನೆಗಳು ಉಂಟಾಗುತ್ತವೆ. ಗಂಡು ಎನ್ನುವದೇ ನಿಸರ್ಗವು ಇತ್ತೀಚೆಗೆ ಬೆಳಸಿಕೊಂಡ ಒಂದು ಪ್ರತ್ಯೇಕ ವೈಶಿಷ್ಟ್ಯದ ಮಾದರಿಯೇ? ಮಣ್ಣು-ಹುಳದಂಥ ಜೀವಿಗಳಲ್ಲಿ ಒಂದೇ ದೇಹದಲ್ಲಿ ಎರಡೂ ಲಿಂಗಗಳ ಜೀವಾಣುಗಳನ್ನು ಸಾಗುಗೊಳಿಸಿದ ನಿಸರ್ಗವು ಹೀಗೆ ಅವುಗಳಿಗಾಗಿ ಪ್ರತ್ಯೇಕ ಸ್ವತಂತ್ರ ಶರೀರ ಸಂಸ್ಥೆಗಳನ್ನು ಬೆಳಸಿಕೊಂಡದ್ದು ಏತಕ್ಕೆ? ಉಭಯ ಲಿಂಗಿ ಪ್ರಾಣಿಗಳ ಜಾತಿಯಿಂದ ಏಕಲಿಂಗ ಜೀವಾಣುಗಳನ್ನುಂಟು ಮಾಡುವ ಹೊಸ ಶೋಧದ ಪ್ರಯೋಜನವೇನಿರಬಹುದು? ಜೀವವನ್ನು ಹೆಣ್ಣು ಗಂಡೆಂಬ ಎರಡು ಬಗೆಯಾಗಿ ಬೇರ್ಪಡಿಸುವದರ ಉಪಯೋಗವೇನು? ಇನ್ನು ಗಂಡಿನ ಈ ಹೊಸ ಹುಟ್ಟು ಹೆಣ್ಣಿನ ಬದುಕಿಗೆ ಅಪರಿಹಾರ್ಯವಾಗಿ ಅವಶ್ಯವಿತ್ತೇ? ಹಾಗೇನೂ ಕಂಡುಬರುವದಿಲ್ಲ. ನಿಸರ್ಗವೂ ಪ್ರಯೋಗಶಾಲೆಯೂ ಅದನ್ನು ಅಲ್ಲಗಳೆದಿವೆ. ಕೆಲವು ಪ್ರಾಣಿಜಾತಿಗಳಲ್ಲಿ ಗಂಡುಹೆಣ್ಣೆಂಬ ಭೇದವು ಪೂರ್ತಿಯಾಗಿ ವಿಕಾಸಗೊಂಡಿದ್ದರೂ, ಗಂಡಿನ ಯಾವ ನೆರವೂ ಇಲ್ಲದೆ, ಹೆಣ್ಣು ಸಂತತಿಯನ್ನುಂಟು ಮಾಡುವದು ಕಾಣುತ್ತದೆ. ಪ್ರಯೋಗಶಾಲೆಗಳಲ್ಲಿ ಈ ಬಗೆಯ ಪ್ರಯತ್ನಗಳು ಯಶಸ್ವಿಯಾಗಿವೆ. ಗಂಡಿನ ಪ್ರತ್ಯಕ್ಷ ಅವಶ್ಯಕತೆಯನ್ನೇ ಇಲ್ಲದಂತೆ ಮಾಡುವ ಪ್ರಯೋಗಗಳು ಸಫಲವಾಗಿವೆ. ಈ ವಿಧದ ರತಿರಹಿತ ಜನ್ಮಕ್ಕೆ 'ಪಾರ್ಥಿನೊ ಜನಿಸಿಸ್' ಎಂತ ಹೆಸರು. ಇವನ್ನು 'ಪಾರ್ಥ ಜನನ'ವೆನ್ನಬಹುದು. ಕುಂತಿಗೆ ಕರ್ಣ ಹುಟ್ಟಿದ್ದು ಗೊತ್ತಿಲ್ಲವೆ? ಕೌಮಾರ್ಯವನ್ನು ಕಳೆದುಕೊಳ್ಳದೇ ಕುಂತಿಯು ಕರ್ಣನನ್ನು ಪಡೆದಳು. ಕುಂತಿಯು ಪೃಥೆ. ಆಕೆಯಲ್ಲಿ ಈ ಜನನ 'ಪ್ರಾರ್ಥ ಜನನ'- ಕೌಮಾರ್ಯ ಭಂಗವಾಗದೇ 'ಅಯೋನಿ' ಜನನ! ಈ ಪ್ರಯೋಗದಿಂದ, ರಜೋ-ಬೀಜ ಸಂಯೋಗಕ್ಕಾಗಿಯೇ ಗಂಡು ಉಂಟಾಗಿಲ್ಲವೆಂಬ ಮಾತು ಸ್ಪಷ್ಟವಾಗುತ್ತದೆ.

ಹಾಗಾದರೆ ಗಂಡು ಹುಟ್ಟಿ ಬಂದದ್ದು ಏಕೆ?

ರಜೋಬೀಜಸಂಯೋಗ ಒಂದೇ ಗಂಡಿನ ಕಾರ್ಯವಿರಲಾರದು. ಆ ಸಂಯೋಗದಲ್ಲಿ ಎರಡು ವಿಷಮ ಜೀವಾಣುಗಳ ವಿಭಿನ್ನ ಗುಣಧರ್ಮಗಳು ಕೂಡಿಯೇ ಕಲೆಬೆರೆತು ಹೊಸ ಹುಟ್ಟಿಗೆ ಸತ್ವಸಂಪನ್ನತೆಯನ್ನು ಕೊಡುವದಕ್ಕೆ ಗಂಡು ಹೆಣ್ಣು ಹೀಗೆ ಬೇರೆಯಾಗಿ ಬೆಳೆಯುವದಿರಬಹುದು. ಒಂದೇ ದೇಹದಲ್ಲಿ ಗಂಡು ಹೆಣ್ಣು ಎರಡು ಬಗೆಯ ಜೀವಾಣು ಅಂಶಗಳು ಬೆಳೆಯುವದರ ಬದಲು ಎರಡು

ಬೇರೆಬೇರೆ ದೇಹಗಳಲ್ಲಿ ಅವು ಪ್ರತ್ಯೇಕವಾಗಿ ಬೆಳೆದು ಬಂದರೆ ಅವುಗಳ ಸತ್ವವೂ ಗುಣಧರ್ಮಗಳೂ ಒಳ್ಳೇ ಬಲಿಯುವವು. ಹೆಣ್ಣು ಗಂಡುಗಳ ಪೀಳಿಗೆಗಳು ನಡೆದು ಬಂದಂತೆ ಅವುಗಳಲ್ಲಿ ಆನುವಂಶಿಕ ಸಂಸ್ಕಾರಗಳ ಪುಟವು ಬೆಳೆದು ಅವುಗಳ ಶಕ್ತಿಸಾಮರ್ಥ್ಯಗಳು ಪುಷ್ಟಗೊಳ್ಳುವವು. ಇಂಥ ಆನುವಂಶಿಕ ಸಂಸ್ಕಾರಗಳಿಂದ ಪರಿಪುಷ್ಟವಾದ ರಜೋಬೀಜಗಳು ಸಂತತಿಯಲ್ಲಿ ಒಂದಾದರೆ ಆ ಸಂತತಿಯಲ್ಲಿ ಇಮ್ಮಡಿ ಸಂಸ್ಕಾರಗಳು ಇಳಿದು ಬರುವವು. ಇದರಿಂದ ಸಂತತಿಯ ಸತ್ವ ಸಂಪನ್ನತೆಯು ಹೆಚ್ಚುವದು ಶಕ್ಯವಾಗುವದು. ಹೀಗೆ ವಿಷಮ ಜೀವಾಣುಗಳು ಒಂದೇ ದೇಹದಲ್ಲಿ ಹುಟ್ಟಿ ಒಂದೆಡೆಗೆ ಕೂಡಿ ಕಟ್ಟಿದ ಹೊಸ ಅಣುಕೋಶಕ್ಕಿಂತ ಬೇರೆ ಬೇರೆ ದೇಹಗಳಲ್ಲಿ ಹುಟ್ಟಿಬಂದು ಕೂಡಿ ಕಟ್ಟಿದ ಕೋಶದ ಸತ್ವ ಹೆಚ್ಚಾಗುವದು. ಜೀವನಕ್ರಮದಲ್ಲಿ ಅದು ಹೆಚ್ಚು ಬದುಕಲು ತಕ್ಕದ್ದಾಗುವದು. ತನ್ನಲ್ಲಿಯ ರಜಸ್ಸಿನಲ್ಲಿಯೇ ತನ್ನಲ್ಲಿಯ ಬೀಜವನ್ನು ಕೂಡಿಸುವ ರೀತಿಯು ಹಿತಕರವಲ್ಲ. ಇದನ್ನು ಕಂಡುಕೊಂಡ ನಿಸರ್ಗವು ರಜಸ್ಸ್ವಿಯಾಗಿ ಬೇರೆ ರೇತಸ್ಸಿಗಾಗಿ (ಬೀಜಕ್ಕಾಗಿ) ಬೇರೆ ಹೀಗೆ ಲಿಂಗಭೇದವನ್ನು ಏಕೆ ಕಲ್ಪಿಸಿಕೊಂಡಿರಬಾರದು ? ಅಹುದು, ಲಿಂಗಭೇದದ ಕಲ್ಪನೆಯೇ ಅದಕ್ಕಾಗಿ ಆಗಿದೆ.

ಸಜಾತೀಯ-ಸ್ವಜಾತೀಯ-ಸಂಯೋಗವು ನಿಸರ್ಗಕ್ಕೆ ಮಾನ್ಯವಿಲ್ಲ. ಜೀವದ ಹುಟ್ಟಿನ ಬಗೆಯ ವಿಕಾಸವೇ ಈ ಬಗೆಯ ಸ್ವಯಂ-ಸಂಯೋಗಕ್ಕೆ ಹೆಚ್ಚು ಹೆಚ್ಚು ಪ್ರತಿಕೂಲವಾಗುವಂತೆ ನಡೆದು ಬಂದಿದೆ. ರಜಸ್ಸು ಮತ್ತು ರೇತಸ್ಸು ಆದಷ್ಟು ಭಿನ್ನ ಹುಟ್ಟಿನ (ಜಾತಿಯ)ದಿರಬೇಕು. ಒಂದೇ ಕುಲದ್ದಿರಬಾರದು-ಎಂಬ ಕಟ್ಟುನಿಟ್ಟು ನಿಸರ್ಗವೇ ರಕ್ತಗತವಾಗಿ ಜೀವಿಗೆ ಕಲಿಸಿದ ಪಾಠವಾಯಿತು. ಇದೇ ಮುಂದೆ. ನಮ್ಮ ಮಾನವ ಕುಲದಲ್ಲಿ ಸಾಮಾಜಿಕ ಸಂಪ್ರದಾಯಗಳ ಮೂಲಕವೂ ಮಾನಸಿಕ ಸಂಸ್ಕಾರಗಳ ಮೂಲಕವೂ, ಸೋದರ ಸಪಿಂಡರ ಅಥವಾ ಸಗೋತ್ರರ ವಿವಾಹದ ವಿರುದ್ಧ ಉಗ್ರ ನಿಷೇಧವಾಗಿ ನೆಲೆಗೊಂಡಿತು. ಬಂಧು-ಭಗಿನಿಯರ, ಬಂಧು ಬಳಗದವರ ಒಂದು ಬಣದವರ ಸಂಯೋಗವು ನಿಷಿದ್ಧವೆನಿಸಿಕೊಂಡಿತು.

ಯಾವ ತತ್ವದಿಂದ ಗಂಡು-ಹೆಣ್ಣು ರಜಸ್ಸು-ರೇತಸ್ಸುಗಳು ಪ್ರತ್ಯೇಕವಾಗಿ ಹುಟ್ಟಿ ಬೆಳೆದು ಬೆರೆಯುವಂತಾಯಿತೋ ಅದೇ ಸ್ವಯಂಸಂಯೋಗ ವಿರೋಧದ ತತ್ವವೇ ಮಾನವಸಮಾಜದಲ್ಲಿಯ ವಿವಾಹದ ವಿಧಿನಿಷೇಧಗಳ ರೂಪದಲ್ಲಿ ತನ್ನ ಸಮುನ್ನತವಾದ ವಿಕಾಸವನ್ನು ಪಡೆದುಕೊಂಡಿತು.

ಲಿಂಗಭೇದವು ಉಂಟಾಯಿತು. ಸೇಂದ್ರಿಯ ಸೃಷ್ಟಿಯು ಗಂಡು ಹೆಣ್ಣಾಗಿ ಎರಡು ರೂಪವಾಯಿತು. ಇದಕ್ಕೂ ಮುಂದಿನ ಪ್ರಶ್ನೆ ಈ ಬೇರೆಯಾದ ಎರಡು

ಜೀವನಾಂಗಗಳನ್ನು ಬೆರೆಯುವಂತೆ ಮಾಡುವದು ಹೇಗೆ? ರಜಸ್ಸು ರೇತಸ್ಸುಗಳ ಉತ್ತಮತೆಯ ವಿಕಾಸಕ್ಕಾಗಿ ಎರಡು ಭಿನ್ನ ಜಾತಿಗಳು ಉಂಟಾದವೇನೋ ನಿಜ. ಆದರೆ ಈ ದ್ವೈತದಿಂದಲೇ ಹೊಸ ಹುಟ್ಟಿನ ಅದ್ವೈತ ಸಾಧಿಸಿದ ಹೊರತು ಆ ರಜೋರೇತಸ್ಸುಗಳ ಸಂಯೋಗ ಸಾಧ್ಯವಾಗುವಂತಿಲ್ಲ; ಹೊಸ ಜೀವ ಸಂಭವಿಸುವಂತಿಲ್ಲ. ಆದ್ದರಿಂದ ಲಿಂಗಭೇದದಿಂದ ಬೇರೆಯಾದ ಸತ್ವಗಳನ್ನು ಜನನೇಂದ್ರಿಯಗಳ ಸಂಯೋಗದಿಂದ ಒಂದುಗೂಡಿಸುವ ಪ್ರೇರಣೆಯು ಅವಶ್ಯವಾಯಿತು. ಈ ಸಂಯೋಗವು ಹೇಗೋ ಯೋಗಾಯೋಗದಿಂದ ಕೂಡಿಬಂದರೆ ನಡೆಯುವಂತಿದ್ದಿಲ್ಲ. ವಂಶದ ವಿಸ್ತಾರ ಹೀಗೆ ಯೋಗಾಯೋಗವನ್ನು ಅವಲಂಬಿಸಿ ಆಗುವಂತಿದ್ದಿಲ್ಲ. ಅದು ಒರೇ ರಾಮಾಯಣದಲ್ಲಿ ಹೇಳಿದ ಕಾಷ್ಠ-ಕಾಷ್ಠಗಳ ಕೂಡುವಿಕೆಯ ಬಗೆಯ 'ಭೂತಸಮಾಗಮ'ವಾದರೆ ಉಪಯೋಗವಿದ್ದಿಲ್ಲ. ಈ ಸಮಾಗಮವು ಇಷ್ಟವಾಗಬೇಕು. ಅದಕ್ಕಾಗಿ ಸ್ವಾದಿಷ್ಟವೂ ಆಗಬೇಕು. ಅದು ಕೆಲಕಾಲ ಒಂದು ನಿಷ್ಠೆಯಾಗಿ ತಾಳಬೇಕು. ಅಂದರೆ ಮಾತ್ರ ಉತ್ಕ್ರಾಂತಿಯ ಉದ್ದಿಷ್ಟವು ಸಿದ್ಧವಾಗುವದು. ಆದ್ದರಿಂದ ಗಂಡು-ಹೆಣ್ಣುಗಳ ಸಹಕಾರವೂ, ಸಂತತಿಕರವಾದ ಸಮಾಗಮವೂ, ಸುರಕ್ಷಿತವಾಗಿ ಕೂಡಿಬರುವಂತೆ ಹೇಗೆ ಮಾಡಬೇಕೆಂಬುವದೇ ನಿಸರ್ಗದ ಮುಂದಿನ ಪ್ರಶ್ನೆಯಾಯಿತು.

ಈ ಪ್ರಶ್ನೆಯ ಬಗೆಹರಿಕೆಗೆ ಎರಡು ಸಂಗತಿಗಳ ಪೂರೈಕೆ ಅವಶ್ಯವಿತ್ತು. ಯಾವ ಸಂದರ್ಭದಲ್ಲಿ ಸಂಯೋಗ ಒದಗಿಬಂದರೂ, ಯಾವ ಬಗೆಯ ಸಂಯೋಗಕ್ಕೂ ಸಂದರ್ಭ ಒದಗಿ ಬಂದರೂ ರಜೋ-ಬೀಜಗಳು ಕೂಡಿ ಬೆರೆಯಲು ಧಾರಳವಾದ ಅನುಕೂಲತೆಯನ್ನು ಒದಗಿಸುವದು ಮೊದಲನೆಯ ಸಂಗತಿಯು. ಈ ವಿಷಯದಲ್ಲಿ ನಿಸರ್ಗದ ದುಂದುಗಾರಿಕೆಗೆ ಇತಿ ಇಲ್ಲ; ಮಿತಿ ಇಲ್ಲ. ರಜಸ್ಸು ರೇತಸ್ಸುಗಳ ರೂಪದಲ್ಲಿ ನಿಸರ್ಗವು ಜೀವದ್ರವ್ಯದ ಅತಿವ್ಯಯ ಅಪವ್ಯಯವನ್ನು ಮಾಡುವದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಈ ಅಪವ್ಯಯವು ಗಿಡಗಂಟಿಗಳ ಬಾಳಿನಲ್ಲಿ ಅತ್ಯಂತವಾಗಿ ಕಂಡುಬರುತ್ತದೆ. ಹೂ ಬಿಡುವ 'ಹಂಗಾಮಿ'ನಲ್ಲಿ ಪ್ರಮಾಣವಿಲ್ಲದಷ್ಟು ಪರಾಗವು ಚೆಲ್ಲಿ ಹಲವುಕಾಯಿಗಳಿಂದ ಕೆಲವು ಹಣ್ಣುಗಳುಂಟಾಗಿ ಹೊಸ ವನಸ್ಪತಿಯು ಸಂತತಿಗೆ ಅನುವಾಗುತ್ತದೆ.

ನಿಸರ್ಗಕ್ಕೆ ವ್ಯಕ್ತಿಯ ಪರಿವೆ ಇಲ್ಲ. ವಂಶವನ್ನು ಕಾಯ್ದುಕೊಳ್ಳುವದೊಂದೇ ಅದಕ್ಕೆ ಗೊತ್ತು. ಅದಕ್ಕಾಗಿ ಜೀವದ್ರವ್ಯದ ದುಂದು ಅಮಿತವಾಗಿ ಸಾಗುತ್ತದೆ. ಮನುಷ್ಯ ಜಾತಿಯಲ್ಲಿ ಕೂಡ ಈ ದುಂದು ಗಮನಕ್ಕೆ ಬರದಿದ್ದರೂ ಗಣಿತಕ್ಕೆ

ನಿಲುಕದಷ್ಟು ವಿಪುಲವಾಗಿ ಸಾಗುತ್ತದೆ. ಸಾಧಾರಣ ಒಂದು ಹೆಣ್ಣು ೭೨೦೦೦ ರಜಃಕೋಶಗಳನ್ನು (ಅಂಡಾಣುಗಳನ್ನು) ಉಂಟುಮಾಡುತ್ತಾಳೆ. ಸಾಧಾರಣ ಗಂಡು ಲಕ್ಷಗಟ್ಲೆ ರೇತಃಕೋಶಗಳನ್ನು (ಬೀಜಾಣುಗಳನ್ನು) ಉಂಟುಮಾಡುತ್ತಾನೆ. ಸಾಯುವಷ್ಟು ಸತ್ತರೂ ಉಳಿದವು ವಂಶವನ್ನು ವಿಸ್ತರಿಸಲೆಂದು ಈ ಕುರುಡು ಸಂತತಿಯು ಗಾಂಧಾರಿಯು ವರ! ಮುಂದುವರಿದ ದೇಶಗಳಲ್ಲಿ ಸಿರಿವಂತ ಮನೆತನಗಳಲ್ಲಿ ವಾತ್ಸಲ್ಯದ ವ್ಯವಹಾರಕ್ಕೆ ತಕ್ಕ ವಾತಾವರಣವಿದ್ದಲ್ಲಿ ಕೆಲವೇ ಹುಟ್ಟಿದರೂ ಅವು ಬಾಳಬಲ್ಲವು, ಬೆಳೆಯಬಲ್ಲವು. ಆದ್ದರಿಂದ ಕೆಲವೇ ಹುಟ್ಟುವವು.

## ಪ್ರೀತಿಯ ಸೋಪಾನವು

ಇರಲಿ, ಹೀಗೆ ಕುಲ-ಕುಟುಂಬವೆಂಬುವದು ಮೆಲ್ಲಗೆ ಬೆಳೆದು ನಿಂತು ಸಂತತಿಗೆ ಒಂದು ಹೊರಗಿನ ಗರ್ಭಕೋಶವಂತೆ ಪೋಷಕವಾಗುತ್ತದೆ. ಕುಟುಂಬದ ಕಕ್ಷೆಯಲ್ಲಿ ವಾತ್ಸಲ್ಯದ ಅಕ್ಷಯ ಕವಚದಲ್ಲಿ ಶಿಶುವಿನ ಸಂಗೋಪನವು ಇನ್ನೂ ಹೆಚ್ಚು ಕಾಲ ಸಾಗುತ್ತದೆ. ಗಂಡು ಹೆಣ್ಣಿನ ಪ್ರೀತಿ ಪಾಡಿಗೆ ಬಂದು, ತಂದೆತಾಯಿಯ ಅಕ್ಕರೆಯಾಗಿ, ಬಂದುಬಳಗವನ್ನೆಲ್ಲ ತೇಲಿಸಿಕೊಂಡು ಸಾಗುವ ಮಮತೆಯು ಮಧುರಸವಾಗಿ ಹರಿಯುತ್ತದೆ. ಈ ಮಮತೆಯ ಮಾಯೆಯಲ್ಲಿ ಮಗುವು ಮಾನವನಾಗಿ ಬೆಳೆಯುತ್ತಾನೆ. ವಾತ್ಸಲ್ಯವು ನಿಸರ್ಗದ ಮುಂದುಗಾರಿಕೆಯ ಹಾನಿಯಲ್ಲಿ ತುಂಬಿಕೊಡುತ್ತದೆ.

ಮಿಕ್ಕಪಶುಗಳಿಗಿಂತ ಮಾನವನಲ್ಲಿ ಕಿಶೋರಾವಸ್ಥೆಯು ಹೆಚ್ಚು ದೀರ್ಘಅವಧಿಯದಾಗಿದೆ. ಈ ಅವಧಿಯೆಲ್ಲ ಶಿಕ್ಷಣದ್ದೇ ಆಗಿದೆ. ಮಾನವರಲ್ಲಿಯೂ ಹಳ್ಳಿಗಿಂತ ಪಟ್ಟಣವಲ್ಲಿಯೂ, ಹಿಂದುಳಿದವರಿಗಿಂತ ಮುಂದರಿದ ಮಂದಿಯಲ್ಲಿಯೂ, ಅಶಿಕ್ಷಿತರಿಗಿಂತ ಸುಶಿಕ್ಷಿತರಲ್ಲಿಯೂ, ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಲ್ಲಿಯೂ ಈ ಕಿಶೋರಾವಸ್ಥೆಯ ಅವಧಿ ಇನ್ನೂ ಹೆಚ್ಚು. ಮನೆಯಲ್ಲಿ, ಶಾಲೆಯಲ್ಲಿ, ಹಾಯ್‌ಸ್ಕೂಲಿನಲ್ಲಿ ಕಾಲೇಜಿನಲ್ಲಿ, ವಿದೇಶದಲ್ಲಿ, ವಿಶೇಷ ವಿದ್ಯಾಭ್ಯಾಸದಲ್ಲಿ, ಸಂಶೋಧನೆ-ಅನುಭವಸಾಧನೆಯಲ್ಲಿ ಹೀಗೆ ಹಲವು ರೀತಿಗಳಲ್ಲಿ ಮಕ್ಕಳ ಶಿಕ್ಷಣ-ಸಂಸ್ಕಾರದ ಅವಧಿ ದೀರ್ಘವಾಗಿ ಬೆಳೆಯುತ್ತದೆ. ತಂದೆ ತಾಯಿಗಳ ಅಕ್ಕರೆ ಆರೈಕೆಗಳೇ ಈ ಅವಸ್ಥೆಯ ಸ್ವಾಸ್ಥ್ಯಕ್ಕೆ ಆಧಾರ. ನಾಗರಿಕತೆಯೇ ಈ ಶಿಕ್ಷಣ-ಸಂಸ್ಕಾರದ ಮಟ್ಟವನ್ನು ಅವಲಂಬಿಸಿ ಇರುತ್ತದೆ. ಆದ್ದರಿಂದ ಕಿಶೋರಾವಸ್ಥೆಯು

ಮುಂದುವರಿದಷ್ಟು ನಾಗರಿಕತೆಯು ಎಂದಿಗಿಂತಲೂ ಹೆಚ್ಚು ಉನ್ನತಿಯನ್ನು ಹೊಂದಲು ಅನುಕೂಲವಾಗುತ್ತದೆ.

ಲಿಂಗಭೇದ, ಮೈಥುನ, ಶಿಶುಸಂಗೋಪನೆ, ವಾತ್ಸಲ್ಯ, ಶಿಕ್ಷಣ, ಸಂಸ್ಕೃತಿ ಈ ಸೋಪಾನ ಪಂಕ್ತಿಯಲ್ಲಿ ಪ್ರೀತಿಯ ಮೆಟ್ಟಲು ಯಾವದು ? ಪ್ರಾಣಿಜೀವನದ ವಿಕಾಸಕ್ರಮದಮೇಲಿಂದ ಒಮ್ಮೆಲೇ ಬೀಸಾಗಿ ನೋಟವನ್ನು ಹಾಯಿಸಿದ್ದಾಯಿತು. ಈ ನೋಟವಲ್ಲಿ ಪ್ರೀತಿಯ ಸ್ಥಾನವನ್ನು ಏನೆಂದು ಕಂಡುಕೊಂಡಂತಾಯಿತು ? ಪೂರ್ಣದ ಬಯಕೆ ಮತ್ತು ಬೆನ್ನಟ್ಟುವಿಕೆಗೇ ಪ್ರೀತಿಯೆಂದು ಕರೆಯುತ್ತಾರೆ.' ಎಂದು ಪ್ಲೇಟೋನ ಸಂವಾದಗಳಲ್ಲಿ ಈಗ ಸಾವಿರ ವರ್ಷಗಳ ಹಿಂದೆಯೇ ಎರಿಸ್ಟೊ ಫೇನಿಸ್ ಎಂಬುವನು ಉದ್ಗರಿಸಿದ್ದುಂಟು, ಎರಡು ದೇಹಗಳು–ನಿಸರ್ಗ ದಿಂದಲೇ ವಿಂಗಡಿಸಲ್ಪಟ್ಟಂಥವು–ಮತ್ತೆ ಸಂಯೋಗಕ್ಕಾಗಿ ಸಂಪೂರ್ಣತೆಗಾಗಿ ಹಾತೊರೆಯುವವು. ಆದರೆ ಈ ವ್ಯಾಖ್ಯೆಯು ಆಧ್ಯಾತ್ಮಿಕವೆನಿಸುವದು; ರಹಸ್ಯ ಮಯವೆನಿಸುವದು. ಆದರೂ ಬಹಳೇ ಉದಾತ್ತವಾದ ವ್ಯಾಖ್ಯೆಯಾಗಿದೆ.

ಪ್ರೀತಿಯೆಂದರೇನು ? ಮೊಟ್ಟಮೊದಲು ಗಂಡಿನ ಕಾರ್ಯವು ಒಂದು ಪ್ರತ್ಯೇಕ ದೇಹದಲ್ಲಿ ವಿಶಿಷ್ಟತೆಯನ್ನು ಪಡೆದಾಗ, ಅಂಥ ಆದಿಕಾಲದ ಬು ನಾ ದಿ ಯ ಗಂಡುಗಳಲ್ಲಿ ತಮಗೆ ತಕ್ಕವರಾದ 'ಅರ್ಧಾಂಗಿ'ಗಳನ್ನು ಹುಡುಕಿಕೊಂಡು ಹೊಂದಿ ಕೊಂಡವರು ಕಡಿಮೆಯೇ. ಹೀಗೆ ಹವ್ಯಾಸಪಟ್ಟು, ತನ್ನ ಉಳಿದ 'ಅರ್ಧ– ಅಂಗ'ವನ್ನು ಹುಡುಕಿ ಹೊಂದಿಕೊಂಡವರೇ ಹೊಸ ಪೀಳಿಗೆಯ ಪಿತರಾದರು. 'ಹೊಸಹುಟ್ಟು ಬರುವದಿದೆ ಇನ್ನು ಮುಂದೆ; ಆಗೋಣ ಆ ಜಗದ ತಾಯಿತಂದೆ' ಎಂದು ತನಗಾಗಿ ಸಹಚಾರಿ ಹೆಣ್ಣನ್ನು ಹೇತುಪೂರ್ವಕವಾಗಿ ಪಡೆದುಕೊಳ್ಳುವ ಹಟ ಅಂದುಹುಟ್ಟಿಯೇ ಇದ್ದಿಲ್ಲ. ಹಾಗೆ ಹೇತು–ಹಟಗಳನ್ನು ಇಟ್ಟುಕೊಂಡವರೇ ವಂಶವೃದ್ಧಿಗೆ ಕಾರಣರಾದರು. ಆದ್ದರಿಂದ ಪ್ರತಿಯೊಂದು ಪೀಳಿಗೆಗೂ ಇಂಥ ತಮಗೆ ಸರಿಸಮವೂ ವಿರುದ್ಧವೂ ಆದ ಲಿಂಗಿಗಳೊಡನೆ, ಅರ್ಧಾಂಗಿಗಳೊಡನೆ ಬೆರೆತು ಪೂರ್ಣತೆಯನ್ನು ಸಾಧಿಸಿದ ವ್ಯಕ್ತಿಗಳೇ ನಲ್ಲ–ನಲ್ಲೆಯರಾದರು. ಇಂಥ ನಲ್ಲ ನಲ್ಲೆಯರೇ ಬಾಳಿನ ಸೆಲೆಯಲ್ಲಿ ಸಂಯೋಗದ ಉನ್ಮಾದಕ ಬಯಕೆಯನ್ನು ಪ್ರತಿ ಪೀ ಳಿ ಗೆ ಯ ಲ್ಲಿ ಯೂ ಬೆರೆಸುತ್ತ ಬಂದರು. ಹೀಗೆ ಪ್ರತಿ ಪೀಳಿಗೆಗೂ ಈ ಹೆಬ್ಬಯಕೆಯು. ಬೇಟದ ಹಸಿವು, ಪ್ರೀತಿಯ ಕಾಮನೆಯು, ಬೆಳೆಯುತ್ತ ಸಂಸ್ಕಾರವಶದಿಂದ ಬಲಿಯುತ್ತ ಬಂದಿತು ! ಮೂಲದ ಮೂಕಮಾನವನ ಮುಗ್ಧ ಅವಸ್ಥೆಯಲ್ಲಿ ಗಂಡು ಹೆಣ್ಣು ಕೂಡುವಂತೆ ಮಾಡಿದ ಯೋಗಾಯೋಗವು, ಮುಂದೆ

ಅಂಥ ಪ್ರಯೋಗಗಳಿಗೆ ಉತ್ತೇಜನೆಯಾಗಿ ಅಂಥ ಸಂಯೋಗಗಳು ತಲೆತಲಾಂತರ ಗಳಿಂದಲೂ ಕಾಮದ ಭೋಗವಾಗಿ ತಲೆದೋರಿ ಪ್ರೇಮದ ಯೋಗವಾಗಿ ಬಂದು ಆ ಪ್ರವೃತ್ತಿಯು ಬಾಳನ್ನೇ ಆಳುವ ಸಾವನ್ನೂಮೀರಿ ತಾಳುವ ಬಲಿಷ್ಠ ಭಾವಾವೇಶವಾಗಿ ನಿಂತಿತು !

ಪ್ರೀತಿಯ ಮೂಲವು ಹೀಗಿರಬಹುದು : ಸತ್ವ ಸಂಪನ್ನ ಸಂತತಿಯಾಗಿ ಪರಿಪಕ್ವವಾದ ರಜೋಬೀಜಗಳು; ಅವುಗಳ ಪ್ರತ್ಯೇಕ ಪರಿಪಾಕಕ್ಕಾಗಿ ಲಿಂಗ ಭೇದ; ಅವುಗಳ ಅವಶ್ಯ ಸಂಯೋಗಕ್ಕಾಗಿ ಮೈಥುನ; ಮೈಥುನದ ಅನಿವಾರ್ಯತೆಗಾಗಿ ಕಾಮ; ಕಾಮ–ಸಂತತಿಯ ಲಾಲನೆ ಪಾಲನೆಗಳಿಗೆ ಪ್ರೇರಣೆಯಾಗಿ ಪ್ರೀತಿ ಹೀಗೆ ನಡೆದುಬಂದಿರಬಹುದು ಪ್ರೀತಿಯ ಹಾದಿ. ಇದು 'ಬಹುದು ಗಿಹುದಿನ ಶಂಕೆ' ಯೆನಿಸಿದರೂ ಅಹುದೆನ್ನಲು ಯಾವ ಆತಂಕವೂ ಕಾಣುವದಿಲ್ಲ. ●

## ೩

## ಪ್ರೀತಿಯ ಶೀಲ

ಜೀವಾಣುವಿನಿಂದ ಮನುಷ್ಯ ಜಾತಿಯತನಕವೂ ಪ್ರೀತಿ ಹೆಜ್ಜೆಯಿಟ್ಟು ಬಂದ ಹಾದಿ ಯಲ್ಲಿ ಓಡಿಬಂದದ್ದಾಯಿತು. ಪೆಂಡೋರಿನಾ, ಎಂಡೋರಿನಾ, ಸಿನ್‌ಗೇಮ, ಬೊನೆಲ್ಲಾ, ಇವೆಲ್ಲ 'ಮೈಲುಗಲ್ಲುಗಳೊಡನೆ ಮಾತುಕತೆ'ಗಳನ್ನೂ ಆಡಿ ಮುಂದು ವರಿದಾಯಿತು. ಇನ್ನು ಮನುಷ್ಯಜಾತಿಯಲ್ಲಿ ಪ್ರೀತಿಯ ವಿಕಾಸ-ವಿಲಾಸಗಳು ಹೇಗೆ ಒದಗಿರುವವೆಂಬುದನ್ನು ನೋಡೋಣವೇ ?

ವ್ಯಕ್ತಿಯಲ್ಲಿ ಪ್ರೀತಿಯು ಬೆಳೆಯುವ ಬಗೆಯನ್ನು ಕಾಣುವಾ. 'ಬಾಲಃತಾವತ್ ಕ್ರೀಡಾಸಕ್ತಾಃ ತರುಣಃತಾವತ್ ತರುಣೀ ರಕ್ತಃ ವೃದ್ಧಃತಾವತ್ ಚಿಂತಾಮಗ್ನಃ...' ಎಂದು ಆದ್ಯ ಶಂಕರಾಚಾರ್ಯರೇನೋ ವರ್ಗೀಕರಣ ಮಾಡಿದ್ದಾರೆ-ವ್ಯಕ್ತಿಯ ವಿಕಾಸ ಕ್ರಮದಲ್ಲಿ. ಮೇಲೆ ಮತ್ತೆ ಪರೇಬ್ರಹ್ಮಣಿ ಕೋಪಿ ನ ಲಗ್ನಃ !' ಎಂದೂ ನೊಂದುಕೊಂಡಿದ್ದಾರೆ ! ಆದರೆ ಈ ವರ್ಗೀಕರಣವನ್ನು ಇಷ್ಟು ಕಟ್ಟು-ನಿಟ್ಟಾಗಿ ನಿಸರ್ಗವು ಕಾಯ್ದುಕೊಂಡಿಲ್ಲ. ಪರಬ್ರಹ್ಮನ ವಿಚಾರವೇನೂ ಇರಲಿ. ವೃದ್ಧರು ತರುಣರಂತೇ ತರುಣೀ ರಕ್ತರಾಗಿರುವದುಂಟು. ಲಗ್ನದ ಕುರಿತೇ ಚಿಂತಾಮಗ್ನ ರಾಗಿರುವದುಂಟು. ಬಾಲರ ಕ್ರೀಡೆಯೂ ತರುಣೀ ರಕ್ತವಿದ್ದಂತೆ ತೋರುವದೂ ಉಂಟು. ಚಿಕ್ಕಮಕ್ಕಳು ತಮ್ಮ ವಿರುದ್ಧ ಲಿಂಗದವರ ಕುರಿತು ಅರಿವನ್ನು ತೋರುತ್ತಾರೆ. ತಮ್ಮ ಪ್ರತಿಲಿಂಗಿಗಳ ಅಂಗಾಂಗಳ ವಿಷಯವಾಗಿ ಕೆಲವೊಂದು ಶಾರೀರಿಕ ಕುತೂಹಲವು ಮಕ್ಕಳಲ್ಲಿ ಕಾಣುತ್ತದೆ. ಹಿಂದುಳಿದ, ಬಡತನದಲ್ಲಿ ಬೆಳೆದ, ಬಟ್ಟೆಗೂ ಗತಿ ಇಲ್ಲದ ಮಕ್ಕಳಿಗಿಂತ ಮೇಲ್ವರ್ಗದ ಮಕ್ಕಳು ವಾತ್ಸಾಯನ ಸೂತ್ರಗಳ ಆರಂಭದ ಸಂಗತಿಯಾದ ಲಿಂಗ ಜಿಜ್ಞಾಸೆಯನ್ನು ಹೆಚ್ಚು ವ್ಯಕ್ತ ಪಡಿಸುತ್ತಾರೆ. ಉಡಿಗೆ-ತೊಡಿಗೆಗಳ ಮೂಲಕವು, ಶಿಷ್ಟಾಚಾರದ ಮೂಲಕವೂ, 'ಜನನೇಂದ್ರಿಯ'ಗಳು 'ಗುಹ್ಯೇಂದ್ರಿಯ'ಗಳಾಗುತ್ತವೆ. ಅವುಗಳ ಈ ಗುಪ್ತತೆಯು ರಹಸ್ಯಮಯವೆನಿಸುತ್ತದೆ. ಆ ಕುರಿತು ಪ್ರಶ್ನೆಗಳನ್ನು ಕೇಳಲಾಗುತ್ತದೆ. ತಂದೆ ತಾಯಿಗಳು ಅಂಥ ಪ್ರಶ್ನೆಗಳನ್ನು ಗದ್ದರಿಸಿಯೋ ಗಹಗಹಿಸಿ ನಕ್ಕೋ ಹಾರಿಸಿ ಬಿಡು ತ್ತಾರೆ. ಆಗ ಆ ಕುರಿತು ಕುತೂಹಲ ಇನ್ನಿಷ್ಟು ಪುರಿಗೊಳ್ಳುತ್ತದೆ. ಕದ್ದುಮುಚ್ಚಿ ತಿಳಿಗೇಡಿ ಸಂಗಾಡಿಗಳಿಂದ ಮಕ್ಕಳು ಮುಂದೆ ಈ 'ಗುಪ್ತ' ಇಂದ್ರಿಯಗಳ ವಿಷಯ ವಾಗಿ ವಿಕೃತವಾದ ವಿಚಿತ್ರವಾದ ಜ್ಞಾನ (?) ವನ್ನು ಪಡೆಯತೊಡಗುತ್ತಾರೆ. ಹೇಗೂ ಅವರ ಜಿಜ್ಞಾಸೆ ಕುಗ್ಗುವ ಬದಲು ಕೆರಳುತ್ತಲೇ ಹೋಗುವದು ಹೆಚ್ಚು.

ಇದರಿಂದ ಆಗುವದೇನೆಂದರೆ, ವಿರುದ್ಧ ಲಿಂಗಿಗಳ ಕುರಿತು ಒಂದು ಗಾಢವಾದ ಗೂಢತೆಯು–ಕೆಲಮಟ್ಟಿಗೆ ಮೂಢತೆಯುದೂ ಅಹುದು–ಪ್ರತಿಕ್ರಿಯೆಯು ರೂಢಿಗೊಳ್ಳುತ್ತದೆ. ಈ ಪ್ರತಿಕ್ರಿಯೆ ಒಂದು ಮಿಶ್ರ ಪ್ರವೃತ್ತಿ: ಲಜ್ಜೆ ಮತ್ತು ಆಕರ್ಷಣೆ ಇವೆರಡೂ ಕೂಡಿದ ವೃತ್ತಿ. ಆರಂಭದಲ್ಲಿ 'ಪೋರಿ–ಪೋರ'ರಲ್ಲಿ ಇದಕ್ಕೂ ಹೆಚ್ಚಿನದೇನೂ ಇರುವದಿಲ್ಲ. ಇಲ್ಲಿ 'ಪೋರಿ–ಪೋರ'ರೆಂದರೆ ಪ್ರಾಯಕ್ಕೆ ಬರುವ ಮೊದಲಿನ ವಯಸ್ಸಿನ ಮಕ್ಕಳೆಂದು ಎಣಿಸಿದೆ. ಹರೆಯಕ್ಕೆ ಹತ್ತಿದ ಹುಡುಗ–ಹುಡುಗಿಯರಲ್ಲಿ ಪ್ರೀತಿಯೆಂಬುವದು ನಾವು ನೀವು ತಿಳಿದಂಥದ್ದಲ್ಲ. ಕೇವಲ ಒಂದು ಅಸ್ಪಷ್ಟ ಆಕರ್ಷಣೆ; ಹತ್ತಿರವಿರಬೇಕೆಂಬ ಅನಿಸಿಕೆ ಮತ್ತು ಅದಕ್ಕೂ ಸ್ಪಷ್ಟವಾದ ಲಜ್ಜೆ; ಹತ್ತಿರ ಹೋದೊಡನೆ ದೂರ ಸರಿಯಬೇಕೆಂಬ ಅನಿಸಿಕೆ ! ಇವು ಒಳಗೊಂಡ ಒಂದು ಕೋಮಲವೂ ಚಂಚಲವೂ ಆದ ಭಾವನೆಯೊಂದೇ ಆಗಿನ ಅವಸ್ಥೆಯಲ್ಲಿ ತಲೆದೋರುತ್ತದೆ. ಇದಕ್ಕೂ ಬಲವಾದ ಪ್ರೀತಿ ಇದ್ದರೆ ಹರೆಯಕ್ಕೆ ಹಾಯದ ಹುಡುಗ ಹುಡುಗಿಯರಲ್ಲಿ ಪ್ರೀತಿಯ ಉದಯವಾಗಿದ್ದರೆ ಅದು ಭಕ್ತಿಯ ರೂಪದಲ್ಲಿ ಇರುತ್ತದೆ. ಭಕ್ತಿ ದೇವರದಲ್ಲ. ಹುಡುಗಿಗೆ ತಂದೆಯ ಕುರಿತೂ ಹುಡುಗನಿಗೆ ತಾಯಿಯ ಕುರಿತೂ ಬಲವಾದ ಪ್ರೀತಿಯು ನೆಲೆಗೊಂಡಿದ್ದು ಕಂಡುಬರುತ್ತದೆ.

## ಇಡಿಪಸ್‌ನ ಇಡಾಪೀಡೆ ?

ಇಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬೇಕಾಗಿದೆ. ಆಧುನಿಕ ಮನೋವಿಜ್ಞಾನದಲ್ಲಿ 'ಇಡಿಪಸ್ ಕಾಂಪ್ಲೆಕ್ಸ' ಎಂಬುದೊಂದು ಮನೋಗಂಡದ ತತ್ವಕ್ಕೆ ಅವಾಂತರ ಮಹತ್ವ ತಂದುಕೊಡಲಾಗಿದೆ. ಅವಾಂತರ ಮಹತ್ವವೆನ್ನುವದೇಕೆಂದರೆ ಈ ತತ್ವದ ಸ್ವೀಕಾರವು ಬಹಳೇ ತಿರಸ್ಕಾರ ಧಿಃಕಾರಗಳ ಕೋಲಾಹಲಕ್ಕೆ ಕಾರಣವಾಗಿದೆ. ಈ ಕಾಂಪ್ಲೆಕ್ಸಿನ ತತ್ವವೇನೆಂದರೆ, ಪ್ರತಿಯೊಂದು ಹುಡುಗನಲ್ಲಿ ತಂದೆಯ ಕುರಿತೂ ಪ್ರತಿಯೊಂದು ಹುಡುಗಿಯಲ್ಲಿ ತಾಯಿಯ ಕುರಿತೂ ಒಂದುಬಗೆಯ ತಿರಸ್ಕಾರವು ಒಳಒಳಗೇ ಬೆಳೆದಿರುತ್ತದೆ. ಇಷ್ಟೇ ಅಲ್ಲ; ಹುಡುಗನು 'ಮಾತೃಗಾಮಿ' ಮತ್ತು ಹುಡುಗಿಯು 'ಪಿತೃಗಾಮಿ' ಪ್ರವೃತ್ತಿಯನ್ನು ಅರಿವಿನ ಆಳದಲ್ಲಿ ಒಳಮನಸ್ಸಿನ ತಳದಲ್ಲಿ ಹುದುಗಿಕೊಂಡಿರುತ್ತಾರೆ. ಅವರಿಗೆ ಗೊತ್ತಿಲ್ಲದೆ ಈ ಪ್ರವೃತ್ತಿ ಕೆಲಸ ಮಾಡುತ್ತಿರುತ್ತದೆ. ಎಂದು ಮುಂತಾದ್ದಾಗಿ ಈ ತತ್ವದ ವ್ಯಾಖ್ಯಾನವಿದೆ. ಇದರ ವಿಶೇಷ ವಿಸ್ತಾರವು ಈ ಹೊತ್ತಿಗೆಯ ಹದ್ದಿನ ಹೊರಗೆ ಹೋಗುವಂತಿದೆ.

ಆದರೆ ಈ ತತ್ವಕ್ಕೆ ಅವಾಸ್ತವ ಮಹತ್ವ ಕೊಡುವವರಲ್ಲಿ ಹುರುಳಿಲ್ಲ. ಗ್ರೀಕ

ಪುರಾಣವಲ್ಲಿ ಬಂದ ಇಡಿಪಸ್‌ನ ಕಥೆಯು ಏನೇ ಇರಲಿ. ಪ್ರತಿಯೊಬ್ಬ ಹುಡುಗನು ತಂದೆಯನ್ನು ಕೊಂದು ತಾಯಿಯೊಡನೆ ಕಾಮ ಸಂಬಂಧವನ್ನು ಸ್ಥಾಪಿಸಬೇಕೆಂದು ಹವಣಿಸುವದು; ಅದೂ ಅವನಿಗೆ ಗೊತ್ತಿಲ್ಲದೇ ಹವಣಿಸುವನು–ಎಂಬ ಮಾತು ಹಾಸ್ಯಾಸ್ಪದವೆನಿಸುವದು–ಶಂಕಾಸ್ಪದವಂತೂ ಅನಿಸದೇ ಇರುವದಿಲ್ಲ.

ಏಕೆಂದರೆ ಈ ಪ್ರವೃತ್ತಿಯು ಅಂತಹ 'ಗಂಡ'ವೆನಿಸಿಕೊಳ್ಳುವಂಥ ವಿಕಾರವೇನೂ ಅಲ್ಲ. 'ಗಂಡ'ದ ಲಕ್ಷಣವೇನು ? ಅದು ಅರಿವಿನ ಆಳದಲ್ಲಿ ಅಡಗಿರುತ್ತದೆ. ರೋಗಿಗೆ–ಅಂದರೆ ವಿಕಾರಗೆದ್ದ ವ್ಯಕ್ತಿಗೆ–ಅದು ಗೊತ್ತೇ ಇರುವದಿಲ್ಲ. ಅವನ ಅಜಾಗೃತ ಒಳಮನಸ್ಸಿನಲ್ಲಿ ಅದು–ಆ ವಿಕೃತಿಯು–ಕೆಲಸ ಮಾಡುತ್ತಿರುತ್ತದೆ. ಇದು ಒಂದು ಮುಖ್ಯ ಲಕ್ಷಣ. ಹಾಗೆಯೇ 'ಗಂಡ'ವು ಅಸಾಮಾನ್ಯವಿರುತ್ತದೆ. ಅದು ಪ್ರಕೃತಿಗೆ ಸಾಧಾರಣವಲ್ಲ. ಸಮಸ್ಥಿತಿಗೆ ಮೀರಿದ್ದು; ಸಮತೂಕ ತಪ್ಪಿದ್ದು; ಆದ್ದರಿಂದ ಒಂದು ಅಪವಾದ ಸ್ವರೂಪವಾಗಿರುತ್ತದೆ. ವಿಲಕ್ಷಣವಾಗಿರುತ್ತದೆ. ಆದರೆ ನಾವು ಹೇಳಲು ಹೊರಟ ಸಂಗತಿಯು ಇವೆರಡೂ ಲಕ್ಷಣ (ವೈಲಕ್ಷಣ್ಯ) ಗಳಿಂದ ಹೊರತಾದದ್ದು.

ಹರೆಯ ಈಚೆಯ ಹುಡುಗ ತಾಯಿಯಲ್ಲಿಯೂ ಹುಡುಗಿ ತಂದೆಯಲ್ಲಿಯೂ ವಿಶೇಷ ಪ್ರೀತಿಯನ್ನು ಇಡುವದು ಅಜಾಗ್ರತ ವ್ಯಾಪಾರವಲ್ಲ. ಅಂತರಂಗದ–ಆ ಹುಡುಗ ಹುಡುಗಿಯರಿಗೆ ಅರಿವೇ ಇಲ್ಲದ–ವ್ಯವಹಾರವಲ್ಲ. ತಾಯಿಗಿಂತ ತಂದೆಯೂ, ತಂದೆಗಿಂತ ತಾಯಿಯೂ ತನಗೆ ಅದೇಕೋ ಹೆಚ್ಚು ಮೆಚ್ಚಿಗೆ ಯೆಂಬುದನ್ನು ಹುಡುಗಿ ಹುಡುಗರು ಸಾಮಾನ್ಯವಾಗಿ ಬಲ್ಲರು. ಹಾಗೆಯೇ ಈ ಮೆಚ್ಚಿಗೆ ಮಮತ್ವದ ತತ್ವ ಸಾಮಾನ್ಯವಾಗಿ ಎಲ್ಲ ಮಕ್ಕಳಲ್ಲಿಯೂ ವ್ಯಕ್ತವಾಗುವ ದೆಂಬುದನ್ನೂ ಬಲ್ಲವರೆಲ್ಲ ಬಲ್ಲರು. ಆದ್ದರಿಂದ ಇದೊಂದು ವಿಲಕ್ಷಣ ವಿಕೃತಿಯೆಂದು ನೊಂದು ನಾಚಬೇಕಾದುದೇನೂ ಇಲ್ಲ.

ಇದಕ್ಕೆ ವಿರುದ್ಧವಾಗಿದ್ದರೇನೇ ಅದು ವಿಕೃತಿಯೆಂದು ಹೇಳಬಹುದು. ತಂದೆಯ ಕುರಿತು ಮಗನ ಮಿತಿಮೀರಿದ ಮೆಚ್ಚಿಗೆ, ತಾಯಿಯ ಕುರಿತು ಮಗಳ ಮಿಗಿಲಾದ ಮಮತೆ–ಇವೇ ಗಾಬರಿಗೆ ಕಾರಣವಾಗಬೇಕಾದ ಸಂಗತಿಗಳು 'ಇಡಿಪಸ್'ನ ಕತೆಗೇ ಮುದ್ದಾಗುವಂಥ ಇನ್ನೊಂದು ಕತೆ ನಮ್ಮ ಪುರಾಣಗಳಲ್ಲಿ ಬಂದಿದೆ, ಅದು ಇಂಥಹದ ಮೀರಿದ ವಿಕೃತ ಪಿತೃಭಕ್ತಿಯ ಕಥೆ. ಭಾರ್ಗವ ರಾಮನ 'ಗಂಡು ಗೊಡಲಿಯು' (?) ತಾಯಿಯ ತಲೆಯನ್ನು ತುಂಡರಿಸಿದ ಗಂಡುಸುತನಕ್ಕೆ ಕಲಂಕ ತಂದ ಕಥೆಯು. ಭಾರ್ಗವ ರಾಮನನ್ನು ಅಂಥ ಆಜ್ಞಾಧಾರಕತೆಯ ಉಗ್ರ

ಉದಾಹರಣೆಯೆಂದು ನಮ್ಮ ಕವಿಕುಲಗುರುವೂ ಕವಿಕುಲದ ಇತರ ಭಾವಿಕರೂ ಹೊಗಳಿರಬಹುದು. ಆದರೆ ನಮ್ಮ ಸಾಮಾನ್ಯ ಜನ ಅವನನ್ನು ತಲೆತಿರುಕನೆಂತಲೇ ಭಾವಿಸುತ್ತ ಬಂದಿದೆ ಇರಲಿ.

## ಪ್ರೀತಿಯ ದಾರಿಗೆ ಕೈ ದೀಪ

ಮಗಳು ತಂದೆಯನ್ನೂ ಮಗನು ತಾಯಿಯನ್ನೂ ಹೆಚ್ಚಿನ ಮಮತೆಯಿಂದ ನೋಡುವದು ಸ್ವಾಭಾವಿಕವು. ಇದರಲ್ಲಿ ನಿಸರ್ಗದ ಆಳವಾದ ಉದ್ದೇಶವೂ ಇರಬಹುದು. ಮಕ್ಕಳನ್ನು ಮುಂದೆ ಉಚಿತ ಸಮಯಕ್ಕೆ ಗಂಡನ್ನೋ ಹೆಣ್ಣನ್ನೋ ಪ್ರೀತ್ಯಾದರದಿಂದ ನೋಡುವಂತೆ ಬಾಲ್ಯದಿಂದಲೇ ಸಂಸ್ಕಾರಕೊಟ್ಟು ಅಣಿಗೊಳಿಸ ಲಿಕ್ಕೆಂದೇ ಈ ಬಗೆಯ ತಂದೆತಾಯಿಗಳ ಕುರಿತು ವಿರುದ್ಧ ಆಕರ್ಷಣವು ಮಕ್ಕಳಲ್ಲಿ ಮೂಡಿ ಬಂದಿರಬಹುದು. ಜೀವನದ ವಿಕಾಸದಲ್ಲಿ ಈ ವಿರುದ್ಧ ಆಕರ್ಷಣವೇ ಜೀವಾಳದ ಮಹತ್ವದ್ದು. ಹೊಸ ಹರೆಯಲ್ಲಿ ಹೊಸದೊಂದು ಹೆಣ್ಣನ್ನು ಒಮ್ಮೆಲೇ ತಬ್ಬಿಬ್ಬಾಗಿ ನೋಡಿ ನೆಚ್ಚಿ ತಿಳಿವಳಿಕೆಯ ತೂಕತಪ್ಪಿ ತೊಳಲಾಡುವದಕ್ಕಿಂತ ಆ ಮೊದಲು ಹುಡುಗನು ತಾಯಿಯನ್ನು ಕಂಡುಕೊಂಡ ಮಮತೆಯಿಂದಲೇ ಮುಂದೆ ತನಗೆ ತಕ್ಕುದಾದ ಹೆಣ್ಣನ್ನು ಆಯ್ದುಕೊಳ್ಳಲು ಕಾಯ್ದುಕೊಳ್ಳಲೂ ಕಲಿಯುವನು. ಎಷ್ಟೋ ಹುಡುಗರು ತಮ್ಮ ತಾಯಿಯಿಂದಲೇ ಹೆಣ್ಣಿನ ಮಾದರಿಯನ್ನು ಕಲ್ಪಿಸಿ ಕೊಳ್ಳುವದುಂಟು. ಹೆಣ್ಣಿನ-ಹೆಂಡತಿಯ-ಆಯ್ಕೆಗೆ ಈ ತಾಯಿಂದ ಪಡೆದ ಪ್ರೀತಿಯ ಬೆಳಕು ಒಂದು ಕೈದೀಪವಾಗುವದುಂಟು.

ಇದಕ್ಕೆ ಇನ್ನೊಂದು ಸಂಗತಿಯ ಪುಷ್ಟಿದೊರೆಯುವಂತಿದೆ. ನಮ್ಮ ಪೂರ್ವಿಕರು ಪುರಾಣಾಂತರದಲ್ಲಿ ಮಕ್ಕಳನ್ನು ಕರೆಯುವ ರೀತಿಯಲ್ಲಿ ಈ ಪುಷ್ಟಿ ದೊರೆಯು ವಂತಿದೆ. ಸಾಮಾನ್ಯವಾಗಿ-ಅಂಕಿತನಾಮಗಳ ಹೊರತಾಗಿ ಇತರ ಇಟ್ಟ ಹೆಸರು ಗಳನ್ನು ಉಳಿದು-ಗಂಡುಮಕ್ಕಳನ್ನು ಇಂಥ ತಾಯಿಯ ಮಗುವೆಂದೂ. ಹೆಣ್ಣು ಮಕ್ಕಳನ್ನು ಇಂಥ ತಂದೆಯಮಗಳೆಂದೂ ಕರೆಯುವದನ್ನು ಕಾಣುತ್ತೇವೆ. ಕೌಂತೇಯ, ರಾಧೇಯ, ಅಂಜನೇಯ, ಪಾರ್ಥ, ಕೌಸಲ್ಯಾನಂದವರ್ಧನ (ರಾಮ), ಸೌಮಿತ್ರಿ, ಜಾಬಾಲಿ ಎಂದು ಮುಂತಾಗಿಯೂ, ಜಾನಕಿ, ದ್ರೌಪದೀ, ಪಾರ್ವತಿ, ಎಂದು ಮುಂತಾಗಿಯೂ ಗಂಡು ಮತ್ತು ಹೆಣ್ಣು ಹೆಸರುಗಳು ಬರುತ್ತವೆ. ಇಂಥ ತಾಯಿಯ ಮಗನೆಂದೆನಿಸಿಕೊಳ್ಳುವದೇ ಹುಡುಗನಿಗೆ ಹೆಮ್ಮೆ! ಇಂಥ ತಂದೆಯ ಮಗಳೆಂದೆನಿಸಿಕೊಳ್ಳುವದೇ ಹುಡುಗಿಗೆ ಹಿಗ್ಗು-ಎಂದು ಅಂದಿನ ಮರ್ಮಜ್ಞರಾದ ಕವಿಗಳು ತಿಳಿದಿರಬಹುದೇ ? ತಂದೆಯ ಶುಶ್ರೂಷೆಗಾಗಿ ಮಗಳು

ಆಜನ್ಮ ಅವಿವಾಹಿತಳಾಗಿ ಹತ್ತಿರವೇ ಉಳಿದದ್ದು ಇಂದು–ಹಿಂದಿನ ಇತಿಹಾಸದಲ್ಲಿ ವ್ಯಕ್ತವಿದೆ. ರೂಪವತಿಯಾದ ಜಹಾನಾರಾ ಶಾಹಜಹಾನನ ಸೇವೆಗಾಗಿಯೇ ಬಾಳಿದಳು. ಮಣಿಬೇನ್‌ಳು ಸರದಾರ ಪಟೇಲರ ಪರಿಚರ್ಯದಲ್ಲಿಯೇ ಪರಾಯಣಳಾಗಿರುವಳು. ಇಂಥ ಬಿಡಿಯಾದ ಉದಾಹರಣೆಗಳಿಂದಲೇ ಒಂದು ಸಿದ್ಧಾಂತ ಕಟ್ಟುವಂತಿಲ್ಲ; ನಿಜ. ಈ ಬಗೆಯ ಉದಾಹರಣೆಗಳಿಗೆ ಹಲವು ಆಗಂತುಕ ನಿಮಿತ್ತಗಳು ಇರಬಹುದು; ಅದೂ ನಿಜ. ಆದರೆ ತಂದೆಗಳಿಗಾಗಿ ತ್ಯಾಗಮಾಡಲು ಸಿದ್ಧರಾಗುವಷ್ಟು ಹುಡುಗಿಯರು ಪಿತೃಭಕ್ತಿಯುಳ್ಳವರಿರುತ್ತಾರೆಂಬ ಸಿದ್ಧಾಂತಕ್ಕೆ ಈ ಬಿಡಿ ಉದಾಹರಣೆಗಳು ನಿದರ್ಶನಗಳು. ಹುಲ್ಲು ಕಡ್ಡಿಗಳೇ ಗಾಳಿಯನ್ನು ಉಂಟು ಮಾಡುವದಿಲ್ಲ. ಆದರೆ ಗಾಳಿ ಯಾವ ನಿಟ್ಟಿಗೆ ಬೀಸುವದೆಂಬುದನ್ನು ಸೂಚಿಸಲು ಹುಲ್ಲು ಕಡ್ಡಿಗಳೂ ಸಾಕು.

ಇನ್ನು ಹುಡುಗರು ತಂದೆಯರಿಗಾಗಿ ತ್ಯಾಗಮಾಡುವದಿಲ್ಲವೆಂತಲೂ ಅಲ್ಲ. ಅಂಥ ಅದ್ಭುತ ತ್ಯಾಗಮಾಡಿ ಅಮರರಾದ ಪಿತೃಭಕ್ತ ಪುತ್ರರು ಪುರಾಣೇತಿಹಾಸಗಳಲ್ಲಿ ಇದ್ದಾರೆ. ಭೀಷ್ಮ–ರಾಮರು ಅಂಥವರು. ಆದರೆ ಇಲ್ಲಿ ಮರೆಯಲಾಗದ ಮಾತೆಂದರೆ ಇವರ ಈ ತ್ಯಾಗವು ಅದ್ಭುತವೇ ಅನಿಸಿತು! ಭೀಷ್ಮವೇ ಅನಿಸಿತು! ಈ ಉದಾಹರಣೆಗಳು ಸಾಮಾನ್ಯ ನಿಯಮವನ್ನೇ ಸಿದ್ಧಮಾಡುವ ಅಪವಾದಗಳಂತಿವೆ. ಅಂಥ ತ್ಯಾಗ ಸಹಜವಲ್ಲದುದರಿಂದಲೇ ಅದು ಆಶ್ಚರ್ಯವೆನಿಸಿತು; ಅಲೌಕಿಕವಾಯಿತು. ಅಂದರೆ ಇಂಥ ಕೆಲವು ಉಜ್ವಲ ಉದಾಹರಣೆಗಳಿಂದ ನಮ್ಮ ಮುಖ್ಯ ಸಿದ್ಧಾಂತಕ್ಕೆ ಬಾಧೆಬರುವದಿಲ್ಲ. ಗಂಡುಮಕ್ಕಳು ತಾಯಿಯಲ್ಲಿಯೂ ಹೆಣ್ಣುಮಕ್ಕಳು ತಂದೆಯಲ್ಲಿಯೂ ಹೆಚ್ಚು ನೆಚ್ಚು–ಮೆಚ್ಚನ್ನು ಇಡುವರೆಂಬುದೇ ಆ ಸಿದ್ಧಾಂತವು. ಮುಂದೆ ತಾರುಣ್ಯದಲ್ಲಿ ಉದಯಿಸುವ ಪ್ರಶಸ್ತವಾದ ಸ್ವಾಸ್ಥ್ಯಪೂರ್ಣವಾದ ಸ್ತ್ರೀ–ಪುರುಷ ಪ್ರೀತಿಯ ಒಂದು ನಿರುಪದ್ರವಿಯಾದ ಮತ್ತು ನಿಷ್ಕಲ್ಮಷವಾದ ಸಿದ್ಧತೆಯೆಂದು, ಪೂರ್ವ ಸಂಸ್ಕಾರವೆಂದು, ಈ ಮಾತೃಭಕ್ತಿ ಮತ್ತು ಪಿತೃಭಕ್ತಿಗಳು ಬಾಲ್ಯದಲ್ಲಿ ಬೆಳೆದು ಬರುತ್ತವೆ. ಪ್ರೀತಿಯೆಂಬ ಪರಮೇಶ್ವರನೂ ಪಿತೃಭಕ್ತಿಯ ರಾಮಾವತಾರವನ್ನು ಮೊದಲು ತಾಳಿ ಪ್ರಣಯ ಶೃಂಗಾರದ ಕೃಷ್ಣಾವತಾರವನ್ನು ಅನಂತರ ತಳೆಯುವನು! ಇರಲಿ.!

'ಗಂಡ'ದ 'ಗುಂಡಿ'ಯಲ್ಲಿ ನಾವು ಬಹಳ ಹೊತ್ತು ಈಜಿದಂತಾಯಿತು. ಇನ್ನು ವಿಷಯದ ಆ ದಂಡೆಗೆ ಹತ್ತೋಣ!

### ಪ್ರಣಯದ ಪ್ರಾರಂಭ : ಲೈಂಗಿಕ ಲಕ್ಷಣಗಳು

ಪ್ರೀತಿಯ ಸ್ಪಷ್ಟವೂ ಪರಿಪುಷ್ಟವೂ ಆದ ರೂಪವು ವ್ಯಕ್ತವಾಗುವದು ಎಂದು ?

'ಋತು'ವಿನಿಂದ. ಋತುವೆಂದರೆ ಯೌವನದ ಆರಂಭ. ಆ ಆರಂಭದೊಡನೆ ಪ್ರೀತಿಯು ಮುಕ್ತಕಂಠದಿಂದ ಹಾಡಲು ಆರಂಭಿಸುತ್ತದೆ. 'ಋತು' ಎಂಬ ಶಬ್ದವು ನಮ್ಮ ಪರಿಭಾಷೆಯಲ್ಲಿ ವಿಶೇಷವಾಗಿ ಸ್ತ್ರೀಯರ ಶರೀರವಿಕಾಸದ ಧರ್ಮವೆನಿಸಿದೆ. 'ಸೀತೆ ಋತುಮತಿ'ಯಾದಳೆಂದು ಇಡೀ ಅಧ್ಯಾಯತುಂಬ ಹೇಸಿಗೆ ಹುಟ್ಟಿಸುವಷ್ಟು ವಿವರಗಳಿಂದ ವರ್ಣನೆ ಸಾಗಿಸಿದ ಲಕ್ಷ್ಮೀಶನು ರಾಮನು 'ಋತುಮಂತ' ನಾದನೆಂದು ಅನ್ನುವದಿಲ್ಲ. ಸ್ತ್ರೀಯ ಶರೀರದ ವಿಕಾಸವು ಒಂದು ಮಟ್ಟಕ್ಕೆ ಬಂದೊಡನೆ, ಮಾಸಿಕ ಸ್ರಾವವು–ಆರಂಭವಾಗಿ ಅದು ವಿಶಿಷ್ಟ ವಯೋಮಾನಕ್ಕೆ ತಡೆಯುವದರಿಂದ ಈ ಸ್ರಾವದ ಅವಧಿಯೇ ಋತುವೆನಿಸಿಕೊಂಡು ಅದನ್ನು ಪಡೆದ ಸ್ತ್ರೀಯು 'ಋತುಮತಿ'ಯೆನಿಸಿಕೊಳ್ಳುವಳು. ಆದರೆ ಇದೇ ವಿಧವಾದ ಋತುವು ಪುರುಷನಲ್ಲಿಯೂ ಆರಂಭವಾಗುವದು. ಸ್ತ್ರೀಯಲ್ಲಿ ರಜಸ್ಸಿನ ಉತ್ಪತ್ತಿಯು ಹೇಗೋ ಪುರುಷನಲ್ಲಿ ರೇತಸ್ಸಿನ ಉತ್ಪತ್ತಿಯು ಆರಂಭವಾದಂದಿನಿಂದ 'ಋತು'ವಿಗೆ ಮೊದಲಾಗುವದೆನ್ನಬಹುದು. ಈ ರಜಸ್ಸು–ರೇತಸ್ಸುಗಳ ಉತ್ಪಾದನೆಯ ಮೂಲಕವೇ ಸ್ತ್ರೀತ್ವವೂ ಪುರುಷತ್ವವೂ ಪ್ರಾರಂಭವಾಗುತ್ತದೆ. ಪುರುಷರಲ್ಲಿಯೂ ಈ ರೇತಸ್ಸಿನ ಸಂಗ್ರಹದಲ್ಲಿ, ಸ್ತ್ರೀಯರ ಮಾಸಿಕ ಋತುವಿನಂತೆ, ಒಂದು ವಿಧವಾದ ಕ್ರಮಬದ್ಧತೆಯು ಕಂಡು ಬರುತ್ತದೆಂದು ಹ್ಯಾವ್ಲಕ್ ಎಲಿಸ್ ಎಂಬ ವಿಶ್ವ ವಿಜ್ಞಾತ ಲಿಂಗಶಾಸ್ತ್ರಜ್ಞನು ಸಾರಿದ್ದಾನೆ. ಅಂದರೆ ಪುರುಷನೂ 'ಋತುಮಂತ' ನಾಗುವನೆಂದು ಹೇಳಿದರೆ ನಗಬೇಕಾಗಿಲ್ಲ.

ಈ ಋತುಕಾಲದ ಹೊಸದಾಗಿ ಉದಿಸಿದ ರತಿಕಾಲದ–ಲಕ್ಷಣಗಳೇನು ? ಈ ಕಾಲಕ್ಕೆ ಪ್ರಾಯದ ಪ್ರಾರಂಭಕ್ಕೆ ಇಂಗ್ಲಿಷ ಪರಿಭಾಷೆ 'ಪ್ಯುಬರ್ಟಿ' ಎಂದು. ಈ ಶಬ್ದದ ಅಕ್ಷರಶಃ ಅರ್ಥ ರೋಮಗಳ ಕಾಲವೆಂತ. ಈ ಕಾಲದಲ್ಲಿ ಒಮ್ಮೆಲೇ ಶರೀರದ ಬೇರೆ ಬೇರೆ ಭಾಗಗಳಲ್ಲಿ–ಎದೆಯ ಮೇಲೆ, ಕಂಕುಳದಲ್ಲಿ ಜನನೇಂದ್ರಿಯಗಳ ಸುತ್ತಲೂ–ಎಳೆಗೂದಲುಗಳು ಬೆಳೆದು ಬರುತ್ತವೆ. ಇದರೊಂದಿಗೆ ಪುರುಷರಲ್ಲಿ ಧ್ವನಿಯು ಗಂಭೀರವಾಗುತ್ತದೆ. ಹೆಣ್ಣಿನಲ್ಲಿ ಈ ಹೊಸ ಹರೆಯು.–'ಏರುಜವ್ವನ'ದ ಪರಿಕೆಯು–ಸೌಕುಮಾರ್ಯವನ್ನೂ ಮಾಧುರ್ಯವನ್ನೂ ತುಂಬಿತರುತ್ತದೆ. ದೇಹದ ಅಂಗಾಂಗಗಳಲ್ಲಿ ತುಂಬಿದ ಕಳೆಯೂ ತುಳಕತೊಡಗುತ್ತದೆ. 'ತನ್ವಿ'ಯು 'ನಿತಂಬಿನಿ'ಯೂ 'ಕರಭೋರು'ವೂ 'ಸುಸ್ತನಿ'ಯೂ ಆಗಿ ರೂಪುಗೊಳ್ಳುತ್ತಾಳೆ. ದೇಹದ ಬಾಹ್ಯ ರೇಷೆಗಳು ಮೃದುವಾಗಿ ಪರಿಪುಷ್ಟವಾಗಿ ಗಂಡು–ಕಣ್ಣಿಗೆ ಆಕರ್ಷಕವಾಗುತ್ತವೆ. ನಿತಂಬವು ಆಯತವಾಗುತ್ತದೆ. ಮುಂದೆ ತಾಯ್ತನಕ್ಕೆ–ಗರ್ಭಧಾರಣೆಗೆ ಇದು ಅನುಕೂಲವಾಗುವದು. ಎದೆಯ ಗ್ರಂಥಿಗಳು ಪುಷ್ಟವಾಗಿ ಬೆಳೆದು ತುಂಬಿಬರುವವು. ಇದು ಮುಂದೆ ಮಕ್ಕಳಿಗೆ ಹಾಲುಣಿಸಲೆಂದಾಗಿತ್ತು.

ಹಿಂದಕ್ಕೆ–ನಮ್ಮ ನವನಾಗರಿಕತೆಯು ಸಂತತಿ ನಿಯಮನದ ಸಾಧನಗಳನ್ನೂ, ಸ್ತ್ರೀ–ಪುರುಷರ ಸಮಾಗಮ ಸ್ವಾತಂತ್ರ್ಯವನ್ನೂ, ಸೌಂದರ್ಯ ಪ್ರಸಾಧನೆಯ ಹದಗೆಟ್ಟ ಹವ್ಯಾಸವನ್ನೂ, ಘಟಸ್ಫೋಟವನ್ನೂ ತರುವದಕ್ಕೂ ಮುಂಚೆ–ಎದೆಯ ಗ್ರಂಥಿಗಳ ಉಪಯೋಗ ಆ ರೀತಿ ಇತ್ತು. ಮೊಲೆಗಳು ಮಕ್ಕಳ ಪೋಷಣೆಯ ಕೋಶಗಳಾಗಿದ್ದವು ! ಇರಲಿ.

ಇವೆಲ್ಲ ಲಕ್ಷಣಗಳಿಗೆ 'ಗೌಣ ಲೈಂಗಿಕ ಲಕ್ಷಣ'ಗಳೆಂದೆನ್ನುವರು. ಈ ಲಕ್ಷಣಗಳಿಗೆ ಕಾರಣವಾಗುವ ಶಾರೀರಿಕ ಗುಣವು ಯಾವದು ? ಯಾವದೆಂಬುದು ನಿರ್ಧಾರವಾಗಿ ಗೊತ್ತಿಲ್ಲ. ಆದರೆ ಪ್ರೊ. ಸ್ಟಾರ್ಲಿಂಗರ ಮತಕ್ಕೆ ಈ ವಿಷಯದಲ್ಲಿ ಹೆಚ್ಚು ಸಮ್ಮತಿ ದೊರೆತಿದೆ. ಆ ಮತವೆಂದರೆ, ಪ್ರಾಯವು ಪ್ರಾರಂಭವಾದಾಗ, ಜನನೇಂದ್ರಿಯಕ್ಕೆ ಸಂಬಂಧಪಟ್ಟ ಪ್ರಜೋತ್ಪಾದಕ ಗ್ರಂಥಿಗಳು ಕೇವಲ ರಜಸ್ಸು–ರೇತಸ್ಸುಗಳನ್ನಷ್ಟೇ ಉಂಟುಮಾಡುವದಿಲ್ಲ. ಕೆಲವು ರಸಗಳನ್ನು ಹುಟ್ಟಿಸುವವು. ಇವುಗಳಿಗೆ 'ಹಾರ್ಮೋನು'ಗಳೆಂಬ ಹೆಸರು ಇಡಲಾಗಿದೆ. (ಗ್ರಂಥಿಗಳಿಂದಲ್ಲ ಗ್ರಂಥಕಾರರಿಂದ !) ಈ ಹಾರ್ಮೋನುಗಳು ರಕ್ತದಲ್ಲಿ ಸೇರಿ ನರನಾಡಿಗಳನ್ನೆಲ್ಲ ವ್ಯಾಪಿಸಿ ದೇಹದ ಅಣು ಕೋಶ ಕೋಟಿಗಳಿಗೆಲ್ಲ ಹೊಸಬಗೆಯ ಸತ್ವವನ್ನು ತಂದುಕೊಟ್ಟು ಶಾರೀರಿಕ ಮತ್ತು ಮಾನಸಿಕ ಮಾರ್ಪಾಟುಗಳನ್ನು ಜರುಗಿಸುತ್ತವೆ. ವನದಲ್ಲಿ ವಸಂತವೂ, ವಸಂತದಲ್ಲಿ ಹೂವೂ, ಹೂವಿನಲ್ಲಿ ಪರಾಗವೂ, ಪರಾಗದಲ್ಲಿ ತುಂಬಿಯೂ, ತುಂಬಿಯಲ್ಲಿ ಮಧುಮತ್ತ ಗುಂಜಾರವವೂ ಸೇರಿ ಏರಿಬರುವಂತೆ, ಶರೀರದಲ್ಲಿ ಹಾರ್ಮೋನುಗಳ ಸಂಚಾರವೂ, ಅದರಿಂದ ತರುಣ ಹೃದಯದಲ್ಲಿ ಅರುಣ ಪ್ರಣಯವೂ ಸಂಭವಿಸುತ್ತದೆ.

ಪ್ರಾಯದ ಪ್ರಾರಂಭದಿಂದ ದೇಹವು ಮಾತ್ರ ಹೊಸ ಶಕ್ತಿ–ಸತ್ವಗಳಿಂದ ತುಂಬಿ ತುಳುಕುವದೆಂತಲ್ಲ. ಮನಸ್ಸು ಮತ್ತು ಸ್ವಭಾವಗಳೇ ಸಾವಿರ ವಿಧವಾಗಿ ಪರಿಣಾಮ ಹೊಂದುತ್ತವೆ. ಹೊಸ ಹರೆಯ ಹುಮ್ಮಸ, ಹೆಮ್ಮೆ ಹಿಗ್ಗು ಹೆದರಿಕೆಯನ್ನು ಹಿಮ್ಮೆಟ್ಟುವ ಹಟ, ಇವೆಲ್ಲ ಈ ಅವಸ್ಥೆಯ ಪರಿಪಾಕ. ಶಿವಾಜಿಯ ಪುಂಡಾಟಿಕೆ, ಶಂಕರಾಚಾರ್ಯರ ಹೃದಯ ಜಾಗೃತಿ ಇದೇ ನವತಾರುಣ್ಯದ ಅವತಾರ ಕಾರ್ಯ. ಮುಗಿಲಲ್ಲಿ ಒಂದು ಹೊಸ ನೀಲಿ, ಹಗಲಲ್ಲಿ ಒಂದು ಹೊಸ ಬೆಳಕು, ಭೂಮಿಯಲ್ಲಿ ಒಂದು ಹೊಸ ಬೆಡಗು, ಬಾಳಿನಲ್ಲಿ ಒಂದು ಹೊಸ ಬೆರಗು ಕಂಗೊಳಿಸುತ್ತದೆ. ತಾರುಣ್ಯದ ಉನ್ಮಾದದಲ್ಲಿ ಜಗತ್ತೆಲ್ಲ 'ಸುಂದರ ಕಾಂಡ'ವೆನಿಸುತ್ತದೆ. ಜೀವನವೆಲ್ಲ 'ಉದ್ಯೋಗಪರ್ವ'ವೆನಿಸುತ್ತದೆ. ಪ್ರತಿಯೊರ್ವ ಗರ್ದಭನೂ ಗಂಧರ್ವನಾಗುತ್ತಾನೆ; ಅಪಸ್ಮಾರಿಯೂ ಅಪ್ಸರೆಯೆನಿಸುತ್ತಾಳೆ. ಒಬ್ಬರಿಗೊಬ್ಬರು ಹೇಗೋ ತಮಗೆ ತಾವೇ

ಕೂಡ ಹಾಗೆಯೇ ಅನಿಸಿಕೊಳ್ಳುತ್ತಾರೆ.

ಹೊಸ ಭಾವಗಳು ಶರೀರಕ್ಕೂ ಆತ್ಮಕ್ಕೂ ನೆರೆಹಾವಳಿಯಂತೆ ಉಕ್ಕಿ ಬರುತ್ತವೆ. ತೀಕ್ಷ್ಣವಾದ ಕುತೂಹಲವು ಮನಸ್ಸನ್ನು ಮುಸ್ನುಗ್ಗಿಸುತ್ತದೆ. ಅಷ್ಟೇ ತೀವ್ರವಾದ ಲಜ್ಜೆಯು ಮನುಷ್ಯನನ್ನು ಹಿಂದೆ ಜಗ್ಗುತ್ತದೆ. ತರುಣ ತರುಣಿಯರು ಇದೀಗ ಒಬ್ಬರಿಗೊಬ್ಬರು ಇದುರಾದಾಗ ಪರಸ್ಪರರ ಕುರಿತು ಗುಪ್ತವಾದ ಎಚ್ಚರವನ್ನು ಸುಪ್ತವಾದ ಅಚ್ಚರಿಯನ್ನು ಒಡಮೂಡಿಸಹತ್ತುವರು. ತರುಣನು ಹುಚ್ಚು ನಗೆಯನ್ನು ತರುಣಿಯು ಹುಚ್ಚು ಹಿಡಿಸುವ ನಾಚಿಕೆಯ ನಟನೆಯನ್ನು ತನ್ನಾರೆ ಕಲಿತುಕೊಳ್ಳುತ್ತಾರೆ. 'ನಾಚಿಕೆ' ಶಬ್ದ ಒಳ್ಳೇ ಸ್ವಾರಸ್ಯವಾಗಿದೆ. 'ನಾಣ್' ಎಂಬ ಧಾತು ಹೊಸ ಹರೆಯ ಆರಂಭವನ್ನು 'ನೆರೆ'ಯುವದನ್ನೂ ಸೂಚಿಸುವ ಶಬ್ದವು. ಅದರಿಂದಲೇ ಒಡಮೂಡಿದ ಸುಕುಮಾರ ಭಾವವು 'ನಾಚಿಕೆ.' ನೆರೆದ ಸ್ತ್ರೀಗೆ ನಾಚಿಕೆಯೂ ಹರೆಯ ಪುರುಷನಿಗೆ ಪುರುಷ-ಪುರುಷಾರ್ಥಗಳೂ ಸಹಜವಾಗಿ ಬರುತ್ತವೆ. ಹಿಂದೆ ಗುಲಾಮರ ವಿಕ್ರಯವಾಗುತ್ತಿರುವ ಕಾಲದಲ್ಲಿ ಹೆಣ್ಣುಗಳ ಮಾರಾಟದಲ್ಲಿ ಯಾರು ಎಷ್ಟು ನಾಚುವರೋ ಅವರಿಗೆ ಅಷ್ಟು ಬೆಲೆ ಹೆಚ್ಚು ಬರುತ್ತಿತ್ತು ಎಂದು ಇತಿಹಾಸ ಬಲ್ಲವರು ಬರೆಯುತ್ತಾರೆ. ಇವರ ಇಂಗಿತವೂ ಇದೇ. ಲಜ್ಜೆ ಲಾವಣ್ಯದ್ದೇ ಒಂದು ಪಾಂಗು.

## ಮನೋರಂಗದಲ್ಲಿ ಮಹತ್ಕ್ರಾಂತಿ

'ಗೌಣ ಲೈಂಗಿಕ ಲಕ್ಷಣ'ಗಳಿಂದ ಮೂಡುವದು ಲಜ್ಜೆಯೊಂದೇ ಅಲ್ಲ, ಬುದ್ಧಿ ವಿಕಾಸದಲ್ಲಿಯೂ ವ್ಯತ್ಯಾಸವಾಗುತ್ತದೆ; ವರ್ತನೆಯಲ್ಲಿಯೂ ವಿಪರ್ಯಾಸವಾಗುತ್ತದೆ. ಪ್ರಾಯದ ಪ್ರಾರಂಭದ ಪೂರ್ವದಲ್ಲಿ ದಡ್ಡರೆನಿಸಿಕೊಂಡ ಮಕ್ಕಳು ಹರೆಯ ಹೊಸ್ತಿಲನ್ನು ದಾಟಿದೊಡನೆ ತಿಳುವಳಿಕೆಯನ್ನು ಕಾಣಿಸುವರು. ಅಧ್ಯಾಪಕರಿಗೆ ವಿಶೇಷವಾಗಿ ಈ ವ್ಯತ್ಯಾಸವು ಗಮನಕ್ಕೆ ಬರುವದುಂಟು. ಕೆಳತರಗತಿಯಲ್ಲಿ 'ಫೇಲು' ಆಗುತ್ತ ಪೋಲಿಯೆನಿಸಿಕೊಂಡ ಟೋಣಪನು ಮೇಲ್ತರಗತಿಯಲ್ಲಿ-ಮತ್ತು ಶಾಲೆಯಲ್ಲಿ ಹಿಂದುಳಿದವನು-ಕಾಲೇಜಿನಲ್ಲಿ ಮನಮೆಚ್ಚಿ ಮೈಮುರಿದು ದುಡಿದು ಮುಂದೆ ಬರುವದನ್ನು ನೋಡಬಹುದು. ತಮ್ಮ ಶಿಕ್ಷಣಕ್ಕೆ ತಾವೇ ಧನ್ಯರೆಂದು ಭಾವಿಸಿದ ಅಧ್ಯಾಪಕರು ಮಕ್ಕಳ ಬುದ್ಧಿಯ ಈ ಒಳ್ಳೇ ಪಲ್ಲಟಣೆ, ತನ್ನ ಬೆತ್ತದ ಬಲದಿಂದಲೇ ಪಾಠದ ಫಲವೆಂತಲೇ ಒದಗಿ ಬಂದಿತೆಂದು ತಿಳಿಯುವದೂ ಉಂಟು. ಆದರೆ ಕಪಿಯು ಕವಿಯಾಗುವ ಕಾಯಾಕಲ್ಪವು 'ಹಾರ್ಮೋನು'ಗಳ ಕಾಯಕ.

ಹಾಗೆಯೇ ಹರೆಬರುವತನಕ ಒಳ್ಳೇ ಅಜ್ಞಾಧಾರಕರೆನಿಸಿಕೊಂಡ ಮಕ್ಕಳು ಹೊಸ

ಹರೆಯಿಂದ ಉದ್ಧಟತನವನ್ನು ವಿವೇಕವಿಲ್ಲದ ವಿಚಿತ್ರ ವೃತ್ತಿಯನ್ನು ತಮ್ಮ ವರ್ತನದಲ್ಲಿ ವ್ಯಕ್ತಮಾಡಬಹುದು. ಈ ಉದ್ಧಟ ಹಟದ ಬಿರುಸು ತಮ್ಮ 'ಒಳ್ಳೇ ಮಕ್ಕಳಲ್ಲಿ' ಒಮ್ಮೆಲೇ ಹೇಗೆ ಬೆಳೆದು ಬಂತೆಂದು ಹಿರಿಯರು ಬೆರಗಾಗುವದುಂಟು. ಇಂಥ ಹರೆಯ ಹುಡುಗರ ಹೊಸ ಹಟದ ಪರಿಚಯವಿದ್ದ ಜಾಣರೇ ನಮ್ಮಲ್ಲಿ ಹಿಂದೆ 'ಪ್ರಾಪ್ತೇತು ಷೋಡಶೇ ವರ್ಷೇ ಪುತ್ರೇ ಮಿತ್ರವತ್ ಚರೇತ್' ಎಂಬ ಸೂಕ್ತ ಸಲಹೆಯನ್ನು ಕೊಟ್ಟಿರುವರು. ಪ್ರಾಯ ಪ್ರಾಪ್ತವಾದೊಡನೆ ಪುತ್ರನನ್ನು ಮಿತ್ರನನ್ನಾಗಿ ಕಾಣಬೇಕು. ಅಂದರೆ ಅವನ ಹೊಸದಾಗಿ ಜಾಗ್ರತವಾದ ಆತ್ಮ ಸಂಭಾವನೆಗೆ ತಕ್ಕ ಮನ್ನಣೆ ಕೊಡಬೇಕು. ತನ್ನಲ್ಲಿ ಬಲಿತು ಉಕ್ಕಿಬರುತ್ತಿರುವ ಹೊಸ ಪ್ರೌಢತೆಯ ಆತ್ಮವಿಶ್ವಾಸದ ಶಕ್ತಿಯನ್ನು ಮತ್ತೆ ಮತ್ತೆ ಪರೀಕ್ಷಿಸಿ ನೋಡಬೇಕೆಂತಲೆ ಪ್ರಾಯದಲ್ಲಿ ಮಕ್ಕಳು ಉದ್ಧಟರಾಗುವರು. ಇದಕ್ಕೆ ವಿಪರೀತವಾಗಿ ಮೊದಲೆಲ್ಲ ತುಂಟರೂ ಜಗಳಗಂಟರೂ ಆಗಿ ಕೇರಿಗೆಲ್ಲ ಕಂಟಕರಾದ ಹುಡುಗರು ಪ್ರಾಯ ಬಂದೊಡನೆ ಮಿದುವಾಗಿ ವಿನಯ ವಿಧೇಯತೆಯ ಮೂರ್ತಿಯಾಗಿ ಮಾರ್ಪಡುವದೂ ಉಂಟು. ಅವರಲ್ಲಿ ಹೊಸದಾಗಿ ತೀವ್ರವಾಗಿ ತಲೆದೋರಿದ ಪ್ರಬುದ್ಧತನವು ತನ್ನನ್ನೇ ತಾನು ವಿಮರ್ಶಿಸುವಂತೆ ಮಾಡುತ್ತದೆ. ನಡತೆಗೆ ನಾಚುವಂತೆ ಮಾಡುತ್ತದೆ. ಆಗ ಹಟದ ಹುಚ್ಚು ಕರಗಿ ಹೊಣೆ ಯನ್ನರಿಯುವ ಹಂಬಲ ಬಲವಾಗುತ್ತದೆ.

ಈ ಆತ್ಮವಿಮರ್ಶೆಯೊಡನೆ ಆಗಾಗ್ಗೆ ಹಲವರಲ್ಲಿ ತೀವ್ರವಾದ ಭಾವನೆಯ ಉದ್ರೇಕ ಉಂಟಾಗುವದುಂಟು. ಅದರ ಭರದಲ್ಲಿ ಹೊಸ ಹರೆಯ ಹುಡುಗ ಹುಡುಗಿಯರು ಯಾವ ಹುಚ್ಚಿಗೂ ದುಡುಕುವದುಂಟು. ತ್ಯಾಗ, ಬಲಿದಾನ, ಘೋರಪ್ರತಿಜ್ಞೆ, ಆಜನ್ಮವ್ರತ, ಆತ್ಯಂತಿಕನಿಷ್ಠೆ, ತೀವ್ರ ಉದಾಸೀನತೆ ಇವುಗಳ ಸುಗ್ಗಿಯ ಕುಣಿತವು ನವತಾರುಣ್ಯದಲ್ಲಿಯೇ ಸರಿ. ನವತಾರುಣ್ಯದ ಕಾವ್ಯದಲ್ಲಿ ಅತಿಶಯೋಕ್ತಿಯೇ ಅಲಂಕಾರ; ಅತಿರೇಕವೇ ರಸ; ಅವಿವೇಕವೇ ಸ್ಥಾಯೀ ಭಾವ. ಚಿಕ್ಕಪುಟ್ಟ ಕಾರಣಗಳಿಂದ ತೀವ್ರ ಮನಸ್ತಾಪವುಂಟಾಗುವದು; ಸಣ್ಣ ಮಾತುಗಳೂ ಮರ್ಮಕ್ಕೆ ತಟ್ಟುವವು. ಅಲ್ಪ ನಿರಾಶೆಯೂ ಆತ್ಮಹತ್ಯೆಗೆ ಪ್ರೇರಣೆಯಾಗುವದು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ 'ಫೇಲು' ಆದೆನೆಂದು ಎಷ್ಟು ತರುಣರು ಜೀವತೆಗೆದುಕೊಂಡಿಲ್ಲ! ಮನೆಯವರೊಡನೆ ಅದ ಕಿರುಕುಳಗಳಿಗಾಗಿ ಉಟ್ಟ ಬಟ್ಟೆಯೊಂದಿಗೇ ಊರನ್ನೇ ಬಿಟ್ಟು ಎಷ್ಟು ಯುವಕರು 'ಫರಾರಿ' ಆಗಿಲ್ಲ! ದಿನಪತ್ರಿಕೆಗಳಲ್ಲಿ ಇಂಥ ದುರ್ದೈವಿಗಳ ಹಿರಿಯರು 'ಮಗನೇ ತಿರುಗಿ ಬಾ. ನಮ್ಮನ್ನು ಕ್ಷಮಿಸು' ಎಂದು ಮುಂತಾಗಿ ಕರುಳಿನ ಕಳವಳವನ್ನು ತೋಡಿಕೊಂಡದ್ದನ್ನು ಎಷ್ಟು ಮಂದಿ ಓದಿಲ್ಲ!

ಒೀಗೆ ಪ್ರಾಯದ ಪ್ರಾರಂಭ ಅಂತರ್ಮುಖ ವೃತ್ತಿಯ ಕಾಲ. ತಾಸುಗಟ್ಲೆ, ದಿನಗಟ್ಲೆ ನವಯುವಕರು ಉದಾಸೀನರೂ, ಅನ್ಯಮನಸ್ಕರೂ ಆಗಿ ಗುತ್ತತಪ್ಪಿದ ಪಿಶಾಚಿಗಳಂತೆ ಅಲೆದಾಡುವದುಂಟು. ಏನನ್ನೋ ಹಂಬಲಿಸಿ ಹಗಲುಗನಸುಗಳನ್ನು ಕಾಣುತ್ತ ಕುಳಿತುಕೊಳ್ಳುವದುಂಟು. 'ಮೂಕನನ್ನು ವಾಚಾಳಿಯಾಗಿಯೂ ಪಂಗುವನ್ನು ಪರ್ವತವನ್ನು ದಾಟುವವನಾಗಿಯೂ' ಮಾಡುವ ದೇವರ ಕೃಪೆಯಂತೆಯೇ ಈ ಹೊಸ ಹರೆಯದ ಹುಮ್ಮಸವಿರುತ್ತದೆ! ಕಲ್ಪನೆಯು ಕೆರಳಿ ಅರಳಿ ಚಿಲ್ಲುವರಿಯುತ್ತದೆ. ಯೌವನದ ವಸಂತಾಗಮನದೊಂದಿಗೇ ಕವನದ ಕೋಗಿಲೆ ಕುಕಿಲ ತೊಡಗುತ್ತದೆ. ಹೊಸ ಹರೆಯಲ್ಲಿ ಕವಿತೆ ಕಟ್ಟದವರೇ ವಿರಳ; ಹೆರವರ ಕವಿತೆಗಳನ್ನಾದರೂ ಓದಿ, ಕೇಳಿ, 'ತಮ್ಮದೇ ಆದ ಒಂದು ಶೈಲಿ'ಯಲ್ಲಿ ಹಾಡಹತ್ತದಿದ್ದವರು ಇನ್ನೂ ವಿರಳ. ಈ ವಯಸ್ಸಿಗೆ ಪ್ರಪಂಚದ ಸ್ವತಂತ್ರ ಜನರೆಲ್ಲರೂ ಲೇಖಕರಾಗುತ್ತಾರೆ. ಅಮರ ಸಾಹಿತ್ಯವನ್ನು ಅಕ್ಷರ ವಾಙ್ಮಯವನ್ನು ಹುಟ್ಟಿಸುವ ದಿವ್ಯ ಕನಸನ್ನು ಕಾಣುತ್ತಾರೆ. ತಮ್ಮ ಕತೆ ಕವಿತೆಗಳನ್ನು ಪ್ರಕಟಿಸುವಷ್ಟು ಬುದ್ಧಿ ಹಿರಿಯ ಸಂಪಾದಕರಿಗೆ ಇಲ್ಲವಾದರೆ ತಾವೇ ತಮ್ಮ ತಮ್ಮ ಹೊಸ ಪತ್ರಿಕೆಗಳನ್ನು ಅಚ್ಚು ಹಾಕಿಸುತ್ತಾರೆ. ಕೈ ಬರಹದ ಪುಸ್ತಕಗಳನ್ನು ಪ್ರಕಟಿಸುತ್ತಾರೆ. ಕೊನೆಗೆ ತಮ್ಮ ತಮ್ಮೊಳಗೇ ತಮ್ಮ ಸಾಹಿತ್ಯವನ್ನು ಓದಿ ಹೇಳಿ ಒಬ್ಬರಿಗೊಬ್ಬರು ಬೇಸರ ತರುತ್ತಾರೆ.

ಆಗ ಮನಸ್ಸಿನ ಪ್ರತಿಯೊಂದು ಶಕ್ತಿಯೂ ತೀವ್ರವಾಗುತ್ತದೆ. ಜಗತ್ತಿನ ಕುರಿತು, ಜೀವನದ ಕುರಿತು, ವಿಶ್ವದ ವೈಚಿತ್ರ್ಯ ವೈಭವದ ಕುರಿತು. ದೆವ್ವ-ದೈವ-ದೇವರುಗಳ ಕುರಿತು, ಯೌವನಾರಂಭದ ಉದ್ದೀಪಿತವಾದ ಬುದ್ಧಿಯು 'ಯಕ್ಷ ಪ್ರಶ್ನೆ'ಗಳ ಲಕ್ಷ ಬಾಣಗಳನ್ನು ಪ್ರಯೋಗಿಸುತ್ತದೆ. ಈ ಬುದ್ಧಿಯ ವ್ಯಾಪಾರವು ಕುತೂಹಲದ ವಿಚಿಕಿತ್ಸೆಯು ಹಾಗೆಯೇ ಮುಂದುವರಿದರೆ, ಆ ವ್ಯಕ್ತಿಯು ವಿಜ್ಞಾನಿಯೋ, ವೇದಾಂತಿಯೋ ಆಗುವದರಲ್ಲಿ ಸಂದೇಹವಿಲ್ಲ. ಆದರೆ ಬಹುತೇಕ ಹಾಗೆ ಆಗುವದಿಲ್ಲ. ಪ್ರಜ್ಞೆಯು ಪ್ರತಿಭೆಯಾಗುವಷ್ಟು ಬೆಳೆಯುವದಿಲ್ಲ. ಕುತೂಹಲಕ್ಕೆ ಉಪಯೋಗದ ಕಟ್ಟು ಬೀಳುತ್ತದೆ. ಸಂಶೋಧನೆಯು ಸಂಕ್ಷೇಪಗೊಳ್ಳುತ್ತದೆ. ಶುದ್ಧ ಬುದ್ಧಿಯ ವಿಚಿಕಿತ್ಸೆ ವ್ಯಾವಹಾರಿಕ ವಿನಿಯೋಗದ ವಲಯದಲ್ಲಿಯೇ ಕೆಲಸ ಮಾಡಲು ಕಲಿಯುತ್ತದೆ. ಸಂಶಯಾತ್ಮನಾಗಿ ಉಳಿದರೆ ವಿನಾಶವೆಂದು-ಬದುಕು ಸಫಲವಾಗಲಿಕ್ಕಿಲ್ಲೆಂದು-ಮನಗಂಡು ವ್ಯಕ್ತಿಯು ಪ್ರಯೋಜನದ ಉದ್ದೇಶವನ್ನು ಇಟ್ಟುಕೊಂಡೇ ವಿಚಾರ ಧಾರೆಯನ್ನೂ ಹರಿಯ ಬಿಡುತ್ತಾನೆ; ಇದರಿಂದ ವಿಚಾರದ ಕ್ಷೇತ್ರದಲ್ಲಿ ಶ್ರೇಯಸ್ಸನ್ನು ಹೊಂದುವ ಬದಲು ವ್ಯವಹಾರದ ಕ್ಷೇತ್ರದಲ್ಲಿ ಯಶಸ್ಸನ್ನು ಗಳಿಸುತ್ತಾನೆ. ಕಚೇರಿಯಲ್ಲಿ ಹೆಚ್ಚು ಹೆಚ್ಚು ಮನ್ನಣೆಯು

ಖುರ್ಚಿಯನ್ನು ಆಕ್ರಮಿಸುತ್ತಾನೆ. ಹೆಚ್ಚು ಹೆಚ್ಚು ಸಂಬಳದ ಪಾಕೀಟನ್ನು ಹೆಂಡತಿಯ ಕೈಗೆ ತಂದು ಕೊಟ್ಟು 'ಕೃತಾರ್ಥ'ನಾಗುತ್ತಾನೆ!

## ವ್ಯಕ್ತಿಯ ಇತಿಹಾಸದ ಆಶ್ಚರ್ಯಯುಗ

ಪ್ರೀತಿಯ ಮಳೆಬಿಲ್ಲು ಕೂಡ ಇದೇ ಯೌವನಾರಂಭದ ಮುಂಗಾರಿಯ ಕಣ್ಸನ್ನೆಯಾಗಿ ಸಿಂಗಾರವಾಗಿ ಮೂಡಿಬರುತ್ತದೆ. ಅಂತಃಸ್ರಾವ ಕ್ರಿಯೆಯಿಂದ ಶರೀರವಲ್ಲೆಲ್ಲ ಸಂಚರಿಸುವ 'ಹಾರ್ಮೋನು' ದ್ರವ್ಯಗಳ ಪರಿಣಾಮವಾಗಿ ಕಾಮನ ಮೋಡಗಳು ಹೃದಯವನ್ನು ಕವಿದು ಪ್ರೀತಿಯ ಮಿಂಚು ಚಂಚಲವಾಗಿ ಹೊಳೆಯಹತ್ತುತ್ತದೆ. ಈ ಪ್ರೀತಿಯ ಉದ್ರಿಕ್ತವಾದ ಆವೇಶವು-ಅತಿರಿಕ್ತವಾದ ಅಂಶವು-ಎಲ್ಲ ಕಲೆಗಳ ಬೇರುಗಳಿಗೂ ಸಾಮಾಜಿಕ ಚಟುವಟಿಕೆಗಳ ನೇಮನಿಷ್ಠೆಗಳ ಬೀಜಗಳಿಗೂ ನೀರೆರೆಯುತ್ತದೆ. ಪ್ರೇಮಭಂಗದಿಂದ ಭಣಗುಡುವ ಹೃದಯವನ್ನು ಸತ್ಯಾಗ್ರಹದ ರಣಕೋಲಾಹಲದಲ್ಲಿ ಮುಳುಗಿಸುವ ರಾಷ್ಟ್ರಕಾರ್ಯದ ಸೇವಕರ ಕತೆಗಳನ್ನು ನಾವು ಓದಿದ್ದೇವೆ. ಪ್ರೇಮಸಂಗದ ತಳಮಳವನ್ನು ಪ್ರಭಾತ ಫೇರಿಗಳಲ್ಲಿ ಪೂರೈಸಿಕೊಳ್ಳುವದಕ್ಕಾಗಿ ದೇಶ ಸೇವಿಕೆಯರ ಸಂಘಟನೆಗಾಗಿ ತನು-ಮನ-ಧನದಿಂದ ದುಡಿಯುವ ವೀರರನ್ನು ನಾವು ನೋಡಿದ್ದೇವೆ. ಆದರೆ ಇವೆರಡೂ ತೀರ ಸ್ಥೂಲ ಉದಾಹರಣೆಗಳು. ಮೇಲೆ ಹೇಳಿದ ಪ್ರೇಮದ ಅತಿರಿಕ್ತ ಉದ್ರಿಕ್ತ ಅಂಶ ಆವೇಶಗಳೆಂಬುವದು ಹೆಚ್ಚು ಸೂಕ್ಷ್ಮವಾದ ಅರ್ಥದಲ್ಲಿ. ಹೊಸ ಹರೆಯಲ್ಲಿ ಹೃದಯಹೃದಯದಲ್ಲಿಯ ಅಸ್ಪಷ್ಟವಾದ ಅಮೂರ್ತವಾದ ಯಾವದೇ ಮೂರ್ತಿಯನ್ನು ತನ್ನದಾಗಿ ಮಾಡಿಕೊಂಡು ಅದರ ಆರಾಧನೆಯಲ್ಲಿ ತೃಪ್ತಿ ಹೊಂದದ ಪ್ರೇಮದ ಕಾವನ್ನೂ ಪಡೆದ ಬಣ್ಣವನ್ನು ತಳೆದ ಭಾವಾವೇಶವು ಬಹಳಷ್ಟು ಉಕ್ಕಿ ಬುಗ್ಗೆ ಬುಗ್ಗೆಯಾಗಿ ಪುಟಿಯುತ್ತಿರುತ್ತದೆ. ಅದರ ಆವೇಗದಲ್ಲಿ ಕೊಚ್ಚಿಹೋದ ತರುಣ ತರುಣಿಯರೇ ಕಲೆಯ ಉಪಾಸನೆಗೂ ಸಾರ್ವಜನಿಕ ಸೇವಾಕಾರ್ಯದ ಸಾಧನೆಗೂ ಬದ್ಧ ಕಂಕಣರಾಗುತ್ತಾರೆ.

ಪ್ರೀತಿಯು ಸೌಂದರ್ಯವನ್ನು ಕಲ್ಪಿಸುತ್ತದೆ. ಸೌಂದರ್ಯವನ್ನು ಹುಡುಕಿಕೊಂಡು ಹೋಗುತ್ತದೆ. ಸೌಂದರ್ಯವನ್ನು ಹುಟ್ಟಿಸಲೂ ಬಹುದು. ಕಾಮದಿಂದ ಕಾಂತಿ, ಕಮನೀಯತೆ; ರಮಿಸುವದೇ ರತಿ, ಅದರಿಂದ ರಮಣೀಯತೆ. ಚೆಲುವನ್ನು ಕಾಣುವ ಕಣ್ಮನಗಳ ಬಗೆಯೇ ಒಲವು. ಒಲವನ್ನುಂಟು ಮಾಡುವಂಥ ತನ್ಮಯಗೊಳಿಸುವ ಬಗೆಯೇ ಚೆಲುವು. ಹೀಗೆ ಒಲವು-ಪ್ರೀತಿಯು-ಸೌಂದರ್ಯವನ್ನು ಊಹಿಸುತ್ತದೆ. ಉಂಟು ಮಾಡುತ್ತದೆ. ಹಾಗೆಯೇ ಅದು ಶಿವವನ್ನೂ ಶುಭವನ್ನು

ಒಳಿತನ್ನೂ ಕಲ್ಪಿಸುತ್ತದೆ. ಹುಡುಕಿಕೊಂಡು ಹೋಗುತ್ತದೆ. ಹುಟ್ಟಿಸಲೂ ಹೆಣಗುತ್ತದೆ. (ನಮ್ಮ ಸಂಸ್ಕೃತ ಭಾಷೆಯಲ್ಲಿ ಈ ಕುರಿತು ಒಳ್ಳೇ ಶಬ್ದಾರ್ಥದ ಸ್ವಾರಸ್ಯವು ಕಂಡುಬರುತ್ತದೆ. ನಮ್ಮಲ್ಲಿ ಸೌಂದರ್ಯ ಮತ್ತು ಮಾಂಗಲ್ಯ ಇವೆರಡನ್ನೂ ಸೂಚಿಸುವ ಶಬ್ದವು ಒಂದೇ ಶ್ರೀ–ಶೋಭೆ–ಶೋಭನ. ಹಾಗೆಯೇ ನಮ್ಮ ಕನ್ನಡವೂ ಒಳಿತು ಮತ್ತು ಚೆಲುವನ್ನು ಕೂಡಿಯೇ ಸೂಚಿಸುವ 'ಚೆನ್ನ' ಸೊಗಸಾದ ಶಬ್ದವನ್ನು ಕಂಡುಕೊಂಡಿದೆ !)

ಭಾವೋದ್ರೇಕದ ಈ ಯೌವನಾರಂಭದ ಅವಸ್ಥೆ ಒಳ್ಳೇ ವಿಚಿತ್ರವಿರುತ್ತದೆ. ವಿಸಂಗತವೂ ಎನಿಸುತ್ತದೆ. ಧರ್ಮದ ಉದಾಹರಣೆಯನ್ನೇ ನೋಡಿರಿ. ಧರ್ಮವು ಕರ್ಮಕಾಂಡದ ರೂಪದಲ್ಲಿ ದೇವ ದೇವತೆಗಳ ಪೂಜಾವಿಧಾನದ ರೂಪದಲ್ಲಿ, ಕರ್ಮಠ ವಿಧಿನಿಷೇಧಗಳ ರೂಪದಲ್ಲಿ ಇದಿರಾದರೆ, ಈ ನವ ಯುವಕರಲ್ಲಿ ವಾದ–ವಿವಾದಗಳ ಆವೇಶವನ್ನೂ, ಅದನ್ನು ವಿಧ್ವಂಸಮಾಡಬೇಕೆಂಬ ತ್ವೇಷವನ್ನೂ ಕೆರಳಿಸುತ್ತದೆ. ಆದರೆ ಅದೇ ಧರ್ಮವು ಒಳಿತಿಗೆ ಸಾಧಕವೆನ್ನುವಂತೆ, ಒಬ್ಬ ಮಹಾತ್ಮನ ಒಂದು ಮಹಾ ತತ್ವದ ನಿಷ್ಠೆಯ ರೂಪದಲ್ಲಿ ಇದುರಿಗೆ ಬಂದರೆ, ನವಯೌವನದ ಚಂಚಲವಾದ ಆತ್ಮಕ್ಕೆ ಅದೊಂದು ಅದ್ಭುತರಮ್ಯ ಆದರ್ಶ ಸಾಧನೆಯಾಗಿ ಕಾಣುತ್ತದೆ ಮತ್ತು ತ್ಯಾಗ ತನ್ಮಯತೆಗಳನ್ನು ಉದ್ರೇಕಗೊಳಿಸುತ್ತದೆ; ನವಯುವಕನ ಭರದಿಂದ ಬೆಳೆಯುವ ವ್ಯಕ್ತಿತ್ವದ ಅಪರಿಹಾರ್ಯ ಅಂಶವಾಗಿ ಆ ಶ್ರದ್ಧೆಯು ನಿಲ್ಲುತ್ತದೆ. ನಾಸ್ತಿಕನೂ ಪಾಖಂಡಿಯೂ ಕಠೋರ ಬುದ್ಧಿವಾದಿಯೂ ಎನಿಸಿಕೊಳ್ಳುವ ಈ ಯುವಕನು ಕಮ್ಯುನಿಷ್ಟ ತತ್ವದಲ್ಲಿ ಅತ್ಯಂತ ಕರ್ಮಠವಾದ ಶ್ರದ್ಧೆಯನ್ನೂ ಲೆನಿನ್--ಸ್ಟಾಲಿನ್ನರಲ್ಲಿ ರಾಮ–ಕೃಷ್ಣರಿಗೂ ಮೀರಿದ ಅಚಲವಾದ ಭಕ್ತಿಯನ್ನೂ ಮಾರ್ಕ್ಸನ ಗ್ರಂಥಗಳಲ್ಲಿ ವೇದತುಲ್ಯ ಪ್ರಮಾಣ ಬುದ್ಧಿಯನ್ನೂ ಇಡುತ್ತಾನೆ. ಹೊಸ 'ವಾದ'ಗಳನ್ನು ಪ್ರತಿಪಾದಿಸುವಾಗ, ಪ್ರತಿ ವಾದಗಳನ್ನು ಪ್ರತಿಭಟಿಸುವಾಗ, ಹಳೇ ಧರ್ಮವೀರರ ಅಂಥ ಆವೇಶವನ್ನೂ, ಹೊಸ ಧರ್ಮಾಂತರಪಟ್ಟವರ ತೀವ್ರ ಅಸಹನೆಯ ದ್ವೇಷ–ತ್ವೇಷಗಳನ್ನೂ ಈ ಭಾವನಾಮಯ ಯುವಕರು ತಮ್ಮ ನಡೆನುಡಿಗಳಲ್ಲಿ ಒಡಮೂಡಿಸುತ್ತಾರೆ.

ಒಟ್ಟಿನಲ್ಲಿ ಹೇಳುವದಾದರೆ ಈ ಪ್ರಾಯಪ್ರಾಪ್ತಿಯು ಸುಂದಾಗಟ್ಟು, ಈ ಯೌವನಾರಂಭದ ಅವಧಿಯು, 'ಋತು' ಕಾಲವು ವ್ಯಕ್ತಿಯ ಇತಿಹಾಸದಲ್ಲಿಯು ಆಶ್ಚರ್ಯದ ಯುಗವು. ಅದು ವಿಮರ್ಶೆ ವಿಚಿಕಿತ್ಸೆಗಳ ಬುದ್ಧಿಯುಗವೂ ಅಹುದು: ಜತೆಗೆ ಶ್ರದ್ಧಾ ಭಕ್ತಿ ಮತ್ತು ವಿಭೂತಿ ಪೂಜೆಗಳ ಭಾವನಾಮಯ ಮನ್ವಂತರವೂ ಆಗಿದೆ. ಅಂತೆಯೇ ಆಶ್ಚರ್ಯದ ಯುಗವೆನ್ನುವದು. ನವಯೌವನದ ಕಣ್ಣ

'ಯಕ್ಷಕಿರಣ' ಬಿದ್ದಲ್ಲಿ ಜಗತ್ತು ಎಷ್ಟು ವಿಚಿತ್ರವೆನಿಸುವದೋ ಅಷ್ಟೇ ಸುಂದರವೂ ಅನಿಸುವದು–ಎಷ್ಟು ಅಪ್ರಾಪ್ಯವೆಂದು ತೆಕ್ಕೆಯ ಆಚೆಯದೆಂದು–ತೋರುವದೋ ಅಷ್ಟೇ ಆಕ್ರಮಣೀಯವೆಂದು ಗೆಲ್ಲಲು ಗಳಿಸಿಕೊಳ್ಳಲು ತಕ್ಕುದೆಂದೂ ತೋರುವದು. ಎಷ್ಟು ಪ್ರೇಕ್ಷಣೀಯವೋ ಅಷ್ಟೇ ಅಪೇಕ್ಷಣೀಯವೂ ಕಾಣುವದು. ಈ 'ಏರುಂ ಜವ್ವನದ' ಏರಿಕೆಯ ವರ್ಷಗಳಲ್ಲಿ ಪ್ರತಿಯೊಂದು ಅನುಭವವೂ ಒಂದು ವಿಜಯಯಾತ್ರೆ; ಪ್ರತಿಯೊಂದು ದಿನವೂ ಒಂದು ಸೀಮೋಲ್ಲಂಘನ; ಪ್ರತಿಯೊಂದು ನಿಶ್ಚಯವೂ ಒಂದು ಭೀಷ್ಮಪ್ರತಿಜ್ಞೆ. ಪ್ರತಿಯೊಂದು ಗೆಲುವೂ ಒಂದು ಧನ್ಯತೆ, ಪ್ರತಿಯೊಂದು ಸೋಲು ಒಂದು ಆತ್ಮಾಹುತಿ. ಈ ರೀತಿ ಅತಿರಂಜಿತ ವರ್ಣವೈವಿಧ್ಯದಲ್ಲಿಯೇ ಬದುಕಿನ ಚಿತ್ರಪಟ ಓಡುವದು. ಹೊಸ ಹರೆಯ ಈ ಅವಧಿಯನ್ನು ಆಯುಷ್ಯದ ಮುಂದಿನ ಪ್ರತಿಯೊಂದು ಅವಸ್ಥೆಯೂ ಕಳೆಯಿತೆಂಬ ಕೊರಗಿನಿಂದ ತಿರುಗಿ ಬರಲಾರದೆಂಬ ಮರುಕದಿಂದ, ಮತ್ತೆ ಮತ್ತೆ ನೋಡಿ ಮುಂದಡಿ ಇಡುತ್ತದೆ. ನಮ್ಮ ಪುರಾಣಗಳಲ್ಲಿ ಬರುವ ಯಯಾತಿಯ ಕಥೆಯು ಈ ಕೊರಗಿನ ಈ ಮರುಕದ ಕಲ್ಪನಾಪೂರ್ತಿಯ ಚಿತ್ರ. ತನ್ನ ಕಳೆದು ಹೋದ ಯೌವನವನ್ನು ಮತ್ತೆ ಬಯಸಿ ಆ ವಿಷಯ ಲಂಪಟ ಯಯಾತಿಯು ಮಗನ ತಾರುಣ್ಯವನ್ನು ಬೇಡಿಕೊಂಡನು ! ಪ್ರತಿಮಾನವನೂ ಎದೆಯ ಆಳದಲ್ಲಿ ಇಂಥ ಯಯಾತಿಯೇ ಆಗಿರುತ್ತಾನೆ. ತನ್ನ ಮಕ್ಕಳಂತೆ ತಾನೂ ಮತ್ತೆ ತರುಣನಾಗಬೇಕೆಂದು ಅನಿಸಿದರೂ ಅದು ಶಕ್ಯವಿಲ್ಲದೆ ಮಕ್ಕಳ ಒಡನಾಟದ ಆನಂದದಲ್ಲಿಯಾದರು ತನ್ನ ಹಳೆಯ ಹರೆಯ ಹರುಷವನ್ನು ಕೆಲಮಟ್ಟಿಗೆ ಮತ್ತೆ ಹಂಬಲಿಸಿಕೊಳ್ಳುತ್ತಾನೆ.

## ಪ್ರೀತಿಯ ಅವತಾರವೆಂದು ?

ಆದರೆ, ಈ ನಡುವೆ ಹುಡುಗನನ್ನು ಹುಡಿಗಿಯ ಹತ್ತಿರ ಒಯ್ಯುವ ಮತ್ತು ಹುಡಿಗಿಯನ್ನು ಹುಡುಗನಿಂದ ದೂರ ಸರಿಯುವಂತೆ ಮಾಡುವ ಈ ಸೂಕ್ಷ್ಮ ಶಕ್ತಿಯು ಯಾವದು ? ಹುಡುಗನು ಹುಡುಗಿಯ ಹತ್ತಿರಕ್ಕೆಂದು ಸುಳಿದು ಸುತ್ತಾಡಿ, ಸೂಜಿಗಲ್ಲಿನಿದಿರಿಗೆ ಸೂಜಿಯು ನಡುಗುತ್ತ ಸರಿಯುವಂತೆ ಅಂಜುತ್ತ ಅಳುಕುತ್ತ ಗೆಲುವು ಗೊಂದಲಗಳ ದರ್ಪ ದಿಗಿಲುಗಳ ಸಂಮಿಶ್ರ ಸಂಭ್ರಮದಲ್ಲಿ ಮೆಲ್ಲಗೆ ಮುಂದರಿಯುತ್ತಾನೆ. ಹುಡುಗಿಯು ನಗೆಯೊಂದಿಗೆ ಮೌನವನ್ನು, ನಾಚಿಕೆಯೊಂದಿಗೆ ನಿಮಂತ್ರಣವನ್ನು. ಆಕರ್ಷಣೆಯೊಂದಿಗೆ ಅಸಮ್ಮತಿಯನ್ನು ಕೂಡಿಯೇ ಛಾಯೆಗೊಳಿಸಿ ಅವನ ಕಣ್ಣನ್ನು ಅರಳಿಸಿ ತಲೆಯನ್ನು ಕೆರಳಿಸಿ ಆಸೆಯನ್ನು ಉರುಳಿಸಿ ತನ್ನ ಬೆನ್ನು ಹೊರಳಿಸಿ ಬಯಕೆಯನ್ನು ಬೀರುತ್ತಲೇ ಹಿಂಜರಿಯುತ್ತಾಳೆ. ಈ

ಮುಂದರಿಕೆ ಹಿಂಜರಿಕೆಗಳಿಗೆ ಪ್ರೇರಿ ಪ್ರೇರರ ಈ ಗೊಂಬೆಯಾಟಕ್ಕೆ ಕಾರಣ ವಾಗುವ ಸೂತ್ರವು ಯಾವದು ?

ಪ್ರಾಯದ ಪ್ರಾರಂಭವು ಎಲ್ಲ ಶಕ್ತಿಗಳ ಸುಗ್ಗಿಯ ಕಾಲವು; ಎಲ್ಲ ಬೆಳವಣಿಗೆಗಳ ಬಿತ್ತುವ ಕಾಲವು. ಎಲ್ಲ ಉದಾತ್ತ ಭಾವನೆಗಳೂ ಈ ಕಾಲದಲ್ಲಿ ಪೋಷಣೆಯನ್ನು ಪಡೆಯುತ್ತವೆ. ಇದು ಜೀವನದ ಪುನರುಜ್ಜೀವನದ ಪರ್ವಣಿಯು. ಅಂದಮೇಲೆ ತರುಣ ತರುಣಿಯರನ್ನು ಪ್ರಣಯ ಸೂತ್ರದಲ್ಲಿ ಸೆರೆಹಿಡಿದು ಕುಣಿದಾಡಿಸುವ ಶಕ್ತಿಯ ಬೀಜವೂ, ಇದೇ ಕಾಲದಲ್ಲಿ ಬೆಳವಣಿಗೆಯನ್ನು ಪಡೆದು ಉಜ್ವಲವಾಗಿ ಉಜ್ಜೀವಿತವಾಗುತ್ತದೆಯೋ ?

ಅಹುದು. ಧರ್ಮಕ್ಕೆ ಹೇಗೋ ಪ್ರೇಮಕ್ಕೂ ಶರೀರವೇ ಸಾಧನವು ಸಾಧಕವು. ಶರೀರದ ಬೀಜಕೋಶಗಳೆಲ್ಲ ಎಂದೂ ಇಲ್ಲದ ಚೈತನ್ಯ ನಾವೀನ್ಯಗಳಿಂದ ಪುಟಿದು ಬಲಿಯುತ್ತವೆ. ಅವುಗಳ ಸತ್ವದ ವೈಪುಲ್ಯವನ್ನು ತಡೆಯುವ ಯಾವ ಯತ್ನವನ್ನೂ ಲೆಕ್ಕಿಸದಂತೆ ಅವು ಹಿಗ್ಗುತ್ತವೆ. ಈ ಹಿಗ್ಗಿನ ಸುಗ್ಗಿಯಲ್ಲಿಯೇ ಪ್ರೀತಿಯ ಕೋಗಿಲೆಯು ಬಗ್ಗಿಸುತ್ತದೆ. ವಂಶದ ಶುದ್ಧಿ, ನಿಸರ್ಗದ ಲಕ್ಷ್ಯ, ಅದಕ್ಕಾಗಿ ನೈಸರ್ಗಿಕವಾಗಿ ಜತೆಗೂಡುವ ಜೀವಿಗಳ ಆಯ್ಕೆ ಆಗಬೇಕಾಗುತ್ತದೆ. ಜತೆಗೂಡ ಬೇಕೆಂಬ ಸರಿಸಮಾನವಾದ ವಿರುದ್ಧ ಜೀವಿಗಳ (ಲಿಂಗಗಳ) ಸಮಾಗಮವಾಗ ಬೇಕೆಂಬ ಪ್ರಕೃತಿಯ ಪ್ರವೃತ್ತಿಯೂ ಈ ಜತೆಗೂಟಕ್ಕೆ ಒಡನಾಟದ ಬೇಟಕ್ಕೆ ಒಮ್ಮೆಲೆ ಕುರುಡು ಕೆರಳಿಕೆಯಿಂದ ಸುಗ್ಗದೇ ಯೋಗ್ಯ ಜತೆಗಾರರ ಆಯ್ಕೆಯು ಮೊದಲು ಆಗಬೇಕೆಂಬ ನಿಸರ್ಗದ ನಿಯಮವೂ ಕೂಡಿಯೇ ಪ್ರೀತಿಯ ಮೂಲ ವಾಗಿವೆ. ಬೇಟದ ಬಯಕೆಗೆ ಕಾರಣವಾಗುವ ಒತ್ತಾಯವು ಪ್ರತಿ ವ್ಯಕ್ತಿಯಲ್ಲಿಯೂ ಉಕ್ಕುವ ಬೀಜಕೋಶಗಳ ಚೈತನ್ಯದ ದ್ರವ್ಯವು-ರಜಸ್ಸು ರೇತಸ್ಸುಗಳ ಒಟ್ಟಿನ ಸಂಚಯವು; 'ಹಾರ್ಮೋನು' ರಸಾಯನಗಳ ಒತ್ತರದ ಸಂಚಾರವು. ಪ್ರೀತಿಯು ಹೀಗೆ ಪ್ರಾಣಿಶಾಸ್ತ್ರದಲ್ಲಿದೆ; ಶರೀರ ಧರ್ಮದಲ್ಲಿದೆ. ಇಡೀ ಶರೀರವೇ ಬೆಳವಣಿಗೆಯು ತಡೆದಂತೆ ಒಂದು ಕೆರಳಿಕೆಯ ಉದ್ರೇಕವನ್ನು ಅನುಭವಿಸುತ್ತದೆ. ಜೀವನವು ಒಮ್ಮೆಲೇ ವಿಶಾಲವಾಗಬೇಕು—ಬೇರೊಂದು ಜೀವನದೊಡನೆ ಬೆರತಾದರೂ ವಿಶಾಲ ವಾಗಬೇಕು—ಎಂಬ ಚಂಚಲವಾದ ಉತ್ಸುಕತೆಯು ಅನಿವಾರ್ಯವಾಗಿ ಅನಿಸುತ್ತದೆ. ಈ ಉದ್ರೇಕ—ಉತ್ಸುಕತೆಗಳ ಫಲವಾಗಿ ವ್ಯಕ್ತಿಯ ಹೃದಯವು ಮಧುರವಾಗಿಯೂ ಬಧಿರಗೊಳಿಸುವ, ಕೋಮಲವಾಗಿಯೂ ಭಾರವೆನಿಸುವ ಒಂದು ಭಿನ್ನತೆಯ ತಳ ಮಳದಿಂದ ತುಂಬಿಕೊಳ್ಳುತ್ತದೆ. 'ಏಕಾಕೀ ನ ರಮತೇ' ಎಂಬ ಶ್ರುತಿವಾಣಿಯು ಹೊಸಹರಯದ ಹಂತದಲ್ಲಿ ನಿಂತ ವ್ಯಕ್ತಿಗೂ ಅನ್ವಯಿಸುತ್ತದೆ. ' ತಾನು ಒಂಟಿ—

ಅಪೂರ್ಣ; ತನಗೆ ಪೂರಕವಾದ-ಜೀವನದ ಪೂರ್ಣತೆಗೆ ಪ್ರೇರಕವಾದ-ಜೀವ ಅಥವಾ ವ್ಯಕ್ತಿಯೊಂದು ಇದೆ' ಎಂಬ ಅರೆತನದ ಅರಿವು ವ್ಯಕ್ತಿಯ ಹೃದಯಕ್ಕೆ ತನ್ನಾರೆ ಆಗುತ್ತದೆ. ಅದು ಸಂಯೋಗ, ಪೂರ್ಣತೆಗಾಗಿ ತಲ್ಲಣಿಸುತ್ತದೆ. ಈ ಪೂರ್ಣತೆಯ ಪ್ರೇರಣೆಯೇ ಪ್ರೀತಿಯು.

ಅಪೂರ್ತಿಯ ಅತೃಪ್ತಿಯಲ್ಲಿ, ಉದ್ರೇಕವಾದ ಚಂಚಲ ಅವಸ್ಥೆಯಲ್ಲಿ, ನವಯುವಕ-ಯುವತಿಯರು ಅತ್ಯಂತ ಕಳವಳದವರಾಗುತ್ತಾರೆ; ತೀವ್ರ ಸಂವೇದನಾ ಶಕ್ತಿಯುಳ್ಳವರಾಗುತ್ತಾರೆ. ಮೊದಲು ಗಮನವನ್ನು ಸೆಳೆಯದ, ಕಂಡೂ ಕಾಣದೇ ಹಾದು ಹೋದ, ಸಾವಿರ ಪ್ರಚೋದನೆಗಳು ಈಗ ತೀವ್ರ ಸಂವೇದನೆಗಳನ್ನು ಪ್ರೇರಿಸುತ್ತವೆ. ಅನಿಸಿಕೆ ನೆನಸಿಕೆಗಳು ತೀರ ಎಚ್ಚರದಿಂದ ಕೆಲಸ ಮಾಡುತ್ತವೆ. ನೆತ್ತರವೇ ಒತ್ತರದಿಂದ ಸಂಚರಿಸುವಂತಾಗಿ ಎಲ್ಲ ಇಂದ್ರಿಯಗಳ ಕಾರ್ಯವು ಶೀಘ್ರವಾಗುತ್ತದೆ. ಕೆಲವೊಂದು ಧ್ವನಿಗಳು, ಕೆಲವೊಂದು ಗಂಧಗಳು, ಕೆಲವೊಂದು ಚಲನವಲನಗಳು-ಎಲ್ಲಕ್ಕೂ ಮಿಗಿಲಾಗಿ ಕೆಲವೊಂದು ದೃಶ್ಯಗಳು ಈ ನವ ಯೌವನಕ್ಕೆ ವಿಶೇಷವಾಗಿ ಆಕರ್ಷಕವಾಗುವವು. 'ರಾಗರತಿಯ ನಂಜು' ಏರಿದ್ದ ರಿಂದಲೋ ಏನೋ, ವಿಶ್ವವೆಲ್ಲ ಸಪ್ತವರ್ಣಗಳಲ್ಲಿ ಅದ್ದಿ ಎದ್ದಂತೆ, ಲೋಲಕದಲ್ಲಿ ಕಂಡ ಲೋಕದಂತೆ ಉಜ್ವಲವೆನಿಸುವದು. ಪ್ರೀತಿಯ ಋತುವಿನಲ್ಲಿ ಬಣ್ಣಗಳೆಲ್ಲ ಕಿಕ್ಕಿರಿದು ಅರಳುವವು. ಕೆಂಪು ಕಾಮ-ವಿಕಾರಕ್ಕೆ ಕಾಳಗದ ಕರೆಯಂತೆ ಅನಿಸುವದು. ಅಶೋಕಸ್ತಬಕಗಳು ಪ್ರಣಯಿಗೆ-ಪ್ರಣಯಕ್ಕಾಗಿ ಹಾತೊರೆಯುವ ವಿರಹಾತುರನಿಗೆ ಮೂದಲಿಸುವಂತೆ ತೋರುವದು. ಕಮಲದ ಕೆಂಪು, ಕುಂಕುಮದ ಕೆಂಪು, ರಕ್ತದ ಕೆಂಪು, ಲಜ್ಜೆಯ ಕೆಂಪು, ಉನ್ಮಾದದ ಕೆಂಪು, ಚೆಂಡುಟಿಗಳ ಕೆಂಪು-ಪ್ರೀತಿಯ ಕೆಂದಳಿರನ್ನೇ ಚಿಗುರಿಸುತ್ತವೆ! ಋತುಕಾಲದಲ್ಲಿ ರತಿದಾನಕ್ಕಾಗಿ, ಯೌವನವು ಸಿಂಗಾರವಾಗುತ್ತದೆ. ನವಿಲಿಗೆ ಹೊಸ ಸೋಗೆ, ಹಕ್ಕಿಗಳಿಗೆ ಬಣ್ಣ ಬಣ್ಣದ ಪುಚ್ಛಗಳು, ಹುಂಜಗಳಿಗೆ ಕೆಂಪು ತುರಾಯಿಗಳು.-ಇವೆಲ್ಲ ಬೆಡಗಿನ ವಿಚಿತ್ರಗಳು ಕಣ್ಣು ಕುಕ್ಕುವಂತೆ ಬಣ್ಣ ತಳೆಯುತ್ತವೆ. ಕಾಡಾಡಿ ಜನರು ಮೈಕೈಗಳನ್ನು ಚುಚ್ಚಿಕೊಳ್ಳುವರು. ಬರೆಯೆಳೆದು ಕೊಳ್ಳುವರು. ಗಾಯಮಾಡಿಕೊಂಡು ಗಿಡಗಳ ರಸ ಹಚ್ಚಿಕೊಂಡು ಚಿತ್ರ ವಿಚಿತ್ರ ಕಲೆಗಳನ್ನು ಅಂಗಾಂಗಗಳ ಮೇಲೆ ಮೂಡಿಸಿಕೊಳ್ಳುವರು. ಈ 'ಚಿತ್ರ' ಹಿಂಸೆಯ ಉದ್ದೇಶವೂ ಇದೆ; ವಿರುದ್ಧ ಲಿಂಗಿಗಳ ಕಣ್ಣು ಸೆಳೆದು ಮನಸ್ಸು ಕೆರಳಿಸುವಂತೆ ಮಾಡುವದು; ಪಶು ಪಕ್ಷಿಗಳು ನಿಸರ್ಗದಿಂದಲೇ ನಿರ್ಮಿಸಿಕೊಳ್ಳುವ ಒನಪು-ಒಡಪುಗಳ ಅಭಾವವನ್ನು ಇಂಥ ಗಾಯದ ಬರೆಗಳಿಂದಲೂ ಮಾಯದ ಕಲೆಗಳಿಂದಲೂ ಗರಿ, ತೊಗಲು, ಎಲುಬು, ಬಣ್ಣಗಳ ವೇಷ ಭೂಷೆಗಳಿಂದಲೂ ತುಂಬಿಕೊಳ್ಳುವರು.

ಇದೇ ಪ್ರೇರಣೆಯ ಮೂಲಕ ಋತು ಕಾಲದೊಡನೆ, ನಾಗರಿಕ ಯುವಕನು ಯೌವನಾರಂಭದಿಂದಲೂ ತನ್ನ ಉಡಿಗೆ ತೊಡಿಗೆಗಳಲ್ಲಿ ವಿಶೇಷ ಅಚ್ಚುಕಟ್ಟು ಓರಣದ ಧೋರಣ ಇಟ್ಟುಕೊಳ್ಳಲು ಆರಂಭಿಸುತ್ತಾನೆ. ಅಂಗ ಪ್ರಚ್ಛಾದನೆಯು ಅಂಗ ಪ್ರಸಾಧನವೂ ಅನಂಗ ಪ್ರಕಟಣೆಯೂ ಆಗುತ್ತದೆ. ಚಳಿಗಾಳಿ ಮಳೆಬಿಸಿಲಿನಿಂದ ಶರೀರವನ್ನು ರಕ್ಷಿಸಿಕೊಳ್ಳುವದೇ ಉಡಿಗೆ ತೊಡಿಗೆಗಳ ಮೂಲ ಉಪಯೋಗವಾಗಿತ್ತು. ಆದರೂ ಮುಂದೆ ಸ್ತ್ರೀ ಪುರುಷರು ತಮ್ಮ ಲಿಂಗದವರ ಈರ್ಷೆಯನ್ನು ಪರಲಿಂಗದವರಿಗೆ ಆಕರ್ಷಣೆಯನ್ನುಂಟು ಮಾಡುವಂತೆ ಬಟ್ಟೆಗಳನ್ನು ಬೆಡಗಿನ ಬಗೆಯಾಗಿ ಒನಪಿನ ಒಡವೆಗಳಾಗಿ ಮಾರ್ಪಡಿಸಿದರು. ನವಯೌವನದಲ್ಲಿ ವಸ್ತ್ರಗಳು ಆಕರ್ಷಣೆಯ ಅಸ್ತ್ರಗಳಾಗುವವು. ರೂಪವುಳ್ಳ ಶರೀರಗಳಿಗೆ ಸೌಂದರ್ಯವೂ ಇಲ್ಲದ ಶರೀರಗಳ ವಿರೂಪವನ್ನು ಮಾಟವಾಗಿ ಮುಚ್ಚಿಕೊಳ್ಳುವ ಚಾತುರ್ಯವೂ ಉಡಿಗೆ ತೊಡಿಗೆಗಳ ಮರ್ಮವಾಗುವದು. ಮೈ ಬಣ್ಣಕ್ಕೆ ಕಳೆಕೊಡುವಂಥ ಬಟ್ಟೆಯ ಬಣ್ಣ; ಮೈ ಕಟ್ಟಿಗೆ ಎದ್ದು ಕಾಣುವಂಥ ಸದ್ದು ಮುದ್ದಾಗಿ ಕಾಣಿಸುವಂಥ ಬಟ್ಟೆಯ ಬಗೆ; ಲಾವಣ್ಯವನ್ನು ಸೂಚಿಸುವ, ಲಾಲಸೆಯನ್ನು ಉದ್ರೇಕಿಸುವ ಶೈಲಿಯಲ್ಲಿ ವೇಷದ ಸನ್ನಿವೇಶ–ಇದು ವಸ್ತ್ರಾಸ್ತ್ರ ಪ್ರಯೋಗದ ಸೂಕ್ಷ್ಮ ಶಾಸ್ತ್ರವೇ ಆಗಿರುವದು. ಆಧುನಿಕ ಮನ್ಮಥನು ಹೂವಿನ ಬಾಣಗಳನ್ನು ಮಾತ್ರ ಎಸೆಯುವದಿಲ್ಲ. ಹೂವುಗಳಂತೆ ಹೂವಿನಿಂದ ಹೂವಿಗೆ ಕಂಪಿನ ಕರೆಗೆ ಬಣ್ಣದ ಬಿನ್ನಹಕ್ಕೆ ಸೋತು ಹಾರಾಡುವ ಭೃಂಗಗಳಂತೆ ಯುವ-ಯುವತಿಯರನ್ನು ರಂಗುರಂಗಾಗಿ ಎಸೆಯುವಂತೆ ಮಾಡಿ ತನ್ನ ಗುರಿಯನ್ನು ಸಾಧಿಸಿಕೊಳ್ಳುತ್ತಾನೆ ! ಆದರೆ ಇಲ್ಲಿ ಒಂದು ಸೂಕ್ಷ್ಮವಿದೆ. ಮಿಕ್ಕ ಪ್ರಾಣಿಗಳಲ್ಲಿ ಹೆಣ್ಣಿಗಿಂತ ಗಂಡಿನ ಬೆಡಗು–ಸೊಬಗು ಹೆಚ್ಚು, ಶಾರ್ದೂಲಕ್ಕಿಂತ ಸಿಂಹದ ಭವ್ಯತೆ ಹೆಚ್ಚು; ಹೆಣ್ಣು ನವಿಲಿಗಿಂತ ಗಂಡು ನವಿಲು ಹೆಚ್ಚು ಪ್ರೇಕ್ಷಣೀಯ, ಶೋಭಾಯಮಾನ; ಹೇಂಟೆಗಿಂತ ಹುಂಜದ ಸಡಗರ ಹೆಚ್ಚು. ಆದರೆ ಮಾನವರಲ್ಲಿ ಈ ಕ್ರಮವಿಪರೀತ. ಗಂಡಿಗಿಂತ ಹೆಣ್ಣಿನ ಒಯ್ಯಾರ-ಒನಪು, ಗಂಡನಿಗಿಂತ ಹೆಂಡತಿಯ ಓರಣ ಹೆಚ್ಚು ಕಂಡುಬರುತ್ತದೆ. ಆಕೆ ವಿಲಾಸಿನಿ, ಸುವಾಸಿನಿ, ಏಕವಸ್ತ್ರೆಯಾಗಿರುವದೂ ನಿರಾಭರಣೆಯಾಗಿರುವದೂ ಆಕೆಗೆ ಅಮಂಗಲ, ಶೋಕಸೂಚಕ. ಆಕೆಯೋ ಶೃಂಗಾರ ಲಕ್ಷ್ಮಿ. ವಸ್ತು–ಒಡವೆಗಳ ಆಸೆ, ಸೀರೆ–ಶಾಲುಗಳ ಲಾಲಸೆ ಹೆಣ್ಣಿನ ಕೊನೆಯ ದೌರ್ಬಲ್ಯ. ರಾಜ್ಯವನ್ನು ಬಿಟ್ಟುಬಂದ ಸೀತೆಗೂ ಕಾಂಚನ ಮೃಗದ ಚರ್ಮದ ಕಂಚುಕದಾಶೆ ಬಿಡಲಿಲ್ಲ. ನಾರುಬಟ್ಟೆಯಲ್ಲಿ ಅಡವಿ ಅಡವಿ ಅಲೆದಾಡುವ ದ್ರೌಪದಿಗೆ ಕೂಡ ಸೌಗಂಧಿಕ ಕಮಲದ ಹವ್ಯಾಸ ಬಿಡಲಿಲ್ಲ. ಗಂಡಸು ಬದುಕುವದು ಹೊಟ್ಟೆಗಾಗಿ; ಹೆಂಗಸು ಸಾಯುವದು ಬಟ್ಟೆಗಾಗಿ–ಎನ್ನುವದು ದಿಟ್ಟತನವೆಂದು ತೋರಿದರೂ ದಿಟವೇ ಸರಿ. ಪಾಂಡವರಿಗೆ ಅಕ್ಷಯಪಾತ್ರೆ ಅಗತ್ಯವಾದರೆ ಪಾಂಚಾಲಿಗೆ ಅಕ್ಷಯಾಂಬರವೇ

ಅಗತ್ಯ! ಗಂಡಸೂ ಬಟ್ಟೆಗಳ ಬೆಡಗನ್ನು ಮೆರೆಯಿಸುವದುಂಟು. ಆದರೆ ಗಂಡಸರಲ್ಲಿ ವೇಷ-ಭೂಷೆಯ ವಿಪರೀತ ವ್ಯಾಮೋಹ ಒಂದು ಬಗೆಯ ಹೆಣ್ಣು ವೃತ್ತಿಯನ್ನೇ ಕಾಣಿಸುತ್ತದೆ. ಗಂಡಸಿನ ಈ ವ್ಯಾಮೋಹ ಹೆಂಗಸಿಗೂ ಸೇರುವದಿಲ್ಲ. ಆದರೆ ಹೆಂಗಸು ಮಾತ್ರ ವೇಷ-ಭೂಷೆಗಳ ಎಲ್ಲ ತಂತ್ರಗಳಿಂದಲೂ ತನ್ನ ಸೌಂದರ್ಯ ನಿದರ್ಶನಕ್ಕಾಗಿ ಅಂಗಾಂಗಗಳ ಉತ್ತೇಜಕ ಪ್ರದರ್ಶನಕ್ಕಾಗಿ ಎಂದೆಂದಿಗೂ ಸುಸಜ್ಜಿತಳಾಗಿರುತ್ತಾಳೆ. ಹಾಗೆಯೇ ಅಂಗ ಪ್ರಸಾಧನೆಯ ಇತರ ಪ್ರಕಾರಗಳಲ್ಲಿಯೂ ಪದಾರ್ಥಗಳಲ್ಲಿಯೂ ಆಕೆಯು ಅಶಿಕ್ಷಿತ ಪಟುವಾಗಿರುತ್ತಾಳೆ. ದುಃಖಿಸುವಾಗಲೂ ಕಾರುಣ್ಯದ ಚಿತ್ರವಾಗಿ ಕಾಣಲು ದಕ್ಷಳಾಗಿರುತ್ತಾಳೆ! ಗಂಡಸೂ ಹೊಸ ಹರೆಯದಲ್ಲಿ ಉಡಿಗೆತೊಡಿಗೆಯ ಆಸಕ್ತಿ ಸಾಕಷ್ಟು ತೋರಿಸುತ್ತಾನೆ. 'ಜೀರ್ಣಾನಿ ವಸ್ತ್ರಾಣಿ' ಎಂಬ ಗೀತೆಯೊಳಗಿನ ಉಪಮಾನವು ನವಯುವಕ 'ದೇಹಿ'ಗೆ ಅನ್ವಯಿಸುವದಿಲ್ಲ. ವಸ್ತ್ರಗಳು ಜೀರ್ಣವಾಗುವನಕ ಅವನು ತಡೆಯುವದೇ ಇಲ್ಲ. ಹೊಸ ಮಾಟ ಹೊಸ-ಭಂಗಿ ಹೊರಟ ಕೂಡಲೇ ಹಳೆ ಚಣ್ಣ ಹಳೇ ಅಂಗಿ ತೆಗೆದಿಡುತ್ತಾನೆ! ಇರಲಿ.

ನವಯುವಕರ ಶೌರ್ಯಸಾಹಸಗಳೂ ಆಟಪಾಟಗಳ ಪ್ರಾವಿಣ್ಯಗಳೂ ಶರೀರ ಸಾಮರ್ಥ್ಯದ ಉದಾಹರಣೆಗಳೂ ನವಯುವತಿಯರ ಮೃದುಹೃದಯಗಳನ್ನು ಮಧುರವಾಗಿ ಅಧೀರವಾಗಿ ಹಾರಾಡುವಂತೆ ಮಾಡುತ್ತವೆ. ಮತ್ತು ಇವರ ಅಂಗಾಂಗ ಗಳ ಮೃದುವಾದ ಮುದ್ದಾದ ರೂಪರೇಖೆಗಳು ನವಯುವಕರ ಅಭಿಲಾಷೆಯನ್ನು ಉರಿದೇಳುವಂತೆ ಮಾಡುತ್ತವೆ. ಈ ನವೋನವ ಅನುಭವಗಳು,-ಸುಗಂಧ, ಸಂಗೀತ, ನರ್ತನ, ವಿಭ್ರಮವೇ ಮುಂತಾದ ಪ್ರದರ್ಶನ ಪ್ರಿಯತೆಯ ವಿವಿಧ ವಿಧಾನಗಳು,- ಯೌವನದ ದಿನಗಳನ್ನು ಮನಗಳನ್ನು ವ್ಯಾಪಿಸುತ್ತವೆ; ಮತ್ತು ಪ್ರೀತಿಯ ಅಚಿಂತ್ಯ ವಾದ ಪ್ರಚೋದನೆಗಳಾಗುತ್ತವೆ. ರಕ್ತಗತವಾದ ಉತ್ತೇಜನೆ ಅಪೇಕ್ಷಾಕೃತವಾದ ಉದ್ದೀಪನೆ ಇವೆರಡು ರೆಕ್ಕೆಗಳ ಬಲದಿಂದ ಪ್ರೀತಿಯ ಪಾರಿವಾಳವು ಹೃದಯ ಪಂಜರಗಳಲ್ಲಿ ಹಾರಾಡಹತ್ತುತ್ತದೆ.

ಒಮ್ಮೆಲೆ ಎಲ್ಲ ಪ್ರೇರಣೆಗಳು ಒಂದಾಗುತ್ತವೆ. ಎಲ್ಲ ಅನುಕೂಲಗಳು ಒಟ್ಟಾಗುತ್ತವೆ. ದೇಹದ ಹಸಿವೆಯೊಳಗಿಂದ ಆತ್ಮದ ಕೊರಗಿನೊಳಗಿಂದ ಮಾನವವಂಶದ ಸಂತತಿಯ ಸಂದೇಶವು ವಿವಶವಾಗಿ ಮೊಳಗುತ್ತದೆ. ಪ್ರೀತಿಯು ಹುಟ್ಟುತ್ತದೆ. ಉದಯದ ಆಕಾಶದಲ್ಲಿ ಮುಂಬೆಳಕು ಏರಿ ಬರುವಂತೆ ಈ ಪ್ರೀತಿಯು ಹೃದಯವನ್ನು ವ್ಯಾಪಿ ಸುತ್ತದೆ. ತನ್ನ ಕಾವಿನಿಂದಲೂ ಕಳೆಯಿಂದಲೂ ಅಂತರಂಗದ ಅಂತರಿಕ್ಷವು ತುಂಬಿ ತುಳುಕುವಂತೆ ಮಾಡುತ್ತದೆ.

## ೪

## ಪ್ರೀತಿಯ ಶೀಲ

ಕಾಮದಿಂದ ಪ್ರೇಮ,-ಬಿಸಿಲಿಗೆ ಒಣಗುವ ಕೆಸರಿನಿಂದ ಸೂರ್ಯ ಕಿರಣಗಳಿಗೆ ನಿಮಿರಿ ಅರಳುವ ಕಮಲವೆದ್ದು ಬಂದಂತೆ; ಜಡದಿಂದ ಜೀವ, ವಾನರರಿಂದ ನರನು ಉಂಟಾದಂತೆ. ಇದೊಂದು ಕ್ರಾಂತಿಮಯ ಉತ್ಕ್ರಾಂತಿ. ಜೀವವು ಸಂತತಿಯನ್ನು ಬಯಸುತ್ತದೆ. ತನ್ನ ಪೀಳಿಗೆಯನ್ನು ಮುಂದರಿಸಬೇಕೆಂಬ ಆವೇಶದ ವಿಕಾರವು ಜೀವಜೀವದ ಜೀವಾಳದ ಪ್ರೇರಣೆ. ಜೀವದ ಈ ವಿಕಾರಮಯ ಆವೇಶದಿಂದಲೇ ಸಹಚರ ಸಹಚರಿಯರ ಅನನ್ಯ ಅನ್ಯೋನ್ಯ ನಿಷ್ಠೆಯು ವಿಕಾಸಗೊಂಡು ಬರುತ್ತದೆ. ದೇಹದ ಹಸಿವೆಯಿಂದ, ರಕ್ತಮಾಂಸಗಳ ರಭಸದ ತೃಷ್ಣೆಯಿಂದ ಆತ್ಮವು ಆತ್ಮವನ್ನು ಸೆಳೆದು ಸೇರುವ ಪೂಜಿಸಿ ಪೂರ್ಣತೆಯನ್ನು ಪಡೆಯುವ ಸರ್ವಾಂಗ ಸುಂದರವಾದ ಭಕ್ತಿಯು ಬೆಳೆದು ಬರುತ್ತದೆ. ಗವಿಯ ಕತ್ತಲೆಯಲ್ಲಿ ಬತ್ತಲೆಯಾಗಿ ಬೇಟೆಯಾಡುವ ಕಾದಾಡಿ ಮಾನವನ ಕುರುಡು ಲಾಲಸೆಯಿಂದ, ಕೊನೆಗೆ 'ಮಮತಾಜಳನು ಹುಗಿದು ತಾ ಜ ಮ ಹ ಲ ನು ಕಟ್ಟಿ ನಿಜ ದುಃಖವನ್ನು ಮರೆಸುವ' ಕವಿಯು ಕಂಡು ಕೊಂಡಾಡುವ ಮಧುರ ಪ್ರೇಮವು ಕೊನರಿ ಬರುತ್ತದೆ. ಮಾನವನ ಹೃದಯದ ವಾದ್ಯದಲ್ಲಿ ಕಾಮದ ರಾಗವು ಮಂದ್ರದಿಂದ ತಾರದತನಕ, ಸಪ್ತಪದಿಯ ಸಪ್ತ ಸ್ವರಗಳಲ್ಲಿ ಸಪ್ತ ಸ್ವರ್ಗಗಳನ್ನು ವಿನ್ಯಾಸವಾಗಿ ವಿಸ್ತರಿಸುತ್ತವೆ.

ಈ ವಿನ್ಯಾಸ ವಿಸ್ತಾರಗಳ ರಹಸ್ಯವೇನು ? ಕಾಮದ ನರಕದಿಂದ ಪ್ರೇಮದ ಸ್ವರ್ಗದ ತನಕ ಏರುವ ಈ ಸಪ್ತ ಪದಗಳು (ಹೆಜ್ಜೆಗಳು) ಹೇಗೆ ನಡೆದುಬಂದವು ? ಈ ಪ್ರಶ್ನೆಗೆ ಆಧುನಿಕ ರಶಿಯಾದ ಭಾಗ್ಯವಿಧಾತನಾದ ಲೆನಿನ್ನನು ಸೂತ್ರರೂಪದಲ್ಲಿ ಉತ್ತರವಿತ್ತಿದ್ದಾನೆ. 'ಲವ್ಹ ಈಜ ಬಾಯೊಲೋಜಿ ಪ್ಲಸ್ ಕಲ್ಚರ' ಎಂದನು ಅವನು. ಪ್ರೀತಿ = ಪ್ರಾಣಿಧರ್ಮ + ಸಂಸ್ಕೃತಿ ಎಂಬುದೇ ಈ ಪ್ರೇಮದ ಪೂರ್ಣಾಂಕದ ಗಣಿತ. ಅಂಕಕ್ಕೆ ಅಂಕ ಸೇರಿಸಿದರೆ ಸಂಖ್ಯೆ ಬೆಳೆಯುತ್ತದೆ. ಈ ಮಾತು ಗಣಿತದಲ್ಲಿ ಹೇಗೊ ಪ್ರಾಣಿಧರ್ಮದಲ್ಲಿಯೂ ಹಾಗೆ ಸಂಪೂರ್ಣ ಸತ್ಯ ವೆಂಬುದು ಕೊಂಚ ತಲೆ ಕೆದರಿಕೊಂಡರೆ ತಿಳಿದುಬರುತ್ತದೆ. ಆದರೆ ಈ ಸಂಖ್ಯಾ ವೃದ್ಧಿಯ 'ಅಂಕ' ಗಣಿತದ ಪ್ರಾಣಿಧರ್ಮವಷ್ಟೇ ಪ್ರೀತಿಯಲ್ಲ. ಇದು ಬರೇ ರತಿ: ಕಾಮ. ಪ್ರೀತಿಯಲ್ಲಿ ರತಿಯೊಡನೆ ರೀತಿಯೂ ಅಡಕವಾಗಿದೆ. ಈರೀತಿ ಸಂಸ್ಕೃತಿಯ ಪರಿಣತಿ. ಮಾತು ಅರ್ಥವಾಗಲಿಲ್ಲವೇ ? ಸರಿ ! ಸೂತ್ರದ ವಿವರಣೆಯಲ್ಲಿ ಇನ್ನೂ 'ದೀರ್ಘ ಸೂತ್ರ'ವಾಯಿತು. ಒಮ್ಮೆಲೇ ತಿಳಿಯಾಗಿ ಬರೆಯೋಣವೇ ?

ಪ್ರಾಥಮಿಕ ಮನುಷ್ಯರಲ್ಲಿ ಪ್ರೀತಿ, ನಾವು ತಿಳಿದ ಅರ್ಥದಲ್ಲಿಯ 'ಪ್ರಣಯ'ವು ಗೊತ್ತೇ ಇರುವದಿಲ್ಲವೆಂದರೂ ಅಡ್ಡಿ ಇಲ್ಲ. ಪ್ರೀತಿಯೆಂಬ ಅರ್ಥದ ಶಬ್ದವೇ ಈ ಪ್ರಾಥಮಿಕ ಮನುಷ್ಯರಲ್ಲಿ ಆದಿಮಾನವರ ಕಾಡು ಸಮಾಜಗಳಲ್ಲಿ ದೊರಕುವದಿಲ್ಲ. ಅನುನಯ, ಪ್ರಣಯ, ಪರಿಣಯ ಇವೆಲ್ಲ ಪ್ರೀತಿಯ ಛಾಯೆಗಳನ್ನು ಒಡ ಮೂಡಿಸುವ ಶಬ್ದಗಳೆಲ್ಲ ಮೂಲದಲ್ಲಿ 'ನಯ' 'ಒಯ್ಯು' ಎಂಬ ಅರ್ಥವನ್ನು ಮಾತ್ರ ವ್ಯಕ್ತಪಡಿಸುತ್ತವೆ. ಕನ್ನಡದ 'ಒಲವು' ಈ ಒಯ್ಯುವಿಕೆಯ ಬಗೆಬಗೆ ಗಳಿಗಿಂತ ಹೆಚ್ಚು ಹುರುಳುಳ್ಳ ಸೊಗಸನ್ನು ಸೂಚಿಸುವದಾದರೂ ಅದು ಕೂಡ ಬಾಗುವಿಕೆಯನ್ನು ಒತ್ತಾಯಕ್ಕೋ ಸೆಳೆತಕ್ಕೋ ಒಗ್ಗುವದನ್ನು ಧ್ವನಿತಮಾಡುತ್ತದೆ. ಇನ್ನು ಹಳೆಗನ್ನಡದ 'ಕೂರ್ಮೆ'ಯ ಮೂಲವೆಲ್ಲಿ ? 'ಕೂರ್' ಇದಕ್ಕೆ ತೀಕ್ಷ್ಣ ಕ್ರೂರ ಎಂಬುದೊಂದು ಅರ್ಥವಿದೆ. ಪ್ರೀತಿಯನ್ನು ಮೂಡಿಸುವ ಮಾತು ಅಂಥ ಕಟುವಾದ ಧ್ವನಿಯಿಂದ ಹೊರಟಿರಲಾರದು. ಆದರೆ ಮನಸೋತು ಬಂದ ಭಾವವನ್ನು ಕಾಣಿಸುವ 'ಓವು' ಎಂಬ ಶಬ್ದ ನಿಜವಾಗಿಯೂ ಒಳ್ಳೇ ಸ್ವಾರಸ್ಯ ದ್ದಾಗಿದೆ. 'ಓಂ' ಕಾರದ ಅರ್ಥವನ್ನು ಶ್ರೀ ದಯಾನಂದ ಸರಸ್ವತಿಯವರು ತಮ್ಮ 'ಸತ್ಯಾರ್ಥ ಪ್ರಕಾಶ'ದಲ್ಲಿ " ಅವತಿ–ಇತಿ 'ಓಂ' " ಅಂದರೆ ಕಾಯುವದು ಕಾವತತ್ವ ಎಂದು ಪ್ರತಿಪಾದಿಸಿದ್ದಾರೆ. ಹಾಗಿದ್ದರೆ ಅಚ್ಚಗನ್ನಡ ಓವು ಒಲವು ಇವುಗಳಿಂದಲೇ ಆರ್ಷ ಮಂತ್ರಗಳ 'ಏಕಾಕ್ಷರ ಬೀಜ'ವಾದ ಓಂಕಾರವು ಹೊರಟಿರಬಹುದೇ ? ಈ ಶಬ್ದಬ್ರಹ್ಮನ ಭಾಷ್ಯವನ್ನು ಭಾಷಾತಜ್ಞರಿಗೆ ಬಿಡೋಣ. ನಾವು ಹೇಳಲು ಹೊರಟ ಸಂಗತಿ ಇಷ್ಟು; ಆದಿಮಾನವ ಸಮಾಜದಲ್ಲಿ ಪ್ರೀತಿಯೆಂಬುವದು ಕಂಡು ಬರುವದಿಲ್ಲ. ಇದಕ್ಕೆ ಸಾಕ್ಷಿ ಅವರಲ್ಲಿ ಪ್ರೀತಿಸೂಚಕ ಶಬ್ದವೇ ಇಲ್ಲ. ಪದಕ್ಕೆ ಅರ್ಥವಾಗಬಲ್ಲ ಸಂಗತಿಯೇ ಪದಾರ್ಥ. ಆ ಪದವೇ ಇಲ್ಲದಾಗ ಅರ್ಥವೆಲ್ಲಿ ಅದರ ನಿರ್ದೇಶವಾದ ಪದಾರ್ಥವು ಯಾವದು ?

ಅಂದು ಕಾಮವಾಸನೆಯು ನೇರವಾಗಿ ತೃಪ್ತಿಗೇ ಹಾಯುತ್ತಿತ್ತು. ಸ್ತ್ರೀಪುರುಷರ ಕಾಮಾಚಾರ ವಾಮಾಚಾರವೆನಿಸುತ್ತಿರಲಿಲ್ಲ. ಅಥವಾ ಏನಾದರೂ ಅಡೆತಡೆಗಳಿದ್ದರೂ ಅವು ಕಾದಾಡಿ ಸರಸ ಸಾಹಸವನ್ನೇ ಕೆರಳಿಸುವಂತಿದ್ದವು. ಅವನ್ನೆಲ್ಲ ಮೀರಿ ಮುರಿದು ನರ–ನಾರಿಯರು ಕೂಡುತ್ತಿದ್ದರು. ಪಶುಗಳಲ್ಲಿ ಕಾಮವಿದೆ; ಪ್ರೇಮವಿಲ್ಲ. ಪಶು ಕೋಟಿಯಿಂದ ಆದಾಗಲೇ ಎದ್ದುನಿಂತ ಮಾನವನೂ ಕಾಮಮೋಹಿತನೇ ಆಗಿದ್ದ. ಲಾಲಸೆ ಮತ್ತು ಲಾಭ, ವಾಸನೆ ಮತ್ತು ಅದರ ಪೂರ್ತಿ ಇವೆರಡರ ನಡುವಿನ ದಾರಿ ಅಷ್ಟತಿಷ್ಟವಿದ್ದರೂ ದೂರವಿದ್ದಿಲ್ಲ.

ಹಾಗಿದ್ದರೆ ಪ್ರೀತಿಯು ಉಂಟಾದದ್ದು ಹೇಗೆ ? ಕಾಮವು 'ಮನ್ಮಥ'ವಾದಾಗಲೇ–

ಮನಸ್ಸನ್ನು ಮಥಿಸುವಂತೆ ಆದಾಗಲೇ ಪ್ರೀತಿಯ ಬೆಣ್ಣೆಯು ಹೊರಟಿತು– ಸ್ನೇಹದ ಎಣ್ಣೆಯು ಹರಿಯಿತು. ಕಾ ಯ ಜ ವಾದ,–ಕೇವಲ ಆಂಗಿಕವಾದ ವಾಸನೆಯು 'ಅನಂಗವಾದ' ಅಂಗವನ್ನು ಮೀರಿ, ಅಂಗವು ಇದುರಿಗೆ ಇಲ್ಲವಾದರೂ ಗುಂಗಿನಲ್ಲಿ ಇರಿಸುವಂಥ ಭಾವನೆಯಾಯಿತು. ಕಾಮನು 'ಅನಿರುದ್ಧ'ನು. ಅದಕ್ಕೆ ನಿರೋಧವಿಲ್ಲ. ನೇರವಾದ ಭೋಗವದು. ಅದು 'ಸ್ಮರ'ವಾದಾಗಲೇ ಸ್ಮರಣ ದಲ್ಲಿಯೇ ಸುತ್ತಾಡುತ್ತಿರುವಾಗಲೇ ಅದು 'ಪ್ರದ್ಯುಮ್ನ'ವಾಗುವದು,-ದ್ಯುತಿಯನ್ನು, ಹೊಳಪನ್ನು ಪ್ರಕರ್ಷವಾಗಿ ಪಡೆಯುವದು ! (ಮತ್ತೆ ನಮ್ಮ ಭಾಷ್ಯ ಭಾಷಾ ತಜ್ಞರ ಕಡೆಗೆ 'ಒಲಿಯಿತು.' !) ಕಾಮ ಮತ್ತು ಅದರ ಕಾರ್ಯ ತೃಪ್ತಿ ಇವೆರಡರ ನಡುವೆ ಅಂತರವೂ ಅವಕಾಶವೂ ಬೆಳೆದಂತೆ ಪ್ರೇಮವು ಪರಿಪಾಕ ಗೊಂಡಿತು 'ವಿಷಯಗಳನ್ನು ಧ್ಯಾನಿಸುತ್ತಿರುವವನಲ್ಲಿ ಕಾಮವು ಉಂಟಾಗುತ್ತದೆ !' ಎಂದು ಗೀತಾಕಾರರ ಅಭಿಪ್ರಾಯ. ಆದರೆ ಪ್ರೀತಿಯ ಮಟ್ಟಿಗೆ ಈ ಕ್ರಮವು ವ್ಯಸ್ತವಾಗಿದೆ. ಕಾಮದ ವಿಷಯವನ್ನು ಧ್ಯಾನಿಸುತ್ತಿರುವವನಲ್ಲಿಯೇ ಪ್ರೇಮವು ಉತ್ಪನ್ನವಾಗುತ್ತದೆ. ಕಾಮಕ್ಕೆ ಕಲ್ಪನೆಯು ಕೂಡಿದಾಗ ಪ್ರೇಮವು ರೂಪ ಕೊಳ್ಳುತ್ತದೆ. ಈ ಕಲ್ಪನೆಗೆ ಅನುಕೂಲವು ಸಂಸ್ಕೃತಿಯು.

ಸಂಸ್ಕೃತಿ ನಾಗರಿಕತೆಯು ಬೆಳೆದಂತೆ ಕುಲ, ಗೋತ್ರ, ಜಾತಿ, ಸಂಪ್ರದಾಯ, ಶಿಷ್ಟಾಚಾರ, ವಿಧಿ–ನಿಷೇಧ, ಸ್ವಾತಂತ್ರ್ಯ. ಶಿಕ್ಷಣ, ಕಾನೂನು, ಅಭಿರುಚಿ ಮುಂತಾದ ಬಂಧ ಪ್ರತಿಬಂಧಗಳು ಕಾಮದ ಕಾಲಿಗೆ ತೊಡಕಾದಂತೆ, ಕಾಮವು ಸಾವಧ ವಾಗಹತ್ತಿತು.; ಸಂಯಮವನ್ನು ಕಲಿಯಹತ್ತಿತು. ಒಳಮುಖವಾಗತೊಡಗಿತು. ಕಾಮದ ಕಾರಣವನ್ನೂ ಕೇಂದ್ರವನ್ನೂ ಕನಸು–ನನಸುಗಳಲ್ಲಿ ಕಂಡು ತನ್ಮಯ ವಾಗಹತ್ತಿತು. ಸ್ಥೂಲವಾದ ಪ್ರಚೋದನೆಯು ಸೂಕ್ಷ್ಮವಾದ ಪ್ರೇರಣೆಯಾಯಿತು. ಕೇವಲ ಜನನೇಂದ್ರಿಯಗಳ ತಾತ್ಕಾಲಿಕ ತಾತ್ಪೂರ್ತಿಕ ಸ್ಥಾನಿಕವಾದ ಉದ್ರೇಕ– ವಿಕಾರವಾಗಿ ಉಳಿಯದೆ ಮಿದುಳನ್ನು ಸೇರಿ ಧ್ಯಾನದಲ್ಲಿ ಸುಳಿದಾಡಿ ಪ್ರಭಾವವಾಗಿ ಬಾಳಿ ಭಾವನೆಯಾಗಿ ಬಲಿತು ಪ್ರೀತಿಯೆಂಬ ಸ್ಥಾಯೀ ಭಾವ ಅಥವಾ ರಸಶಕ್ತಿ ಯಾಗಿ ಮಾರ್ಪಟ್ಟಿತು. ಮಾತು ವಕ್ರವಾಗಿ ಅಲಂಕಾರವಾಗುವಂತೆ. ಕಾಮವು ವಕ್ರವಾಗಿ ಉನ್ನತವಾಗಿ ಪ್ರೀತಿಯಾಯಿತು.

## ಕಾಮದ ಕೆಸರಿನಿಂದ ಕಾವ್ಯದ ಕಮಲ

ಧರ್ಮವು ಶಾರೀರಿಕ ಶುದ್ಧತೆಯನ್ನು ಎತ್ತಿ ಒತ್ತಿ ಹೊಗಳಲಾರಂಭಿಸಿತು. ಇದರಿಂದ ಹೆಣ್ಣಿನ ಸುತ್ತಲೂ ಒಂದು ನಿಲುಕಲಾಗದ ಮೋಹಕತೆಯ ಅಗಮ್ಯ ರಮ್ಯತೆಯ–

ವಲಯವು ಉಂಟಾಯಿತು. ಇದು ಕಾಮವನ್ನು ಕಾವ್ಯವನ್ನಾಗಿ ಕೊನರಿಸಲಿಕ್ಕೆ ಪ್ರೀತಿಯನ್ನು ಪಕ್ವಗೊಳಿಸಲಿಕ್ಕೆ ನೆರವಾಯಿತು. ಪ್ರಚೋದನೆ ಮತ್ತು ಪ್ರತಿಕ್ರಿಯೆ ಇವುಗಳ ನಡುವಿನ ಅಂತರವೂ ಅವಧಿಯೂ ಹೆಚ್ಚಾದಂತೆ ಹಿಡಿತಡೆ ಪಡೆದಂತೆ ಒಂದು ಉದ್ರಿಕ್ತ ಸ್ಥಿತಿಯು ಉನ್ಮಾನದ ಅವಸ್ಥೆಯು ಮಿದುಳನ್ನೂ ಮನಸ್ಸನ್ನೂ ಆವರಿಸುವದು. ಗೀತೆಯು ಮಾತನ್ನು ಬಳಸಿ ಬಣ್ಣಿಸುವದಾದರೆ ವಿಷಯದ ಧ್ಯಾನ ದಲ್ಲಿಯೇ ತೊಡಗಿರುವದರಿಂದ ಆ ವಿಷಯದ ಕುರಿತು ಸಂಗವು ಉಂಟಾಗುವದು. ಸಂಗದಿಂದ ಕಾಮವಾಗುವದೆಂಬ ಮಾತನ್ನು ಈ ಕಾಮ–ಪ್ರೇಮ ಮಿಮಾಂಸೆಯ ಮಟ್ಟಿಗೆ ಪಲ್ಲಟಿಸಿ ಬರೆಯಬೇಕಾಗುವದು. ಕಾಮಕ್ಕೆ ಕಾರಣವಾದ ವಿಷಯವನ್ನು ಧ್ಯಾನಿಸುವದರಿಂದ–ಧ್ಯಾನಿಸಲೇ ಬೇಕಾಗುವದರಿಂದ–ಕಲ್ಪನೆಯು ಕೆರಳಿ ಭಾವ ಲೋಕವೇ ಉದ್ದೀಪಿತವಾಗಿ ಒಂದು ರಸಪರಿಪೋಷಕವು ಆರಂಭವಾಗುವದು. ಈ ಕಲ್ಪನಾರಮ್ಯ ರಸಚರ್ವಣೆಯ ರೂಪಕ್ಕೆ 'ಬಾಷ್ಪೀಭವನ'ವನ್ನು ಹೊಂದಿದ ಕಾಮವೇ ಪ್ರೀತಿಯು. ಸಂಸ್ಕೃತಿಯ ತಿರುಳು ಸಂಯಮ. ಸಂಯಮದಿಂದ ಕಾಮವು ಪ್ರೇಮವಾಗುತ್ತದೆ.–ಪ್ರಜೋತ್ಪಾದಕ ಪ್ರಾಣಿ ಜೀವನದ ಪ್ರೇರಣೆಯು ಸಂಸ್ಕೃತಿಯ ಪಾಕಕ್ಕೆ ಇಳಿದು ಪ್ರೀತಿಯಾಗುತ್ತದೆ. ಲೇನಿನ್ನನು ಸಾರಿದ ಸೂತ್ರದ ಸಾರಾಂಶವು ಇದೇ ಸರಿ.

ಹೀಗೆ ಕಾಮವು ಪ್ರೀತಿಯ ಕಮಲವಾಗಿ ಅರಳುವಾಗ ಅದರಲ್ಲಿ ಕಾವ್ಯಮಯ ಕಲ್ಪನಾರಮ್ಯತೆಯೂ, ಆಧ್ಯಾತ್ಮಿಕತೆಯೂ ಬಂದು ಸೇರುತ್ತವೆ. ದೇಹದ ಹಸಿವೆಯು ದಯೆಯ ಹದಕ್ಕೆ ಬಳಿದು ಸಾತ್ವಿಕತೆಯಾಗಿ ಹರಿಯುತ್ತದೆ. ಶಾರೀರಿಕ ಕ್ಷೋಭವು ಆತ್ಮದ ಕೋಮಲತೆಯಾಗಿ ಮಾರ್ಪಡುತ್ತದೆ. ವೈಯಕ್ತಿಕ ಸಂಸ್ಕೃತಿಗೂ ಮೊದಲು ಸಾಮಾಜಿಕ ನಾಗರಿಕತೆಯೇ ಈ ಮಾರ್ಪಾಟಕ್ಕೆ ಕಾರಣವಾಗುತ್ತದೆ. ನಾಗರಿಕತೆಯು ಬೆಳೆದಂತೆ, ಮೈಥುನದ ವಯೋಮಾನವನ್ನು ಮುಂದೆ ದೂಡುತ್ತದೆ; ದಾಂಪತ್ಯದ ಶೀಘ್ರತೆಯನ್ನು ಹೆಚ್ಚು ಹೆಚ್ಚು ಅಶಕ್ಯಗೊಳಿಸುತ್ತದೆ. ವೈಯಕ್ತಿಕ ಶಿಕ್ಷಣ ಕ್ರಮ, ಆರ್ಥಿಕ ಪರಿಸ್ಥಿತಿಯ ತೊಡಕು–ತಾಕಲಾಟ, ವ್ಯಕ್ತಿಸ್ವಾತಂತ್ರ್ಯದ ಅಹಂಕಾರಿ ಪ್ರವೃತ್ತಿ ಇವೆಲ್ಲವೂ ಕೂಡಿಯೇ ಯುವಕ ಯುವತಿಯರು ಹೊಸ ಹರೆಯದಲ್ಲಿಯೇ ಕೂಡಿ ಬಾಳುವಡಿದಂತೆ ಒಳಸಂಚು ಮಾಡುತ್ತವೆ. ಇದರಿಂದ ಅತೃಪ್ತವಾದ ಆಕಾಂಕ್ಷೆಯು, ಅಪೂರ್ಣವಾದ ಅಪೇಕ್ಷೆಯು ಅವರ ನರನಾಡಿಗಳಲ್ಲಿ ಉರಿದಾಡುತ್ತ ಹರಿದಾಡುತ್ತ ಉಳಿಯುತ್ತದೆ. ಈ ಆಕಾಂಕ್ಷೆ–ಅಪೇಕ್ಷೆಗಳ ಆತ್ಯಂತಿಕವಾದ ಕಳವಳವೇ ಒಳಮುಖವಾಗಿ ಬೆಳೆದು ಕಲ್ಪನಾ ಜಾಲದಲ್ಲಿ ಹೆಣೆದು ನಿಲ್ಲುತ್ತದೆ. ತನ್ನ 'ಕನಸಿನ ಕೆಳದಿ'ಯನ್ನು ಉಷಾ ಸ್ವಪ್ನದ ವಲ್ಲಭನನ್ನು ಅಪ್ರಾಪ್ಯ ಕಾಮನೆಯಿಂದ ಕಳೆಗೊಂಡ ಆದರ್ಶ ವರ್ಣ ವೈಭವದಲ್ಲಿ ಹೊದ್ದಿ ಹೊಳೆಯುವಂತೆ ಮಾಡುತ್ತದೆ.

ಅಪ್ರಮೇಯವು ದಿವ್ಯವೆನಿಸುವಂತೆ ಅಪ್ರಾಪ್ಯವು, ರಮ್ಯವೆನಿಸುವದು. ಆದರ್ಶದ ಆಕರ್ಷಣವು ಅದರ ಆಸಾಧ್ಯತೆಯಲ್ಲಿಯೇ. ಸಾಧ್ಯವಾದದ್ದು ಆದರ್ಶವಾಗಿ ಉಳಿಯುವದಿಲ್ಲ. ನಾವು ಅರಸಿಯೂ ದೊರೆಯದಿದ್ದ ಸಂಗತಿಯು ನಮ್ಮ ಅರಸುವಿಕೆಯ ಕಷ್ಟದಿಂದಲೇ ಕಳೆಯನ್ನು ತಾಳುತ್ತದೆ; ದೊರೆಯಲಿಲ್ಲವಾದ್ದರಿಂದಲೇ ಬೆಲೆಯನ್ನು ತಳೆಯುತ್ತದೆ. ಕಾಮನೆಯಿಂದಲೇ ಕಾಂತಿ–ಕಮನೀಯತೆ. ವಸ್ತುವಿನ ಚೆಲುವು ಅದರ ಕುರಿತ ಬಯಕೆಯ ಬಲುಮೆಯಲ್ಲಿಯೇ ಇರುತ್ತದೆ; ಮತ್ತು ಪೂರೈಕೆ ಸಂತೃಕೆಗಳಿಂದ ದುರ್ಬಲವಾಗುವ ಬಯಕೆಯು ವಸ್ತುವಿನ ದುರ್ಲಭತೆಯಿಂದ, ಬಯಕೆಯ ಅಲ್ಲಗಳೆಯುವಿಕೆಯಿಂದ ಎಂದಿಗಿಂತಲೂ ಹೆಚ್ಚು ಸಂಪನ್ನವಾಗುತ್ತದೆ.

ಈ ತತ್ವವು ಪ್ರೀತಿಯ ವಿಕಾಸಕ್ಕೂ ಅನ್ವಯಿಸುತ್ತದೆ. ಉಪಭೋಗವು ದೂರ ಬಿದ್ದಂತೆ ಉಪಾಸನೆಯು ಉಂಟಾಗುತ್ತದೆ; ಉತ್ಕಟವಾಗುತ್ತದೆ. ಪ್ರೀತಿಯು ಅಧ್ಯಾತ್ಮಿಕವಾಗಲಿಕ್ಕೆ ಕಾಮನೆಯ ನಿರ್ಭರವಿರಬೇಕು. ಇನ್ನೊಂದೆಡೆಗೆ ನಿಯಮದ ನಿರ್ಬಂಧವಿರಬೇಕು. ಅಂದರೆ ಹೃದಯವು ಉತ್ಸಾಹ ಉಲ್ಲಾಸಗಳಿಂದ ತುಳುಕುತ್ತಿರಬೇಕು; ಆದರೆ ಪರಿಸ್ಥಿತಿಯು ಸ್ಥೈರ್ಯ ಗಾಂಭೀರ್ಯಗಳಿಂದ ತುಂಬಿರಬೇಕು. ಲೌಕಿಕ ಮಾತಿನಲ್ಲಿ ಹೇಳುವದಾದರೆ ವ್ಯಕ್ತಿಯ ಯೌವನವಲ್ಲಿಯೂ ನಾಗರಿಕತೆಯ ವೃದ್ಧಾಪ್ಯದಲ್ಲಿಯೂ ಪ್ರೀತಿಯು ಅತ್ಯಂತ ಆತ್ಮಿಕತೆಯನ್ನು ಹೊಂದುತ್ತದೆ. ಕುಲಾಚಾರ ಕಾಯಿದೆ ಕಟ್ಟಳೆ ನೀತಿನಿಯಮಗಳು ದೃಢವಾಗಿ ರೂಢವಾಗಿ ನಿಂತು ನಾಗರಿಕತೆಯು ಹಣ್ಣಿಗೆ ಬಂದ ಸಮಾಜದಲ್ಲಿ ವ್ಯಕ್ತಿಯ ಅದಮ್ಯವಾದ ಮೋಹವು ಎಷ್ಟು ಉತ್ಕಟವೋ ಅಷ್ಟು ಅದಕ್ಕೆ ಬರುವ ಅಡೆ ತಡೆಗಳು ಹೆಚ್ಚು. ಅವುಗಳಿಂದಾಗಿ ಆ ಕಾಮವು ಅಂತರ್ಮುಖವಾಗಿ ಆಧ್ಯಾತ್ಮಿಕ ಪ್ರೇಮವಾಗುವ ಸಂದರ್ಭ ಸಂಭವಗಳು ಹೆಚ್ಚು. ಸನಾತನ ಪರಂಪರೆಯ ಪುರಾತನ ಸಂಪ್ರದಾಯದ ಸಂಕೇತ ಸಂಕೀರ್ಣತೆಗಳಲ್ಲಿ ಬೆಳೆಯುವ ತರುಣರಲ್ಲಿ ಮನೋದಮನ ಹೆಚ್ಚು. ಹೀಗೆ ಸಮಾಜದ ವಿಚಾರದಿಂದ ವೈಯಕ್ತಿಕ ವಿಕಾರವನ್ನು ಹತ್ತಿಕ್ಕುವದು ಎಲ್ಲಿ ಹೆಚ್ಚೋ ಅಲ್ಲಿಯೇ ಪ್ರಣಯದ ಉತ್ಕಟತೆ, ಉತ್ಕಂಠೆ, ಪ್ರೀತಿಯ ಕಳಕಳಿ ಕಳವಳ ಇವೆಲ್ಲ ಹೆಚ್ಚು. ಶೃಂಗಾರ ರಸದಲ್ಲಿಯೂ ಸಂಭೋಗಕ್ಕಿಂತ ವಿಪ್ರಲಂಭದಲ್ಲಿ, ನಾಯಕ ನಾಯಿಕೆಯರ ಮಿಲನಸಂಯೋಗಗಳಿಗಿಂತ ವಿರಹ ವಿಯೋಗಗಳಲ್ಲಿ ಪ್ರೀತಿಯ ರಸಪರಿಪೋಷವು ಹೆಚ್ಚಿನದೆಂದು ನಮ್ಮಲ್ಲಿಯ ಕಾವ್ಯ ಮೀಮಾಂಸಕರು ಅನ್ನುವದರ ಇಂಗಿತವೂ ಇದೇ ಇರಬೇಕು. ಸಂಯಮದಿಂದ ಕಾಯದ ಕಾವಿಗೆ ಕಾವ್ಯದ ಪುಟವೇರುತ್ತದೆ !

ಇನ್ನು ಈ ಪ್ರೀತಿಯು ಒಂದು ಮನೋಧರ್ಮವಾಗಿ ಹೇಗೆ ವಿಕಾಸಗೊಳ್ಳುತ್ತದೆ ಎಂಬುದನ್ನು ನೋಡೋಣವೆ ?

## ಪ್ರೀತಿಯ 'ಮತ್ಸ್ಯಾವತಾರ'

ಪ್ರೀತಿಯ ಆರಂಭವು ನದಿಯ ಮೂಲದಂತೆಯೇ ಎಲ್ಲಿಯೋ ಮೆಲ್ಲನೆ ಗೊತ್ತಾಗದ ಗತ್ತಿನಲ್ಲಿ ಒದಗಿಬರುತ್ತದೆ. ಪ್ರೀತಿಯ 'ಮತ್ಸ್ಯಾವತಾರವು' ಒಂದು ಪರಿಯಿಂದ ವಾತ್ಸಲ್ಯದ ರೂಪವಾಗಿ ಪರಿಣಮಿಸುತ್ತದೆ. ಹುಡುಗಿಯು ತಂದೆಯ ಕುರಿತೂ, ಹುಡುಗನು ತಾಯಿಯ ಕುರಿತೂ ಒಂದು ವಿಶೇಷವಾದ ಕೋಮಲಭಾವವನ್ನು ಬೆಳಿಸಿಕೊಳ್ಳುವದು ಕಂಡುಬರುತ್ತದೆ. ಇದು ಪ್ರೀತಿಯ ಆರಂಭಿಕ ರೂಪ. ಅನಂತರದ ರೂಪವೆಂದರೆ, ಹುಡುಗ ಹುಡುಗಿಯರು ತಮ್ಮ ವಯಸ್ಸಿಗೆ ಹೆಚ್ಚು ಹತ್ತಿರದ ವ್ಯಕ್ತಿಯ ಕುರಿತು ತೋರ್ಪಡಿಸುವ ವಾತ್ಸಲ್ಯಕ್ಕಿಂತಲೂ ಹೆಚ್ಚು ಭಾವಾವೇಶದ ಭಕ್ತಿಯು. ಸಾಮಾನ್ಯವಾಗಿ ಇಂದಿನ ಸಮಾಜದಲ್ಲಿ ಈ ವ್ಯಕ್ತಿಯು ಅಂಥ ಮಕ್ಕಳ ಶಿಕ್ಷಕ ಶಿಕ್ಷಕಿಯರಲ್ಲಿ ಒಬ್ಬರಾಗಿರುತ್ತಾರೆ. ಪ್ರತಿಯೊಂದು ಶಾಲಾ ಇಯತ್ತೆಯ ವಿದ್ಯಾರ್ಥಿ ವರ್ಗದಲ್ಲಿಯೂ ತಮಗೆ ವಿರುದ್ಧ ಲಿಂಗಿಯಾದ ಶಿಕ್ಷಕನ ಇಲ್ಲವೇ ಶಿಕ್ಷಕಿಯ ಕುರಿತು ಮಧುರ ಆದರ ಭಾವವನ್ನು ಉತ್ಕಟವಾಗಿ ತಾಳುವ ಅಥವಾ ತೋರಿಸುವ ಮಕ್ಕಳು ಇದ್ದೇಇರುತ್ತಾರೆ. (ನಮ್ಮ ದೇಶದಲ್ಲಿ ಗಂಡು ಮಕ್ಕಳ ಶಾಲೆಗಳಲ್ಲಿ ಶಿಕ್ಷಕಿಯರ ಸಂಖ್ಯೆಯು ವಿಶೇಷವಿರುವ ಪಾಡಿಕೆ ಇಲ್ಲ. ಆದ್ದರಿಂದ ಬೆಳೆಯುವ ಹುಡುಗರು ಶಿಕ್ಷಕಿಯ ಆರಾಧನೆಯಲ್ಲಿ ತೊಡಗಿದ ಉದಾಹರಣೆಗಳೂ ದೊರೆಯುವ ಪಾಡಿಕೆ ಇಲ್ಲ.) ಹೆಣ್ಣುಮಕ್ಕಳು ಕೆಲವೊಮ್ಮೆ ತಮ್ಮ ಯಾವನೊಬ್ಬ ಶಿಕ್ಷಕನನ್ನು ಮನಸಾರೆ–ಮನದಲ್ಲಿಯೇ–ಆರಾಧಿಸುವದು ಕಂಡು ಬರುವಂತೆ, ಹಲವೊಮ್ಮೆ ಗಂಡು ಮಕ್ಕಳೂ (ವಿಶೇಷವಾಗಿ ಅಳ್ಳೆದೆಯ ಹೆಂಗೆಳೆಯತನದ 'ಸುಕುಮಾರ' ಕುಮಾರರು !) ಹಾಗೆ ಶಿಕ್ಷಕನನ್ನು ಆರಾಧಿಸುವದೂ ಪಾಡಿಕೆ ಇದೆ. ಮತ್ತು ದುರ್ದೈವವೇನೆಂದರೆ, ಇಂಥ ಮುಗ್ಧ ಆರಾಧನೆಯ ಅಥವಾ ಮೂಕ ಭಕ್ತಿಯ ಅನುಚಿತ ಲಾಭವನ್ನು ಪಡೆಯ ಹೋಗಿ ಆ ಮಕ್ಕಳ ಆಯುಷ್ಯಕ್ಕೂ ತಮ್ಮ ಭವಿಷ್ಯಕ್ಕೂ ತೊಡಕಾಗುವ ತಿಳಿಗೇಡಿ ಶಿಕ್ಷಕರೂ ಕಂಡು ಬರುತ್ತಾರೆ. ಅಂಥ ಮೆಚ್ಚಿದ ಮೆಚ್ಚಿಗೆಯ ಮಕ್ಕಳನ್ನು ಪ್ರಕಟವಾಗಿ ಮುದ್ದಾಡುತ್ತ, ಅವರ ಕುರಿತು ಪಕ್ಷಪಾತದ ಅಯೋಗ್ಯ ಆತ್ಮೀಯತೆಯ ವರ್ತನೆಯನ್ನು ಅವರ ವರ್ಗದವರೆದುರಿಗೇ ನಡೆಯಿಸುತ್ತ ಅನ್ಯಾಯ ಅಪಹಾಸ್ಯಗಳಿಗೆ ಗುರಿಯಾಗುವ ಗುರುಗಳು ಕಡಿಮೆ ಇರುವದಿಲ್ಲ. ಇರಲಿ. ಈ ಗುರು–ಶಿಷ್ಯ ಸಂಬಂಧದ ಸೂಕ್ಷ್ಮ ಚರ್ಚೆಯು ನಮ್ಮ ವಿಷಯವಲ್ಲ.

ನಮ್ಮ ಹೇಳಿಕೆಯ ಹುರುಳು ಇಷ್ಟೇ: ಶಾಲೆಗೆ ಹೋಗುವ ವಯಸ್ಸಿನ ಮಕ್ಕಳಲ್ಲಿ ಅವರ ವಯಸ್ಸಿನ ಮತ್ತು ಮನಸ್ಸಿನ ಆ ಅವಸ್ಥೆಯಲ್ಲಿ ತಮ್ಮ ವಿರುದ್ಧಲಿಂಗದ

ಅಧ್ಯಾಪಕ-ಅಧ್ಯಾಪಿಕೆಯರಲ್ಲಿ ಆಳವಾದ ಆಸಕ್ತಿಯು ಬೆಳೆಯುವ ಸಂಭವವು ವಿಶೇಷವಾಗಿ ಕಂಡುಬರುತ್ತದೆ. ಈ ಆಸಕ್ತಿಯಲ್ಲಿ ಅನೈಸರ್ಗಿಕವಾದದ್ದೂ ಅನೈತಿಕ ವಾದದ್ದೂ ಏನೂ ಇರವದಿಲ್ಲ. ಅದಕ್ಕೆ, ಒಂದು ತಾತ್ಕಾಲಿಕ ಲಕ್ಷಣವೆಂದೇ ತಿಳಿದು, ಅಂಥ ಅಧ್ಯಾಪಕ ಅಧ್ಯಾಪಿಕೆಯರು ಹವೆಗೆಟ್ಟ ಮಹತ್ವವನ್ನೂ ಉತ್ತೇಜನೆ ಉದ್ದೀಪನೆಗಳನ್ನೂ ಕೊಡದಿದ್ದರೆ ಯಾವ ಅನರ್ಥವೂ ಒದಗುವದಿಲ್ಲ. ಪ್ರೀತಿ ಭಾವನೆಯು ಸ್ಥಿರವಾಗಿ ರೂಪಗೊಳ್ಳುವ ನಿಟ್ಟಿನಲ್ಲಿ ಇದೊಂದು ಮಟ್ಟ,-ಪ್ರೀತಿಯ 'ವಾಮನಾವತಾರ'ವೆನ್ನಿರಿ ! ಕಲ್ಪನಾರಮ್ಯತೆಯ ಅಂಶವು ಇಂಥ ಆಸಕ್ತಿಯಲ್ಲಿ ಆದಾಗಲೇ ಅತ್ಯಂತವಾಗಿರುತ್ತದೆ. ಆಸಕ್ತಿಯನ್ನು ತೋರಿಸುವ ಮಕ್ಕಳ ಭಾವನೆಯು ತೀವ್ರವಿದ್ದರೆ ಅಂಥ ಅನುರಾಗವನ್ನು ನಡೆ-ನುಡಿಗಳಲ್ಲಿ ಒಡಮೂಡಿಸು ವವರಲ್ಲಿ ಕಾವ್ಯಮಯತೆಯೂ ಪ್ರಕಟವಾಗುವದು. ಆದರೆ ಇದೆಲ್ಲ ಭಾವನೆಯು ಮುಗ್ಧವಾಗಿಯೇ ಇರುತ್ತದೆ. ಅದರಲ್ಲಿ ಶಾರೀರಿಕ ಅಂಶವು ಸೇರಿರುವದಿಲ್ಲ. ಮಕ್ಕಳ ದೃಷ್ಟಿಯಲ್ಲಿಯಾದರೂ ಸೇರಿರುವದಿಲ್ಲ. ಬುದ್ಧಿ ಪೂರ್ವಕವಾಗಿ ಮಕ್ಕಳು ಅಧ್ಯಾ ಪಕರಿಂದ ಆಂಗಿಕ ಚೇಷ್ಟೆಗಳ ತೃಪ್ತಿಯನ್ನು ಬಯಸುವದಿಲ್ಲ. (ತಮ್ಮ ಪ್ರೀತಿಯ ಅಧ್ಯಾಪಕರು ತಮ್ಮನ್ನು ಅಪ್ಪಿಕೊಳ್ಳಬೇಕು ಮುದ್ದಾಡಬೇಕು-ಎಂದು ಆ ಎಳೆಯ ಕೆಳೆಯರೂ ಕೆಳದಿಯರೂ ಅಪೇಕ್ಷಿಸುವದಿಲ್ಲ.) ಗಂಟುಬಿದ್ದ ಅಧ್ಯಾಪಕರು ಧೂರ್ತ ರಿದ್ದರೆ ಮಾತ್ರ ಮಕ್ಕಳಿಗೂ ಅವರಿಗೂ 'ಅಂಟಿದ ನಂಟಿನ ಕೊನೆ ಬಲ್ಲವರಾರು' ಎಂದು ಯಾವ 'ಕಾಮಾಕ್ಷಿ'ಯೂ ಹೇಳಲಾರಳು ! ಅಧ್ಯಾಪಕರು ಸಂಯಮ ದಿಂದ-ಸಮದೃಷ್ಟಿಯಿಂದ-ನಡೆದರೆ, ನೋಡಿಕೊಂಡರೆ, ಮಕ್ಕಳ ಈ ಮೋಹವು ವ್ಯಾಮೋಹವಾಗುವದಿಲ್ಲ.

## ಪ್ರೀತಿಯ ವಾಮನಾವತಾರ

ಇದರ ನಂತರದ ಅವಸ್ಥೆಯೇ 'ಪೌಗಂಡ ಪ್ರಣಯದ' ಅವಸ್ಥೆ. ಪೋರಿ-ಪೋರರ ಪ್ರೇಮಲೀಲೆ, ಇದಕ್ಕೆ 'ಹಸುವಿನ' ಪ್ರೀತಿಯೆಂದು ಕರೆಯುವ ವಾಡಿಕೆ. ತಮ್ಮ ವರ್ಗದಲ್ಲಿಯ, ಓಣಿಯಲ್ಲಿಯ, ಓರಿಗೆಯ, ಇಲ್ಲವೇ ಒಡನಾಟದ ಹುಡುಗನನ್ನೋ ಹುಡುಗಿಯನ್ನೋ ಕೆಳೆಯ ಚಿನ್ನಾಟವಾಡುವ ರೀತಿಯಿದು. ಇಂಥ ಪ್ರೀತಿಯು ಸಾಮಾನ್ಯವಾಗಿ ಗುಪ್ತವಿರುತ್ತದೆ. ಕೆಲವೊಮ್ಮೆ ತಮ್ಮ ಪ್ರಿಯ ವ್ಯಕ್ತಿಯ ಇದುರಿಗೇ ಒಪ್ಪಿಕೊಂಡದ್ದಿರುವದಿಲ್ಲ, ಆಡಿಕಾಣಿಸಿದ್ದಿರುವದಿಲ್ಲ ! ಹಲವೊಮ್ಮೆ ತಪ್ಪ ಪ್ರಿಯರಿಗೆ ಈ ಗುಪ್ತ ಪ್ರೀತಿಯು ಅರ್ಪಿಸುವ (ಕಳುಹಿಸುವ) ಕಾಣಿಕೆಯು ಕೂಡ ಅನಾಮಿಕವಾಗಿರುತ್ತದೆ. 'ಕನಸಿನ ಕೆಳದಿ'ಗಾಗಿ, ಚಿತ್ರಪಟ ಸೃಷ್ಟಿಯ ತಾರಕೆ ಯರಿಗಾಗಿ ಕಳವಳಿಸಿ ಕರಗುವ ಕಾವಿನ ಕಾಲವಿದು ! ಕೋಣೆತುಂಬ ತಮ್ಮ

ಮೆಚ್ಚಿಗೆಯ ಸಿನೇಮಾ ಸುಂದರಿಯ ವಿವಿಧ ವಿಲಾಸ–ವಿಭ್ರಮಗಳ ಚಿತ್ರಗಳನ್ನು ತೂಗಬಿಟ್ಟು ತದೇಕಧ್ಯಾನರಾಗಿ ಕೊನೆಗೂ ತಲೆಗಿಂಬನ್ನೇ ಎದೆಗವಚಿಕೊಂಡು ನಿದ್ದೆಹೋಗಿ ಅನಿರುದ್ಧವಾಗಿ ಉಷಾ ಸ್ವಪ್ನಗಳನ್ನು ಕಾಣುವ ಕಾಲವಿದು! 'ಓ ನನ್ನ ನಲ್ಲೆ! ನಿನಗಾಗಿ ನೂರು ನರಕಗಳನ್ನೂ ಈಜಬಲ್ಲೆ!' ಆಶ್ವಾಸನವನ್ನು ಬರೆದು ಕಳಿಸಿಯೂ ಕೊನೆಗೆ ಕೊಂಚ ನೆಗಡಿಯಾಯಿತೆಂದು ಮನೆಯಲ್ಲಿಯೇ ಬಿದ್ದುಕೊಂಡು, ನಲ್ಲೆಯ ಕೆನ್ನೆಗಳ ಕುರಿತು ಸೀಸ ಪದ್ಯಗಳನ್ನು ಕಟ್ಟಿ ಅವುಗಳ ಪ್ರಕಟನೆಗಾಗಿ ಕೈಬಹರದ ಪತ್ರಿಕೆಯನ್ನೊಂದು ಹೊರಡಿಸುವ ಹಂಚಿಕೆಯಲ್ಲಿಯೇ ಹಗಲಾಗುವತನಕ ಹಾಸಿಗೆಯಲ್ಲಿ ಹೊರಳಾಡಿ ಹೊತ್ತು ಕಳೆಯಬಲ್ಲ ಕಾವ್ಯದ ಕಾಲವಿದು! ಈ 'ಪೌಗಂಡ ಪ್ರಣಯ'ದ ಒಂದು ಚೆಂದವಾದ ಚಿತ್ರವು ಇತ್ತೀಚೆಗೆ ಪ್ರಕಟವಾದ 'ಅಲವ ಹೂ' ಎಂಬ ಕಾದಂಬರಿಯಲ್ಲಿ ಬಂದಿದೆ.

ಈ ಅವಸ್ಥೆಯಲ್ಲಿ ಹುಡುಗರು ಮುಗ್ಧ; ಹುಡುಗಿಯರೇ ಮುಖರ–ಗಂಡಿಗಿಂತ ಹೆಣ್ಣು ಹೆಚ್ಚು ದಿಟ್ಟವಿರುತ್ತದೆ. ಆರಂಭದ ವರ್ಷಗಳಲ್ಲಿ ಹೆಚ್ಚು ಹೆಚ್ಚು ಬುದ್ಧಿ ಬಲಿತಂತೆ ಈ ಮೂಲದ ಧಾರ್ಷ್ಟ್ಯವು ಕಡಿಮೆಯಾಗುತ್ತ ಹೋಗುತ್ತದೆ; ಆದರೂ ಪ್ರಳಯದ ಕಲೆಗಳಲ್ಲಿ ಹೆಣ್ಣು ಕೊನೆಯವರೆಗೂ ಒಂದು ಉನ್ನತವಾದ–ಅಂದರೆ ಗಂಡಿನ ನಡತೆಯಲ್ಲಿ ಕಾಣುವದಕ್ಕಿಂತಲೂ ಉನ್ನತವಾದ–ಒಂದು ತಂತ್ರ–ತಜ್ಞತೆಯನ್ನು ತೋರಿಸುವಳು. ಪ್ರಣಯ ವ್ಯವಹಾರದಲ್ಲಿ ಶೃಂಗಾರ ಸಂಭೋಗ–ವಿಪ್ರಲಂಭಗಳ ಭಾವ–ಭಂಗಿಗಳಲ್ಲಿ ಗಂಡಿಗಿಂತಲೂ ಹಿರಿದಾದ ಚಾತುರ್ಯವನ್ನು ಒಡಮೂಡಿಸುವಳು. ಹುಡುಗನು ಕುರಿಯಂತೆ ಕಾಣುವನು; ಹುಡುಗಿಯು ತನ್ನನ್ನು ತಾನು ಆಳುತ್ತ ತೂಕದಿಂದ ನಡೆಯುವಳು. ಬೆಂಕಿಯೊಡನೆ ಆಡಿಯೂ ಬೆರಳು ಸುಟ್ಟುಕೊಳ್ಳದಂತೆ ಆಕೆ ನೋಡಿಕೊಳ್ಳಬಲ್ಲಳು. ಪರಿಸ್ಥಿತಿಯು ಹದಗೆಡದಿರುವಂತೆ, ಪ್ರಸಂಗವು ದುರ್ಘಟನೆಗೆ ಜಾರದಂತೆ, ಹುಡುಗನನ್ನು ಕೆಣಕಿಯೂ ಕೆರಳಿಕೆಯನ್ನು ತಪ್ಪಿಸಿಕೊಳ್ಳುವಂತೆ. ಅದಷ್ಟು ಹತ್ತಿರ ಸೆಳೆಯುವ ಬಿನ್ನಾಣದಲ್ಲಿಯೇ ಸಾಕಷ್ಟು ದೂರವಿಡುವ ಬಿಂಕವನ್ನು ಮೆರೆಯಿಸಲು ಮರೆಯದೆ, ಸನಿಯವಿದ್ದೂ ಸಲಿಗೆ ತೋರದೆ, ಸಲಿಗೆಯಿದ್ದೂ ಸಲಿಸಲಾಗದೆ, ಒಂದು ಬಗೆಯ 'ಸ್ಥಿತಪ್ರಜ್ಞತೆ'ಯನ್ನು ಅವ್ಯಕ್ತವಾಗಿ ವ್ಯಕ್ತಮಾಡಬಲ್ಲಳು. ಆದರಿಂದ ತನ್ನ ವ್ಯಕ್ತಿತ್ವದ ಕಳೆಯನ್ನು ಹೆಚ್ಚಿಸಬಲ್ಲಳು. ಈ ಪಟುತ್ವದ ಫಲವೇನಂದರೆ, ಎಷ್ಟೋ ಸಲ ಕಟ್ಟೆಯ ಕಟು ಟೀಕೆಯಲ್ಲಿಯೂ ಪೇಟೆಯಪಾಂಡಿತ್ಯದಲ್ಲಿಯೂ ಇಂಥ ಒಬ್ಬ ಹುಡುಗಿಯ ಕುರಿತು ಆತ್ಮಸಂಭಾವಿತರೂ ಸ್ವಯಂಭೂ ಸಮಾಜಸುಧಾರಕರೂ ಕಟ್ಟಿದ ಅನುಮಾನಗಳೂ ಪಟ್ಟ ಅಭಿಪ್ರಾಯಗಳೂ ಸುದೈವದಿಂದ ಸಂಪೂರ್ಣ ಸುಳ್ಳಾಗುವವು. ಹಲವು ಹುಡುಗರನ್ನು ತನ್ನ ಸುತ್ತಲೂ ಸುಳಿದಾಡಲು ಹಚ್ಚಿ ಪ್ರಣಯದ ಬಿನ್ನಾಣವಾಡುವ

ಇಂಥ ಚೆನ್ನಿಯು ಮುಂದೆ ಚೆನ್ನಾಗಿ ಕುಟುಂಬ ವತ್ಸಲಳಾಗಿ ಸಂಸಾರವನ್ನು ಸಾಗಿಸಿಕೊಂಡು ಹೋಗುವದು ಕಂಡುಬರುವದುಂಟು; ಅತ್ತ ಪರಮ ಸಾತ್ವಿಗಳಾಗಿ 'ಪಂಚಕನ್ನೆ'ಯರ ಮಾಲಿಕೆಯು ಹೊಸ ಆವೃತ್ತಿಯಲ್ಲಿ ತಮ್ಮ ಹೆಸರುಗಳೂ ಸೇರಲು ತಕ್ಕವಾಗಿವೆಯೆಂಬ 'ಸಾತ್ವಿಕ' ದರ್ಪದಲ್ಲಿ ಹೊಗರಾಡುವ ಮಡಿವಂತ ಹುಡುಗಿಯರಲ್ಲಿಯೇ ಕೊನೆಗೆ ಒಬ್ಬಾಕೆಯು ಕದ್ದಕಾಮದ ಮುಸುಕಿನ ಮೋಸಕ್ಕೆ ಬಲಿಯಾಗಿ ಕುಲಟೆಯೆನಿಸಿಕೊಳ್ಳುವ ದುರ್ದೈವವೂ ಕಂಡು ಬರುವದುಂಟು! ಹೀಗೆ ಸಾಮಾನ್ಯವಾಗಿ ಹೊಸ ಹರೆಯದ ಈ ಅಭಿಸಾರವೆಲ್ಲ ವ್ಯಭಿಚಾರದ ಪ್ರಸ್ತಾಪನೆಯಲ್ಲ. ಇಂಥ ವ್ಯವಹಾರದಲ್ಲಿ ಮೋಹದ ಕೇಂದ್ರವಾದ ಹೆಣ್ಣೇ ಗಂಡಿಗಿಂತ ಹೆಚ್ಚು ಎಚ್ಚರಿಕೆಯುಳ್ಳವಳಿರುತ್ತಾಳೆ. 'ಸವಿಯೇ ಚೆಲುವಿನ ಜೇನು, ಹೂ ಕೀಳಬೇಕೆನು ? ನೋಟ ಕೂಟವು ಸಾಕು ಮಾಗುತ್ತಿರು !' ಎಂದು ಕವಿ ಬೇಂದ್ರೆಯವರು ಹೂವಿಗೆ ಸಾರಿದ ಸಂದೇಶವನ್ನೇ ಪೌಗಂಡ ಪ್ರಣಯದಲ್ಲಿ ಹುಡುಗ–ಹುಡುಗಿಯರು ತಾವೇ ಒಬ್ಬರೊಬ್ಬರಿಗೆ ಕೊಡುವಂತಿದೆ !

ಏಕಂದರೆ ಹುಡುಗರೂ ಹಾಗೆಯೇ ವಿಚಿತ್ರವಾಗಿ ವರ್ತಿಸುವರು. ತಾನು ಮೆಚ್ಚಿದ ಹುಡುಗಿಯನ್ನು ತನ್ನವಳಾಗಬೇಕೆಂದು, ಮನಸಾರೆ ಬಯಸಿದ ಹುಡುಗಿಯನ್ನು ತಪ್ಪಿಸಿಕೊಂಡು, ಆಕೆಯೊಂದಿಗೆ ಭೆಟ್ಟಿ–ಭಾಷಣಗಳನ್ನೇ ತಪ್ಪಿಸಿಕೊಳ್ಳಲಿಕ್ಕೆ ಸುಮ್ಮನೆ ತನ್ನ ದಾರಿಯನ್ನೇ ಬಿಟ್ಟು ಹರದಾರಿ ದೂರ ಸುತ್ತಾಡಿ ಪೇಚಾಡುವದುಂಟು. ಕತ್ತಲೆಯಲ್ಲಿ ಏಕಾಕಿಯಾಗಿ ಅಲೆದಾಡುವದುಂಟು; ಏಕಾಂತದಲ್ಲಿ ಮೈಮರೆತು ಮೈಗಳ್ಳನಂತೆ ಕೂಡ್ರುವದುಂಟು. ಹಗಲಲ್ಲಿ ಹಾದಿಗೆಟ್ಟ ಒಂಟೆಯಂತೆ ಒಂಟಿಗನಾಗಿ ಮೋರೆಯಲ್ಲಿ ಮಬ್ಬು ಗಂಟಿಕ್ಕಿ ಎಲ್ಲಿಂದೆಲ್ಲಿಗೋ ಅಡ್ಡಾಡುವದುಂಟು-ಎಲ್ಲಾದರೂ ಅಡ್ಡಾಗುವದೂ ಉಂಟು. ಗೀತೆಯಲ್ಲಿ ಬಣ್ಣಿಸಿದ ಸಂಯಮಿ–ಮುನಿಯಂತೆ ನಿದ್ದೆ ಮಾಡುವಾಗೆಲ್ಲ ಎಚ್ಚರವಿರುವದುಂಟು; ಎಚ್ಚರವಿರಬೇಕಾದಾಗಲೆಲ್ಲ ನಿದ್ದೆಯಲ್ಲಿ ನಡೆಯುವಂತೆ ಕನಸು ಕಾಣುವದುಂಟು. ಉದಾಸೀನ ಚಿಂತೆಯಲ್ಲಿ ಕಾಲವನ್ನು ಕಳೆಯುವದರಿಂದ ತನ್ನ ಒಡನಾಡಿಗಳ ಜತೆಯಲ್ಲಿ ಕೂಡಿ ನಡೆಯುವ ಹದವೇ ತಪ್ಪಿದಂತಾಗಿ ಮಾತುಗಳಲ್ಲಿಯೂ ಕೃತಿಗಳಲ್ಲಿಯೂ ಅಸಡ್ಡಾಳತನವನ್ನು ಅಡಿಗಡಿಗೂ ಹೊರಗೆಡಹುವದುಂಟು.

## ವಿಕೃತಿ - ಪ್ರಕೃತಿ :

ಈ ಬಗೆಯ ದಮನದ ದಾರಿಯನ್ನು ಹಿಡಿದ ಪೌಗಂಡ ಪ್ರಣಯದಿಂದ ಕೆಲವೊಮ್ಮೆ ವಿಪರೀತ ಪರಿಣಾಮಗಳು ಒದಗಿಬರುತ್ತವೆ. ಕೆಲವು ಹೊಸ ಹರೆಯದ

ಹುಡುಗರಲ್ಲಿ ತಾಯಿಯ ಕುರಿತು ತೀವ್ರವಾದ ಭಕ್ತಿಯು ಹುದುಗಿರುತ್ತದೆ. ತಾಯಿಯಿಂದ ತೀರ ಸಲಿಗೆಯ ಸಂಗೋಪನೆಯನ್ನು ಪಡೆಯುತ್ತಿರುತ್ತಾರೆ; ತಾಯಿಯಲ್ಲಿಯೂ ತೀರ ಕಕುಲಾತಿಯ ಆಕ್ಕರವನ್ನು ನೆಲಸಿಕೊಂಡು ಬೆಳೆದಿರುತ್ತಾರೆ. ಇಂಥವರು ಎಲ್ಲ ಹೆಣ್ಣಿನಲ್ಲಿಯೂ ತಾಯಿಯ ಮಾದರಿಯನ್ನೇ ಅವ್ಯಕ್ತವಾಗಿ ಕಾಣಹತ್ತುವರು. ತಾಯಿಯಂಥ ಹೆಣ್ಣೇ ಉತ್ತಮ ಹೆಣ್ಣು. ಆದರೆ ತಾಯಿಯಂತೆ ಅಂದಮೇಲೆ ಜೀವದ ಜತೆಗಾರ್ತಿ ಆಗಲು ತೀರ ನಿಷಿದ್ಧವಿದ್ದ ಪೂಜ್ಯವು ತ್ಯಾಜ್ಯವೂ ಅನಿಸುವ ಹೆಣ್ಣು–ಈ ಉಭಯ ಸಂಕಟದ ತೊಳಲಾಟದಿಂದ ಪಾರಾಗಲು ಇಂಥ ತರುಣರು ತಮ್ಮ ಮುಗ್ಧ ಪ್ರೀತಿಗೆ ವ್ಯಕ್ತಪ್ರಣಯದ ರೂಪವನ್ನು ಕೊಡಲಾರದೇ ಅವರ ಮನವು ಮುಖಪಡೆಯದೆ ಆಧ್ಯಾತ್ಮಿಕ ಪ್ರೇಮದ ಆರಾಧನೆ(?)ಯಲ್ಲಿ, ಅಥವಾ ವಿಶ್ವಮಾತೆಯೆಂಬ ಯಾವಳೋರ್ವ ಮಹಾ ವಿಭೂತಿಯ, ಇಲ್ಲವೆ ದೈವತದ ಪ್ರೀತ್ಯಾದರದ ಉತ್ಕಟ ಆವೇಶದಲ್ಲಿ–ಅಥವಾ ನಾಡದೇವಿಯ ಸೇವಾ ವ್ರತದಲ್ಲಿ ಕರ್ತವ್ಯದ ಕಂಕಣ ಕಟ್ಟಿಕೊಂಡು, ತಮ್ಮ ಶೂನ್ಯ ಹೃದಯವನ್ನೇ ನಿರಾಕಾರ ನಿರುತ್ತರ ಪ್ರೇಮದ ಗೋರಿಯನ್ನಾಗಿ ಮಾಡಿ, ಆಮರಣ ಅವಿವಾಹಿತ ರಾಗಿ ಬದುಕಬಹುದು. ಏಕೆಂದರೆ ಇಂಥ ತೀವ್ರ ಭಾವುಕ–ವೇದನಾಮಯ ಹೃದಯಕ್ಕೆ ಹೆಣ್ಣಿನ ಒಲವೇ ಅತ್ಯಾಚಾರವೆನಿಸುತ್ತದೆ. ತನ್ನ ಅಂತರಾಳದ ಭಾವನೆಯ ಆವೇಶವನ್ನು ತನಗೆ ತಾನೇ ಒಪ್ಪಿಕೊಳ್ಳಲು ಕೂಡ ಅಸಹ್ಯವೆನಿಸುತ್ತದೆ. ಇದರಿಂದ ಇಂಥ ಭಾವನಾಮಯ ತರುಣನು ಒಮ್ಮೆಲೇ ನೈಷ್ಠಿಕ ಬ್ರಹ್ಮಚಾರಿ ಯಾಗುವ ನಿರ್ಧಾರಕ್ಕೆ ಮುಟ್ಟುತ್ತಾನೆ.

ಆದರೆ ಇಂಥ ಯಾವದೇ ಒಳತೊಡಕು ಇಲ್ಲದ ಇತರ ಹುಡುಗರು ಹೊರ ಹಾದಿಯನ್ನು ಹಿಡಿಯುತ್ತಾರೆ. 'ಕಾಂತಾನಿವಹದ ನಿಬ್ಬರದ ನುಡಿಗಳನ್ನು' ಸ್ವಾಗತಿಸಿಯೇ ಸಟ್ಟವಿಗನಂತೆ ಅರ್ಜುನನು ಮತ್ಸ್ಯ ಭೇದಕ್ಕೆ ಮುಂದೆಬಂದಂತೆ, ಮೀನಾಕ್ಷಿಗಳ ಹೃದಯವನ್ನು ತಮ್ಮ 'ಪೌರುಷ'ದಿಂದ ಭೇದಿಸಲೆಂದೇ ಇಂಥ ಹೊಸ ಹುಮ್ಮಸದ ಹರೆಯದ ಹುಡುಗರು ಹಟತೊಟ್ಟಂತೆ ಹಾರಾಡುತ್ತಾರೆ, ಹೋರಾಡುತ್ತಾರೆ. ಪೌಗಂಡಾವಸ್ಥೆಯಲ್ಲಿ ಈ ಹುಡುಗರು ಪ್ರದರ್ಶನ ಪ್ರಿಯ ರಾಗುತ್ತಾರೆ; ಮನೋಗತಳಾದ ಪ್ರಿಯೆಯ ದರ್ಶನ ಪ್ರೇಮವೇ ಈ ಪ್ರದರ್ಶನ ಪ್ರಿಯತೆಗೆ ಸ್ಫುರಣವಾಗುತ್ತದೆ. ಕೇಶಭೂಷೆ, ವೇಷಭೂಷೆ, ಎಂದೂ ಇಲ್ಲದ ಅಚ್ಚುಕಟ್ಟು ನವಿಲಿನ ಸೋಗೆಗಳಂತೆ, ಹುಂಜದ ಪುಚ್ಛದಂತೆ–ಕಾಣಿಸಿಕೊಳ್ಳುವವು. ಶಾಲೆಯ ಕ್ರೀಡಾಂಗಣಗಳಲ್ಲಿ ಶರೀರ ಬಲದ ಕಸರತ್ತು ಕವಾಯತ್ತುಗಳಲ್ಲಿ ಆಟ ಓಟಗಳ ಪಂದ್ಯಾಟಗಳಲ್ಲಿ ಇಂಥ ತರುಣರು ಕಾಳಗದ ಕೆಚ್ಚು ರೊಚ್ಚುಗಳಿಂದ ಭಾಗವಹಿಸುತ್ತಾರೆ. ಪಶು ಪ್ರಪಂಚದಲ್ಲಿ ಹೆಣ್ಣಿಗಾಗಿ ಗಂಡು ಪಶುಗಳು ಹುಚ್ಚು

ರಭಸದಿಂದ ಹೂಡುವ ಮೇಲಾಟದ ಹೋರಾಟಗಳನ್ನೇ ಹಚ್ಚಹರೆಯದ ನರ-ಪಶುವು ಆಟದ ಬಯಲಿನಲ್ಲಿ ಮತ್ತೆ ಹೋರಾಡಿ ತೋರಿಸುತ್ತಾನೆ ! ಇಷ್ಟೇ ಅಲ್ಲ, ಮುಂದೆ ಪ್ರೌಢ ಜೀವನದಲ್ಲಿ ತನ್ನ ಅರ್ಧಾಂಗಿಯ ಮುಖದ ನಗೆಮುಗುಳು ಬಾಡದಂತೆ ನೋಡಿಕೊಳ್ಳಲು, ಹೊರ ಪ್ರಪಂಚದಲ್ಲಿ ಹೂಡಿ ಗೆಲ್ಲಬೇಕಾದ ಪಣ ಕಾಸಿನ ಹೆಣಗಾಟಗಳ ಸಲುವಾಗಿ ಹುರಿದುಂಬಿಕೊಳ್ಳಲು ಈ ಆಟದ ಬಯಲಿನ ಅಂಗಸಾಧನೆಗಳ ಏರಾಟ ಇದಿರಾಳಿತನಗಳು ಒಂದು 'ತಾಲೀಮು'ದಂತಾಗುವವು. ಹೀಗೆ ಪ್ರೀತಿಯು ಪ್ರಪಂಚದ ಮುಂದೋಟ ಮುನ್ನೋಟಗಳಿಗೆ ಗತಿಕೊಡುವ ಶಕ್ತಿಯಾಗುವದು. ಮನೋರಥದ ಗಾಲಿಗಳು ಭವಿಷ್ಯದ ಭಾಗ್ಯಪಥದಲ್ಲಿ ಉರುಳುವಂತೆ ಮಾಡುವ ಪ್ರೇರಣೆಯಾಗುವದು.

ಹೀಗೆ ವಿವಿಧ ಅವಸ್ಥೆಗಳೊಳಗಿಂದ ಪ್ರೀತಿಯು ಮುಂದೆ ಸಾಗುವದು. ಅಲ್ಲಿ ಗುಪ್ತಗಾಮಿನಿಯಾಗಿ, ಇಲ್ಲಿ ಪ್ರಕಟ ಪ್ರವಾಹವಾಗಿ ಒಂದೆಡೆಗೆ ಅಡೆ-ತಡೆಗಳಲ್ಲಿ ಸಿಲುಕಿ ಸುಳಿಯಾಗಿ ಸುತ್ತಾಡಿ, ಇನ್ನೊಂದೆಡೆಗೆ ಜೀವನಾಧಾರವಾದ ವಿಶಾಲ ಸಂಚಯವಾಗಿ, ಸೆಲೆಯಾಗಿ, ಅಲೆಯಾಗಿ, ಸೆಳವಾಗಿ, ಹುಚ್ಚು ಹೊಳೆಯಾಗಿ ವಿಕಾರಗೆಟ್ಟರೆ ಮನೆ ಮಾರುಗಳನ್ನೇ ಕೊಚ್ಚಿಕೊಂಡು ಹೋಗುವರೊಚ್ಚಿನ ನೆರೆಹಾವಳಿಯೂ ಆಗಿ, ಸಂಸಾರ ಸಾಗರವನ್ನು ಬಹುಮುಖವಾಗಿ ಸೇರಿ, ಜೀವನದ ಪರಿಸರಣಕ್ಕೆ ಕಾರಣವಾಗಲು, ಪ್ರಕೃತಿಯು ಕಾಡು ಗವಿಗಳಿಂದ ಪುಟಿದು ಬುಗ್ಗೆಯಾಗಿ ಬೆಳೆದು ಬಂದು, ಬಾಳಿನ ಬಯಲಲ್ಲಿ ನದಿಯಂತೆ ಹರಿಯುವದು; ಸುಖ ಸ್ವಾಸ್ಥ್ಯಗಳ ಪೈರನ್ನು ಬೆಳಿಸುವದು; ಹೃದಯಗಳಿಗೆ ಉದ್ದೀಪನವಾಗಿ, ಮನೆ ಮನಗಳನ್ನು ಬೆಳಗಿಸುವ ಕಣ್ಣಿನ ಕಾಂತಿ ಜೀವದ ಜ್ಯೋತಿಯಾಗಿ, ನರನಾಡಿಗಳಲ್ಲಿಯೂ ಮಿಂಚಿನಂತೆ ಹರಿದಾಡುವದು; ಉರಿದಾಡುವದು !

ತಂದೆ ತಾಯಿಗಳ ಕುರಿತು ಆದರದ ಆಸಕ್ತಿಯಿರಲಿ, ಅಧ್ಯಾಪಕರ ಕುರಿತು ಅತಿಯಾದ ಭಕ್ತಿಯಿರಲಿ, ಹಸುವಿನ ಪ್ರಣಯವೆಂಬ ಪೌಗಂಡದೆಸೆಯ ಹೆಣ್ಣು-ಗಂಡಿನ ಉದ್ರಿಕ್ತ ಅನುರಕ್ತಿ ಇರಲಿ ಪ್ರತಿಯೊಂದು ಅವಸ್ಥೆಯೂ ಸಹಜವೇ. ಆದರೆ ಇಲ್ಲಿ ಒಂದು ಲಕ್ಷಣವನ್ನು ಮರೆಯಕೂಡದು. ಈ ಅವಸ್ಥೆಗಳು ಆ ಆ ಅವಧಿಯವಟ್ಟಿಗೆ ತಡೆವರೆ ಸ್ವಾಭಾವಿಕ ಸ್ಥಿತಿಗಳು ಸಮಪ್ರವೃತ್ತಿಯ ಅವಸ್ಥೆಗಳು. ಆದರೆ ಇವು ಅಂಥ ಅವಧಿಗಳನ್ನು ಮೀರಿ ಬಹುಕಾಲ ಅಥವಾ ಜೀವಮಾನವೆಲ್ಲ ತಾಳಿದರೆ ಅಸ್ವಾಭಾವಿಕ ಅನವಸ್ಥೆಗಳು. ಪ್ರಕೃತಿಯನ್ನೇ ಕೆಡಿಸಿದ ವಿಕೃತಿಗಳು. ವಿಷಮ ವೈಚಿತ್ರ್ಯಗಳು ಎಂದೇ ಭಾವಿಸಬೇಕು. 'ವಿಕೃತಿ' ಎಂದರೇನು ? ಈ ಮನೋವಿಕೃತಿಗಳಿಗೆ 'ಪರ ವಿರ್ಝನ್' ಎಂದೆನ್ನುವರು. ಅದಕ್ಕೆ 'ಆದಿಮಾವೃತಿ' ಎಂದು ಕನ್ನಡ(?)ದಲ್ಲಿ

ಕರೆಯೋಣ. ಆದರೂ ಹೆಸರಿಗೆ ಹೆಸರು ಕೊಟ್ಟ ಕ್ಷಣಕ್ಕೆ ಹುರುಳು ಹೇಳಿದಂತಾಗಲಿಲ್ಲ! ಆದಿ ಕಾಲದಲ್ಲಿಯ ಒಂದು ನಡತೆ, ವರ್ತನದ ಒಂದು ಮಾದರಿ ಸಾಮಾನ್ಯವಾಗಿ ಹಿಂದೆಬಿದ್ದು, ಬೆಳವಣಿಗೆಯಲ್ಲಿ ಮಾರ್ಪಟ್ಟು ಬೇರ್ಪಟ್ಟು ಇತರ ಸಾಮಾನ್ಯ ವೃತ್ತಿಯವರಲ್ಲಿ ಉಚಿತ ನಡತೆಯಾಗಿ ರೂಪಾಂತರವನ್ನು ಹೊಂದಿದ್ದರೂ ವಿಕೃತ ವೃತ್ತಿಯವರಲ್ಲಿ ಆದಿ ಪೂರ್ವಜರ ಕಾಲದ, ಅಥವಾ ಮೂಲ ಬಾಲ್ಯಾವಸ್ಥೆಯ ಕಾಲದ ಆ ಹಿಂದೆಬಿದ್ದ (ಬಿದ್ದಿರಬೇಕಾದ) ನಡತೆಯ ಮಾದರಿಯೇ ಅಚ್ಚಳಿಯದೇ ಉಳಿಯುವದು ಇಲ್ಲವೇ ಭಾವವಿಕಾಸವು ಹದಗೆಟ್ಟೊಡನೆ ಒಮ್ಮೆಲೇ ಪ್ರಕಟವಾಗುವದು. ಇದೇ ಆದಿಮ ಆವೃತಿ ಅಥವಾ ಎಟವಿಝಮ್. (ಎಟವಸ್ ಅಂದರೆ ಪೂರ್ವಜ–ಪೂರ್ವಜರನ್ನು ಹೋಲುವದು ಹೊರತು ತನ್ನ ಸರಿಕರನ್ನಾಗಲೀ, ಸಮಕಾಲೀನರನ್ನಾಗಲಿ, ಹತ್ತಿರದ ತಾಯ್ತಂದೆಗಳನ್ನಾಗಲಿ ಹೋಲುವ ನಡತೆಯಲ್ಲವೆಂಬ ಅರ್ಥ.)

ಆದ್ದರಿಂದ ಮೇಲೆ ಬಣ್ಣಿಸಿದ ಅವಸ್ಥೆಗಳೊಳಗಿಂದ ಪ್ರೀತಿಯು ವಿಕಾಸವನ್ನು ಹೊಂದುತ್ತಿರುವಾಗ ಕಳವಳದಿಂದ ಕಂಗೆಡದೆ, ಆ ಆ ಅವಸ್ಥೆಯು ವಯೋಧರ್ಮದ ಆ ಆ ಅವಧಿಯ ಮಟ್ಟಿಗೇ ಮೂಡಿ ಮುಗಿಯುವಂತೆ ಮಾತ್ರ ನೋಡಿಕೊಳ್ಳುವದು ಗುರುಹಿರಿಯರ ಕರ್ತವ್ಯವು. ಭಾವವಿಕಾಸವು ಹೃದಯದ ಪರಿಪಾಕವು ತಡೆದು ಮುರುಡಿ ಹದಗೆಟ್ಟು 'ಆದಿಮಾವೃತಿಯು' ವಿಕೃತಿಯಾಗಿ ಮುಂದೆ ಆಯುಷ್ಯಕ್ಕೊಂದು ಆಧಿ ಆಗಬಾರದು.

## ಪ್ರೀತಿಯ ಕೃಷ್ಣಾವತಾರ

ಪ್ರೀತಿಯ ಇನ್ನು ಮುಂದಿನ ಅವತಾರ ಕೃಷ್ಣಾವತಾರ. ಮಿಕ್ಕವೆಲ್ಲ ಹಿಂದಿನವೆಲ್ಲ ಅಂಶಾವತಾರಗಳಾಗಿದ್ದರೆ ಇದು ಪೂರ್ಣಾವತಾರ. ಪ್ರೌಢಾವಸ್ಥೆಯ ಪ್ರಣಯ. ಪ್ರಿಯತಮ ಪ್ರಿಯತಮೆಯರ ಅನ್ಯೋನ್ಯ ಆರಾಧನೆಯ ಕಾಲ. ರಸರಾಜ–ರತಿರಾಜರು ಕೂಡಿ ಉದಯಿಸುವ ಋತುರಾಜನ ಶಕ. ಪಾಶ್ಚಾತ್ಯರಲ್ಲಿಯಂತೆ ಈ ಪ್ರಿಯಾರಾಧನೆಯು ಮದುವೆಯ ಮೊದಲೇ ಬರಬಹುದು. ಪೌರ್ವಾತ್ಯರಲ್ಲಿಯಂತೆ ಮದುವೆಯಾದೊಡನೆ ನವ ದಾಂಪತ್ಯದ ಪರಸ್ಪರ ಪೂಜನದ ರೂಪದಲ್ಲಿಯೂ ಬರಬಹುದು. ಆದರೆ ಈ ಪ್ರಿಯಾರಾಧನೆಯ ಅವಧಿಯು ಮಾನವೀ ಭಾಗ್ಯದ ಮಧುರತಮ ಅಂಶವು. ವಲ್ಲಭವಲ್ಲಭೆಯರು ಪರಸ್ಪರರ ಕಣ್ಣುಗಳಲ್ಲಿ ಗಂಧರ್ವಲೋಕಗಳನ್ನೇ ಕಂಡು ತನ್ಮಯಗೊಂಡು, ಒಬ್ಬರಿಗೊಬ್ಬರ ತೋಳುತೆಕ್ಕೆಯಲ್ಲಿ ಸ್ವರ್ಗವನ್ನೇ ಸೆರೆಹಿಡಿದಿರುವೆವೆಂಬಂತೆ, ಉಭಯರೂ ಅಭಯ ಹಸ್ತದಿಂದ ವಿಶ್ವವನ್ನೇ ಹರಸಲು, ವಿಶ್ವದಿಂದ

ಮಾರ ಕಾಮನ ಬಿಲ್ಲನ್ನೇ ಏರಿನಿಂತಂತೆ, ಅನ್ಯೋನ್ಯರ ಹೃದಯದಲ್ಲಿ ತಮ್ಮ ತಮ್ಮ ವಿಶ್ವವನ್ನೇ ಹೊಸದಾಗಿ ಕಂಡು ಕೊಂಡಂತೆ, ತಮ್ಮ ಪ್ರಣಯದ ಪ್ರಭಾವಲಯದ ಆಚೆಗೆ ಇದ್ದವರನ್ನೆಲ್ಲ ಕೊಂಚ ಕನಿಕರದಿಂದಲೇ ನೋಡುತ್ತ ಆನಂದದೊಂದಿಗೆ ಅಭಿಮಾನವನ್ನು, ಅನ್ಯಮನಸ್ಕತೆಯೊಂದಿಗೆ ವಿನಯವನ್ನೂ ಹುಚ್ಚುಮೈ ಮರವಿನೊಂದಿಗೆ ಹುಡುಗಾಟದ ಮುಗ್ಧತೆಯನ್ನೂ ಕೂಡಿಯೇ ಮೂಡಿಸುತ್ತ ದೈವವನ್ನೇ ಮೂದಲಿಸುತ್ತ ತಾವೇ ನಿಜವಾಗಿ ಬಾಳಿನಲ್ಲಿ ಧನ್ಯರೆಂಬಂತೆ ವರ್ತಿಸುವ ಈ ಪ್ರೀತಿಯ ಮಧುಮಾಸವು ಸಂಸ್ಕೃತಿಯ ಒಂದು ದಿವ್ಯವಿಲಾಸವೇ ಸರಿ :

ಅಂದರೆ ಪ್ರಿಯಾರಾಧನೆಯ ಈ ಪ್ರಕಾರವು ಒಮ್ಮೆಲೇ ಪ್ರಾರಂಭವಾಯಿತೆಂದು ಅಲ್ಲ. ಪ್ರಾಯಕ್ಕೆ ಬಂದೊಡನೆಯೇ ಸ್ತ್ರೀ-ಪುರುಷರು ಇದೊಂದು ಹಚ್ಚ ಹೊಸ ಮಾದರಿಯ ಪ್ರಣಯವನ್ನು ಕಂಡುಕೊಳ್ಳುತ್ತಾರೆ; ಈ ಪರಿಯ ಪ್ರೀತಿಯು ಅವರ ಪ್ರಾಯ ಪ್ರಾಪ್ತಿಗಾಗಿ ದಾರಿಕಾಯುತ್ತಿರುತ್ತದೆ.-ಎಂಬುವದು ನಮ್ಮ ತಾತ್ಪರ್ಯವಲ್ಲ. ನಮ್ಮ ಚಿಕ್ಕಂದಿನ ಅರೆವಾಸಿ ಆಟಪಾಟಗಳು ಪ್ರೇಮ ಲೀಲೆಯ ಆಟಗಳೇ ಸರಿ. ಐದಾರು ವರ್ಷವಯಸ್ಸಿನ ಮಕ್ಕಳನ್ನು ನೋಡಿ-ಗಂಡು ಹೆಣ್ಣೆಂಬ ಎಚ್ಚರದ ಅನಿಸಿಕೆ ಆಗ ಅಷ್ಟೊಂದು ಇರುವದಿಲ್ಲ, ಆದಾಗ್ಯೂ ದೂರನಿಂತು ನೋಡಿದರೆ ಆ ಎಳೆವಯಸ್ಸಿನಲ್ಲಿಯೂ ಹುಡುಗಿಯರು ಹುಡುಗರ ಕಣ್ಣು ಮನಸ್ಸುಗಳನ್ನು ಸೆಳೆಯಲು ಎಷ್ಟೊಂದು ಚಿಕ್ಕಂದದ ಚಿನ್ನಾಟವಾಡುವದು ವ್ಯಕ್ತವಾಗುವದು. ಸಹೇತುಕವಾದ ವಿಭ್ರಮವು ಕಣ್ಣು. ಹುಬ್ಬು, ತುಟಿ. ದನಿ, ಮೈ ಕೈಗಳ ಮಣಿತ ಕುಣಿತ, ಹಾಸ್ಯ-ಲಾಸ್ಯಗಳ ಹಾವಭಾವ. ಒಯ್ಯಾರ ಓರಣ. ಮಾತಿನ ಮುದ್ದು ಮಾಟ-ಒಂದಲ್ಲ, ಎರಡಲ್ಲ ಪ್ರಾಯದಲ್ಲಿ ಪ್ರಣಯಾರಾಧನೆಯಲ್ಲಿ ಪ್ರಯೋಗಿಸಲಾಗುವ ಎಲ್ಲ ಪ್ರಭಾವ ತಂತ್ರಗಳನ್ನು ಚಿಕ್ಕಂದಿನಲ್ಲಿಯೇ ಚಿಕ್ಕಂದದಲ್ಲಿಯೇ ಅಷ್ಟೊಂದು ಚಾತುರ್ಯದಿಂದ ತಕ್ಕಮಟ್ಟಿಗೆ ಹೂಡಲು, ಹುಡುಗರಲ್ಲಿ ತಮ್ಮ ಮೂಲಕ ಹೆಮ್ಮೆ, ಹೊಟ್ಟೆಯುರಿ, ಹಿಗ್ಗು. ಹುರಪು ಹೋರಾಟದ ಹುರಿಯಾಳುತನವೇ ಮುಂತಾದ ಭಾವಸಂಭ್ರಮವನ್ನು ಆ ಚೆನ್ನಿಗೆಯಾದ ಕನ್ನಿಕೆಯು ಹುಟ್ಟಿಸಬಲ್ಲಳು. ಆದರೆ ಅಂದಿನ ಇದೆಲ್ಲ ವಿಭ್ರಮದಲ್ಲಿ ಮುಗ್ಧತೆಯ ಶುಭ್ರತೆಯು ಹೃದಯದ ನಿರಭ್ರತೆಯು ಇರುತ್ತದೆ. ಮುಂದೆ ತಾರುಣ್ಯವು ತಲೆಯೆತ್ತಿದಾಗ ಲೈಂಗಿಕ ಜಾಗೃತಿಯ ಪರುಂಜಪ್ವನದಲ್ಲಿ ಹಿಂದಿನ ಸರಳತೆಯು ಉಳಿಯುವದಿಲ್ಲ. ಆ ಮಾತು ಬೇರೆ. ಒಟ್ಟಿನಲ್ಲಿ ಪ್ರಿಯಾರಾಧನೆಯ ಪ್ರವೃತ್ತಿ ಒಮ್ಮೆಲೇ ತರುಣರಲ್ಲಿ ಗಡ್ಡಮೀಸೆಗಳೊಂದಿಗೆ ಮೂಡಿ ಬರುವ ಲಕ್ಷಣವಲ್ಲ !

ಇನ್ನು ಈ ಪ್ರಿಯಾರಾಧನೆಯ ಮರ್ಮವೇನು ? ಪ್ರಣಯಿ ಜನಗಳ ಅನ್ಯೋನ್ಯ

ಅನುಸಯದ ಇಂಗಿತವೇನು ?

ಪ್ರಿಯಾರಾಧನೆಯು ಜೀವಾಳದ ಪ್ರಯೋಜನಗಳನ್ನು ಸಾಧಿಸುತ್ತದೆ. ಸ್ತ್ರೀಯು ಪುರುಷನನ್ನು ಸಲಿಗೆ ತೋರಿಯೂ ತನ್ನ ಸುತ್ತಲೂ ಸುಳಿದಾಡುತ್ತಿರುವಂತೆ ಮಾಡಿ ಅವನ ಚಿತ್ತವೃತ್ತಿಗಳೊಡನೆ ಚಿನ್ನಾಟವಾಡುವದರಿಂದ ಪ್ರೀತಿಗೆ ಹೆಚ್ಚಿನ ಪೂರ್ಣತೆಯನ್ನು, ಹಿರಿದಾದ ಪಕ್ವತೆಯನ್ನು, ಸಾಧಿಸಲು ಅವಕಾಶವೂ ಉತ್ತೇಜನವೂ ದೊರೆಯುವಂತಾಗುತ್ತದೆ. ತನ್ನ ಪ್ರಣಯ ದೇವತೆಗಾಗಿ ಪ್ರಣಯಿಯು ಪೌರುಷವನ್ನು ಕುದುರಿಸಿಕೊಳ್ಳುತ್ತಾನೆ. ಪರಾಕ್ರಮವನ್ನು ಪುಟ ಗೊಳಿಸಿಕೊಳ್ಳುತ್ತಾನೆ. ಅವನ ಚಾರಿತ್ರ್ಯಕ್ಕೆ ಒಂದು ಹದ, ಚಾತುರ್ಯಕ್ಕೆ ಒಂದು ಹರಿತ, ವ್ಯಕ್ತಿತ್ವಕ್ಕೆ ಒಂದು ಹೊಸಕಳೆ ಏರಿಬರಲು ಅನುವಾಗುತ್ತದೆ. ಪ್ರಿಯೆ ಯನ್ನು ಪ್ರಸನ್ನಗೊಳಿಸುವ ಸಾಧನೆಯಲ್ಲಿ ನಡುವೆಯೇ ತಾಳ್ಮೆಗೆಟ್ಟು, ತಣ್ಣಗಾಗುವ ಪ್ರೀತಿಯು ಯಾವ ತೂಕದ್ದೂ ಅಲ್ಲ. ಸಾಹಸಕ್ಕೆ ಒಲಿಯುವಾಕೆಯೇ ಶ್ರೀಯು; ಉದ್ಯೋಗಕ್ಕೆ ವಶವಾಗುವಾಕೆಯೇ ಲಕ್ಷ್ಮಿಯು. ವಸಂತಸೇನೆಯನ್ನು ಬಯಸು ವವನು ಶೂಲವನ್ನೇರಲು ಅಣಿಯಾಗಬೇಕು. ಅಂದರೆ ಶೂಲವೂ ತಪ್ಪಿ, ವಸಂತ ಸೇನೆಯೂ ಲಭಿಸುವಳು. ಅಳ್ಳೆದೆಯ ಗಂಡಿಗೆ ಒಲಿದು ಬರುವ ಹೆಣ್ಣಾದರೂ ಯಾವಳು ? ಬಂದರೆ ಅವಳನ್ನೂ ಅವಳ ಒಲವನ್ನೂ ಕಾಪಾಡಿಕೊಂಡು ಬಾಳುವ ಎದೆಗಾರಿಕೆಯಾದರೂ ಅವನಿಗೆ ಎಲ್ಲಿಯದು ? ಆದ್ದರಿಂದ ಪ್ರಿಯಾರಾಧನೆಯಲ್ಲಿ ಪ್ರಣಯಿಗಳ ಸತ್ವ ಪರೀಕ್ಷೆಯಾಗುತ್ತದೆ.

ಇದರಿಂದ ಮುಂದೆ ಕೂಡಿಬಾಳಲು ತೀರ ತಕ್ಕವನಾದವನನ್ನೇ (ಆದವಳನ್ನೇ) ಉತ್ತಮರನ್ನೇ ಆಯ್ದುಕೊಳ್ಳಲು ಪ್ರೇಮಿಗಳಿಗೆ ಸಾಕಷ್ಟು ಅವಕಾಶವು ದೊರೆ ಯುತ್ತದೆ. ಅನುರೂಪವೆಂದರೆ ಬರೇ ರೂಪದ ಮಟ್ಟಿಗೇ ಅಲ್ಲದೆ, ಅನೇಕ ದೃಷ್ಟಿಯಿಂದಲೂ ಗುಣ, ಶೀಲ, ರುಚಿ, ಬುದ್ಧಿ–ವಿದ್ಯೆ, ವೃತ್ತಿಗಳ ಸಮುಕಟ್ಟನ್ನು ಅರಿತುಕೊಂಡು ಅರಸಿಕೊಂಡು ಜತೆಗೂಡುವಂತೆ ಯೋಗ್ಯ ವರನು ಉಪವರ ವಧುವಿಗೆ ಸಿಗುವಂತೆ ಪ್ರಿಯಾರಾಧನೆಯು ಅನುಕೂಲವಾಗುತ್ತದೆ. ಹೀಗೆ ಪ್ರಿಯಾರಾಧನೆಯು ವಿವಾಹಕ್ಕೆ ಮೊದಲೇ ಬರಬೇಕಾದ ವ್ಯಾಪಾರವು. ಆಗ ಅದಕ್ಕೆ ವಂಶದೃಷ್ಟಿಯಿಂದ ಜೀವಾಳದ ಕಾರ್ಯವನ್ನು ಮಾಡುತ್ತದೆ. ಉತ್ತಮ ನಲ್ಲ ನಲ್ಲೆಯರನ್ನೇ ಆಯ್ದುಕೊಳ್ಳಲು ಅವಕಾಶವು ದೊರೆತು, ಮುಂದೆ, ಬರಲಿರುವ ಬಾಳಿನ ಗುಣವೇ ಸಂತತಿ ಸತ್ವವೇ. ಉತ್ತರೋತ್ತರ ಇಂಥ ಆಯ್ಕೆಯಿಂದ ಉನ್ನತವಾಗಲು ಪ್ರಿಯಾರಾಧನೆಯು ಒಂದುಸಹಜ ಅನುಕೂಲವನ್ನು ಒದಗಿಸಿ ಕೊಡುವದು.

ಪ್ರಿಯಾರಾಧನೆಯ ಈ ವಿಧ-ವಿಧಾನದಲ್ಲಿ ಯಾವ ಗತ್ತುಗಾರಿಕೆಯು ನಡೆಯುತ್ತದೆ ? ಪುರುಷನು ಗಳಿಸಿಕೊಳ್ಳುವ ಆಕ್ರಮಣ ವೃತ್ತಿಯಿಂದ ಮುಂದುವರಿಯುವನು; ಸ್ತ್ರೀಯು ಪೋಷಿಸುವ ಮರ್ಯಾದೆಯಿಂದ ಹಿಂದೆ ಸರಿಯುವಳು. ಸ್ತ್ರೀಯರ ಈ ಹಿಂಜರಿಕೆಯು ಬ್ರಿಟಿಶ ಸೈನ್ಯದ ಶಿಸ್ತಿನ ಹಿನ್ನಡೆಯಂತೆಯೇ-ಬರೇ ಕೊನೆಯ ಗೆಲುವಿನ ಹೊಂಚುಗಾರಿಕೆಯು. ಕಾಳಗಗಳಲ್ಲಿ ಕಾಲ್ತೆಗೆದಂತೆ ಕಾಣಿಸಿ, ಹಗೆಗಳನ್ನು ಕುಣಿದಾಡಿಸಿ, ಯುದ್ಧವನ್ನು ಗೆಲ್ಲುವ ಗತ್ತುಗಾರಿಕೆಯು ! ಸಾಮಾನ್ಯವಾಗಿ ಪುರುಷನು ನಿಶ್ಚಯದ ಮತ್ತು ಆಕ್ರಮಣದ ಭೂಮಿಕೆಯನ್ನು ವಹಿಸುತ್ತಾನೆ. ಆದರೆ ಇಂಥ ಆಕ್ರಮಣದ ನಿಶ್ಚಯವನ್ನು ಹುರಿಗೊಳಿಸಲಿಕ್ಕೆ ಸ್ತ್ರೀಯು ಮೊದಲು ತೋರಿಸುವ 'ಸವಿನಯ-ಪ್ರತಿಕಾರ'ದ ಹಿಂಜರಿಕೆಯ ಮಾಟಗಾರಿಕೆಯೇ ಕಾರಣವಾಗುತ್ತದೆ. ಸ್ತ್ರೀಯ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಉತ್ತೇಜನ ಇಲ್ಲದೇ ಯಾವ ಪುರುಷನೂ ದುಡುಕುವದಿಲ್ಲ; ಆದರೆ ಅಂಥ ಮೂಕ ಉತ್ತೇಜನೆಯೂ, ಸಮರ್ಮ ಪ್ರೇರಣೆಯೂ ದೊರೆಯಿತೆಂದರೆ ಮುಂದೆ ದುಡುಕುವ ಹೆಜ್ಜೆ ಪುರುಷನದೇ ! ಗಂಡೇ ಬೇಟೆ, ಹೆಣ್ಣೇ ಬೆನ್ನಟ್ಟುವ ಬೇಟೆಗಾರ-ಎಂದು ಚಮತ್ಕಾರದ ಮಾತನ್ನು ಬರ್ನಾರ್ಡ್ ಶಾ ಅವರು ಮಂಡಿಸಿರಬಹುದು. ಆದರೆ ಅದು ಕೇವಲ ದೃಷ್ಟಾನ್ವಯದಲ್ಲಿ. ಮೇಲೆ ಹೇಳಿದಂತೆ ಗುಪ್ತ ಪ್ರೇರಣೆ ತಾನೇ ಬೇಟೆಯಾಗಿ ಗಂಡು ತನ್ನನ್ನು ಬೆನ್ನಟ್ಟುವಂತೆ ಮಾಡುವ ಉತ್ತೇಜನೆ ಹೆಣ್ಣಿನದೆಂಬ ಅರ್ಥದಲ್ಲಿ ಹೆಣ್ಣು ಬೇಟೆಗಾರಳೆನಿಕೊಳ್ಳಬಹುದು. ಆದರೆ ಪ್ರತ್ಯಕ್ಷ ಪ್ರಣಯ ಪ್ರಪಂಚದಲ್ಲಿ ಆಕ್ರಮಣವು ಗಂಡಿನದೇ ಸರಿ. ಎಲ್ಲ ಪ್ರಿಯಾರಾಧನೆಯೂ ಒಂದು ದ್ವಂದ್ವಯುದ್ಧವೇ ಸರಿ. ಕೆಳೆಯಲ್ಲಿ ಕಾಳಗವೇ ಸರಿ; ಸಂಭೋಗವು ಸ್ವಾಮಿತ್ವವೇ ಸರಿ. ಪ್ರಣಯದಲ್ಲಿ ಪುರುಷನು ಪ್ರಭುವು-ಗೆದ್ದು ಸೋಲುವ ಪ್ರಭುವು ! ಸ್ತ್ರೀಯು ಸೋತು ಗೆಲ್ಲುವ ಪ್ರಭಾವಿಯು ! ಒಬ್ಬರಿಗೊಬ್ಬರು ಸೋಲುವವರಲ್ಲಿಯೇ ಒಬ್ಬರನ್ನೊಬ್ಬರು ಗೆಲ್ಲುವರು ! ಈ ಸ್ವಾಮಿತ್ವದ ಯುದ್ಧದಲ್ಲಿ ಹಿಂದೆ ಕಾಡು ಪುರುಷನು ಹಲ್ಲು ಉಗುರುಗಳಿಂದಲೂ, ಮುಂದೆ ಬಿಲ್ಲು ಬಾಣಗಳಿಂದಲೂ ಪ್ರಣಯಕ್ಕಾಗಿ ಹೋರಾಡುತ್ತಿದ್ದನು. ಆದರೆ ಇಂದು ಪುರುಷರು ಬ್ಯಾಂಕಿನಲ್ಲಿಯ ಠೇವುಗಳ ಲೆಕ್ಕದ ಪಟ್ಟಿಗಳಿಂದ ಹೋರಾಡುತ್ತಾರೆ ! ವ್ಯಾಪಾರ ವ್ಯವಹಾರ ಭತ್ತೆ ಬಡತಿಗಳಿಗಾಗಿ ಹೆಣಗಾಟ ಇವೆಲ್ಲ ಹವ್ಯಾಸಗಳ ಹಿಂದೆ ಇಂದಿನ ಪುರುಷರ ನವ ಪಂಜರಗಳು ಅಡಗಿವೆ !

## ರಾಗರತಿಯ ಸಂಜು

ಪ್ರಿಯಾರಾಧನೆಯಲ್ಲಿ ಸ್ತ್ರೀಯು ಚತುರಳಿದ್ದರೆ, ಪಲಾಯನವನ್ನು ನಟಿಸಿಯೇ

ಪ್ರಣಯದ ಪಾನಿಪತ್ತನ್ನು ಗೆಲ್ಲುತ್ತಾಳೆ. ಈ ಪಲಾಯನವು ನಾಚಿಕೆಯ-ಲಜ್ಜೆಯ-ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ನಾಚಿಕೆಯ ವಿಚಾರವಾಗಿ ಒಂದೆರಡು ಮಾತುಗಳು ಅಪ್ರಸ್ತುತವಾಗಲಿಕ್ಕಿಲ್ಲ.

ನಾಚಿಕೆಯ ಉಗಮುವೆಲ್ಲಿ ? ಅದರ ವಿಕಾಸಕ್ಕೆ ಕಾರಣವು ಯಾವದು ? ನಾಚಿಕೆಯು ಹುಟ್ಟುವದು ಭಯ ಮತ್ತು ಸ್ವಚ್ಛತೆಯ ಭಾವ ಇವೆರಡು ಪ್ರವೃತ್ತಿಗಳಲ್ಲಿ. ಹೆದರಿಕೆ ಮತ್ತು ಒಂದು ಬಗೆಯ ಮಡಿವಂತಿಕೆಗಳು ಕೂಡಿ ಈ ಭಾವನೆಯನ್ನು ಉಂಟು ಮಾಡುವವು. ಇದು ವಿಕಾಸಹೊಂದುವದು ಸೌಮ್ಯತನ ಮತ್ತು ಸೂಕ್ಷ್ಮಬುದ್ಧಿ (ಚಾತುರ್ಯ) ಗಳಿಂದ. ನಾಚಿಕೆಯು ಕೇವಲ ಮಾನವನ ಪ್ರಾಣಿಗೇ ಬೆಳೆದು ಬಂದ ಲಕ್ಷಣವಲ್ಲ. ಪಶುವರ್ಗಗಳಲ್ಲಿಯೂ ಇಂಥ ಭಾವನೆಯ ಹೋಲಿಕೆಯು ಕಂಡುಬರುತ್ತದೆ. ಅಲ್ಲಿ ನಾಚಿಕೆಯು ನೈಸರ್ಗಿಕ ನಿಷೇಧದ ರೂಪದಲ್ಲಿ ವ್ಯಕ್ತ ವಾಗುತ್ತದೆ. ಅಲ್ಲಿ ಪಶುಗಳಲ್ಲಿಯ ಈ ನೈಸರ್ಗಿಕ ನಿಷೇಧವಲ್ಲಿಯೇ ನಾಚಿಕೆಯ ಮೂಲವು ಇರುತ್ತದೆ. ಹೆಣ್ಣು ಪಶುಗಳು ತಮ್ಮ ಋತುಕಾಲದ ಅವಧಿಯ ಹೊರಗೆ ರತಿಕಾರ್ಯಕ್ಕೆ ಒಡಂಬಡುವದಿಲ್ಲ. ಈ ಉದಾಸೀನತೆಯೇ, ಅಸಮ್ಮತಿಯೇ ಮುಂದೆ ನಾರಿಯಲ್ಲಿ ನಾಚಿಕೆಯಾಗಿ ಮಾರ್ಪಟ್ಟಿದೆ. ಆದರೆ ನರವೆಂಬ ಪಶುವು ಯಾವ ನೈಸರ್ಗಿಕ ನಿಷೇಧವನ್ನೂ ಮನ್ನಿಸುವವನಲ್ಲ ! ಅವನ ರುಚಿಗೆ ರೀತಿಯೇ ಬೇಕಾಗಿಲ್ಲ; ರತಿಗೆ ಋತುವೇ ಬೇಕಾಗಿಲ್ಲ. ಆಸರು ಇಲ್ಲದಾಗ್ಯೂ ಅವನು ಕುಡಿಯ ಬಲ್ಲನು; ಯಾವ ಋತುವಿನಲ್ಲಿಯೂ ಪ್ರಣಯ ಚೇಷ್ಟೆಗೆ ಅಣಿಯಾಗಬಲ್ಲನು-ಪಶುಗಳಿಂದ ನರನನ್ನು ವಿಂಗಡಿಸುವದು ಇದೇ 'ಅಧಿಕೋವಿಶೇಷಃ' !

ಲಜ್ಜೆಯೇ ಪುರುಷನನ್ನು ಯೋಗ್ಯ ಅಂತರಕ್ಕೆ ಇಡುವ, ಇಟ್ಟು ಅಳೆದು ತಿಳಿದು ನೋಡುವ ಮರ್ಯಾದೆ. ಪುರುಷ ಪ್ರಕೃತಿಯಿಂದಲೂ ಪುರುಷ ಮರ್ಯಾದೆ ಮೀರಿ ದುಡುಕುವ ಬಲಭೀಮ ! ಆದರೆ ಲಜ್ಜೆಯೇ ಸ್ತ್ರೀಯ ಲಾವಣ್ಯದ ಲಾಲಿತ್ಯ ಲಕ್ಷಣ. ಸಂಸ್ಕೃತದಲ್ಲಿ 'ವಿನಯ' ಶಬ್ದಕ್ಕೆ ಸುಶಿಕ್ಷಿತತನ ಮತ್ತು ನಮ್ರತೆ ಹೀಗೆ ಎರಡೂ ಅರ್ಥಗಳು ಇರುವದರ ಸ್ವಾರಸ್ಯವಾದರೂ ಇದೇ. ಸಂಸ್ಕೃತಿಯ ಪರಿಪಾಕವಾದಲ್ಲಿ ಈ ಲಜ್ಜಾ-ವಿನಯವು ಅತ್ಯಂತ ಸುಂದರ ವಾದ ಒಂದು ಮನೋಧರ್ಮವಾಗಿ ಅರಳುತ್ತದೆ. ಲಜ್ಜಾ-ವಿನಯಗಳ ಮರ್ಯಾದೆ ಗಳು ಯಾವ ಸಮಾಜದಲ್ಲಿ ಬಿಗಿಯಾಗಿವೆಯೋ ಬಲವಾಗಿವೆಯೋ ಅಂಥಲ್ಲಿ ಕಾವ್ಯವೂ, ಕಾವ್ಯದಲ್ಲಿ ಶೃಂಗಾರರಸವೂ, ಶೃಂಗಾರದಲ್ಲಿ ವಿರಹಿಗಳ ವ್ಯಥೆಯೂ ಒಂದು ದಿವ್ಯವಾದ ಸ್ವರೂಪ ಸೌಂದರ್ಯವನ್ನು ತಾಳಿದ್ದು ಕಂಡು ಬರುತ್ತದೆ. ಆಂಗ್ಲರ ಕಾವ್ಯ ಪ್ರತಿಭೆಯೇ ಇದಕ್ಕೆ ಸಾಕ್ಷಿ. ಫ್ರೆಂಚ ಜನಾಂಗದಲ್ಲಿ ಪ್ರಣಯಕ್ಕೆ ಅಷ್ಟು ಪ್ರತಿಬಂಧವಿಲ್ಲ. ಅಲ್ಲಿಯ ಆಚಾರದ ಆವರೂ ಸ್ವೈರಾಚಾರಕ್ಕೆ ಅಷ್ಟು ವಿರೋಧಿ

ಆಗಿ ಬೆಳೆದುಬಂದಿಲ್ಲ. ಆದ್ದರಿಂದ ಫ್ರೆಂಚ ಸಾಹಿತ್ಯದಲ್ಲಿ ಕಾವ್ಯಕ್ಕಿಂತ ಗದ್ಯವೇ ಹೆಚ್ಚು ಪುಟಗೊಂಡು ಮಾದರಿಯಾಗಿ ನಿಂತಿತು. ಆದರೆ ಇಂಗ್ಲಿಷ ಸಾಹಿತ್ಯದಲ್ಲಿ ಕಲ್ಪನಾರಮ್ಯ (ರೋಮಾಂಚಕ) ಪ್ರಣಯ ಗೀತವು ಪುಟಿದು ಕಾವ್ಯದಲ್ಲಿ ಕಾಮನ ಬಿಲ್ಲುಗಳನ್ನು ಕಟ್ಟಿ ಅಪ್ರತಿಮ ಕಾಂತಿಯಿಂದ ಮೆರೆಯಿತು.

ಹೀಗೆ ಸಮಾಜದ ನಾಗರಿಕತೆ, ವ್ಯಕ್ತಿಯ ಸಂಸ್ಕೃತಿ ಇವೆರಡೂ ಎಷ್ಟು ಎಷ್ಟು ವಿಕಾಸಗೊಳ್ಳುವವೋ ಅಷ್ಟು ಅಷ್ಟು ಲಜ್ಜೆಯ ಲತೆಯು ಮನೋಹರವಾಗಿ ಅರಳುವದು. ಪ್ರಣಯದ ಹೂವುಗಳಿಗೆ ಈ ನಾಚಿಕೆಯೇ ಬಣ್ಣವನ್ನು ತುಂಬುವದು. ಪ್ರೀತಿಯು ಅತ್ಯಂತ ಸುಂದರ ರೂಪವಾಗಿ ಮಾರ್ಪಡುವದು. ಹಲವೊಮ್ಮೆ ಹೃದಯದ ಇತರ ಅನೇಕ ಗೂಢವೂ ಅಗಾಧವೂ ಆದ ಪ್ರವೃತ್ತಿಗಳನ್ನು ಅದು ಗೆಲ್ಲುವದು. ಇನ್ನು ಈ ಲಜ್ಜೆಯು ಒಂದು ಮೂಲ ಪ್ರವೃತ್ತಿಯೇ ? ವಿಲಿಯಂ ಜೇಮ್ಸ ಎಂಬ ವಿಶ್ವವಿಖ್ಯಾತ ಮನೋವಿಜ್ಞಾನಿಯು ಅದು ಮೂಲ ಪವೃತ್ತಿ ಯಲ್ಲ; ಸಂಸ್ಕಾರದಿಂದ ಬೆಳೆದು ಬಂದ ಗುಣವೆಂದು ಹೇಳುತ್ತಾನೆ. ತಲೆ ಮಾರುಗಳಿಂದಲೂ ಕಲಿತು ಬಂದು ಕ್ರಮೇಣ ಅದು ಹೆಣ್ಣಿಗೆ ಹುಟ್ಟುಗುಣವಾಗಿರ ಬೇಕೆಂದು ಅವನ ಅಂಬೋಣ.

ಅತಿಪರಿಚಯದಂತೆ ಅತಿಔದಾರ್ಯವೂ ಅವಜ್ಞೆಗೆ ಕಾರಣವಾಗುತ್ತದೆ. ವಿಪುಲವಾಗಿ ನಿರಂತರವಾಗಿ ದೊರೆಯುವ ವಸ್ತುವಿನ ಕುರಿತು ನಮಗೆ ಅಷ್ಟೊಂದು ಆದರ ಉಳಿಯುವದಿಲ್ಲ. ಇದೇ ಪಾಠವನ್ನೂ ತನ್ನ ಸಹವಾಸ ಸುಖದ ಮಟ್ಟಿಗೆ ಹೆಣ್ಣು ಕಲಿತಳು. ಅದನ್ನೇ ತನ್ನ ಹುಡುಗಿಯರಿಗೆ ಕಲಿಸುತ್ತ ಬಂದಳು. 'ನಾಣ್ಚು'ವದು ಮೈನೆರೆದ ಹೆಣ್ಣಿಗೆ ಸಹಜವಾದ ಮೈಚಳಿ. ನಾಚಿಕೆಯ ಮೂಲಧಾತುವಾದ ಈ 'ನಾಣ್ಚು'ವದು ಇದೇ 'ಋತು'ವಿನ ಅರ್ಥವನ್ನೇ ಸೂಚಿಸುತ್ತದೆ. 'ರಾಗತಿಯ ನಂಜು' ಏರಲು ಆರಂಭವಾದೊಡನೆಯೇ ಮೋರೆಗೆ ಲಜ್ಜೆಯು ಸಂಜೆಗೆಂಪು ತುಂಬುತ್ತದೆ. ಪ್ರೀತಿಯ ಬಣ್ಣಕೆಂಪು; ಹೃದಯದಲ್ಲಿ ಪ್ರೀತಿಯ ಜ್ಯೋತಿಯು ಜಾಗೃತವಾದೊಡನೆಯೇ ಮುಖದಲ್ಲಿ ಲಜ್ಜೆಯ ರಕ್ತವು ಚಿಮ್ಮುತ್ತದೆ. ಪುರುಷರ ಅಭಿಲಾಷೆಯನ್ನು ಕೆರಳಿಸುವ ಕೇಂದ್ರ ಇಲ್ಲಿ ಇದೆಯೆಂದು ಸೂಚಿಸುವ ಕೆಂಪು ದೀಪವದು ! ಇದು ಒಂದು ಮಗ್ಗಲು. ಲಜ್ಜಾಭಾವನೆಗೆ ಇನ್ನೊಂದು ಮಗ್ಗಲೂ ಇದೆ. ಪುರುಷರ ಅಸೂಯಾಕುಟಿಲವಾದ ಕಣ್ಣಿನ ಕೋಪದ ಕಿಡಿಯಿಂದಲೇ ಅವರ ಕೈವಶದಲ್ಲಿದ್ದ ಸ್ತ್ರೀಯ ಕಪೋಲಗಳ ಮೇಲೆ ಮೂಡಿದ ಕೆಂಪೇ ಲಜ್ಜೆಯೆಂದು ಅಲಂಕಾರಿಕವಾಗಿ ಬಣ್ಣಿಸಬಹುದು. ಅಂದರೆ ಒಂದೆಡೆಗೆ ತಮ್ಮ ಆಕರ್ಷಣೆಯನ್ನು ಹೆಚ್ಚಿಸಿಕೊಳ್ಳಲು ಗಂಡಸಿನ ಗಡಸುತನವನ್ನು ಅಯ್ಕಿಗೆ ಹಚ್ಚಲು ಹೆಣ್ಣು

ಲಜ್ಜೆಯನ್ನು ಬೆಳಿಸಿಕೊಂಡಂತೆಯೇ ಇನ್ನೊಂದೆಡೆಗೆ ಗಂಡಸು ಹೆಂಗಸನ್ನು ತನ್ನ ಒಡೆತನದ ಒಡವೆಯೆಂದು ಭಾವಿಸಿ ಬಂದುದರ ಪರಿಣಾಮವಾಗಿ ಆ ಭಾವನೆಯ ಪೋಷಣೆಗಾಗಿ ತನ್ನ ಹೆಣ್ಣಿನ ಈ ನಾಚಿಕೆಯ ಗುಣಕ್ಕೆ ಉತ್ತೇಜನೆಯನ್ನೇ ಕೊಡುತ್ತ ಬಂದಿದ್ದಾನೆ. ಆದಿಯಲ್ಲಿ ಮಾನವ ಸಮಾಜದಲ್ಲಿ ಹೆಣ್ಣು ಗಂಡಿನ ವ್ಯವಹಾರ ಸಾಮೂಹಿಕ ಸಾಮೂಹಿಕವಿರುವಾಗ, ಹೆಣ್ಣಿಗೇ ಗಂಡಿಗಿಂತ ಹೆಚ್ಚಿನ ಪ್ರಾಧಾನ್ಯ ಇದ್ದಾಗ ತಾಯಿಯಿಂದಲೇ ಪೀಳಿಗೆಯನ್ನು ಗುರುತಿಸುತ್ತಿರುವಾಗ ಲಜ್ಜಾವತಿಯರು ಅಪರೂಪವೇ ಆಗಿರಬೇಕು. ಹೆಣ್ಣು ಆಗ ಧೂರ್ತಳೂ ಧಿಟ್ಟಳೂ ಆಗಿದ್ದಳು. ಆಗ ನಾಚಿಕೆ ಆಕೆಯ ಮುಖ್ಯಗುಣವಿದ್ದಿಲ್ಲ. ಆದರೆ ಮುಂದೆ ಮಾನವನ ಅಂಥ ಸಾಮೂಹಿಕ ಜೀವನ ನಷ್ಟವಾಯಿತು. ವ್ಯಕ್ತಿಯ ಸೊತ್ತು ಮೊದಲಾಯಿತು. ಖಾಸಗಿ ಒಡೆತನ ಸ್ಥಾಪಿತವಾಯಿತು. ತಂದೆಯಿಂದ ಸಂತತಿಯ ಹೆಸರು ಮುಂದಾಯಿತು. ತನ್ನ ಸೊತ್ತಿಗಾಗಿ ತನ್ನದೇ ಎಂಬ ಸಂತತಿ ಗಂಡಸಿಗೆ ಅವಶ್ಯ ವೆನಿಸಿತು. ಆಗ ಹೆಂಗಸು ಹೆಂಡತಿ ಆದಳು. ಆಕೆಯ ಮೇಲೆ ಗಂಡನ ಒಡೆತನ ಕೂತಿತು. ಪರಪುರುಷರಿಂದ ತನ್ನ ಹೆಣ್ಣನ್ನು ದೂರವಿಡುವದು ಗಂಡನಾದ ಗಂಡಸಿಗೆ ಅಗತ್ಯವೆನಿಸಿತು. ಇದರಿಂದ ಲಜ್ಜೆಗೆ ಲಗ್ನದ ಪೇಟೆಯಲ್ಲಿ ಬೆಲೆ ಬಂದಿತು. ಲಜ್ಜೆಯು ಶೀಲದ ಶೋಭೆ ಅನಿಸಿತು. ಚರಿತ್ರ ಕೆಡದ ಹೆಣ್ಣುಗಳಿಗೆ ಸಮಾಜದಲ್ಲಿ ಮಿಗಿಲಾದ ಮನ್ನಣೆ ದೊರೆಯತೊಡಗಿತು. ಆದ್ದರಿಂದ ಲಜ್ಜೆಯು ಸ್ತ್ರೀಯ ಸಹಜ ಧರ್ಮವಿದ್ದದ್ದು ಸಾಧ್ವಿಯ ಪರಮಗುಣವಾಯಿತು. ಪುರುಷರು ಲಜ್ಜೆಯನ್ನು ಒಂದು ಸದ್ಗುಣವೆಂದು ಪ್ರೋತ್ಸಾಹಿಸಹತ್ತಿದರು. ಕಾಮಾತುರರೇ ಲಜ್ಜೆಯನ್ನು ಭಯವನ್ನು ಬಿಡುವವರೆಂಬ ಮಾತು ರೂಢವಾಯಿತು.

ಈ ರೀತಿ ವಿವಿಧ ಮೂಲಗಳಿಂದ ಲಜ್ಜೆಯು ಹೆಣ್ಣಿನ ಅತ್ಯಂತಸೂಕ್ಷ್ಮವಾದ ಸಂಮೋಹನ ಶಕ್ತಿ ಆಗಿ ರೂಪಗೊಂಡಿತು. ನಿರ್ಲಜ್ಜ ಹೆಂಗಸರ ಆಕರ್ಷಣವಿಲ್ಲ ದಂತಾಯಿತು. ಪ್ರೀತಿಯು ಒಂದು ದ್ವಂದ್ವಯುದ್ಧ. ಪಟ್ಟಿನಲ್ಲಿ ಹಿಡಿತವೂ ಪೆಟ್ಟಿನಲ್ಲಿ ಹದವೂ ಅಲ್ಲಿಯಂತೆ ಇಲ್ಲಿಯೂ ಸಲ್ಲಬೇಕು. ತಮ್ಮ ಅಂದಚೆಂದಗಳ ಬೆಡಗು ಬಿನ್ನಾಣಗಳ ಮೋಹ ಮಾಟಗಳ ಪ್ರದರ್ಶನದಲ್ಲಿ ಒಂದು ಸಂಗ್ರಹದ ನಿಗ್ರಹವೂ, ತಮ್ಮ ಪ್ರೇಮದಾನದ ಒಪ್ಪುಕಾಣಿಕೆಗಳಲ್ಲಿ ಒಂದು ಸಂಯಮ ನಿಯಮವೂ ಇಲ್ಲವಾದರೆ ಪ್ರೀತಿಯಲ್ಲಿ ಹಿತ-ಮಿತ ಉಳಿಯದೇ ಪ್ರೇಮಿಗಳಿಗೆ ಕಾಮಿಗಳಂತೆ ಇತಿಮಿತಿ ಬಿದ್ದೀತು ! ಈ ಹಿತ ಮಿತದದಕ್ಕೆ ನಾಚಿಕೆಯೇ ನೆಲೆ, ಹೆಣ್ಣಿನಲ್ಲಿ ಹುದುಗಿದ್ದ ನಾಚಿಕೆಯೂ ಆಕೆಯ ಒಸಗೆಗಳಲ್ಲಿ ಒಂದು ಮಿತವನ್ನು ಇಡುತ್ತದೆ. ನಾಚಿಕೆಯ ನಾರಿನ ಮೇಲೆ ನಾರಿಯು ಹಿಂಜರಿಕೆಯ ಹಿಡಿತವಿರುವದರಿಂದ ನರನ ಪ್ರೀತಿಯ ಪತಂಗವು ಇನ್ನೂ ಉತ್ತರಕ್ಕೆ ಹಾರಾಡುವದು. ನಾಚುವ ಮೋರೆಯಲ್ಲಿ ನಗೆಮುಗುಳನ್ನು ಅರಳಿಸುವದಕ್ಕಾಗಿ ಗಂಡಸು ಯಾವ ಸಾಹಸಕ್ಕೂ ಅಣಿಯಾಗುವನು.

ಗಂಡಸಿನ ಗುಪ್ತಗುಣಗಳಿಗೆ ಸುಪ್ತಶಕ್ತಿಗಳಿಗೆ ಹೆಣ್ಣಿನ ಲಜ್ಜೆಯು ಒಂದು ನಿರಂತರವಾದ ಉತ್ತೇಜನೆ,–ಎಂದೂ ತಪ್ಪದ ಆಹ್ವಾನ ಗಂಡಿನ ವ್ಯಾವಹಾರಿಕ ಬಾಳು ಸಪ್ಪಗಿನದು. ಸರ್ವಸಾಧಾರತೆಯದು. ಆದರೆ ತಾನು ಮೆಚ್ಚಿದ ಹೆಣ್ಣಿನ ನಾಚಿಕೆಯ ಆವರಣವನ್ನು ತೆರೆದು ತನ್ನ ಭಾಗ್ಯವನ್ನು ತೆರೆಯಲಿಕ್ಕೆ ಆತನು ಕಾಮ ಸುಖವನ್ನು ಮರೆತು ಒಮ್ಮೆಯಾದರೂ ಕಲಿಯಾಗುವನು–ಕೊನೆಗೆ ಕವಿಯಾದರೂ ಆಗುವನು ! ಕೆನ್ನೆಯಕೆಂಪು ಕಣ್ಣಿನ ಕಿರಣದಲ್ಲಿ ಕೂಡಿದಾಗಲೇ ಪ್ರೀತಿಯು ಹೂ ಬಿಸಿಲು ಅರಳುವದು. ಅದಕ್ಕೆ ಮಣಿಯದ, ಅದಕ್ಕಾಗಿ ದಣಿಯದ ಗಂಡಸು ಷಂಡನೇ ಸರಿ !

## ಪ್ರೀತಿಯ ಪೂರ್ಣತೆ

ಆದ್ದರಿಂದ ಲಜ್ಜೆಯ ಆಹ್ವಾನ. ಮೋಹದಮಾಟ ತನ್ನ ಕೆಲಸವನ್ನು ಸಾಗಿಸಲು ತಾರುಣ್ಯದ ವಸಂತದಲ್ಲಿ ಪ್ರೀತಿಯು ಕೋಕಿಲೆ ಬಗ್ಗಿಸಲಿ. ದಾಂಪತ್ಯದ ಸುಗ್ಗಿಯನ್ನು ಹಿಗ್ಗಿಸಲಿ. ಆದರೆ ಈ ಸುಗ್ಗಿಯು ಹೂತು ಕಾತು ಮಾಗಿಯು ಬರಲಿ. ಪ್ರಣಯವು ಪರಿಣಯದಲ್ಲಿ ಪೂರ್ತಿಗೊಂಡಂತೆ, ಪ್ರೀತಿಯು ಪಿತೃತ್ವದಿಂದ ಪರಿಪೂರ್ಣವಾಗಲಿ. ಕಾಮಕ್ಕೆ ಹೋಳಾಗಿ ಕೂಡಿದ ಬಾಳು ಪ್ರೇಮದ ಕಾಳಾಗಿ ತುಂಬಿ ಬೆಳೆಯಲಿ. ನಿಸರ್ಗವು ತನ್ನ ಗುರಿಯನ್ನು ನೇರವಾಗಿ ಸಾಧಿಸುವದಿಲ್ಲ. ಜೀವದ ಸಂತತ ಪರಂಪರೆಯನ್ನು ಸಂತತಿಯ ಪ್ರಾಪ್ತಿಯಲ್ಲಿ ಸಾಧಿಸುವ ನಿಸರ್ಗದ ನಿಯಮವು ವ್ಯಕ್ತಿಯ ಸುಖದೊಡನೆಯೇ ವಂಶದ ಹಿತವನ್ನು ಕೂಡಿಸಿ ಕೈಗೂಡಿಸುತ್ತದೆ. ಮಾನವ ವಂಶವು ತನ್ನ ಅತ್ಯಂತ ಹಿರಿದಾದ ಸುಖದ ಉಪಹುಟ್ಟುವಳಿಯಾಗಿದೆ. ಅಂದರೆ ಮಾನವನ ಪ್ರೇಮ ಸುಖದ ಪರಮಾವಧಿಯ ಪೂರ್ತಿಯಲ್ಲಿಯೇ ಪರ್ಯಾಯವಾಗಿ ಸಂತಾನದ ಸಂಭವವೂ ಒದಗುವಂತಾಗಿದೆ. 'ಗಂಡು ಹೆಣ್ಣು ಕೂಡುವಲ್ಲಿ'ಯೇ 'ತಾಯಿ ಕೂಸ ನೋಡು'ವಂತಾಗಿದೆ. ಪ್ರೇಮಿಗಳ ತನುಮನದ ಮಿಲನ ಒಂದು ಮಿಗಿಲಾದ ಸುಖ. ಅದಕ್ಕೆ ಬೇರೆ ನೆವ ಬೇಕಿಲ್ಲ; ಬೇರೊಂದು ಉದ್ದೇಶಪೂರ್ವಕವಾದ ಪ್ರಯೋಜನ ಅದಕ್ಕೆ ಇರುವದಿಲ್ಲ. ಆದರೆ ನಿಸರ್ಗದ ಉದ್ದೇಶವು ಇದರಿಂದ ಸಾಧ್ಯವಾಗುತ್ತದೆ. ಇಷ್ಟ ಕಾಮದ ಪೂರ್ತಿಯಿಂದಲೇ ಪುತ್ರ ಕಾಮೇಷ್ಟಿ ಸಂಭವಿಸುತ್ತದೆ ! ಮಾನವನು ಬಯಸಿ ಪಡೆದು ಸವಿಯುವ ಸುಖದ ಈ ಉತ್ಕಟ ಕ್ಷಣದಲ್ಲಿಯೇ ಮಾನವನು ಹುಟ್ಟುವಂತಾಗುತ್ತದೆ !

ಆದರೆ ಇದರಿಂದ ಪ್ರೀತಿಯು ಮುಗಿದಂತಾಗುವದಿಲ್ಲ. ಹೂವು ಬಾಡಿ ಕಾಯಿ ಬೆಳೆಯುವಂತೆ ಗಂಡು–ಹೆಣ್ಣು ತಂದೆ ತಾಯಿಯಾಗಿ ಮಾರ್ಪಡುವದಿಲ್ಲ !

ಹೂವಿನಲ್ಲಿ ಕಂಪು ಸೂಸುವ ಪರಾಗವೇ ಕಾಯಿಯ ರುಚಿಯಾಗುತ್ತದೆ, ಹಣ್ಣಿನ ರಸವಾಗಿ ಮಾಗುತ್ತದೆ. ಕೂಸು ಬಂದೊಡನೆ ದಂಪತಿಗಳ–ತಾಯ್ತಂದೆಗಳ–ಪ್ರೀತಿಯು ಪುನರ್ಜನ್ಮವನ್ನು ಪಡೆಯುತ್ತದೆ. ಹೊಸ ಹುಟ್ಟಿನಲ್ಲಿ ಪ್ರೀತಿಯು ಹಳೆಯ ಕಿಚ್ಚಾಗಿ ಉಳಿಯುವದಿಲ್ಲ; ಆದರೂ ಹಿಂದಿನ ಕಾವಿನಲ್ಲಿ ಎಂದೂ ಇಲ್ಲದ ಒಂದು ಒಳಿತಿನ ಕಳೆಯನ್ನು ಬೆರೆಯಿಸಿಕೊಂಡು ಹೊಸ ಬೆಳಕಾಗಿ ಮೂಡುತ್ತದೆ. ಕೂಸು ಹುಟ್ಟಿಬರುವ ಮೊದಲಿನ ಗಂಡು–ಹೆಣ್ಣಿನ ಪ್ರೀತಿಯು ಉಜ್ವಲವಿದ್ದಷ್ಟೇ ಚಂಚಲ. ಅದಕ್ಕೆ ರಸವಿದ್ದಷ್ಟೇ ರಭಸ. ಹುಚ್ಚು ಹಳ್ಳದ ನೆರೆಯಂತೆ ಅದರ ಮದವಿಲಾಸದ ನಡೆ. ಆದರೆ ಕೂಸನ್ನು ಕಂಡು ತಣಿದ ತಂದೆತಾಯಿಗಳ ಪ್ರೇಮ ಆಳವಾದ ವಿಶಾಲವಾದ ತಿಳಿನೀರಿನ ಪ್ರವಾಹದಂತೆ ಗಾಂಭೀರ್ಯ ಮತ್ತು ಗೌರವ ಉಳ್ಳದ್ದು. ಪ್ರೀತಿಯು ಈ ಪರಿವರ್ತನದ ಸಂದರ್ಭದಲ್ಲಿ ಹೆಣ್ಣಿನ ವರ್ತನವು ಒಮ್ಮೆಲೇ ಬೇರೆಯಾಗುವದುಂಟು. ಹೆಣ್ಣು ತನ್ನ ತಾಯ್ತನದ ಹೊಸ ಭಕ್ತಿಯ ಸಂಭ್ರಮದಲ್ಲಿ ಗಂಡನನ್ನೇ ಕೆಲಕಾಲ ಮರೆಯುವದುಂಟು. ಇದನ್ನು ಗಂಡು ತಿಳಿದು ತಾಳಬೇಕು. ವಿಪರೀತವೆಂದು ಭಾವಿಸಬಾರದು. ಹಾಗೆಯೇ ಗಂಡಸು ತನ್ನ ತಂದೆತನದ ಸಂತಸದಲ್ಲಿ–ಅದೂ ಹೊಸಹುಟ್ಟಿದ ಕೂಸು ಹೆಣ್ಣಾಗಿದ್ದರೆ–ಹೆಂಡತಿಯನ್ನು ಒಲಿಸಿಕೊಳ್ಳುವಾಗಿನ ತನ್ನ ಆರಾಧನೆ–ಆಸಕ್ತಿಗಳನ್ನು ಈಗ ಮುದ್ದು ಮಗುವ ಮುದ್ದಾಟದಲ್ಲಿ ಧಾರೆಯೆರೆಯುವನು.

ಪ್ರೀತಿಯು ಅಮೃತಬಳ್ಳಿಗೆ ಮದುವೆಯು ಹೂ.ಮಕ್ಕಳು ಹಣ್ಣು ಕಾಯಿ. ಆದರೆ ಮದುವೆಯು ನಿಜವಾದ ಪರಿಪೂರ್ಣತೆ ಆಗುವದು ಯಾತರಿಂದ ? ಮದುವೆಯು ಮಂಟಪದಲ್ಲಿ ಮಾಡಿ ಮುಗಿದರೂ, ಬಾಳಿನಲ್ಲಿ ಪೂರ್ಣತೆಯನ್ನು ಹೊಂದುವದು ಕೇವಲ ಕಾಲದಿಂದಲೇ ಸರಿ· ಸಮವಾಗಿ ಕೂಡಿ ಸವಿದ ಮತ್ತೂ ಸಹಿಸಿದ ಲಾಭಾಲಾಭಗಳೂ, ಜಯಾಜಯಗಳೂ, ಸುಖ–ದುಃಖಗಳೂ, ಎರಡೂ ಹೃದಯಗಳನ್ನು ಬೆಸೆದು ಬೆರೆಯಿಸಿ ದಾಂಪತ್ಯವನ್ನು ಒಂದು ದ್ವಂದ್ವವಿಲ್ಲದ ನಿತ್ಯಸಮಾಸವಾಗಿ ಮಾಡುತ್ತವೆ. ಕೂಡಿಮಾಡಿದ ಕೂಡಿಪೂಡಿದ ಪಂಚಿಕೆಗಳು, ಭುಜಕ್ಕೆ ಭುಜಹಚ್ಚಿ ಹೆಣಗಿದ ಹೋರಾಟಗಳು ಕೈಗೆ ಕೈಕೊಟ್ಟು ಗಳಿಸಿದ ಗೆಲುವುಗಳು, ಸಹಭಾಗಿಯಾಗಿ ಸಹಿಸಿದ ವಿಪತ್ತುಗಳು, ಉಲ್ಲಾಸದ ಜಾಲದಲ್ಲಿ ಹೆಣೆದ ಎರಡು ಜೀವಗಳ ಭಾವ ತಂತುಗಳನ್ನು ಜೀವನದ ವಜ್ರ ಪೀಠವಾಗಿ ಮಾರ್ಪಡಿಸುತ್ತವೆ. ಶರೀರಗಳ ಸುಖದ ಸಹಕಾರವು ಮಾಗಿ ಆತ್ಮಿಕ ಆನಂದದ ಸಹಯೋಗವಾಗುತ್ತದೆ. ಕೆಲವು ಪ್ರೇಮಿಕ ದಂಪತಿಗಳಲ್ಲಿ ಈ ಸಹಯೋಗವು ಎರಡು ವ್ಯಕ್ತಿತ್ವಗಳ ಸಾಯುಜ್ಯವನ್ನೇ ಸಾಧಿಸಿದಂತೆ ಕಂಡುಬರುತ್ತದೆ. ಗಂಡ–ಹೆಂಡತಿ ಕೂಡಿ ಒಂದು ವ್ಯಕ್ತಿತ್ವವಾಗಿ ಎರಕ ಹೊಯ್ದು ರೂಪಗೊಂಡಂತೆ ತೋರುತ್ತದೆ. ಇದರಿಂದ ನಮ್ಮವರು

ಹೆಂಡತಿಗೆ 'ಅರ್ಧಾಂಗಿ' ಎಂಬುದರಲ್ಲಿ ಎಂಥ ಆಳವಾದ ಸೊಗಸು ಇದೆಯೆಂಬುದು ಬೋಧವಾಗುತ್ತದೆ. (ನಮ್ಮವರು 'ಅರ್ಧಾಂಗಿ' ಎಂದರೆ ಸ್ತ್ರೀಪುರುಷರ ಸಮಾನ ಸ್ಥಾನ ಮಾನಗಳನ್ನು ಪ್ರತಿಪಾದಿಸುವ ಪಾಶ್ಚಾತ್ಯರು ದಾಕ್ಷಿಣ್ಯದ ದರ್ಪದಲ್ಲಿ ಇನ್ನು ಮುಂದೆ ಹೋಗಿ ಹೆಂಡತಿಯನ್ನು 'ಬೆಟರ್ ಹಾಫ್' ಹೆಚ್ಚು ಒಳಿತಾದ ಅರ್ಧಾಂಗಿ' ಎಂದು ಕರೆದರು. ವೈಷಮ್ಯವಿಲ್ಲದಲ್ಲಿಯೂ ಒಂದು ತಾರತಮ್ಯವನ್ನೂ ತೋರಿದರು ! ಜೀವನದ ವ್ಯಕ್ತಿತ್ವದ ಅರ್ಧ ಅಂಗವಾಗಿದ್ದೂ ಉಳಿದ ಅರ್ಧಕ್ಕಿಂತ ಗುಣದಲ್ಲಿ, ಮೂಲ್ಯದಲ್ಲಿ ಹೆಚ್ಚಿನ ಅಂಗವೆಂದು ಅಂಗನೆಯನ್ನೂ ಅಂಗೀಕರಿಸಿದರು. ಬಡಗಂಡಸು 'ಲೆಸ್ಸರ್‌ಹಾಫ್' ಕಡಿಮೆ ಒಳತಿನ ಅರ್ಧಾಂಗಿ ಆಗಿ ಉಳಿದ !)

ತಮ್ಮ ಕರುಳಿನ ಗಂಟಾಗಿ ಹುಟ್ಟಿದ ಶಿಶುಗಳ ತೊಟ್ಟಿಲುಗಳನ್ನು ಆರೈದು ನೋಡಿಕೊಳ್ಳುತ್ತ, ಅವುಗಳ ಲಾಲನೆ ಪಾಲನೆಯಲ್ಲಿ ಒಬ್ಬರನ್ನೊಬ್ಬರು ತಮ್ಮನ್ನೇ ಇಬ್ಬರೂ ಮರೆತು ಮಗ್ನರಾಗುತ್ತ, ಕೊನೆಗೆ ಅವರನ್ನು ತಮ್ಮಂತೆಯೇ ಪ್ರೀತಿಸಬಲ್ಲ ತಮಗಿಂತಲೂ ಎಳೆಯವರಾದ ನಲ್ಲ-ನಲ್ಲೆಯರ ಕೈಗೆ ಒಪ್ಪಿಸುತ್ತ ತಮ್ಮದೇ ಪ್ರೇಮದ ಹೊಸ ಯುಗವನ್ನು ನಿರ್ಮಿಸುವದೆಂದರೆ ಎರಡು ಹೃದಯಗಳು ಒಂದಾಗಿ ಎರಡು ಜೀವಗಳು ಒಂದು ಅಖಂಡ ಜೀವನವಾಗುವದೇ ಸರಿ. ಸಂಸ್ಕೃತದಲ್ಲಿ 'ಜಾಯಾ' ಮತ್ತು 'ಪತಿ' ಇವೆರಡೂ ಕೂಡಿ 'ದಂಪತಿ' ಯಾಗುತ್ತದೆ. ಅದೊಂದು ಹೊಸ ಅಖಂಡ ವ್ಯಕ್ತಿತ್ವವನ್ನು ವ್ಯಕ್ತ ಪಡಿಸುವ ಸಮಾಸವು !

ಪ್ರೇಮಿಗಳ ಸರಸ ಸಲ್ಲಾಪಗಳ ಕುಲುಕುಲು ನಿನಾದವು ಕರಗಿ ಮಕ್ಕಳ ಪುಂಡಾಟಿಕೆಯ ನಗುನಲಿವಿನ ಕಿಲಿಬಿಲಿಯ ಗಲಭೆಯು ಪತಿಪತ್ನಿಯರ ಮನಗಳನ್ನೂ ಮನೆಯನ್ನೂ ತುಂಬಿತುಳುಕುತ್ತದೆ. ಆದರೆ ಮಕ್ಕಳು ಬೆಳೆದು ತಮ್ಮ ತಮ್ಮ ಜೀವದ ಸಂಗಾತಿಗಳನ್ನು ಕಂಡುಕೊಂಡು ಹೊಸಬಾಳನ್ನು ಕಟ್ಟಲಿಕ್ಕೆ ಮನೆಬಿಟ್ಟು ಹೋದಮೇಲೆ, ಮುಂದೇನು ? ತಂದೆತಾಯಿಗಳ ಬಾಳು ಬರಿದಾಗುವದೇ ? ಮನೆಯು ಶೂನ್ಯವಾಗುವದೇ ? ಇಲ್ಲ. ಮಕ್ಕಳ ಚೆಲ್ಲಾಟಕ್ಕೆ ಮೊಳಗಿದ ಮನೆಯು ಅವರ ಆನಂದದ ನೆನಹುಗಳ ಮೌನದಿಂದ ತುಂಬುವದು. ಹಲವು ವರ್ಷಗಳ ಜೀವನ ಜತೆಗಾರರಾದ ತಂದೆ-ತಾಯಿಗಳ ಹೃದಯದ ಕೊರತೆಯನ್ನು ಪೂರೈಸಲಿಕ್ಕೆ ಪ್ರೀತಿಯು ತನ್ನ ಎಲ್ಲ ಸಂಪತ್ತಿನೊಡನೆ ಮತ್ತೆ ಮೈದುಂಬಿಬರುತ್ತದೆ. ಮುಪ್ಪಿನ ನೆರೆಯಲ್ಲಿ ನಿಂತವರಲ್ಲಿಯೂ ಹೊಸ ಹರೆಯುವರವಂಥ ಅನುರಾಗವು ಮತ್ತೆ ಅಂಕುರಿಸಿ ನಿಲ್ಲುತ್ತದೆ. ಪ್ರೀತಿ ಬಾಳನ್ನು ತುಂಬಿ ವ್ಯಕ್ತಿತ್ವವನ್ನು ಅರಳಿಸುತ್ತದೆ; ಮಕ್ಕಳನ್ನು ತಂದು ಸಾವನ್ನು ಸಲ್ಲಿಸುತ್ತದೆ; ಕೊನೆಗೆ ಮುಪ್ಪಿನ ಹೊಸ್ತಿಲಿನಲ್ಲಿ ಮರಣದ ಹೊರ ಅಂಗಳಲ್ಲಿ ನಿಂತ ಗಂಡು-ಹೆಣ್ಣುಗಳಿಗೆ ತನ್ನ ಮೃದು ಮಧುರ

ಸ್ಪರ್ಶದಿಂದ ಏಕಾಂತ ಬೇಸರವನ್ನೂ ದೇಹಾಂತದ ಭಯವನ್ನೂ ದೂರಮಾಡಿ ತೃಪ್ತಿಯ ಶಾಂತಿಯನ್ನೂ ದಯಪಾಲಿಸುತ್ತದೆ : ನವರಸಭರಿತವಾದ ಪ್ರೀತಿಯ ಕಾವ್ಯವು ಶಾಂತ ರಸದಲ್ಲಿ ವಿರಾಮಗೊಳ್ಳುತ್ತದೆ. ಇಂಥ ಶಾಂತಿಯನ್ನು ಕೊಡದ ಪ್ರೀತಿ–ಪ್ರೀತಿಯೇ ಅಲ್ಲ. ಅದು ಬರೇ ಕಾಮದ ಕೆರಳಿಕೆ, ಕಾಮದ ಹಸಿವು. ಸಂತಪ್ತ ಹೃದಯಗಳನ್ನು ಸಂತೃಪ್ತಗೊಳಿಸುವ ಭಾವವೇ ಪ್ರೀತಿ. ತಾರುಣ್ಯದಲ್ಲಿ ನಸುಕಿನ ನಸುಗೆಂಪಿನಂತೆ ಪ್ರಣಯವು ಉದಿಸಿ ಬರುತ್ತದೆ. ಪ್ರೌಢದಶೆಯಲ್ಲಿ ಪ್ರೀತಿಯ ಪೂರ್ಣಬಿಂಬವು ಹಗಲಿನ ಬಿಸಿಲಿನಂತೆ ಬೆಳಕನ್ನೂ ಬಾಳಿನ ಕಾವನ್ನೂ ಸೂಸುತ್ತ ಅಂತರಂಗದ ಅಂತರಿಕ್ಷವನ್ನೂ ದಿವ್ಯವಾಗಿ ವ್ಯಾಪಿಸುತ್ತದೆ. ವೃದ್ಧಾಪ್ಯದಲ್ಲಿ ಅದರ ಬೆರಗು–ಬೆಡಗುಗಳ ಉಜ್ವಲತೆಯು ಹಣ್ಣಾಗಿ ಸಂಜೆಗೆಂಪಿನ ಸೊಗಸಾದ ಸೊಬಗನ್ನು ಸೌಮ್ಯವಾಗಿ ಚೆಲ್ಲಿ ಬದುಕಿನ ಬಾನಿನಲ್ಲಿ ಕವಿಯಲಿರುವ ಸಾವಿನ ಕಂಗೆಡಿಸುವ ಕತ್ತಲೆಯನ್ನು ಕಂಗೊಳಿಸುವ ಸ್ನಿಗ್ಧ ಪ್ರಭಾವದಿಂದ ಮುಚ್ಚುತ್ತದೆ.

ಪ್ರೀತಿಯನ್ನು ಕೇವಲ ಕಾಮವಾಗಿ ಕಂಡವರು ಅದರ ಮೂಲವನ್ನಷ್ಟೇ ಮೈಯ ಮೇದ–ಮಾಂಸವನಷ್ಟೇ ನೋಡಿವರೆನ್ನಬೇಕು. ಪ್ರೀತಿಯ ಆತ್ಮವು ಈಗ ಇಳಿ ವಯಸ್ಸಿನಲ್ಲಿ ಉಳಿಯುತ್ತದೆ. ಹುಲ್ಲು ಕಡ್ಡಿ ಹಣ್ಣಾಗಿ ಒಣಗಿ ಮುದುಡಿ ಹೊಟ್ಟು ಸಿವುಡಾಗಿ ಹುಡಿಯು ಪಾಲಾಗುವಾಗ ತೆನೆಯು ಸತ್ವ ತುಂಬಿ ಪರಿಪುಷ್ಟಕಾಳಾಗಿ ಧಾನ್ಯದ ಧನ್ಯತೆಯನ್ನು ಪಡೆಯುತ್ತದೆ. ಪ್ರೀತಿಯೂ ಅದೇ ಬಗೆಯ ಪೈರು. ಸಹವಾಸ ಸುಖದ ಸಾಲೋಕ್ಯದಲ್ಲಿ ದೇಹಗಳ ಸಾಮೀಪ್ಯಕೂಡಿ ಭಾವದ ಸಾರೂಪ್ಯದಿಂದ ಆತ್ಮಗಳ ಸಾಯುಜ್ಯವನ್ನು ಸಾಧಿಸುವದೇ ಮೋಹದಿಂದ ಮೋಕ್ಷಕ್ಕೆ ಒಯ್ಯುವ ಪ್ರೀತಿಯ ಉತ್ಕ್ರಾಂತಿ ! ಕಾಮಕ್ಕೆ ನೆಲೆಯಾದ ಪ್ರತಿಯೊಂದು ಕಾಯಿಕ ಅಂಶವೂ ಬಾಳಿನ ಕುಲಿಮೆಯಲ್ಲಿ ಸುಟ್ಟು ಸಣ್ಣಾಗಿ ಹೋಗಿರುತ್ತದೆ. ಕಣ್ಣು ಕೆನ್ನೆಗಳ ಥಳಕು ಕಂದಿ ದೇಹದ ಆಕರ್ಷಣೆ ಇಲ್ಲವಾದ ಮಾತ್ರಕ್ಕೆ ಮುದುಕ ಗಂಡ–ಹೆಂಡಿರು ಒಬ್ಬರಿಗೊಬ್ಬರು ಉದಾಸೀನರಾಗುವದುಂಟೇ ? ಪ್ರಣಯದಲ್ಲಿ ಆರಂಭವಾಗದ ಹಿಂದೂ ದಾಂಪತ್ಯದಲ್ಲಿ ಕೂಡ ಮುಂದೆ ಸಂಸಾರದ ಸಂಗಡಿಗರಾಗಿ ಜೀವದ ಜತೆಯನ್ನು ಹೊಂದಿಸಿಕೊಂಡ ಗಂಡ–ಹೆಂಡತಿ ಮುಪ್ಪಿನಲ್ಲಿ ಹರೆಯವೆಲ್ಲ ಹಾರಿ, ಮೈಯೆಲ್ಲ ನರೆತು ಹಲ್ಲುಬಿದ್ದು ಸೊರಗಿ ಸುಕ್ಕಾಗಿ ತರಗೆಲೆಗಳಂತೆ ಸಾವಿನ ಉಸಿರಿಗೆ ಹಾರಿ ಹೋಗಲು ದಾರಿಕಾಯುತ್ತಿರುವಾಗಲೂ ಪಾರಿವಾಳಗಳಂತೆ ಸುಖದ ಸಂಭ್ರಮದಲ್ಲಿ ಸರಸ ಸಲ್ಲಾಪಗೈಯುತ್ತಿರುವದನ್ನು ನಾವು ನೋಡಿಲ್ಲವೇ ? ಆಗ ಅವರನ್ನು ಎರಡೂ ಮೈಯ ಒಂದು ಜೀವವಾಗಿ ಎರಕ ಹೊಯ್ದ ಶಕ್ತಿ ಯಾವದು ? ಬಾಳಿನೊಡನೆ ಮಾಗಿ ಬಂದ ಬದುಕಿನ ಭಾರಕ್ಕೆ ಬಾಗಿನಿಂತ ಪ್ರೀತಿ. ಮುದಿ ಹೃದಯಗಳ ಪುನರ್ಮಿಲನದಲ್ಲಿ ಸುಖಸಮಾಗಮದಲ್ಲಿ, ದೇಹದ ಕಾಮವು ಆತ್ಮದ ವಿಕಾಸವಾಗಿ ಪೂರ್ಣತೆಯನ್ನು ಹೊಂದುತ್ತದೆ. ಪ್ರೀತಿಯ ಋತುಚಕ್ರವು

ಹೀಗೆ ಪೂರ್ತಿಯಾಗುತ್ತದೆ.

ಸಂತಾಯನ ಎಂಬ ವಿಶ್ವವಿಖ್ಯಾತ ಜ್ಞಾನಿಯು ಒಂದೆಡೆಗೆ ಅರ್ಥ ಗಂಭೀರವಾಗಿ ಹೀಗೆ ಉದ್ಗರಿಸಿದ್ದಾನೆ. 'ಪ್ರತಿಯೊಂದು ಆದರ್ಶಕ್ಕೂ ಒಂದು ನೈಸರ್ಗಿಕ ತಳಹದಿ ಇದೆ. ಪ್ರತಿಯೊಂದು ನೈಸರ್ಗಿಕ ಸಂಗತಿಗೂ ಒಂದು ಆದರ್ಶ ಬೆಳವಣಿಗೆ ಇದೆ.' ಇವಕ್ಕೆ ಪ್ರೀತಿಗಿಂತಲೂ ಮಿಗಿಲಾದ ಉದಾಹರಣೆ ಮತ್ತೊಂದು ಇಲ್ಲ. ಪ್ರೀತಿಯೆಂಬ ಕ್ರಾಂತಿಗಿಂತಲೂ ಅದ್ಭುತವಾದ ಘಟನೆ ಇನ್ನಾವುದು ? ಆ ಜಡಜೀವಿ ಅಣುಕೋಶಗಳ ಚುಂಬಕ ಶಕ್ತಿಯಿಂದ ಆರಾಧನೆಯ ಪ್ರಣಯ ಕಾವ್ಯಕ್ಕೂ ಅಲ್ಲಿಂದ ಅಖಂಡ ಜೀವಮಾನದ ಅನ್ಯೋನ್ಯ ನಿಷ್ಠೆಯ ಅನನ್ಯ ಶ್ರದ್ಧೆಗೂ ಏರಿ, ನೋವು ಸಾವುಗಳನ್ನೂ ಮೀರಿ ನಿಲ್ಲುವ ಈ ಪ್ರೀತಿಯೆಂಬ ವಿಕಾಸಕ್ಕೂ ವಿಸ್ಮಯಕರವಾದ ವಿಚಿತ್ರವು ಬೇರೆ ಯಾವದು ?

ಕಮಲವು ಕೆಸರಿಗೆ ನಾಚಬೇಕಾಗಿಲ್ಲ. ಸೂರ್ಯನ ಕಡೆಗೆ ಮುಖ ಹೊರಳಿಸಿ ಅರಳಿದರೆ ಸಾಕು. ಪ್ರೇಮವು ತನ್ನ ಮೂಲದ ಕುರಿತು ನಾಚಿಕೆ ಪಡಬೇಕಿಲ್ಲ. ಭಕ್ತಿನಿಷ್ಠೆಯ ಉತ್ತರಕ್ಕೆ ಏರಲಾರದಿದ್ದರೆ ಮಾತ್ರ ಕಾಮಕ್ಕೆ ಧಿಃಕಾರದ ಲಾಂಛನ. ಪ್ರಕೃತಿಯು ನಿಷ್ಕೃತಿ ಸಂಸ್ಕೃತಿಯಲ್ಲ. ನಿಸರ್ಗವ ನಿಃಶ್ರೇಯಸ ನಿರ್ಮಿತಿಯಲ್ಲ, ಆದ್ದರಿಂದ ಶರೀರದ ಧರ್ಮವಾಗಿ ಬರುವ ಪ್ರೇಮದ ಆಧಾರವಾದ ಕಾಮಪ್ರವೃತ್ತಿಯನ್ನು ಕಡೆಗಣಿಸಬೇಕಾಗಿ ಇಲ್ಲ. ಅದರ ಪರಿಪಾಕ ಪ್ರೀತಿಯಲ್ಲಿ ಆಗದೇ ವಿಕಾರಗೆಟ್ಟು ಪಶುವರ್ತನೆಯ ಕಡೆಗೆ ಒಯ್ಯದಿರುವಂತೆ ಮಾತ್ರ ನೋಡಿಕೊಳ್ಳಬೇಕು. ಕೇವಲ ದಮನದಿಂದ ಕಾಮವು ಕೆಡುವದಿಲ್ಲ. ಕಾಮಿಯನ್ನೇ ಕೆಡಿಸುತ್ತದೆ. ಪ್ರೀತಿಯು ಪರಿಪಕ್ವವಾಗಿ ಜೀವನವು ರಸದಿಂದ ತುಂಬಿ ಹೃದಯಗಳಿಗೆ ಮಾಧುರ್ಯದ ಸೊಗಸು ಸಿಗುವದು ಮಾನವತೆಯ ವಿಕಾರಕ್ಕೆ ಒಂದು ಅತ್ಯಗತ್ಯವಾದ ಸಂಸ್ಕಾರವು. ಈ ಸಂಸ್ಕಾರಕ್ಕೆ ಹೊರತಾದ ಅನುಭವವೆಲ್ಲ ಅಸತ್ಯ, ಅರ್ಧಸತ್ಯ, ಪ್ರೇಮವಿಲ್ಲದೇ ಜ್ಞಾನವು ವಾಸಿಯಲ್ಲ; ಬರೇ ಅರೆವಾಸಿ. ಕೇವಲ ಜ್ಞಾನಿಯಾಗಿ, ತಪಸ್ವಿಯಾಗಿ ಬಹುಕಾಲ ಉಳಿದ ಜನ ಸ್ತ್ರೀಯ ವ್ಯಾಮೋಹಕ್ಕೆ ಬಲಿಬಿದ್ದ ಕೆಟ್ಟ ಕತೆಗಳನ್ನು ನಾವು ಓದಿಲ್ಲವೇ ? ಅದ್ವೈತಮತದ ಮುಂದಾಳಾಚಾರ್ಯರಾದ ಶ್ರೀ ಶಂಕರಾಚಾರ್ಯರಿಗೆ ಮಂಡನ ಮಿಶ್ರರನ್ನು ವಾದದಲ್ಲಿ ಗೆಲ್ಲುವ ಮೊದಲು ಸ್ತ್ರೀಸುಖದ ಅವಶ್ಯ ಜ್ಞಾನಾನುಭವವನ್ನು ಪಡೆಯಲು ಪರಕಾಯಾ ಪ್ರವೇಶವನ್ನು ಮಾಡಬೇಕಾಯಿತಂತೆ. ಈ ಕತೆಯು ಕಲ್ಪನೆಯೋ ಇರಬಹುದು; ಇದರಲ್ಲಿಯ ತಥ್ಯ ಕಲ್ಪನೆಯಲ್ಲ.

ಪ್ರೇಮಿಯಾದ ವ್ಯಕ್ತಿ ತನ್ನದೆ ಆರಾಧನೆಯನ್ನೂ ಸಾಧನೆಯನ್ನೂ ಸಹನೆಯನ್ನೂ

ಕಲಿಯುತ್ತದೆ; ಗಂಭೀರವಾಗುತ್ತದೆ; ಅಂತರ್ಮುಖತೆ ಬೆಳೆಯುತ್ತದೆ; ತನ್ನ ಪ್ರಿಯಜನದ ಪ್ರಶಂಸೆಯನ್ನು ಪಡೆಯಬೇಕೆಂಬ ಉತ್ಕಟ ಉತ್ಕಂಠೆಯಲ್ಲಿ ಎಂದೂ ಅಲ್ಲದ ಪರಾಕ್ರಮಕ್ಕೆ, ಪುರುಷಾರ್ಥಕ್ಕೆ ಅಣಿಯಾಗುತ್ತದೆ. ಪ್ರೀತಿಯಿಂದಲೇ ಕಲೆ; ಪ್ರೀತಿಯಿಂದಲೇ ರಸಿಕತೆ; ಪ್ರೀತಿಯಿಂದಲೇ ಭಕ್ತಿ. ಪ್ರೀತಿಯ ಆಲಂಬನೆಯು ಬೇರೆ ಆದಂತೆ ಅದರ ಆವಿಷ್ಕಾರವೂ ಬೇರೆ ಆಗುತ್ತದೆ. ಪ್ರೀತಿಯು ಜಾಗೃತ ವಾಗಿದ್ದಲ್ಲಿ ಯಾವ ಕೃಪಣನೂ ಉದಾರಿಯಾಗುತ್ತಾನೆ; ಯಾವ ಕ್ರೂರನೂ ಕರುಣಿಯಾಗುತ್ತಾನೆ; ಯಾವ ಖಲನೂ ಮೃದುವಾಗುತ್ತಾನೆ. ಆದ್ದರಿಂದ ಪ್ರೀತಿಯು ಒಂದು ಸಂಸ್ಕೃತಿ ಪೋಷಕ ಸದ್ಗುಣ. ಅದ್ದರಿಂದಲೇ 'ಪ್ರೀತಿಯಲ್ಲಿ ಎಲ್ಲವೂ ಕ್ಷಮ್ಯ' ಎಂಬ ಜಾಣ್ನುಡಿ ಆಂಗ್ಲರಲ್ಲಿ ರೂಢವಾಗಿದೆ. ಕಾಮಿಯು ಕುರುಡು ಕೆರಳಿಕೆಯ ಕ್ರೂರಕರ್ಮಿಯಾಗಬಲ್ಲನು. ಆದರೆ ಪ್ರೇಮಿಯು ಹಾಗಲ್ಲ. ತಾನು ಮೆಚ್ಚಿದ ವ್ಯಕ್ತಿ ತನಗೆ ತಾನಾಗಿ ಮಣಿಯಬೇಕು. ತನ್ನ ಒಲವಿನ ಒಲಿದು ಈಲಾಗಬೇಕು-ಎಂಬ ಹಂಬಲ. ಅದಕ್ಕೆ ತಕ್ಕ ಹಂಚಿಕೆ ಪ್ರೇಮಿಯದಿರುತ್ತದೆ. ಸೀತೆಯನ್ನು ಕದ್ದೊಯ್ದ ರಾವಣನನ್ನು ಆಕೆಯ ಮೇಲೆ ಅತ್ಯಾಚಾರಕ್ಕೆ ದುಡುಕದಂತೆ ಒಂದು ವರ್ಷ ಪರ್ಯಂತ ತಡೆ ಹಿಡಿದ ಶಕ್ತಿ ಯಾವದು ? ಅವನ ಕಾಮುಕ್ಕೆ ಅಷ್ಟರ ಮಟ್ಟಿ ಗಾದರೂ ಸಂಸ್ಕಾರಕೊಟ್ಟ ಪ್ರೇಮದ ಪ್ರೇರಣೆಯೇ ಅನ್ನಬೇಕು. ಮಿಹರುನ್ನಿಸಾಳ ಪತಿಯನ್ನು ಕೊಲ್ಲಿಸಿ ಆ ಚಲುವೆಯನ್ನು ತನ್ನ ಅಂತಃಪುರಕ್ಕೆ ತಂದಿರಿಸಿದ ಮೇಲೂ ದೀರ್ಘ ಅವಧಿಯತನಕ ಆಕೆಯನ್ನು ಬಲತ್ಕಾರದಿಂದ ತನ್ನವಳಾಗಿ ಮಾಡದೇ ಕಾತರ ನಾಗಿ ಕಾಯುತ್ತಿರುವಂತೆ ಸಾಲೀಮನಿಗೆ ಸಂಯಮದಲ್ಲಿ ಇಟ್ಟ ಪ್ರೇರಣೆ ಯಾವದು ? ಅಂತಃಪುರಕ್ಕೆ ಬಂದವಳು ತನ್ನ ಅಂತರಂಗದ ಪೀಠದಲ್ಲಿ ತಾನಾಗಿ ಮಂಡಿಸ ಬೇಕೆಂಬ ಅವನ ಅಂತಃಕರಣದ ಅನುರಾಗದ ಶಕ್ತಿ ! ಹೀಗೆ ಕಲ್ಪನೆ, ರಸಿಕತೆ, ಶಿಕ್ಷಣ, ಸ್ವಾಭಿಮಾನ, ಚಿಂತನೆ ಈ ಪಂಚಪ್ರಾಣಗಳು ಕೂಡಿದರೆ ಕಾಮದ ಪಿಂಡವು ಪ್ರೇಮದ ವ್ಯಕ್ತಿತ್ವವಾಗಿ ನಿಲ್ಲುತ್ತದೆ. ಆದ್ದರಿಂದಲೇ ಪ್ರೀತಿಯು ಸುಳಿದು ಹೋದ ಹೃದಯದಲ್ಲೆಲ್ಲ ಆ ಹೊತ್ತಿಗೆ ಆ ಮಟ್ಟಿಗೆ ಒಳಿತು ಮಾಡುತ್ತದೆ. ಒಲವು ಇದ್ದಲ್ಲಿ ಒಳಿತು–ಇದೊಂದು ನಿರಪವಾದವಾದ, ನಿರಂತರವೂ ಸತ್ಯವಾದ ನೀತಿತತ್ವ. ಜ್ಞಾನ ದಂಥ ಪವಿತ್ರ ವಸ್ತು ಈ ಲೋಕದಲ್ಲಿ ಬೇರೊಂದು ಇಲ್ಲವೆಂದು ಗೀತೆಯು ಸಾರುತ್ತದೆ ನಿಜ. ಆದರೆ ಪ್ರೇಮಕ್ಕಿಂತ ಪವಿತ್ರವಾದದ್ದು ಇನ್ನಾವದೂ ಅಲ್ಲ ವೆಂದರೇ ಹೆಚ್ಚು ಲೇಸು.

ಒಲವು ಇದ್ದಲ್ಲಿ ಒಳಿತು ಅಂದೆವು. ಇದೊಂದು ಭಯಂಕರ ತತ್ವವೆಂದು ಅನೇಕರು ಭಾವಿಸಬಹುದು. ಒಲವಿಗೂ ಮದುವೆಗೂ ಸಂಬಂಧವಿಲ್ಲವೆ ? ಸಂಬಂಧ ಇರ

ಬೇಕಲ್ಲವೇ ? ಪತಿಯನ್ನು ಪ್ರೀತಿಸುವದು ಪತ್ನಿಯ ಧರ್ಮ. ಪಾತಿವ್ರತ್ಯವೇ ಪ್ರೀತಿ–ಹೀಗೆಂದು ಧರ್ಮವು ಸಾರುತ್ತದೆ. ಅಂಥಲ್ಲಿ ಪ್ರೀತಿಯಿದ್ದಲ್ಲಿ ಎಲ್ಲ ಪಾವಿತ್ರ್ಯವಿದೆ ಅಂದರೆ ಅನರ್ಥವಾದೀತಲ್ಲ ! ಪ್ರೀತಿಗೂ ನಿಷ್ಠೆಗೂ ಸಂಬಂಧವೇನು ? ದಾಂಪತ್ಯಕ್ಕೆ ದ್ರೋಹವಮಾಡಿ ಪ್ರೀತಿಯ ವ್ಯವಹಾರ ನಡೆಯುವದಾದರೆ ಆ ಪ್ರೀತಿಯ ಮತ್ತು ಆ ದಾಂಪತ್ಯದ ಗತಿಯೇನು ? ಇವೆಲ್ಲ ಅತ್ಯಂತ ಗಂಭೀರ ಪ್ರಶ್ನೆಗಳು ! 'ಕವಯ : ಅಪಿ ಅತ್ರ ಮೋಹಿತ :' ಆದರೂ ಪ್ರಶ್ನೆ ಎತ್ತಿದಮೇಲೆ ಉತ್ತರದ ಪ್ರಯತ್ನ ಮಾಡಲೇಬೇಕು ತಾನೇ !

ವಿಧಿಯುಕ್ತವಾಗಿ ಮದುವೆ ಆಯಿತು. ಗಂಡು–ಹೆಣ್ಣು ಗೃಹಸ್ಥಾಶ್ರಮದಲ್ಲಿ ಶ್ರಮಿಸಹತ್ತಿದರು. ವಿಶ್ರಮಿಸಹತ್ತಿದರು. ಇಂಥಲ್ಲಿ ಪರಕೀಯನೋ ಪರಕೀಯಳೋ ಬಂದು ದಾಂಪತ್ಯದ ಭದ್ರತೆಗೆ ಭಂಗ ಬರುವಂತಾಯಿತು. ಗಂಡನನ್ನು ಬಿಟ್ಟು ಹೆಂಡತಿ ಅನ್ಯನೊಡನೆ ರಮಿಸಿದಳು. ಅಥವಾ ಹೆಂಡತಿಯನ್ನು ಬಿಟ್ಟು ಗಂಡನು ಅನ್ಯಳೊಡನೆ ಬಾಳಲು ಉಪಕ್ರಮಿಸಿದನು. ಇನ್ನು ಬಿಟ್ಟು ಬದಿಗಿಟ್ಟ ಗಂಡ ಅಥವಾ ಹೇಡತಿ ಕೆಟ್ಟ ಸ್ವಭಾವದವರಿದ್ದರೆ ಸಮಾಜವು ಪರಕೀಯ ವ್ಯವಹಾರವನ್ನು ಒಂದು ಅನಿವಾರ್ಯ ವ್ಯಾಮೋಹವೆಂದು ಕಾಣುತ್ತದೆ. 'ಪಾಪ ಅವನಾದರೂ ಏನು ಮಾಡ್ಯಾನು ! ಹೆಂಡತಿ ಹೊಯ್ಮಾಲಿ. ಮನೆಯಲ್ಲಿ ಸುಖ ಇದ್ದರೆ ಹೊರಗೆ ಹೋಗುತ್ತಿದ್ದನೇ ?' ಅಥವಾ 'ಅಯ್ಯೊ ! ಆಕೆಯದೇನು ತಪ್ಪು ? ಗಂಡ ಶುದ್ಧ ರಾಕ್ಷಸ ಅವನೊಂದಿಗೆ ಸಂಸಾರ ಮಾಡುವದೂ ಕತ್ತಿಗೆ ಮುತ್ತಿಡುವದೂ ಒಂದೇ ! ಅವಳಾದುದಕ್ಕೆ ಇಷ್ಟುಕಾಲ ತಡೆದಳು. !' ಎಂದು ಮುಂತಾದಾಗಿ ಕನಿಕರ ದಿಂದಲೋ ಕಳವಳದಿಂದಲೋ ಜನ ಆಡಿಕೊಳ್ಳುತ್ತದೆ. ಆದರೆ ಅದೇ ಗಂಡ ಇಲ್ಲವೆ ಹೆಂಡತಿ ಸಜ್ಜನರೇ ಆಗಿದ್ದರೆ ? ಸದ್ಗೃಹಸ್ಥನೆಂದು ಸಾಮ್ಯ ಕುಟುಂಬ ವತ್ಸಲನೆಂದೂ ಪ್ರತಿಷ್ಠೆ ಪಡೆದ ಒಬ್ಬ ಗಂಡನನ್ನು ಬಿಟ್ಟು ಹೆಂಡತಿ ಇನ್ನೊಬ್ಬ ಗಂಡಸಿನೊಡನೆ ವ್ಯವಹರಿಸಿದರೆ ! ಹಾಗೆಯೇ ಸರಳ ಸಾಧ್ವಿಯಾದ ಹೆಂಡತಿಯನ್ನು ಉದಾಸೀನ ಮಾಡಿ ಗಂಡನು ಇನ್ನೊಬ್ಬ ಹೆಂಗಸಿನಲ್ಲಿ ಆಸಕ್ತನಾದರೆ ? ಸಮಾಜಕ್ಕೆ ಅದು ದಾಂಪತ್ಯದ ದ್ರೋಹ ಘೋರ ವ್ಯಭಿಚಾರವೆನಿಸುತ್ತದೆ: ಮತ್ತು ಸಾಮಾಜಿಕ ಸ್ಥೈರ್ಯ–ಸ್ವಾಸ್ಥ್ಯಗಳ ದೃಷ್ಟಿಯಿಂದ ಹಾಗೆ ಅನಿಸುವದು ಸಹಜವೇ ಸರಿ.

ಆದರೆ ಇಂಥ ಎಲ್ಲ ಸಂದರ್ಭಗಳಲ್ಲಿ ತತ್ತ್ವದ ದೃಷ್ಟಿಯಿಂದ ಒಂದು ಸೂಕ್ಷ್ಮವನ್ನು ನೋಡಬೇಕು. ಹೊಸದಾಗಿ ಅಂಟಿದನಂಟು, ಪರಕೀಯನ ಅಥವಾ ಪರಕೀಯಳ ಆಸಕ್ತಿಯು, ಕೇವಲ ಮೋಹವೋ ಆಳವಾದ ಅನಿವಾರ್ಯವಾದ ಪ್ರೀತಿಯೋ ! ಆಸಕ್ತಿಯ ಈ ಆಳ–ಅನಿವಾರ್ಯವಾದ ಶಕ್ತಿಯನ್ನು ತಿಳಿಯುವ ಬಗೆ ಹೇಗೆ ?

ಆ ಬಗೆಯೆಂದರೆ, ಈ ಹೊಸ ಆಕರ್ಷಣೆಗಾಗಿ ಆ ಗಂಡು ಹೆಣ್ಣು ಎಂಥ ಬೆಲೆ ತೆರಲು ಎಷ್ಟು ಸಿದ್ಧರಿರುತ್ತಾರೆ ಎಂಬುದನ್ನು ನೋಡುವದು. ಲೋಕ ಲಜ್ಜೆ, ಆಪ್ತೇಷ್ಟರ ಸ್ನೇಹ ಪಾಶ, ಆರ್ಥಿಕ ಅನುಕೂಲ ಇವೆಲ್ಲ ಇದ್ದಲ್ಲಿ ಮಾತೇ ಬೇರೆ. ಅಂದರೆ, ತೋರಿಕೆಗೆ ಅಂಥ ಗಂಡ ಹೆಂಡಿರು ಸಾಕಷ್ಟು ಸಮಯ ಸುಖವಾಗಿ ಬದುಕಿದ್ದನ್ನು ನೋಡಿದವರಿಗೆ ಒಮ್ಮೆಲೆ ಗಂಡನ ಇಲ್ಲವೆ ಹೆಂಡತಿಯ ಪರಕೀಯ ವ್ಯವಹಾರವು (ಇದಕ್ಕೆ ವ್ಯಭಿಚಾರವೆನ್ನೋಣವೇ ?) ದಿಗಿಲಿಗೂ ಧಿಃಕಾರಕ್ಕೂ ಕಾರಣ ವಾಗುವದು. ಎರಡು ಮೂರು ಮಕ್ಕಳು ಆದಮೇಲೆಯೂ ಪ್ರತಿಷ್ಠಿತ ಹೆಂಡತಿಯು ಪರಪುರುಷನೊಡನೆ ಗುಪ್ತವಾಗಿಯೋ ಪ್ರಕಟವಾಗಿಯೋ ಕೂಡಿದ್ದು ಅನೇಕಸಲ ಕಂಡು ಬರುತ್ತದೆ. ಇಂಥ ಸಂಬಂಧ ಗುಪ್ತವಿದ್ದಲ್ಲಿ ಆಕೆಯು ತನ್ನ ಗಂಡನನ್ನೂ ಮಕ್ಕಳನ್ನೂ ನೋಡಿಕೊಳ್ಳುವದರಲ್ಲಿ ಅಕ್ಕರೆ ಆರೈಕೆಯ ಹೊಣೆ ಹೊತ್ತು ಹಗಲಿರುಳು ದುಡಿಯುವುದರಲ್ಲಿ ಸ್ವಲ್ಪವೂ ಉದಾಸೀನ ಮಾಡದೇ ಇದ್ದದ್ದು ಕಂಡು ಬರುವದುಂಟು. ಇದಕ್ಕೆ ಪ್ರತಿಯಾಗಿ ಮೊದಲು ಪಾತರಗಿತ್ತಿಯಂತೆ ಚನ್ನಿಗರೊಂದಿಗೆ ಚಿನ್ನಾಟವಾಡಿ ಸ್ವಚ್ಛಂದಳೆಂದು 'ಹೆಸರಾದ' ಹುಡುಗಿ ಮುಂದೆ ಏಕನಿಷ್ಠೆಯಿಂದ ಒಬ್ಬ ಸಾಮಾನ್ಯ ಪತಿಯನ್ನೂ ಮನವಾರೆ ಕೂಡಿಕೊಂಡು ಸುಖವಾಗಿ ಬದುಕಿ ಮದುವೆಯನ್ನು ಯಶಸ್ವಿಯಾಗಿ ಮಾಡಿದ್ದು ಉಂಟು. ಇಂಥ ಮದುವೆಯ ಬದುಕಿನ ಸುಖಕ್ಕೆ ಶೂಲವಾಗಿ ಹಳೆಯ ಪ್ರೀತಿ ವ್ಯವಹಾರಗಳ ಕುರುಹುಗಳೋ ಕುಟಿಲ ನೆನಹುಗಳೋ ತಲೆಯೆತ್ತುವ ಭೀತಿ ಇದ್ದರೆ ಆಕೆಯು ಗಾಬರಿಗೆಟ್ಟು ಯಾವ ಬೆಲೆಯನ್ನಾದರೂ ಕೊಟ್ಟು ಹೊಸಬಾಳಿನ ಹದವನ್ನು ಹಾರ್ದಿಕವಾಗಿ ಕಾಪಾಡಿಕೊಳ್ಳುವದುಂಟು. ಇದು ಕತೆಕಾದಂಬರಿಗಳಲ್ಲಿ ಮಾತ್ರವಲ್ಲ. ಜೀವನದಲ್ಲಿ–ಸುಶಿಕ್ಷಿತ ಸುಖವಸ್ತು ಮಧ್ಯಮ ಹಾಗು ಉತ್ತಮವರ್ಗದ ಶಿಷ್ಟ–ಪ್ರತಿಷ್ಠಿತ ಜೀವನದಲ್ಲಿ–ಅನೇಕ ಕುಟುಂಬಗಳಲ್ಲಿ ಹೀಗೆ ನಡೆಯುತ್ತದೆ. ಕತೆ ಕಾದಂಬರಿಗಳಲ್ಲಿ ಇದರ ಛಾಯೆ ಅಲ್ಲೊಮ್ಮೆ ಇಲ್ಲೊಮ್ಮೆ ಮೂಡುತ್ತದೆ. ಮೂಡಿಸಿದವರು ಕ್ಷುಲ್ಲಕರೆಂದು ಬಲ್ಲವರೆಂದುಕೊಳ್ಳುವವರು ಗುಲ್ಲೆಬ್ಬಿಸಲಿಕ್ಕೆ ಮಾತ್ರ ಮುಳುವಾಗುತ್ತದೆ. !

## ವ್ಯಭಿಚಾರದ ಒಂದು ಕಾರಣ

ಇಂಥ ದಾಂಪತ್ಯ ದ್ರೋಹಕ್ಕೆ ಇಂಥ ವ್ಯಭಿಚಾರವೆನಿಸುವ ವೈವಾಹಿಕರ ವೈಷಮ್ಯಕ್ಕೆ ಅರ್ಥವೇನು ? ಅನೇಕ ಉದಾಹರಣೆಗಳಲ್ಲಿ ಬರೇ ಕಾಮುಕತೆ ಹೆಣ್ಣಿನ ಮನಸ್ಸಿನ ದುರ್ಬಲತೆ ಗಂಡಿನ ಅನಿವಾರ್ಯ ಲಂಪಟತೆ. ಲಾವಣ್ಯದ ಮೋಹ, ಕೊನೆಗೆ ನಾವೀನ್ಯದ್ದಾದರೂ ಮೋಹ ಇದಕ್ಕೆ ಕಾರಣವಿರುತ್ತದೆಂದು ಒಪ್ಪಿಕೊಳ್ಳೋಣ.

ಆದರೆ ಅಂಥ ಸಾಧಾರಣ ಸ್ಖಲನ ಶೀಲತೆಯನ್ನು ಬಿಟ್ಟು ಮೇಲೆ ಕಾಣಿಸಿದಂಥ ಶಿಕ್ಷಣ ಸಂಸ್ಕಾರಪಡೆದವರಲ್ಲಿ ವಿಚಾರವಂತರೂ ಗಂಭೀರವೃತ್ತಿಯವರೂ ಎಂದೆನಿಸಿ ಕೊಂಡವರಲ್ಲಿ ವ್ಯಕ್ತವಾಗುವ ಈ ಬಗೆಯ ವ್ಯಾಮೋಹದ ವ್ಯವಹಾರಕ್ಕೆ ಕಾರಣವೇನು ? ಪತ್ನಿ ಚತುರಳೂ ಸುಂದರಳೂ ಶೀಲವತಿಯೂ ಇದ್ದಾಳೆ. ಆದಾಗ್ಯೂ ಪತಿಯು ಆಚೆಯ ಮನೆಯ ಸ್ತ್ರೀಯೊಡನೆ ಅದೂ ಸಾಮಾನ್ಯ ಸ್ತ್ರೀ ಯೊಡನೆ ಸಂಬಂಧವಿಟ್ಟುಕೊಳ್ಳುತ್ತಾನೆ. ಪತಿಯು ಕುಟುಂಬವತ್ಸಲ. ಪತ್ನಿಯನ್ನು ಅಭಿಮಾನದಿಂದ ನೋಡುತ್ತಾನೆ. ಆದಾಗ್ಯೂ ಪತ್ನಿಯು ಅವನೊಡನೆ ಯಾವ ವೈಮನಸ್ಸು ವ್ಯಕ್ತಮಾಡದೇ ಅವನ ಮಿತ್ರನನ್ನೋ ಮತ್ತೊಬ್ಬನನ್ನೋ ಮೋಹಿಸುತ್ತಾಳೆ. ಇದಕ್ಕೆ ಏನನ್ನಬೇಕು. ? ಇಂಥ ಸಂದರ್ಭದಲ್ಲಿ ಶ್ರೀ ಮಾಸ್ತಿ ಯವರ ಒಂದು ಕತೆಯಲ್ಲಿಯ ವೃದ್ಧೆಯೊಬ್ಬಳ ಮಾತು ನೆನಪಾಗುತ್ತದೆ. ಒಬ್ಬನ ಹೆಂಡತಿ ಇನ್ನೊಬ್ಬನ ಕೈ ಹಿಡಿದುಕೊಂಡು ಹೋದರೆ ಆಕೆಯ ದೈವದಲ್ಲಿ ಅವನೇ ನಿಜವಾದ ಗಂಡನಿದ್ದ. ಲಗ್ನದಗಂಡನೇ ಆಕೆಯನ್ನು ಅಪಹರಿಸಿ ಇಟ್ಟುಕೊಂಡವ ಎಂಬುದೇ ಆ ಮಾತಿನ ಅಭಿಪ್ರಾಯ. ಈ ಅಭಿಪ್ರಾಯದಲ್ಲಿ ಹಳೆಯ ಸರಣಿಯ ದೈವದ ಧ್ವನಿ ಇದ್ದರೂ ಅದಕ್ಕೆ ಆಳವಾದ ಅರ್ಥವಿಲ್ಲದೇ ಇಲ್ಲ. ಈ ಅರ್ಥವನ್ನು ಎರಡು ಮೂರು ವಿಧವಾಗಿ ವಿವರಿಸಬಹುದು.

'ಸರ್ವಃಸಗಂಧೇಷು ವಿಶ್ವಸತಿ' (ಪ್ರತಿಯೊಬ್ಬನೂ ತನ್ನ ಪ್ರಕೃತಿಯವನನ್ನೇ ನಂಬುತ್ತಾನೆ.) ಎಂದು ದುಷ್ಯಂತನು ಶಕುಂತಲೆಗೆ ಅಣಕವಾಡುತ್ತಾನೆ. ಈ ಮಾತಿನಲ್ಲಿ ಕಾಲಿದಾಸನು ಮನೋಘರ್ಷಣದ ಒಂದು ಮರ್ಮದ ಮಾತನ್ನೇ ಉಸು ರಿದ್ದಾನೆ. ಪ್ರತಿವ್ಯಕ್ತಿಯೂ (ಆತ್ಮವೆನ್ನಿ ಬೇಕಾದರೆ !) ಒಂದು ಸ್ವರದಂತೆ. ಅದಕ್ಕೆ ಸಂವಾದಿಯಾಗುವ ಇನ್ನೊಂದು ಸ್ವರವು ಇದ್ದೇ ಇರುತ್ತದೆ. ಅದು ಸರಿಯಾಗಿ ಹೊಂದಿಕೊಂಡಿತೆಂದರೆ ಎರಡೂ ಹೃದಯಗಳ ಭಾವತಂತುಗಳು ಸರಾಗವಾಗಿ ಮಿಡಿದು ಜೀವನದ ದಿವ್ಯ ಸುಖ ಸಂಗೀತವು ಹೊರಹೊಮ್ಮುತ್ತದೆ. ಒಲವೇ ಬದುಕಾಗಿ ಚಿಮ್ಮಿದ ಆ ಸುಖಕ್ಕೆ ಮಾನವ ಪ್ರಪಂಚದ ಯಾವ ಐಶ್ವರ್ಯವೂ ಎಣೆಯಲ್ಲ. ಸಮಾಜದ ಕಟ್ಟಳೆಗೋ, ಸಾಂಪ್ರದಾಯವಂತಿಕೆಯ ವಿಧಿಗೋ, ಕುಲ ಗೌರವದ ಘನವಾದ ಉದ್ದೇಶಕ್ಕೋ ಕೂಡಿದ ಗಂಡ–ಹೆಂಡತಿಯರ ಸಂಸಾರವು ಸಲಿಗೆ ದಾಕ್ಷಿಣ್ಯ ಪರಸ್ಪರ ಗೌರವ ಮತ್ತು ಲೌಕಿಕ ಪ್ರತಿಷ್ಠೆಯ ಗುಣಗಳಿಂದ ಎಷ್ಟೇ ತುಂಬಿ ತೃಪ್ತವಿದ್ದಂತೆ ಕಂಡರೂ ಆ ಗಂಡಹೆಂಡಿರಲ್ಲಿ ಆಳವಾದ ಮನೋ–ವ್ಯಥೆಯು ಗೂಢವಾದ ವಿರಸವು ಹುದುಗಿಕೊಂಡೇ ಇರುತ್ತದೆ. ಜೀವಮಾನವೆಲ್ಲ ಅದು ಹುದುಗಿಯೇ ಉಳಿದು ಆ ಗಂಡ–ಹೆಂಡತಿ ಸಮಾಜದಲ್ಲಿ ಯಶಸ್ವಿಯಾದ ದಂಪತಿಯಾಗಿ ಲಕ್ಷ್ಮೀ ನಾರಾಯಣರ ಜೋಡಿಯೆಂದು: ಹೊಸ ವಧೂ–ವರರಿಗೆ

ಮರ್ಯಾದೆಯ ಮಾದರಿಯಾಗಿ ಮೆರೆದು ಬದುಕಲೂ ಬಹುದು. ಆದರೆ ಆಕಸ್ಮಾತ್ ಗಂಡನಿಗಾಗಲಿ ಹೆಂಡತಿಗಾಗಲೀ ಅವರ ಹೃದಯ ಸ್ವರಕ್ಕೆ ಸಂವಾದಿಯಾದ ಪ್ರತಿ ಸ್ವರವು ದೊರೆತರೆ ಮತ್ತು ಅವರ ಹೃದಯವು ಅದಾಗಲೇ ವ್ಯವಹಾರಿಕ ಒರಟಿನ ಒತ್ತಾಯದಡಿಗೆ ಕೊರಡಾಗಿ ಹೋಗಿರದಿದ್ದರೆ ಅಥವಾ ಹೃದಯದ ಭಾವ ಹಸಿ ರಾಗಿದ್ದರೂ ಪರಿಸ್ಥಿತಿಯ ಪೆಟ್ಟಿಗೆ ಅಳುಕು ಅಂಜಿಕೆಗಳು ಅದನ್ನು ಹುಸಿಯಾಗಿ ಮಾಡಿರದಿದ್ದರೆ, ಪ್ರಣಯಾನುರಾಗದ ರಾಗ ಮಾಲಿಕೆಯು ಪುಟಿದು ಹಬ್ಬಿ ಅವರ ಅಂತರಂಗವು ಸಂಗೀತಮಯವಾಗಿ ಬಿಡುತ್ತದೆ! ಮುಕ್ಕಾಲು ಪಾಲು ವಿವಾಹಿತರ ದಾಂಪತ್ಯ ಜೀವನದ ಸ್ಥಿರತೆ ಯಾತರಲ್ಲಿದೆ? ಅವರ ಅನ್ಯೋನ್ಯ ಪ್ರೇಮದ ನಿರ್ಭರ ಬಂಧದಲ್ಲಿಯೇ? ಅಂಥ ಪ್ರೇಮದ ನಿರ್ಭರತೆಯು ಅವರಿಗೆ ಗೊತ್ತೇ ಇರುವದಿಲ್ಲ, ಪಾಪ! ಸಮಾಜದ ಭಯ, ಪ್ರತಿಷ್ಠೆಯ ಒತ್ತಾಯ, ಪರಸ್ಪರ ಅತಿಪರಿಚಯದ ರೂಢಿಯಿಂದ ಕೂಡಿನಿಂತ ಸಲಿಗೆ ಮತ್ತು ಸಂಸಾರಿಕ ಅನುಕೂಲ, ಎಲ್ಲಕ್ಕೂ ಮಿಗಿಲಾಗಿ ಮಕ್ಕಳ ಮೋಹಪಾಶ ಈ ನಾಲ್ಕು ಕಾಲುಗಳ ಮೇಲೆ ದಾಂಪತ್ಯ ಧರ್ಮವು ನಿಂತಿರುವದೇ ಹೆಚ್ಚು! ಮನುಷ್ಯನು ಪರಿಸ್ಥಿತಿ ಯಿಂದ ಖಲನಾಗುವಂತೆ ಪರಿಸ್ಥಿತಿಯಿಂದ ಸಾಧುವೂ ಆಗುತ್ತಾನೆ! ಧೈರ್ಯ, ಅವಕಾಶ, ಕಲ್ಪನೆ, ಒಂದೆಡೆಗೆ ಕೂಡಿವಲ್ಲಿ ದಿನ ನಿತ್ಯದ ನೋಟಕ್ಕೂ ಹೊರತಾದ ಹೊಸತಾದ ಒಂದು ಮಾಟವು ಕುಡಿನೋಟದ ಕಿಡಿಯನ್ನು ಒಗೆದರೆ ಸರಿ. ಹಲವು ವರ್ಷಗಳ ಬೂದಿಯ ಥರದಡಿಗೆ ಹೊಗೆಯೂ ಆಡದೆ ಹುದುಗಿನಿಂತ ಕಿಚ್ಚು ಭುಗಿಲೆದ್ದು ಅವರನ್ನೂ ಹೆರವರನ್ನೂ ಕೂಡಿಯೇ ದಿಗಿಲುಗೊಳಿಸಬಹುದು.

ಏಕೆಂದರೆ ಕೆಲವೊಂದು ಪ್ರಕೃತಿಯ ಜನಕ್ಕೆ ಕೆಲವೊಂದು ಪ್ರಕೃತಿಯ ಜನವೇ ಸರಿ ಹೊಂದಿಕೆ ಆಗುತ್ತದೆ. ಸಮಾನ ಶೀಲ ಮತ್ತು ವ್ಯಸನವಿದ್ದಲ್ಲಿಯೇ ಸಖ್ಯ ವಿರಬೇಕೆಂದಿಲ್ಲ. ಶೀಲದಲ್ಲಿ ಬಹಳೇ ವ್ಯತ್ಯಾಸವಿದ್ದು ವ್ಯಸನವು ಯಾವದೂ ಸಮಾನ ವಿಲ್ಲದೇ ಇದ್ದ ಒಬ್ಬರು ಅತಿನಿಕಟವಾಗಿ ವಿಕಟವಾಗಿ ಕಾಣುವಷ್ಟು ನಿಕಟವಾಗಿಕೂಡಿ ಒಡನಾಡುವದನ್ನು ನಾವು ನೋಡುತ್ತೇವೆ. ರೂಪ, ಗುಣ, ಜ್ಞಾನ, ಇವೆಲ್ಲವು ಗಳಿಗೆ ಆಕರ್ಷಣೆ ಇಲ್ಲವೇವಲ್ಲ. ಆದರೆ ಅವೆಲ್ಲಕ್ಕೂ ಆಚೆಗೆಆಳವಾಗಿ ಈ ಪ್ರಕೃತಿಯ ಚುಂಬಕ ಶಕ್ತಿ ಹೃದಯ-ಹೃದಯಗಳನ್ನು ಕೂಡಿಸುತ್ತದೆ. ಇದಕ್ಕೆ ನಮ್ಮ ಅನುಭವವೇ ಸಾಕ್ಷಿ. ಹಲವುಸಲ ಕೆಲವೊಂದು ಜನ ನಮ್ಮ ಹತ್ತಿರ ಇದ್ದರೇನೇ ನಮಗೆ ನೆಮ್ಮದಿ ಎನಿಸುತ್ತದೆ. ಇದು ಏಕೆಂದು ಹೇಳಲು ಬರುವದಿಲ್ಲ. ನಮಗೂ ಸೋಜಿಗವೆನಿಸುತ್ತದೆ. ಇದಕ್ಕೆ ವಿವರಣೆ ನಮ್ಮ ಮತ್ತು ಆ ಜನರ ಹೃದಯ ಸಂವಾದವೆಂದೇ ಅನ್ನಬೇಕು. ಇದೇ ಪ್ರಕೃತಿಯ ಚುಂಬಕಶಕ್ತಿ. ಈ ಮೂಲಕ ಪುರುಷ-ಪುರುಷರಲ್ಲಿಯೇ ಸ್ಥಿರವಾದ ಆಕರ್ಷಣೆ ಕೂಡಿಬರುವದೆಂದ ಮೇಲೆ, ಸ್ತ್ರೀಪುರುಷರಲ್ಲಿ ಅದು ಇನ್ನಿಷ್ಟು ಬಲವಾಗಿ ಕೆಲಸಮಾಡದೇ ಹೇಗೆ

ಉಳಿದೀತು. ಪತಿ-ಪತ್ನಿ ಇಬ್ಬರಲ್ಲಿಯೂ ಇಂಥ ಸ್ವಾಭಾವಿಕ ಆಕರ್ಷಣೆ ಇದ್ದರೆ ಉತ್ತಮವೇ. ಅವರು ಬರೇ ತಮ್ಮ ಮಕ್ಕಳ ತಂದೆ-ತಾಯಿ ಆಗಿರದೇ, ತಮ್ಮ ಕುಟುಂಬದ ಪಾಲುಗಾರರಾಗಿರದೆ, ಅನ್ಯೋನ್ಯ ಗೆಳೆಯ-ಗೆಳತಿಯರೂ ಸಲ್ಲ-ನಲ್ಲೆಯರೂ ಆಗಿ ಪ್ರೀತಿಯಿಂದ ಸಂಸಾರವನ್ನು ಸುಂದರವಾಗಿಮಾಡಿಕೊಳ್ಳುವರು. ಆದರೆ ಹಲವು ಉದಾಹರಣೆಗಳಲ್ಲಿ ಹೀಗೆ ನಡೆಯುವದಿಲ್ಲ. ಗಂಡ-ಹೆಂಡಿರು ಸಂಸಾರ ರಥದ ಚಕ್ರಗಳಾಗಿ ನಡೆಯುತ್ತಾರೆ-ಅಂದರೆ ಸಮಾಂತರವಾಗಿ ಪರಸ್ಪರ ಸಂಪರ್ಕವಿಲ್ಲದೇ ತಮ್ಮ ತಮ್ಮ ಒಳಬಾಳಿನ ಬಟ್ಟೆಯಲ್ಲಿಯೇ ಉರುಳುತ್ತಿರುತ್ತಾರೆ. ಹತ್ತಿರವಿದ್ದರೂ ದೂರವಿದ್ದಂತೆ ಹೃದಯಗಳ ಹೊಂದಿಕೆ ಇಲ್ಲದೇ ಕೇವಲ ಕೌಟುಂಬಿಕ ಕರ್ತವ್ಯಕ್ಕೆ ಕಟ್ಟು ಬಿದ್ದಂತೆ ಗೃಹಸ್ಥ ಧರ್ಮದಲ್ಲಿ ಸಹಚಾರಿಗಳಾಗಿ ಕೊನೆಯವರೆಗೂ ಸಾಗುತ್ತಾರೆ. ಇಂಥಲ್ಲಿ ದುರ್ದೈವದಿಂದ ಇನ್ನೊಂದು ಸಂವಾದಿಯಾದ ಹೃದಯವು ಅನಿವಾರ್ಯ ಆಕರ್ಷಣದ ಶಕ್ತಿಯುಳ್ಳ ಹೃದಯವು ಈ ಗೃಹಸ್ಥ ಗ್ರಹಗಳ ಕಕ್ಷೆಯಲ್ಲಿ ನುಗ್ಗಿಬಂದರೆ ಇಲ್ಲವೇ ಹತ್ತಿರದಿಂದ ಸುಳಿದರೆ ತೀರಿತು. ಉತ್ಪಾತವೇ ಒದಗುವಂತಾಗುತ್ತದೆ. ಗಂಡನು ಆ ಇನ್ನೊಬ್ಬಳನ್ನೋ ಹೆಂಡತಿಯು ಆ ಇನ್ನೊಬ್ಬನನ್ನೋ ಮೋಹಿಸಿ ಬಯಸಿ ರಮಿಸುವಂತಾಗುತ್ತದೆ. ಹೀಗಾದರೂ ತಮ್ಮ ಒಪ್ಪಿಕೊಂಡ ದಾಂಪತ್ಯದಲ್ಲಿ ದೊಂಬೆಯಾಳದಂತೆ ದಕ್ಷತೆಯಿಂದ ನಡೆಯುವ ಹಿಡಿತವನ್ನು ಕಾಯ್ದುಕೊಳ್ಳುವದು ಆ ಗಂಡ ಹೆಂಡತಿಯರ ವ್ಯವಹಾರ ಚಾತುರ್ಯವನ್ನೂ ಕೌಟುಂಬಿಕ ನೀತಿಯನ್ನೂ ಅವಲಂಬಿಸಿರುತ್ತದೆ. ಅಂಥ ನೀತಿವಂತ ಚತುರ ದಂಪತಿಗಳು ತಮ್ಮ ಈ ಆಂತರಿಕ ಪ್ರೇಮಜೀವನವನ್ನು ಸಂಯಮದಿಂದ ಸಾಗಿಸಿ ಮೂಲದ ಸಂಸಾರದ ನಿಯಮಕ್ಕೆ ಭಂಗತರದಂತೆ ನೋಡಿಕೊಳ್ಳುವದಿಲ್ಲ. ಈ ಸಂಯಮವಿಲ್ಲದವರು ಸಮಾಜದಲ್ಲಿ ಅಂದಗೇಡನ್ನು ಹೊಂದುತ್ತಾರೆ. ಗುಪ್ತಸಂಬಂಧದ ಪರಿಸ್ಫೋಟವು, ಘಟಸ್ಫೋಟದಲ್ಲಿ ಕೊನೆಗೊಂಡು ಕುಟುಂಬವು ಕಂಗೆಟ್ಟು ಹೋಗುತ್ತದೆ.

## ಇನ್ನೂ ಒಂದು ಕಾರಣ

ದಾಂಪತ್ಯಕ್ಕೆ ಹೊರತಾಗಿ ಇಂಥ ಪ್ರೇಮ ಸಂಬಂಧಗಳಿಗೆ ಇನ್ನೂ ಒಂದು ಕಾರಣವನ್ನು ಕಲ್ಪಿಸಬಹುದು. ಪ್ರತಿ ವ್ಯಕ್ತಿಯಲ್ಲಿಯೂ ಕೆಲವು ಪ್ರಬಲವಾದ ಸಹಜ-ಅಂದರೆ ಹುಟ್ಟುಗುಣವಾಗಿ ಬಂದ-ಪ್ರವೃತ್ತಿಗಳು ಇರುತ್ತವೆಂಬುದನ್ನು ನೀವು ಬಲ್ಲಿರಿ. ಇವುಗಳಲ್ಲಿ ಎರಡನ್ನು ನೆನಪಿಗೆ ತಂದು ಕೊಳ್ಳಿರಿ. ಆ ಎರಡೆಂದರೆ ಪ್ರಭುತ್ವದ ಮತ್ತು ಸಮರ್ಪಣೆಯ ಪ್ರವೃತ್ತಿಗಳು. ತಾನು ಇನ್ನೊಬ್ಬನನ್ನು ಅಂಕೆಯಲ್ಲಿಟ್ಟು ಆಳಬೇಕು ಎಂಬುದೊಂದು ಬಲಿಷ್ಠವಾದ ಪ್ರವೃತ್ತಿ; ಜತೆಗೆ ತಾನು ಇನ್ನೊಬ್ಬನಿಗೆ ತನು-ಮನವನ್ನು ಒಪ್ಪಿಸಿ ಅಧೀನನಾಗಿ ಬಾಳಬೇಕೆಂಬುದು

ಇನ್ನೊಂದು ಪ್ರವೃತ್ತಿ. ಸರ್ವಸಾಧಾರಣವಾಗಿ ಗಂಡಿನಲ್ಲಿ ಪ್ರಭುತ್ವದ ಪ್ರವೃತ್ತಿಯೂ ಹೆಣ್ಣಿನಲ್ಲಿ ಅಷ್ಟು ಸಮರ್ಪಣೆ ಪ್ರವೃತ್ತಿಯೂ ಬಲವಾಗಿರುವದುಂಟು. ಆದ್ದರಿಂದ ಮುಕ್ಕಾಲು ಪಾಲು ದಂಪತಿಗಳಲ್ಲಿ ಗಂಡು ಹೆಣ್ಣನ್ನು ಆಳಿ ಹೆಣ್ಣು ಈಲಾಗಿ ಬಾಳಿ ಬದುಕು ನೆಮ್ಮದಿಯಾಗಿ ಸಾಗುತ್ತಿದೆ. ಆದರೆ ಒಮ್ಮೊಮ್ಮೆ ಗಂಡಿನಲ್ಲಿ ಆಗಲಿ ಹೆಣ್ಣಿನಲ್ಲಿ ಆಗಲಿ ಎರಡೂ ಪ್ರವೃತ್ತಿಗಳು ತೀವ್ರವಾಗಿ ನಿಲ್ಲುವದುಂಟು. ಒಂದೆಡೆಗೆ ತಾನು ಇನ್ನೊಂದು ಹೃದಯವನ್ನು ಆಳಿ ಅದರ ಬಾಳಿಗೆ ಒಡೆಯನಾಗಬೇಕೆಂಬ ಹಟದ ಹವ್ಯಾಸ ನಡೆಯುವಾಗ ಇನ್ನೊಂದೆಡೆಗೆ ತನ್ನ ಹೃದಯವನ್ನು ಇನ್ನೊಬ್ಬನ ಅಥವಾ ಇನ್ನೊಬ್ಬಳ ಒಲುಮೆಯ ಅಂಕೆಗೆ ಒಪ್ಪಿಸಿ ಭಾವಪರವಶವಾಗಿ ಪ್ರೇಮದ ಪಾಶಕ್ಕೆ ಸೆರೆಯಾಳಾಗಿ ಬದುಕಬೇಕೆಂಬ ಹಂಬಲವೂ ಹವಣಿಕೆ ಹಾಕುತ್ತಿರುತ್ತದೆ. ದಾಂಪತ್ಯಕ್ಕೆ ದ್ರೋಹ ಬಗೆಯುವ ಪರಪುರುಷ ಪರದಾರಾ ವ್ಯವಹಾರದ ಮೂಲ ಇವೆರಡು ಹವ್ಯಾಸ ಹಂಬಲಗಳ ಪೇಚಿನಲ್ಲಿದೆ.

ಗಂಡನನ್ನು ಅಭಿಮಾನದಿಂದ ತನ್ನವನೆಂಬ ಒಡೆತನದ ಅಧಿಕಾರದಿಂದ ನೋಡಿ ಕೊಳ್ಳುವ ಹೆಂಡತಿಯು ತನಗೂ ಮಿಗಿಲಾದ ಪ್ರಭುತ್ವದ ಮತ್ತು ಪ್ರಭಾವದ ಇನ್ನೊಬ್ಬ ಗಂಡಸಿಗೆ ಗುಲಾಮಳಾಗುವದು ಶಕ್ಯವಿದೆ. ಹಾಗೆಯೇ ಬಿಂಕದ ಬಿಗು ಮಾನದ ಗಂಭೀರ ವೃತ್ತಿಯ ಮಾನಿನಿಯಾದ ಹೆಂಡತಿಯೊಡನೆ ಗೃಹಸ್ಥ ಧರ್ಮಕ್ಕಾಗಿ 'ತಾಟಸ್ಥ್ಯ ಒಪ್ಪಂದ'ವನ್ನು ಮಾಡಿಕೊಂಡು ಸುಖದ ಕೆಲವು ಪಾಲು ಕಳಕೊಂಡರೂ ಸ್ವಾಸ್ಥ್ಯದ ಬಹಳ ಪಾಲು ಪಡೆದು ಸಮಾಧಾನದಿಂದ ಬದುಕುವ ಗಂಡನು, 'ನಾಯಿಯಂತೆ' ವಿಧೇಯಳಾಗಿ, ಮಣಿಯುವಷ್ಟುಮಣಿದು ಮಿದುವಾಗಿ ಮುದ್ದಾಗಿ ಬೇಡಿದ ಭೋಗವನ್ನು ಕೊಟ್ಟು ಕಾಡಿದಷ್ಟು ಕೃತಕೃತ್ಯಳೇ ಅನಿಸಿಕೊಳ್ಳುವ ಒಬ್ಬ ಭಾಮಿನಿಯನ್ನು ಕಾಮಿಸಿ; ಇನ್ನೊಂದು ಸಂಸಾರವನ್ನು ನಡೆಯಿಸುವದನ್ನೂ ನಾವು ಅನೇಕ ಕಡೆಗೆ ನೋಡುತ್ತೇವೆ. ಇನ್ನು ನಮ್ಮಲ್ಲಿ ಹೆಂಡತಿಗಿಂತ ಗಂಡನ ಅನ್ಯಾಸಕ್ತಿಯೇ ಹೆಚ್ಚು ಕಂಡು ಬರುತ್ತದೆ. ಇದಕ್ಕೆ ಕಾರಣ ನಮ್ಮ ಸಂಸ್ಕೃತಿ-ಜೀವನದ ರೀತಿ.

ಪ್ರಾಚೀನದಿಂದಲೂ ನಮ್ಮ ಹೆಣ್ಣು ಮಕ್ಕಳಿಗೆ ಸಮರ್ಪಣೆಯ ಸೌಮ್ಯವೃತ್ತಿಯನ್ನು ತನ್ನನ್ನು ಶೂನ್ಯವಾಗಿ ಮಾಡಿಕೊಂಡು, ಗಂಡನೆಂಬ ಅಂಕೆಗೆ ಅಂಕಿತಳಾಗಿ ಕುಲದ ಸಂಖ್ಯೆಯನ್ನು ಹೆಚ್ಚಿಸುವ 'ಅಂಕಗಣಿತ'ವನ್ನೇ ನಮ್ಮ ಜನ ಕಲಿಸುತ್ತ ಬಂದಿದೆ. ಇಲ್ಲಿ ದಾಂಪತ್ಯವು ವಿರಸವಾಗಿದ್ದರೂ ಬೇರೊಂದು ಸರಸ ಕೂಡಿಬರದೆ, ನೀರಸವಾದ ಸಂಸಾರವೇ ಪ್ರತಿಷ್ಠೆಯಿಂದ ಭದ್ರತೆಯಿಂದ ಸಾಗುತ್ತದೆ. ಈ ಪರಂಪರೆಗೆ ಅನುಕೂಲವಾಗುವಂತೆ ವಾತ್ಸಲ್ಯಪ್ರವೃತ್ತಿಯು ವಿಶೇಷವಾಗಿ ಬಲಿತು ಬೆಳೆಯುತ್ತದೆ.

ವಾತ್ಸಲ್ಯ-ಅಂದರೆ ತಾಯ್ತನ ತಂದೆತನದ ಪ್ರವೃತ್ತಿಯಲ್ಲಿ ಒಂದು ಸೋಜಿಗವಿದೆ. ಅವರಿಂದ ಮೇಲೆಹೇಳಿದ ಎರಡೂ ಪ್ರವೃತ್ತಿಗಳು ಪ್ರಭುತ್ವ ಹಾಗೂ ಸಮರ್ಪಣೆಯ ಪ್ರವೃತ್ತಿಗಳು ಒಮ್ಮೆಲೇ ತೃಪ್ತವಾಗುತ್ತವೆ. ಕೂಸಿನ ಅಸಹಾಯತೆ ಅಶಕ್ತತೆಗಳು ತಾಯ್ತಂದೆಗಳನ್ನು ಒಮ್ಮೆಲೇ ಆಳುವಂತೆಯೂ ಆಳಾಗುವಂತೆಯೂ ಮಾಡುತ್ತವೆ. ಮಕ್ಕಳಿಗಾಗಿ ಹಗಲಿರುಳು ದುಡಿಯುವದರಲ್ಲಿ ಸಮರ್ಪಣೆಯ ಪ್ರವೃತ್ತಿಯು ತೃಪ್ತಿಯಾಗುವಂತೆ, ತಾವು ಮಕ್ಕಳೊಂದಿಗರೆಂಬ ಭಾವನೆಯು ಪ್ರಭುತ್ವದ ವೃತ್ತಿಯನ್ನು ತಂದುಕೊಡುತ್ತದೆ. ಆದ್ದರಿಂದ ಕುಟುಂಬ ಸಂಸ್ಥೆಯನ್ನು ವಿಶೇಷವಾಗಿ ಪೋಷಿಸಿಕೊಂಡು ಬಂದ ಕೃಷಿಪ್ರಧಾನವಾದ ಸಂಸ್ಕೃತಿಯಲ್ಲಿ ಗಂಡಹೆಂಡತಿ ತಮ್ಮ ಇಂಗದೇ ಉಳಿದ ಒಂದು ಪ್ರವೃತ್ತಿಯನ್ನು ಮಕ್ಕಳ ಲಾಲನೆಪಾಲನೆಯಲ್ಲಿ ಪೂರೈಸಿ ಕೊಳ್ಳುವರು. ಇವಕ್ಕೆ ಇನ್ನೂ ಒಂದು ಸಂಗತಿ ನೆರವಾಗುವದು. ಅದು ಹೆಣ್ಣಿನ ಆರ್ಥಿಕ ಪರಾವಲಂಬನ, ಪುರುಷಾವಲಂಬನ. ಇದು ಇಲ್ಲದಿದ್ದಲ್ಲಿ ಆರ್ಥಿಕವಾಗಿ ಹೆಣ್ಣು ಗಂಡು ಸ್ವತಂತ್ರವಿದ್ದಲ್ಲಿ, ಅಂದರೆ ಕೆಳವರ್ಗದ ದುಡಿಮೆಗಾರರಲ್ಲಿ ಅಥವಾ ನವಶಿಕ್ಷಿತ ಮೇಲ್ವರ್ಗದವರಲ್ಲಿ, ಸ್ತ್ರೀ ಪುರುಷರ ಅನ್ಯಾಸಕ್ತಿಯು ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತದೆ. ತನ್ನ ಬಾಳಿಗೆ ತಾನೇ ಹೊಣೆಯಾದವರಲ್ಲಿ ವ್ಯಕ್ತಿತ್ವ ಬಲಿಯುತ್ತದೆ. ಬಲಿಯುವ ವ್ಯಕ್ತಿತ್ವದೊಂದಿಗೆ ಪ್ರಭುತ್ವ ಮತ್ತು ಸಮರ್ಪಣೆಯ ಪ್ರವೃತ್ತಿಗಳ ಘರ್ಷಣೆಯೂ ಪರಕೀಯರ ಆಕರ್ಷಣೆಯೂ ಬೆಳೆಯುತ್ತದೆ. ಇಬ್ಬರ ನಡುವೆ ಇನ್ನೊಬ್ಬನು ಅಥವಾ ಇನ್ನೊಬ್ಬಳು ಬಂದು ಗೊಂದಲಕ್ಕೆ ಕಾರಣವಾಗುತ್ತದೆ.

ಪ್ರಭುತ್ವ ಮತ್ತು ಸಮರ್ಪಣೆ ಇವೆರಡೂ ಪ್ರವೃತ್ತಿಗಳು ಒಂದೇ ವ್ಯಕ್ತಿಯಿಂದ ತೃಪ್ತವಾಗುವಂತಿದ್ದರೆ, ಯಾವ ವ್ಯಕ್ತಿಯ ಜೀವನವನ್ನು ತಾನು ಆಳುವೆನೋ ಅದೇ ವ್ಯಕ್ತಿಗೆ ತನ್ನ ಜೀವನವನ್ನು ಸಂಪೂರ್ಣ ಒಪ್ಪಿಸಿ ಆ ಉಭಯ ಪ್ರವೃತ್ತಿಗಳ ತೃಪ್ತಿಯನ್ನು ಪಡೆಯುವಂತಿದ್ದರೆ ಅಂಥ ವ್ಯಕ್ತಿಗಳ ದಾಂಪತ್ಯವು ಪೂರ್ಣತೆಯನ್ನು, ಧನ್ಯತೆಯನ್ನು ಹೊಂದುತ್ತದೆ. ಇದು ಅಶಕ್ಯವಾದಲ್ಲಿ ಇಂಬು ಇದ್ದರೆ, ನಂಬಿಗೆ ಇಲ್ಲದಿದ್ದರೆ ಭೀತಿ ಕಡಿಮೆ ಇದ್ದು ಧೂರ್ತತೆ ಹೆಚ್ಚಿದ್ದರೆ, ಹೊಣೆಗಾರಿಕೆ ತಪ್ಪಿಸಿ ಕೊಳ್ಳುವ ಯುಕ್ತಿ ಮೋಸಗಾರಿಕೆಯು ಶಕ್ತಿಯೊಡನೆ ಕೂಡಿದ್ದರೆ ವಿವಾಹಿತ ಜೀವನದ ಕಡೆಯು ವ್ಯಭಿಚಾರದ ವ್ಯಥೆಯಾಗಿ ಕಂಗೆಡಲು ವಿಲಂಬವಾದೀತೇ ?

### ತತ್ವದ ತಾತ್ಪರ್ಯ

ವ್ಯಭಿಚಾರದ ಮೀಮಾಂಸೆಯನ್ನು ಸ್ವಲ್ಪದರಲ್ಲಿ ಮಾಡಲಾಯಿತು. ಇದು ಅವರ

ಸಮರ್ಥನೆ ಅಲ್ಲ. ದಾಂಪತ್ಯ ಧರ್ಮಕ್ಕೆ ವ್ಯಭಿಚಾರವು ವಿಷವು, ಘೋರವಿಪತ್ತು.
ಅವರ ನಿರಾಕರಣೆ ನಿವಾರಣೆ ಆಗಲೇಬೇಕು. ಆದರೆ ನಾವು ಇಲ್ಲಿ ತಿಳಿಯ
ಬೇಕಾದದ್ದು ಇಷ್ಟೇ: ಈ ವಿಷಯಕ್ಕೆ ಪೋಷಕವಾದ, ಈ ವಿಪತ್ತಿಗೆ ಪ್ರತಿಕೂಲ
ವಲ್ಲದ ಪರಿಸ್ಥಿತಿಯೂ ಮನಸ್ಥಿತಿಯೂ ಸ್ತ್ರೀ-ಪುರುಷ ಜೀವನದಲ್ಲಿಯೇ ಇರುತ್ತದೆ.
ಇದನ್ನು ತಿಳಿದು ನೋಡಿದರೆ ಉಪಾಯ-ಯೋಜನೆಗೆ ಅನುಕೂಲವಾಗುವದು.
ವಿವಾಹದ ನೀತಿಯ ನೆಲೆ ಬೆಲೆಗಳ ನಿರೂಪಣೆ ನಿರ್ಣಯಗಳು ಈ ಚಿಕ್ಕ ಬರಹಕ್ಕೆ
ಒಳಪಟ್ಟ ವಿಷಯವಲ್ಲ. ಆದರೆ ಇಲ್ಲಿ ಎರಡು ಮಾತುಗಳನ್ನು ಸೂತ್ರರೂಪದಲ್ಲಿ
ಹೇಳಬಹುದು. ನೀತಿ-ನಿಯಮಗಳು ಒಂದು ಸಾಧನ. ಜೀವನದ ಒಳಿತೇ ಅವುಗಳ
ಸಾಧ್ಯ. ಇನ್ನು ಒಳಿತಿನ ಜೀವನವು ಯಾವದು ? ಯಾವ ಜೀವನಕ್ಕೆ ಪ್ರೀತಿಯು
ಪ್ರೇರಣೆಯಿದೆಯೋ, ಜ್ಞಾನದ ಮಾರ್ಗದರ್ಶನವಿದೆಯೋ ಅದೇ ಒಳಿತಿನ ಜೀವನ.
ಈ ಜೀವನಕ್ಕೆ ನೆರವಾಗುವ ನೀತಿ ಹೇಗಿರಬೇಕು ? ನಮ್ಮ ಸಹಜ ಪ್ರವೃತ್ತಿಗಳನ್ನು
ಶಕ್ತಿಕ್ಕಿ, ಬದುಕಿಗೆ ಒತ್ತಾಯದ ಪಡಿಯಚ್ಚು ಹಾಕುವದು ನೀತಿಯೇ ಅಲ್ಲ.
ಸಹಜ ಪ್ರವೃತ್ತಿಗಳ ತೃಪ್ತಿಯಿಂದ ದೊರೆಯುವ ಸುಖವನ್ನು ಅಸಹ್ಯವಾಗಿ
ಮಾಡುವಂತೆ ನೀತಿನಿಯಮಗಳು ಇರಕೂಡದು. ಇದರ ಅರ್ಥ ಸ್ವೈರಾಚಾರವಲ್ಲ.
ವ್ಯಕ್ತಿ-ವ್ಯಕ್ತಿಯ ಇಂಥ ಸುಖವೂ ಆದಷ್ಟು ಪೂರೈಸಬೇಕಾದರೆ ಒಬ್ಬರ ಸುಖ
ಇನ್ನೊಬ್ಬರ ಸುಖಕ್ಕೆ ಕಟ್ಟುಹಾಕುತ್ತದೆ. ಇದಕ್ಕೂ ಮೀರಿದ ಕಟ್ಟು ಹಿತದ
ಕಟ್ಟಳೆಯಲ್ಲ. ಬಾಳಿನ ಮುಗ್ಗಟ್ಟು. ಈ ವಿವೇಕವು ಬರಲು ಸಹಜಪ್ರವೃತ್ತಿಗಳ
ವಿಚಾರಣೆಯನ್ನು ಮಾಡಬೇಕು. ಕಾರ್ಯಗಳನ್ನು ಅರಿತುಕೊಂಡ ಹೊರತು
ಪರಿಣಾಮಗಳನ್ನು ಪಲ್ಲಟಿಸಲು ಬರುವದಿಲ್ಲ.

ಆದ್ದರಿಂದ ವ್ಯಭಿಚಾರದ ಕಾರಣಗಳನ್ನು ತಿಳಿಯಲು ಪ್ರಯತ್ನ ಮಾಡಿದೆವು.
ದಾಂಪತ್ಯವಿರಲಿ ವ್ಯಭಿಚಾರವಿರಲಿ, ಪ್ರೀತಿಯು ಆಧಾರದಿಂದಲೇ ಅವುಗಳ ಗೌರವ.
ಪ್ರೀತಿ ಇಲ್ಲದ ದಾಂಪತ್ಯ ಒಂದು ಧರ್ಮಾಜ್ಞೆ ಪಡೆದ ವ್ಯಭಿಚಾರವೇ ಸರಿ.
ಹಾಗೆಯೇ ಪ್ರೀತಿಯಿಂದ ದೃಢವೂ ಪೂರ್ಣವೂ ಆದ ವ್ಯಭಿಚಾರ ಒಂದು ಧನ್ಯವಾದ
ದಾಂಪತ್ಯವೇ ಸರಿ. ಅಂತೆಯೇ ಪ್ರೀತಿತತ್ವದ ಅಭ್ಯಾಸವನ್ನು ಇದುವರೆಗೆ
ತತ್ಪರತೆಯಿಂದ ಮಾಡಿದೆವು. ಇನ್ನು ಇದರ ತಾತ್ಪರ್ಯವೇನು ?

ಪ್ಲೇಟೋ ಪ್ರೀತಿಯ ತತ್ವಜ್ಞಾನಿಯು ಉದ್ಗರಿಸಿದ್ದಾನೆ:-'ಪ್ರೀತಿಯ ಸ್ಪರ್ಶವಿಲ್ಲ
ದವನು ಕತ್ತಲೆಯಲ್ಲಿ ನಡೆಯುತ್ತಾನೆ !' ಪ್ರೀತಿಯ ಕುರಿತು ಒಂದೆಡೆಗೆ ಅಂಬಿ
ಕಾತನಯರೇ ಹಾಡಿದ್ದಾರೆ. 'ತನ್ನ ಕಿರಣ ತನಗೆ ಹಗಲು ಉಳಿದ ಬೆಳಕು
ಕತ್ತಲು !' ನಮ್ಮ ನಮ್ಮ ಪಾಲಿನ ಹಗಲು ನಮ್ಮ ಹೃದಯಗಳನ್ನು ಬೆಳಗುವ

ನಮ್ಮ ಸುತ್ತುಮುತ್ತಲು ಹಬ್ಬಿದ ನಮಗೆ ಒಲಿದವರ ಕಣ್ಣಿನ ಕಿರಣ ! ಉಳಿದುದೆಲ್ಲ ನಮ್ಮನ್ನೇ ಉಳಿದದ್ದು ! ಎಲ್ಲ ವಸ್ತುಗಳೂ ಸಾಯುವವು. ಪ್ರೀತಿಯೊಂದೇ ಸಾವನ್ನು ತಪ್ಪಿಸಿಕೊಂಡು ನಮ್ಮನ್ನು ಕಾಯುವದು. ಅದು ಹೇಗೆ ? ಬಾಳಿನ ಫಲದಲ್ಲಿ ಪ್ರೀತಿಯ ಪರಿಮಳವು ವಾತ್ಸಲ್ಯದ ರಸವಾಗುತ್ತದೆ. ಸಂತಾನದ ಸೇತುಕಟ್ಟಿ ಪ್ರೀತಿಯು ಮರಣದ ಕಂದಕವನ್ನು ದಾಟುತ್ತದೆ, ಚಿತೆಯ ಉರಿಗೆ ಬಾಡದೇ ಮಾಂಗಲ್ಯದ ನಿತ್ಯ ಪುಷ್ಪವಾಗಿ ಸದಾಕಾಲವೂ ಅರಳಿನಿಲ್ಲುತ್ತದೆ. ಸುಳ್ಳು ಸೋಗಿಗೆ ಸೋತು ಮೋಸದ ಬಣ್ಣಕ್ಕೆ ಮೈಸುಟ್ಟು ಕೊಂಡಾಗ, ಭ್ರಮ ನಿರಸನೆಯ ವೈರಾಗ್ಯದಲ್ಲಿ ನಿರಾಶೆಯ ಕಟುವೃತ್ತಿಯಲ್ಲಿ, ಪ್ರೀತಿಯು ಅದೆಷ್ಟು ಕ್ಷಣಿಕ, ಅದೆಷ್ಟು ಕ್ಷುಲ್ಲಕ ಕಾಣಿಸುತ್ತದೆ ! ಆದರೆ ಮಾನವತೆಯ ದೂರದ ನೋಟದಲ್ಲಿ ಇತಿಹಾಸದ ಡಿ ನೋಟದಲ್ಲಿ ಪ್ರೀತಿಯು ಅದೆಷ್ಟು ನಿತ್ಯ ನೂತನವಾಗಿ ನಿರಂತರ ನವೋನವವಾಗಿ ಕಂಗೊಳಿಸುತ್ತದೆ. ಕೊನೆಗೂ ನಮ್ಮ ಒಂದು ಅಲ್ಪಾಂಶವನ್ನು ನಾಶದಿಂದ ಸಂರಕ್ಷಿಸಿ, ಪ್ರೀತಿಯು ನಮ್ಮದೇ ಜೀವನವನ್ನು ಶಿಶುವಿನ ತಾರುಣ್ಯ ದಲ್ಲಿಯೂ ವೀರ್ಯದಲ್ಲಿಯೂ ಹೊಸತಾಗಿ ಆವಾಹನೆಗೊಳಿಸುತ್ತದೆ. ನಮ್ಮ ಸಂಪತ್ತು, ವಿಪತ್ತಿನ ಬೆಲೆ. ನಮ್ಮ ದಡ್ಡು ದುಡಿಮೆ ದಣಿವಿನ ದಂಡ. ನಮ್ಮ ಜ್ಞಾನ ಗಾಳಿ ಗೋಪುರದ ಸೋಪಾನ. ನಾವು ಮುಟ್ಟುವ ಜಾಣ್ಮೆಯ ಶಿಖರ ನಮ್ಮನ್ನು ಏಕಾಕಿಯಾಗಿ ಚಳಿಯಲ್ಲಿ ಬಿಡುವ ನೆತ್ತರವನ್ನು ತಣ್ಣಗೆಗೊಳಿಸುವ ಒಂದು ಸಣ್ಣ ಎತ್ತರ. ಇವೆಲ್ಲ ಏನಿದ್ದರೇನು ? ಪ್ರೀತಿಯೊಂದೇ ನಮ್ಮ ಹೃದಯವನ್ನು ಮಾತಿಗೆ ಅತೀತವಾದ ಸಮಾಧಾನದಿಂದ ಸಂತೃಪ್ತಿಯಿಂದ ಬಿಮ್ಮನೆ ಬೆಚ್ಚಗೆ ಗೊಳಿಸುತ್ತದೆ–ಅದೂ ಪಡೆಯುವದಕ್ಕಿಂತಲೂ ಕೊಡುವದರಲ್ಲಿ ಹೆಚ್ಚು ! ಮಿಕ್ಕು ದೆಲ್ಲ ಮಿಥ್ಯ; ಪ್ರೀತಿಯೊಂದೇ ಸತ್ಯ ! ಆದನ್ನೊಂದೇ ನಾವು ಅಚ್ಚು ಮೆಚ್ಚಿನಿಂದ ಕಾಯ್ದು ಕೊಳ್ಳೋಣ !

# ೧ ಆದರ್ಶ ಮತ್ತು ಆಚಾರ

## ವ್ಯಕ್ತಿ-ಮನೋವಿಜ್ಞಾನವೆಂದರೇನು ?

ಪ್ರತಿಯೊಂದು ವ್ಯಕ್ತಿಯ ಜೀವನದ ಬುಡದಲ್ಲಿ ಒಂದು ಗೂಢವಾದ ಸೃಜನ ಪರವಾದ, ರಚನಾತ್ಮಕವಾದ ಶಕ್ತಿಯಿರುತ್ತದೆ. ಇದುವೆ ಕತೃತ್ವ ಶಕ್ತಿ. ಇದನ್ನು ಅರಿತುಕೊಳ್ಳಲು ಮಾಡಿದ ಯತ್ನ-ಯೋಚನೆಗಳೊಳಗಿಂದಲೇ ವ್ಯಕ್ತಿ-ಮನೋ ವಿಜ್ಞಾನವು ವಿಕಾಸಗೊಂಡಿತು. ತಾನು ಬೆಳೆಯಬೇಕು, ಬಾಳಬೇಕೆಂಬ ಹಂಬಲ ವಿಲ್ಲದ ಜೀವವುಂಟೇ ? ಇಲ್ಲವೇ ಇಲ್ಲ. ಏಕೆಂದರೆ ಬೆಳೆಯದ್ದು ಜೀವವೇ ಅಲ್ಲ. ಹಲವು ಬಾರಿ ಯತ್ನ ಮಾಡಲಿ, ಹೆಣಗಾಡಲಿ, ಹೋರಾಡಲಿ ಏನೇ ಮಾಡಲಿ ಕೊನೆಗೆ ಗೆಲ್ಲಬೇಕು, ಗಳಿಸಬೇಕು. ಕೃತ ಕಾರ್ಯವಾಗಬೇಕು ಎಂಬ ಕಾಮನೆಯಲ್ಲಿ ಈ ಜೀವನದ ಸಿಸೃಕ್ಷಾ ಶಕ್ತಿಯು ವ್ಯಕ್ತವಾಗುತ್ತದೆ. ಈ ಶಕ್ತಿಯು ಸೋಲು ನೋವುಗಳನ್ನು ಲೆಕ್ಕಿಸುವುದಿಲ್ಲ. ಒಂದು ನಿಟ್ಟಿನಲ್ಲಿ ಒದಗಿದ ಸೋಲುಗಳ ಕುಂದನ್ನು ನೀಗಿಸಿಕೊಳ್ಳಲು ಇನ್ನೊಂದು ನಿಟ್ಟಿನಲ್ಲಿ ಗೆಲುವನ್ನು ಪಡೆಯಲಿಕ್ಕೆ ಹೆಣಗಾಡಲು ಈ ಶಕ್ತಿಯು ಸಿದ್ಧವಾಗಿರುತ್ತದೆ. ಈ ಶಕ್ತಿಯು 'ಗುರಿಗಾಣಿ'ಯಾಗಿರುತ್ತದೆ. ಒಂದು ಉದ್ದೇಶ-ಒಂದು ಆದರ್ಶವನ್ನು ಕುರಿತು ಹೆಣಗಾಡುವುದರಲ್ಲಿ ಪರಿಣಾಮ ಗಾಮಿಯಾಗಿ ಅದು ವ್ಯಕ್ತವಾಗುತ್ತಿರುತ್ತದೆ. ಸಿಸೃಕ್ಷಾ (ರಚನಾತ್ಮಕ) ಶಕ್ತಿಯ ಈ ತರದ ಹೆಣಗಾಟದಲ್ಲಿ-ಉದ್ದೇಶ ಪೂರ್ತಿಗಾಗಿ ಸಾಗುವ ಸಾಧನೆಯಲ್ಲಿ, ಪ್ರತಿಯೊಂದು ಶಾರೀರಿಕ ಇಲ್ಲವೆ ಮಾನಸಿಕ ಕ್ರಿಯಾ-ವ್ಯಾಪಾರವನ್ನೂ ತನಗೆ ಸಹಕರಿಸುವಂತೆ ಮಾಡಿಕೊಳ್ಳಲಾಗುತ್ತದೆ. ಇದರಿಂದ ಒಂದು ಮಾತು ಕಂಡು ಬರುತ್ತದೆ. ಅದೇನೆಂದರೆ, ಶಾರೀರಿಕ ಚಲನವಲನ ಚಟುವಟಿಕೆಗಳನ್ನಾಗಲಿ, ಮಾನಸಿಕ ಅವಸ್ಥೆಗಳನ್ನಾಗಲಿ, ಆ ಆ ವ್ಯಕ್ತಿಯ ಸಮಗ್ರ ವ್ಯಕ್ತಿತ್ವಕ್ಕೆ-ಆತನ ಜೀವನ ವ್ಯಾಪಿಯಾದ ತನ್ನದೇ ಆದ ವಿಶಿಷ್ಟ ಭೂಮಿಕೆಗೆ-ಹೊಂದಿಸಿಕೊಳ್ಳದೇ, ಸ್ವತಂತ್ರವಾಗಿ ಇಲ್ಲವೆ ನಿರಪೇಕ್ಷವಾಗಿ ಅಭ್ಯಾಸಿಸುವದರಲ್ಲಿ ಏನೂ ಹುರುಳಿಲ್ಲ. ಒಂದು ಉದಾಹರಣೆಯನ್ನು ನೋಡೋಣ. ಅಪರಾಧ-ವಿಜ್ಞಾನವಲ್ಲಿ-ಅಂದರೆ ಅಪರಾಧಿಗಳ ಮನಃಸ್ಥಿತಿಯನ್ನೂ ಅವರ ವಿಕೃತ ಕಾರ್ಯ ಪ್ರವೃತ್ತಿಯ ಕಾರಣ ಗಳನ್ನೂ ಅರಿತುಕೊಳ್ಳುವ ವಿಜ್ಞಾನದಲ್ಲಿ-ಅಪರಾಧಿಗಿಂತ, ಆತನು ಮಾಡಿದ ಅಪರಾಧದ ಕುರಿತೇ ವಿಶೇಷ ಲಕ್ಷ್ಯಪೂರೈಸುವದರಲ್ಲಿ ಅರ್ಥವಿಲ್ಲ. ಅಪರಾಧಿಯ ವ್ಯಕ್ತಿತ್ವವೇ ನಮಗೆ ಮುಖ್ಯ. ಅಪರಾಧ ಕೃತ್ಯವನ್ನು ಎಷ್ಟೇ ಪರ್ಯಾಲೋಚನೆ ಮಾಡಿ ನೋಡಿದರೂ, ಆ ಕೃತ್ಯವನ್ನು ಅಪರಾಧಿಯಾದ ವ್ಯಕ್ತಿಯ ಜೀವನದಲ್ಲಿಯ

ಒಂದು ಸನ್ನಿವೇಶ, ಒಂದು ಘಟನೆಯೆಂದು ನೋಡಿದ ವಿನಾ, ಈ ಕೃತ್ಯದ ಹೊಲ್ಲತನವನ್ನು ಅರಿತುಕೊಳ್ಳಲು ಬರುವಂತಿಲ್ಲ. ನಮ್ಮಿಂದ ಜರಗುವ ಒಂದು ಕೃತ್ಯವು ಒಂದು ಸನ್ನಿವೇಶದಲ್ಲಿ ಅಪರಾಧವೆನಿಸಿದರೆ ಇನ್ನೊಂದು ಪ್ರಸಂಗದಲ್ಲಿ ಅದು ಅಪರಾಧವಾಗಲಿಕ್ಕಿಲ್ಲ. ಆದುದರಿಂದ ವೈಯಕ್ತಿಕ ಸಂದರ್ಭವನ್ನು ಅರಿತುಕೊಳ್ಳುವುದೇ ಮಹತ್ವದ ಸಂಗತಿ. ವೈಯಕ್ತಿಕ ಸಂದರ್ಭವೆಂದರೆ, ಪ್ರತಿ ವ್ಯಕ್ತಿಗೂ ಜೀವನದ ಅಂತಸ್ಥವಾದ ಅಂತಿಮವಾದ ಗುರಿಯಿರುತ್ತದೆ, ಆ ನಿಟ್ಟಿನಲ್ಲಿ ನಡೆವ ಆತನ ಎಲ್ಲ ವ್ಯಾಪಾರ ವ್ಯವಹಾರಗಳ ಒಂದು ಗತಿರೇಖೆಯನ್ನೂ ಕಂಡು ಕೊಳ್ಳಬಹುದು. ಇಂತಹ ಹಲವಾರು ಘಟನೆಗಳೆ ಬೇರೆ ಬೇರೆ ಕೃತ್ಯಗಳ ಹಿಂದೆ ಹುದುಗಿರುವ ಹುರುಳನ್ನು (ಅರ್ಥವನ್ನು) ಅರಿತುಕೊಳ್ಳಲು, ಆ ವ್ಯಕ್ತಿ ಜೀವನದ ಗುರಿಯು ಗೊತ್ತಾಗಲು ಅತ್ಯಂತ ಅವಶ್ಯಕ. ಆಗ ವ್ಯಕ್ತಿಯ ವಿವಿಧ ಚಟುವಟಿಕೆ ಗಳನ್ನೆಲ್ಲ ಆತನ ಇಡಿಯಾದ ವ್ಯಕ್ತಿತ್ವದ ಅಂಗ-ಅಂಶಗಳನ್ನಾಗಿ ನಾವು ನೋಡ ಬಹುದು. ಅದೇ ರೀತಿಯಲ್ಲಿ ಇಂಥ ವಿವಿಧ ನಡೆವಳಿಗಳನ್ನು ಅವಲೋಕಿಸಿದರೆ,- ಅವುಗಳನ್ನು ವ್ಯಕ್ತಿತ್ವ ಪೂರಕವಾದ ಅಂಶಗಳೆಂಬ ರೂಪದಲ್ಲಿ ಅಭ್ಯಾಸಿಸಿದರೆ,- ಆಗ ಪೂರ್ಣ ವ್ಯಕ್ತಿತ್ವದ ಕುರಿತು ಮಿಗಿಲಾದ ಮನವರಿಕೆಯನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

## ಜೀವಂತತನದ ಲಕ್ಷಣ.

ಹೀಗೆ ಮನೋವ್ಯಾಪಾರದ ಘಟನೆಗಳನ್ನೆಲ್ಲ ತಿಳಿಯಬೇಕಾದರೆ ಉದ್ದೇಶ ಪೂರ್ಣತೆಯ ದೃಷ್ಟಿಯು ಅವಶ್ಯ. ಶರೀರದ ಮಟ್ಟಿಗೂ ಇದೇ ದೃಷ್ಟಿಯಿಂದ ಕಾರ್ಯ ನಡೆ ಯುವದೆಂಬುದು ಸ್ಪಷ್ಟವಾಗುತ್ತದೆ. ಶರೀರದ ಕೆಲವೊಂದು ವಿವಕ್ಷಿತ ಗುರಿ ಗಾಗಿಯೇ, ಎಲ್ಲ ಇಂದ್ರಿಯಗಳು ಹೆಣಗುತ್ತಿವೆ, ಒಳ ಹೊರಗಿನ ಎಲ್ಲ ಇಂದ್ರಿಯ ಗಳೂ ಸರಿಯಾಗಿ ಬೆಳವಣಿಗೆ ಹೊಂದಿದಾಗಲೆ ಅವಕ್ಕೆ ಸ್ವರೂಪಗಳು ಪ್ರಾಪ್ತ ವಾಗುತ್ತವೆ. ಈ ಬೆಳವಣಿಗೆಯಾಗದೆ ಇದ್ದಾಗ ಹಲವು ಬಾರಿ ನಮ್ಮ ಅವಯವದ ಕುಂದು ಕೊರತೆ ಹಾಗೆ ಉಳಿದು ಬಿಡುವದು. ಒಂದಿಲ್ಲೊಂದು ಅಂಥ ಕೊರತೆ ಯನ್ನು ತುಂಬಿಕೊಳ್ಳಲಿಕ್ಕೆ ಬೇರೊಂದು ಇಂದ್ರಿಯದ ಶಕ್ತಿಯನ್ನು ಬೆಳೆಸಿ ನ್ಯೂನಗೊಂಡ ಅಂಗದ ಕೆಲಸವನ್ನು ಅದರಿಂದ ಸಾಗಿಸಿಕೊಳ್ಳಲು ನಿಸರ್ಗವು ವಿಶೇಷವಾಗಿ ಪ್ರಯತ್ನಿಸುವುದನ್ನು ನಾವು ಕಾಣುತ್ತೇವೆ. ಮುಂದೋಟವು (ಅಖಂಡ ಗತಿಯು) ಜೀವನದ ಧರ್ಮ. ಮುಂದಡಿ ಜೀವಂತತನದ ಕುರುಹು ಮತ್ತು ಈ ಮುನ್ನಡೆಯಲ್ಲಿ ಹೊರಗಿನಿಂದ ಯಾವದೇ ಬಗೆಯ ತಡೆಗಳು ಬಂದರೂ ಅವುಗಳೊಡನೆ ತನ್ನ ರೀತಿಯಲ್ಲಿ ಸಾಧ್ಯವಿದ್ದಷ್ಟು ಹೋರಾಡದೇ ಯಾವ ಜೀವಂತ

ಪ್ರಾಣಿಯೂ ಒಮ್ಮೆಲೆ ತಲೆವಾಗುವದಿಲ್ಲ. (ಹೇಡಿಗಳ ಮಾತು ಬೇರೆ ಎನ್ನಿ. ಏಕೆಂದರೆ ಅವರು ಜೀವಂತ ಪ್ರಾಣಿಗಳೇ ಅಲ್ಲ.)

ಇನ್ನು ಮನೋಜೀವನದ ಕ್ರಮವು ಕೂಡ ಇದೇ ಬಗೆಯಾಗಿ ಶಾರೀರಿಕ ಜೀವನದ ಗತಿಯನ್ನೇ ಹೋಲುತ್ತದೆ. ಪ್ರತಿಯೊಂದು ಮನಸ್ಸಿಗೂ ಒಂದು ಉದ್ದೇಶ ಇಲ್ಲವೇ ಆದರ್ಶವು ಇದ್ದೇ ಇರುತ್ತದೆ. ಇದ್ದ ಸ್ಥಿತಿಯಿಂದ ಆಚೆಗೆ ಮೇಲ್ಮಟ್ಟದಲ್ಲಿರುವುದೇ ಆದರ್ಶ. ತನ್ನ ಇಂದಿನ ಕುಂದು ಕೊರತೆಗಳನ್ನೂ, ತೊಡಕು-ತೊಂದರೆಗಳನ್ನೂ ಮೀರಿ ನಾಳೆ ಒಳ್ಳೆಯ ದಿನಗಳು ಬರುವವೆಂದು ಮೂರ್ತವಾದ ಒಂದು ಗುರಿಯನ್ನು ಮನಸ್ಸು ಸ್ಥಾಪಿಸಿಕೊಳ್ಳುತ್ತದೆ. ಇಂತಹದೊಂದು ಮೂರ್ತವಾದ ಧ್ಯೇಯದ ಮೂಲಕ ವ್ಯಕ್ತಿಯು ತನ್ನ ವರ್ತಮಾನ ದುಃಖಗಳನ್ನು, ಕಷ್ಟಗಳನ್ನು ಮರೆತು ಒಂದು ಬಗೆಯ ವಿಶ್ವಾಸ ಶ್ರದ್ಧೆಯಿಂದ ತಲೆಯೆತ್ತಿ ಮುಂದುವರಿಯುತ್ತಾನೆ. ಏಕೆಂದರೆ ಇಂತಹರ ಮನಸ್ಸಿನಲ್ಲಿ ಭವಿಷ್ಯದ ಯಶವೇ ಮೂಡಿ ನಿಂತಿರುತ್ತದೆ. ಹೀಗೆ ಒಂದು ಆದರ್ಶ ಇಲ್ಲವೇ ಉದ್ದೇಶದ ಭಾವನೆಯು ಇಲ್ಲದಿದ್ದರೆ ಯಾವದೊಂದು ಬಾಳಿಗೆ-ದಿನದ ನಮ್ಮ ನಡೆವಳಿಗೆ ಏನೂ ಅರ್ಥವೇ ಉಳಿಯುವದಿಲ್ಲ.

## ವ್ಯಕ್ತಿತ್ವದ ಪಡಿಯಚ್ಚು

ಈ ಉದ್ದೇಶವನ್ನು-ಜೀವನಾದರ್ಶವನ್ನು-ಗೊತ್ತುಪಡಿಸುವ ಕೆಲಸವು ತೀರ ಚಿಕ್ಕಂದಿನ, ಸಂಸ್ಕಾರ ಕ್ಷಮವಾದ ತೀರ ಚಿಕ್ಕಂದಿನಲ್ಲಿಯೇ ಆರಂಭವಾಗುತ್ತದೆ. ಒಂದು ತರದ ಬಾಳಿನ ಪಡಿಯುಚ್ಚಿನ (ಮಾದರಿಯ ಮೂಲ ಪ್ರತಿಯ) ಹೊಳವು ಶೈಶವಾವಸ್ಥೆಯಲ್ಲಿಯೇ ರೂಪಗೊಳ್ಳಹತ್ತುತ್ತದೆ. ಒಂದು ಮಗು, ಅಶಕ್ತವಾಗಿದ್ದರೆ, ಅದು ತನ್ನ ನ್ಯೂನತೆಯನ್ನು ಮನಗಂಡು ತಾನು ಕೀಳು,-ಬೀಳೆಂತ ಭಾವಿಸಲು ತೊಡಗುತ್ತದೆ. ಇಂಥ ಭಾವನೆಯಿಂದ ತಾಳಲಾರದಂಥ ಒಂದು ಸನ್ನಿವೇಶವನ್ನು ಉಂಟುಮಾಡಿಕೊಂಡು ತೊಳಲುತ್ತದೆ. ಈ ಅವಸ್ಥೆಯ ಅಸಹ್ಯತೆಯ ಮೂಲಕ ಕೊನೆಗೆ ಮತ್ತೆ ಅದು ಬೆಳವಣಿಗೆಗಾಗಿ ಯತ್ನಿಸುತ್ತದೆ. ಆ ಮಗು ತನಗಾಗಿ ಕಲ್ಪಿಸಿಕೊಂಡ ಆದರ್ಶದಿಂದ ತೋಚುವ ನಿಟ್ಟಿನಲ್ಲಿಯೇ ಅದರ ಬೆಳವಣಿಗೆಯು ಮುಂದುವರಿಯುತ್ತದೆ. ಈ ಬೆಳವಣಿಗೆಗೆ ಅದರ ಆದರ್ಶವೇ ಪ್ರೇರಕ ಶಕ್ತಿ. ಉಳಿದ ಶಾರೀರಿಕ ಮಾನಸಿಕ ಕೃತ್ಯಗಳು ಗೌಣ. ಆದರೆ ಈ ಆದರ್ಶವು ಹೇಗೆ ನಿಶ್ಚಿತವಾಗುತ್ತದೆ, ಎಂಬುದನ್ನು ಹೇಳುವುದು ಬಿಗಿಯಾಗಿದೆ. ಆದರೂ ಪ್ರತಿಯೊಬ್ಬರಿಗೂ ಒಂದೊಂದು ಆದರ್ಶವಿರುವುದು ಸುಳ್ಳಲ್ಲ. ಚಿಕ್ಕಂದಿನಿಂದಲೂ ಪ್ರತಿಯೊಂದು ವ್ಯಕ್ತಿಯ ಎಲ್ಲ ಚಟುವಟಿಕೆಗಳ ಗತಿಯನ್ನೂ ಅದರ ಆದರ್ಶವೇ

ಆಳುತ್ತದೆ. ಈ ಎಳೆಯ ವಯಸ್ಸಿನಲ್ಲಿ ವ್ಯಕ್ತಿಯ ಶಕ್ತಿ ಮತ್ತು ಪ್ರೇರಣೆಗಳ ಬಗ್ಗೆ (ಅವರ ಚಟುವಟಿಕೆಗಳ ಕಾರಣಗಳು ಕಸುವು-ಕೊರತೆಗಳು ಇವೇ ಮುಂತಾದ ಸಂಗತಿಗಳ ಬಗ್ಗೆ) ಇನ್ನೂ ಬಹಳೇ ಕಡಿಮೆ ಸಂಗತಿಗಳು ಗೊತ್ತಾಗಿವೆ. ಮಗುವಿನ ಸ್ವಭಾವ ಧರ್ಮವನ್ನೂ ಅದರ ಜೀವನ ಕಾರ್ಯದ ಮರ್ಮವನ್ನೂ ಸರಿಯಾಗಿ ತಿಳಿದುಕೊಳ್ಳಲು ಇದುವರೆಗೆ ಯಾವದೊಂದು ಗುರುಕೀಲವು (ತಕ್ಕ ಹಂಚಿಕೆಯು) ಸಿಕ್ಕಿಲ್ಲ. ಏಕೆಂದರೆ ಅವರ ಬೆಳವಣಿಗೆಯ ರೀತಿ, ಅದರ ಬಾಳಿನ ಗುಟ್ಟು ತಪ್ಪದೆ ತಿಳಿಯುವುದಕ್ಕೆ ನಿಶ್ಚಿತ ಮಾರ್ಗವಿಲ್ಲ. ಮಗುವಿನ ಜೀವನಾದರ್ಶವನ್ನು (ಉದ್ದೇಶದ ಮಾದರಿಯು) ನಿಶ್ಚಿತವಾಗಿ ಕಂಡುಕೊಳ್ಳುವ ಹಂಚಿಕೆಗಳು ಇನ್ನೂ ಗೊತ್ತಾಗಿಲ್ಲ. ಇಂತಹದೊಂದು ಗುರಿಯು ತೋರಿ ಬಂದ ಮೇಲೆಯೇ ಆ ವ್ಯಕ್ತಿಯ ಭವಿಷ್ಯ ವನ್ನು ಇಷ್ಟ ಬಂದಂತೆ ಮಾರ್ಪಡಿಸಲಿಕ್ಕೆ ಯಾವ ಉಪಾಯಗಳನ್ನು ಕೈಕೊಳ್ಳ ಬೇಕೆಂಬುದನ್ನು ನಾವು ಹೇಳಬಹುದು.

ವ್ಯಕ್ತಿತ್ವದ ಬೆಳವಣಿಗೆಯ ಒಂದು ಪಡಿಯಚ್ಚು (ಆದರ್ಶದ ಮಾದರಿ) ರೂಪ ಗೊಂಡ ಮೇಲೆಯೇ ಪ್ರತಿಯೊಂದು ವ್ಯಕ್ತಿಯ ಬಾಳಿನ ರೀತಿಯು ನಿಶ್ಚಿತವಾಗುತ್ತದೆ. ಸಮಾಜದಲ್ಲಿ ಆ ವ್ಯಕ್ತಿಯ ಸ್ಥಾನಮಾನಗಳು ಹೊಸ ಆಪ್ತಸಂಬಂಧಗಳು ನಿರ್ದಿಷ್ಟ ವಾಗುತ್ತವೆ. ವ್ಯಕ್ತಿತ್ವವು ಏ ಕ ಮು ಖ ವಾ ಗು ತ್ತ ದೆ. ಅಂದಿನಿಂದ ವ್ಯಕ್ತಿಯ ಸಂವೇದನೆಗಳು (ಅಂದರೆ ಎನಿಕೆಗಳು) ಆತನ ಇಲ್ಲವೇ ಆಕೆಯ ಜೀವನಾದರ್ಶದ ದಿಶೆಯಲ್ಲಿಯೇ ಮಾರ್ಪಡುತ್ತವೆ. ಅಂದಿನಿಂದ ಮುಂದೆ ಮಗುವು ಯಾವುದೊಂದು ಪ್ರಸಂಗದಲ್ಲಿಯ ಘಟನೆಗಳನ್ನು ಇದ್ದಂತೆಯೇ ಭಾವಿಸಿಕೊಳ್ಳುವದಿಲ್ಲ; ತನ್ನದೇ ಆದ ಒಂದು ಎನಿಕೆಯ ರೀತಿಯಲ್ಲಿ (ಸಂವೇದನಾಕ್ರಮದಲ್ಲಿ) ಅದು ಹೊರಗಿನ ಅನುಭವವನ್ನು ಪಡೆಯುತ್ತಿರುತ್ತದೆ. ಮಗುವು ತನ್ನ ಸ್ವಂತ ಹಿತಸಂಬಂಧಗಳ ಪೂರ್ವಗ್ರಹಿಕೆಗಳೊಳಗಿಂದಲೇ ಹೊರಗಿನ ಪ್ರತಿಯೊಂದು ಆಗುಹೋಗುಗಳ ಎನಿಕೆಗಳನ್ನು (ಸಂವೇದನೆಗಳನ್ನು) ಹೊಂದುತ್ತಿರುತ್ತವೆ.

ಈ ಸಂದರ್ಭದಲ್ಲಿ ಒಂದು ಸೋಜಿಗದ ಸಂಗತಿಯು ಕಂಡು ಬಂದಿದೆ: ಯಾವು ದೊಂದು ಅವಯವವು ಊನವಾಗಿರುವ ಮಕ್ಕಳ ಎಲ್ಲ ಎನಿಕೆ ಮತ್ತು ಎಣಿಕೆಗಳೂ ಆ ವಿಕೃತ ಅವಯವದ ಕಾರ್ಯ ಧರ್ಮಕ್ಕೆ ಹೊಂದಿಕೊಂಡೇ ಇರುತ್ತವೆ. ಹೊಟ್ಟೆ ಬೇನೆಯ ಅಥವಾ ಪಚನ ಕೋಶದಲ್ಲಿ ವಿಕೃತಿಯುಳ್ಳ ಶಿಶುವು ತಿನಿಸು ತಿಂಡಿಗಳ ಕುರಿತು ಮಿತಿಮೀರಿದ ಆಸಕ್ತಿಯನ್ನು ತೋರಿಸುತ್ತದೆ. ಹಾಗೆಯೇ ಕಣ್ಣಿನಲ್ಲಿ ಕುಂದುಳ್ಳ ಶಿಶುವು ಒಡವೆಗಳ ರೂಪ-ನೋಟಗಳಲ್ಲಿಯೇ ವ್ಯಗ್ರವಾಗಿರುತ್ತದೆ. ದೃಶ್ಯ ವೈಚಿತ್ರ್ಯ ವೈವಿಧ್ಯಗಳಲ್ಲಿಯೇ ಮಗ್ನವಾಗಿರುತ್ತದೆ. ಹೊರಗಿನಿಂದ ಬರುವ

ಎನಿಕೆ (ಸಂವೇದನೆ)ಗಳನ್ನೆಲ್ಲ ಹೊಂದಿಸಿಕೊಂಡು ಅರ್ಥ ಮಾಡಿಕೊಳ್ಳುವ ತನ್ನದೇ ಆದ ಒಂದು ರೀತಿ ಎಲ್ಲ ವ್ಯಕ್ತಿ ಮಾತ್ರರಲ್ಲೂ ಗೋಚರವಾಗುತ್ತದೆ. ಆದರೆ ಯಾವದೊಂದು ಶಿಶುವಿನ ಶಕ್ತಿ ಯಾವ ನಿಟ್ಟಿನಲ್ಲಿರುತ್ತದೆಂಬುದನ್ನು ಗೊತ್ತು ಪಡಿಸಲು, ಆ ಶಿಶುವಿನ ಯಾವ ಅಂಗವು ಊನವಾಗಿದೆಯೆಂಬುದನ್ನಷ್ಟು ಕಂಡು ಹಿಡಿದರೆ ಆಯಿತು, ಎಂದು ಕೆಲರು ಭಾವಿಸಬಹುದು. ಆದರೆ ಈ ಕೆಲಸವು ಅಷ್ಟು ಸುಲಭವಾಗಿಲ್ಲ. ಏಕೆಂದರೆ ಆ ಶಿಶುವು ತನ್ನ ಅವಯುವದ ವಿಕೃತಿ ಇದ್ದರೂ, ಆ ನ್ಯೂನತೆಯನ್ನು ನಮ್ಮ ನಿಮ್ಮಂಥ ಹೊರಗಿನ ನೋಡುಗರ ಕಣ್ಣಿಗೆ ಸಹಜವಾಗಿ ಬೀಳುವಂತೆ ಅದನ್ನು ತೋರಿಸಿಕೊಳ್ಳುವದಿಲ್ಲ. ಆ ಮಗುವು ತನ್ನ ಊನತೆಯ ಎನಿಕೆ (ಸಂವೇದನೆ)ಗಳನ್ನು ಅನುಭವಿಸುವ ರೀತಿಯೇ ಒಂದು ವಿಶಿಷ್ಟವಾಗಿರುತ್ತದೆ. ಆದುದರಿಂದ ಬರೇ ಹೊರಗೆ ತೋರುವ ವ್ಯಂಗ ವಿಕೃತಿಗಳ ನ್ಯೂನತೆಯ ನಿರೀಕ್ಷಣ ದಿಂದ ಶಿಶುವಿನ ಸಂವೇದನಾಕ್ರಮವ ಪೂರ್ವಯೋಜನೆಯು ಗೊತ್ತಾಗುವುದಿಲ್ಲ.

ಶಿಶುವಿನ ಪೂರ್ವಯೋಜನೆಯು ಸಾಪೇಕ್ಷವಾಗಿರುತ್ತದೆ. ಈ ವಿಷಯದಲ್ಲಿ ಅದು ನಮ್ಮೆಲ್ಲರನ್ನೇ ಹೋಲುವದು. ನಮ್ಮೊಳಗೆ ಯಾರೂ ನಿರಪೇಕ್ಷವಾದ ಕೇವಲವಾದ ಸತ್ಯವನ್ನು ಅರಿತುಕೊಂಡವರಿಲ್ಲ. ನಮ್ಮ ವಿಜ್ಞಾನವು ಕೂಡ ನಿರಪೇಕ್ಷ ಸತ್ಯದ ಅನುಗ್ರಹವನ್ನು ಪಡೆದಿಲ್ಲ. ಅದು ವ್ಯಾವಹಾರಿಕ ವಿವೇಕದ ಮೇಲೆ ಎನಿಕೆಗಳ ಎಣಿಕೆ (ಲೆಕ್ಕದ) ಮೇಲೆ ನಿಂತಿದೆ. ಈ ಲೆಕ್ಕವು ಹೊರಗಣ ಕಾರ್ಯಕಾರಣಗಳಿಗೆ ಅನುಸರಿಸಿ ಯಾವಾಗಲೂ ಸ್ಥಿತ್ಯಂತರ ಹೊಂದುತ್ತಿರುತ್ತದೆ. ಆತ್ಯಂತಿಕ ಸತ್ಯ, ತ್ರಿಕಾಲಾಬಾಧಿತ ಸತ್ಯವೆಂಬುದು ಇಲ್ಲಿ ಇಲ್ಲ. ದೊಡ್ಡ ತಪ್ಪುಗಳನ್ನು ಹೋಗ ಲಾಡಿಸಲು, ಅವುಗಳೆಡೆಯಲ್ಲಿ ಅನಿವಾರ್ಯವಾದ ಚಿಕ್ಕ ತಪ್ಪುಗಳನ್ನು ಕಡೆಗಣಿಸಿ, ಮುಂದಡಿಯಿಡುವದರಲ್ಲಿಯೇ ವಿಜ್ಞಾನವು ತೃಪ್ತಿ ಹೊಂದುತ್ತದೆ. ನಮ್ಮಿಂದ ತಪ್ಪುಗಳು ಆಗದಿರುವುದು ಸಾಧ್ಯವಿಲ್ಲ. ಆದರೆ ಮಹತ್ವದ ಮಾತೇನೆಂದರೆ, ನಮ್ಮ ತಪ್ಪುಗಳನ್ನು ನಾವು ತಿಳಿದುಕೊಂಡು ತಿದ್ದಲೂಬಲ್ಲೆವು. ಎಳೆವಯಸ್ಸಿನಲ್ಲಿ ನಮ್ಮ ಆದರ್ಶವು (ಬಾಳಿನ ಮಾದರಿಯು) ಇನ್ನೂ ರೂಪಗೊಳ್ಳುತ್ತಿರುವಾಗಲೇ ಇಂತಹ ತಿದ್ದುವಡೆಯು ಹೆಚ್ಚು ಸುಲಭ. ಆಗ ಹಾಗೆ ತಿದ್ದುವುದು ಉಳಿದಲ್ಲಿ, ಮುಂದೆ ಈ ತಪ್ಪುಗಳನ್ನು ಸರಿಪಡಿಸಬೇಕಾದರೆ, ಈ ತಪ್ಪಿಗೆ ಮೂಲಕಾರಣವಾದ ಮೊದಲಿನ ಎಲ್ಲ ಸನ್ನಿವೇಶಗಳನ್ನೂ ನೆನಪಿಗೆ ತಂದುಕೊಡಬೇಕಾಗುವುದು. ಮಾನಸಿಕ ವಿಕೃತಿಯಿಂದ ಬಳಲುವ ಒರ್ವ ವ್ಯಕ್ತಿಯು ಚಿಕಿತ್ಸೆಮಾಡುವುದಿದೆ ಎನ್ನಿ. ಆಗ ಅವನು ಇಂದಿನ ಜೀವನದಲ್ಲಿ ಮಾಡುತ್ತಿರುವ ಸಾಮಾನ್ಯ ತಪ್ಪುಗಳನ್ನು ಕಂಡು ಹಿಡಿಯುವದಿಷ್ಟೇ ಮುಖ್ಯ ಪ್ರಶ್ನೆಯಲ್ಲ; ಈತನ ಕುರಿತು ನಿಜವಾದ ಸಮಸ್ಯೆ ಯೇನೆಂದರೆ, ಅವನು ಅಂದು ತನ್ನ ಬಾಳಿನ ಮಾದರಿಯು ಮಾರ್ಪಡುತ್ತಿರುವ

ಎಳೆವಯಸ್ಸಿನಲ್ಲಿ (ಸಂಸ್ಕಾರ ಕ್ಷಮ ಕಾಲದಲ್ಲಿ) ಮಾಡಿದ ಮೂಲಭೂತವಾದ ತಪ್ಪುಗಳನ್ನು ಈತನ ಅರಿವಿನ ಆಳದೊಳಗಿಂದ ಹುಡುಕಿ ತೆಗೆದು ಬೆಳಕಿಗೆ ತರುವುದು. ಹಾಗೆ ಮಾಡಿದ ನಂತರವೇ ಈ ತಪ್ಪುಗಳನ್ನೂ-ಅವುಗಳಿಂದ ಹದಗೆಟ್ಟು ಹಾಳಾದ ಈತನ ಮಾನಸಿಕ ಜೀವನವನ್ನೂ-ಯೋಗ್ಯವಾದ ಆರೈಕೆ ಉಪಚಾರಗಳಿಂದ ಸರಿಪಡಿಸಿ ಗುಣಪಡಿಸಬಹುದು.

## ಬಳಿ (ತಳಿ) ಯು ಗುಣದ ಸ್ಥಾನವೇನು ?

ವ್ಯಕ್ತಿಮನೋವಿಜ್ಞಾನದ ಬೆಳಕಿನಲ್ಲಿ ನೋಡಿದರೆ, ಬಳಿಯು ಗುಣದ (ಅನುವಂಶಿಕ ಸಂಸ್ಕಾರಗಳ) ಮಹತ್ವವು ಕಡಿಮೆಯಾಗುತ್ತದೆ. ಬಾಲ್ಯದ ಪರಿಸ್ಥಿತಿಯಲ್ಲಿ ಮೈ ಗೊಳ್ಳುವ ಬಾಳಿನ ಮಾದರಿಯೇ ಮಹತ್ವದ ಸಂಗತಿಯಾಗಿದೆ. ವ್ಯಕ್ತಿಯು ಬಳಿಯುಗುಣ-ಶಕ್ತಿಗಳಿಗಿಂತ, ಅಂಥ ಶಕ್ತಿಗಳನ್ನು ಈತನು ಎಳೆ ವಯಸ್ಸಿನಲ್ಲಿ ಹೇಗೆ ಉಪಯೋಗಿಸಿಕೊಂಡನೆಂಬುವುದೇ ಮುಖ್ಯ ಪ್ರಶ್ನೆಯಾಗುತ್ತದೆ. ಹುಟ್ಟಿನಿಂದ ಬಂದ ಕೆಲವೊಂದು ಲೈಂಗಿಕ ವ್ಯಂಗ್ಯಗಳಿಗೆ ಆತನ ಬಳಿಯೇ ಕಾರಣವಾಗಿರಬಹುದು. ಆದರೆ ಇಂತಹ ವ್ಯಂಗ್ಯಗಳ ಮೂಲಕ ತಲೆದೋರಿದ ಅಥವಾ ನೆಲೆಗೊಂಡ ವಿಶಿಷ್ಟವಾದ ತೊಡಕು ತೊಂದರೆಗಳ ಬಿಗುವನ್ನು ಸಡಲಿಸಿ, ಶಕ್ಯವಿದ್ದರೆ ಪೂರ್ಣ ಸರಿಪಡಿಸಿ ಈ ಶಿಶುವನ್ನು ಆದಷ್ಟು ಅನುಕೂಲವಾದ ಸನ್ನಿವೇಶದಲ್ಲಿ ಇರಿಸುವುದೆ ನಮ್ಮ ಮುಖ್ಯ ಸಮಸ್ಯೆಯಾಗಿದೆ. ಇಂತಹ ಮಗುವಿನ ಯಾವದೊಂದು ವ್ಯಂಗ ವನ್ನಾಗಲೀ ನ್ಯೂನತೆಯನ್ನಾಗಲೀ ಕಂಡೊಡನೆ ಅದಕ್ಕ ಅನುರೂಪವಾಗಿ ಹೇಗೆ ವರ್ತಿಸಬೇಕೆಂಬದನ್ನು ನಾವು ಬಲ್ಲೆವು. ಆದರೆ ಹಲವುಬಾರಿ ಮಗುವಿನಲ್ಲಿ ಬಳಿಯು ದೋಷಗಳಾವುವೂ ಕಂಡುಬರದೆ, ಸಾಕಷ್ಟು ಪೋಷಕವಾದ ಆಹಾರವು ಸಿಗದಿರುವದರ ಮೂಲಕ ಇಲ್ಲವೇ ಎಳೆ ವಯಸ್ಸಿನಲ್ಲಿ ಆರೈಕೆ-ಜೋಪಾನವು ಸರಿಯಾಗಿ ಆಗದೆ ಹಲವು ತಪ್ಪುತಡೆಗಳು ಆಗಿ ಮುಂದೆ ಆ ಮಗುವಿನ ಜೀವನವು ಅಡ್ಡದಾರಿಗೆ ಹತ್ತಿ ಅದರ ಬಾಳು ಹಾಳಾಗಬಹುದು.

ವ್ಯಂಗವುಳ್ಳ ಅವಯುವಗಳೊಂದಿಗೆ ಹುಟ್ಟಿದ ಮಕ್ಕಳ ಬಾಳಿನಲ್ಲಿ ಅವರ ಮಾನಸಿಕ ಸನ್ನಿವೇಶವೇ ಅತ್ಯಂತ ಮಹತ್ವದ್ದಾಗಿದೆ. ಇಂತಹ ಮಕ್ಕಳು ಉಳಿ ದವರಿಗಿಂತ ಹೆಚ್ಚಿನ ಕಠಿಣ ಪರಿಸ್ಥಿತಿಯ ಮನೋವೇದನೆಗಳ ಅವಸ್ಥೆಯಲ್ಲಿ ಇರುವವರಿಂದ ಅವರು ಒಂದು ವಿಶೇಷವಾದ ನ್ಯೂನತೆಯ ಎನಿಕೆಯ ನೆನಿಕೆಯನ್ನು (ತಾನು ಇರುವದಕ್ಕಿಂತ ಹೆಚ್ಚು ಕೀಳಾಗಿರುವೆನೆಂಬ ಭಾವನೆಯ ಸ್ಪಷ್ಟವಾದ ಲಕ್ಷಣಗಳನ್ನು) ತೋರ್ಪಡಿಸುವರು, ಅವರ ಬಾಳಿನ ಮಾದರಿಯು (ಭಾವೀ

ಆಯುಷ್ಯದ ಪಡಿಯಚ್ಚು) ರೂಪಗೊಳ್ಳುತ್ತಿರುವ ಸಮಯದಲ್ಲಿಯೇ ಇಂತವರು ಹೆಚ್ಚು ಅಂತರ್ಮುಖಿಯಾಗುವರು; ತನ್ನ ತನುಮನಗಳ ಕುರಿತೇ ಮಿತಿಮೀರಿದ ಆಸಕ್ತಿಯನ್ನು, ಲಕ್ಷ-ದಕ್ಷತೆಯನ್ನೂ ವಹಿಸುವರು. ಇಂತವರು ತಮ್ಮ ಒಳ ನೋಟದ ನಿಟ್ಟಿನಲ್ಲಿಯೇ ಮುಂದಿನ ಜೀವನವನ್ನು ಸಾಗಿಸುವರು. ಇಲ್ಲಿ ಒಂದು ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು: ಮಕ್ಕಳು ತಮ್ಮ ಕಣ್ಣಮುಂದೆ ಇಟ್ಟುಕೊಂಬ ಬಾಳಿನ ಮಾದರಿಯಲ್ಲಿಯ ತಪ್ಪು ತಡೆಗಳಿಗೆ, ಕೇವಲ ಶಾರೀರಿಕ ನ್ಯೂನತೆಗಳೇ ಕಾರಣವಲ್ಲ. ಇನ್ನೂ ಕೆಲವು ಬೇರೆ ಸನ್ನಿವೇಶಗಳೂ ಅಂಥ ತಪ್ಪುಗಳಿಗೆ ಕಾರಣ ವಾಗುವುದುಂಟು. ಮಿತಿಮೀರಿದ ಮುದ್ದಿನಿಂದ ಬೆಳೆದ ಮಕ್ಕಳು ಮತ್ತು ಇದಕ್ಕೆ ವಿರುದ್ಧವಾಗಿ ಬಹಳೇ ತಿರಸ್ಕೃತರಾಗಿ ಬೆಳೆದ-ಯಾರಿಗೂ ಬೇಡಾದ, ಎಲ್ಲರಿಂದಲೂ ಬೈಗಳನ್ನು ತಿಂದ-ಮಕ್ಕಳು ಈ ವರ್ಗದಲ್ಲಿ ಸೇರುವರು. ಇವರ ಬಾಳು ಹಾಳಾಗುವುದಕ್ಕೂ ಇವರ ಚಿಕ್ಕಂದಿನ ಬಾಳಿನ ಮಾದರಿ (ಆದರ್ಶವು) ಆ ತೆರನಾಗಿ ಮಾರ್ಪಟ್ಟುದೇ ಮುಖ್ಯ ಕಾರಣವು. ಈ ಮೂರು ಬಗೆಯ ಮಕ್ಕಳ ಕುರಿತು ವಿವರವಾದ ವಿವೇಚನೆಯು ಮುಂದೆ ಬರುವುದು. ಇಂತಹ ಮಕ್ಕಳು ಕೆಲವೊಂದು ನ್ಯೂನತೆಗಳೊಂದಿಗೆ ಬೆಳೆಯುತ್ತಾರೆ. ತಮ್ಮ ನ್ಯೂನತೆಗಳ ಬಿಟ್ಟೂ ಬಿಡದ ಅರಿವಿನಿಂದ ಅವರು ಯಾವಾಗಲೂ ತಮ್ಮ ಮೇಲೆ ಆಘಾತ ಆಕ್ರಮಣಗಳು ಒದಗಬಹುದೆಂಬ ಅಂಜಿಕೆಯಲ್ಲಿಯೇ ಉಳಿಯುತ್ತಾರೆ. ಏಕೆಂದರೆ, ಅವರು ಬೆಳೆದುಬಂದ ಪರಿಸ್ಥಿತಿಗಳಲ್ಲಿ ಅವರು ಎಂದಿಗೂ ಸ್ವಾತಂತ್ರ್ಯವನ್ನಾಗಲೀ ಸ್ವಾವಲಂಬನವನ್ನಾಗಲೀ ಕಲಿತುಕೊಂಡಿರುವದಿಲ್ಲ.

## ಸಾಮಾಜಿಕ ಆಸಕ್ತಿಯ ಪ್ರಭಾವ.

ಪ್ರತಿಯೊಂದು ವ್ಯಕ್ತಿಯ ಸಾಮಾಜಿಕ ಆಸಕ್ತಿಯ ಬಗೆಗಳನ್ನು ಆರಂಭದಿಂದಲೂ ಅರಿತುಕೊಳ್ಳುವುದು ಅವಶ್ಯ. ಇಂಥ ಅರಿವು-ಸಾಮಾಜಿಕ ಅಭಿರುಚಿ ಆಸಕ್ತಿಗಳ ತಿಳುವಳಿಕೆಯು ವ್ಯಕ್ತಿ-ಮನೋವಿಜ್ಞಾನ ಪ್ರಣೀತವಾದ ಶಿಕ್ಷಣದ, ಚಿಕಿತ್ಸಾಕ್ರಮದ, ಮತ್ತು ವ್ಯಾಧಿ ನಿವಾರಣೆಯ ಮಹತ್ವದ ಅಂಗವಾಗಿದೆ. ಜೀವನವು ಸುಖ-ದುಃಖ ಗಳಿಂದ ಮಿಶ್ರವಾದ ಒಂದು ವರದಾನವಾಗಿದೆ. ಜೀವನದಲ್ಲಿ ಅನುಕೂಲ ಪ್ರಯೋಜನಗಳೂ ಇವೆ; ಪ್ರತಿಕೂಲ ತೊಂದರೆಗಳೂ ಇವೆ. ಅನುಕೂಲಗಳಂತೆ ಪ್ರತಿಕೂಲ ಸಂಗತಿಗಳಿಂದಲೂ ಕೂಡಿಯೇ ಲಾಭವನ್ನು ಪಡೆವ, ತಮ್ಮ ಅನುಭವದ ಸಂಪತ್ತಿಯನ್ನು ಹೆಚ್ಚಿಸುವ ಜಾಣ್ಮೆಯನ್ನು ಹೊಂದುವವರೇ, ಪ್ರಪಂಚದಲ್ಲಿ ನಿರಾಯಾಸವಾಗಿ ಸಮರಸವಾಗಿ ಬಾಳುವಂಥವರೂ, ಆತ್ಮವಿಶ್ವಾಸವುಳ್ಳವರೂ ಧೈರ್ಯಶಾಲಿಗಳೂ ಆದ ಮಿಗಿಲಾದ ವ್ಯಕ್ತಿಗಳಾಗುತ್ತಾರೆ. ಅವರಿಗೆ ಭಯ

ವೆಂಬುದಿಲ್ಲ. ಬಿಕ್ಕಟ್ಟು ಮುಗ್ಗಟ್ಟುಗಳಿರುವವೆಂಬುದನ್ನು ಬಲ್ಲರಾದರೂ, ಅವುಗಳನ್ನು
ಏರಿಹೋಗಲೂ ಮೀರಿಸಾಗಲೂ ತಾವು ಸಮರ್ಥರೆಂಬುದನ್ನೂ ಕೂಡ ಅವರು
ಅರಿತಿರುವರು. ಜೀವನದ ಎಲ್ಲ ಒಗಟುಗಳನ್ನು ಬಿಡಿಸಲು, ಎಲ್ಲ ಸಮಸ್ಯೆಗಳನ್ನು
ಬಗೆಹರಿಸಲು ಅವರು ಸಿದ್ಧರಿರುತ್ತಾರೆ. ಇಂತಹ ಸಮಸ್ಯೆಗಳು ಬಹುಶಃ
ಸಾಮಾಜಿಕ ಸಮಸ್ಯೆಗಳೇ ಇರುತ್ತವೆ. ಮಾನವತೆಯ ದೃಷ್ಟಿಯಿಂದ, ವ್ಯಕ್ತಿಯು
ಸಾಮಾಜಿಕ ಜೀವನಕ್ಕಾಗಿ ಅಣಿಗೊಂಡಿರುವದು ಅವಶ್ಯವು. ಮೇಲೆ ಉಲ್ಲೇಖಿಸಿದ
ಮೂರೂ ಮಾದರಿಯ ಮಕ್ಕಳು, ಅವಶ್ಯವಿರುವದಕ್ಕಿಂತ ಬಹಳ ಕಡಿಮೆ
ಸಾಮಾಜಿಕ ಆಸಕ್ತಿ–ಅಭಿರುಚಿಗಳುಳ್ಳ ಬಾಳಿನ ಮಾದರಿಗಳನ್ನು ಬೆಳೆಸಿಕೊಂಡು
ಬರುತ್ತವೆ. ಜೀವನದಲ್ಲಿ ಅವಶ್ಯವಿರುವ ಸಂಗತಿಗಳನ್ನು ಸಾಧಿಸುವದರ ಸಲು
ವಾಗಿಯೂ, ಅಲ್ಲಿ ತಲೆದೋರುವ ತೊಡಕು ತೊಂದರೆಗಳನ್ನು ಬಗೆಹರಿಸುವದರ
ಸಲುವಾಗಿಯೂ, ಅನುಕೂಲವಿರುವ ಮನಸ್ಸಿನ ಒಲವನ್ನು ಅಥವಾ ಮನೋ
ಧೋರಣೆಯನ್ನು ಅಂಥವರು ಪಡೆದಿರುವದಿಲ್ಲ. ಸೋಲಿನ ಭಾವನೆಯ ಮೂಲಕ
ಅವರ ಬಾಳಿನ ಮಾದರಿಯು ಜೀವನದ ಸಮಸ್ಯೆಗಳ ಕುರಿತು, ಹದಗೆಟ್ಟ–ಹಾದಿ
ಬಿಟ್ಟ–ಮಾನಸಿಕ ಧೋರಣೆಯನ್ನೂ ತೂಕ ತಪ್ಪಿದ ಒಲವನ್ನೂ ಉಂಟು ಮಾಡಿ
ಕೊಳ್ಳುತ್ತದೆ. ಇದರ ಮೂಲಕ, ಅವರವ್ಯಕ್ತಿತ್ವವೆಲ್ಲ ಜೀವನದ ನಿರುಪಯೋಗಿಯಾದ
ನಿಷ್ಪ್ರಯೋಜಕವಾದ ಬದಿಯಲ್ಲಿಯೇ ಬೆಳೆಯುವಂತೆ ಒತ್ತಾಯವಾಗುತ್ತದೆ. ಇಂತಹ
ವ್ಯಾಧಿಗ್ರಸ್ತರನ್ನು–ಮನೋವಿಕೃತಿಗಳಿಂದ ಬಳಲುವ ಬೇನಿಗರನ್ನು–ಉಪಚರಿಸಿ
ಗುಣಪಡಿಸುವಾಗ, ಅವರ ವಿಚಾರ ಮತ್ತು ವರ್ತನಗಳನ್ನು ಉಪಯೋಗಿಯಾದ
ಪ್ರಯೋಜಕವಾದ ಬದಿಯಲ್ಲಿ ಬೆಳೆಯುವಂತೆ ಮಾಡಿ, ಜೀವನದ ಕುರಿತೂ,
ಸಮಾಜದ ಕುರಿತೂ ಒಂದು ಸಾಮಾನ್ಯವಾದ ಸಾರ್ಥಕವಾಗಬಹುದಾದ ಮನೋ
ವೃತ್ತಿಯನ್ನೂ ಉಪಯುಕ್ತ ಧೋರಣೆಯನ್ನೂ ಅವರಲ್ಲಿ ಹುಟ್ಟಿಸುವದೇ ಮುಖ್ಯ
ಕರ್ತವ್ಯವಾಗಿರುತ್ತದೆ.

ಸಮಾಜದಲ್ಲಿ ಆಸಕ್ತಿ ಇಲ್ಲದಿರುವದೆಂದರೆ ಸಾಮಾಜಿಕ ಪ್ರವೃತ್ತಿಯ ಕೊರತೆ.
ವ್ಯಕ್ತಿಯು ತನ್ನ ಜೀವನವನ್ನೆಲ್ಲ, ನಿರುಪಯುಕ್ತ ನಿಷ್ಪ್ರಯೋಜಕವಾಗಿಯೇ ಕಳೆದು
ಅವನು ಜೀವನಕ್ಕೂ ಜಗತ್ತಿಗೂ ವಿಮುಖನಾದಂತೆಯೇ ಸರಿ. ಸಮಸ್ಯೆಗಳಾಗಿ
ತೋರುವ ವಿಕೃತ ಮನಸ್ಸಿನ ಮಕ್ಕಳೂ, ಅಪರಾಧಿಗಳೂ ಉಪದ್ರವಿಗಳೂ ಆದ
ಜನರೂ, ಸೆರೆಗುಡುಕ ತಲೆತಿರುಕ ಉನ್ಮತ್ತರೂ ಇಂಥವರ ಗುಂಪುಗಳು,
ಸಾಮಾಜಿಕ ಆಸಕ್ತಿಯ ಕೊರತೆಯುಳ್ಳ ಜನಜಂಗುಳಿಗಳು ಇಂಥವರನ್ನು ಜೀವನದ
ಪ್ರಯೋಜನಕಾರಿಯಾದ ಬದಿಗೆ ಹೊರಳುವಂತೆ ಮಾಡಿ ಸಾಮಾಜಿಕ ಸಮಸ್ಯೆಗಳಲ್ಲೂ
ವ್ಯಕ್ತಿಗಳಲ್ಲೂ ಅವರ ಆಸಕ್ತಿಯನ್ನು ಚೆನ್ನಾಗಿ ನೆಲೆಗೊಳಿಸಬೇಕೆಂಬುವದೇ ಮುಖ್ಯ

ಸಮಸ್ಯೆಯಾಗಿದೆ. ಮತ್ತು ವ್ಯಕ್ತಿ ಮನೋವಿಜ್ಞಾನವು ಇದೇ ಕೆಲಸವನ್ನು ಕೈಗೊಂಡಿದೆ. ಈ ದೃಷ್ಟಿಯಿಂದ ಈ ವಿಜ್ಞಾನವು ಕೇವಲ ವ್ಯಕ್ತಿಯದೆ ಆಗಿರದೆ ನಿಜವಾಗಿಯೂ ಸಾಮಾಜಿಕತೆಯನ್ನು ಹೆಚ್ಚಿಸುವ ಸಮಾಜ ಮನೋವಿಜ್ಞಾನವಾಗಿದೆ.

## ಮಕ್ಕಳ ಲಾಲನೆ ಮತ್ತು ವ್ಯಕ್ತಿತ್ವದ ಭಾವನೆ.

ಸಾಮಾಜಿಕ ಆಸಕ್ತಿಯ ವಿಷಯದನಂತರ, ನಮ್ಮ ಮುಂದಿನ ಕೆಲಸವೆಂದರೆ, ವ್ಯಕ್ತಿಗೆ ಆತನ ಇಲ್ಲವೇ ಆಕೆಯ ಬೆಳವಣಿಗೆಯಲ್ಲಿ (ಜೀವನದ ವಿಕಾಸದಲ್ಲಿ) ಎದುರಿಸಬೇಕಾಗುವ ತೊಡಕು ತೊಂದರೆಗಳನ್ನು ಕಂಡುಹಿಡಿಯುವದು. ಇದು ಗೊಂದಲಕ್ಕೀಡು ಮಾಡುವಂತಹದೆಂದು ಕಂಡರೂ, ನಿಜವಾಗಿಯೂ ಅಷ್ಟೇನು ಜಡವಾದ ಕಾರ್ಯವಲ್ಲ. ಮಿತಿಮೀರಿ ಮುದ್ದುಗೈದು ಲಾಲಿಸಿ ಕೆಡಿಸಿದ ಪ್ರತಿಯೊಂದು ಶಿಶುವೂ, ಮುಂದೆ ನಿರುಪಯುಕ್ತ ಹುಡುಗನಾಗುತ್ತದೆ. ಇದಕ್ಕೆ ಇಂದಿನ ನಾಗರಿಕತೆಯೇ ಕಾರಣ. ಸಮಾಜವಾಗಲೀ, ಕುಟುಂಬವಾಗಲೀ, ಒಂದು ವ್ಯಕ್ತಿಯನ್ನು ಅಪರಿಮಿತವಾಗಿ ಏರಿಸಿ ಮುದ್ದು ಮಾಡಲು ಬಯಸಿದರೂ ಶಕ್ಯವಾಗದಿರುವಂತೆಯೇ ಇಂದಿನ ನಾಗರಿಕತೆಯ ರಚನೆಯಿದೆ. ಲಲ್ಲೆಗೆಯ್ದು ಮುದ್ದುಮಾಡಿ ಅರ್ತಿಯಿಂದ ಎಷ್ಟೇ ಬೆಳೆಸಿದ ಮಗುವಿಗೂ, ಜೀವನದ ಕಠಿಣವಾದ ಕರ್ಕಶವಾದ ಪ್ರಸಂಗಗಳನ್ನು ಎದುರಿಸಬೇಕಾದುದು ತಪ್ಪಿದ್ದಲ್ಲ. ಶಾಲೆಯನ್ನು ಸೇರಿದೊಡನೆಯೇ ಹೊಸದೊಂದು ಸಾಮಾಜಿಕ ಸಂಸ್ಥೆಯೂ ಅದರ ಹೊಸದಾದ ಸಾಮಾಜಿಕ ಸಮಸ್ಯೆಗಳೂ ಆತನ ಮುಂದೆ ನಿಲ್ಲುವವು. ಆತನು ತನ್ನ ವರ್ಗದ ಸಂಗಡಿಗರೊಡನೆ ಕೂಡಿ ಕಲೆತು ಕಲಿಯಲೂ, ಆಡಲೂ ಮನಸ್ಸು ಮಾಡುವುದಿಲ್ಲ. ಏಕೆಂದರೆ ಅದುವರೆಗಿನ ಆತನ ಬಾಲ್ಯದ ಅನುಭವವೆಲ್ಲ ಅಂಥ ವರ್ತನಕ್ಕೆ ವಿರುದ್ಧವಾಗಿ ಬಂದಿದೆ. ಶಾಲೆಯ ಸಾಮುದಾಯಿಕ ಜೀವನಕ್ಕಾಗಿ ಆತನು ಸಿದ್ಧನಾಗಿರುವುದಿಲ್ಲ. ಆತನ ಬಾಳಿನ ಮಾದರಿಯು ಮಾರ್ಪಡುವ ಸಮಯದಲ್ಲಿ ಆತನಿಗೆ ಬಂದ ಅನುಭವದ ಮೂಲಕ ಅಂಥ ಸಾಮುದಾಯಿಕ ಸನ್ನಿವೇಶಗಳ ಕುರಿತು ಆತನಲ್ಲಿ ಭೀತಿ ಉಂಟಾಗಿರುತ್ತದೆ. ಮಕ್ಕಳ ಗುಂಪಿನಲ್ಲಿ ಕೂಡಿ ನಡೆಯಲು ಆತನು ಅಂಜುತ್ತಾನೆ. ಇನ್ನೂ ಹೆಚ್ಚು ಮುದ್ದು ಮಾಡಿಸಿಕೊಳ್ಳಬೇಕೆಂಬ ಹಂಬಲವೇ ಆತನಿಗೆ ಇರುತ್ತದೆ. ಆದರೆ ಇವೆಲ್ಲ ಲಕ್ಷಣಗಳು ಆತನ ಆನುವಂಶಿಕ ಸಂಸ್ಕಾರಗಳಲ್ಲ. ಆತನ ಬಾಳಿನ ಮಾದರಿಯನ್ನೂ, ಅದರಿಂದ ಆತನಿಗೆ ಹಾದಿತೋರಿಸುವ ಗುರಿಯನ್ನೂ ಅವಲೋಕಿಸಿದರೆ ಆತನ ವರ್ತನದ ಲಕ್ಷಣಗಳನ್ನೆಲ್ಲ ನಾವು ತಿಳಿದುಕೊಳ್ಳಬಹುದಾಗಿದೆ. ತನ್ನದೇ ಬಾಳಿನ ಗುರಿಯ ನಿಟ್ಟಿನಲ್ಲಿ ನಡೆಯಲು ಅನುಕೂಲ

ವಾಗುವಂತೆ ಕೆಲವೊಂದು ಗುಣಗಳನ್ನೂ, ವಿಶಿಷ್ಟ ಲಕ್ಷಣಗಳನ್ನೂ ಆತನು ಬೆಳೆಸಿಕೊಂಡಿರುವವರೆಗೆ, ಆತನಿಗೆ ಬೇರೊಂದು ದಿಶೆಯಲ್ಲಿ ಒಯ್ಯಬಹುದಾದಂಥ ಲಕ್ಷಣಗಳನ್ನು ಪಡೆಯುವದು ಆತನಿಂದ ಶಕ್ಯವಿಲ್ಲ.

ಬಾಳಿನ ಗುಟ್ಟನ್ನು ಅರಿಯುವುದಕ್ಕೆ ನಮ್ಮ ಎಣಿಕೆಗಳನ್ನು (ಭಾವನೆಗಳನ್ನು) ಅಭ್ಯಾಸಿಸುವುದು ಅವಶ್ಯ. ಒಂದು ವ್ಯಕ್ತಿಯ ಜೀವನಾದರ್ಶದಿಂದ ನಿಶ್ಚಿತವಾದ ಬೆಳವಣಿಗೆಯ ರೀತಿಯೇ ವ್ಯಕ್ತಿಯ ಸ್ವಭಾವಧರ್ಮ. ಈ ಸ್ವಭಾವಧರ್ಮವೇ ಆ ವ್ಯಕ್ತಿಯ ಎಲ್ಲ ಶಾರೀರಿಕ ಹಾಗು ಮಾನಸಿಕ ಚಟುವಟಿಕೆಗಳಂತೆ ಅವನ ಭಾವನೆಗಳ ಜೀವನವನ್ನೂ ಆಳುತ್ತದೆ. ವ್ಯಕ್ತಿಗಳು ಯಾವಾಗಲೂ ತಾವು ಇಟ್ಟುಕೊಂಡ ಮಾನಸಿಕ ಧೋರಣೆಗಳನ್ನು ಭಾವನೆಗಳಿಂದ ಸಮರ್ಥಿಸುತ್ತಾರೆ. ಇದೊಂದು ಸೋಜಿಗದ ಮಾತು. ಒರ್ವ ಮನುಷ್ಯನು ಸತ್ಕಾರ್ಯವನ್ನು ಮಾಡಬೇಕೆಂದು ಸಂಕಲ್ಪಿಸಿದ್ದರೆ, ಆ ಕಲ್ಪನೆಯು ಆತನ ಎಲ್ಲ ಭಾವನಾ ಪ್ರಪಂಚವನ್ನು ವಿಶಾಲವಾಗಿ ವ್ಯಾಪಿಸಿ ಪ್ರಭಾವ ಬೀರುತ್ತದೆ. ವ್ಯಕ್ತಿಯ ಭಾವನೆಗಳು ಯಾವಾಗಲೂ ಆತನು ತನ್ನ ಕಾರ್ಯದ ಕುರಿತು ಬೆಳೆಸಿಕೊಂಡ ದೃಷ್ಟಿಕೋನಕ್ಕೆ ಪೋಷಕ ಅಥವಾ ಪೂರಕವಾಗುವಂತೆಯೇ ಇರುತ್ತವೆ. ವ್ಯಕ್ತಿಯ ನಿಶ್ಚಿತವಾದ ಕಾರ್ಯ ಪ್ರವೃತ್ತಿಯ ಒಲವನ್ನೇ ಬಹುಶಃ ಭಾವನೆಗಳೂ ಭದ್ರಪಡಿಸುತ್ತವೆ. ಭಾವನೆಗಳಿಲ್ಲದಿದ್ದರೂ ನಾವು ಮಾಡಬಯಸುವದನ್ನು ಮಾಡಿಯೇ ತೀರುವೆವು. ಭಾವನೆಗಳು ಬರೇ ನಮ್ಮ ಕೃತ್ಯಗಳಿಗೆ ಸಹಚಾರಿಗಳು.

## ಕನಸುಗಳ ತಿರುಳು

ಈ ಸಂಗತಿಯು ನಮ್ಮ ಕನಸುಗಳಲ್ಲಿ ಸ್ಪಷ್ಟವಾಗುತ್ತದೆ: ಕನಸುಗಳ ಕಾರ್ಯ, ಉಪಪತ್ತಿಗಳನ್ನು ಹುಡುಕುವುದು ವ್ಯಕ್ತಿ-ಮನೋವಿಜ್ಞಾನದ ಇತ್ತೀಚೆಯ ತೀರ ಹೊಸ ಸಾಧನೆಯು. ಪ್ರತಿಯೊಂದು ಕನಸಿನ ಒಂದು ಉದ್ದೇಶವಿರುತ್ತದೆ. ಆದರೆ ಇದನ್ನು ಇಂದಿನಷ್ಟು ಹಿಂದೆಂದಿಗೂ ಮನಗಂಡಿದಿಲ್ಲ. ಕೆಲವೊಂದು ಭಾವನೆಗೆ ಚಾಲನೆಯನ್ನು ಕೊಡುವುದೇ ಕನಸಿನ ಉದ್ದೇಶ. ಈ ಭಾವನೆಯು ಕೆಲಸಾರೆ ಸ್ಪಷ್ಟವಾಗಿ ಹೊರಬರಬಹುದು. ಕೆಲಬಾರಿ ಒಳಗೊಳಗೇ ಹುದುಗಿಕೊಂಡಿದ್ದು ಕಾಣದಿರಬಹುದು. ಈ ಭಾವನೆಯ ಸಂಚಾಲನೆಯಿಂದ ನಮಗೆ ಕನಸು ಕಾಣಿಸಿಕೊಳ್ಳುತ್ತದೆ. ಕನಸೆಂದರೆ ಹುಸಿ; ಮೋಸ; ಭ್ರಾಮಕವಂಚನೆ; ಎಂದು ತಿಳಿವ ಹಳೇಕಲ್ಪನೆಗೆ ಇದೊಳ್ಳೇ ಏಟು ಬಿದ್ದಂತೆ ಆಗಿದೆ. ಹಗಲಿನ ನಮ್ಮ ಬಯಕೆಗಳು ಇರುಳಿನಲ್ಲಿ ನಮ್ಮ ಕನಸುಗಳಾವವು, ಅಥವಾ ನಾವು ಕೈಕೊಳ್ಳಬೇಕೆಂದಿರುವ

ಯೋಜನೆ, ಧೋರಣೆಗಳ ಭಾವನಾಮಯ ಸ್ವರೂಪವೇ ಕನಸುಗಳು. ಅವು ನಾಟಕದ ಮುಂಚಿನ 'ರಂಗತಾಲೀಮು.' ಆದರೆ ತಾಲೀಮಿಗೂ ಇದಕ್ಕೂ ಸ್ವಲ್ಪ ವ್ಯತ್ಯಾಸವಿದೆ; ನಾಟಕಕ್ಕೂ ರಂಗತಾಲೀಮಿಗೂ ಹುರುಳಿನಲ್ಲಿ ವ್ಯತ್ಯಾಸವಿಲ್ಲ. ಆದರೆ ಜಾಗೃತ ಕಾಲದ ವರ್ತನದ ನಿಜವಾದ ಆಟವು ಕನಸಿನಲ್ಲಿ ಬಾರದೇ ಇದ್ದರೂ ಅದನ್ನು ಹೋಲುವ ಚಟುವಟಿಕೆಗಳು ಮಾತ್ರ ಕನಸಿನಲ್ಲಿ ಬರಬಹುದು. ಈ ದೃಷ್ಟಿಯಿಂದ ಕನಸುಗಳು ಕೃತಿಯ ಛಾಯೆ ! ವಂಚನೆ ! ಕನಸಿನೊಳಗಿನ ಭಾವನಾಮಯ ಕಲ್ಪನಾವಿಲಾಸವು ಕೃತಿಯನ್ನು ಮಾಡದೆಯೇ ನಮಗೆ ಕೃತಿಯ ತೃಪ್ತಿಯ ಭ್ರಾಂತಿಯನ್ನು ಈಯುವುದು !

## ಸ್ತ್ರೀದ್ವೇಷ, ಪುರುಷ ದ್ವೇಷದ ಉಗಮ.

ಕನಸುಗಳ ಈ ಲಕ್ಷಣವು ನಮ್ಮ ಎಚ್ಚರದ ಬಾಳಿನಲ್ಲಿಯೂ ಕಂಡುಬರುತ್ತದೆ. ಭಾವನಾಮಯವಾದ ವಿಚಾರಗಳಿಂದ ಆತ್ಮ ವಂಚನೆ ಮಾಡಿಕೊಳ್ಳುವದರಲ್ಲಿ ಜನ ಸಾಮಾನ್ಯರಿಗೆ ವಿಶೇಷ ಪ್ರೀತಿ. ನಮ್ಮ ನಾಲ್ಕನೆಯ ಇಲ್ಲವೆ ಐದನೆಯ ವರ್ಷದ ವಯಸ್ಸಿನಲ್ಲಿ ರೂಪಗೊಂಡ ಬಾಳಿನ ಮಾದರಿಗಳ ದಾರಿಗುಂಟ ತೇಲುತ್ತ ಹೋಗುವುದರ ಕಡೆಗೇ ತುಂಬಾ ನಮ್ಮ ಒಲವು. ಹೀಗೆ ಮಾಡಲು ಯಾವಾಗಲೂ ನಾವೇ ನಮ್ಮ ಮನವೊಲಿಸಿಕೊಳ್ಳುತ್ತಿರುತ್ತೇವೆ ! ಮೇಲೆ ಹೇಳಿದಂತೆ ಪ್ರತಿಯೊಂದು ವ್ಯಕ್ತಿಯ ಬಾಳಿನ ಮಾದರಿಯು ಬಾಲ್ಯದಲ್ಲಿ ನಾಲ್ಕೈದು ವರ್ಷ ವಯಸ್ಸಿಗೇ ರೂಪಗೊಳ್ಳುವದಷ್ಟೇ. ಆದುದರಿಂದ ಆಗಿನ ಅವಸ್ಥೆಯಲ್ಲಿ ಮಗುವಿನ ಮನಸ್ಸಿನ ಮೇಲೆ ಆಗತಕ್ಕಂಥ ಪರಿಣಾಮಗಳನ್ನೂ ಸಂಸ್ಕಾರಗಳನ್ನೂ ನಾವು ಪರಿಶೀಲಿಸ ಬೇಕಾಗುವದು. ಅಂದಿನ ಇಂತಹ ಪರಿಣಾಮಗಳು ಬಹಳೇ ವಿವಿಧವಾಗಿರಬಹುದು. ನಮ್ಮ ಸಾಮಾನ್ಯ ಪ್ರೌಢದೃಷ್ಟಿಯಿಂದ ಕಲ್ಪಿಸಿದ್ದಕ್ಕಿಂತ ಹೆಚ್ಚು ವಿವಿಧವಾಗಿರ ಬಹುದು. ಶಿಶುವಿನ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಮೂಡುವ ಸರ್ವ ಸಾಧಾರಣವಾದ ಸಂಗತಿಗಳಲ್ಲಿ ಅತ್ಯಂತ ಸಾಮಾನ್ಯವಾದುದೆಂದರೆ, ತಾಯಿತಂದೆಗಳ ಮಿತಿಮೀರಿದ ದಂಡನೆ ದೂಷಣೆಗಳಿಂದ ಒದಗುವ ಭಾವನೆಗಳನ್ನು ಬಚ್ಚಿಡುವುದು. ತಂದೆತಾಯಿಗಳ ಈ ಬಗೆಯ ಕಾಟದಿಂದ ಪಾರಾಗಲೂ ಮಗುವು ಅವರೆದುರು ಸುಮ್ಮನೆ ಇದ್ದಂತೆ ತೋರಿಸಿಕೊಳ್ಳಲು ಹವಣಿಸುತ್ತದೆ. ಮತ್ತು ಹೀಗೆ ಹತ್ತಿಕ್ಕಿದ ಮನೋಭಾವಗಳನ್ನು ಎಲ್ಲಿಯಾದರೂ ಒಂದೆಡೆಯಲ್ಲಿ ಬಿಚ್ಚಲು ಹವಣಿಸುತ್ತದೆ. ಇದರ ಪರಿಣಾಮವಾಗಿಯೇ ಕೆಲವೊಮ್ಮೆ ಏಕಾಂತ ಪ್ರೀತಿಯು ಅವರಲ್ಲಿ ತಲೆ ದೋರುವುದು. ಕೆಲವು ಹುಡುಗಿಯರು ಉಗ್ರ ಮನೋವೃತ್ತಿಯ ತಂದೆಗಳ

ಸಾನ್ನಿಧ್ಯದ ಪರಿಣಾಮವಾಗಿ, (ಗಂಡಸರೆಲ್ಲರೂ ಉಗ್ರ ಮನೋವೃತ್ತಿಯವರಿರಬಹುದೆಂಬ ಭಾವನೆಯಿಂದ) ಅವರಿಂದ ದೂರವಾಗಿ ಇರಬೇಕೆಂಬ ಪ್ರವೃತ್ತಿಯುಳ್ಳ ಬಾಳಿನ ಮಾದರಿಗಳನ್ನು ಉಂಟುಮಾಡಿಕೊಳ್ಳುತ್ತಾರೆ. ಅಥವಾ, ಕಠೋರ ವೃತ್ತಿಯ ತಾಯಂದಿರಿಂದ ಆನಂಪಕ್ಕೆ ಎರವಾದ ಹುಡುಗರು ಹೆಂಗಸರಿಂದಲೇ ದೂರ ಉಳಿಯುವ ಪ್ರವೃತ್ತಿಯನ್ನು ಬೆಳಸಿಕೊಳ್ಳುವದುಂಟು. ಈ ದೂರ ಸರಿಯುವ ಏಕಾಂತ ಪ್ರಿಯ ಪ್ರವೃತ್ತಿಯು ಹಲವು ವಿಧವಾಗಿ ವ್ಯಕ್ತವಾಗುವುದು. ಉದಾಹರಣಾರ್ಥವಾಗಿ, ಮಗುವು ತುಂಬ ನಾಚುಬರುಕವಾಗಬಹುದು. ಇಲ್ಲವೇ, ಸೃಷ್ಟಿಕ್ರಮಕ್ಕೆ ವಿರುದ್ಧವಾದ ಲೈಂಗಿಕ ವಿಕೃತಿಯನ್ನು ಕೂಡ ಹೊಂದಬಹುದು. (ಹೆಂಗಸರ ಮೇಲೆ ಸೇಡು ತೀರಿಸಿಕೊಳ್ಳಲು ಇದೊಂದು ಅಡ್ಡದಾರಿ.) ಇಂತಹ ವಿಕೃತಿಗಳು ಬಳಿಯಿಂದ ಬಂದವಂಥವಲ್ಲ. ಮಗುವಿನ ಮಾರ್ಪಡುವ ವಯಸ್ಸಿನಲ್ಲಿ ಸುತ್ತಲಿರುವ ಪರಿಸ್ಥಿತಿಯಿಂದಲೇ ತಲೆದೋರಿದಂತಹವು.

ಹೀಗೆ ಶಿಶುವಿನ ಮೊದಲಿನ ತಪ್ಪುಗಳು ನಿಜವಾಗಿಯೂ ಬಹಳೇ ದೂರದವರೆಗೆ ಪರಿಣಾಮ ಮಾಡುವಂತಹವುಗಳಾಗಿವೆ. ಇವುಗಳ ಪರಿಣಾಮವಾಗಿ ಮುಂದಿನ ಬಾಳುವೆಯ ದಿಕ್ಕೇ ಬದಲಾಗಬಹುದು. ವಸ್ತುಸ್ಥಿತಿಯು ಹೀಗಿದ್ದರೂ ಜನಗಳು ತಮ್ಮ ಮಕ್ಕಳ ಜೀವನವನ್ನು ಕುರಿತು ದಿನಾಲು ಏನಾದರೂ ವಿಚಾರ ಮಾಡುವರೆ ? ಮಗುವಿನ ಬಾಳನ್ನು ಸರಿಯಾದ ದಾರಿಗಾಣಿಸಲು ಸ್ವಲ್ಪವಾದರೂ ಪರಿಶ್ರಮಪಡುವರೆ ? ಮಕ್ಕಳ ಮನಸ್ಸಿನ ಒಲವುಗಳನ್ನು ಅದು ಇರುವ ಮತ್ತು ಬೆಳೆವ ಬಗೆಯನ್ನೂ ಅರಿತ ತಂದೆತಾಯಿಗಳೆಷ್ಟು ? ತಮ್ಮ ಇಲ್ಲವೆ ಮಕ್ಕಳ ಅನುಭವಗಳನ್ನು ಪುನರಾಲೋಚಿಸಿ ಅದರ ಪರಿಣಾಮಗಳನ್ನು ತಿಳಿದುಕೊಳ್ಳಲಿಕ್ಕಾಗಲಿ ತಿಳಿಸಿ ಹೇಳಲಿಕ್ಕಾಗಲಿ ಸಮರ್ಥರಾದ ಹಿರಿಯರು-ತಾಯಿತಂದೆಗಳೆಷ್ಟು ? ಹೀಗಿರುವದರಿಂದ ಮಗುವು ಪ್ರವಾಹ ಪತಿತ ಕಟ್ಟಿಗೆಯ ತುಂಡಿನಂತೆ ತನ್ನದೇ ದಾರಿಯಲ್ಲಿ ಮುಂದರಿಯಬೇಕಾಗುತ್ತದೆ.

## ಅಣ್ಣನು ಎಬಡನೇಕೆ ? ಹೆಣ್ಣು ಪುಕ್ಕ ಏಕೆ ?

ಸೋಜಿಗದ ಸಂಗತಿಯೇನೆಂದರೆ ಯಾವುದೇ ಎರಡು ಮಕ್ಕಳು ಒಂದೇ ಕುಟುಂಬದಲ್ಲಿ ಹುಟ್ಟಿದರೂ, ಒಂದೇ ಸನ್ನಿವೇಶದಲ್ಲಿ ಬೆಳೆಯುವದಿಲ್ಲ. ಒಂದೇ ಕುಟುಂಬದಲ್ಲಿ ಕೂಡ, ಪ್ರತಿಯೊಂದು ಶಿಶುವಿನ ಸುತ್ತಲೂ ಇರುವ ವಾತಾವರಣವು ಬೇರೆಯಾಗಿರುತ್ತದೆ. ಹೀಗೆ ಮೊದಲಿನ ಶಿಶುವಿನ ಸನ್ನಿವೇಶಗಳ ಪರಿಘವು ಮುಂದೆ

ಹುಟ್ಟುವ ಇತರ ಮಕ್ಕಳ ಪರಿಸ್ಥಿತಿಯಿಂದ ತೀರಭಿನ್ನವಾಗಿರುತ್ತದೆ. ವಿಷಮ ಪರಿಣಾಮ ಮಾಡುವಷ್ಟು ಬೇರೆಯಾಗಿರುತ್ತದೆ. ಮೊದಲನೆಯ ಶಿಶುವು ಆರಂಭ ದಲ್ಲಿ ಒಬ್ಬೊಂಟಿಗವಾಗಿರುತ್ತದೆ. ಆದ್ದರಿಂದ ಅದು ಕುಟುಂಬದ ಎಲ್ಲ ಜನಗಳ ಆಸಕ್ತಿ ಆಕರ್ಷಣಗಳ ಕೇಂದ್ರ ಬಿಂದುವಾಗುತ್ತದೆ. ಅಳ್ತಿ (ಅಚ್ಚೆ)ಯಿಂದ ಬೆಳೆಯು ತ್ತದೆ. ಆದರೆ ಒಮ್ಮೆ ಎರಡನೇ ಶಿಶುವು ಹುಟ್ಟಿದೊಡನೆಯೆ ಮೊದಲನೆಯದರ ಅಳ್ತಿ ಅಕ್ಕರವು ಕಡಿಮೆಯಾಗುವುದು. ಎಲ್ಲರೂ ಅದನ್ನು ದುರ್ಲಕ್ಷಿಸುವರು. ಇಂತಹ ಸ್ಥಿತ್ಯಂತರವು ಆ ಮಗುವಿಗೆ ಸ್ವಲ್ಪವೂ ಸೇರುವುದಿಲ್ಲ. ಇಷ್ಟೇ ಅಲ್ಲ, ತಾನು ಒಮ್ಮೆ ಅಧಿಕಾರಸ್ಥಾನದಲ್ಲಿದ್ದು ಆಕರ್ಷಣ ಆಸಕ್ತಿಗಳ ಕೇಂದ್ರವಾಗಿದ್ದು ಈಗ ತನ್ನನ್ನು ಯಾರೂ ಕೇಳುವುದಿಲ್ಲವೆಂಬುದನ್ನು ನೋಡಿ ಆ ಮಗುವು ಒಳ ಗೊಳಗೇ ಸಿಡಿಮಿಡಿಗೊಳ್ಳುವುದು, ಮನಸಿನ ಮೇಲೆ ತುಂಬ ಪರಿಣಾಮ ಮಾಡಿ ಕೊಳ್ಳುವುದು. ಖೇದದ ಭಾವನೆಯು–ದುರಂತದ ಈ ಎಣಿಕೆಯು ಆತನಲ್ಲಿ ರೂಪ ಗೊಳ್ಳುತ್ತಿರುವ ಬಾಳಿನ ಮಾದರಿಯ ಮೇಲೆ ಪರಿಣಾಮ ಮಾಡುತ್ತದೆ. ಮತ್ತು ಮುಂದೆ ಪ್ರೌಢ ವಯಸ್ಸಿನಲ್ಲಿ ಆ ಪರಿಣಾಮವು ಚೆನ್ನಾಗಿ ಮೇಲೆದ್ದು ಬರುತ್ತದೆ. ಒಳಗೊಳಗೇ ಉರಿದು ಕಸಿವಿಸಿಪಟ್ಟು ಮನಸ್ಸಿನ ಹದಗೆಡಿಸಿಕೊಂಡ ಈ ಬಗೆಯ ಹಿರಿಯ ಮಕ್ಕಳು ದೊಡ್ಡವರಾದ ಮೇಲೆ ತಮ್ಮ ಜೀವನದಲ್ಲಿ ಅಪಯಶಸ್ವಿಗಳೂ, ನಿರ್ಭಾಗ್ಯರೂ ಆದುದು ಕಂಡು ಬರುತ್ತದೆ.

ಇದರಂತೆಯೇ ಹುಡುಗ ಮತ್ತು ಹುಡುಗಿಯನ್ನು ನಡಸಿಕೊಂಬಲ್ಲಿ ತಂದೆ ತಾಯಿ ಗಳು ತೋರುವ ತಾರತಮ್ಯ–ವಿಷಮತೆಯ ದುಷ್ಪರಿಣಾಮಗಳೂ ಹೆಣ್ಣು ಮಕ್ಕಳ ಮನಸ್ಸಿನ ಮೇಲೆ ಬಹಳ ವಿಪರೀತವಾಗುತ್ತವೆ. ಹುಡುಗರಿಗೆ ಅಟ್ಟಕ್ಕೆ ಏರಿಸುವುದು. ಬೇಡಿದ ಅನುಕೂಲ ಕೊಡುವುದು; ಮತ್ತು ಹುಡುಗಿಯರಿಗೆ ಏನೊಂದನ್ನೂ ಕೊಡುವಂತಿಲ್ಲ. ಹೆಣ್ಣು ಹುಟ್ಟಿದ್ದು ಒಂದು ಹುಣ್ಣು ಹುಟ್ಟಿದ ಹಾಗೆ ಎಂದು ಅವರನ್ನು ನಡೆಸಿಕೊಳ್ಳುವುದು ! ಆದುದರಿಂದ ಹುಡುಗಿಯರು ಯಾವಾಗಲೂ ಅಳ್ಳೆದೆಯರೂ ಹಿಂಜರಿಯುವಂತವರೂ ಸಂದಿಗ್ಧ, ಸಾಶಂಕ ವೃತ್ತಿಯವರಾಗಿ ಆಗುವರು. ಮುಂದಿನ ಜೀವನದಲ್ಲೆಲ್ಲ ಅವರು ಮಿತಿಮೀರಿದ ಸಂಕೋಚ ವೃತ್ತಿ ಯವರಾಗಿ ಯಾವಾಗಲೂ ಮುದುಡಿಕೊಂಡೇ ಇರುವರು. ಆತ್ಮ ವಿಶ್ವಾಸವೆಲ್ಲ ನಷ್ಟವಾಗಿ ಪುಕ್ಕರು ಭೀರುಗಳಾಗುವರು. ಗಂಡಸರೇ ನಿಜವಾಗಿಯೂ ಎಲ್ಲವನ್ನು ಸಾಧಿಸಲು ಸಮರ್ಥರಿರುವರೆಂಬ ಮನೋಭಾವದಲ್ಲಿಯೇ ಅವರು ಉಳಿಯುವರು.

ಎರಡನೆಯ ಮಗುವಿನ ಪರಿಸ್ಥಿತಿಯು ಮೊದಲನೆಯದಕ್ಕಿಂತ ತೀರ ಬೇರೆ ಯಾಗಿರುತ್ತದೆ. ಏಕೆಂದರೆ ಈತನಿಗೆ ಆರಂಭದಿಂದಲೂ ಒಂದು ಸ್ಪರ್ಧೆಯಲ್ಲಿ

ನಿಲ್ಲಬೇಕಾಗುತ್ತದೆ. ಇವನಿಗೆ ಹಿಂದಿಕ್ಕಿ ತಾನು ಮುಂದುವರಿಯಲು ಹವಣಿಸುವ, ಹೆಣಗುವ ಅಣ್ಣನು ಇವನ ಪ್ರತಿ ಸ್ಪರ್ಧಿಯಾಗಿ ಯಾವಾಗಲೂ ಸಿದ್ಧನಿರುತ್ತಾನೆ. ವಾಡಿಕೆಯಾಗಿ, ಎರಡನೆಯ ಮಗುವು ಹಿರಿಯವನನ್ನು ಸ್ಪರ್ಧೆಯಲ್ಲಿ ಮೀರುತ್ತಾನೆ. ಇದರ ಕಾರಣವೇನೆಂದರೆ, ತನ್ನ ಬೆನ್ನಲಿ ಬಂದವನೊಬ್ಬನು (ತಮ್ಮನು) ತನ್ನೊಡನೆ ಸ್ಪರ್ಧೆಗೆ ನಿಂತು ಸರಿಗಟ್ಟಲು ಅಣಿಯಾಗಿರುವನೆಂಬ ನೆನಹು ಮೊದಲನೆಯ ಮಗುವನ್ನು (ಅಣ್ಣನನ್ನು) ಸದಾ ಬಾಧಿಸುತ್ತದೆ: ನೋಯಿಸುತ್ತಿರುತ್ತದೆ. ಈ ನೋವೇ ಅಣ್ಣನ ಸ್ಥಾನಮಾನಗಳಿಗೆ ಅಡಿಗಡಿಗೆ ಪೆಟ್ಟು ತಗಲುವಂತೆ ಪರಿಣಾಮ ಮಾಡುತ್ತದೆ. ತಮ್ಮನಿಂದಾಗುವ ಎಡೆಬಿಡದ ಸ್ಪರ್ಧೆಯಿಂದ ಅಣ್ಣನು ತಲ್ಲಣಿಸಿ ಎದೆಗುಂದಿ ಕುಂಗೆಡುವನು. ಈತನ ಅಭಿಮಾನವು ಮುಕ್ಕಾಗುವುದು. ಗೆಲುವಿಗೆ ಬೇಕಾದ ಆತ್ಮ ವಿಶ್ವಾಸ ಹುಮ್ಮಸಗಳು ಕಡಿಮೆಯಾಗುತ್ತವೆ. ಇದರಿಂದ ತಂದೆ ತಾಯಿಗಳ ಪ್ರಶಂಸಾ ದೃಷ್ಟಿಯಲ್ಲಿ ಈತನು ಹೆಚ್ಚು ಹೆಚ್ಚು ಕೆಳಗಿಳಿಯುತ್ತಾನೆ. ಕೊನೆಗೆ ಎರಡನೆಯ ಮಗುವನ್ನೆ ಅವರು ಹೆಚ್ಚು ಕೌತುಕ ಪುರಸ್ಕಾರಗಳಿಂದ ನೋಡಲು ಆರಂಭಿಸುತ್ತಾರೆ. ಇನ್ನು ಇದಕ್ಕೆ ವಿರುದ್ಧವಾಗಿ, ಎರಡನೆಯ ಮಗುವು ಯಾವಾಗಲೂ ತನ್ನ ಅಣ್ಣನ ಪ್ರತಿ ಸ್ಪರ್ಧೆಗೆ ಎದುರಾಗಿ ಜೂಜಿನಲ್ಲಿಯೇ ಇರ ಬೇಕಾಗುತ್ತದೆ. ಅದರಿಂದ ತಮ್ಮನ ನಡೆನುಡಿಗಳಲ್ಲಿ ಸ್ಪರ್ಧೆ, ಜೂಜುಗಾರಿಕೆಯ ಗುಣ-ಲಕ್ಷಣಗಳು ಹುದುಗಿಕೊಂಡಿರುವದನ್ನು ಕಂಡುಕೊಳ್ಳಬಹುದು. ತಮ್ಮನು ಯಾವಾಗಲೂ ಬಂಡುಗಾರನು. ಸ್ಥಾಪಿತ ಸತ್ತೆಯನ್ನೂ, ಪ್ರತಿಷ್ಠಿತ ಅಧಿಕಾರವನ್ನೂ ಆತನು ಗಮನಿಸತಕ್ಕವನಲ್ಲ. ತನ್ನ ಕದುರೆಯನ್ನೇ ಮೆಲ್ಲನೆ ಮುಂದೂಡುವದಕ್ಕಾಗಿ ತಳಮಳಿಸುತ್ತಿರುವನು.

ಐತಿಹಾಸಿಕ ಚರಿತ್ರೆಗಳೂ ಪೌರಾಣಿಕ ಕಥೆಗಳೂ ಇಂಥ ಪ್ರಬಲರೂ ಪ್ರಭಾವಿಗಳೂ ಆದ ಕಿರಿಯ ಮಕ್ಕಳ-ಎಲ್ಲರಿಗಿಂತಲೂ ಕಿರಿಯ ತಮ್ಮಂದಿರ ವಿರಾಟ, ಹೆಗ್ಗಳಿಕೆ, ವೈಭವಗಳ ವರ್ಣನೆಯನ್ನೇ ಮಾಡುತ್ತಿವೆ. ಹಾಗೆಯೇ ಮಕ್ಕಳ ಪ್ರೀತಿಯ ಎಲ್ಲ ಅಡಗಲಜ್ಜಿಯ ಕತೆಗಳಲ್ಲಿ, ಅದ್ಭುತ ರಮ್ಯವಾದ ಮಾಟದ ಕತೆಗಳಲ್ಲಿ ಎಲ್ಲರಿಗಿಂತ ಎಳೆಯವನಾದ ಹುಡುಗನೇ ನಾಯಕನ ಭೂಮಿಕೆಯನ್ನು ವಹಿಸುವದು ಕಂಡು ಬರುತ್ತದೆ. ವೃಕ್ಷದ ಗುಣಗಳು ಮೊಳಕೆಯಲ್ಲಿರಲೇ ಬೇಕಲ್ಲವೇ ? ಇಂತಹ ಲಕ್ಷಣ ಗಳು ನಿಜವಾಗಿಯೂ ಬಾಲ್ಯದಾರಂಭದಲ್ಲಿಯೇ ಉಗಮ ಹೊಂದುತ್ತವೆ; ಮತ್ತು ಆ ವ್ಯಕ್ತಿಯ ಕುರಿತು ಒಳನೋಟದಿಂದ ನಿರೀಕ್ಷಿಸಿದ ಹೊರತು, ಆತನ ವ್ಯಕ್ತಿತ್ವದ ಅಂತಸ್ಥ ಪ್ರವೃತ್ತಿಯನ್ನು ಪರೀಕ್ಷಿಸಿದ ಹೊರತು ಆ ಲಕ್ಷಣಗಳನ್ನು ಬೇರ್ಪಡಿಸ ಲಾಗುವದಿಲ್ಲ. ಅಡ್ಡ ದಾರಿಗೆ ಬಿದ್ದ ಒಂದು ವ್ಯಕ್ತಿಯನ್ನು ಆತನ ಸಾಮಾಜಿಕ ಸನ್ನಿವೇಶ ಸಂಬಂಧಗಳೊಂದಿಗೆ ಮತ್ತೆ ಸರಿಪಡಿಸಿ ಹೊಂದಿಸಬೇಕಾದರೆ, ಆತನ

ವ್ಯಕ್ತಿತ್ವದಲ್ಲಿ ಬೆಳೆದ ಅಂಕು ಡೊಂಕುಗಳನ್ನು ಹೋಗಲಾಡಿಸಬೇಕಾದರೆ ಆತನ ಚಿಕ್ಕಂದಿನಲ್ಲಿಯ ವಿಶಿಷ್ಟ ಘಟನೆಗಳನ್ನು ಆತನು ನೆನೆದುಕೊಂಡು ತಿಳಿದುಕೊಳ್ಳುವಂತೆ ಮಾಡಬೇಕಾಗುತ್ತದೆ. ಆತನ ಈ ವರೆಗಿನ ಜೀವನದಲ್ಲಿಯ ಎಲ್ಲ ಸನ್ನಿವೇಶಗಳ ಮೇಲೆಯೂ, ಆತನು ಅಂದು ಚಿಕ್ಕಂದಿನಲ್ಲಿ ರೂಪಗೊಳಿಸಿಕೊಂಡ ಬಾಳಿನ ಮಾದರಿಯೇ ತನ್ನ ಪ್ರಭಾವವನ್ನು ಬೀರಿದೆ. ಇದುವರೆಗೆ ತನ್ನನ್ನು ತಪ್ಪು ದಾರಿಗೆ ಹತ್ತಿದವನೆಂದು ಹೆಸರು ತಂದುದು ಅಂದಿನ ಆ ಆದರ್ಶದ ಬಾಳಿನ ಮಾದರಿಯೇ ಎಂದು ಆತನಿಗೆ ತೋರಿಸಿ ಕೊಡಬೇಕಾಗುತ್ತದೆ.

## ಹಳೇ ನೆನಹುಗಳ ಅಭ್ಯಾಸ.

ಹೀಗೆ ಒರ್ವನ ಬಾಳ-ಮಾದರಿಯನ್ನೂ ಅದರಿಂದ ಎರಕ ಹೊಯ್ದಂಥ ಆತನ ಸ್ವಭಾವ ರಚನೆಯನ್ನೂ ತಿಳಿದುಕೊಳ್ಳುವುದಕ್ಕಾಗಿ ಆ ವ್ಯಕ್ತಿಯ ಹಿಂದಿನ ನೆನಹುಗಳ ಅಭ್ಯಾಸವು ಒಂದು ಬೆಲೆಯುಳ್ಳ ಸಾಧನವಾಗಿದೆ. ನಮ್ಮ ಪೂರ್ವ ಸ್ಮೃತಿಗಳು-ಹಿಂದಿನ ಹಳೇ ಅನುಭವದ ನೆನಹಿನ ತುಣುಕುಗಳು; ಮಿಣುಕುಗಳು; ಇವುಗಳಿಂದ ನಮ್ಮ ಅಂತಸ್ಥವಾದ ಬಾಳಿನ ಮಾದರಿಯು ಗೊತ್ತಾಗುತ್ತದೆ. ಒಂದು ಉದಾಹರಣೆಯು ಇದನ್ನು ಸ್ಪಷ್ಟ ಮಾಡಬಲ್ಲದು. ಒಂದು ಮಗುವಿನ ಪಚನಶಕ್ತಿ ಹಾಳಾಗಿದೆಯೆಂದು ತಿಳಿಯಿರಿ. ಇಂತಹ ಈ ಮಗುವಿನ ಹಳೆಯ ನೆನಪುಗಳೆಂದರೆ ತಿಂಡಿ ತಿನಸಿನವೇ ಇರುವುದು ಸ್ವಭಾವಿಕವಾಗಿದೆ. ಇಲ್ಲವೇ ಒಂದು ರೊಡ್ಡಗೈಯ (ಎಡಗೈಯೇ ಬಲವಾಗಿದ್ದ) ಮಗುವನ್ನು ತೆಗೆದುಕೊಳ್ಳುವ. ಆತನ ಮುಂದಿನ ಬಾಳಿನ ಮೇಲೆ, ಅವನ ರೊಡ್ಡತನದ ಇರುವಿಕೆಯು ತುಂಬ ಪರಿಣಾಮವಾಗದೆ ಇರದು. ಯಾವನೊಬ್ಬನಿಗೆ ತನ್ನ ಹಳೇ ನೆನಪುಗಳನ್ನು ಹೇಳಲು ಭಿನ್ನವಿಸಿಕೊಂಡರೆ, ಆತನು ತನಗೆ ಬಹಳವಾಗಿ ಮುದ್ದು ಮಾಡಿದ ತಾಯಿಯ ಮಾತೆತ್ತಬಹುದು. ಇಲ್ಲವೇ ತನಗೊಬ್ಬ ತಮ್ಮನು ಹುಟ್ಟಿದ ದಿನದ ನೆನಪು ಹೇಳಬಹುದು. ಆತನಿಗೆ ಉಗ್ರವೃತ್ತಿಯ ತಂದೆಯಿದ್ದುದಾದರೆ, ತಾನು ಚಿಕ್ಕಂದಿನಲ್ಲಿ ಹೇಗೆ ಪೆಟ್ಟು ತಿಂದೆನೆಂಬುದನ್ನು ಆತನು ತಿಳಿಸಬಹುದು. ಇಲ್ಲವೇ ಶಾಲೆಯಲ್ಲಿ ಆತನು ಯಾರಿಗೂ ಬೇಡಾಗಿದ್ದರೆ, ಎಲ್ಲರಿಂದಲೂ ತಿರಸ್ಕರಿಸಲ್ಪಡುತ್ತಿದ್ದನಾದರೆ ತನ್ನ ಮೇಲೆ ಹೇಗೆ ಆಕ್ರಮಣಗಳಾಗುತ್ತಿದ್ದುವೆಂಬುದನ್ನು ಆತನು ಬಣ್ಣಿಸಬಹುದು. ಮನಸಿನ ಆರೋಗ್ಯವನ್ನು ಅರಿತುಕೊಳ್ಳುವುದಕ್ಕೆ ಇವೆಲ್ಲ ಸ್ಮೃತಿಚಿತ್ರಗಳು ಬಹಳೇ ಉಪಯುಕ್ತವಾಗಿವೆ. ಆದರೆ ಅವುಗಳ ಒಳಮರುಳನ್ನು ಪರೀಕ್ಷಿಸುವ ಕಲೆಯನ್ನು ಮಾತ್ರ ನಾವು ಅರಿತುಕೊಳ್ಳಬೇಕು.

ಇಂತಹ ಹಳೇ ನೆನಹುಗಳನ್ನು ಅರಿತುಕೊಳ್ಳುವ ಕಲೆಯು ಕೈಗೂಡಬೇಕಾದರೆ, ಮಿಗಿಲಾದ ಸಹಾನುಭೂತಿಯು ಶಕ್ತಿಯು ಬೇಕು. ಬಾಲ್ಯದ ಸನ್ನಿವೇಶವನ್ನು ಕಲ್ಪಿಸಿಕೊಂಡು ಅದರಲ್ಲಿಯ ಮಗುವಿನೊಂದಿಗೆ ತಾದಾತ್ಮ್ಯ ಹೊಂದಲು ಬರಬೇಕು. ತನ್ನನ್ನು ಮರೆತು ಶಿಶುವಿನ ಕಣ್ಮನಗಳಿಂದ ಪರಿಸ್ಥಿತಿಯನ್ನು ಪರಾಂಬರಿಸಿಕೊಳ್ಳುವ ಶಕ್ತಿಯು ನಿರೀಕ್ಷಕನಿಗೆ ಬೇಕು. ಚಿಕ್ಕಂದು ತಮ್ಮ ಬಾಳಿನಲ್ಲಿ, ಪ್ರತಿಸ್ಪರ್ಧಿ ತಮ್ಮನು ಹುಟ್ಟಿದುದರಿಂದ ಕೆಲವರ ಬಾಳಿನ ದಿಕ್ಕು ಬದಲಾಗಿರುತ್ತದೆ. ಮನೆಯೊಳಗಿನ ಘುಸುಮುಸು, ಕುಸುಕುಸು, ಉರಿಮೋರೆ, ಕಲಹಗಳಿಂದ ಇನ್ನು ಕೆಲವರ ಜೀವನದ ರೀತಿ ಕೆಟ್ಟಿರುತ್ತದೆ. ಉದ್ದಾಮ ವೃತ್ತಿಯ ತಂದೆಯ ವರ್ಚಸ್ಸಿನ ದುಷ್ಪರಿಣಾಮಗಳಿಂದ ಹದಗೆಟ್ಟ ಬಾಳಿನವರು ಕೆಲವರು ಆಗುತ್ತಾರೆ. ಈ ಬಗೆಯಾಗಿ ಬಾಲ್ಯದಲ್ಲಿ ಎಂತಹ ಮಹತ್ವದ ಅರ್ಥ ಅನರ್ಥಗಳು ಉಂಟಾಗಿರುತ್ತವೆಯೆಂಬುದನ್ನು ಆಳವಾಗಿ ತಿಳಿದುಕೊಳ್ಳಲಿಕ್ಕೆ ಇಂಥ ಸಹಾನುಭೂತಿಯೇ ನಮಗೆ ಸಾಧನ.

## ದಂಡನೆಯು ಪ್ರಯೋಜನವಿದೆಯೋ ?

ಈ ಸಂದರ್ಭದಲ್ಲಿಯೇ ಒಂದು ಸಂಗತಿಯನ್ನು ಹೇಳಿಬಿಡುವದು ಅಸಮಂಜಸವಾಗಲಾರದು. ಇಷ್ಟೇ ಅಲ್ಲ, ಅದನ್ನು ಒತ್ತಿ ಹೇಳಿದಷ್ಟು ಕಡಿಮೆಯೇ. ಅದೇನೆಂದರೆ, ಮಕ್ಕಳನ್ನು ತಿದ್ದುವುದಕ್ಕಾಗಿ ಅವನ್ನು ಥಳಿಸಿ-ಥಳಿಸಿ, ಇಲ್ಲವೇ ಛೀ ಹಾಕಿ, ಮತ್ತು ಉದ್ದುದ್ದ ಉಪದೇಶದ ರಗಳೆಗಳನ್ನು ಕೇಳಿಸಿ ಏನೊಂದೂ ಪ್ರಯೋಜನವಿಲ್ಲ. ಮಗುವಾಗಲೀ, ಪ್ರೌಢರಾಗಲಿ, ಅವರು ಮಾಡಿದ ಅಥವಾ ಮಾಡುತ್ತಿರುವ ತಪ್ಪುಗಳನ್ನು ಹೇಗೆ ತಿದ್ದಬೇಕೆಂಬುದು ಗೊತ್ತಾಗದಿದ್ದರೆ ಏನೊಂದೂ ಪ್ರಯೋಜನವಿಲ್ಲ. ಮಗುವಿಗೆ ಅದು ತಾನು ಮಾಡಿದ ಅಥವಾ ಮಾಡುವ ತಪ್ಪಿನ ಮೂಲವು, ತಪ್ಪಿನ ರೀತಿಯು ಅದಕ್ಕೆ ಗೊತ್ತಾಗದೆ ಇದ್ದಾಗ ನಾವು ಮಾಡುವ ದಂಡನೆ-ವಿಡಂಬನೆಗಳ ಮೂಲಕ ಅದು ಠಕ್ಕುತನ, ಪುಕ್ಕತನಗಳನ್ನು ಮಾತ್ರ ಬೆಳಿಸಿಕೊಳ್ಳಬಹುದು. ಸುಮ್ಮನೆ ಹೊಡೆಬಡೆಯುವುದರಿಂದ ಅವರ ಬಾಳಿನ ಮಾದರಿಯನ್ನು ಹಾಗೆ ಬೇರ್ಪಡಿಸಲಿಕ್ಕಾಗಲಾರದು. ಅನುಭವದಿಂದ ಬುದ್ಧಿ ಬರಲಿಯೆಂದು ಅಪೇಕ್ಷಿಸಿ ಸುಮ್ಮನೆ ಕಾಲಹರಣ ಮಾಡಿಯೂ ಲಾಭವಿಲ್ಲ. ಬಾಳ-ಮಾದರಿಯು, ಕೇವಲ ಬರಲಿರುವ ಅನುಭವದಿಂದ ಬದಲಾಗುವುದಿಲ್ಲ. ಏಕೆಂದರೆ ಈ ಅನುಭವಗಳಿಂದ ಬುದ್ಧಿಗಲಿತು ತನ್ನ ಬಾಳ-ಮಾದರಿಯನ್ನು ಮಾರ್ಪಡಿಸಿಕೊಂಬ ಶಕ್ತಿಯು ಈ ಎಳೆವಯಸ್ಸಿನಲ್ಲಿ ಅದಕ್ಕೆ ಇರುವುದಿಲ್ಲ. ಅದರಿಂದ ವ್ಯಕ್ತಿತ್ವದಲ್ಲಿ ತಿದ್ದುಪಡಿಯಾಗುವುದಿಲ್ಲ. ವ್ಯಕ್ತಿತ್ವದ ತಳಹದಿಯನ್ನೇ ಮುಟ್ಟಿದರೆ ಮಾತ್ರ,

ನಾವು ಮಗುವಿನ ಜೀವನದಲ್ಲಿ ಅವಶ್ಯಕವಾದ ಸ್ಥಿತ್ಯಂತರ-ಸುಧಾರಣೆಗಳನ್ನು ಸಾಧಿಸಬಹುದು.

ಅಡ್ಡಹಾದಿಯಲ್ಲಿ ಬೆಳವಣಿಗೆ ಹೊಂದಿದ ಮಕ್ಕಳುಳ್ಳ ಒಂದು ಕುಟುಂಬವನ್ನು ತಕ್ಕೊಳ್ಳುವ. ಅಲ್ಲಿಯ ಮಕ್ಕಳು ತಿಳುವಳಿಕೆಯುಳ್ಳವರೂ ಬುದ್ಧಿವಂತರೂ ಎಂದು ಹೊರಗೆ ತೋರಿದರೂ, (ನಾವು ಕೇಳಿದ ಕೆಲವು ಪ್ರಶ್ನೆಗಳಿಗೆ ಸರಿಯಾದ ಉತ್ತರ ಗಳನ್ನು ಅವರು ಕೊಡಬಲ್ಲರೆಂದು ಕಂಡರೂ) ಅವರ ನಡೆ ನುಡಿಯಲ್ಲಿ ಒಡ ಮೂಡುವ ಕೆಲಸಂಗತಿಗಳನ್ನು ನಿರೀಕ್ಷಿಸಿದಾಗ, ಅವರೆಲ್ಲರಲ್ಲೂ ಒಂದು ಘನವಾದ ನ್ಯೂನತೆಯು ಉಳಿದುಕೊಂಡಿದೆಯೆಂದು ನಮ್ಮ ಲಕ್ಷ್ಯದಲ್ಲಿ ಬರುವುದು. ಬುದ್ಧಿ ವಂತಿಕೆಯೆಂದರೆ, ಯಾವಾಗಲೂ ವ್ಯವಹಾರಜ್ಞಾನವೇ ಅಲ್ಲ. ಇತಿಹಾಸ, ಗಣಿತ ಇಂತಹ ವಿಷಯಗಳಲ್ಲಿ ಅವರು ಸ್ವಲ್ಪ ತಿಳಿದವರಾಗಿ ಉತ್ತರಕೊಡಬಹುದು. ಆದರೂ ಇಂತಹ ಮಕ್ಕಳಿಗೆ ಕೆಲವೊಂದು ಮಾನಸಿಕ ಕುಂದುಕೊರತೆಗಳು ಇದ್ದುದು ಕಂಡುಬರುವುದು. ಇವರು ವಿಶಿಷ್ಟ ಮಾನಸಿಕ ವಿಕೃತಿಗಳಿಂದ ಬಳಲುವುದು ಕಂಡು ಬರುತ್ತವೆ. ಒಂದು ತರದ ಮನೋವಿಕೃತಿಯುಳ್ಳ ರೋಗಿಯು ಕೆಲಸಾರೆ ಯಾವಾಗಲೂ ಮನೆಗಳ ಬೆಳಕಂಡಿಗಳನ್ನು ಎಣಿಸುವಂತಹ ಒಂದು ನಿರುಪಯುಕ್ತ ಕೆಲಸದಲ್ಲಿ ತನ್ನ ಆಸಕ್ತಿಯನ್ನು ತೋರಿಸುತ್ತಿರುತ್ತಾನೆ. ಈ ಎಣಿಕೆಯು ತೀರ ವ್ಯರ್ಥವೆಂಬುದು ಆತನಿಗೆ ಗೊತ್ತು. ಆದರೂ ಆತನ ವಿಕೃತ ವೃತ್ತಿಯು ಅಂಥ ಚಟುವಟಿಕೆಗೆ ಆತನನ್ನು ಒತ್ತಾಯಪಡಿಸುತ್ತದೆ. ಉಪಯೋಗವುಳ್ಳ ಸಂಗತಿಗಳಲ್ಲಿ ಆಸಕ್ತಿ ಇದ್ದವರಾರೂ ಈ ಬಗೆಯಾಗಿ ನಡೆಯಲಿಕ್ಕಿಲ್ಲ. ಇಂಥ ಸ್ವಗತವಾದ- ತೀರ ತನ್ನದೇ ಆದ-ತಿಳುವಳಿಕೆಯೂ ಅಂತಹದೇ ಮಾತುಗಾರಿಕೆಯೂ ಮರುಳರ ಲಕ್ಷಣಗಳು. ವ್ಯಾವಹಾರಿಕ ವಿವೇಕಕ್ಕೆ ಒಪ್ಪುವ, ಸಮಂಜಸ ಅರ್ಥ ಬೋಧವಿದ್ದ ನುಡಿಯಲ್ಲಿ ಮರುಳನು ಎಂದೂ ಮಾತಾಡುವದಿಲ್ಲ. ಏಕೆಂದರೆ ಆತನಿಗೆ ಸಾಮಾಜಿಕ ವ್ಯಾವಹಾರಿಕ ಆಸಕ್ತಿಯು ಸ್ವಲ್ಪವೂ ಇರುವದಿಲ್ಲ. ಸಮಂಜಸತನಕ್ಕೆ ಒಪ್ಪುವ ಭಾಷೆಯು, ಸಾಮಾಜಿಕ ಆಸಕ್ತಿಯ ಹೆಗ್ಗುರುತು.

ವ್ಯಾವಹಾರಿಕ ವಿವೇಕದ ನಿರ್ಣಯವನ್ನು ಸ್ವಗತವಾದ ವೈಯಕ್ತಿಕ ನಿರ್ಣಯ ದೊಡನೆ ಹೋಲಿಸಿ ನೋಡಿದರೆ ವಿವೇಕದ ನಿರ್ಣಯವೇ ಬಹುಶಃ ಹೆಚ್ಚು ಸರಿಯಾದುದಾಗಿರುತ್ತದೆ. ಸಾಮಾನ್ಯ ವಿವೇಕದಿಂದ ನಾವು ಒಳಿತು ಕೆಡಕುಗಳನ್ನು ಅರಿತುಕೊಳ್ಳುವೆವು. ತೊಡಕಿನ ಪ್ರಸಂಗಗಳಲ್ಲಿ ನಾವು ಹಲವು ಬಾರಿ ಎಡಹಿದರೂ ನಮ್ಮ ತಪ್ಪುಗಳನ್ನು ವಿವೇಕ ಶಕ್ತಿಯ ಬಲದಿಂದ ನಮ್ಮಷ್ಟಕ್ಕೆ ನಾವೇ ಸರಿ ಪಡಿಸಿಕೊಳ್ಳುತ್ತೇವೆ. ಆದರೆ ಯಾರು ಯಾವಾಗಲೂ ಕೇವಲ ತಮ್ಮಲ್ಲಿಯೇ

ಹೆಚ್ಚು ಆಸಕ್ತರೋ ಅವರಿಗೆ ತಮ್ಮ ಹಿತ ಸಂಬಂಧಗಳನ್ನೇ ವಿಶೇಷವಾಗಿ ಭೇದ ಮಾಡಲು ಬರುವುದಿಲ್ಲ. ಅವರು ತಮ್ಮ ನಡತೆಯಲ್ಲಿ ಇರುವ ಕುಂದು ಕೊರತೆಗಳನ್ನು ವಿಮರ್ಶಿಸಿ ಬೇರ್ಪಡಿಸಿ ತಿಳಿದುಕೊಳ್ಳಲು ಅಸಮರ್ಥರಾಗಿರುತ್ತಾರೆ. ಅವರು ತಮ್ಮ ತಪ್ಪುಗಳನ್ನೂ ಒಪ್ಪು ಎಂದೇ ಸಾಧಿಸುವರು.

## ಅಪರಾಧಿಗಳ ಮನೋವೃತ್ತಿ.

ಉದಾಹರಣಾರ್ಥವಾಗಿ, ಅ ಪ ರಾ ಧ ಗ ಳ ಕೃತ್ಯಗಳನ್ನೇ ಪರಿಶೀಲಿಸೋಣ. ಅಪರಾಧಿಯ ಬುದ್ಧಿ ಶಕ್ತಿ, ಪರಿಜ್ಞಾನ ಮತ್ತು ಉದ್ದೇಶಗಳನ್ನು ವಿಮರ್ಶಿಸಿದರೆ, ಅವರು ತಮ್ಮ ಅಪರಾಧದ ಕೃತ್ಯಗಳು ಒಳ್ಳೇ ಕುಶಲ ಮತ್ತು ಸಾಹಸಗಳಿಂದ ಕೂಡಿವೆಯೆಂದೇ ಭಾವಿಸಿ ಹೆಮ್ಮೆ ಪಡುವುದು ಕಂಡುಬರುತ್ತದೆ! ತಾನು ತನ್ನ ಪರಮಾವಧಿಯ ಗುರಿಯನ್ನು ಸಾಧಿಸಿದೆನೆಂದು ಆತನು ನಂಬುವನು; ಪೋಲಿಸರಿಗಿಂತ ಹೆಚ್ಚಿನ ಜಾಣ್ಮೆಯನ್ನು ತಾನು ತೋರಿಸಿದೆನೆಂತಲೂ, ಉಳಿದೆಲ್ಲರಿಗೂ ತಾನು ಸೋಲಿಸಬಲ್ಲೆನೆಂತಲೂ ಆತನು ತಿಳಿಯುವನು. ಹೀಗೆ ಅಪರಾಧಿಯು ತನ್ನ ದೃಷ್ಟಿಯಿಂದ ತಾನು ಒರ್ವ ಮಹಾ ಕರ್ತೃತ್ವಶಾಲಿ, ಒರ್ವ ಮಹಾ ಪುರುಷನೆಂಬಲ್ಲಿಯವರೆಗೂ ಮನೋರಾಜ್ಯವನ್ನು ಕಲ್ಪಿಸಿ ಹಿಗ್ಗಿನಲ್ಲಿರುತ್ತಾನೆ. ಆದ್ದರಿಂದ ವಾಸ್ತವವಾಗಿಯೂ ಶ್ರೇಷ್ಠತೆಯಿಂದ ತೀರ ಭಿನ್ನವಾದ, ಸಾಹಸಿಕತೆಯಿಂದ ತೀರ ದೂರವಿರುವ, ಸಾಮಾಜಿಕ ದೃಷ್ಟಿಯಿಂದ ತೀರ ಕೀಳು ತರಗತಿಯದಾಗಿರುವ, ಹೀನ ಕೆಲಸವನ್ನು ತಾನು ಮಾಡುತ್ತಿರುವೆನೆಂಬ ಅರಿವು ಆತನಿಗೆ ಇರುವುದೇ ಇಲ್ಲ. ತನ್ನ ಸಾಮಾಜಿಕ ದೃಷ್ಟಿಯ ಅಭಾವವು, ಧೈರ್ಯದ ಕೊರತೆಯೊಂದಿಗೆ ಹೊಂದಿಕೊಂಡಿದೆಯೆಂಬುದನ್ನು, ಆತನು ತನ್ನ ಚಟುವಟಿಕೆಗಳನ್ನು (ಕ್ರಿಯಾಶಕ್ತಿಯನ್ನು) ಜೀ ವ ನ ದ ನಿರುಪಯೋಗಿಯಾದ ಬದಿಗೆ ಹೊರಳಿಸಿದ್ದೂ, ತನ್ನ ಮನೋವೃತ್ತಿಯು ಹೇಡಿತನದೊಂದಿಗೆ ಕೂಡಿಕೊಂಡಿದ್ದೂ ಆತನಿಗೆ ಗೊತ್ತಿರುವುದೇ ಇಲ್ಲ! ಜೀವನದ ನಿರುಪಯೋಗಿಯಾದ ಬದಿಯ ಕಡೆಗೆ ತಿರುಗುವವರು ಕತ್ತಲೆಯಲ್ಲಿ ಆಡ್ಡಾಡಲು ಹೆದರುವರು. ಒಬ್ಬೊಂಟಿಗರಾಗಿರುವುದಕ್ಕೆ ಅಂಜುವರು. ಯಾವುದೊಂದು ಗಲಾಟೆಯಲ್ಲಿ ಮನಸನ್ನು ತೊಡಗಿಸುತ್ತ ಯಾವಾಗಲೂ ಇತರರ ಜೊತೆಗೇ ಇರಲು ಅವರು ಬಯಸುವರು. ಇದಕ್ಕೆ ಹೇಡಿತನವೆಂದೇ ಹೆಸರು. ಅಪರಾಧ ಮಾಡುವ ವೃತ್ತಿಯು ಕೇವಲ ಹೇಡಿತನದ ಒಂದು ಫಲವಲ್ಲದೇ ಮತ್ತೇನಲ್ಲವೆಂದು ಮನವರಿಕೆಯಾದರೆ, ಸಮಾಜದಲ್ಲಿ ಅಪರಾಧಿಗಳ ಪ್ರಮಾಣವು ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ.

ಎಷ್ಟೋ ಅಪರಾಧಿಗಳು ಸುಮಾರು ಮೂವತ್ತು ವರ್ಷ ವಯಸ್ಸಿನವರಾದೊಡನೆ

ಯಾವದಾದರೊಂದು ನೌಕರಿಯನ್ನು ಕೈಗೊಂಡು ಮಡದಿಮಕ್ಕಳನ್ನು ಕೂಡಿಕೊಂಡು ಬದುಕಲಾರಂಭಿಸುವರು. ಮತ್ತು ಮುಂದಿನ ಆಯುಷ್ಯವನ್ನೆಲ್ಲ ಒಳ್ಳೇ ನಾಗರಿಕರಾಗಿ ಕಳೆಯುವರು. ಹೀಗಾಗಲು ಕಾರಣವೇನು ? ಒಬ್ಬ ಕನ್ನಗಾರ ಕಳ್ಳನನ್ನೇ ತೆಗೆದು ಕೊಳ್ಳೋಣ. ಮೂವತ್ತು ವರ್ಷ ವಯಸ್ಸಿನ ಕಳ್ಳನು ಹೊಸ ಹುಮ್ಮಸದ ಇಪ್ಪತ್ತು ವರ್ಷ ಪ್ರಾಯದ ಹರೆಯದ ಕಳ್ಳನೊಂದಿಗೆ ಹೇಗೆ ಸ್ಪರ್ಧೆಮಾಡಬಲ್ಲನು ? ಪ್ರಾಯದ ಕಳ್ಳನು ಹೆಚ್ಚು ಜಾಣನೂ, ಹೆಚ್ಚು ಬಲಿಷ್ಠನು ಇರುತ್ತಾನೆ. ಇವಲ್ಲದೇ ಮೂವತ್ತನೆಯ ವಯಸ್ಸಿಗೆ ಅಪರಾಧಿಯ ಜೀವನಕ್ರಮವೇ ಬದಲಾಗುತ್ತದೆ. ಹಿಂದಿನಷ್ಟು ನಿರಂಕುಶವಾಗಿ ಸ್ವಚ್ಛಂದವಾಗಿ ಆತನು ನಡೆಯಲಾರನು. ಆತನ ವ್ಯವಸಾಯದ ಪರಿಸ್ಥಿತಿಯೇ ಬೇರೆಯಾಗುತ್ತದೆ. ಆದುದರಿಂದ ಆತನಿಗೆ ತುಡುಗಿನ ದಂದುಗವು ಇನ್ನು ಮುಂದೆ ಲಾಭದಾಯಕವಾಗುವುದಿಲ್ಲ. ಅದರಿಂದ ಆತನು ಆ ವ್ಯವಸಾಯದಿಂದ ನಿವೃತ್ತನಾಗುತ್ತಾನೆ.

ಅಪರಾಧಿಗಳ ಕುರಿತು ಇನ್ನೊಂದು ಮಾತು ನೆನಪಿಡಬೇಕು. ಅಪರಾಧಿಯನ್ನು ಹಾದಿಗೆ ತರಲೆಂದು ದಂಡನೆ-ಶಿಕ್ಷೆಗಳನ್ನು ಹೆಚ್ಚಿಸುತ್ತ ಹೋದರೆ, ಅಪರಾಧಿಯಾದ ವ್ಯಕ್ತಿಯು ಹೆದರಿ ಹಿಂಜರಿಯುವ ಬದಲು, ತಾನೊಬ್ಬ ಶ್ರೇಷ್ಠವಿಭೂತಿಯೆಂಬ ಆತನ ನಂಬಿಗೆಯನ್ನು ಭದ್ರಪಡಿಸಲು ನಾವು ಆತನಿಗೆ ನೆರವಾದಂತೆ ಆಗುವುದು. ಅಪರಾಧಿಯು ಅತ್ಯಂತ ಅಹಂಕಾರಿವಾತಾವರಣವಲ್ಲಿ ಓಡಾಡುತ್ತಾನೆ. ಆತನ ಜಗತ್ತಿಗೆ, ಆತನೇ ಕೇಂದ್ರ; ಆತನೇ ಇಂದ್ರ. ಆತನ ಜಗತ್ತಿನಲ್ಲಿ ನಿಜವಾದ ಧೈರ್ಯ, ಆತ್ಮವಿಶ್ವಾಸ, ಸಾಮಾಜಿಕ ಭಾವನೆ, ಮೊದಲಾದ ಸಾಮಾನ್ಯ ಸದ್ಗುಣ ಗಳ ಅರಿವು ಸ್ವಲ್ಪವೂ ಕಂಡುಬಾರದು. ಇಂಥ ವ್ಯಕ್ತಿಯು ಸಮಾಜವಲ್ಲಿ ಹೊಂದಿ ಕೊಂಡಿರುವುದು ತೀರ ಅಸಂಭವ. ಹೀಗೆ ಮನೋವಿಕೃತಿಯುಳ್ಳವರು ಸಂಸ್ಥೆ ಸಂಘ-ಸಮಿತಿಗಳನ್ನು ಮಾಡಿಕೊಂಡಿರುವುದು ತೀರ ವಿರಳ. ಹುಚ್ಚರೂ, ಮರುಳರೂ ಸಮಾಜ-ಭಯದಿಂದ ಪೀಡಿತರೂ ಇಂಥ ಸಂಸ್ಥೆಗಳನ್ನು ಆರಂಭಿಸುವ ದಂತೂ ಕೇವಲ ಅಶಕ್ಯ. ಇವರ ಪೂರ್ವಾಯುಷ್ಯವು ಕೇವಲ ಸ್ವಾರ್ಥಪರಾಯಣ ವಾದ ದಿಶೆಯಲ್ಲಿ ಸಾಗಿದುದರಿಂದ ಅವರೊಡನೆ ಯಾರ ಗೆಳೆತನವೂ ಬಗೆಹರಿಯದು. ಅವರ ಬಾಳ-ಮಾದರಿಗಳು ತಪ್ಪು ಆದರ್ಶಗಳು. ತಪ್ಪು ದಾರಿಯನ್ನು ಹಿಡಿದು ಬೆಳೆಯಲು ತೊಡಗಿದ ಜೀವನವು ಅವರದು. ಅವರು ಜೀವನದ ನಿರುಪಯೋಗಿ ಯಾದ ಬದಿಯಲ್ಲಿಯೇ ವಿಶೇಷ ಪ್ರವೃತ್ತರಾಗಿ ಆಯುಷ್ಯವನ್ನು ಕಳೆಯುವರು.

ಇನ್ನು ವಿಕೃತ ಮನಸ್ಸಿನ ವ್ಯಕ್ತಿಗಳು (ಮನೋವಿಕೃತಿಯುಳ್ಳ ಮಕ್ಕಳು, ಅಪರಾಧಿಗಳು, ಸೆರೆಗುಡುಕರು, ಇಲ್ಲವೇ ಇತರ ಮಾದಕ ದ್ರವ್ಯಗಳಿಂದ

ಉನ್ಮಾದವನ್ನುಂಟು ಮಾಡಿಕೊಂಡು ಆ ತೆರನಾಗಿ ಜೀವನದ ಪ್ರಯೋಜನಕಾರಿಯಾದ ಬದಿಯಿಂದ ಪಲಾಯನ ಮಾಡಬಯಸುವವರು; ಒಳ್ಳೆಯ ದಾರಿಗೆ ಬರಲು ವ್ಯಕ್ತಿ ಮನೋವಿಜ್ಞಾನವು ಯಾವ ಯೋಜನೆಯನ್ನು ಮುಂದಿಡುತ್ತದೆ ? ಯಾವ ಕಾರ್ಯಕ್ರಮವನ್ನು ಹೇಳಿಕೊಡುತ್ತದೆ ?

## ವ್ಯಕ್ತಿ-ಮನೋವಿಜ್ಞಾನ

ಎಲ್ಲಿ ಕೆಟ್ಟಿದೆ ? ಎಲ್ಲಿ ಕೀಲ ತಪ್ಪಿದೆಯೆಂಬುದನ್ನು ಅಷ್ಟು ಸಲೀಲವಾಗಿ, ಶೀಘ್ರವಾಗಿ ತಿಳಿದುಕೊಳ್ಳಬೇಕಾದರೆ ಆ ಬಗೆಯ ಮೂಲ ಮಾನಸಿಕ ವ್ಯಾಧಿ ಇಲ್ಲವೇ ತೊಡಕು ಯಾವ ಸಮಯದಲ್ಲಿ ಆರಂಭವಾಯಿತೆಂಬುವದನ್ನು ವಿಚಾರಿಸುವುದು ಮೊದಲ ಕೆಲಸ. ವಾಡಿಕೆಯಾಗಿ, ಹೊಸತಾದ ಆಕಸ್ಮಿಕವಾದ ಏನಾದರೂ ಒಂದು ನಿಮಿತ್ತದ ಮೇಲೆಯೇ ದೋಷವಿಡಲಾಗುತ್ತದೆ. ಆದರೆ ಇದು ತಪ್ಪು. ಬಾಳ-ಮಾದರಿಯೊಳಗಣ ದೋಷವೇ ಮುಖ್ಯ ಕಾರಣ. ಅವನ ಬಾಳ-ಮಾದರಿಯು ಕೆಲವೊಂದು ತಪ್ಪು ತಡೆಗಳಿಂದೊಡಗೂಡಿ ಬೆಳೆದಿತ್ತು. ಆ ಮಾದರಿಗೆ ಅನುಕೂಲವಾದ ಸನ್ನಿವೇಶದಲ್ಲಿಯೇ ಆತನ ಬಾಳು ಸಾಗಿರುವತನಕವೂ ಅದರಲ್ಲಿಯ ದೋಷಗಳು ಎದ್ದು ಕಾಣಲಿಲ್ಲ. ವ್ಯಕ್ತಿಗೆ ಪ್ರತಿಯೊಂದು ಹೊಸ ಸನ್ನಿವೇಶವೂ ಒಂದು ಪ್ರಯೋಗದ ಸ್ವರೂಪದಲ್ಲಿರುತ್ತದೆ. ತನ್ನ ಬಾಳ-ಮಾದರಿಯು ಸಂವೇದನಾ ಕ್ರಮಕ್ಕೆ ಅನುರೂಪವಾಗಿಯೇ ಆತನು ಹೊಸ ಸನ್ನಿವೇಶದ ಕುರಿತು ಪ್ರತಿಕ್ರಿಯೆ ತೋರಿಸುವನು. ಈ ಪ್ರತಿಕ್ರಿಯೆಗಳು ಬರೀ ಪ್ರಚೋದನೆಯ ಪರಿಣಾಮಗಳಲ್ಲ. ಆತನ ಆ ಬಾಳಮಾದರಿಯು ಜೀವನವನ್ನು ಆಳುವ ಅಂತಸ್ಥ ಉದ್ದೇಶಕ್ಕೆ ಸುಸಂಗತವಾಗಿಯೂ ಅದಕ್ಕೆ ಸಾಧಕವಾಗಿಯೂ ಆತನ ವರ್ತನವಿರುತ್ತದೆ. ಇಂಥ ಸಂದರ್ಭದಲ್ಲಿ ಆನುವಂಶಿಕ ಸಂಸ್ಕಾರದ ಮಹತ್ವವನ್ನು ಬದಿಗಿಡಬಹುದಾಗಿದೆ. ಜೀವನ ಪ್ರಸಂಗಗಳ ಕೆಲವೊಂದು ಬಿಡಿಯಾದ ಭಾಗದ ಪ್ರಾಮುಖ್ಯವನ್ನೂ ಕಡೆಗಣಿಸಬೇಕಾಗುತ್ತದೆ. ವ್ಯಕ್ತಿಯ ಬಾಳ-ಮಾದರಿಯು ತನ್ನದೇ ಆದ ಸಂವೇದನಾ ಸಂಗ್ರಹಣದ ಯೋಜನೆಗೆ ಹೊಂದಿಕೊಂಡು ಅನುಭವಗಳಿಗೆ ಉತ್ತರಕೊಡುತ್ತದೆ. ಈ ಸಂವೇದನಾ ಸಂಗ್ರಹಣದ ಅವರ ಯೋಜನೆಯ ಮೇಲೆಯೇ ನಾವು ನಮಗೆ ಬೇಕಾದ ಕಾರ್ಯ ಮಾಡಿದರೆ, ಯಾವುದೇ ಇಷ್ಟ ಪರಿಣಾಮವನ್ನು ಸಾಧಿಸಬಹುದಾಗಿದೆ.

ಕಳೆದ ಇಪ್ಪತ್ತು ವರ್ಷಗಳ ವ್ಯಾಸಂಗದಿಂದ ವಿಕಾಸಗೊಂಡ ವ್ಯಕ್ತಿ ಮನೋವಿಜ್ಞಾನದ ದೃಷ್ಟಿಕೋನ, ಧೋರಣೆ, ಮತ್ತು ಕಾರ್ಯಗಳನ್ನು ಸಂಕ್ಷೇಪವಾಗಿ

ವಿವರಿಸಿದ್ದಾಯಿತು. ವ್ಯಕ್ತಿ ಮನೋವಿಜ್ಞಾನವು ಹೊಸದೊಂದು ದಿಶೆಯಲ್ಲಿ ಬಲು ದೂರ ನಡೆದುಬಂದಿದೆ. ಮನೋವಿಜ್ಞಾನದ ಹಲವು ಶಾಖೆಗಳು ಈಗ ತಲೆದೋರಿವೆ. ಅವುಗಳ ಮೇಲೆ ನೆಲಗೊಂಡ ಹಲವು ಮಾನಸೋಪಚಾರ ತಂತ್ರಗಳೂ ಪ್ರಚಾರ ದಲ್ಲಿವೆ. ಒರ್ವ ಮನೋವಿಜ್ಞಾನಿಯು ಒಂದು ನಿಟ್ಟಿನಲ್ಲಿ ಸಾಗಿದರೆ, ಇನ್ನೊಬ್ಬನು ಇನ್ನೊಂದು ದಿಕ್ಕಿನಲ್ಲಿ ನಡೆಯುವನು; ಮತ್ತು ಇವರಲ್ಲಿ ಯಾವನೊಬ್ಬನು ಇನ್ನೊಬ್ಬನ ಮತವೂ ಯೋಗ್ಯವಿರುವುದೆಂದು ಒಪ್ಪಿಕೊಳುವುದಿಲ್ಲ. ಆದುದರಿಂದ ವಾಚಕರು ಕೂಡ ಹೆಚ್ಚಾಗಿ ನಂಬಿಗೆ, ಪೂರ್ವಗ್ರಹಿಕೆಗಳನ್ನು ಅವಲಂಬಿಸಿ ಕೇವಲ ಒಬ್ಬನನ್ನೇ ನಂಬಿ ಸುಮ್ಮನಿರಲಾಗದು. ಯಾವನೊಬ್ಬನೇ ಋಷಿಯು ಪ್ರಮಾಣ ನಾಗದಿದ್ದರೆ ಹಾನಿಯಿಲ್ಲ. ತರ್ಕವು. ಮಾತ್ರ ಅಪ್ರತಿಷ್ಠವಾಗುವುದು ಬೇಡ, ಎಂಬ ಎಚ್ಚರ ಪಡತಕ್ಕದ್ದು. ತಾವೇ ತೂಗಿ ಅರೆದು ಒರೆದು ವಿಮರ್ಶಿಸಿ ಅರಿತುಕೊಳ್ಳ ಬೇಕು. ಹೇತುಮತ್ತ್ವ (ಉದ್ದೇಶ)ವಾದಿಯಾದ ಮನೋವಿಜ್ಞಾನದಲ್ಲಿ ತಳಿಯ ಗುಣ (ಆನುವಂಶಿಕ ಪ್ರವೃತ್ತಿ)ಗಳಿಗೆ ಬಹಳೇ ದೊಡ್ಡ ಸ್ಥಾನವು ಇದೆ. ಅದೇ ಮೇರೆಗೆ ವರ್ತನವಾದಿಗಳ 'ಸಾಂಕೇತಿಕ ಪರಾವರ್ತನೆ'ಗಳೂ 'ಪ್ರತಿಕ್ರಿಯೆ'ಗಳೂ ನಮಗೆಷ್ಟು ಒಪ್ಪಿಗೆಯಾಗಲಾರವು. ವ್ಯಕ್ತಿಯು ಜೀವನದ ಅಂತಸ್ಥ ಉದ್ದೇಶವನ್ನು, ಅರಿತು ಕೊಂಡ ಹೊರತು. ಬರೇ 'ಪ್ರವೃತ್ತಿ'ಗಳ ಮತ್ತು 'ಪ್ರತಿಕ್ರಿಯು'ಗಳ ಗೊಂದಲ ದೊಳಗಿಂದ ವ್ಯಕ್ತಿಯು ಸ್ವಭಾವ ಮತ್ತು ಭವಿತವ್ಯಗಳನ್ನು ಕಲ್ಪಿಸಿಕೊಳ್ಳುವುದು ವ್ಯರ್ಥವೇ ಸರಿ. ವ್ಯಕ್ತಿಮನೋವಿಜ್ಞಾನದ ಹೊರತು ಬೇರೆ ಯಾವುದೇ ಮನೋ ವಿಜ್ಞಾನವು ವೈಯಕ್ತಿಕ ಉದ್ದೇಶಗಳ-ಜೀವನಾದರ್ಶಗಳ ಮಾತನ್ನೆತ್ತುವುದಿಲ್ಲ, ಬಾಳಿನ ಮಾದರಿಗಳನ್ನು ನಿರೂಪಿಸುವುದಿಲ್ಲ.

## ಮಕ್ಕಳ ಗುರಿಗಳು ಯಾವವು ?

'ಉದ್ದೇಶ' 'ಆದರ್ಶ'ವೆಂಬ ಶಬ್ದಗಳ ಅರ್ಥವನ್ನು ಸ್ಪಷ್ಟಗೊಳಿಸಿ ಅದಕ್ಕೆ ಮೂರ್ತ ಸ್ವರೂಪವನ್ನು ಕೊಡಬೇಕಾಗಿದೆ. ಜೀವನದ ಕೊನೆಯ ಮಟ್ಟದಿಂದ ವಿಚಾರಿಸಿದರೆ, ಬಾಳಿನ ಗುರಿಯೆಂದರೆ, ದೇವರಂತೆ ಆಗಲು ಸಂಕಲ್ಪಿಸುವುದೇ ಎಂದು ಹೇಳಬಹುದು. ಅದರೆ ದೇವರೆಂತಾಗುವುದು, ಮನುಷ್ಯನ ಕೊನೆಯ ಧ್ಯೆಯುವೆನ್ನಬಹುದು. ಆದರೆ, ಶಿಕ್ಷಕರೂ ಪಾಲಕರೂ ತಮ್ಮನ್ನೂ ತಮ್ಮ ಮಕ್ಕಳನ್ನೂ ದೇವರಂತೆ ರೂಪಿಸುವುದರಲ್ಲಿ ಸ್ವಲ್ಪ ಎಚ್ಚರಪಡಬೇಕು : ನೀರಿಳಿಯದ ಗಂಟಲೊಳು ಕಡುಬನ್ನು ತುರುಕಬಾರದು. ಮಕ್ಕಳಿಗೆ ಕಣ್ಣಿಗೆ ಕಾಣುವ, ಮುಟ್ಟಿ, ತಟ್ಟಿ, ಮೂಸಿ ನೋಡಲು ಸಾಧ್ಯವಿರುವ ಮೂರ್ತರೂಪದ ಗುರಿಗಳನ್ನೇ ಮೊದಲು

ಕಣ್ಣೆದುರಿಗೆ ಇಡಬೇಕು. ಕಣ್ಣಿಗೆ ಕಾಣದ ಕೇವಲ ಕಾಲ್ಪನಿಕ ಆಕಾಶತತ್ವ
ಮಾತುಗಳನ್ನು ಹೇಳುವುದು ವ್ಯರ್ಥ. ಏಕೆಂದರೆ ನೆಲುವಿಗೆ ಹಾರದ್ದು ಮುಗಿಲಿ
ಹಾರೀತೆ ? ವರ್ತಮಾನಕಾಲದ ಪ್ರಬಲ ಮತ್ತು ಪ್ರಭಾವಿಯಾದ ಶ್ರೇಷ್ಠ ಗುಣಗ
ವ್ಯಕ್ತಿಯನ್ನು ಆರಿಸಿಕೊಂಡು, ಆತನನ್ನೇ ಮಕ್ಕಳು ತಮ್ಮ ಮಾದರಿಯನ್ನಾ
ಇಲ್ಲವೇ ಬಾಳಿನ ಗುರಿಯನ್ನಾಗಿ ಇಟ್ಟುಕೊಳ್ಳುವುದುಂಟು. ಇಂತಹ ಆದರ್ಶ
ವ್ಯಕ್ತಿಯು ತಂದೆಯಾಗಿರಬಹುದು; ತಾಯಿಯಾಗಿರಬಹುದು. ತನ್ನ ಕುಟುಂಬದ
ತಾಯಿಯೇ ಹೆಚ್ಚು ಪ್ರಬಲ ಮತ್ತು ಪ್ರಭಾವಿಯೆಂದು ಆತನಿಗೆನಿಸಿದರೆ, ಮಗುವ
ತಾಯಿಯನ್ನೇ ಆದರ್ಶಳನ್ನಾಗಿರಿಸಿಕೊಳ್ಳಬಹುದು. ಮುಂದೆ ಬುದ್ಧಿ ಬಲಿತಂ
ಅವರ ಆದರ್ಶವು ಬೇರೆಯಾಗುವದೂ ಉಂಟು. ಎಂಜಿನು ನಡಿಸುವ ಯಂತ್ರಿ
ಯಾಗಲೀ, ಟಾಂಗಾ ಓಡಿಸುವ ಟಾಂಗಾವಳನಾಗಲಿ ಕೆಲಸಾರೆ ಮಕ್ಕಳ ಮನಸ್ಸನ್ನು
ಸೆಳೆಯಬಹುದು. ಏಕೆಂದರೆ ಜನಸಾಮಾನ್ಯರಿಗಿಂತ ಅವರೇ ಹಿರಿದಾದವರೆಂದು
ಮಕ್ಕಳು ಕೆಲಸಾರೆ ನಂಬುವುದುಂಟು !

ಇಂತಹದೊಂದು ಗುರಿಯನ್ನು ಗೊತ್ತುಮಾಡಿದ ಮೇಲೆ ಮಕ್ಕಳು ಎಂಜಿನ
ಡ್ರಾಯವ್ಹರ ಇಲ್ಲವೇ ಟಾಂಗಾ ಹೊಡೆಯುವವನನ್ನು ಅನುಕರಿಸಹತ್ತುವರು
ಆಟಗಳಲ್ಲಿ ಆ ಸೋಗು ಹಾಕುವರು. ತಮ್ಮ ಗುರಿಯ ಸಾಧನೆಗೆ ಬೇಕಾಗುವ
ಮಟ್ಟಿಗೆ ಅವರ ವೇಷ, ರೀತಿ, ಮಾತುಗಳನ್ನು ಆಯ್ದು ಅರಗಿಸಿಕೊಳ್ಳಲ
ತೊಡಗುವರು. ಆದರೆ ಇದೆಲ್ಲವೂ ಕೆಲಕಾಲ ಮಾತ್ರ. ಏಕೆಂದರೆ, ಪೋಲೀಸ
ಸಿಪಾಯಿಯು ಟಾಂಗಾನಿಲ್ಲಿಸಲು ತನ್ನ ಬೆರಳನ್ನೆತ್ತಲಿ, ಟಾಂಗಾದವನು ಅವನಿಗ
ತಲೆವಾಗಲೇ ಬೇಕಾಗುವುದು. ಆಗ ಮಗುವಿಗೆ ಪೋಲೀಸನೇ ಹೆಚ್ಚಿನವನೆನಿಸಿ ಅವನೇ
ಜೀವನದಮಾದರಿಯಾಗುವನು. ಹಾಗೆಯೇ ಕ್ರಮೇಣ, ಮಗುವಿಗೆ ವೈದ್ಯನಾಗಲಿ
ಶಿಕ್ಷಕನಾಗಲೀ ಆಗಬೇಕೆಂದು ಎನಿಸಬಹುದು. ಏಕೆಂದರೆ ವೈದ್ಯನಿಗೆ ಎಲ್ಲರೂ
ಮನ್ನಿಸುತ್ತಾರೆ. (ಆತನ ಕಹಿ ಮದ್ದು ರೊಕ್ಕ ಕೊಟ್ಟು ಸುಮ್ಮನೆ ಕುಡಿಯುತ್ತಾರೆ.)
ಮತ್ತು ಶಿಕ್ಷಕನು ಮಕ್ಕಳನ್ನು ಮೈಹುಳಿವಂತೆ ಹೊಡೆಯಬಲ್ಲನು. ಆದುದರಿಂದ
ಶಿಕ್ಷಕನೇ ಪ್ರಬಲ ಮತ್ತೂ ಪ್ರಭಾವೀ ವ್ಯಕ್ತಿಯೆಂದೆನಿಸಿ ಮಕ್ಕಳಿಗೆ ಆತನು ಆದರ್ಶ
ನೆನಿಸಬಹುದು.

ಹೀಗೆ ಮಗುವಿನ ಎದುರು ಬಾಳಿನ ಗುರಿಗಳಾಗಿ ಆಯ್ದುಕೊಳ್ಳಲಿಕ್ಕೆ ಹಲವು
ಮೂರ್ತವಾದ ಪ್ರತೀಕಗಳಿರುತ್ತವೆ. ಎದ್ದು ಕಾಣುವ ಮಾದರಿಗಳಿರುತ್ತವೆ. ಮಗುವು
ಇವುಗಳೊಳಗಿಂದ ಆರಿಸಿಕೊಂಡ ಗುರಿಯು ಆತನ ಸಾಮಾಜಿಕ ಆಸಕ್ತಿಯ ಕುರುಹು
ಆಗುತ್ತದೆ. ಜನಗಳ ಜೀವನ ಮರಣಗಳ ಮೇಲೆ ಅಧಿಕಾರವಿರುವ ಪ್ರಬಲ ವ್ಯಕ್ತಿ

ಯಾಗಬೇಕೆಂದು ಇಬ್ಬರು ಹುಡುಗರು ಹಾರೈಸುತ್ತಿದ್ದರೆ, ಅವರಲ್ಲಿ ಸಾಮಾಜಿಕ ಆಸಕ್ತಿಯುಳ್ಳ ಮಗುವು ತಾನು ದೇವರಾಗುವೆನೆಂದು ಸಾರಬಹುದು. ಸಾಮಾಜಿಕ ಆಸಕ್ತಿಯಿಲ್ಲದ ಇನ್ನೊಂದು ಮಗುವು ಸಮಾಜಕ್ಕಿಂತ ಪ್ರಬಲನಾಗಬೇಕೆಂದು ಬಯಸಿ, ತಾನು ಬೇಕಾದವರನ್ನು ಗಲ್ಲಿಗೇರಿಸುವ ಬಂಟನಾಗುವೆನೆಂದು ಹೇಳಬಹುದು. ಇವನು ಜೀವನದ ನಿರುಪಯೋಗಿಯಾದ ಬದಿಯಲ್ಲಿಯೇ ಸಾಗುವವನೆಂದು ಸ್ಪಷ್ಟವಾಗಿ ಕಂಡು ಬರುತ್ತದೆ. ಇನ್ನು ಜೀವನ ಮರಣಗಳನ್ನಾಳುವಂಥ ದೈವೀ ಶಕ್ತಿಯುಳ್ಳವನಾಗಬೇಕೆಂಬ ಇಚ್ಛೆಯು ಸುತ್ತಲೂ ರೂಪಗೊಂಡ, ವೈದ್ಯನಾಗಬೇಕೆಂಬ ಆದರ್ಶವು ಜೀವನಕ್ಕೆ ಉಪಯುಕ್ತವಾದದ್ದು. ಏಕೆಂದರೆ ಇಂಥ ಆದರ್ಶವು ಸಮಾಜ ಸೇವೆಯಿಂದಲೇ ಸಾಧಿಸುತ್ತದೆ. ●

# ೨ ಕೀಳರಿಮೆ ಅಥವಾ ಕೀಳ್ಮೆಯ ಅರಿವು .

ಮನಸ್ಸಿನಲ್ಲಿ 'ಜಾಗೃತ' ಮತ್ತು 'ಸುಪ್ತ'ಗಳೆಂಬ ಭೇದಗಳನ್ನು ಕಲ್ಪಿಸುವುದುಂಟು. ಜಾಗೃತ ಮನವು ಅರಿವಿಗೆ ನಿಲುಕುವ ಹೊರಗಣ ಮನೋವ್ಯಾಪಾರಗಳ ಲೋಕ. ಸುಪ್ತಮನವು ಅರಿವಿಗೆ ಮೀರಿದ್ದು. ಮರವಿನ ಮುಸುಕಿನಲ್ಲಿರುವುದು. ಕನಸಿನ ನಾಡಿಗೆ ಒಳಪಟ್ಟುದು, ಕಣಸಿಗೆ ಸಂಬಂಧಪಟ್ಟುದು. ಹೀಗೆ ತಾರತಮ್ಯವನ್ನು ತೋರಿಸುವ ಪರಿಭಾಷೆಯು ವ್ಯಕ್ತಿ ಮನೋವಿಜ್ಞಾನದಲ್ಲಿ ಸರಿಹೋಗುವುದಿಲ್ಲ. ಏಕೆಂದರೆ ಕೆಲವರು ಭಾವಿಸಿರುವಂತೆ, ಜಾಗೃತ ಮತ್ತು ಸುಪ್ತಮನಗಳೆರಡೂ ಪರಸ್ಪರ ವಿರುದ್ಧವಾಗಿಲ್ಲ. ಮನಸ್ಸಿನ ಇವೆರಡೂ ಶಕ್ತಿಗಳು ಕೈ ಕೈ ಹಿಡಿದುಕೊಂಡು ಕೂಡಿಯೇ ಇರುವುವು; ಒಂದೇ ನಿಟ್ಟಿನಲ್ಲಿ ಒಂದೇ ಗುರಿಯ ಕಡೆಗೆ ಸಾಗುವುವು. ಜಾಗೃತ ಮತ್ತು ಸುಪ್ತಮನಗಳನ್ನು ವಿಂಗಡಿಸುವಂಥ ಯಾವದೊಂದು ಸೀಮಾ ರೇಷೆಯೂ ಇಲ್ಲ. ಇವೆರಡು ಕೂಡಿ ಆದ ಚಟುವಟಿಕೆಗಳ ಉದ್ದೇಶವು ಯಾವುದೆಂಬುದನ್ನು ಕಂಡು ಹಿಡಿಯುವುದೇ ಮುಖ್ಯ ಪ್ರಶ್ನೆಯಾಗಿದೆ. ಅವೆರಡರ ಅನ್ಯೋನ್ಯ ಸಂಬಂಧಗಳು ನಿಶ್ಚಿತವಾಗಿ ಗೊತ್ತಾಗುವನಕ ಯಾವುದು ಜಾಗೃತ ಮತ್ತು ಯಾವುದು ಸುಪ್ತವೆಂಬುದನ್ನು ನಿರ್ಣಯಿಸುವುದು ಅಗತ್ಯವಾಗಿದೆ. ಇನ್ನು ಜಾಗೃತ ಮತ್ತು ಸುಪ್ತಮನಸಿನ ಅನ್ಯೋನ್ಯ ಸಂಬಂಧವೇ ಬಾಳಿನ ಮಾದರಿಯನ್ನು ನಿರ್ಧರಿಸುತ್ತದೆ.

## ಜಾಗೃತ ಮತ್ತು ಸುಪ್ತ ಮನಗಳ ಸಂಬಂಧ

ಜಾಗೃತ ಮತ್ತು ಸುಪ್ತಮನಗಳಲ್ಲಿ ಇರುವ ಆಳವಾದ ಮತ್ತು ನಿಕಟವಾದ ಸಂಬಂಧವನ್ನು ಮುಂದಿನ ವ್ಯಕ್ತಿ ಚಿತ್ರವು ಉದಾಹರಿಸಬಹುದು. ನಾಲ್ವತ್ತು ವಯಸ್ಸಿನ ಒಬ್ಬ ಗೃಹಸ್ಥನಿರುವನು. ಆತನ ಮದುವೆಯಾಗಿದೆ ತೀವ್ರವಾದ ಒಂದು ಹಂಬಲವು ಆತನನ್ನು ಪೀಡಿಸುತ್ತದೆ. ಬೆಳಕಂಡಿಯೊಳಗಿಂದ ಹೊರಗೆ ಜಿಗಿಯಬೇಕೆಂಬ ಉತ್ಕಟವಾದ ಅಪೇಕ್ಷೆಯು ಆತನನ್ನು ಪೀಡಿಸುತ್ತಲಿದೆ. ಈ ಹಂಬಲವನ್ನು ತಡೆದು ಹಿಡಿಯಲು ಅವನು ಒಂದೇ ಸವನೆ ಹೆಣಗಾಡುತ್ತಿದ್ದನು. ಇದೊಂದು ಹಂಬಲವನ್ನು ಬಿಟ್ಟರೆ ಉಳಿದ ಯಾವ ಮಾತಿನಲ್ಲಿಯೂ ಆತನಿಗೆ ಕರಕರೆಯಿಲ್ಲ; ಕೊರತೆಯಿಲ್ಲ. ಮನದನ್ನೆಯಾದ ಹೆಂಡತಿ, ಒಳ್ಳೆಯ ಗೆಳೆಯರು ಒಲವಿನ ಸೊಗಸನ್ನು ಹೆಚ್ಚಿಸಲು ಉಂಟು. ಉಪಜೀವನದ ಸಾಧನೆಯು ಚೆನ್ನಾಗಿಯೇ ಇದ್ದಿತು. ಆದರೆ ಈ ಹಂಬಲದ ವ್ಯಾಧಿಯು ಮಾತ್ರ ಆತನ ಬಾಳಿನಲ್ಲಿ ಒಂದು ವಿಚಿತ್ರವಾದ ತೊಡಕಾಗಿದೆ. ಈ ತೊಡಕನ್ನು ಜಾಗೃತಿ ಮತ್ತು ಸುಪ್ತ ಮನಸಿನ

ಪರಸ್ಪರ ಸಹಕಾರ, ಸಂಬಂಧಗಳ ಪರಿಭಾಷೆಯಲ್ಲಿ ಹೀಗೆ ಹೇಳಬಹುದು : ಬೆಳಕಂಡಿಯೊಳಗಿಂದ ಹೊರಗೆ ಹಾರಬೇಕೆಂಬ ಪ್ರವೃತ್ತಿಯು ಆತನ ಜಾಗೃತ ಮನದ ಅರಿವಿಗೆ ಒಳಪಟ್ಟ ಸಂಗತಿಯು. ತನ್ನ ತೀವ್ರ ಬಯಕೆಯ ಅರಿವು ಆತನಿಗಿದೆ. ಆದರೂ ಆತನು ಇದುವರೆಗೂ ಹೊರಗೆ ಹಾರಿಲ್ಲ ! ಜಿಗಿದು ಜೀವಕ್ಕೆ ಎರವಾಗಿಲ್ಲ. ಅದಕ್ಕೆ ಕಾರಣವೇನು ? ಆತನ ಬಾಳಿಗೆ ಇನ್ನೊಂದು ಮಗ್ಗುಲಿದೆ ; ಆ ಮಗ್ಗುಲಿನಲ್ಲಿ ಆತನ ಈ ಘಾತಕ ಪ್ರವೃತ್ತಿಯು ವಿರುದ್ಧ–ಆತ್ಮಹತ್ಯೆಯ ಅನಿವಾರ ಇಚ್ಛೆಯ ವಿರುದ್ಧ–ಒಳಗೊಳಗೇ ಅಖಂಡ ಹೋರಾಟವು ನಡೆದಿದೆ. ಈ ಮಗ್ಗುಲೆಂದರೆ ಆತನ ಸುಪ್ತ ಮನಸ್ಸು. ಆತನ ಸುಪ್ತ ಮನವು ಜಾಗೃತ ಮನದ ತೂಕವನ್ನು ಹಿಡಿದುದರ ಪರಿಣಾಮವಾಗಿಯೇ ಆತನು ಇನ್ನು ಬದುಕಿ ಉಳಿದಿದ್ದಾನೆ. ಒಂದು ದೃಷ್ಟಿಯಿಂದ ನಿಜವಾಗಿಯೂ ಆತನು ಜೀವನದಲ್ಲಿ ಕೆಲವೊಂದು ಗೆಲುವು ಪಡೆದಿರುವನೆಂದು ಹೇಳಬಹುದು. ಮತ್ತೆ ಮತ್ತೆ ಜೀವ ಕಳಕೊಳ್ಳಬೇಕೆಂಬ ಹಂಬಲವು ತಲೆದೆತ್ತಿ ಗೋಳಾಡುವ ಆತನು, ಗೆಲವುಗಾರನೆಂದು ಹೇಗೆ ಹೇಳುವುದು ? ಎಂದು ಯಾರಾದರೂ ಕೇಳಿದರೆ ಉತ್ತರವಿಷ್ಟೆ : ಬೆಳಕಂಡಿಯೊಳಗಿಂದ ಜಿಗಿದುಬಿಡಬೇಕೆಂಬ ಉತ್ಕಟ ಅಪೇಕ್ಷೆಯನ್ನು ಬಿಗಿಹಿಡಿದು ಈ ವರೆಗೆ ಜಿಗಿಯದೇ ಬಿಟ್ಟುದು ಅದು ವಿಜಯವೇ ಅಲ್ಲವೇ ? ಈ ಹೋರಾಟದಲ್ಲಿ ಗಳಿಸಿದ ಗೆಲುವೇ ಬದುಕಿ ಉಳಿಯಬೇಕೆಂಬ ಹಟಕ್ಕೆ ದೊರೆತ ಯಶಸ್ಸು. ಈ ದೃಷ್ಟಿಯಿಂದ ಆತನು ಗೆಲವುಗಾರನೇ. ಸಾಯಬೇಕೆಂಬ ಬಯಕೆಯೂ, ಅಂತಹ ಒಂದು ನ್ಯೂನತೆಯು ಕೊರಗೂ ಆತನ ಜಾಗೃತ ಜೀವನದಲ್ಲಿ ವ್ಯಕ್ತವಾಗಿತ್ತು. ಆದರೆ ಬದುಕಬೇಕು, ಬಾಳಬೇಕೆಂಬ ವರಿಷ್ಟತೆಯ ಬಗ್ಗೆ ಹೆಣಗುವ ಪ್ರವೃತ್ತಿಯೂ ಆತನ ಸುಪ್ತಮನದಲ್ಲಿ ಜೀವಂತವಾಗಿತ್ತು. ಇವೆರಡರ ದ್ವಂದ್ವ ಯುದ್ಧದಲ್ಲಿ ವರಿಷ್ಟತೆಯ ಪ್ರವೃತ್ತಿಯೇ ಮೇಲಾಯಿತು. ವಸ್ತುತಃ ಮೇಲ್ಮೆಗಾಗಿ ನಡೆಸಿದ ಹೋರಾಟದಲ್ಲಿ ಹಿಂದುಳಿದವರಾಗುವುದಕ್ಕೆ ಅವರವರ ದುರ್ಬಲತೆಯೇ ಮುಖ್ಯ ಕಾರಣವಾಗಿರುತ್ತದೆ. ಒಂದಿಲ್ಲೊಂದು ಬಗೆಯಾಗಿ ಇಂತಹ ನ್ಯೂನತೆಯನ್ನು ಅನುಭವಿಸುವವನ ಉದಾಹರಣೆಗಳು ಇಂತಹವೇ ಆಗಿರುತ್ತವೆ.

ಈ ಸದ್ಗೃಹಸ್ಥನ ಬಾಳಿನ ಮಾದರಿಯ ಬೆಳವಣಿಗೆಯ ಕತೆಯು ನಮ್ಮ ಮೇಲಿನ ಉಪಪತ್ತಿಯನ್ನು ಸಮರ್ಥಿಸುವುದು. ಆತನ ಚಿಕ್ಕಂದಿನ ನೆನಹುಗಳನ್ನು ನಾವು ಪಡಿಸಿನೋಡುವ. ಆತನಿಗೆ ಎಳೆವಯಸ್ಸಿನಲ್ಲಿ ಶಾಲೆಯಲ್ಲಿ ಇದ್ದಾಗಿನಿಂದಲೇ ಪ್ರತಿಕೂಲ ಪರಿಸ್ಥಿತಿಯಿತ್ತೆಂದು ತಿಳಿದು ಬರುತ್ತದೆ. ಅವನಿಗೆ ಶಾಲೆಯಲ್ಲಿ ಇತರ ಹುಡುಗರು ಸೇರುತ್ತಿದ್ದಿಲ್ಲ. ತನ್ನ ಸಹಪಾಠಿಗಳಿಂದ ಮತ್ತು ಸಂಗಾತಿಗಳಿಂದ ದೂರವಿರಬೇಕು; ಓಡಿಹೋಗಬೇಕೆಂದು ಆತನು ಬಯಸುತ್ತಿದ್ದನು. ಆದರೂ ತನ್ನ ಮನಸ್ಸಿನ ಎಲ್ಲ

ಶಕ್ತಿಗಳನ್ನು ಒಟ್ಟುಗೂಡಿಸಿ. ಒತ್ತಾಯದಿಂದ ತಾನು ಶಾಲೆಯಲ್ಲಿಯೇ ಉಳಿದು ವಿರೋಧಿಗಳನ್ನು ಎದುರಿಸಲು ಅಣಿಯಾದನು. ಅಂದಿನಿಂದಲೇ, ಆತನಲ್ಲಿ, ತನ್ನ ದುರ್ಬಲತೆಯನ್ನು ಮೆಟ್ಟಿ ಮೀರಿ ನಿಲ್ಲಬೇಕೆಂಬ ಪ್ರಯತ್ನ ಮಾಡುವ ವೃತ್ತಿಯು ಕಂಡು ಬಂದಿತು. ತನ್ನ ಬಿಕ್ಕಟ್ಟನ್ನು ಎದುರಿಸಿ ಅದನ್ನು ಗೆದ್ದನು. ಈತನ ಅಂದಿನ ಒಂದೇ ಒಂದು ಗುರಿಯೆಂದರೆ, ತನ್ನಲ್ಲಿಯ ಭೀತಿ, ಚಿಂತೆಗಳನ್ನು ಅತಿಕ್ರಮಿಸ ಬೇಕೆಂಬ ತೀವ್ರ ಹಂಬಲ. ಈ ಗುರಿಯಲ್ಲಿ ಆತನ ಜಾಗೃತ ವಿಚಾರಗಳೆಲ್ಲ ಸುಪ್ತ ಮನಸಿನೊಡನೆ ಸಹಕರಿಸಿ ಒಂದು ಒಕ್ಕಟ್ಟನ್ನು ಸಾಧಿಸಿದವು. ಮನುಷ್ಯ ಪ್ರಾಣಿ ಯೆಂದರೆ, ಒಂದು ಏಕಮುಖವಾದ ಇಡಿಯಾದ ವಸ್ತುವೆಂದು ನೋಡದಿದ್ದರೆ, ಈ ಬೇನಿಗನ ಸ್ಥಿತಿಯ ಕುರಿತು ತಪ್ಪು ನಿದಾನ ಮಾಡಿದಂತಾಗುವುದು. ಆತನು ವರ್ಚಸ್ವಿವೃತ್ತಿಯವನಲ್ಲ. ಯಶಸ್ವಿ ಪ್ರವೃತ್ತಿಯವನೂ ಅಲ್ಲ. ಆದರೂ ಹೆಣಗಾಡಿ ಹೋರಾಡಿ ಮಿಗಿಲಾಗಲು ಬಯಸುವ ಒರ್ವ ಮಹತ್ವಾಕಾಂಕ್ಷಿ. ಆದರೆ ಹಲವರು ಈ ಬೇನಿಗನು ಅಂತರಂಗದಲ್ಲಿ ತೀರ ಹೇಡಿಯಾಗಿರುವನೆಂದು ಹೇಳುವ ವಾಡಿಕೆಯಿದೆ. ಇಂತಹ ತಿಳುವಳಿಕೆಯು ನಿರಾಧಾರವಾಗಿದೆ. ಆ ಬೇನಿಗನ ವ್ಯಕ್ತಿತ್ವವನ್ನು ಸಮಗ್ರವಾಗಿ ನೋಡುವ ಸಮ್ಯಕ್ ದೃಷ್ಟಿಯಿದ್ದವರು ಹೀಗೆ ಹೇಳಲಾರರು. ಮನುಷ್ಯ ಜೀವಿಯನ್ನು ಒಂದು ಇಡಿಯಾದ, ಏಕಮುಖವಾದ ವಸ್ತುವೆಂದು ಮನಗಾಣದಿದ್ದರೆ, ವ್ಯಕ್ತಿಯ ಸ್ವಭಾವವನ್ನು ಸರಿಯಾಗಿ ಅರಿತು ಕೊಳ್ಳಲು ನಾವು ಅಸಮರ್ಥರಾಗುತ್ತೇವೆ. ಜಾಗೃತ ಮತ್ತು ಸುಪ್ತಚಿತ್ತಗಳನ್ನು ಪರಸ್ಪರ ಸಂಬಂಧವಿಲ್ಲದ ಒಂದಕ್ಕೊಂದು ಹೊಂದಿಕೆಯಿಲ್ಲದ ಎರಡು ಮಗ್ಗಲು ಗಳೆಂದು ಎಣಿಸಿದರೆ ಬಾಳನ್ನು ಇಡಿಯಾಗಿ ನೋಡುವುದು ಅಶಕ್ಯವಾಗುವುದು.

## ವ್ಯಕ್ತಿಯ ಜೀವನವನ್ನು ಅರಿಯಲು ಆತನ ಹಿನ್ನೆಲೆ ಗೊತ್ತಾಗಬೇಕು.

ವ್ಯಕ್ತಿಯ ಬಾಳನ್ನು ಇಡಿಯಾಗಿ ನೋಡುವಂತೆಯೇ, ಅದನ್ನು ಸುತ್ತಲಿನ ಸಾಮಾಜಿಕ ಹಿನ್ನೆಲೆಯಲ್ಲಿಯೂ ನೋಡಬೇಕು. ಕೂಸು ಹುಟ್ಟಿದಾಗ ತೀರ ದುರ್ಬಲವಾದುದರಿಂದ ಇತರರು ಅದನ್ನು ಕಾಪಾಡುವುದು ಅಗತ್ಯವಾಗುತ್ತದೆ. ಕಂದನು ಯಾರ ತೋಳತೊಟ್ಟಿಲಲ್ಲಿ ಬೆಳೆಯಿತೊ ಆ ವ್ಯಕ್ತಿಗಳ ರೀತಿ, ನಡೆವಳಿಕೆ ಗಳು ಗೊತ್ತಾಗದೆ, ಆ ಮಗುವು ಬೆಳೆಸಿಕೊಂಡ ತನ್ನ ಬಾಳಿನ ಮಾದರಿಯ ಬಗೆಯನ್ನು ಸರಿಯಾಗಿ ಅರಿತುಕೊಳ್ಳಲು ಸಾಧ್ಯವಿಲ್ಲ. ತಾಯಿತಂದೆ ಬಂಧುಬಳಗ ದವರೊಂದಿಗೆ ಇಟ್ಟುಕೊಂಡ, ಕಟ್ಟಿಕೊಂಡ ಸಂಬಂಧಗಳ ಹತ್ತುಗೆಯೊಳಗಿಂದಲೇ ಆ ಮಗುವಿನ ವ್ಯಕ್ತಿತ್ವವು ಮೈವೆತ್ತು ಮುಂದೆ ಬೆಳೆಯುವುದು. ಈ ವ್ಯಕ್ತಿತ್ವವು

ಕೇವಲ ಶಾರೀರಿಕ ವ್ಯಕ್ತಿತ್ವಕ್ಕಿಂತ ವಿಶಾಲವಾಗುತ್ತದೆ. ಮಗುವಿನ ಜೀವನದ ಎಲ್ಲ ಸಾಮಾಜಿಕ ಸಂಬಂಧಗಳೂ ಸಂದರ್ಭಗಳೂ ಅದರಲ್ಲಿ ಅಡಕವಾಗಿರುತ್ತವೆ.

ಮಗುವಿನಂತೆಯೇ ಸಾಮಾನ್ಯವಾಗಿ ಎಲ್ಲ ವ್ಯಕ್ತಿಗಳಿಗೂ ಈ ಮಾತು ಅನ್ವಯಿಸುವುದು. ಮಗುವಿನ ದುರ್ಬಲತೆಯು ಅದನ್ನು ಕುಟುಂಬದೊಂದಿಗೆ ಬೆರೆತು ಹೊಂದಿಕೊಂಡಿರುವಂತೆ ಮಾನವನ ದುರ್ಬಲತೆಯು ಆತನನ್ನು ಸಮಾಜದಲ್ಲಿ ಕೂಡಿಕೊಂಡು ಬಾಳುವಂತೆ ಒತ್ತಾಯಪಡಿಸುವುದು. ಒಂದೊಂದು ಸಂದರ್ಭದಲ್ಲಿ ಪ್ರತಿಯೊಬ್ಬರಿಗೂ ಆ ದುರ್ಬಲತೆ–ನ್ಯೂನತೆಗಳ ಮನವರಿಕೆಯಾಗುವುದು. ಬಾಳಿನಲ್ಲಿ ಹಲವು ತೊಡಕು ತೊಂದರೆಗಳುಂಟಾಗಿ ಜೀವವು ಬೇಸತ್ತು ಹೋಗುವುದು. ಒಬ್ಬೊಂಟಿಗರಾಗಿ ಯಾರೂ ಅವುಗಳನ್ನು ಇದಿರಿಸಲಾರರು. ಅಂತೆಯೇ ಮಾನವನು ತಂಡಗಟ್ಟಿಕೊಂಡಿದ್ದನು. ಸಮಾಜವನ್ನು ಸಂಘಟಿಸಿದನು. ಈ ಸಾಮೂಹಿಕತೆಯು ಆತನ ಬಲವಾದ ಪ್ರವೃತ್ತಿಗಳಲ್ಲೊಂದು. ತನ್ನ ಅಸಹಾಯತೆ ನ್ಯೂನತೆಗಳನ್ನು ಮೀರಿ ಬಾಳಲು ಈ ಸಾಮಾಜಿಕ ಜೀವನವು ಮನುಷ್ಯನಿಗೆ ನಿಜವಾಗಿಯೂ ತುಂಬಾ ಸಹಾಯಕವಾಗಿದೆ. ವ್ಯಕ್ತಿಗತ ಕೊರತೆಗಳನ್ನು ತುಂಬಿಕೊಡಲು ಇಂಥ ಸಾಂಘಿಕ ಕಾರ್ಯವು ಸಂಯುಕ್ತ ಶೌರ್ಯವೂ ಸಮರ್ಥವಾಗಿವೆ. ಇಂತು ವೈಯಕ್ತಿಕ ದುರ್ಬಲತೆಯೇ ಸಾಮಾಜಿಕ ಜೀವನದ ಉಗಮವಿದೆ. ಸಮಾಜವನ್ನು ಕಟ್ಟಿಕೊಂಡು ಬಾಳಿದರೂ ಆ ಸಮಾಜದೊಳಗಿನ ವ್ಯಕ್ತಿಗಳ ಶಕ್ತಿ ಮತ್ತು ವೃತ್ತಿಗಳಲ್ಲಿರುವ ಹೆಚ್ಚು ಕಡಿಮೆಯು ಮಾತ್ರ ನಷ್ಟವಾಗುವುದಿಲ್ಲ. ವ್ಯಕ್ತಿಗಳ ಕ್ಷಮತೆ, ಯೋಗ್ಯತೆಗಳಲ್ಲಿ ತಾರತಮ್ಯವೂ ವ್ಯತ್ಯಾಸವೂ ಉಳಿಯತಕ್ಕುದೇ. ಕೆಲವೊಂದು ನ್ಯೂನತೆಗಳುಳ್ಳ ವ್ಯಕ್ತಿಯು ಸುಸಂಘಟಿತವಾದ ಸಮಾಜ ರಚನೆಯಲ್ಲಿ ಸೇರಿ ಅದರ ಅಂಗವಾದಾಗ ಆತನ ಕೊರತೆಗಳನ್ನು ಉಳಿದವರ ನೆರವಿನಿಂದ ಪೂರೈಸಿಕೊಳ್ಳಲು ಅನುಕೂಲವಿರುತ್ತದೆ. ಇಂತು, ಸಾಮಾಜಿಕ ನಿಕಟ ಸಂಬಂಧಗಳು ಬೆಳೆದ ವ್ಯಕ್ತಿಗಳ ಶೀಲ ಸ್ವಭಾವ, ಮನೋರಚನೆಗಳ ಅಭ್ಯಾಸ ಮಾಡುವಾಗ ಕೇವಲ ಆನುವಂಶಿಕ ಶಕ್ತಿಗಳನ್ನೇ ಮುಖ್ಯ ಪ್ರಮಾಣವಾಗಿಟ್ಟುಕೊಳ್ಳುವುದು ಸರಿಯಾದೀತೆ ?

## ಭಾಷೆಯ ಉಗಮ

ಕೆಲವೊಂದು ವ್ಯಕ್ತಿಗತ ಕೊರತೆಗಳು ಆನುವಂಶಿಕವಿರಬಹುದು. ಆದರೆ ಇಂಥ ಸ್ವಾಭಾವಿಕ ದುರ್ಬಲತೆಗಳ ದುಷ್ಪರಿಣಾಮವನ್ನು ಕಡಿಮೆ ಮಾಡಲಿಕ್ಕೆ ಇತರರೊಂದಿಗೆ ಚೆನ್ನಾಗಿ ಹೊಂದಿಕೊಂಡು ಬಾಳಲು ಕಲಿಸುವುದು ಮನೋವಿಜ್ಞಾನದ

ಗುರಿಯಾಗಿದೆ. ಸಮಾಜ ವಿಕಾಸದ ಇತಿಹಾಸವು, ಮಾನವರಲ್ಲಿ ಬೆಳೆದು ಬಂದ ಸಹಾನುಭೂತಿ ಸಹಕಾರಗಳ ಕತೆಯನ್ನೇ ಹೇಳುತ್ತದೆ. ಈ ಸಾಮಾಜಿಕ ಸಹಾನು ಭೂತಿ, ಸಹಕಾರಗಳ ವ್ಯಕ್ತಫಲವೇ ಭಾಷೆಯ ಉಗಮ. ಆದರೆ ಈ ಸಾಮಾಜಿಕ ಫಲಕ್ಕೆ ವ್ಯಕ್ತಿಗತ ನ್ಯೂನತೆಯೇ ತಾಯಿಯಾಗಿದೆ. ಇದಕ್ಕೆ ಚಿಕ್ಕ ಮಕ್ಕಳ ನಡತೆಯೇ ಸಾಕ್ಷಿ. ಚಿಕ್ಕಮಕ್ಕಳ ಹಸಿವು ಹಿಂಗದಿದ್ದರೆ ಅವರು ಹೆರವರ ಲಕ್ಷ್ಯವನ್ನು ತಮ್ಮ ಕಡೆಗೆ ಸೆಳೆದುಕೊಳ್ಳಲು ಕೂಗಬೇಕಾಗುತ್ತದೆ. ಕರಕರೆ ಪಡಬೇಕಾಗುತ್ತದೆ. ಕಿರುಚುವ ಪ್ರಸಂಗವೂ ಬರುತ್ತದೆ. ಹೀಗೆ ಜನರ ಲಕ್ಷ್ಯವನ್ನು ಸೆಳೆದುಕೊಳ್ಳುವ ಆವಶ್ಯಕತೆಯಿಲ್ಲವಾಗಿದ್ದರೆ, ಮಗುವು ಮಾತಾಡಲು–ನುಡಿಯನ್ನು ಕಲಿಯಲು–ಯತ್ನವನ್ನೇ ಮಾಡುತ್ತಿದಿಲ್ಲ. ಮೊದಲಿನ ಕೆಲವು ತಿಂಗಳು ಅದು ಹಾಗೆಯೇ ಇರುತ್ತದೆ. ಮಗುವು ಬೇಡುವ ಮೊದಲೇ ತಾಯಿಯು ಅದರ ಬೇಡಿಕೆಯನ್ನು ಪೂರೈಸಲು ತತ್ಪರಳಾಗಿರುತ್ತಾಳೆ. ಯಾವುದೇ ಶಾರೀರಿಕ ವ್ಯಂಗವಿಲ್ಲದಿದ್ದರೂ ಆರು ವರ್ಷ ವಯಸ್ಸಿನವರೆಗೂ ಮಾತಿನ ಹಂಬಲವೇ ಇಲ್ಲದ ಮಕ್ಕಳ ಉದಾಹರಣೆಗಳಿವೆ. ಮಾತಿನ ಅವಶ್ಯಕತೆಯ ಒತ್ತಾಯವೇ ಒಳಗೆ ಇಲ್ಲದುದರಿಂದ ಹೀಗಾಗುವುದು. ಮೂಕರಾದ ತಂದೆತಾಯಿಗಳ ಒಂದು ಮಗುವಿನ ಉದಾಹರಣೆ ಇದೆ. ಒಮ್ಮೆ ಆ ಶಿಶುವು ಕೆಳಗೆ ಬಿದ್ದಾಗ ಅಳಹತ್ತಿತು. ಆದರೆ ಅದು ಸದ್ದಿಲ್ಲದ ಅಳುವಾಗಿತ್ತು ! ತನ್ನ ತಂದೆತಾಯಿಗಳಿಗೆ ಕೇಳಬರುವುದಿಲ್ಲವೆಂದು ಮನಗಂಡ ಆ ಮಗುವು ದನಿಯಿಲ್ಲದೇ ಅಳುವ ಹೊಸ ಪರಿಯನ್ನೇ ಕಂಡು ಹಿಡಿದಿತ್ತು ! ಮೂಕ (ಕಿವುಡ)ರಾದ ತಂದೆತಾಯಿಗಳ ಲಕ್ಷ್ಯ ಸೆಳೆಯಲು ಅದು ಬರೇ ಅಳುವಿನ (ದುಃಖದ) ಮುಖಮುದ್ರೆಯನ್ನು ಮಾತ್ರ ತೋರಿಸಿಕೊಳ್ಳುತ್ತಿತ್ತು. ಆದುದರಿಂದ ಅದೊಂದು ಶೋಕದ ಮುದ್ರಾಭಿನಯವಾಗಿತ್ತು !

## ತೊದಲುವ ಕಾರಣ ಮೀಮಾಂಸೆ

ಇದರ ಮೇಲಿಂದ ಸಾಮಾಜಿಕ ಸಂದರ್ಭದ ಮಹತ್ವವು ಚೆನ್ನಾಗಿ ತಿಳಿದು ಬರುತ್ತದೆ. ಯಾವುದೊಂದು ವ್ಯಕ್ತಿಯು ತಾನು ಶ್ರೇಷ್ಠನಾಗಿ ಮುಂದುವರಿಯಲು ಒಂದು ವಿಶಿಷ್ಟ ಗುರಿಯನ್ನೇ ಏಕೆ ಆಯ್ದುಕೊಳ್ಳುವನೆಂಬುದನ್ನು ಅರಿತುಕೊಳ್ಳಲು ಆ ವ್ಯಕ್ತಿಯ ಸಾಮಾಜಿಕ ಸನ್ನಿವೇಶವನ್ನು ನಾವು ವಿಮರ್ಶಿಸಬೇಕು. ಅದೇ ಮೇರೆಗೆ ಆ ವ್ಯಕ್ತಿಯ ಕಷ್ಟನಷ್ಟಗಳಿಗೆ ಕಾರಣವಾದ ಆತನ ಕೆಲವೊಂದು ಹದಗೆಟ್ಟ ಸಂಬಂಧಗಳನ್ನು ಸ್ವಭಾವದಲ್ಲಿಯ ಅಸಂಗತಿ ವಿಸಂಗತಿಗಳನ್ನು ಸಾಮಾಜಿಕ ಸನ್ನಿವೇಶದ ದೃಷ್ಟಿಯಿಂದಲೇ ನೋಡಬೇಕು. ಸರಿಯಾಗಿ ಮಾತುಕತೆಗಳನ್ನಾಡಿ ಇತರರೊಂದಿಗೆ ಸಾಮಾನ್ಯ ಸಂಬಂಧವನ್ನು ಬೆಳೆಯಿಸಿಕೊಳ್ಳಲು ಅಶಕ್ಯವಾಗಿ

ಹಲವರ ಸ್ವಭಾವರಚನೆಯಲ್ಲಿ ವ್ಯತ್ಯಾಸ, ವಿಪರ್ಯಾಸಗಳಾಗುವವು. ತೊದಲು ಇದಕ್ಕೆ ಒಂದು ಉದಾಹರಣೆ. ಬಾಳಿನ ಆರಂಭದಿಂದಲೂ ಆತನು ಸಮಾಜದ ಸಂಪರ್ಕವನ್ನು ಸರಿಯಾಗಿ ಸಾಧಿಸಿಕೊಂಡಿರುವುದಿಲ್ಲ. ಹೆರವರೊಂದಿಗೆ ಹೊಂದಿ ಕೊಂಡು ಹೋಗುವ ಹದವು ಆತನಿಗೆ ಗೊತ್ತಾಗಿಲ್ಲ. ಯಾವುದೇ ಚಟುವಟಿಕೆಗಳಲ್ಲಿ ಆತನು ಸೇರುತ್ತಿದ್ದಿಲ್ಲ. ಗೆಳೆಯರೂ ಜೊತೆಗಾರರೂ ಆತನಿಗ ಬೇಕಾಗಿದ್ದಿಲ್ಲ. ಆತನ ಮಾತಿನ ಪರಿಪಕ್ವತೆಗೆ, ಭಾಷೆಯ ವಿಕಾಸಕ್ಕೆ ಇತರರೊಂದಿಗೆ ಸಹವಾಸವು ಅವಶ್ಯ ವಾಗಿತ್ತು. ಆದರೆ ಆತನಿಗೆ ಅಂಥ ಸಹವಾಸ ಇಷ್ಟವಿದ್ದಿಲ್ಲ. ಆದ್ದರಿಂದ ಆತನ ತೊದಲು, ಮೊದಲಿನಂತೆಯೇ ಪ್ರೌಢನಾದ ಮೇಲೂ ಉಳಿಯಿತು. ತೊದಲಿಕೆ ಯಿಂದ ಬಳಲುವವರಲ್ಲಿ ಎರಡು ಬಗೆಯ ಒಲವುಗಳು ಕಂಡುಬರುತ್ತವೆ. ಇತರ ರೊಂದಿಗೆ ಕೂಡಿರಬೇಕು. ಸಹವಾಸ ಬೆಳೆಯಿಸಬೇಕು. ತನ್ನ ಮಾತಿನ ಅಡೆ ತಡೆಗಳನ್ನು ಮೆಟ್ಟಿ ಮೀರಿ ಪ್ರಭಾವಿಯಾಗಬೇಕು, ಎಂಬ ಒಲವುವೊಂದು. ಇತರರ ಸಂಪರ್ಕದಿಂದ ದೂರವಿದ್ದು ಏಕಾಕಿಯಾದ ಏಕಾಂತವಾದ ಬಾಳು ಬೆಳೆಸಿ ಕೊಳ್ಳಬೇಕೆಂಬ ಒಲವು ಇನ್ನೊಂದು.

## ಸಭಾಭೀತರ ಸ್ವಭಾವ.

ಸಾಮಾಜಿಕ ಜೀವನದಲ್ಲಿ ಬೆರೆಯದ ಹಲವು ಪ್ರೌಢರಲ್ಲಿ ಮುಂದೆ, ಸಭಾಕಂಪದ ಪ್ರವೃತ್ತಿಯೂ ಜನರೆದುರು ಮಾತಾಡಲಾರದ ಭೀತಿಯೂ ಕಂಡುಬರುವವು. ಈ ವೃತ್ತಿಗೆ ಕಾರಣವೇನೆಂದರೆ ಅಂಥವರು ತಮ್ಮ ಎದುರಿನ ಸಭೆಯನ್ನು ಶತ್ರುವೆಂದು ಭಾವಿಸುವರು. ತಮ್ಮ ಮೇಲೆ ಪ್ರಭಾವ ಬೀರುವಷ್ಟು ಪ್ರಬಲವಾದ ಮತ್ತು ಪ್ರತಿಕೂಲವೆಂದು ತೋರುವ ಜನಸಮುದಾಯದ ಮುಂದೆ ತಾವು ಕೀಳರೆಂಬ ಅರಿವು ತಲೆದೋರುವುದು ! ಮಾತುಗಾರನಲ್ಲಿ ಮೊದಲು ಆತ್ಮವಿಶ್ವಾಸ ಬೇಕು. ಬಳಿಕ ಸಭಿಕರಲ್ಲಿ ಸಹಾನುಭೂತಿ, ವಿಶ್ವಾಸಗಳನ್ನು ತಾಳಿರಬೇಕು. ಆ ಮೇಲೆ ಉಪನ್ಯಾಸಕ್ಕೆ ನಿಂತರೆ ಮಾತ್ರ ಚೆನ್ನಾಗಿ ಅವನು ಮಾತಾಡಬಲ್ಲನು. ಆತನಿಗೆ ಸಭಾಕಂಪ, ರಂಗದ ಭೀತಿ ಇವು ಉಂಟಾಗಲಾರವು.

## ಕೀಳ್ಮೆಯ ಅರಿವೂ ಸಾಮಾಜಿಕತೆಯ ಶಿಕ್ಷಣವೂ

ತನ್ನ ಕೀಳ್ಮೆಯ ಅರಿವು ಮಾನವನನ್ನು ಸಮಾಜಕ್ಕೆ ಅಂಟಿಕೊಂಡು ಹೊಂದಿ

ಕೊಂಡು ಇರುವುದಕ್ಕೆ ಹೇಗೆ ಒತ್ತಾಯ ಪಡಿಸುತ್ತದೆಂಬುದು ಮೇಲಣ ಉದಾಹರಣಗಳಿಂದ ಸ್ಪಷ್ಟವಾಗುತ್ತದೆ. ಸಮಾಜದಿಂದ ಹೊರಗೆ ಆದಾಗ ದೀನತೆಯ ಭಾವನೆಯುಂಟಾಗುವಂತೆಯೇ, ಸಾಮಾಜಿಕ ಸಂಪರ್ಕವು ಹೆಚ್ಚಿ, ಅದರ ಸಂಪೂರ್ಣ ಬೆಂಬಲವು ತನಗಿದೆಯೆಂದಾಗ ತಾನೊಬ್ಬ ಅತಿ ಬಲಶಾಲಿಯೆಂಬ ಧೈರ್ಯವು ತಲೆದೋರುವುದು. ಆದುದರಿಂದಲೆ, ಪ್ರತಿಯೊಬ್ಬರಿಗೂ ಅವರ ಕೀಳ್ಮೆಯ ಅರಿವನ್ನು ಹೋಗಲಾಡಿಸುವುದಕ್ಕಾಗಿ ಸಾಮಾಜಿಕತೆಯ ಶಿಕ್ಷಣವು ಅತ್ಯವಶ್ಯವಾಗಿದೆ. ಮಾನವನ ದೌರ್ಬಲ್ಯವನ್ನು ಹೋಗಲಾಡಿಸುವುದಕ್ಕೆ ಇದೇ ಉತ್ತಮ ಉಪಾಯವಾಗಿದೆ.

ಇಂಥ ಸಾಮಾಜಿಕ ಶಿಕ್ಷಣಕ್ಕೂ ಲೋಕದ ಸಾಮಾನ್ಯ ವಿವೇಕ ಬುದ್ಧಿಗೂ ನೇರವಾದ ಸಂಬಂಧವಿದೆ. ಇಲ್ಲಿ ಸಾಮಾನ್ಯ ವಿವೇಕವೆಂದರೆ, ಸಮಾಜವು ತನ್ನ ಅನುಭವ ವಿಚಾರಗಳಿಂದ ಒಟ್ಟುಗಳಿಸಿಟ್ಟ ಬುದ್ಧಿವಂತಿಕೆ. ಉಳಿದವರಿಗಿಂತಲೂ ತಮ್ಮದೇ ವಿಶಿಷ್ಟವಾದ ಭಾಷೆ, ವಿಶಿಷ್ಟವಾದ ನಡೆವಳಿಕೆಯನ್ನು ಬೆಳಿಸಿಕೊಳ್ಳುವವರು, ಬಳಿಸಿಕೊಳ್ಳುವವರು, ತಮ್ಮ ಸಮಾಜ ವಿಮುಖವಾದ ವಿಕ್ಷಿಪ್ತವೃತ್ತಿಯನ್ನೇ ವ್ಯಕ್ತ ಮಾಡುವರು. ಇವರದೊಂದು ತೃತೀಯಃ ಪಂಥ ! ಇಂಥವರನ್ನು ಸಂಘ ಸಂಸ್ಥೆಗಳು, ಸಾಮಾಜಿಕ ಆದರ್ಶ ಆಚಾರ ಪದ್ಧತಿಗಳು ಇವೇ ಮೊದಲಾದ ಲೋಕದ ಸಂಗತಿಗಳು ಆಕರ್ಷಿಸುವುದಿಲ್ಲ. ಆದರೂ ಈ ತೃತೀಯಃ ಪಂಥಿಗಳಿಗೆ ತಮ್ಮ ಉದ್ಧಾರಕ್ಕಾಗಿ ಲೋಕ ಸಮಾಜಕ್ಕೇ ಶರಣ ಹೋಗದೆ ಗತಿಯಿಲ್ಲ ! ಇವರು ತೆಗಳಿದರೂ ತೆಗಳಿಸಿಕೊಂಡು, ಇವರ ಹೊಟ್ಟೆಬಟ್ಟೆಗೆ ಕೊಟ್ಟು ಈ ಸಮಾಜ ದ್ವೇಷಿಗಳಿಗೆ ಸಲುಹುವವರಾರು ? ಕೆಲವೊಂದು ಸಾಮಾಜಿಕರೇ ಅಲ್ಲವ್ರೋ ?

ಇಂಥ ವಿಪರೀತ ವೃತ್ತಿಯವರನ್ನು ತಿದ್ದುವ ಬಗೆಯಾವುದು ? ಸಾಮಾಜಿಕ ಜೀವನವು ಅವರಿಗೆ ರುಚಿಸುವಂತೆ, ಆಕರ್ಷಕವಾಗುವಂತೆ ಮಾಡುವುದೇ ಒಂದು ಉಪಾಯ. ನರಗುಂದುವ (ನಿರ್ವೇದಗೊಳ್ಳುವ) ಜನರಿಗೆ ಸಹಾನುಭೂತಿ, ಸದಿಚ್ಛೆ ತೋರಿಸುವವರಿಂದ ಸಮಾಧಾನವಾಗುತ್ತದೆ. ಆದರೆ ಬರೇ ಸದಿಚ್ಛೆ ಸಾಲದು. ಅಂಥ ವ್ಯಕ್ತಿಗಳು, ತಾವೇ ತಮ್ಮ ಶಕ್ತಿಯಲ್ಲಿ ವಿಶ್ವಾಸವನ್ನು ಹೆಚ್ಚಿಸಿಕೊಳ್ಳುವಂತಹ ಸಂದರ್ಭಗಳನ್ನು ಅವರಿಗೆ ಒದಗಿಸಿಕೊಡುವುದೂ ಮಹತ್ವದ್ದಾಗಿದೆ.

ಕೀಳ್ಮೆಯ ಅರಿವೂ, ಮೇಲ್ಮೆಗಾಗಿ, ನೆಗಳ್ತೆ (ಕೀರ್ತಿ)ಗಾಗಿ ಹೆಣಗಾಡುವ ಪ್ರವೃತ್ತಿಯೂ ಸಾರ್ವತ್ರಿಕವಾಗಿದೆ. ಆದರೆ ಇದು ಎಲ್ಲರಲ್ಲೂ ಅಷ್ಟೇ ಬಲವಾದದ್ದಿರುವುದಿಲ್ಲ. ಕೀಳ್ಮೆ ಮತ್ತು ಅದರ ಇನ್ನೊಂದು ಮಗ್ಗುಲು ಮೇಲ್ಮೆ (ನೆಗಳ್ತೆ)

ಇವೆರಡೂ ಮಾನವನ ನಡೆವಳಿಯ ನಿಯಂತ್ರಣವನ್ನು ಮಾಡುತ್ತವೆ. ಇವುಗಳ ಹೊರತು, ಶಾರೀರಕ ಸಾಮರ್ಥ್ಯ, ಆರೋಗ್ಯ, ಸ್ವಾಸ್ಥ್ಯ ಮತ್ತು ಪರಿಸ್ಥಿತಿ ಇವುಗಳಲ್ಲಿಯ ವ್ಯತ್ಯಾಸಗಳೂ ನಡೆವಳಿಯ ಮೇಲೆ ಪರಿಣಾಮವನ್ನು ಮಾಡುತ್ತವೆ. ಆದುದರಿಂದ ಒಂದೇ ಸನ್ನಿವೇಶದಲ್ಲಿದ್ದರೂ, ಬೇರೆ ಬೇರೆ ವ್ಯಕ್ತಿಗಳ ಕಾರ್ಯ ಶಕ್ತಿಯು ಬೇರೆ ಬೇರೆಯಾಗಿರುತ್ತವೆ. ಮಕ್ಕಳು ಕೂಡ ತಮ್ಮ ತಮ್ಮ ಅಳವಿನಂತೆ ಪರಿಸ್ಥಿತಿ ಯೊಂದಿಗೆ ಹೋರಾಡುತ್ತಿರುತ್ತಾರೆ. ತಮ್ಮ ತಮ್ಮ ರೀತಿಯಲ್ಲಿ ಅವರು ಮೇಲ್ಮೆ ಯನ್ನು ಸಾಧಿಸಲು ಹೆಣಗುತ್ತಿರುತ್ತಾರೆ. ಹಿರಿಮೆಯ ಈ ಹೆಣಗಾಟ, ನೆಗಳ್ತೆಯ ನೆಗೆದಾಟದಲ್ಲಿ ಮಕ್ಕಳಿಗೆ ಸಲ್ಲುವ ತಪ್ಪು ತಡೆಗಳು ಆಗುವವು. ಆ ತಪ್ಪು ತಡೆಗಳನ್ನು ತಮ್ಮ ರೀತಿಯಲ್ಲಿ ತಿದ್ದಿಕೊಳ್ಳುತ್ತ ಅವರು ಮುಂದುವರಿಯುವರು.

## ರೊಡ್ಡಗೈಯ ಮಕ್ಕಳು, ಮತ್ತು ಡಮ್ಮಿನ ಜೇಸಿಗನ ಕತೆ.

ಕೆಲವು ಮಕ್ಕಳಿಗೆ ತಾವು ಹುಟ್ಟಾ ರೊಡ್ಡಗೈಯವರೆಂಬ ಅರಿವೇ ಇರುವುದಿಲ್ಲ. ಅವರಿಗೆ ಬಲಗೈ ಉಪಯೋಗಿಸಲು, ಕಲಿಸಬೇಕಾಗುತ್ತದೆ! ಮೊತ್ತಮೊದಲು ಬಲಗೈಯನ್ನು ಬಳಸುವುದರಲ್ಲಿ ಇವರಿಗೆ ತೀರ ಎಡಚು, ಎಡಚು ಎನಿಸುವುದು. ಇದಕ್ಕಾಗಿ ಇವರನ್ನು ಬೈವ, ಹೊಡೆವ ಹಿರಿಯರೂ ಉಂಟು! ಆದರೆ ಇದು ತಪ್ಪು. ಎರಡೂ ಕೈಗಳಿಗೆ ಸರಿಯಾದ ಶಿಕ್ಷಣ ಕೊಡುವುದೇ ಯೋಗ್ಯ ರೀತಿ. ರೊಡ್ಡಗೈಯ ಮಗುವನ್ನು ತೊಟ್ಟಿಲಲ್ಲಿಯೇ ಗುರುತಿಸಬಹುದು. ಅದರ ಬಲಕ್ಕಿಂತ ಎಡಗೈಯ ಚಟುವಟಿಕೆಗಳೇ ಹೆಚ್ಚಾಗಿ ಕಾಣಿಸುತ್ತವೆ. ಮುಂದೆ ಸ್ವಲ್ಪ ವಯಸ್ಕನಾದ ಮೇಲೆ ಬಲಗೈಯಿಂದ ತಾನು ದುರ್ಬಲನೂ ಕುಂದುಳ್ಳವನೂ ಎಂಬ ಅರಿವಿ ನೊಡನೆ ಆತನಿಗೆ ತನ್ನ ಜೀವನವೂ ಸ್ವಲ್ಪ ಹೀನವೆನಿಸಹತ್ತುವುದು. ಬಾಳಿನ ಬೇಸರವು ತಲೆದೋರುವುದು. ಇನ್ನು ಇದಕ್ಕೆ ಪ್ರತಿಯಾಗಿ ಒಮ್ಮೊಮ್ಮೆ ಇಂಥ ಹುಡುಗನು ಬಲಗೈಯ ಚಟುವಟಿಕೆಗಳಿಗೆ ವಿಶೇಷ ಗಮನಕೊಡುವುದರಿಂದ ಅವನು ಲೇಖನ, ಚಿತ್ರಕಲೆಗಳಲ್ಲಿ ಹೆಚ್ಚಿನ ಅಭಿರುಚಿಯನ್ನು ವ್ಯಕ್ತಮಾಡುವುದುಂಟು. ಮುಂದೆ ಜೀವನದಲ್ಲಿ ಇಂಥವನು ಸಾಮಾನ್ಯ ಹುಡುಗರನ್ನು ಮೀರಿ ಮುಂದರಿ ಯುವನು. ಆತನ ಮೊದಲಿನ ಅಪೂರ್ಣತೆಯೇ ಮುಂದಿನ ಪ್ರಗತಿಗೆ ಕಾರಣ ವಾಗುವುದು. ಇಂಥ ಮಗುವು ವಾಡಿಕೆಯಾಗಿ ಮಹತ್ವಾಕಾಂಕ್ಷಿಯೂ. ಉದ್ಯಮ ಶೀಲನೂ ಆಗುತ್ತಾನೆ. ಮಹತ್ವಾಕಾಂಕ್ಷಿಯು ಅಡ್ಡದಾರಿ ಹಿಡಿದರೆ ಇವನು ಮತ್ಸರಿಯೂ, ರೊಚ್ಚಿನವನೂ ಆಗುವನು. ಇದರಿಂದ ಆತನ ನ್ಯೂನತೆಯ ಭಾವನೆಯು ಇನ್ನೂ ಹೆಚ್ಚುವುದು. ತನ್ನ ರೊಡ್ಡತನದ ಕುಂದನ್ನು ಹಿಂಗಿಸಿ ಕೊಳ್ಳಲಿಕ್ಕೆ ನಡೆಸಿದ ಈ ಹೆಣಗಾಟದಲ್ಲಿ ಆ ಮಗುವು ಮುಂದೆ ತುಂಟನೂ

ಜೂದಾಳಿಯೂ ಆಗಬಹುದು. ಏನೇ ಆಗಲಿ, ತಾನು ಹಿಂದುಳಿಯಬಾರದು: ನಗೆಗೆ ಈಡಾಗಬಾರದು: ಎಂಬ ಒಂದೇ ಕಲ್ಪನೆಯನ್ನು ಮನಸ್ಸಿನಲ್ಲಿ ಸ್ಥಿರವಾಗಿರಿಸಿಕೊಂಡು ಸಾಗುವನು. ಇದರಿಂದ ಉಳಿದವರಿಗಿಂತ ತಾನು ಕೀಳನೆಂಬ ಅರಿವು, ಈ ಕೀಳರಿಮೆಯು ಆತನ ಜೀವನದಲ್ಲಿ ಆಗಾಗ ತೂಕ ತಪ್ಪಿಸಿ ಆತನಿಗೆ ಬಾಳಿನಲ್ಲಿ ಬೇಸರವನ್ನುಂಟು ಮಾಡುವುದು.

ಹಲವು ಹುಡುಗರಿಗೆ ಕಣ್ಣು, ಕಿವಿ, ಶ್ವಾಸಕೋಶ ಇಲ್ಲವೇ ಹೊಟ್ಟೆಯಲ್ಲಿ ಏನಾದರೊಂದು ಕುಂದಿರಬಹುದು. ಆಗ ಆ ಕುಂದಿನ ನಿಟ್ಟಿನಲ್ಲಿಯೇ ಅವರ ಬಾಳಿನ ಆಸಕ್ತಿಯು ಹೆಚ್ಚುವುದು. ಇಂತಹದೊಂದು ಸೋಜಿಗದ ಉದಾಹರಣವಿದೆ. X X ರಾಯರು ಸಂಜೆಗೆ ಕಚೇರಿಯಿಂದ ಮನೆಗೆ ಬಂದೊಡನೆ ದಮ್ಮಿನಿಂದ ನರಳುತ್ತಿದ್ದರು. ಇವರ ವಯಸ್ಸು ನಾಲ್ವತ್ತು. ಹೆಂಡತಿ ಇದ್ದಾಳೆ. ಇವರಿಗೆ ಆವ ದಮ್ಮಿನ ವಿಕಾರದ ಇತಿಹಾಸವನ್ನು ಕೇಳಿಕೊಳ್ಳುತ್ತಿರುವಾಗ ಈ ಗೃಹಸ್ಥರ ಒಂದು ಉತ್ತರವು ಬಹಳ ಮಾರ್ಮಿಕವಾಗಿತ್ತು : 'ನನ್ನ ಹೆಂಡತಿ ಸೊಗಸುಗಾರ್ತಿ. ನಾನು ಆದರ್ಶವಾದಿ. ನಮ್ಮಿಬ್ಬರ ಇರವಿನ ರೀತಿಯೆ ಬೇರೆ. ಸಂಜೆಗೆ ಮನೆಗೆ ಬಂದ ಮೇಲೆ ನನಗೆ ಸುಖ-ಸಂಕಥಾ ವಿನೋದದಲ್ಲಿ ಕಾಲಕಳೆಯಬೇಕೆಂದು ನನ್ನ ಇಚ್ಛೆ. ಆದರೆ ನನ್ನ ಹೆಂಡತಿಗೆ ಹೊರಗೆ ಹೋಗಿ ಸಮಾಜದಲ್ಲಿ ಕಲೆತು ನಲಿಯುವುದೆಂದರೆ ಇಷ್ಟ. ನನ್ನೊಂದಿಗೆ ಮನೆಯಲ್ಲಿರುವುದೆಂದರೆ ಸೇರದು. ಆಗ ಮಾತಿಗೆ ಮಾತು ಬೆಳೆದು, ನನ್ನ ಸಿಟ್ಟು ತಾಳಗೆಟ್ಟು, ಉಬ್ಬಸ ಬರಹತ್ತುತ್ತದೆ !'

ಇಲ್ಲಿ ಒಂದು ಪ್ರಶ್ನೆ : ಈ ಗೃಹಸ್ಥನಿಗೆ ದಮ್ಮಿನ ಪೀಡೆಯೇ ಏಕೆ ಆಯ್ತು ? ಹೆಂಡತಿಗೆ ಹತ್ತಿರ ಇರುವಂತೆ ಮಾಡಲು ಇನ್ನಾವುದಾದರೂ ಬೇನೆಯಾಗಿದ್ದರೂ ಆಗಬಹುದಿತ್ತಲ್ಲ ? ಆದರೆ ಈ ಪೀಡೆಗೂ ಒಂದು ಪೀಠಿಕೆಯಿದೆ. ಆತನ ಬಾಳಿನ ಮಾದರಿಗೆ ಸರಿಯಾಗಿಯೇ ವ್ಯಾಧಿ ಬಂದಿತು. ಚಿಕ್ಕಂದು ಇವನ ಒಂದು ಬೇನೆಗೆ ಉಪಾಯವೆಂದು ಆತನನ್ನು ಗಟ್ಟಿಯಾಗಿ ಪಟ್ಟೇಸುತ್ತಿ ಕಟ್ಟಿಡುವ ರೂಢಿಯಿತ್ತು. ಈ ಬಿಗಿತದ ಕಟ್ಟು ಆತನ ಉಸಿರಾಟದ ಮೇಲೆ ಪರಿಣಾಮ ಮಾಡಿತು. ಆತನ ಉಪಚಾರಕ್ಕೆ ದಾದಿಯಿದ್ದಳು. ಅವಳು ಯಾವಾಗಲೂ ಅಕ್ಕರೆಯಿಂದ ಎತ್ತಿ ಮುದ್ದಾಡುತ್ತಿದ್ದಳು. ಈ ಪರಿಯಾಗಿ ಯಾವಾಗಲೂ ಅವಳಿಂದ ಲಲ್ಲೆ-ಲಾಲನೆ ಮಾಡಿಸಿಕೊಂಬ ಚಟವೇ ದೃಢವಾಯ್ತು. ನಾಲ್ಕು ವರ್ಷಗಳ ನಂತರ ಆ ದಾದಿಯು ಮದುವೆಯಾಗಿ ಈ ಮಗುವನ್ನು ಬಿಟ್ಟು ಹೊರಡಬೇಕಾಯಿತು. ಅವಳಿಗೆ ರೈಲು ನಿಲ್ದಾಣಕ್ಕೆ ಬೀಳ್ಕೊಡಲು ಆತನು ಅಳುತ್ತ ಹೋದನು. 'ನನ್ನ ದಾದಿ

ಹೋದಳು ! ಇನ್ನು ನನ್ನನ್ನು ಅಕ್ಕರೆಯ ಅಳ್ತಿ (ಅಚ್ಚೆ)ಯಿಂದ ನೋಡು ವವರಾರು ?' ಎಂದು ತನ್ನ ತಾಯಿಗೆ ಕೇಳಿದನು. ಇದು ಆತನ ಹಳೇ ನೆನಹು ಗಳಲ್ಲಿ ಹುದುಗಿಕೊಂಡ ಕತೆ.

ಚಿಕ್ಕಂದು ಹೇಗೋ, ಹಾಗೆಯೇ ಮುಂದಿನ ಪ್ರೌಢ ಜೀವನದಲ್ಲಿಯೂ ತನಗೆ, ಯಾವಾಗಲೂ ಸಂತೈಸುವ ಸಂತೋಷಿಸುವ ಒಂದು ವ್ಯಕ್ತಿಯನ್ನು ಆತನು ಹಾರೈಸುತ್ತಿದ್ದನು. ಆತನಿಗೆ ಇದ್ದುದು ಉಬ್ಬಸದ ಬಳಲಿಕೆಯಲ್ಲ. ಯಾವಾಗಲೂ ಮುದ್ದಿನಿಂದ ಉಪಚರಿಸಿಕೊಳ್ಳುವ ಹಂಬಲ. ಆತನ ಮನಃ ಶಕ್ತಿಯು ಉಬ್ಬಸದ ನಿಮಿತ್ತ ನಿರ್ಮಿಸಿ ಕೆಲಮಟ್ಟಿಗೆ ಈ ಇಷ್ಟವನ್ನು ಸಾಧಿಸಿಕೊಂಡಿತು. ಆತನು ದಮ್ಮಿನಿಂದ ಸರಳಲಾರಂಭಿಸಿದನು. ಆತನ ಹೆಂಡತಿಯು ಚಿತ್ರಪಟ ನೋಡಲು, ಇಲ್ಲವೇ ಚಕ್ಕಂದದಿಂದ ಹರಟೆ ಹೊಡೆಯಲು ಹೊರಗೆ ಹೋಗುವುದು ನಿಂತಿತು. ತನ್ನ ವರ್ಚಸ್ವಿತೆಯ ಉದ್ದೇಶವನ್ನು, ವರಿಷ್ಠನಾಗಬೇಕೆಂಬ ಗುರಿಯನ್ನು ಆತನು ಸಾಧಿಸಿದನು. ತನ್ನ ಹೆಂಡತಿಯನ್ನು ಆದರ್ಶವಾದಿಯಾಗಿ, ಅಧ್ಯಾತ್ಮ ಪ್ರಿಯಳಾಗಿ ಮಾಡಬೇಕೆಂದು ಆತನ ಜಾಗೃತ ಮನಸ್ಸಿನ ಹಟ ! ತನ್ನ ಹೆಂಡತಿಯನ್ನು ತನ್ನ ಅಂಕೆಯಲ್ಲಿ ಇಟ್ಟುಕೊಂಡ ಗೆಲುವುಗಾರನಾಗಬೇಕೆಂಬ ಹಂಬಲ ಸುಪ್ತ ಚೇತನಕ್ಕೆ. ಈ ಬಗೆಯ ಜನಗಳ ಮನಸ್ಸಿನ ಮೇಲ್ಮಗ್ಗಲಿನಲ್ಲಿ ಜಾಗೃತ ಮನದಲ್ಲಿ, ಸುಪ್ತ ಮನದಲ್ಲಿ ತೋರುವ ಉದ್ದೇಶಗಳಿಗಿಂತ ಬೇರೆಯಾದ ಹೇತುಗಳು ಅದರ ಒಳ ಮಗ್ಗಲಲ್ಲಿ (ಸುಪ್ತ ಮನದಲ್ಲಿ) ಅವಿತುಕೊಂಡಿರುವುದನ್ನು ಕಾಣಬಹುದು.

## ಕಣ್ಣಿನ ಕುಂದು, ಹೊಟ್ಟೆಯ ಬೇನೆಗಳ ಪರಿಣಾಮ.

ಕಣ್ಣಿನಲ್ಲಿ ಕುಂದುಳ್ಳ ಮಕ್ಕಳು ಹಲವೊಮ್ಮೆ ಕಂಗೊಳಿಸುವ ಒಡವೆಗಳಲ್ಲಿ ಹೆಚ್ಚಾದ ಆಸಕ್ತಿಯನ್ನು ತೋರಿಸುವುದುಂಟು. ಸ್ಪಷ್ಟವಾದ ಶಬ್ದ ಚಿತ್ರಣ, ರೂಪ ಸೌಂದರ್ಯದ ಮನೋವೇಧಕ ವರ್ಣನೆಗಳನ್ನು ಮಾಡುವ ಕವಿಗಳಲ್ಲಿ ಇಂಥವರು ಹೆಚ್ಚು. ಕವಿಗಳಿಗೂ ಚಿತ್ರಕಾರರಿಗೂ ಬಹುಶಃ ಕಣ್ಣಿನಲ್ಲಿ ಕೆಲವೊಂದು ಕುಂದು ಇರುವುದುಂಟು. ಈ ಕುಂದಿನಿಂದಲೇ ಅವರಿಗೆ ತಮ್ಮ ವಿಷಯದಲ್ಲಿ ಹೆಚ್ಚಿನ ಆಸಕ್ತಿಯು ಉಂಟಾಗುವುದು. ಪ್ರತಿಭಾಶಾಲಿಗಳಾದ ಶ್ರೇಷ್ಠರ ವ್ಯಕ್ತಿತ್ವಗಳನ್ನು ನಾವು ಪರೀಕ್ಷಿಸಿದರೆ, ಅವರಲ್ಲಿ ಏನೊಂದು ಶಾರೀರಿಕ ಕೊರತೆ ಇರುವುದು ಕಂಡು ಬರುತ್ತದೆ. ಬಹುತೇಕ ಕುರುಡರಂತಾಗಿದ್ದರೂ, ರೇಖೆ, ರೂಪ, ವರ್ಣ ಮತ್ತು ಛಾಯಾ ಪ್ರಕಾಶಗಳೊಳಗಿನ ಸೂಕ್ಷ್ಮ ವ್ಯತ್ಯಾಸಗಳನ್ನು ಮಿಕ್ಕವರಿಗಿಂತ ಮಿಗಿಲಾಗಿ ಅರಿತುಕೊಳ್ಳುವ ಪ್ರತಿಭಾಶಾಲಿಗಳಾದ ಕಲಾಕೋವಿದರಿರುವರು. ಇಂಥವರ

ಉದಾಹರಣೆಗಳಿಂದ ನ್ಯೂನಗಳೊಂದಿಗೆ ಹುಟ್ಟಿದ ಮಕ್ಕಳ ಸಮಸ್ಯೆಗಳನ್ನು ಹೇಗೆ ಬಗೆಹರಿಸಬೇಕೆಂಬುದರ ಮನವರಿಕೆಯಾಗುವುದು.

ಕೆಲವರಿಗೆ ತಿಂಡಿ ತಿನಿಸುಗಳಲ್ಲಿ ಬಹಳೇ ಆಸಕ್ತಿ. ಏನು ತಿನ್ನಬೇಕು, ಏನು ತಿನ್ನಬಾರದು, ಮುಂತಾದುದನ್ನು ಕುರಿತು ಗ್ರಂಥ ಬರೆಯುವಷ್ಟು ಮಾಹಿತಿ ಸಂಗ್ರಹಿಸುವರು. ಇಂಥವರು ವಾಡಿಕೆಯಾಗಿ, ಬಾಳಿನ ಆರಂಭದಲ್ಲಿ ಉಣ್ಣು ತಿನ್ನುವ ವಿಷಯವಲ್ಲಿ ಬಹಳೇ ತೊಂದರೆಗೆ ಒಳಗಾಗಿದ್ದು, ಆ ಮೂಲಕ ಈ ವಿಷಯದಲ್ಲಿ ಅವರು ವಿಶೇಷವಾದ ಆಸಕ್ತಿಯನ್ನು ಬೆಳಿಸಿಕೊಂಡು ಬಂದಿರುವರು. 'ಇದನ್ನು ತಿನ್ನಬೇಡ; ಅದನ್ನು ತಿನ್ನು' ಎಂದು ಮುಂತಾಗಿ ವಿಧಿನಿಷೇಧಗಳ ಒತ್ತಾಯದಲ್ಲಿ ಅವರು ಬೆಳೆದಿರಬೇಕು. ತಮ್ಮ ಅನ್ನಕೋಶದೊಳಗಿನ ವಿಕಾರ ಗಳನ್ನು ಹೋಗಲಾಡಿಸಿಕೊಳ್ಳುವುದರಲ್ಲಿ ಅವರು ಹಿಡಿತದಿಂದ ಇರಬೇಕಾಗುವುದು. ಆದ್ದರಿಂದ ತಮ್ಮ ಊಟ ಉಪಚಾರಗಳ ಕಾರ್ಯಕ್ರಮಗಳಲ್ಲಿ ಅವರಿಗೆ ಅತೀವ ಆಸಕ್ತಿಯು ತಲೆದೋರುವುದು. ಇದರಿಂದ ಅಂಥವರು ಮುಂದೆ ಒಳ್ಳೆ ಆಹಾರ ಶಾಸ್ತ್ರಜ್ಞರು, ಅನುಪಾನತಜ್ಞರು, ಇಲ್ಲವೇ ಪಾಕಕಲಾ ಪ್ರವೀಣರು ಆಗುವರು.

ಅಥವಾ ಇದಕ್ಕೆ ವಿರುದ್ಧವಾಗಿ, ಅಗ್ನಿಮಾಂದ್ಯ ಮೊದಲಾದ ತೊಂದರೆಗಳಿಂದ ತಿಂಡಿ ತೀರ್ಥಗಳ ಮೇಲಣ ಮನಸ್ಸು ಹಾರಿ ಬೇರೆ ಸಂಗತಿಗಳಲ್ಲಿ ಅದು ತೊಡಗುವುದು. ಆಹಾರದ ಬದಲು ಧನಸಂಗ್ರಹವೇ ಅವರ ಜೀವಾಳದ ಮಾತಾಗುವುದು ! ಇಂಥವರು ತುಂಬ ಜೀನರೂ, ಹಿಂಡಿ, ಹೀರಿ ಹಣಗಳಿಸುವ ವರೂ ಆಗುವರು. ತಾನೂ ತಿನ್ನದೆ ಹಣ ಕೂಡಿಸಿಡುವುದೇ ಒಂದು ವ್ಯಸನವು ಇವರಿಗೆ ! ನಿಜವಾಗಿಯೂ, ಲಕ್ಷಾಧೀಶರಿಗೂ ಸಿರಿವಂತರಿಗೂ ಹೊಟ್ಟೆಬೇನೆ ಯಿರುವುದು ಒಂದು ಸೋಜಿಗದ ಸಂಗತಿ !

### ಶಾರಿರೀಕ ನ್ಯೂನಕ್ಕಿಂತ ಕೀಳರಿಮೆಯ ದುಷ್ಪರಿಣಾಮ ಬಹಳ.

ಮೈ-ಮನಗಳ ಕೊರತೆಗಳಲ್ಲಿ ನಿತ್ಯವಾದ ಕಾರ್ಯ ಕಾರಣ ಸಂಬಂಧವು ಇಲ್ಲ. ಇಂತಹ ಶಾರೀರಿಕ ನ್ಯೂನತೆಯಿದ್ದವರು ಈ ಬಗೆಯ ಮನಃಪ್ರವೃತ್ತಿಯವರು ಆಗುವರೆಂದು ತ್ರಿಕಾಲಾಬಾಧಿತ ಸಿದ್ಧಾಂತವನ್ನು ಮಾಡಕೂಡದು. ಶಾರೀರಿಕ ನ್ಯೂನತೆಯ ಮೂಲಕ ಮನಸಿನ ಮೇಲೆ ಪರಿಣಾಮವಾಗುವುದಕ್ಕಿಂತಲೂ, ಇಂತಹ ಕುಂದು-ಕೊರತೆ ತನ್ನಲ್ಲಿ ಮನೆಮಾಡಿಕೊಂಡಿದೆ, ಎಂಬ ಕೀಳರಿಮೆಯೇ

ಮನೋವಿಕೃತಿಗೆ ಮುಖ್ಯ ಕಾರಣವಾಗುತ್ತದೆ. ಆದುದರಿಂದಲೇ ಬಾಳಿನ ಮಾದರಿಗಳು ರೂಪಗೊಳ್ಳುತ್ತಿರುವ ಚಿಕ್ಕಂದಿನಲ್ಲಿಯೇ ಈ ಬಗೆಯ ಯಾವುದೊಂದು ಕೀಳರಿಮೆಯು ತೊಡಕು ಮಗುವಿನ ಬೆಳವಿಯ ಗಂಟಲಿಗೆ ಉರುಲಾಗದಂತೆ ಎಚ್ಚರಪಟ್ಟಷ್ಟೂ ಕಡಿಮೆಯೇ.

ಕೆಲವೊಮ್ಮೆ ತಲೆದೋರಿದ ತೊಡಕು-ತೊಂದರೆಗಳನ್ನು ಗೆಲ್ಲಲಿಕ್ಕೆ ತಾಳ್ಮೆ ಬೇಕು. ಅದಿಲ್ಲದವರು ತುಂಬ ದುಃಖಕ್ಕೀಡಾಗುತ್ತಾರೆ. ಯಾವಾಗಲೂ ಅಸವಸ, ಕಸಿವಿಸಿ, ರೊಚ್ಚು ಅಥವಾ ಆವೇಶದಲ್ಲಿ ಚಡಪಡಿಸುತ್ತಿರುವವರನ್ನು ನ್ಯೂನತೆಯ ತೀವ್ರವಾದ ಭಾವನೆಯೇ ಬಾಧಿಸುತ್ತಿರುತ್ತದೆಂದು ತಿಳಿಯಬೇಕು. ತನ್ನ ತೊಂದರೆಗಳನ್ನು ಗೆಲ್ಲಬಲ್ಲೆನೆಂಬ ಆತ್ಮವಿಶ್ವಾಸವಿದ್ದವರು ತಾಳ್ಮೆಗೆಡುವುದಿಲ್ಲ. ಮಕ್ಕಳಲ್ಲಿ ಕಾಣುವ ಉರುಟುತನ, ತುಂಟತನ, ಸೊಕ್ಕು ಮೊದಲಾದ ಗುಣಗಳು ಅವರಲ್ಲಿಯ ತೀವ್ರವಾದ ಕೀಳರಿಮೆಯ ಕುರುಹು. ಅಂಥವರ ಅವರ ವಿಕೃತಿಯ ಕಾರಣಗಳನ್ನು ಅವರಿಗಿದ್ದ ತೊಡಕು, ತೊಂದರೆಗಳನ್ನು ಹುಡುಕಿ ಅವುಗಳಿಗೆ ತಕ್ಕ ಉಪಾಯ, ಉಪಚಾರಗಳನ್ನು ಮಾಡಬೇಕು. ಬಾಳಿನ ಮಾದರಿಯನ್ನು ಮೊದಲು ಎಂತಹದನ್ನು ಇಟ್ಟುಕೊಂಡಿರುತ್ತಾರೊ, ಆ ಬಗೆಯಾಗಿ ಅವರ ಮುಂದಿನ ಜೀವನವು ಮಾರ್ಪಡುವುದು. ಬಾಳ-ಮಾದರಿಯಲ್ಲಿಯೇ ಕೆಲವೊಂದು ಲೋಪ-ದೋಷಗಳು ಇದ್ದು, ಅದರ ಮೂಲಕವಾಗಿ ಮುಂದಿನ ಅವರ ನಡೆವಳಿಯಲ್ಲಿ ಹಲವು ವಿಪರೀತಗಳು ಕಾಣಿಸಿಕೊಳ್ಳಲಾರಂಭಿಸುತ್ತವೆ. ಅವರನ್ನು ತೆಗಳುವುದೂ ಟೀಕಿಸುವುದೂ ಸರಿಯಲ್ಲ. ಬಾಳ-ಮಾದರಿಯನ್ನು ಮಾರ್ಪಡಿಸಿಕೊಳ್ಳುವಂತೆ ನೆರವಾಗುವುದೊಂದೇ ಉತ್ತಮವಾದ ಉಪಾಯವು.

ಮಕ್ಕಳ ವಿಚಿತ್ರವಾದ ಆಸಕ್ತಿ-ಅಭಿರುಚಿಗಳಿಂದಲೂ, ಮಿಕ್ಕವರನ್ನು ಮೀರಿ ಮುಂದರಿಯಬೇಕೆಂಬ ಹೆಣಗಾಟ-ಹವಣಿಕೆಗಳಿಂದಲೂ ಅವರ ಬಾಳ-ಮಾದರಿಯು ಯಾವ ಬಗೆಯದಾಗಿರುತ್ತದೆಂಬದನ್ನು ಕಂಡು ಹಿಡಿಯಬಹುದಾಗಿದೆ. ಅಡಿಗಡಿಗೂ ಸಂದೇಹಪಡುವ ತನ್ನನ್ನು ತಾನೇ ನಂಬದ-ಆತ್ಮವಿಶ್ವಾಸವಿಲ್ಲದ ವ್ಯಕ್ತಿಗಳ ಮಾದರಿಯೊಂದುಂಟು. ಹೆರವರಿಂದ ಆದಷ್ಟು ದೂರವಿರುವುದೇ ಇವರಿಗೆ ಸೇರುತ್ತದೆ. ಹೊಸ ಸನ್ನಿವೇಶಗಳನ್ನು ಎದುರಿಸಬೇಕಾಗುವಂಥ ಪ್ರಸಂಗಗಳಲ್ಲಿ ಹೋಗಲು ಇವರು ಹಿಂಜರಿಯುತ್ತಾರೆ. ತಮಗೆ ಸುರಕ್ಷಿತವೆನಿಸುವ ತಮ್ಮನ್ನೇ ಕೇಂದ್ರದಲ್ಲಿ ಇಟ್ಟುಕೊಂಡು ಕುಣಿವ ಗುಂಪನ್ನು ಕಟ್ಟಿಕೊಂಡು ಅದರಲ್ಲಿಯೇ ಮೈಮರೆತಿರಲು ಹಾರೈಸುತ್ತಾರೆ. ಶಾಲೆಯಲ್ಲಾಗಲೀ, ಸಮಾಜದಲ್ಲಾಗಲೀ, ಇಂತಹರ ನಡೆವಳಿಯೇ ಹೀಗೆ. ತಮ್ಮ ವಿಶಿಷ್ಟ ಗುಂಪಿನಲ್ಲಿ, ವಿಶಿಷ್ಟ ಸನ್ನಿವೇಶ

ಸೂಕ್ಷ್ಮವಾಗಿ ನೋಡಿದಲ್ಲಿ, ಎಲ್ಲ ಮಾನವರಲ್ಲಿ ಪರಸ್ಪರ ವಿರುದ್ಧ ಪ್ರವೃತ್ತಿಗಳ ತೊಡಕನ್ನು ಕಾಣಬಹುದು. ಅಂಥ ದ್ವಂದ್ವಗಳು ಕೀಳರಿಮೆಯ ಲಕ್ಷಣವೆಂದು ತಿಳಕೊಳ್ಳಬಹುದಾಗಿದೆ. ಆದರೆ ನಾವು ಯಾರ ಬಾಳಿನ ಒಡಪನ್ನು ಬಿಡಿಸಬೇಕಾಗಿದೆಯೋ ಅಂಥ ವ್ಯಕ್ತಿಯ ನಡೆನುಡಿಗಳನ್ನು ನಿರೀಕ್ಷಿಸಿದರೆ ಇತರರನ್ನು ಭೆಟ್ಟಿಯಾಗುವ ರೀತಿಯಲ್ಲಿ ಆತನ ಕೀಳರಿಮೆಯು ಸೂಚಿತವಾಗುತ್ತಿರುತ್ತದೆ. ಜನರೆದುರು ಬರುವಾಗ ಆತನು ಅಸಿಮಿಸಿಗೊಳ್ಳುತ್ತ ಅಡಿಯಿಡುವನು ; ಇಲ್ಲವೆ ಅಂತಹ ಮುದ್ರೆಯು ಕಾಣಿಸಿಕೊಳ್ಳುತ್ತದೆ ; ಈ ಅಂಜಿಕೆ ಹಿಂಜರಿಕೆಗಳು ಆತನ ಬಾಳಿನ ಬೇರೆ ಸಂದರ್ಭಗಳಲ್ಲಿಯೂ ವ್ಯಕ್ತವಾಗಬಹುದು. ಒಂದಡಿ ಮುಂದಿಟ್ಟವರೇ ಮತ್ತೆ ಹಿಂದೆ ಮರಳುವವರು ಹಲವು ಜನ. ಇದೂ ಒಂದು ವಿಶೇಷ ಕೀಳರಿಮೆಯ ಕುರುಹು.

ಅಂಥವರ ಅಂಜಿಕೆ-ಹಿಂಜರಿಕೆಯ ಪ್ರವೃತ್ತಿಯನ್ನು ಹೋಗಲಾಡಿಸುವ ಒಂದು ಸರ್ವೋತ್ತಮ ಉಪಾಯವೆಂದರೆ ಇವರನ್ನು ಎಂದೂ ನಿರುತ್ಸಾಹಗೊಳಿಸಕೂಡದು. ಯಾವಾಗಲೂ ಹುರುಪುಕೊಟ್ಟು ಮುಂದುವರಿವಂತೆ ಮಾಡತಕ್ಕದ್ದು. ಜೀವನದಲ್ಲಿ ಬರುವ ಅಡೆತಡೆಗಳನ್ನು ಎದುರಿಸಿ, ಬಾಳಿನ ತೊಡಕುಗಳನ್ನು ಸರಿಯಾಗಿ ಬಿಡಿಸಿಕೊಳ್ಳಲು ತಾವೂ ಸಮರ್ಥರಿರುವೆವೆಂದು ಅವರ ಮನವರಿಕೆಯಾಗುವಂತೆ ಮಾಡಬೇಕು. ಆತ್ಮ ವಿಶ್ವಾಸವನ್ನು ಬಲಪಡಿಸಲು ಇದೊಂದೇ ದಾರಿಯು, ಕೀಳರಿಮೆಯ ಪೀಡೆಯಿಂದ ಮುಕ್ತಮಾಡಿ ಒಬ್ಬರನ್ನು ಏಳ್ಗೆಯದಾರಿಗೆ ಹಚ್ಚಲು ಇದೊಂದೇ ಒಳ್ಳೆಯ ಆರೈಕೆಯಾಗಿದೆ. ●

# ೩ ಹೆಗ್ಗರಿಮೆ ಅಥವಾ ಹಿರಿಮೆಯ ಅರಿವು

ಈ ವರೆಗೆ ಕೀಳರಿಮೆಯನ್ನು ಕುರಿತು ವಿವೇಚಿಸಿದ್ದಾಯಿತು. ಇನ್ನು, ಇದಕ್ಕೆ ವಿಪರೀತವಾಗಿರುವ ಹೆಗ್ಗರಿಮೆಯ ಗುಣ-ಲಕ್ಷಣಗಳನ್ನು ತಿಳಿದುಕೊಳ್ಳುವ.

ಬೆಳೆಯದೆ ಇದ್ದುದು ಜೀವಿಯಲ್ಲ. ಆದುದರಿಂದ ಪ್ರತಿಯೊಂದು ಸಜೀವ ವ್ಯಕ್ತಿಗೂ ಒಂದು ಗತಿಯಿದೆ ಬೆಳವಿಯಿದೆ. ಇದರಲ್ಲಿ ನಿನ್ನೆ ಮತ್ತು ನಾಳೆಯೆಂದು ಎರಡು ವಿಭಾಗಗಳನ್ನು ಮಾಡಬಹುದು. ನಾಳೆಯ ಓಟವು ನಮ್ಮ ಹೆಗ್ಗುರಿಯತ್ತ ಅಖಂಡ ವಾಗಿ ಅವ್ಯಾಹತವಾಗಿ ಸಾಗಿರುತ್ತದೆ. ಅದರಂತೆ ನಿನ್ನೆಯು, ನಾವು ಕಳೆದುಕೊಳ್ಳಲು ಹೆಣಗಾಡುತ್ತಿರುವ-ಹೋರಾಡುತ್ತಿರುವ ಕೀಳರಿಮೆಯನ್ನು ಪ್ರತಿಬಿಂಬಿಸುತ್ತದೆ. ಆದ್ದರಿಂದ ಕೀಳರಿಮೆಯ ವಿವೇಚನೆಯನ್ನೇ ಮೊದಲು ಮಾಡಿದೆ. ಹೆಗ್ಗರಿಮೆಯು ಬಾಳಿನ ಮುನ್ನಡೆಗೆ, ಅದರ ಗತಿಗೆ ಕಾರಣವಾಗಿದೆ. ಇವೆರಡೂ ಅರಿಮೆಗಳು ಸ್ವಾಭಾವಿಕವಾಗಿ ಒಂದಕ್ಕೊಂದು ಹೊಂದಿಕೊಂಡಿವೆ. ಆದುದರಿಂದ ಕೀಳರಿಮೆಯ ವ್ಯಕ್ತಿಗಳ ಚರಿತ್ರೆಗಳಲ್ಲಿ ಹೆಗ್ಗರಿಮೆಯೂ ಸ್ವಲ್ಪ ಹೆಚ್ಚು ಕಡಿಮೆ ಹುದುಗಿದ್ದರೆ ಸೋಜಿಗಪಡಬೇಕಾಗಿಲ್ಲ. ಅದೇ ಮೇರೆಗೆ, ಹೆಗ್ಗರಿಮೆಯ ತೊಡಕಿನವರ ಹೃದಯಾಂತರಾಳದಲ್ಲಿ ಕೆಲವೊಂದು ಕೀಳರಿಮೆಯು ಅವಿತುಕೊಂಡಿರುವುದನ್ನು ಕಾಣಬಹುದು.

## ಹೆಗ್ಗರಿಮೆಯೂ ಅಪರಾಧಿಗಳ ವಿಕೃತ ಮನೋವೃತ್ತಿಯೂ.

ಕೀಳರಿಮೆಯಿರಲಿ, ಅದರಿಂದ ಮೇಲೆದ್ದು ಹೆಗ್ಗಳಿಕೆಯನ್ನು ಸಾಧಿಸಬೇಕೆಂಬ ಹೆಗ್ಗರಿವಿನ ಹೆಣಗಾಟವಿರಲಿ, ಇವು ಮಿತಿಮೀರಿದ ವಿಪರೀತಕ್ಕೆ ಮುಟ್ಟಿದಾಗಲೇ ಇವಕ್ಕೆ 'ಕಾಲ್ತೊಡಕು' ಎಂಬ ಹೆಸರು ಸಲ್ಲುತ್ತದೆ. ಈ ದೃಷ್ಟಿಯಿಂದ, ಒಂದೇ ವ್ಯಕ್ತಿಯಲ್ಲಿ ಇರುವ ಈ ಎರಡೂ ಅತಿಮೆಗಳಲ್ಲಿ ಪರಸ್ಪರ ವಿರುದ್ಧವಾದ ವಿರೋಧಾಭಾಸವೇನೂ ಇಲ್ಲ. ಏಕೆಂದರೆ ಶ್ರೇಷ್ಠತೆಯ ಕುರಿತು ಹೆಣಗಾಟವೂ ತನ್ನ ಕುಂದು ಕೊರತೆಗಳನ್ನು ಎಣಿಸಿಕೊಳ್ಳುವ ಅರಿವೂ ಸ್ವಾಭಾವಿಕವಾಗಿಯೇ ಒಂದಕ್ಕೊಂದು ಪೂರಕವಾಗಿವೆ. ನಮ್ಮ ಇಂದಿನ ಸ್ಥಿತಿಯಲ್ಲಿ ಏನೊಂದು ಕೊರತೆಯೇ ಎನಿಸದಿದ್ದರೆ ಇಲ್ಲವೇ ಅನುಭವಕ್ಕೆ ಬರದಿದ್ದರೆ, ನಾವು ಮೇಲ್ಮೆಗಾಗಿ ಹೆಣಗುತ್ತಲೇ ಇದ್ದಿಲ್ಲ. ಇಂಥ ಸ್ವಾಭಾವಿಕ ಪ್ರವೃತ್ತಿಗಳಲ್ಲಿ ಹೇಗೆ ವಿರೋಧವಿಲ್ಲವೊ, ಹಾಗೆಯೇ ಆ ಪ್ರವೃತ್ತಿಗಳು ವಿಪರೀತ ವಿಕೋಪಕ್ಕೆ ಹೋದಾಗಲೂ ಅವುಗಳಲ್ಲಿ ಅಸಂಗತತೆಯು ಏನೂ ಇಲ್ಲ.

ವರಿಷ್ಠತೆಯ ಸಾಧನೆಗಾಗಿ ನಡೆವ ಹೆಣಗಾಟವು ಜೀವಂತವಿರುವವರೆಗೆ ನಡೆಯು ತಕ್ಕದ್ದೇ. ಈ ಸಾಧನಾ ಶಕ್ತಿಯೇ ಆ ವ್ಯಕ್ತಿಯ ಇಚ್ಛಾಶಕ್ತಿ. ಬಾಳುವುದು ಎಂದರೆ ಬದುಕು (ಸಂಪತ್ತು) ಪಡೆಯುವುದು. ಗಳಿಸುವುದು ಅರ್ಥಾತ್ ಗುರಿಯನ್ನು ಸಾಧಿಸುವುದು.

ಬದುಕು (ಸಂಪಾದಿಸಲು) ಚಾಲನೆಯನ್ನು ಕೊಡುವ ಸಂಗತಿಯೆಂದರೆ, ಧ್ಯೇಯ ಸಾಧನೆಯ ಪ್ರೇರಣೆಯೇ. ಇದುವೆ ಮೇಲ್ಮೆಗಾಗಿ ನಡೆವ ಹೆಣಗಾಟ. ಜೀವನ ಪ್ರವಾಹ. ಉಳಿದ ಪ್ರವಾಹಗಳಂತೆ ಇದೂ ತನ್ನ ಆಳವಿನಲ್ಲಿ ಸಿಕ್ಕವರನ್ನೆಲ್ಲ ಸೆಳೆದು ತೂರಿಕೊಂಡು ಮುಂದೊಯ್ಯುತ್ತದೆ. ಸೋಮಾರಿಗಳಾದ ಮಕ್ಕಳ ಮೈಗಳ್ಳತನ, ಉದಾಸೀನತೆಗಳನ್ನು ನೋಡಿದರೆ, ಅ ವ ರ ಲ್ಲಿ ಮೇಲ್ಮೆಗಾಗಿ ಹೆಣಗಾಡುವ ಪ್ರವೃತ್ತಿಯೇ ಲೋಪವಾಗಿದೆಯೆಂದು ನಾವು ಹೇಳಬಹುದು. ಆದರೂ ಅವರಲ್ಲೂ ತಾವು ಮಿಗಿಲಾಗಬೇಕೆಂಬ ಆಸೆಯಿದ್ದುದು ಕಾಣಬರುತ್ತದೆ. ‘ನಾನು ಮನಸು ಮಾಡಿದರೆ, ಅಲಸಿಗನಾಗಿದ್ದಿಲ್ಲವಾದರೆ ನಾನೇ ಇಂದಿನ ಮುಂದಾಳಾಗಿರುತ್ತಿದ್ದೆ!’ ಎಂದು ಉಸಿರುವರು. ಅವರಿಗೆ ತಮ್ಮ ಕರ್ತೃತ್ವಶಕ್ತಿಯಲ್ಲಿ ತುಂಬ ವಿಶ್ವಾಸ. ಜೀವನದಲ್ಲಿ ತಾವು ಏನಾದರೂ ಉಪಯುಕ್ತವಾದುದನ್ನು ಮಾಡಬಲ್ಲೆವೆಂದೂ ಅವರು ‘ರೆ’ ಹಾಕಿ ಹೇಳುತ್ತಾರೆ. ‘ರೆ’ಯಿಂದ ಅದು ಆರಂಭವಾಗಿ‘ರೆ’ ದಲ್ಲಿ ಅವರ ಮಾತಿನ ಮುಕ್ತಾಯವಾಗುತ್ತದೆ! ಇದೆಲ್ಲವೂ ಅವರ ಬರೇ ಹರಟೆ. ಕಲ್ಪನಾ ವಿಲಾಸ. ಆದರೆ ಮಾನವನಿಗೆ ಹಲವು ಬಾರಿ ಬರೇ ಕಲ್ಪನಾವಿಲಾಸ ದಿಂದಲೂ ತೃಪ್ತಿಯುಂಟು. ಹೇಡಿಗಳಲ್ಲಂತೂ ಈ ಮಾತು ಖರ ದಿಟ, ಅಂಥವರು ಕೇವಲ ಮನೋರಾಜ್ಯಗಳಲ್ಲಿ ವಿಹರಿಸಿಯೇ ಸಮಾಧಾನ ಪಡಬೇಕಾಗುವುದು. ಏಕೆಂದರೆ ತಮ್ಮಲ್ಲಿ ಸಾಕಷ್ಟು ಕಾರ್ಯಶಕ್ತಿಯುಂಟೆಂದು ಅವರಿಗೆ ಎನಿಸುವದಿಲ್ಲ. ಅದರಿಂದ ಪ್ರತ್ಯಕ್ಷ ಕೆಲಸಕ್ಕೆ ತಲೆಗೊಡಲು ಹಿಂಜರಿಯುವರು. ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳುವರು. ಹೀಗೆ ಕಾರ್ಯರಂಗದಿಂದ ಪಲಾಯನಮಾಡಿ, ಕೇವಲ ಹರಟೆಯ ನಾಡಿನಲ್ಲಿ ಸೇರಿ ತಾವು ಇದ್ದುದಕ್ಕಿಂತಲೂ ಹೆಚ್ಚು ಬಲಶಾಲಿಗಳೂ ಬುದ್ಧಿಶಾಲಿಗಳೂ ಆಗಿರುವೆವೆಂದು ಕಲ್ಪಿಸಿಕೊಳ್ಳುತ್ತಾರೆ.

ಕೆಲವು ಮಕ್ಕಳು ತುಡುಗಿಗೆ ಆರಂಭಿಸುವರು. ಇದೂ ಅವರ ಹೆಗ್ಗರಿವಿನ ಪರಿಣಾಮವೇ. ಹೆರವರಿಗೆ ಟೊಪ್ಪಿಗೆ ಹಾಕುವಷ್ಟು ಸಮರ್ಥರು ತಾವು ಎಂದು ಭಾವಿಸುವರು. ತಮ್ಮ ತುಡುಗು ಹೆರವರಿಗೆ ತಿಳಿಯದು, ಎಂದು ಹೆಮ್ಮೆ ಪಡುವರು. ಸ್ವಲ್ಪ ಪರಿಶ್ರಮದಿಂದಲೇ ತಾವು ಇತರರಿಗಿಂತ ಸಿರಿವಂತರಾದೆವೆಂದು ಸಾಧಿಸುವರು. ತಾವು ಬಹಳ ಹಿರಿದಾದವರೆಂಬ ಹೆಮ್ಮೆಯು ಅಪರಾಧಿಗಳಲ್ಲಿ ಇದೇ

ಭಾವನೆಯು ಇನ್ನೂ ವಿಶೇಷವಾಗಿ ಕಂಡುಬರುತ್ತದೆ. ಮೂಲತಃ ನೀಚರು ಯಾರೂ ಇಲ್ಲ. ಅನ್ಯಾಯ ಅಪರಾಧಗಳ ಮೂಲ ಕಾರಣವು ಹುಟ್ಟು-ದುರ್ಗಣವಲ್ಲ. ರಾಜಮಾರ್ಗದಿಂದ ಹೋಗಿ ಹೆಗ್ಗಳಿಕೆಯನ್ನು ಪಡೆಯಲಿಕ್ಕಾಗದ, ಹೆಗ್ಗರಿವಿನ ಪೀಡೆಗೆ ಒಳಗಾದ ಜನಗಳು, ತಮ್ಮ ಗುರಿಯನ್ನು ಮುಟ್ಟಲಿಕ್ಕೆ ಕೈಕೊಂಡ ಅಡ್ಡದಾರಿಯಿದು.

ಇದೇ ಮೇರೆಗೆ, ಆತುರ, ಚಿಂತೆಗಳಿಂದ ತೊಳಲುವ ಜನಗಳು ತಮ್ಮ ಪ್ರತಿಷ್ಠೆ ಬೆಳಿಸಲು ಹೆಗ್ಗರಿವನ್ನು ಆಶ್ರಯಿಸುತ್ತಾರೆ. ಅವರು ತಮ್ಮ ಚಿಂತೆ ಭೀತಿಗಳಿಂದ ಮಿಕ್ಕವರನ್ನು ತಮ್ಮತ್ತ ಆಕರ್ಷಿಸುವರು. ತಮ್ಮ ಚಿಂತಾಗ್ರಸ್ಥ ಸ್ಥಿತಿಯ ಬಲದಿಂದ ಅವರು. ಹತ್ತಿರ ಬಂದವರ ಮೇಲೆ ಅಧಿಕಾರ ನಡೆಸಲು ಹವಣಿಸುತ್ತಾರೆ. ಅವರ ಸಂಕಷ್ಟದಲ್ಲಿ ಹಲವರು ಅವರ ಜೊತೆಯಲ್ಲಿಯೇ ಇರಬೇಕಾಗುತ್ತದೆ. ಅವರನ್ನು ಹಿಂಬಾಲಿಸಿ ಹೋಗಬೇಕಾಗುತ್ತದೆ. ಇಂಥ ನಿರ್ವಿಣ್ಣ ವ್ಯಕ್ತಿಗಳ ಜೊತೆಗಾರರು ಆ ಚಿಂತಾಗ್ರಸ್ಥನ ವೃತ್ತಿಗೆ ಅನುರೂಪವಾಗಿಯೇ ತಾವೂ ಇರುವುದು ಅಗತ್ಯವಾಗುತ್ತದೆ. ಹಲವರ ಲಕ್ಷ್ಯವನ್ನು ತನ್ನೆಡೆಗೆ ಯಾವಾಗಲೂ ಎಳೆದಿಟ್ಟುಕೊಂಡು, ಹಲವರಿಗೆ ತಮಗಾಗಿ ದುಡಿಯಲು ಒತ್ತಾಯ ಪಡಿಸಿ ಹಲವರ ಮೇಲೆ ತಮ್ಮ ವರ್ಚಸ್ವವನ್ನು ಪರ್ಯಾಯವಾಗಿ ಬೀರಿ. ಇಂಥವರು ತಮ್ಮ ಹೆಗ್ಗಳಿಕೆಯ ಹಿಗ್ಗನ್ನು ಅನು ಭವಿಸುವರು. ದುಃಖಿತರೂ, ಎಬಡರೂ. ಹುಚ್ಚರೂ ಮನೆಯಲ್ಲಿ ಎಲ್ಲರ ಚಿತ್ತವನ್ನೂ ತಮ್ಮೆಡೆಗೆ ಸೆಳೆಯುವರು. ಕೀಳರಿಮೆಯ ವ್ಯಾಧಿಯೇ ಅವರಿಗೆ ಈ ಶಕ್ತಿ ಯನ್ನೀಯುತ್ತದೆ. 'ಕಸುವು ಕುಗ್ಗುತ್ತದೆ ;' 'ಅಶಕ್ತತೆ ಹೆಚ್ಚುತ್ತಿದೆ' ಎಂದು ಮುಂತಾಗಿ ಅವರು ಗೋಣಗುತ್ತಾರೆ. ಹೀಗೆ ದುರ್ಬಲರಾದರೂ ಎಲ್ಲರಿಗಿಂತ ಅವರು ಬಲಿಷ್ಠರೇ. ಏಕೆಂದರೆ ನಿರೋಗಿಗಳನ್ನು ಈ ರೋಗಿಗಳು ಆಳುತ್ತಾರೆ ! ನಮ್ಮ ಇಂದಿನ ಸಂಸ್ಕೃತಿಯಲ್ಲಿ ದುರ್ಬಲರಿಗೆ ಬಲಿಷ್ಠವಾದ ಅಧಿಷ್ಠಾನವಿದೆ. ನಮ್ಮಲ್ಲಿ ಅತ್ಯಂತ ಬಲ್ಲಾಳುಗಳು ಆರೆಂದು ಕೇಳಿದರೆ, ಬಾಲಕರೇ. ಏಕೆಂದರೆ ಮಗುವು ಎಲ್ಲರನ್ನೂ ಆಳುವುದು. ಯಾರ ಆಳೂ ಅದಲ್ಲ ! ಅಳುವೇ ಅದರ ಅಮೋಘವಾದ ಅಸ್ತ್ರ.

## ಕೀಳ್ಮೆ-ಹೆಮ್ಮೆಗಳಲ್ಲಿ ಅನ್ಯೋನ್ಯ ಸಂಬಂಧ

ಹೆಗ್ಗರಿಮೆಯ ಮಗುವು ಉದ್ಧಟವೂ ಅಧಿಕ ಪ್ರಸಂಗಿಯೂ, ಸೊಕ್ಕಿನದೂ ಜಗಳಗಂಟವೂ ಆಗಿರುತ್ತದೆ. ಇದು ಯಾವಾಗಲೂ, ತಾನು ಇದ್ದುದಕ್ಕಿಂತ ಮಿಗಿಲಾಗಿ ತೋರಿಸಿಕೊಳ್ಳಲು ಹಾತೊರೆಯುತ್ತಿರುತ್ತದೆ. ಇಂಥವರು ಏನಾದರೂ

ನೆವದಿಂದ ಕೆರಳಿ, ಕಳವಳಿಸಿ, ಮನೆಯವರೆಲ್ಲರೂ ತನ್ನನ್ನು ಓಲೈಸಿ, ಉಪಚರಿಸು ವಂತೆ ಹಂಚಿಕೆ ಮಾಡುತ್ತಾರೆ. ಏಕೆಂದರೆ ಇಂಥವರಿಗೆ, ತಾವು ಮಿಗಿಲೆನಿಸಿಕೊಳ್ಳಲು ಎಲ್ಲರ ಒಲವಿನ ವಿಷಯುವಾಗಲು ಬೇರೆ ದಾರಿಯೆ ಕಾಣುತ್ತಿರುವುದಿಲ್ಲ. ಅವರ ಕೀಳ ರಿಮೆ ಅವರ ಮನದಲ್ಲಿ ಯಾವಾಗಲೂ ಕಟಿಯುತ್ತಿರುತ್ತದೆ. ಮಕ್ಕಳು ಹೆರವರ ಮೇಲೆ ಉರಿದೆದ್ದು ಹರಿಹಾಯುವುದು, ಹೊಡೆದಾಟಕ್ಕಾಗಿ, ತಾವೂ ಕಡಿಮೆ ಯವರಲ್ಲವೆಂದು ಪ್ರಸ್ಥಾಪಿಸುವುದಕ್ಕಾಗಿ, ಇಂಥ ಅಡ್ಡದಾರಿಯಿಂದ ಅವರು ಗೆಲವನ್ನು ಪಡೆದು ಮಿಗಿಲಾದವರೆಂದೆನಿಸಿಕೊಳ್ಳುವ ಹೆಗ್ಗಳಿಕೆಯ ದಂದುಗವನ್ನು ಆರಂಭಿಸುತ್ತಾರೆ. ಇವರಿಗೆ ಕೀಳ್ಮೆಯೊಳಗಿಂದ ಹೊರಬೀಳಲು ಇದುವೆ ಸುಲಭ ಯುಕ್ತಿಯೆನಿಸುವುದು.

ಇಂತಹ ಮಕ್ಕಳನ್ನು ತಿದ್ದುವ ಉಪಾಯಗಳನ್ನು ನಾವು ಕಂಡು ಹಿಡಿಯಬೇಕು. ಜೀವನದ ಸರಿಯಾದ ರೀತಿಯನ್ನು ಅವರು ತಿಳಿಯದೇ ಇದ್ದುದರಿಂದಲೇ ಆ ಬಗೆಯಾಗಿ ಅನಾಚಾರಿಗಳಾಗಿರುತ್ತಾರೆ. ಇಂಥವರಿಗೆ ಮೆಲ್ಲಮೆಲ್ಲನೆ, ನಮ್ಮ ವಿಚಾರ ಸರಣಿಯನ್ನು ವಿವರಿಸಿ ಮನಗಾಣಿಸಬೇಕು. ತಮ್ಮ ಕುಂದು ಕೊರತೆಗಳನ್ನು ಯಾರೂ ನೇರವಾಗಿ ಎಂದೂ ಒಪ್ಪಿಕೊಳ್ಳಲಾರರು. ತಾವು ಶ್ರೇಷ್ಠರೆಂತಲೇ ಅವರು ನಂಬುವರು. ಆದುದರಿಂದ ಅವರನ್ನು ಹೀಯಾಳಿಸಿ ಫಲವಿಲ್ಲ. ಆತ್ಮೀ ಯತೆಯ ಸಲುಗೆ ಒಲವುಗಳ ನೆರವಿನಿಂದ ತಿದ್ದಲು ಹವಣಿಸಬೇಕು.

ಒಂದು ವ್ಯಕ್ತಿಯು ಡಾಂಭಿಕನು ಅಥವಾ ಪ್ರದರ್ಶನ ಪ್ರಿಯನಾಗಿದ್ದರೆ, ಇದಕ್ಕೂ ಕೀಳರಿಮೆಯೇ ಮುಖ್ಯ ಕಾರಣವು. ಜೀವನದ ಉಪಯುಕ್ತತೆಯ ದಿಕ್ಕಿನಲ್ಲಿ ಸಾಗಿ ಇತರರನ್ನು ಸರಿಗಟ್ಟಲಿಕ್ಕಾಗಲೀ, ಮುಂದುವರಿಯಲಿಕ್ಕಾಗಲೀ. ಆಗದೆ ಕೀಳ್ಮೆಯ ನೆಪದಿಂದ ಆತನು ಸಮಾಜದೊಂದಿಗೆ ಸಮರಸನಾಗಿರುವದಿಲ್ಲ, ದೂರ ಉಳಿಯುವನು. ತನ್ನ ಬಾಳಿನ ತೊಡಕನ್ನು ಹೇಗೆ ಬಿಡಿಸಬೇಕೆಂಬುದನ್ನು ಆತನು ಅರಿಯನು. ಆದ್ದರಿಂದಲೇ, ತಂದೆತಾಯಿಗಳೊಂದಿಗೂ ಗುರು–ಹಿರಿಯರೊಂದಿಗೂ ಆತನು ಚಿಕ್ಕಂದಿನಲ್ಲಿ ಹೋರಾಡುತ್ತಿದ್ದನೆಂದು ಕಂಡು ಬರುವುದು. ಇವೆಲ್ಲ ಸನ್ನಿ ವೇಶಗಳನ್ನು ಸರಿಯಾಗಿ ತಿಳಿದುಕೊಂಡು, ಇಂಥ ಮಕ್ಕಳಿಗೂ ಅದನ್ನು ತಿಳಿಸಿ ಹೇಳಿದರೆ ಚೆನ್ನಾಗುವುದು.

ಕೀಳರಿಮೆ ಮತ್ತು ಹೆಗ್ಗರಿಮೆಗಳಲ್ಲಿ ಇರುವ ಇದೇ ತರದ ತೊಡಕು ಮಜ್ಜಾ ತಂತುಗಳ ವಿಕಾರಗಳಿಂದ ನರಳುವ ಬೇನಿಗರಲ್ಲೂ ಕಂಡು ಬರುತ್ತದೆ. ಮಜ್ಜಾ ವಿಕೃತಿಯುಳ್ಳವನು ತನ್ನ ಹೆಗ್ಗತನವನ್ನು ಅಡಿಗಡಿಗೆ ವ್ಯಕ್ತಪಡಿಸುತ್ತಾನೆ. ಅವರೆ

ತನ್ನ ಕೀಳರಿಮೆ ಮಾತ್ರ ಆತನಿಗೆ ಕಾಣುವುದಿಲ್ಲ ! ಒಡನೆ ಬೆಳೆದ ಮತ್ತು ಒಡನಾಡಿಗಳಾದ ಅಕ್ಕ ಮತ್ತು ತಂಗಿಯರ ಒಂದು ಉದಾಹರಣವು ಈ ವಿಷಯದಲ್ಲಿ ತುಂಬ ಬೆಳಕನ್ನು ಕೊಡುವಂತಹದಾಗಿದೆ : ಇವರಿಬ್ಬರಲ್ಲಿ ಅಕ್ಕನು ಬಹಳ ಚೆಲುವೆ ಮತ್ತು ಎಲ್ಲರಿಗೂ ಬೇಕಾದವಳು. ಆದರೆ ತಂಗಿಯು ಅಷ್ಟು ಲೋಕಪ್ರಿಯಳಾಗಲಿಲ್ಲ. ಇವಳಲ್ಲಿ ಅಕ್ಕನ ಬಗ್ಗೆ ಅಸೂಯೆಯುಂಟಾಯಿತು. ಇವಳು ತಾನು ನಾಲ್ವರೊಡನೆ ಕೂಡಿ ನಡೆವ ಸಾಮಾಜಿಕ ಆಸಕ್ತಿಯನ್ನು ಹೆಚ್ಚಿಸಿಕೊಂಡಿದ್ದರೆ, ಅವಳು ಸರಿಯಾದ ದಾರಿಯಲ್ಲಿ ಬೆಳವಣಿಗೆಯನ್ನು ಹೊಂದುತ್ತಿದ್ದಳು. ಅಕ್ಕನಿಂದಲೂ ಹೆಚ್ಚಿನವಳೆನಿಸಿಕೊಳ್ಳಲು ಅವಳು ಸಂಗೀತವನ್ನು ಕಲಿಯಲು ಆರಂಭಿಸಿದಳು. ಆದರೆ ಅದರಲ್ಲಿಯೂ, ಕೀಳರಿಮೆ ಅವಳ ಗಂಟಲಿಗೆ ಗಾಳವಾಯಿತು. ಹೊಟ್ಟೆಯೊಳಗಿನ ಈರ್ಷೆಯು ದುಚ್ಚು ಮಿತಿಗಿಂತ ಹೆಚ್ಚಾಗಿ ಪ್ರಗತಿಯು ಕಟ್ಟಾಯಿತು. ಮುಂದೆ ೨೦ ವರ್ಷ ವಯಸ್ಸಿನ ಸುಮಾರಿಗೆ ಅವಳ ಅಕ್ಕನು ಮದುವೆಯಾದಳು. ಅಕ್ಕನೊಂದಿಗೆ ಸ್ಪರ್ಧೆ ಮಾಡಲು ತಾನೂ ಮದುವೆಯಾಗಬೇಕೆಂದು ಹಂಬಲಿಸಿದಳು. ಇದರಿಂದ ಅವಳು ಹೆಚ್ಚು ಹೆಚ್ಚಾಗಿಯೇ ಹೀನಳಾಗಿ ತನ್ನ ಕೀಳರಿಮೆಯ ಹುದಲಿ (ಕೆಸರಿ)ನಲ್ಲಿ ಇಳಿಯಹತ್ತಿದಳು. ಸರಿಯಾದ ದಾರಿಯಿಂದ ಹೆಚ್ಚು ಹೆಚ್ಚು ದೂರ ಹೊರಟಳು. ತಾನು ತೀರ ದುಷ್ಟೆಯೆಂದೂ ತನ್ನಲ್ಲಿರುವ ಈ ದುಷ್ಟ ಶಕ್ತಿಯ ಬಲದಿಂದ ಬೇಕಾದವರನ್ನು ನರಕಕ್ಕೆ ನೂಕುವ ಮಾಂತ್ರಿಕ ಶಕ್ತಿಯೊಂದು ತನಗೆ ಪ್ರಾಪ್ತವಾಗಿದೆಯೆಂದೂ ಅವಳು ದೃಢವಾಗಿ ನಂಬಿದಳು.

ಈ ಮಾಂತ್ರಿಕ ಶಕ್ತಿಯ ಕಲ್ಪನೆಯು ಹೆಗ್ಗರಿಮೆಯ ಆವಿಷ್ಕಾರಣವು ಆದರೆ ಇದರಲ್ಲೂ ಅವಳಿಗೆ ಪೂರ್ಣ ಸಮಾಧಾನವಿದ್ದಿಲ್ಲ. ಸಿರಿವಂತರು ಇದ್ದ ಸ್ಥಿತಿಯಲ್ಲೂ ತೃಪ್ತಿಪಡದೆ ತಿಣುಕುವಂತೆ ಈ ದುರ್ದೈವಿ ಹೆಣ್ಣಿನ ಗತಿಯೂ ಆಯಿತು. ಜನರನ್ನು ನರಕಕ್ಕೆ ದೂಡುವ ಶಾಪ ಶಕ್ತಿಯುಂಟೆಂಬ ನಂಬುಗೆಯಂತೆ, ಪತಿತರನ್ನು ಉದ್ಧರಿಸುವ ಅನುಗ್ರಹ–ಸಾಮರ್ಥ್ಯವೂ ತನಗೆ ಬೇಕು–ಇದ್ದೇ ಇದೆ ಎಂದೂ ಕಲ್ಪಿಸಹತ್ತಿದಳು. ಇದೆಲ್ಲವೂ ಅವಳ ಹುರುಳಿಲ್ಲದ ಮನೋರಥವಾಗಿತ್ತು. ಆದರೂ ಇಂಥ ಕಲ್ಪನಾಜಾಲದಿಂದ ತಾನು ತನ್ನ ಲೋಕ ಪ್ರಿಯಳಾದ ತನ್ನ ಅಕ್ಕನಿಗಿಂತ ಮಿಗಿಲಾದವಳೆಂಬ ಒಂದು ಬಗೆಯ ಆತ್ಮವಿಶ್ವಾಸವು ಅವಳಲ್ಲಿ ತಲೆದೋರಿತು. ಇದೊಂದೇ ಹಂಚಿಕೆಯಿಂದ ಅವಳು ತನ್ನ ಅಕ್ಕನನ್ನು ಮೀರಬಹುದಾಗಿತ್ತು. ಕೀಳರಿಮೆಯಿಂದ ಉಂಟಾದ ಹೊಟ್ಟೆಕಿಚ್ಚು ಹೆಚ್ಚು ಹೆಚ್ಚಾದಂತೆ ಇವಳಿಗೆ ತನ್ನ ಆ ಶಾಪಾನುಗ್ರಹ ಶಕ್ತಿಯ ಕಲ್ಪನೆಯಲ್ಲಿ ಶ್ರದ್ಧೆಯು ಹೆಚ್ಚು ದೃಢವಾಗುತ್ತಿತ್ತು. ಆ ಶ್ರದ್ಧೆಯ ಬಲದಿಂದ ಇವಳು ಕೆಲವು ಜನಗಳ ಮೇಲೆ ತನ್ನ ವರ್ಚಸ್ಸನ್ನು

ಬೀರುತ್ತಿದ್ದಳು. ಈ ಉದಾಹರಣೆಯಿಂದ, ಒಂದು ವ್ಯಕ್ತಿಯ ಮನಸ್ಸಿನ ಆಳದಲ್ಲಿ ಇರುವ ಕೀಳರಿಮೆಯು ಪೂರಕವಾಗಿ ಹೆಗ್ಗರಿಮೆಯು ಹೇಗೆ ಒಮ್ಮೊಮ್ಮೆ ತಲೆಯೆತ್ತಿ ಕಾರ್ಯ ಮಾಡುವುದೆಂಬುದನ್ನು ಮನಗಾಣಬಹುದು.

## ಕೀರ್ತಿವಂತರ ಮನೆಯವರ ಮನಸ್ಥಿತಿ.

ಕುಟುಂಬದಲ್ಲಿ ಒಬ್ಬರು ವಿಶೇಷ ವಿಖ್ಯಾತರಾದರೆ ಅವರ ಮನೆಯವರ ಮೇಲೆ ಅವರ ವಿಪರೀತ ಪರಿಣಾಮಗಳಾಗದೆ ಇರುವುದಿಲ್ಲ. ಮಿಕ್ಕವರಿಗೆ ಅವರಷ್ಟು ಪ್ರಭಾವಿಗಳಾಗಲು ಇಂಬು ದೊರೆಯದೆ ಒಮ್ಮೊಮ್ಮೆ ಅವರ ಬಾಳು ಅವರಿಗೆ ಅಸಹ್ಯವೆಂದೆನಿಸಬಹುದು. ಇಂಥ ಮನೆಯ ಮಕ್ಕಳಲ್ಲಿ ಕೀಳರಿಮೆಯು ತಲೆದೋರಿ ಅದು ಬೇಗನೆ ಹೆಗ್ಗರಿಮೆಯ ರೂಪಾಂತರವನ್ನೂ ಹೊಂದಬಹುದು. ಈ ಹುಡುಗರು ತಮ್ಮ ಸರಿಸಮಾನರೊಂದಿಗೂ, ಒಡನಾಟದ ಓರಿಗೆಯವರೊಂದಿಗೂ ಹೊಂದಿ ಕೊಂಡು, ತನ್ನಲ್ಲಿಯಂತೆ ಇನ್ನಿತರರಲ್ಲಿಯೂ ಅಷ್ಟೇ ಆಸಕ್ತಿಯನ್ನು ಅವರು ಬೆಳಿಸಿಕೊಂಡರೆ, ಅವರು ಬಾಳಿನ ಒಗಟು ತೊಡಕುಗಳನ್ನೆಲ್ಲ ನೇರವಾಗಿ ಬಗೆ ಹರಿಸಬಹುದು. ಆದರೆ ಇವರ ಕೀಳರಿಮೆಯು ಮೊಳೆತು ಮರವಾಗಿದ್ದರೆ, ಈ ಹುಡುಗರು ತಾವು ಯಾವುದಾದರೂ ಹಗೆಗಳ ನಾಡಿನಲ್ಲಿ ಇದ್ದ ಹಾಗೆಯೆ ಎಲ್ಲ ರೊಡನೆ ಇರುವರು. ತಮ್ಮ ಸಂಗಡಿಗರಿಗಿಂತ ತಮ್ಮ ಹಕ್ಕು ಹಿತಗಳನ್ನೆಲ್ಲ ಹೆಚ್ಚಾಗಿ ನೋಡಿಕೊಳ್ಳುವರು. ಸುಖಜೀವನಕ್ಕೆ ಅವಶ್ಯಕವಾದ ನಾಲ್ವರ ಹಿತಾಹಿತಗಳಲ್ಲಿ ಸಮರಸರಾಗಬೇಕೆಂಬ ಸಾಮಾಜಿಕ ಭಾವನೆಯನ್ನು ಕಳೆದುಕೊಳ್ಳುವರು. ಕೇವಲ ತಾವು ದೊಡ್ಡವರ ಮಕ್ಕಳೆಂಬ ಹೆಮ್ಮೆ ಹೆಗ್ಗಳಿಕೆಯಿಂದ ಕಣ್ಣುತಿರುಗಿದವರಾಗಿ ವರ್ತಿಸುವರು. ಆದ್ದರಿಂದ ಬಾಳಿನ ತೊಡಕಿನಿಂದ ಪಾರಾಗಲು, ಮನಸ್ಸಿನ ಶಾಂತಿಯನ್ನು ಹೇಗಾದರೂ ಪಡೆದುಕೊಳ್ಳಲು ಅಂಥವರು ಜೀವನದ ನಿರುಪ ಯೋಗಿಯಾದ ಮಗ್ಗುಲಿಗೆ ಹೊರಳುವರು. ತಮ್ಮ ದುರ್ಬಲತೆಯ ಬಂಡವಾಳ ದಿಂದಲೇ ಲಾಭ ಪಡೆದುಕೊಳ್ಳುವ ವಿಕೃತ ಮನೋವೃತ್ತಿಯ ತಿರುಕರಂತೆಯೇ ಇಂಥ ಕೀಳರಿಮೆಯ ಜನರೂ ಮುಂದೆ ಪರಾವಲಂಬಿಗಳಾಗಿ ಬೆಳೆಯುವರು.

ಚಿಕ್ಕವರಿರಲಿ, ದೊಡ್ಡವರಿರಲಿ ಅವರಲ್ಲಿ ತಾವು ಕೀಳರು, ಕಿರುಕುಳರು ಎಂಬ ನಂಬುಗೆಯು ದೃಢವಾಗಹತ್ತಿದಂತೆ, ಅವರ ಸಾಮಾಜಿಕ ಆಸಕ್ತಿಯು ನಷ್ಟವಾಗು ವುದು. ಇವರು ಕೇವಲ ತಮ್ಮ ಹೆಗ್ಗಳಿಕೆಗಾಗಿಯೇ ಒದ್ದಾಡುವರು. ಇದು ಮನುಷ್ಯ ಸ್ವಭಾವದ ಲಕ್ಷಣ. ತನ್ನ ಹೆಗ್ಗಳಿಕೆಯೊಡನೆ ಸಾಮಾಜಿಕ ಆಸಕ್ತಿಯನ್ನೂ ಕೆಲಮಟ್ಟಿಗೆ ಬೆಳಸಿಕೊಂಡು, ತನ್ನ ಏಳ್ಗೆಗಳನ್ನು ಸಾಮಾಜಿಕ ಹಿತದೊಂದಿಗೆ

ಹೊಂದಿಸಿಕೊಂಡು ಬದುಕು ಮಾಡಿದರೆ ಅವನೊಬ್ಬ ನಿಜವಾಗಿಯೂ ಭಾಗ್ಯವಂತನೇ ಸರಿ. ಜೀವನದ ಉಪಯುಕ್ತವಾದ ದಿಕ್ಕಿನಲ್ಲಿಯೇ ಇದ್ದು ತನ್ನ ಹಾಗೂ ಹೆರವರ ಹಿತವನ್ನು ಸಾಧಿಸುತ್ತಾನೆ. ಆದರೆ ಸಾಮಾಜಿಕ ಆಸಕ್ತಿಯನ್ನು ಕಳೆದುಕೊಂಡಿದ್ದರೆ, ಆ ವ್ಯಕ್ತಿಯು ನಿಜವಾಗಿಯೂ, ಬಾಳಿನ ತೊಡಕು ಬಿಡಿಸಲು ಆಗದ ಹೇಡಿಯಾಗಿ ಸಂಕುಚಿತ ಜೀವನವನ್ನು ಸಾಗಿಸಬೇಕಾಗುವುದು.

ಇನ್ನು ಹಿಂದಿನ ಉದಾಹರಣೆಯಲ್ಲಿ, ತನ್ನಲ್ಲಿ ಮಂತ್ರ-ಮಾಟದ ಶಕ್ತಿಯುಂಟೆಂದು ಭ್ರಮಿಸಿದ ತರುಣಿಯ ಅಕ್ಕನ ಕತೆಯನ್ನಷ್ಟು ಪರಿಶೀಲಿಸೋಣ. ಈ ಅಕ್ಕನಿಗೆ ಚಿಕ್ಕಂದು ಮೂರು ವರ್ಷಗಳವರೆಗೆ, ಮನೆಯಲ್ಲಿ ಇವಳೇ ಮೊದಲನೆಯ ಮಗಳಾದ್ದರಿಂದ, ಎಲ್ಲರೂ ಅಕ್ಕರತೆಯಿಂದ ಮುದ್ದಾಡುವವರೇ. ಎಲ್ಲರೂ ಎತ್ತಿಕೊಳ್ಳುವವರೇ. ಆದರೆ ತಂಗಿಯು ತಲೆದೋರಿದೊಡನೆ ಎಲ್ಲವು ಬದಲಾಯಿತು ! ಹಿರಿಯಳು ಪದಚ್ಯುತಳಾದಳು. ತಂಗಿಯೇ ಎಲ್ಲರ ಪ್ರೀತಿಯ ವಿಷಯವಾದಳು. ಅದರಿಂದ ಅಕ್ಕನು ತುಂಟಳಾದಳು. ಜಗಳಗಂಟಿಯಾದಳು. ತುಂಟರಿಗೆ ತಮಗಿಂತ ದುರ್ಬಲರ ಮೇಲೆಯೇ ಏರಿ ಹೋಗುವ ಬುದ್ಧಿಯಾಗುವುದು. ತುಂಟ ಮಗುವು ದಿಟ್ಟವಾಗಿರಲೇಬೇಕೆಂದಿಲ್ಲ; ಅದಕ್ಕೆ ನಿಜವಾಗಿಯೂ ಧೈರ್ಯ ಕಡಿಮೆ. ಸಂಗಡಿಗರು ಬಲಿಷ್ಠರಾಗಿದ್ದರೆ, ಇಂಥ ಮಕ್ಕಳು ತುಂಟರಾಗುವ ಬದಲು ಸಿಡುಕಿನವರೂ, ಇಲ್ಲವೇ ಅಳುಬುರುಕರಾಗುತ್ತಾರೆ. ಇಂಥ ಮನೋವೃತ್ತಿಯ ಮೂಲಕ ಕುಟುಂಬದಲ್ಲಿ ಅವರು ಇನ್ನಿಷ್ಟು ಯಾರಿಗೂ ಬೇಡವಾಗುತ್ತಾರೆ. ಹಿಂದಿನಷ್ಟು ತಮಗೆ ಅಕ್ಕರೆ, ಪ್ರೀತಿಗಳು ದೊರೆಯುದುದಕ್ಕಾಗಿ ತಾಯಿಯ ಮೇಲೆ ಸಿಟ್ಟು, ಚೊಚ್ಚಿಲ ಮಕ್ಕಳಿಗೆ. ಏಕೆಂದರೆ, ತನಗೆ ಎದುರಾಳಿಯಾಗಿ ಇನ್ನೊಂದು ಮಗುವನ್ನು ಹೆತ್ತಳಲ್ಲಾ, ಎಂದು !

ಹೊಸ ಪಸುಳೆಯು ಎಲ್ಲರ ಪ್ರೀತಿಗೆ ಪಕ್ಕಾಗಿ ನಲಿಯುತ್ತ ಬೆಳೆಯುತ್ತದೆ. ಅದಕ್ಕೆ ಯಾರೊಡನೆ ಹೋರಾಡಬೇಕಾಗಿಲ್ಲ. ತಾನಾಗಿ ದುಡಿಯಬೇಕಾಗಿಲ್ಲ. ದಣಿಯಬೇಕಾಗಿಲ್ಲ. ಆದುದರಿಂದ, ಅದು ಮೃದು ಮಧುರ ಸ್ವಭಾವದ ಮಗುವಾಗುವುದು. ಈ ತರದ ನಯವಿನಯಗಳು, ಜೀವನದಲ್ಲಿ ತಮ್ಮ ಕೆಲಸಗಳನ್ನು ಸಹಜ ಸುಲಭವಾಗಿ ಸಾಧಿಸಿಕೊಂಡು, ವಿಜಯಿಗಳಾಗಲು ತುಂಬ ನೆರವಾಗುತ್ತವೆ. ಆದರೆ ಈ ಮೆತ್ತನೆಯ ಸ್ವಭಾವವು ಜೀವನದ ಎಲ್ಲ ಪರಿಸ್ಥಿತಿಯಲ್ಲೂ ಉಪಯುಕ್ತವಾಗಿದೆಯೇ ? ಎಂಬುದೇ ಒಂದು ಪ್ರಶ್ನೆ. ಏಕೆಂದರೆ ನಮ್ಮ ಇಂದಿನ ನಾಗರಿಕತೆಯು ಸಂಪೂರ್ಣವಾಗಿ ಮೃದು ಮಧುರ ಭಾವದವರಾಗಿಯೇ ಬಾಳಿ ಬದುಕಬೇಕೆಂಬವರಿಗೆ ತನ್ನ ಉಗ್ರರೂಪದ ದರ್ಶನವನ್ನು ಮಾಡಿಸದೆ ಬಿಡುವುದಿಲ್ಲ !

ಅದಕ್ಕಾಗಿ ಪಲವು ಬಾರಿ, ತಂದೆಯೇ ಈ ಮಾತನ್ನು ಮನಗಂಡು, ತನ್ನ ಮಗನು ಮತ್ತನ್ನ ದೊಡ್ಡನಾಗುವುದು ಬೇಡವೆಂದು, ಮನೆಯಲ್ಲಿ ಆ ಮಗುವಿನ ಅಶ್ತಿ (ಅಚ್ಚೆ)ಯನ್ನೆಲ್ಲ ನಿಲ್ಲಿಸಿ ಬಿಡುವನು. ಇಲ್ಲವೇ ಒಮ್ಮೊಮ್ಮೆ ಈ ಕಟುವಾದ ಕೆಲಸದ ಹೊಣೆಯನ್ನು ಹೊರಲು ಶಾಲೆಯೇ ಮುಂದಾಗುತ್ತದೆ. ಆದ್ದರಿಂದ ಈ ಚಂಚಲ ಮಗುವಿನ ಸ್ಥಾನ-ಮಾನಗಳು ಯಾವಾಗಲೂ ಅನಿಶ್ಚಿತವಾಗಿರುತ್ತವೆ. ತನ್ನ ಮೋಹ ಮಮತೆಯ ವಾತಾವರಣವು ಶಾಶ್ವತವಲ್ಲವೆಂಬ ಅಂಜಿಕೆಯು ತಲೆದೋರಿ ಇವರಲ್ಲಿ ಕೀಳರಿಮೆಯು ಬೇರು ಬಿಡುವುದು. ತಮಗೆ ಅನುಕೂಲವಾದ ಸನ್ನಿವೇಶದಲ್ಲಿರುವನಕ ಅವರ ಈ ನ್ಯೂನತೆಯ ಭಾವನೆಯು ನಮಗೆ ತೋರಿ ಬರುವುದಿಲ್ಲ. ಆದರೆ ಪ್ರತಿಕೂಲ ಸನ್ನಿವೇಶವುಂಟಾದೊಡನೆಯೇ ಇಂಥ ಮಕ್ಕಳು ಕಂಗೆಟ್ಟು ಹೋಗುವರು. ಖಿನ್ನರಾಗಿ ನಿರ್ವಿಣ್ಣರಾಗಿ ಬೆಳೆಯುವರು. ಇಲ್ಲವೆ ಹೆಗ್ಗರಿಮೆಯನ್ನು ಬೆಳಿಸಿಕೊಳ್ಳುವರು. ಶಾಲೆಯಲ್ಲಿ ಕಾಲಿಟ್ಟಂದಿನಿಂದ ಈ ಬದಲಾವಣೆಗೆ ಆರಂಭವಾಗುತ್ತದೆ. ಅಂದಿನಿಂದ ಈ ಹುಡುಗರಲ್ಲಿ ಒಂದು ಬಗೆಯ ಎದೆಗುಕ್ಕು ಹೆಚ್ಚಾಗಿ, ಸಂದೇಹಿಗಳೂ ಆತ್ಮವಿಶ್ವಾಸವಿಲ್ಲದವರೂ ಆಗಿ ಜೀವನವನ್ನು ಸಾಗಿಸುವುದುಂಟು.

### ಕೀಳರಿಮೆಯು ಹೆಗ್ಗರಿಮೆಯ ರೂಪ ತಾಳುವುದು

ಇವಳ ತಂಗಿಯ ಅವಸ್ಥೆಯೂ ಹೀಗೆಯೆ ಆಗಿತ್ತು. ಅವಳು ಗಾಯನ ವಾದನಗಳನ್ನು ಕಲಿಯತೊಡಗಿದಳು. ಆದರೆ ಸ್ವಲ್ಪ ದಿನಗಳಲ್ಲಿ ಬೇಸತ್ತುಬಿಟ್ಟಳು. ಆಗ ಅವಳ ಸಾಮಾಜಿಕ ಆಸಕ್ತಿಯೂ ಕಡಿಮೆಯಾಗಹತ್ತಿ ಅವಳಿಗೆ ಹೊರಗೆ ಹೋಗಿ ನಾಲ್ವರೊಡನೆ ಕೂಡಿ ಬೆರೆವುದೂ ಸೇರದಾಯಿತು. ಖಿನ್ನತೆಯು ಅವಳನ್ನು ಆವರಿಸಿತು. ಅವಳ ಈ ಅಂಜಿಕೆ ಅಳುಕು, ಹಿಂಜರಿಕೆಯ ವೃತ್ತಿಯು ಅವಳ ಬೆಳವಣಿಗೆಯನ್ನೇ ಕುಗ್ಗಿಸಿತು. ಅವಳನ್ನು ದುರ್ಬಲಳಾಗಿ ಮಾಡಿತು. ಅಡಿಗಡಿಗೆ ಅಸಿವಿಸಿಗೊಳ್ಳುವವಳೂ ಸಂದೇಹಿಯೂ ಆಗಿ ಮುಂದೆ ಉಪಜೀವಿಕೆಯ ಉದ್ಯೋಗವನ್ನು ಅರಿಸುವಾಗಲೂ ಸಂದೇಹವೃತ್ತಿಯು ಅವಳ ಬೆನ್ನಬಿಡಲಿಲ್ಲ. ಮದುವೆಯ ಮಾತಿನಲ್ಲೂ ಅವಳು ಅನಿಶ್ಚಿತಳಾಗಿ ವರ್ತಿಸಿದಳು. ತನ್ನ ಅಕ್ಕನನ್ನು ಸರಿಗಟ್ಟಬೇಕೆಂಬ ಹಂಬಲವಿದ್ದರೂ ಅವಳ ನಡತೆಯಲ್ಲಿ ಒಂದು ನಿಶ್ಚಿತ ಬರಲಿಲ್ಲ. ಮೂವತ್ತನೆಯ ವರ್ಷ ವಯಸ್ಸಿಗೆ ಒಬ್ಬ ಕ್ಷಯದ ಭಾವನೆಯಿರುವ ಗಂಡನನ್ನು ಅರಿಸಿಕೊಂಡಳು. ಇದಕ್ಕೆ ಅವಳ ತಂದೆತಾಯಿಗಳು ಒಪ್ಪಲಿಲ್ಲ. ಅಂತೂ ಮದುವೆಯಾಗಲಿಲ್ಲ. ಒಂದು ವರ್ಷದನಂತರ ಅವಳು ತನಗಿಂತ ಮೂವತ್ತು ವರ್ಷ ಹಿರಿಯನಾದ, ೬೧ ವರುಷ ಪ್ರಾಯದ ಗಂಡನನ್ನು ಹುಡುಕಿಕೊಂಡಳು ! ಈ

ಮದುವೆಯೂ ಹೆಸರಿನ ಮದುವೆಯಾಯ್ತು ! ಏಕೆಂದರೆ ಆ ಮುದಿಗಂಡನಿಂದ ದೊರೆಯಬೇಕಾದ ವೈವಾಹಿಕ ಸೌಖ್ಯವೇನು ? ಎಷ್ಟೋ ಬಾರಿ ಕೀಳರಿಮೆಯು ಈ ಬಗೆಯಾಗಿ ಕಾಣಿಸಿಕೊಳ್ಳುವುದು. ಇಮ್ಮನೆಯುವರನ್ನೂ, ಮೂರನೆಯುವರನ್ನೂ, ಹೆಂಡತಿ ಉಳ್ಳವರನ್ನೂ ಕೂಡ ಕೈಹಿಡಿಯಲು ಮನಸಾಗುವುದು ಏತರಿಂದ ? ಕೀಳರಿಮೆಯಿಂದಲೇ.

ಬಾಳಿನಲ್ಲಿ ತನ್ನ ವರ್ಚಸ್ವಿತೆಯನ್ನು ಸಾಧಿಸಲು ಅಸಮರ್ಥಳಾದ ಈ ಹುಡುಗಿಯು ತನ್ನ ಹೆಗ್ಗುರಿಯನ್ನು ಬೇರೊಂದು ಬಗೆಯಿಂದ ಸಾಧಿಸಿಕೊಂಡಳು. ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದ ಸಂಗತಿಯೆಂದರೇ ಕರ್ತವ್ಯ ಎಂದು ವಾದಿಸತೊಡಗಿದಳು. ಕರ್ತವ್ಯಧರ್ಮಕ್ಕಾಗಿ ಪಾವಿತ್ರ್ಯವು. ಶುದ್ಧತೆಯು ಅವಶ್ಯ, ಆದುದರಿಂದ ಮಡಿಯಾಗಿರಲು ಅವಳು ಯಾವಾಗಲೂ ಕೈಮೈಗಳನ್ನು ತೊಳಕೊಳ್ಳಹತ್ತಿದಳು. ಯಾರಾದರೂ. ಏನಾದರೂ ಅವಳಿಗೆ ಸೋಂಕಿದರೂ ಸಾಕು, ಕೂಡಲೇ ಮೈ ತೊಳಕೊಳ್ಳುತ್ತಿದ್ದಳು ! ಹೀಗೆ ಅವಳು ಎಲ್ಲರಿಂದ ದೂರವಾಗಿ ಕೇವಲ ಏಕಾಕಿನಿಯಾಗಬೇಕಾಯ್ತು. ಮಿತಿಮೀರಿ ಉಜ್ಜಿ ತಿಕ್ಕಿಕೊಳ್ಳುವುದರಿಂದ ಅವಳ ಕೈಗಳ ತೊಗಲು ಉರುಟಾಗಿ ಅದರಲ್ಲಿ ಬಹಳ ಹೊಲಸು ಕೂಡಹತ್ತಿತು. ಸ್ವಚ್ಛತೆ, ಮಡಿಯ ಹೆಸರಿನಲ್ಲಿ ಹೊಲಸಿಗೆ ಆಶ್ರಯವು ದೊರಕಿತು !

ಅವಳ ಇದೆಲ್ಲ ಇರುವು ಕೀಳರಿಮೆಯಂತೆ ತೋರುವುದು ನಿಜ. ಆದರೂ ಅವಳ ಭಾವನೆ ಹಾಗಿದ್ದಿಲ್ಲ. ತಾನೊಬ್ಬಳೇ ಈ ಜಗತ್ತಿನಲ್ಲಿ ಅತ್ಯಂತ ಪರಿಶುದ್ಧಳು : ಪವಿತ್ರಳು, ಎಂದು ಅವಳು ನೆರೆನಂಬಿದ್ದಳು. ತನ್ನಂತೆಯೇ ಮಡಿಯಿಂದ ಹಸನಾಗಿ ಯಾರೂ ಇಲ್ಲವೆಂದು ಹೆಮ್ಮೆ ಪಡುತ್ತಿದ್ದಳು, ಹೆರವರನ್ನು ಯಾವಾಗಲೂ ದೂರುತ್ತಿದ್ದಳು. ಇಂತು ಅವಳು ತನ್ನ ಮನೋರಾಜ್ಯದಲ್ಲಿ ಉಳಿದವರಿಂದ ತಾನು ಹೆಚ್ಚಿನವಳೆಂಬ ಸಮಾಧಾನವನ್ನು ಸಾಧಿಸಿಕೊಂಡಳು. ಈ ಬಗೆಯಾಗಿ ಇಲ್ಲಿ ಕೀಳರಿಮೆಯೇ ಹೆಗ್ಗರಿಮೆಯಾದುದನ್ನು ಮನಗಾಣಬಹುದು.

ತಾವೇ ಶ್ರೇಷ್ಠರು, ಅವತಾರಿ ಪುರುಷರೆಂತಲೂ. 'ರಾಜ' 'ಮಹಾರಾಜ' 'ಛತ್ರಪತಿ' ಎಂದು ನಂಬಿ ಮೆರವವರಲ್ಲಿಯೂ ಇದೇ ಮನೋವ್ಯಾಪಾರವು ವ್ಯಕ್ತವಾಗುತ್ತದೆ. ಇಂಥವರಲ್ಲಿ ಮಿತಿಮೀರಿದ ಆತ್ಮಸಂಭಾವನೆಯೂ ಅಳತೆಗೆಟ್ಟ ಸ್ವಾರ್ಥಭಾವನೆಯೂ ತುಂಬಿರುತ್ತದೆ. ಒಮ್ಮೆಲೆ ತೀರ ದೊಡ್ಡವರೆನಿಸಿಕೊಳ್ಳಬೇಕೆಂಬ ಹಂಬಲ ; ಅಲ್ಲ ಹುಚ್ಚು, ಇವರಿಗೆ. ಜನರು ತಮಗೆ ಹೆದರಬೇಕು, ಹಂಗಿನಲ್ಲಿರಬೇಕು ಎಂಬುದೇ ಇಂಥವರ ಹಂಬಲ ; ಅದಕ್ಕಾಗಿಯೇ ಅವರ ಒದ್ದಾಟ.

ಇಂಥವರು ಜೀವನದ ನಿರುಪಯೋಗಿಯಾದ ಮಗ್ಗುಲಿನಲ್ಲಿಯೇ ಉಳಿದು, ತಮ್ಮ ಭಾವಿಸಿದ ಭೂಮಿಕೆಯೇ ನಿಜವೆಂದು ನಂಬಿ ನಡೆವರು. ಇಂಥವರು ಬಾಳಿನಲ್ಲಿ ಒಬ್ಬಂಟಿಗರಾಗುತ್ತಾರೆ. ಅವರ ಪೂರ್ವಾಯುಷ್ಯವನ್ನು ಅವಲೋಕಿಸಿದಲ್ಲಿ, ಅವರು ಕೀಳರಿಮೆಯ ಪೀಡೆಗೆ ಒಳಗಾಗಿ, ಬಳಲಿ ಬೆಂಡಾಗಿ ಕೊನೆಗೆ ಅದನ್ನು ಹೋಗಲಾಡಿಸಿಕೊಳ್ಳಲೆಂದು ಹೆಣಗುವುದರಲ್ಲಿ ದಾರಿತಪ್ಪಿ ಹಟಗೆಟ್ಟು ಹೆಗ್ಗರಿಮೆಯನ್ನು ಬೆಳಸಿಕೊಂಡರೆಂದು ಕಂಡು ಬರುವುದು. ಇಂಥ ಒಂದು ಸೋಜಿಗದ ಉದಾಹರಣೆಯಿದೆ : ಹದಿನೈದು ವಯಸ್ಸಿನ ಒಬ್ಬ ಹುಡುಗನು. ಆತನಿಗೆ ಹುಚ್ಚು ಹಿಡಿದಿದೆಯೆಂದು ಆಸ್ಪತ್ರೆಗೆ ಹಾಕಿದರು. ಈ ಹುಡುಗನಿಗೆ ಒಂದು ಭ್ರಾಂತಿ : ಆತನಿಗೆ ತುಂಬ ವಿಚಿತ್ರ ಆಭಾಸ. ಅರಸನು ಸತ್ತಿರುವನೆಂದೂ ತನಗೆ ಆತನು ಕನಸಿನಲ್ಲಿ ಭೆಟ್ಟಿಯಾಗಿ ಕಳೆದ ಮಹಾಯುದ್ಧದಲ್ಲಿ ಸೈನ್ಯಸಮೇತನಾಗಿ ಕಾಳಗಕ್ಕೆ ಹೋಗಲು ಅಪ್ಪಣೆ ಮಾಡಿರುವನೆಂದೂ ಆ ಹುಡುಗನು ಸಾರಿ ಹೇಳುತ್ತಿದ್ದನು ! ರಾಷ್ಟ್ರರಕ್ಷಣದ ಇಷ್ಟೊಂದು ಹೊಣೆ ಹೊರಲು ಆಣಿಯಾದ ಈ ಹುಡುಗ ನಾದರೋ ತೀರಗಿಡ್ಡನು. ಅಪ್ರಿಯಾದ ಅರಸ (ಅಧ್ಯಕ್ಷ)ನು ಗಿಡ್ಡನೇ ಆಗಿದ್ದ ! ಅಪ್ರಿಯಾದ ಅರಸನು ಜೀವಂತವಿದ್ದ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಪ್ರಸಿದ್ಧವಾದ ಸುದ್ದಿಗಳನ್ನು ಆತನಿಗೆ ತೋರಿಸಿದರೂ ಆತನು ನಂಬುತ್ತಿದ್ದಿಲ್ಲ ! ಮತ್ತೆ ಅದೇ ಹಟ !

## ಮಲಗುವ ಬಗೆಗೂ ಮಾನವ ಸ್ವಭಾವಕ್ಕೂ ಸಂಬಂಧ

ಕೀಳರಿಮೆ ಇಲ್ಲವೇ ಹೆಗ್ಗರಿಮೆಗಳ ಜನಗಳನ್ನು ಅವರ ಮಲಗುವ ಬಗೆಯ ಮೇಲಿಂದ ಕಂಡು ಹಿಡಿಯಬಹುದಾಗಿದೆ. ಕೆಲವರು ಹಾಸುಗೆಯಲ್ಲಿ ಮುದುಡಿ ಮುದ್ದೆಯಾಗಿ ಮಲಗುತ್ತಾರೆ ; ಮತ್ತು ಮೋರೆಗೂ ಮುಸುಕು ಎಳೆದುಕೊಳ್ಳುವರು. ಇದು ಕೀಳರಿಮೆಯ ಲಕ್ಷಣ, ಇಂಥವರು ಧೈರ್ಯಶಾಲಿಗಳಾಗುವರೆಂದು ಗ್ರಹಿಸುವುದು ಕಷ್ಟ. ಇವರಂತೆ ನಿಡಿದಾಗಿ, ಮೋರೆ ಮೇಲೆ ಮಾಡಿಕೊಂಡು ಗಂಭೀರವಾಗಿ ಮಲಗುವಾತನು ಜಾಗೃತ ಜೀವನದಲ್ಲಿ ಯಾರಿಗೂ ಬಾಗಿ ಬಳುಕಿ ನಡೆವ ವ್ಯಕ್ತಿಯಾಗಿರಲಾರನು. ಹಾಸುಗೆಯ ಕಡೆಗೆ ಮೋರೆಮಾಡಿ ಹೊಟ್ಟೆಯ ಮೇಲೆ ಮಲಗುವವರು, ಬಾಳಿನಲ್ಲಿ ಉಡದ ಹಿಡಿತದವರೂ ಹೋರಾಡುವಂಥವರೂ ಇರುವುದುಂಟು.

ಈ ಹುಚ್ಚು ಹುಡುಗನು ನಿದ್ದೆಯಲ್ಲಿ ನೆಪೋಲಿಯನನಂತೆ ಎದೆಯ ಮೇಲೆ ಕೈಕಟ್ಟಿ ಕೊಂಡು ಒರಗುತ್ತಿದ್ದನು. 'ಕೈಕಟ್ಟಿಕೊಂಡು ನಿಲ್ಲುವಂಥ ಯಾರಾದರೂ ನಿನ್ನ ಪರಿಚಯದವರಿರುವರೇ ?' ಎಂದು ಮರುದಿನ ಕೇಳಲಾಗಿ, 'ಅಹುದು. ನನ್ನ

ಶಿಕ್ಷಕರೆ ಇದ್ದಾರೆ,' ಎಂದುತ್ತರ ಬಂತು. ಈ ಶಿಕ್ಷಕನು ನೆಪೋಲಿಯುನನನ್ನು ಹೋಲುತ್ತಿದ್ದನು. (ನೆಪೋಲಿಯನ್, ಶಿವಾಜಿ, ಗಾಂಧೀಜಿ, ಹಿಟ್ಲರ–ಇವರೆಲ್ಲ ಗಿಡ್ಡಾಳುಗಳೇ !) ಚಿಕ್ಕಂದಿನಲ್ಲಿ ಈ ಹುಡುಗನಿಗೆ ಆ ಶಿಕ್ಷಕನಲ್ಲಿ ಅತೀವ ಪ್ರೀತಿ. ಶಿಕ್ಷಕನಂತೆಯೆ ಆಗಬೇಕೆಂದು ಬಯಸುತ್ತಿದ್ದನು. ಆದರೆ ಮುಂದೆ ಆರ್ಥಿಕ ಅನುಕೂಲತೆಯಿಲ್ಲದ್ದರಿಂದ, ಒಂದು ಉಪಹಾರಗೃಹದಲ್ಲಿ ಕೆಲಸಕ್ಕೆ ನಿಂತನು. ಅಲ್ಲಿ ಬರುವ ಗಿರಾಕಿಗಳೆಲ್ಲ ಆತನನ್ನು ಕುಳ್ಳನೆಂದು ಹೀಯಾಳಿಸುತ್ತಿದ್ದರು. ಆತನು ಈ ಕೀಳ ಬಾಳಿನಿಂದ ಪಾರಾಗಲು ಬಯಸಿದನು. ತಾನು ಕುಳ್ಳನೆಂಬ ಆತನ ಕೀಳರಿವು, ಆತನಲ್ಲಿ ಕೆಲವೊಂದು ಹೆಗ್ಗರಿವು ತಲೆದೋರಲು ಕಾರಣವಾಯ್ತು. ಶಿಕ್ಷಕನಾಗಲು ಹವಣಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಆಗ ಬಾಳಿನ ಸಮಸ್ಯೆಯನ್ನು ಎದೆಗಾರಿಕೆಯಿಂದ ಬಿಡಿಸುವ ಬದಲು, ಅದನ್ನು ಸುತ್ತಿ ಕನಸಿನ ಕನವರಿಕೆಯಲ್ಲಿ (ಕಲ್ಪನಾ ರಾಜ್ಯದಲ್ಲಿ) ತನ್ನ ಮೇಲ್ಮೆಯ ಹೆಗ್ಗಳಿಕೆಯ ಗುರಿಯನ್ನು ಸಾಧಿಸಿಕೊಂಡನು. ಒಬ್ಬರ ಕೀಳು ಆಳಾಗಿ ಕೊರಗುವವನು ತಾನು ಒಬ್ಬ ಗಂಡು ಗಲಿಯೆಂಬ ಮರುಳುತನದ ಮಾರ್ಗದಲ್ಲಿ ಮುಂದರಿದನು.

ಹೀಗೆ ಯಾವುದೊಂದು ವ್ಯಕ್ತಿಯ ಹೆಗ್ಗಳಿಕೆಯ ಗುರಿಯು ಆತನನ್ನು ಜೀವನದ ಉಪಯುಕ್ತ ಇಲ್ಲವೇ ನಿರುಪಯುಕ್ತ ಬದಿಯಲ್ಲಿ ಒಯ್ಯಬಹುದು. ಯಾವ ನೊಬ್ಬನು ಎಲ್ಲರ ಒಳಿತನ್ನು ಬಯಸಿದರೆ ಅದಕ್ಕೆ ಎರಡು ಅರ್ಥಗಳಾಗಬಹುದು. (೧) ಆ ವ್ಯಕ್ತಿಯು ಸಾಮಾಜಿಕ ದೃಷ್ಟಿಯಿಂದ ಜನರೊಂದಿಗೆ ಹೊಂದಿಕೊಂಡಿರ ಬಹುದು. ಆದುದರಿಂದ ಇತರರಿಗೆ ಸಹಾಯ ಮಾಡಲು ಹೆಣಗುತ್ತಿರಬಹುದು ; (೨) ಇಲ್ಲವೇ ಆತನು ಡಾಂಭಿಕತೆಯಿಂದ ಚಂದಕ್ಕಾಗಿ ದೊಡ್ಡ ಮಾತುಗಳನ್ನು ಆಡುತ್ತಿರಬಹುದು. ಹೀಗೆ ಜಂಭ ಕೊಚ್ಚಿಕೊಳ್ಳುವ ಜನಗಳು ವ್ಯಕ್ತಿ–ಮನೋ ವಿಜ್ಞಾನಿಗಳಿಗೆ ಅಪರೂಪವಲ್ಲ. ಶಾಲೆ ತಪ್ಪಿಸಿ, ತುಡುಗು ಮಾಡಿ ಕೇಡಿಗೇಡಿ ತನದಲ್ಲಿ ಊರೆಲ್ಲ ಗುಲ್ಲೆಬ್ಬಿಸುವ ಹುಡುಗನು, ಹಣಕದ್ದು ದಾರಿಹೋಕ ಹುಡುಗಿ ಯರಿಗೆ ಹೂವು ಕೊಂಡುಕೊಟ್ಟು, ಸೂಳೆಗೇರಿಯಲ್ಲಿ ಸಿಳ್ಳು ಹಾಕುತ್ತ ಸುಳಿದಾಡುವ ಹದಗೆಟ್ಟ ಹರೆಯದವನ ಈ ಎಲ್ಲ ನಡೆವಳಿಕೆಯ ಬುಡದಲ್ಲಿ ಕೀಳರಿಮೆಯೇ ಇದೆ. ಅದರಂತೆ ಹೆರವರಿಗಿಂತ ಹೆಚ್ಚಿನವನೆಂದೆನಿಸಿಕೊಳ್ಳಬೇಕೆಂಬ ಹಾದಿಬಿಟ್ಟ ಹೆಗ್ಗರಿವೂ ಅಲ್ಲಿ ಉಂಟು.

ಕಳವು ಕೊಲೆಗಳನ್ನು ಮಾಡುವ ಅಪರಾಧಿಗಳಲ್ಲಿಯೂ ಇದೇ ಮಾದರಿಯ ಮನೋವೃತ್ತಿಯನ್ನು ಕಾಣಬಹುದು. ಬಾಳಿನಲ್ಲಿ ಹಿರಿಮೆ–ಹೆಗ್ಗಳಿಕೆಗಾಗಿ ಅವರಿಗೆ ರಾಜಮಾರ್ಗಕ್ಕಿಂತ ಅಡ್ಡದಾರಿಯೇ ಸಮೀಪದ್ದೆನಿಸುವುದು. ಹೀಗೆ ಅಡ್ಡದಾರಿಯಿಂದ

ತಮ್ಮ ಮನೋರಾಜ್ಯದ ಗುರಿಯನ್ನು ಮುಟ್ಟುವಲ್ಲಿ ಇವರ ಹೇಡಿತನವೇ ವ್ಯಕ್ತವಾಗುತ್ತದೆ.

ಇದೇ ವೃತ್ತಿಯು ಇನ್ನೊಂದು ಮಾದರಿಯುಂಟು; ಬಾಳಿನ ಇಕ್ಕಟ್ಟು ಬಿಕ್ಕಟ್ಟುಗಳಿಂದ ಪಾರಾಗಲು, ಇವರು ಆತ್ಮಹತ್ಯೆಯ ದಾರಿಯನ್ನು ಹಿಡಿಯುವರು. ಜೀವದ ಹಂಗು ನಮಗಿಲ್ಲ. ಜಗತ್ತನ್ನೇ ಕೀಳು ಬಗೆಯುವೆವೆಂಬ ಹುಸಿಕಲ್ಪನೆಯಿಂದ ಆತ್ಮಹತ್ಯೆ ಮಾಡಿಕೊಂಡು ಅಂಥವರು ತಮ್ಮ ಮೇಲ್ಮೆ ಹಿರಿಮೆಗಳನ್ನು ಸಾಧಿಸಿದೆವೆಂದು ಭಾವಿಸುತ್ತಾರೆ! ಆದರೆ ನಿಜವಾಗಿಯೂ ಅವರು ಹೇಡಿಗಳಾಗಿರುತ್ತಾರೆ; ಬಾಳಿಗೆ ಹೆದರಿ ಕಾಲ್ದೆಗೆವ ಅಳ್ಳದೆಯ ಪುಕ್ಕರು ಇವರು.

ಇದರಿಂದ ಸ್ಪಷ್ಟವಾಗುವುದೇನೆಂದರೆ, ಹೆಗ್ಗರಿಮೆಯು ಮೊದಲಲ್ಲಿ ಇರುವುದಿಲ್ಲ. ಮೊದಲು ತಲೆದೋರುವುದು ಕೀಳರಿಮೆ. ಅದನ್ನು ಹೋಗಲಾಡಿಸಲು ಹೆಗ್ಗರಿಮೆಯು ಆ ಸ್ಥಳದಲ್ಲಿ ಪ್ರವೇಶಿಸುವುದು. ನಾವು ಇವೆರಡರಲ್ಲಿಯ ಮಾರ್ಮಿಕವಾದ ಜೀವಾಳದ ಸಂಬಂಧವನ್ನು ಅರಿತುಕೊಳ್ಳಬೇಕು. ಇವೆರಡು ತೋರಿಕೆಯಲ್ಲಿ ಒಂದಕ್ಕೊಂದು ವಿರುದ್ಧವಾಗಿ ಕಾಣಬಹುದು. ಆದರೆ ಅದು ಹಾಗಿಲ್ಲ. ಒಮ್ಮೆ ಇವೆರಡೂ ಅರಿಮೆಗಳ ಹದವನ್ನು ಅರಿತರೆ, ನಾವು ಇದರ ತೊಡಕುಗಳನ್ನು ಸಹಜವಾಗಿ ಬಿಡಿಸಿಕೊಳ್ಳಬಹುದು.

ಸಾಮಾನ್ಯವಾಗಿ ಪ್ರತಿಯೊಬ್ಬನಲ್ಲೂ ಅಲ್ಪ ಸ್ವಲ್ಪಾದರೂ ಕೀಳರಿಮೆಯು ಇದ್ದೇ ಇರುತ್ತದೆ. ಆದರೆ ಇದು ಇಷ್ಟಕ್ಕೆ ಒಂದು ವ್ಯಾಧಿಯೆನಿಸದು. ಕೊರತೆಯ ಅರಿವೇ ಇಲ್ಲದಿದ್ದರೆ ಜೀವನದಲ್ಲಿ ಬೆಳೆವ, ಮೇಲ್ಮೆ ಪಡೆವ ಆಶೆಯೇ ಇಲ್ಲ. ನಮ್ಮ ಏಳ್ಗೆಗೆ ಕೀಳರಿವು ಒಂದು ಪ್ರಚೋದಕ ಶಕ್ತಿಯಿದ್ದಂತೆ. ಆದರೆ ಈ ಕೊರತೆಯ ಕೊರಗು ಮಿತಿಮೀರಿದರೆ ಅದು ವ್ಯಕ್ತಿಯ ಮನಸ್ಸನ್ನು ಆವರಿಸಿ, ಆತನ ಕಸುವನ್ನು ಕುಗ್ಗಿಸುವುದು. ಆಗ ಅದು ವ್ಯಾಧಿ–ವಿಕಾರವೆನಿಸುವುದು. ಯಾವಾಗಲೂ ಇಂಥ ವಿಕಾರವು ಹಾನಿಕರ. ಇದು ವ್ಯಕ್ತಿಗೆ ಸುರಿದುಂಬಿಸುವ ಬದಲು ಎದೆಗುಂದುವಂತೆ ಮಾಡುವುದು. ಕಂಗೆಡಿಸುವುದು. ಆತನ ಬೆಳವಣಿಗೆಯನ್ನು ಕುಗ್ಗಿಸುವುದು. ಕೀಳರಿಮೆಯ ತೀವ್ರವಾದ ನೋವಿನಿಂದ ಬಳಲಿಕೆಯಿಂದ ಮುಕ್ತನಾಗಲು ಹೆಗ್ಗರಿವನ್ನುಂಟು ಮಾಡಿಕೊಳ್ಳುವನು. ಶ್ರೇಷ್ಠನಲ್ಲದಿದ್ದರೂ, ವರಿಷ್ಠನೂ, ಬಲಿಷ್ಠನೂ ಎಂದು ಭಾವಿಸುವನು. ಇಂಥ ಸುಳ್ಳು ಭಾವನೆಯ ಗೆಲುವು, ಆತನ ಅಸಹ್ಯವಾದ ಕೀಳರಿವಿನ ಕೊರಗನ್ನು ಹಿಂಗಿಸುತ್ತದೆ. ಸಮವೃತ್ತಿಯ ಸಾಮಾನ್ಯ ಮನುಷ್ಯರಿಗೆ ಹೆಗ್ಗರಿವು ಇರುವುದಿಲ್ಲ. ತಾನು ವರಿಷ್ಠನೆಂಬ ಭಾವನೆಯು ಕೂಡ ಆತನಿಗೆ

ತಗಲುವುದಿಲ್ಲ. ಜೀವನದಲ್ಲಿ ಯಶಸ್ವಿಯಾಗಬೇಕೆಂಬ ಮಹತ್ವಾಕಾಂಕ್ಷೆಯು ಆತ ನಲ್ಲಿಯೂ ಇಲ್ಲದೆ ಇರುವುದಿಲ್ಲ. ಆದರೆ ಈ ಮಹತ್ವಾಕಾಂಕ್ಷೆಯು ಅದಕ್ಕಾಗಿ ಹೆಣಗಾಟವೂ ಸಮಾಜಕ್ಕೆ ಉಪಯುಕ್ತವಾದ ಕೆಲಸದ ರೂಪದಲ್ಲಿ ವ್ಯಕ್ತವಾಗು ತ್ತಿರುವವರೆಗೂ ಜೀವನದ ಬಗ್ಗೆ ತೂಕ ತಪ್ಪಿದ ಕಲ್ಪನೆಗಳನ್ನೂ ಹದಗೆಟ್ಟ ಆದರ್ಶಗಳನ್ನೂ ಅವನೆಂದೂ ತನ್ನ ಕಣ್ಣೆದುರಿಗೆ ತಂದುಕೊಳ್ಳುವುದಿಲ್ಲ. ಹಿರಿ ಕಿರಿತನದ ತೂಕತಪ್ಪಿದ ಎಣಿಕೆಗಳೂ, ತಾಳಗೆಟ್ಟ ಆದರ್ಶಗಳೂ ಮಾನಸಿಕ ವ್ಯಾಧಿ ವಿಕೃತಿಗಳ ಲಕ್ಷಣಗಳಾಗಿವೆ. ●

# ೪ ಬಾಳಿನ ಬಗೆ ಅಥವಾ ಜೀವನ ಶೈಲಿ

ಬೆಟ್ಟದ ಮೇಲಣ ಮರಕ್ಕಿಂತ ಕೊಳ್ಳದಲ್ಲಿ ಮರಗಳ ಬೆಳೆವ ರೀತಿಯು ಬೇರೆ ಯಾಗಿರುತ್ತದೆ. ಮರವು ಒಂದೇ; ಆದರೂ, ಸನ್ನಿವೇಶಕ್ಕನುಸರಿಸಿ ಅದರ ಬಾಳಿನ ಬಗೆಗಳು ಬೇರೆ. ಜೀವನ ಬೆಳವಣಿಗೆಯ ರೀತಿಯೂ ಹೀಗೆಯೆ ಇದೆ. ಸನ್ನಿವೇಶ ಕ್ಕನುಸರಿಸಿ ಪ್ರತಿ ಮರವು ಬೆಳೆವ ಅಂದದಲ್ಲೂ ಒಂದು ವೈಶಿಷ್ಟ್ಯವಿರುತ್ತದೆ. ಅದು ಬೆಳೆದ ಭೂಮಿಕೆ (ಸನ್ನಿವೇಶ) ಹಾಗೂ ಅದರ ವಿಶಿಷ್ಟ ಬೆಳೆವ ರೀತಿಯಲ್ಲಿ ಇರುವ ಕಾರ್ಯಕಾರಣ ಭಾವವನ್ನು ವಿಮರ್ಶಿಸಿದರೆ ಪ್ರತಿಯೊಂದು ಮರಕ್ಕೂ ಒಂದು ತನ್ನತನವಿರುವುದರ ಮನವರಿಕೆಯಾಗುವುದು. ಮರದ ಬೆಳವಣಿಗೆಯು ಕೇವಲ ಪರಿಸ್ಥಿತಿಯ ಪರಿಣಾಮವಲ್ಲ. ಅದಕ್ಕೊಂದು ಜೀವಶಕ್ತಿಯಿದೆ. ಜೀವಶಕ್ತಿಯು ಯಾಂತ್ರಿಕವಲ್ಲ: ಕೇವಲ ಪರಿಸ್ಥಿತಿಯ ಕೈಗೊಂಬೆಯಲ್ಲ.

ಮನುಷ್ಯನ ಜೀವನ ಶೈಲಿಯು ಕೆಲವೊಂದು ಪರಿಸ್ಥಿತಿಯ ಹಿನ್ನೆಲೆಯಲ್ಲಿಯೇ ಸ್ಪಷ್ಟವಾಗಿ ಗೊತ್ತಾಗುತ್ತದೆ. ಪರಿಸ್ಥಿತಿಯು ಬೇರೆಯಾದಂತೆ ಅದರಲ್ಲಿ ರೂಪ ಗೊಳ್ಳುತ್ತಿರುವ ಮನಸ್ಸೂ ಬದಲಾಗುತ್ತದೆ. ಕೇವಲ ಅನುಕೂಲವಾದ ಪರಿಸ್ಥಿತಿ ಯಲ್ಲಿರುವವರೆಗೆ ಆ ವ್ಯಕ್ತಿಯ ಜೀವಶಕ್ತಿಯ ಸ್ವರೂಪವು ಸ್ಪಷ್ಟವಾಗಿ ಕಂಡು ಬರುವುದಿಲ್ಲ. ಹೊಸ ಸನ್ನಿವೇಶವನ್ನು ಎದುರಿಸಬೇಕಾದ ಕಾಲಕ್ಕೇ ಅವನಲ್ಲಿರುವ ಗುಣಗಳು ಚೆನ್ನಾಗಿ ಹೊರಬರುವವು. ಆದ್ದರಿಂದ ಪರಿಸ್ಥಿತಿಯೊಡನೆ ಹೋರಾಡು ತ್ತಿರುವಾಗಲೇ, ಮನುಷ್ಯನ ಸ್ವಭಾವ ಮನೋರಚನೆಯನ್ನು ಅಭ್ಯಸಿಸಬೇಕು. ಆಗ ಆತನಲ್ಲಿ ಕಾಣಿಸಿಕೊಳ್ಳುವ ಬಗೆಬಗೆಯ ಚಟುವಟಿಕೆಗಳನ್ನೂ, ಗುಣವಿಶೇಷಗಳನ್ನೂ ನಿರೀಕ್ಷಿಸಬೇಕು. ಜೀವನವು ಯಾವಾಗಲೂ ಸುಸಂಬದ್ಧವಾಗಿದೆ. ಚಿಕ್ಕಂದಿನ ತೊಡಕು ತೊಂದರೆಗಳೊಳಗಿಂದಲೂ ಮುಂದಿಟ್ಟುಕೊಂಡ ಗುರಿಯನ್ನು ಸಾಧಿಸುವುದಕ್ಕಾಗಿ ನಡಿಸಿದ ಹೆಣಗಾಟದೊಳಗಿಂದಲೂ ಒಂದು ಬಾಳು ವ್ಯವಸ್ಥಿತವಾಗಿ ಬೆಳೆಯುತ್ತಿರುತ್ತದೆ.

## ಜೀವನ ಶೈಲಿಗೂ ಕೀಳು-ಮೇಲ ಅರಿವೆಗೂ ಸಂಬಂಧ

ಸಾಮಾನ್ಯವಾಗಿ ನಿನ್ನೆಗಿಂತ ನಾಳಿನಲ್ಲಿಯೇ ಎಲ್ಲರಿಗೂ ಹೆಚ್ಚು ಆಸೆ. ಆದುದರಿಂದ ಒಬ್ಬರ ನಾಳೆಯನ್ನು ಅರಿಯಲು ಆತನ ಬಾಳಿನ ಬಗೆಯನ್ನು ತಿಳಿದುಕೊಳ್ಳಬೇಕು. ಬರಿ ಮೂಲ ಪ್ರವೃತ್ತಿಗಳನ್ನೂ, ಸಂಕಲ್ಪದ ಪ್ರೇರಣೆ ಧೋರಣೆಗಳನ್ನೂ ಅರಿತು ಕೊಂಡರೆ ಆಗದು. ಅದರಿಂದ ಆತನ ನಾಳಿನ ಆಗುಹೋಗುಗಳನ್ನು ಊಹಿಸಲು

ಶಕ್ಯವಿಲ್ಲ. ಏಕೆಂದರೆ ನಾಳೆಯನ್ನು ನಿನ್ನೆಯು ಆಳುತ್ತದೆ. ನಮ್ಮ ಹಿತಃಪ್ರೇರಣೆ ಪ್ರಚೋದನೆ ಇಲ್ಲವೇ ನಮ್ಮಿಂದಾಗುವ ಪ್ರತಿಕ್ರಿಯೆ ಇವು ನಮ್ಮ ಜೀವನ ಶೈಲಿಯನ್ನು ನಿರ್ಧರಿಸಿ ಸ್ಥಿರಗೊಳಿಸುತ್ತವೆ.

ಜೀವನ ಶೈಲಿಗೂ ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಮೇಲು–ಕೀಳ ಅರಿವೆಗೂ ನಿಕಟ ಸಂಬಂಧವುಂಟು. ಬಾಳಿನಲ್ಲಿ ಎಡರು ತೊಡರುಗಳು ಅಡ್ಡ ಬಂದು, ತಾನು ನಿರ್ಬಲನು ಎಂಬ ಅರಿವು ತಲೆದೋರುವುದು. ಈ ಕೀಳರಿವೆಯು ಮಾನವನನ್ನು ಸುಮ್ಮನೆ ಇರಗೊಡುವುದಿಲ್ಲ. ಅವನೆದುರು ಒಂದು ಗುರಿಯನ್ನು ನಿಲ್ಲಿಸಿ, ಅಧ್ಯೆಯ ಸಾಧನೆಯಿಂದ ಹೆಗ್ಗಳಿಕೆಯನ್ನು ಪಡೆಯುವುದಕ್ಕಾಗಿ ಕೆಲವೊಂದು ಕೆಲಸಕ್ಕೆ ಹತ್ತಲು ಒತ್ತಾಯ ಪಡಿಸುವುದು. ಹಲವು ಚಟುವಟಿಕೆಗಳನ್ನು ಮಾಡಿಸುವುದು. ಜೀವನದ ಗುರಿಯನ್ನು ಸಾಧಿಸಲು. ಇಂತು ನಡಿಸಿದ ಸುಸಂಬದ್ಧವಾದ ಕಾರ್ಯಕಲಾಪಗಳ ರೀತಿಯೇ ಆತನ ವಿಶಿಷ್ಟವಾದ ಜೀವನ ಶೈಲಿಯೆನಿಸುವುದು. ಕೆಲವು ಪ್ರಶ್ನೆಗಳಿಗೆ ದೊರೆವ ಉತ್ತರಗಳಿಂದ ಯಾರೊಬ್ಬರ ಜೀವನ ಶೈಲಿಯನ್ನು ಅರಿತುಕೊಳ್ಳ ಬಹುದು.

ಯಾವಾಗಲೂ ಸಂಗಡಿಗರಿಂದ ಸಿಡಿದು ಇರುವವರೂ, ಪರರ ಆಶ್ರಯವನ್ನು ಆಶಿಸುವವರೂ ಅಲ್ಲಿ ಅಚ್ಚುಗತನದಿಂದ ಅಡ್ಡದಾರಿಗೆ ಹತ್ತಿದವರೂ ಮತ್ತು ಹೊಸ ಪರಿಸ್ಥಿತಿಯಲ್ಲಿ ಅಡಿಯಿಡಲು ಅಳುಕಿ ಹಿಂದೆಗೆವವರೂ ಆದ ಹುಡುಗರ ನಾಳೆಯ ಬಾಳು ಯಾವ ಬಗೆಯದಾಗಬಹುದೆಂಬುದನ್ನು ಹಿಂದಿನ ಅನು ಭವದಿಂದಲೂ, ಅವರ ನಡೆನುಡಿಗಳಲ್ಲಿಯ ಕೆಲವೊಂದು ಸಂಗತಿಗಳಿಂದಲೂ ಊಹಿಸಿಕೊಳ್ಳಬಹುದಾಗಿದೆ. ಎಲ್ಲಕ್ಕೂ ಹೆರವರ ಮೇಲೆಯೇ ಕೈಯೂರಿಕೊಂಡು ಕುಳಿತ ಪರಾವಲಂಬಿಯ ನಾಳೆಯ ಬಾಳು ಎಂತಹದಾಗಬೇಕು. ಬಾಳಿನ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ಇಂತವರು ಹೆದರಿ ತತ್ತರಿಸುವರು. ಬಿಕ್ಕಟ್ಟನ್ನು ಬಿಡಿಸುವ ಬದಲು ಅದರಿಂದ ದೂರ ಓಡಿಹೋಗುವರು. ಹೀಗೆ ನಡೆದು ಕೊಳ್ಳುವುದು ಅವರ ಸ್ವಭಾವವೇ ಆಗಿದೆಯೆಂಬುದನ್ನು ಹಿಂದಿನ ನೂರಾರು ಪ್ರಸಂಗಗಳಿಂದ ನಿರ್ಧರಿಸ ಬಹುದು. ಇಂತಹ ಮಕ್ಕಳು ಯಾರಾದರೂ ತಮಗೆ ಕಕ್ಕುಲತೆ ತೋರಿಸಬೇಕೆಂದು ಹಸಿದು ಹಂಬಲಿಸುತ್ತವೆ ! ಇವಕ್ಕೆ ಸಂಗಡಿಗರೊಡನೆ ಹೊಂದಿಕೊಂಡಿರಬೇಕೆಂಬ ಆಸಕ್ತಿ ಇರುವುದಿಲ್ಲ. ಸಾಮಾಜಿಕ ಸಂಗತಿಗಳ ಒಲವು ಶೂನ್ಯ. ಯಾವುದೆ ಬಿಗಿ ಬಂದೊಡನೆ ಅದನ್ನು ಬಿಟ್ಟು ಓಡುವದೊಂದೇ ಲೆಕ್ಕ ! ನಿರುಪಯುಕ್ತ ವಿಷಯ ಗಳಲ್ಲಿ ಮನಸು ತೊಡಗಿಸುವರು. ವಿಕೃತ ಮನೋವೃತ್ತಿಯವರಾಗುವರು. ಸುಳ್ಳು ಕಳವು ಸೇರಹತ್ತುವವು. ಜೀವಕ್ಕೆ ಬೇಸತ್ತು, ಆತ್ಮಹತ್ಯೆಮಾಡಿಕೊಂಡು ಈ ಬಾಳಿನ

ಉರಿಯೊಳಗಿಂದ ಹೊರಬೀಳಬೇಕೆಂಬ ಭ್ರಾಂತಿಯ ದಾರಿಯಲ್ಲಿ ಇಂಥವರು ಮುಂದುವರಿಯುವರು. ಈ ಬಗೆಯ ನಡೆವಳಿಯ ರಹಸ್ಯವು ಹಿಂದಿಗಿಂತಲೂ ಇಂದು ಚೆನ್ನಾಗಿ ಬೆಳಕಿಗೆ ಬಂದಿದೆ. ಇದಕ್ಕೆ ಈ ವ್ಯಕ್ತಿ-ಮನೋವಿಜ್ಞಾನದ ಸಂಶೋಧನವೇ ಕಾರಣವು.

## ಮನುಷ್ಯರ ಮಾದರಿಗಳು ?

ಸಮಾಜದೊಂದಿಗೆ ಹೊಂದಿಸಿಕೊಂಡವರ ಬಾಳಿನ ಬಗೆಯೇ ನಮ್ಮ ಅಳತೆಗೋಲು. ಅದರಿಂದ ಭಿನ್ನವಾದ ಎಲ್ಲ ವೈವಿಧ್ಯ, ವೈಚಿತ್ರ್ಯಗಳನ್ನೂ ವಿಕ್ಷಿಪ್ತ-ವಿಕೃತಿಗಳನ್ನೂ ತಿಳಿದುಕೊಳ್ಳಬೇಕು. ಆದರೆ ಈ ಸಮವೃತ್ತಿಯ ಸಾಮಾನ್ಯ ಜೀವನ ಶೈಲಿಯನ್ನು ಗೊತ್ತುಪಡಿಸುವದೆಂತು ? ಪ್ರತಿಯೊಬ್ಬನ ಜೀವನದಲ್ಲೂ ಅತನದೇ ಆದ ಒಂದು ವೈಶಿಷ್ಟ್ಯವು ಇದ್ದೇ ಇರುತ್ತದೆ. ಗಿಡದ ಎಲೆಗಳಲ್ಲಿ ಸಾಮ್ಯವಿದ್ದರೂ ತೀರ ಒಂದರಂತೆ ಮತ್ತೊಂದು ಸಿಕ್ಕಲಾರದು. ಹಾಗೆಯೇ ಮಾನವರಲ್ಲೂ ಒಬ್ಬರಂತೆ ಇನ್ನೊಬ್ಬರಿಲ್ಲ. ಎರಡು ವ್ಯಕ್ತಿಗಳಲ್ಲಿ ಒಬ್ಬರ ಸ್ವರೂಪ ಸ್ವಭಾವ ಇನ್ನೊಬ್ಬ ರೀತಿಲ್ಲ. ಆದರೂ ಅನೇಕ ಸಾಮಾನ್ಯ ಗುಣಧರ್ಮಗಳನ್ನು ನೆನೆದುಕೊಂಡು ಕೆಲವು ಮಾದರಿಗಳನ್ನು ಕಲ್ಪಿಸಿಕೊಂಡದ್ದಾಗಿದೆ.

ಒಂದು ಉದಾಹರಣೆಯಿಂದ ಇದನ್ನು ಸ್ಪಷ್ಟಗೊಳಿಸುವ. ಸಾಮಾಜಿಕ ಆಸಕ್ತಿ ಇಲ್ಲದ, ಸಮಾಜದಿಂದ ಸಿಡಿದು ನಿಂತ ಅಹಂಮನ್ಯರ ಗುಂಪು ಒಂದು ಮಾದರಿ. ಜೀವನವನ್ನು ವ್ಯರ್ಥವಾಗಿ ಕಳೆವ ನಾಲ್ವರೊಡನೆ ಕೂಡಿಕೊಳ್ಳಲಾರದ ವ್ಯಕ್ತಿಗಳೆಲ್ಲ ಈ ಗುಂಪಿನಲ್ಲಿ ಸೇರುವರು. ಇದೊಂದು ಬಗೆಯ ವರ್ಗೀಕರಣ. ಇದು ಅತ್ಯಂತ ಮಹತ್ವದ ಬಗೆಯಿರಬಹುದು. ಆದರೆ ಏಕಮೇವವಾದ ವರ್ಗೀಕರಣವಲ್ಲ. ಕೆಲವರಿಗೆ ಕಣ್ಣೇ ಜೀವಾಳ. ಕೆಲವರಿಗೆ ನಾಲಿಗೆಯೆ ಮುಖ್ಯ. ಇವರಿಬ್ಬರ ಆನಂದದ ಕೇಂದ್ರಗಳೇ ಭಿನ್ನವಾಗಿರುವುದರಿಂದ ಇವರಿಬ್ಬರ ಪಂಗಡಗಳೂ ಬೇರೆ ಬೇರೆ. ಇದೇ ಬಗೆಯಾಗಿ ಇನ್ನೂ ಹಲವು ತೆರನಾಗಿ ಮಾನವರನ್ನು ವರ್ಗೀಕರಿಸಿ ವಿಂಗಡಿಸಬಹುದು. ಇಂತಹ ನಾನಾ ವಿಧದ ವರ್ಗೀಕರಣದಿಂದ ಗೊಂದಲು ಮಾತ್ರ ಹೆಚ್ಚಾಗುವುದು. ಒಂದೊಂದು ವ್ಯಕ್ತಿಯು ಎರಡೆರಡು ಮೂರು ಮೂರು ಪಂಗಡಗಳಲ್ಲೂ ಸೇರಲು ಬೇರೆ ಬೇರೆ ದೃಷ್ಟಿಯಿಂದ ಅರ್ಹವಾಗಿರಬಹುದು. ಆದುದರಿಂದ ಮಾನವರಲ್ಲಿ ನಾವು ಮಾಡುವ ವರ್ಗೀಕರಣವು ಕೇವಲ ಸ್ಥೂಲ. ವಿಷಯ ವಿವೇಚನೆಯ ಅನುಕೂಲಕ್ಕಾಗಿ ಮಾಡಿಕೊಂಡ ಒಂದು ಕಾಲ್ಪನಿಕ (ತೀರ ಬುಡವಿಲ್ಲದ್ದಲ್ಲ ಮತ್ತೆ !) ಒಂದು ವಿಭಾಗ.

## ಮನೋರೋಗಿಗಳ ಬಾಳಿನ ಬಗೆ

ಹಿತವಾದ ಮಿತವಾದ ವೃತ್ತಿಯ ಮಾನವನೇ ನಮ್ಮ ಮಾನದಂಡ. ಈತನು ಸಮಾಜವನ್ನು ಪ್ರೀತಿಸುತ್ತಾನೆ. ಅದರಿಂದ ಓಡಿ ಹೋಗುವ ಅಥವಾ ದೂರ ವಿರುವ ವಿಕೃತ ಬುದ್ಧಿಯು ಆತನಲ್ಲಿರುವುದಿಲ್ಲ. ಈತನಿಗೆ ತಿಳಿದಿರಲಿ, ಅಥವಾ ತಿಳಿಯದೆ ಇರಲಿ, ಇವನ ಕಾರ್ಯಕಲಾಪಗಳ ಲಾಭವನ್ನು ಸಮಾಜವು ಒಂದಿಲ್ಲೊಂದು ತೆರನಾಗಿ ಹೊಂದುತ್ತಿರುತ್ತದೆ. ಬಾಳಿನಲ್ಲಿ ಬರುವ ತೊಡಕುಗಳನ್ನು ಬಿಡಿಸಿಕೊಳ್ಳುವುದಕ್ಕೂ ಸಂಕಟಗಳನ್ನು ಎದುರಿಸುವುದಕ್ಕೂ ಸಿದ್ಧನಿರುತ್ತಾನೆ. ಸಮರ್ಥನಾಗುತ್ತಾನೆ. ಆದರೆ ಮನೋರೋಗಿಯಲ್ಲಿ ಇವೆರಡೂ ಗುಣಗಳು ಲೋಪವಾಗಿರುತ್ತವೆ. ನಾನು, ಓರ್ವ ಮೂವತ್ತು ವರ್ಷ ವಯಸ್ಸಿನ ಗೃಹಸ್ಥನನ್ನು ಬಲ್ಲೆ. ಆತನು ಸ್ವಲ್ಪ ಸಂಕಟಗಳು ಬಂದೊಡನೆ ಬಾಳಿನಲ್ಲಿ ಅಂಜಿ ಹಿಂಜರಿ ಯುತ್ತಿದ್ದನು. ಆತನಿಗೆ ಗೆಳೆಯನಲ್ಲಿಯೂ ಯಾವಾಗಲೂ ಸಂಶಯ. ಅದರಿಂದ ಅವರ ಗೆಳೆತನವೇ ಬೆಳೆಯಲಿಲ್ಲ. ಹಲವು ಜನರೊಂದಿಗೆ ಸಂಬಂಧ, ಮಾತುಕತೆಗಳು ನಡೆಯುತ್ತಿದ್ದರೂ ಈ ಗೃಹಸ್ಥನಿಗೆ ನಿಜವಾಗಿ ಯಾರೂ ಗೆಳೆಯರಿದ್ದಿಲ್ಲ. ಇದಕ್ಕೆ ಆತನ ಸಂಶಯ ವೃತ್ತಿಯೇ ಕಾರಣ. ಸಾಮಾಜಿಕ ಆಸಕ್ತಿಯೂ ಇದ್ದಿಲ್ಲ. ಆತನಿಗೆ ವಸ್ತುತಃ ಸಮಾಜವೇ ಸೇರುತ್ತಿದ್ದಿಲ್ಲ. ನಾಲ್ಕು ಜನರಲ್ಲಿ ಕುಳಿತಾಗ ಆತನು ಯಾವಾಗಲೂ ಮೌನಿ. ಮಂದಿಯಲ್ಲಿ ಕುಳಿತಾಗ ತನಗೆ ಏನೂ ವಿಚಾರಗಳು ಹೊಳೆಯುವುದಿಲ್ಲ. ಅದಕ್ಕಾಗಿ ತಾನು ಪಿಟ್ಟೆನ್ನದೆ ಸುಮ್ಮನಿರುತ್ತೇನೆಂದು ಹೇಳುತ್ತಿದ್ದನು.

ಅಲ್ಲದೆ, ಈತನು ನಾಚುಬುರುಕನೂ ಆಗಿದ್ದನು. ಏನಾದರೂ ಆಡುವಾಗ ಆತನ ಗುಲಾಬಿ ಕೆನ್ನೆಗಳು ಇನ್ನೂ ಕೆಂಪಾಗುತ್ತಿದ್ದುವು. ಸಂಕೋಚವನ್ನು ಬದಿಗಿರಿಸಿದಾಗ ಆತನು ಸೊಗಸಾಗಿ ಮಾತಾಡುತ್ತಿದ್ದನು. ಯಾರಿಂದಲೂ ಹೆಸರು ಇಡಿಸಿಕೊಳ್ಳದೆ ಹೆಸರಾಗಬೇಕೆಂಬ ಹಂಬಲವು ಆತನದು. ಈ ಅವಸ್ಥೆಯಲ್ಲಿ (ಸಂಕೋಚದಿಂದ ಮುದುಡಿಕೊಂಡಾಗ) ಆತನಲ್ಲಿ ಯಾರಿಗೂ ಆದರವುಂಟಾಗುವಂತೆ ಇದ್ದಿಲ್ಲ. ಯಾರೂ ಆತನನ್ನು ಆದರಿಸುತ್ತಲೂ ಇದ್ದಿಲ್ಲ. ಆದುದರಿಂದ ಆತನ ಮಾತು ಮತ್ತೂ ಕಡಿಮೆಯಾಯಿತು. ಇವನು ಮಂದಿಯಲ್ಲಿ ಹೋದಾಗ ಅವರೊಡನೆ ಬೆರೆವ ಬದಲು ತನ್ನಲ್ಲೆ ಮೈಮರೆಯುತ್ತಿದ್ದನು. ಜನರ ಕಡೆಗೆ ಇಡಬೇಕಾದ ದೃಷ್ಟಿಯನ್ನು ತನ್ನಲ್ಲಿಯೇ ಹೊರಳಿಸುತ್ತಿದ್ದನು.

ಮಂದಿಯೊಡನೆ ಹೊಂದಿಕೊಂಡಿರುವ ರೀತಿ ಮತ್ತು ಗೆಳೆಯರೊಡನೆ ಕೂಡಿರುವ

ಕಲೆ ಇವೆರಡೂ ಬಾಳುವೆಗೆ ಅತ್ಯಂತ ಆವಶ್ಯಕ ಸಂಗತಿಗಳು. ಇದರ ತರುವಾಯ ಮಹತ್ತ್ವದ್ದೆಂದರೆ ಬದುಕುವುದಕ್ಕಾಗಿ ಕೈಕೊಂಬ ಕಾಯಕ. ಮೇಲಿನ ಉದಾಹರಣೆಯ ಗೃಹಸ್ಥನಿಗೆ ತಾನು ಕೈಕೊಂಡ ಉದ್ಯೋಗದಲ್ಲಿ ಎಲ್ಲಿ ಅಯಶಸ್ವಿಯಾಗುವೆನೊ ಎಂಬ ಹೆದರಿಕೆಯು ತುಂಬ ಬಾಧಿಸುತ್ತಲಿತ್ತು. ಅದರಿಂದ ಆತನು ಇರುಳನ್ನು ಹಗಲುಮಾಡಿ ಮಿತಿಮೀರಿ ದುಡಿದು, ಮಿತಿಮೀರಿ ದಣಿದು ವ್ಯಾಸಂಗ ನಡೆಸಿದನು. ಹೀಗೆ ದಣಿದು ನಿರ್ವಿಣ್ಣನಾಗಿ ಆತನು ತನ್ನ ಹೋರೆಯ ತೊಡಕನ್ನು ಬಿಡಿಸಿ ಬಗೆಹರಿಸಿಕೊಳ್ಳಲು ಮತ್ತಿಷ್ಟು ಅಸಮರ್ಥನಾದನು. ಇದಕ್ಕೆಲ್ಲ ಕಾರಣವೇನು ? ಯಾವಾಗಲೂ ನಡೆಯುತ್ತಿದ್ದ ಆತನ ಮನಸಿನ ಎಳೆದಾಟ. ತಲೆಯ ಮೇಲೆ ಹೊತ್ತಿದ್ದ ಚಿಂತೆಯ ಹೊರೆ. ಆತನಿಗೆ ತನ್ನ ಅಂತಃಶಕ್ತಿಯಲ್ಲಿ ವಿಶ್ವಾಸವೆಲ್ಲ ಹಾರಿಹೋಗಿತ್ತು. ತನಗೆ ಏನೂ ಬೆಲೆಯಿಲ್ಲವೆಂದು ಭಾವಿಸಿದ್ದನು. ಇದು ಆತನ ತೀವ್ರವಾದ ಕೀಳರಿಮೆಯನ್ನೇ ಸೂಚಿಸುತ್ತದೆ. ಈ ಬಗೆಯ ಭಾವನೆಯ ಮೂಲಕ ಆತನು ಎಲ್ಲರೊಡನೆ ಪರಕೀಯರಂತೆ–ವಿರೋಧಿಗಳಂತೆ ಸಂದೇಹಪಟ್ಟುಕೊಂಡೇ ನಡೆಯುತ್ತಿದ್ದನು. ಮುಂದರಿಯುವ ಬಯಕೆಯಿದ್ದರೂ, ಅಪಜಯದ ಬೆದರಿಕೆಯು ಆತನನ್ನು ಹೆದರಿಸುತ್ತಿತ್ತು. ಹೆರವರೊಡನೆ ಬೆರೆಯುವುದಕ್ಕಿಂತ ಮನೆಯಲ್ಲಿ ಬಿದ್ದುಕೊಂಡಿರುವುದು ಲೇಸೆಂದು ಎನ್ನುತ್ತಿದ್ದನು. ವ್ಯಕ್ತಿಯ ಕಾಯಕದ ನಂತರದ ಮಹತ್ತ್ವದ ಸಂಗತಿಯೆಂದರೆ, ಪ್ರಣಯ. ಮೇಲಿನ ಸದ್ಗೃಹಸ್ಥನು ಈ ವಿಷಯದಲ್ಲಿಯೂ ತತ್ತರಿಸುತ್ತ ಅಡಿಯಿಡುವವನೇ. ಮದುವೆಯ ಹಂಬಲವಿದ್ದರೂ ಹೆಣ್ಣನ್ನು ಕಣ್ಣೆತ್ತಿ ನೋಡುವುದಕ್ಕೂ ಸಂಕೋಚ. ಸಂದೇಹ. ಈತನನ್ನು ಮಾತನಾಡಿಸಿರಿ. ಯಾವುದಕ್ಕೂ ಈತನ ಉತ್ತರದ ರೀತಿ ಒಂದೇ ಮಾದರಿಯದು. ‘ಅಹುದು......ಆದರೆ... !’ ಅಹುದಿನಲ್ಲಿ ಆರಂಭ. ಆದರೆಗೆ ಮುಕ್ತಾಯ. ಈ ಅನಿಶ್ಚಿತತೆಯೇ ಆತನ ಎಲ್ಲ ನಡತೆಯ ಸಾರ. ಒಮ್ಮೆ ಇಬ್ಬರು ವಧುಗಳು ಈತನ ಮನಸಿಗೆ ಬಂದರು. ಇವರಲ್ಲಿಯೂ ಅವಳೊ ಇವಳೊ ಎಂಬ ತೂಗಾಟ ! ಇಲ್ಲಿ ಮತ್ತೆ ಮನೋದುರ್ಬಲತೆಯೇ ಗೋಚರವಾಗುತ್ತದೆ. ಒಬ್ಬಳನ್ನೇ ಪೂರ್ಣ ಆಶಕ್ತಿಯಿಂದ ತನ್ನ ಪ್ರೇಮದಲ್ಲಿ ತೊಡಗಿಸುವಷ್ಟು ಭಾವನೆಯ ಬಲವಿಲ್ಲದ ಆತನು, ಇಬ್ಬರ ವಿಚಾರದ ಹೊಯ್ದಾಟದಲ್ಲಿ ಸಿಕ್ಕಿಬೀಳಬೇಕೆ ! ಈ ಬಗೆಯ ಪರಿಸ್ಥಿತಿಯಲ್ಲಿ ಇಂತವರು ಒಬ್ಬಳಿಗಿಂತ ಹೆಚ್ಚು ಹೆಂಡಂದಿರನ್ನು ಪಡೆದೆವೆಂಬ ಹೆಗ್ಗಳಿಕೆಯಿಂದ ತಮ್ಮ ಕೀಳರಿಮೆಯ ಮೇಲೆ ಮುಸುಕನ್ನು ಹಾಕುವುದುಂಟು !

ಈ ಗೃಹಸ್ಥನ ಜೀವನ ಶೈಲಿಯು ಈ ಬಗೆಯದಾಗಲು ಕಾರಣಗಳು ಯಾವವು ? ಚಿಕ್ಕಂದಿನ ೪ ಅಥವಾ ೫ ನೆಯ ವಯಸ್ಸಿನ ಸುಮಾರಿಗೇ ಯಾರೊಬ್ಬರ ಜೀವನ ಶೈಲಿಯು ಸಾಧಾರಣವಾಗಿ ನಿಶ್ಚಿತವಾಗುತ್ತಿರುತ್ತದೆ. ಆ ಕಾಲದಲ್ಲಿ ಏನಾದರೊಂದು

ದುರ್ಘಟನೆಯಿಂದ ಮನಸಿನ ಮೇಲೆ ಭಯಂಕರವಾದ ಆಘಾತಗಳು ಸಂಭವಿಸಿದರೆ ಅವರ ದುಷ್ಪರಿಣಾಮಗಳನ್ನು ಆಜನ್ಮವೂ ಅನುಭವಿಸಬೇಕಾಗುವುದು. ನಮ್ಮ ಉದಾಹರಣದೊಳಗಣ ಈ ಗೃಹಸ್ಥನು ಆ ಕುಟುಂಬದಲ್ಲಿ ಚೊಚ್ಚಿಲ ಹುಡುಗನು. ಮುಂದೆ ಈತನಿಗೆ ಒಬ್ಬ ತಮ್ಮನು ಆದನು. ಪ್ರೀತಿಯ ಪಟ್ಟದಿಂದ ತಳ್ಳಲ್ಪಟ್ಟನು. ಎಲ್ಲರೂ ಆ ಹೊಸ ಹಸುಳೆಯನ್ನು ಪ್ರೀತಿಸುವವರೇ. ಇಂಥ ಸಂದರ್ಭದಿಂದ ಉಂಟಾಗುವ ಪರಿಣಾಮಗಳನ್ನು ಹಿಂದೆಯೇ ಪರಿಶೀಲಿಸಲಾಗಿದೆ. ಒಂದು ವ್ಯಕ್ತಿಯು ಕುಟುಂಬದಲ್ಲಿ ಎಷ್ಟನೆಯ ಮಗುವು, ಎಂಬ ಪ್ರಶ್ನೆಯಲ್ಲಿಯೇ ಎಷ್ಟೋ ಬಾರಿ, ಆತನ ಮುಂದಿನ ಬಾಳಿನ ಉತ್ತರವೆಲ್ಲ ಅಡಕವಾಗಿರುತ್ತದೆ. ವ್ಯಕ್ತಿಯ ಹಳೇ ನೆನಹುಗಳನ್ನು ಕೇಳಿಕೊಳ್ಳುವುದರಿಂದ ಅವರ ಜೀವನ ಶೈಲಿಯು ಹೀಗೆಯೇ ಏಕೆ ರೂಪಗೊಂಡಿತೆಂಬುದನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಹಿಂದಿನ ಒಂದೊಂದು ನೆನಹಿನಿಂದ ಏನಾದರೊಂದು ಮಹತ್ವದ ಘಟನೆಯು ಬೆಳಕಿಗೆ ಬರುತ್ತದೆ.

## ಹಳೆಯ ನೆನಪುಗಳ ಮಹತ್ವ

ಉದಾಹರಣಕ್ಕಾಗಿ ಒಬ್ಬನ ಚಿಕ್ಕಂದಿನ ಒಂದು ನೆನಪನ್ನು ವಿಚಾರಿಸುವ. ಆತನು, ತಾನು ತಾಯಿಕಂಕುಳಲ್ಲಿ ಕುಳಿತು ಒಂದು ದಿನ ಸಂತೆಗೆ ಹೊರಟುದನ್ನು ನೆನೆದು ಕೊಳ್ಳುತ್ತಾನೆ. ಇದಿಷ್ಟೇ ಆತನ ಬಾಳಿನ ಬಗೆಯನ್ನು ಸೂಚಿಸಲು ಸಾಕಾಗಿದೆ. ಆತನು ಇನ್ನೂ ಸ್ವಲ್ಪ ನೆನಪು ಮಾಡಿಕೊಂಡು ಮುಂದೆ ಹೇಳಿದ್ದೇನೆಂದರೆ: ಅಂದು ಸಂತೆಯ ದಾರಿಯಲ್ಲಿ ಮಳೆಹನಿಯಲಾರಂಭಿಸಿತು. ನನ್ನ ತಮ್ಮನೂ ಅಲ್ಲಿ ಬರುತ್ತಿರುವುದನ್ನು ಕಾಣುತ್ತಲೆ ತಾಯಿಯು ನನ್ನನ್ನು ಇಳಿಸಿ, ನನ್ನ ತಮ್ಮನನ್ನು ಎತ್ತಿಕೊಂಡಳು. ಈ ನೆನಹು ಆತನ ಜೀವನ ಶೈಲಿಯ ಪ್ರತೀಕದಂತಿದೆ. ಈ ಅಣ್ಣನಲ್ಲಿ ಯಾವಾಗಲೂ ತನ್ನ ಬದಲು ಇನ್ನೊಬ್ಬರನ್ನು ಆರಿಸಲಾಗುವುದೆಂಬ ವಿಚಾರವು ದೃಢವಾಯ್ತು. ಇದರಿಂದಲೇ ಆತನು ಅಳ್ಳೆದೆಯವನಾದನು. ಆತನಲ್ಲಿ ಅಂಜಿಕೆ, ಅಳುಕು, ತೊದಳು, ತತ್ತರ, ಸಂದೇಹಗಳು ಮನೆಮಾಡಿಕೊಂಡವು. ಗಳೆತನದಲ್ಲಿಯೂ ಹೀಗೆಯೇ. ಗೆಳೆಯನು ತನಗಿಂತ ಇನ್ನೊಬ್ಬನನ್ನೇ ಹೆಚ್ಚು ಮೆಚ್ಚಿರಬಹುದೆಂಬ ಕಲ್ಪನೆಯಿಂದ ಆತನು ನಿಜವಾದ ನಿಕಟವಾದ ಗೆಳೆತನವನ್ನು ಯಾರೊಂದಿಗೂ ಬೆಳಸುವುದಿಲ್ಲ. ಸಣ್ಣ ಪುಟ್ಟ ಸಂಗತಿಗಳಿಂದಲೂ ಗೆಳೆಯನ ಗೆಳೆತನ, ಪ್ರೀತಿಗಳ ಬಗ್ಗೆ ಸಂದೇಹವು ಈತನಲ್ಲಿ ತಲೆದೋರುವುದು. ತನ್ನ ಬದಲು ತನ್ನ ತಮ್ಮನನ್ನು ತಾಯಿಯು ಎತ್ತಿಕೊಂಡಳೆಂಬ ಸಂಗತಿಯನ್ನೇ ನೆನಪಿಟ್ಟನು. ಇನ್ನೊಂದು ಸಂಗತಿಯನ್ನೂ ಇದು ಸೂಚಿಸುತ್ತದೆ. ತನಗಿಂತ ತನ್ನ ತಮ್ಮ

ನಲ್ಲಿಯೇ ತಾಯಿಯ ಪ್ರೀತಿಯುಂಟೆಂಬ ವಿಚಾರವು ಈತನನ್ನು ಬಾಧಿಸುತ್ತಿತ್ತು. ತಾನು ಒಂದೆ ಬಿದ್ದಿರುವೆನೆಂಬ ಭಾವನೆಯಿಂದ ಒಂದೇ ಸವನೆ ಬಳಲುತ್ತಿದ್ದನು. ಕೆಲಸ ಬೊಗಸೆಗಳಲ್ಲಿದ್ದಾಗ ಆತನಿಗೆ ಈ ಕಹಿ ನೆನಪು ತಲೆಯೆತ್ತಿ ಕುಣಿದು ಆತನ ಕೆಲಸದ ಹುಮ್ಮಸವನ್ನು ಹಾಳು ಮಾಡುತ್ತಿತ್ತು. ಮನಸಿನ ಹೊಯ್ದಾಟದಲ್ಲಿ ಕಂಗೆಟ್ಟು ಮುಂದುಗಾಣದವನಾಗುತ್ತಿದ್ದನು. ಇಂತಹ ಎದೆಗೆಟ್ಟ, ಕಂಗೆಟ್ಟ, ಸಂದೇಹರಾಯನಿಗೆ ತನ್ನ ಬಿಡುಗಡೆಯ ಒಂದೇ ಹಂಚಿಕೆಯೆಂದರೆ ಅದು ಕೇವಲ ಏಕಾಂತ ವಾಸ. ಇತರರೊಂದಿಗೆ ಹೋರಾಡುವ ಕಾರಣವಿಲ್ಲದ ಕೋಣೆಯ ಕೂಸಾಗಿ ತನ್ನ ಜಗತ್ತಿನಲ್ಲಿ ತಾನೇ ತಾನಾಗಿ ಉಳಿಯಲು ಆತನು ಹುಡುಕಿಕೊಂಡ ಇದೊಂದು ಉಪಾಯ. ಕೆಲವೊಮ್ಮೆ ಈ ಬಗೆಯ ಚಿಕ್ಕ ಮಕ್ಕಳು ಹಗಲುಗನಸಿಗರೂ ಕನವರಿಸುವವರೂ ಆಗುವುದುಂಟು. ತಮ್ಮ ಕಲ್ಪನಾ ರಾಜ್ಯದಲ್ಲಿದ್ದಾಗ ಇವರು ಜಗತ್ತೆಲ್ಲ ಸುಟ್ಟುಸೂರಾಗಿ, ಎಲ್ಲೆಡೆಯಲ್ಲಿಯೂ ಜಲಪ್ರಳಯವಾಗಿ ತಾನೋರ್ವನೇ ಅದ್ವಿತೀಯನಾಗಿ ಒಂದುಳಿದಿರುವೆನೆಂದು ಭಾವಿಸುವುದುಂಟು. ಹೀಗೆ ಉಳಿದ ಜನ-ಜಗತ್ತಿನ ಸಂಬಂಧ ಕಡಿದುಕೊಂಡು ಕೇವಲ ತನ್ನದೇ ಆದ ಸಂಕುಚಿತ ಪ್ರಪಂಚದಲ್ಲಿ ಉಳಿಯಬಯಸುವ ಇಂಥ ವ್ಯಕ್ತಿಯು ತಾಳಗೆಟ್ಟ ವಿಕೃತ ಮನೋವೃತ್ತಿಯದಾಗಿರಬೇಕೆಂದು ಬೇರೆ ಹೇಳಬೇಕೆ ?

## ಇವರನ್ನು ಸರಿದಾರಿಗೆ ಹಚ್ಚುವುದೆಂತು ?

ಇಂಥ ದುರ್ದೈವಿಗಳನ್ನು ಸರಿದಾರಿಗೆ ಹಚ್ಚುವುದೆಂತು ? ಇಂತಹ ಜನರು ತಮ್ಮದೇ ಸತ್ಯವೆಂದು ಗ್ರಹಿಸಿ, ಅದನ್ನು ಸಿದ್ಧಮಾಡುವುದಕ್ಕಾಗಿಯೇ ತಾವು ಕಂಡ ಕೇಳಿದ ಎಲ್ಲ ಸಂಗತಿಗಳನ್ನು ಎಳೆದು ತಂದು ಉಪಯೋಗಿಸುವರು. ಇಂತವರನ್ನು ತಮ್ಮ ವಿಚಾರಕ್ಕೆ ತಿರುಗಿಸಿಕೊಳ್ಳುವುದು ದುಸ್ತರವಾಗಿದೆ. ಅವರ ಹೃದಯದಲ್ಲಿ ಸೇರಿ ಅವರ ಪೂರ್ವಗ್ರಹಿಕೆಗಳಿಗೆ ಸಮರ್ಪಕವಾಗಿ ಉತ್ತರ ಕೊಟ್ಟು ಖಂಡಿಸಲು ಸಮರ್ಥರಾದವರೇ ಇವರನ್ನು ತಿದ್ದಬಲ್ಲರು. ಈ ಕೆಲಸಕ್ಕೆ ಕೆಲವೊಂದು ಕೌಶಲ್ಯವು ಅವಶ್ಯ. ಇಂಥ ಮನೋರೋಗಿಗಳ ಮಾರ್ಗದರ್ಶಿಯು ಅವನೊಂದಿಗೆ ವಿಶೇಷ ಸಂಬಂಧವಿಲ್ಲದವನೂ ವಿಶೇಷ ಆಸಕ್ತಿರಹಿತನೂ ಅಲಿಪ್ತನೂ ಆಗಿರಬೇಕು. ಏಕೆಂದರೆ ರೋಗಿಗೆ ಚಿಕಿತ್ಸಕನಲ್ಲಿ ನಂಬುಗೆ ಇರಬೇಕು. ಹತ್ತಿರದವರಲ್ಲಿ ಶ್ರದ್ಧೆಗಿಂತ ಸಂಶಯಗ್ರಸ್ತನಾಗಿಯೇ ಇರುವ ಸಂಭವವಿದೆ.

ಅಲ್ಲದೆ ರೋಗಿಯಲ್ಲಿ ನೆಲೆಗೊಂಡ ಕೀಳರಿಮೆಯ ಬೇರನ್ನು ಸಡಲಿಸುವುದೂ ಒಂದು ಮುಖ್ಯ ಸಂಗತಿಯು. ಇನ್ನು, ಈ ನ್ಯೂನ-ಭಾವನೆಯು ಪೂರ್ಣವಾಗಿ ನಷ್ಟ

ವಾಗದು. ಹಾಗಾಗುವುದು ಇಷ್ಟವೂ ಅಲ್ಲ. ಏಕೆಂದರೆ, ಕೆಲವೊಂದು ನ್ಯೂನತೆಯ ಭಾವನೆಯು-ಅಸಂತೋಷವು ನಮ್ಮ ಏಳ್ಗೆಗೆ-ಶ್ರೇಯಸ್ಸಿಗೆ ಕಾರಣವಾಗುತ್ತದೆ. ಇಂತಹ ಬೇನಿಗರು ತಾವು ಮೊದಲು ಕಣ್ಣೆದುರು ಇಟ್ಟುಕೊಂಡ ಗುರಿಯನ್ನು ಬದಲಿಸಿ, ಬೇರೆ ಶ್ರೇಷ್ಠ ಧ್ಯೇಯಗಳನ್ನು ಸಾಧಿಸಲು ಅವರ ಮನಸ್ಸನ್ನು ಒಲಿಸಬೇಕು. ಕೈಕೊಂಡ ಕೆಲಸದಲ್ಲಿ ತೊಂದರೆ ಬಂದೊಡನೆ ಆ ಕೆಲಸವನ್ನೇ ಬಿಟ್ಟುಕೊಡುವ ಈತನ ಸ್ವಭಾವವನ್ನು ಬದಲಿಸಲು ಪ್ರಯತ್ನಪಡಬೇಕು. ಆತನು, ತಾನು ಭಾವಿಸಿರುವಂತೆ ತೀರ ಕ್ಷುಲ್ಲಕ, ಕೀಳನಾಗಿಲ್ಲವೆಂದು ಆತನಿಗೆ ತೋರಿಸಿಕೊಡಬೇಕು. ಆತನ ನಡೆನುಡಿಗಳಲ್ಲಿಯ ಕುಂದು ಕೊರತೆಗಳನ್ನೂ ಆತನ ಅಸಿಮಿಸಿ, ಪ್ರಕ್ಕುಗಳನ್ನೂ ಆತನಿಗೆ ಬಿಡಿಸಿ ತೋರಿಸಬೇಕು. ತನಗಿಂತ ಬೇರೆ ಯುವರನ್ನೇ ಜನಗಳು ಮೆಚ್ಚಬಹುದೆಂಬ ವ್ಯರ್ಥ ಭಾವನೆಯ ಮೂಲಕ ತನ್ನ ಉತ್ತಮವಾದ ಕಾರ್ಯವನ್ನೂ. ಅಗತ್ಯವಾದ ಕರ್ತವ್ಯವನ್ನೂ ಹೇಗೆ ಕೆಡಿಸಿಕೊಳ್ಳುತ್ತಿರುವನು ಮತ್ತು ಎಲ್ಲರ ಮೇಲೂ ತನ್ನ ಪ್ರಭಾವವನ್ನು ಬೀರಬಹುದಾದಂಥ ಸಂಧಿಗಳನ್ನು ಹೇಗೆ ಕಳೆದುಕೊಳ್ಳುತ್ತಿರುವನೆಂಬುದನ್ನು ಆತನಿಗೆ ತೋರಿಸಿಕೊಡಬೇಕು.

ಇಂತವರಿಗೆ ತಮ್ಮ ಮನಸಿನ ತೀವ್ರ ಭಾವನೆಗಳನ್ನು ಬಿಟ್ಟುಕೊಡಲಿಕ್ಕೆ ಹೇಳಬೇಕು. ಇವರನ್ನು ಒಳ್ಳೆಯ ದಾರಿಗೆ ತರಲು ಒಂದು ಉಪಾಯವಿದೆ : ಇವರು ಆಗಾಗ ಗೆಳೆಯರನ್ನು. ಹಿತಚಿಂತಕರನ್ನು ತಮ್ಮ ಮನೆಗೆ ಕರೆದು ಅವರ ಆದರಾತಿಥ್ಯ ಮಾಡಬೇಕು, ಅವರ ವಿಷಯಕ್ಕೆ ಆಸಕ್ತಿಯನ್ನು ತೋರಿಸುವ ಯಜಮಾನನ ಭೂಮಿಕೆಯನ್ನು ನಿರ್ವಹಿಸಬೇಕು. ಇದರಿಂದ ಇವರು ನಿಜವಾಗಿಯೂ ಬೇಗನೇ ಸುಧಾರಿಸಬಹುದು. ಸಾಮಾನ್ಯವಾಗಿ ತೀವ್ರವಾದ ಕೀಳರಿಮೆಯವರಿಗೆ ಸಾಮಾಜಿಕ ಜೀವನದಲ್ಲಿ ಸ್ವಲ್ಪವೂ ಪ್ರೀತಿಯೆನಿಸುವುದಿಲ್ಲ ! ಮಂದಿಯೊಡನಿದ್ದಾಗ ಇವರಿಗೆ ಆನಂದವಿಲ್ಲ. ತನ್ನ ಬಿಟ್ಟು ಇನ್ನೊಂದು ಜೀವದೊಂದಿಗೆ ಸಮರಸವಾಗಲು ಇವರು ಎಂದೂ ಅರಿಯರು ! ಹಿರಿಯ ಕಿರಿಯರೊಡನೆ ಬೆರೆಯದ ಇವರು ತೀರ 'ಗೊಡ್ಡು ಜನ.' ಯಾವಾಗಲೂ 'ಅವರು ನನಗೆ ಸೇರುವುದಿಲ್ಲ ; ಇವರನ್ನು ಕಂಡರೆ ಆಗುವುದಿಲ್ಲ' ಎಂದು ಇವರು ದೂರುವರು. ಇದು ಇವರ ಏಕಾಕಿಯಾಗಿ ಜೀವಿಸಿದ ಫಲ ; ಯಾವಾಗಲೂ ಇವರಿಗೆ ಹಗೆಗಳ ನಡುವೆ ಇರುವಂತೆ ಎನಿಸುವುದು. ಇವರದು ತೋಳ ಅಥವಾ ನರಿಯ ಬಾಳು. ಸಾಮಾನ್ಯವಿವೇಕವಿಲ್ಲದೇ. ತೂಕ ತಪ್ಪಿದ ವಿಕೃತವೃತ್ತಿಯ ತಿರುಗಣಿಯಲ್ಲಿ ತೊಳಲಾಡುವ ಇಂಥವರ ಜೀವನವು ತುಂಬ ಶೋಚನೀಯ.

ಇಂತಹದೇ ಇನ್ನೊಂದು ವಿಶಿಷ್ಟವಾದ ಉದಾಹರಣೆಯಿದೆ. ಚಿಂತಾಕ್ರಾಂತನಾದ

ಖಿನ್ನ ವೃತ್ತಿಯ ಒಬ್ಬ ಗೃಹಸ್ಥನ ಉದಾಹರಣೆಯಿದು. ಇದೊಂದು ಸಾಮಾನ್ಯವಾದ ಮನೋರೋಗ. ಆದರೆ ಇದನ್ನು ಗುಣಪಡಿಸಬಹುದು. ಎಷ್ಟೋ ಹುಡುಗರು, ಹೊಸದೊಂದು ಸನ್ನಿವೇಶವನ್ನು ಎದುರಿಸುವಾಗ ಹೀಗೆ ವಿಶೇಷ ಚಿಂತೆಗೆ ಒಳಗಾಗುವುದನ್ನು ಕಾಣಬಹುದು. ನಮ್ಮ ಉದಾಹರಣೆಯ ಗೃಹಸ್ಥನಿಗೆ ಹೊಸ ಪರಿಸ್ಥಿತಿಯನ್ನು ಎದುರಿಸಬೇಕಾದೊಡನೆ ಚಿಂತೆಯು ಆವರಿಸುತ್ತಿತ್ತು. ಆತನು ಪರಿಚಿತವಾದ ಹಳೆಯಸ್ಥಾನದಲ್ಲಿರುವನಕ ತನ್ನ ತೂಕದಲ್ಲಿಯೇ ಇರುತ್ತಿದ್ದನು. ಆತನಿಗೆ ಮಂದಿಯಲ್ಲಿ ಸೇರುವುದು ಬೇಡಾಗಿತ್ತು ; ಆದರೂ ಇತರರನ್ನು ಆಳಬೇಕೆಂಬ ಬಯಕೆ ಆತನಿಗಿತ್ತು ! ಹೀಗಾಗಿ ಆತನಿಗೆ ಗೆಳೆಯರಾರೂ ಇದ್ದಿಲ್ಲ : ಮೇಲಾಗಿ, ಐವತ್ತು ವರ್ಷ ಪ್ರಾಯದವನಾಗಿದ್ದರೂ ಆತನ ಮದುವೆಯಾಗಲಿಲ್ಲ ! ಆತನ ಈ ಜೀವನ ಶೈಲಿಯ ರಹಸ್ಯವೇನು ? ಚಿಕ್ಕಂದಿನಲ್ಲಿ ಆತನು ತೀರ ಜಗಳಗಂಟನಾದರೂ ಮಿದುಮನಸಿನವನೂ ಆಗಿದ್ದನು. ಹಿಂದೆ ಒಂದೆಡೆಗೆ ವಿವರಿಸಿರುವಂತೆ ಆತನು ತನ್ನ ಬೇನೆ ಬೇಸರಿಕೆಯಿಂದಲೂ, ದುರ್ಬಲತೆಗಳಿಂದಲೂ ತನ್ನ ಅಣ್ಣಂದಿರನ್ನೂ ಅಕ್ಕತಂಗಿಯರನ್ನೂ ಆಳುತ್ತಿದ್ದನು. ಒಂದು ದಿನ ಆತನು ಅವರೆಲ್ಲರೊಂದಿಗೆ ಮಂಚದ ಮೇಲೆ ಆಡುತ್ತಿರುವಾಗ, ಅವರನ್ನು ಅದೇಕೋ ಕೆಳಕ್ಕೆ ನೂಕಿದನು. ಇದಕ್ಕಾಗಿ ಆತನ ಚಿಕ್ಕಬ್ಬೆಯು ಆತನನ್ನು ಚೆನ್ನಾಗಿ ಬಯ್ದಳು. ಅದು ಆತನಿಗೆ ಅತ್ಯಂತ ಅಸಹ್ಯವಾಯಿತು. 'ನೋಡು ಈಗ ನನ್ನ ಜೀವದ ಬೇಸರಿಕೆ ಬಂತು. ನೀನೇಕೆ ನನಗೆ ಬೈದೇ ?' ಎಂದು ಆತನು ಗದ್ದರಿಸಿದನು. ಆಗ ಆತನ ವಯಸ್ಸು ೪-೫ ಇತ್ತು. ಯಾವಾಗಲೂ ಹೆರವರನ್ನು ಆಳಲು ನೋಡುತ್ತ, ಯಾವಾಗಲೂ ತನ್ನ ದುರ್ಬಲತೆಯನ್ನು ದೂರುತ್ತ ತನ್ನ ದುಃಖವನ್ನೇ ಎಲ್ಲರಿಗೆ ಅರುಹುತ್ತ, ಈ ಬಗೆಯ ಜೀವನ ಶೈಲಿಯನ್ನು ಆತನು ಬೆಳಸಿಕೊಂಡು ಬಂದಿದ್ದನು. ಇಂತು. ಪರಾವಲಂಬಿಯಾದ ಈತನಿಗೆ ಹೊಸ ಪರಿಸ್ಥಿತಿಯೆಂದೊಡನೆ ಹೌಹಾರಿ ಹೋಗುತ್ತಿತ್ತು. ಚಿಂತೆಯಿಂದ ಬಳಲುವುದು ಕೇವಲ ದುರ್ಬಲ ಮನೋವೃತ್ತಿಯ ಪರಿಣಾಮ.

## ಮೂರು ಮಾದರಿಯ ಹುಡುಗರೂ ; ಒರ್ವ ಸೆರೆಗುಡುಕನೂ

ಕೆಲವೊಂದು ಸನ್ನಿವೇಶಗಳಲ್ಲಿನ ಮನುಷ್ಯ ಪ್ರಾಣಿಗಳ ನಡೆವಳಿಕೆಯು ಇತರ ಪ್ರಾಣಿಗಳಿಂದ ಭಿನ್ನವಾಗಿಲ್ಲ. ಒಮ್ಮೆ ಮೂರು ಬಗೆಯ ಮಕ್ಕಳನ್ನು ಸಿಂಹದ ಪಂಜರದೆದುರು ಒಯ್ದು ಅವರ ವರ್ತನವನ್ನು ನಿರೀಕ್ಷಿಸುವ ಪ್ರಯೋಗವನ್ನು ಮಾಡಲಾಯಿತು. ಆ ಭೀಕರವಾದ ಹಿಂಸ್ರ ಪಶುವನ್ನು ಮೊತ್ತಮೊದಲು ನೋಡುವಾಗ ಆ ಮಕ್ಕಳ ಮುಖಮುದ್ರೆ, ಭಾವಭಂಗಿಗಳಲ್ಲಾಗುವ ಪರಿಣಾಮಗಳನ್ನು

ನೋಡಿದ್ದಾಯಿತು. ಮೊದಲ ಹುಡುಗನು 'ಮನೆಗೆ ಹೋಗೋಣ !' ಎಂದು ಹೊರಳಿದನು. ಎರಡನೆಯವನು 'ಎಷ್ಟು ಚೆನ್ನಾಗಿದೆ !' ಎಂದು ಉಸುರಿ, ತಾನು ಎದೆಗಾರನೆಂದು ತೋರಿಸಿಕೊಳ್ಳಲು ಹೆಣಗಿದರೂ ಆತನು ಹಾಗೆ ಹೇಳುವಾಗ ಗದಗದನೆ ನಡಗುತ್ತಿದ್ದನು ! ನಿಜವಾಗಿಯೂ ಆತನು ಹೇಡಿಯಾಗಿದ್ದನು. ಮೂರನೆಯ ಹುಡುಗನು 'ಸಿಂಹನ ಮೇಲೆ ಉಗುಳಲೇ ?' ಎಂದು ಕುತೂಹಲದಿಂದ ಕೇಳಿದನು. ಈ ಉದಾಹರಣೆಯಲ್ಲಿ ಮೂರು ಬೇರೆ ಬೇರೆ ನಡೆವಳಿಯ ರೀತಿಗಳು ಕಂಡು ಬರುತ್ತವೆ. ಒಂದೇ ಸನ್ನಿವೇಶದಲ್ಲಿ ಮೂರು ಬೇರೆ ಬೇರೆ ಬಗೆಗಳು ಹೊರಬಂದುವು. ಇವಲ್ಲದೇ, ಸಾಮಾನ್ಯವಾಗಿ ಮಾನವರಲ್ಲಿ ಪುಕ್ಕತನವೇ ಹೆಚ್ಚಾಗಿರುವುದೂ ಇಲ್ಲಿ ಸ್ಪಷ್ಟವಾಗುತ್ತದೆ.

ಪುಕ್ಕರಿಗೆ ಸಮಾಜದಲ್ಲಿ ಸ್ಥಾನವಿಲ್ಲ. ಇಂತವರು ಬಾಳಿನಲ್ಲಿ ದುಃಖಕ್ಕೆ ಈಡಾಗಬೇಕಾಗುತ್ತದೆ. ಒಂದು ಕುಲೀನ ಮನೆತನದ ಒರ್ವ ಗೃಹಸ್ಥನಿದ್ದನು. ಆತನು ಸ್ವತಃ ದುಡಿಯಲಾರ; ಪರವರ ಮೇಲೆಯೇ ಭಾರ ಹೇರುವುದು ಆತನ ವಾಡಿಕೆಯಿತ್ತು. ಆತನು ದುರ್ಬಲನಾಗಿ ತೋರುತ್ತಿದ್ದನು. ಆದ್ದರಿಂದ ಯೋಗ್ಯವಾದ ಸ್ಥಾನ-ವೃತ್ತಿಯೊಂದೂ ಆತನಿಗೆ ದೊರೆಯಲಿಲ್ಲ. ಮನೆಯ ಪರಿಸ್ಥಿತಿಯು ತೀರ ಕೆಡುತ್ತ ಹೋಯಿತು. ಆಗ ಆತನ ಸಹೋದರರು ಆತನಿಗೆ ಹೀಯಾಳಿಸತೊಡಗಿದರು. ಇಂಥ ಮಾನಹಾನಿ, ಆತ್ಮಗ್ಲಾನಿಯನ್ನು ಮರೆಯಲು ಆತನು ಸೆರೆ ಕುಡಿಯಹತ್ತಿದನು. ಕೆಲವೇ ತಿಂಗಳಲ್ಲಿ ಮಿತಿಮೀರಿದ ಕುಡುಕನಾದನು. ನಂತರ ಆ ವ್ಯಸನದಿಂದ ಗುಣಹೊಂದಲು ಎರಡು ವರ್ಷ ಚಿಕಿತ್ಸಾಲಯವನ್ನು ಸೇರಬೇಕಾಯಿತು. ಆದರೆ ಇದೆಲ್ಲವೂ ತಾತ್ಪೂರ್ತಿಕವೇ ಆಯಿತು. ಅಲ್ಲಿಂದ ಹೊರಬಿದ್ದು ತಿರುಗಿ ಸಮಾಜದಲ್ಲಿ ತನ್ನ ಕಾಲ ಮೇಲೆ ತಾನು ನಿಲ್ಲುವ ಸಿದ್ಧತೆಯಿಂದ ಬಂದಿದ್ದಿಲ್ಲ. ತಾನು ಕುಲೀನ ಮನೆತನದವನಾಗಿ ಹೊಟ್ಟೆಗಾಗಿ ಕಾಯಕಷ್ಟ ಮಾಡುವುದು ಹೇಗೆ ? ಎಂಬ ಭ್ರಮೆ ಆತನಿಗೆ ! ಈ ನಡುವೆಯೇ ಆತನಿಗೆ ತಲೆ ಕೆಟ್ಟಿತು. ಭ್ರಮಾಭಾಸಗಳಾಗಹತ್ತಿದವು. ತನ್ನ ಕೆಲಸದಲ್ಲಿದ್ದಾಗ ಯಾರೋ ಒಬ್ಬನು ಬಂದು ಪೀಡಿಸುವನೆಂದು ಭ್ರಾಂತಿ ಹೆಚ್ಚಾಯ್ತು. ಅದರಿಂದ ತನ್ನಿಂದ ಕೆಲಸವಾಗುವುದಿಲ್ಲವೆಂದು ಆತನು ಹೇಳತೊಡಗಿದನು. ಮೊದಲು ಸೆರೆಗುಡುಕತನದಿಂದ, ಬಳಿಕ ಇಂಥ ಭ್ರಾಂತಿಯ ಹುಚ್ಚಿನಿಂದ ಆತನು ಯಾವ ಕೆಲಸಕ್ಕೂ ನಿರುಪಯುಕ್ತನಾದನು. ಇದರಿಂದ ಗೊತ್ತಾಗುವುದೇನೆಂದರೆ : ಹೇಗೂ ಮಾಡಿ ಒಬ್ಬನ ವ್ಯಸನ-ಕುಡುಕತನ ಬಿಡಿಸಿದೆವೆಂದು ಭಾವಿಸಿದರೆ ಅದರಿಂದ ಅವನನ್ನು ಪೂರ್ಣ ಮುಕ್ತ ಮಾಡಿದಂತಾಗಲಿಲ್ಲ. ಆತನ ಬಾಳಮಾದರಿಯನ್ನು ತಿದ್ದಕೊಳ್ಳಹಚ್ಚಿದಾಗಲೇ ಅವನು ಸುಧಾರಿಸಬಲ್ಲನು.

ಮೇಲಿನ ಉದಾಹರಣೆಯ ಗೃಹಸ್ಥನು ಚಿಕ್ಕಂದಿನಲ್ಲಿ ಮಿತಿಮೀರಿದ ಅಕ್ಕರತೆಯ ಮಗುವು. ಆತನಿಗೆ ಪರರಿಂದ ಮುದ್ದು ಮಾಡಿಸಿಕೊಳ್ಳಬೇಕು, ನೆರೆಹೊರೆಯವರ ಸಹಾಯ ಪಡೆಯಬೇಕೆಂಬ ಪರಾವಲಂಬನ ವೃತ್ತಿಯೆ ಹೆಚ್ಚಾಯ್ತು. ತಾನೇ ತನ್ನ ಕೆಲಸಗಳನ್ನು ನೀಗಿಸಿಕೊಳ್ಳಲು ಆತನು ಸಿದ್ಧನಿದ್ದಿಲ್ಲ. ಇದರಿಂದಲೇ ಆತನಿಗೆ ಮುಂದಿನ ಬಾಳಿನಲ್ಲಿ ವಿಪರೀತ ಕಷ್ಟಕ್ಕೆ ಗುರಿಯಾಗಬೇಕಾಯಿತೆಂದು ಸಂಶೋಧನ ದಿಂದ ತೋರಿಬಂದಿತು.

ಮಕ್ಕಳು ಮುಂದೆ ಸುಖಿಗಳಾಗಬೇಕಾಗಿದ್ದರೆ ನಾವು ಅವರನ್ನು ಚಿಕ್ಕಂದಿನಿಂದಲೇ ಸ್ವಾವಲಂಬಿಯಾಗಿ, ಸ್ವತಂತ್ರರಾಗಿ ಬೆಳೆಯುವುದಕ್ಕೆ ಪ್ರೋತ್ಸಾಹಿಸಬೇಕು. ಅವರ ಜೀವನ ಶೈಲಿಯಲ್ಲಿಯ ತಪ್ಪುತಡೆಗಳನ್ನು ಅವರಿಗೆ ತಿಳಿಸಿಕೊಟ್ಟು ಅವನ್ನು ತಿದ್ದಿಕೊಳ್ಳಲು ನೆರವಾಗಬೇಕು. ತಿಳಿಸಿ ಹೇಳುವ ಬದಲು ಟೀಕಿಸುವುದರಿಂದ ಲಾಭಕ್ಕಿಂತ ಹಾನಿಯೇ ಹೆಚ್ಚಾಗುವುದು. ಅವರನ್ನು ಏನಾದರೊಂದು ಒಳ್ಳೆಯ ಕಾರ್ಯದಲ್ಲಿ ತೊಡಗಿಸಬೇಕು. ಅವರಿಂದ ಒಳ್ಳೆಯದನ್ನು ಮಾಡಿಸಬೇಕು. ಇಂಥ ಕ್ರಿಯಾಶೀಲತೆಯಿಂದಲೇ ಅವರ ಆತ್ಮಗ್ಲಾನಿ ಹೋಗಿ ಆತ್ಮವಿಶ್ವಾಸವು ತಲೆ ದೋರುವುದು. ಅದರಿಂದ ಅವರ ವ್ಯಕ್ತಿವಿಕಾಸಕ್ಕೆ ಇಂಬು ದೊರೆಯುತ್ತದೆ. ●

# ೫ ಹಳೆಯು ನೆನಹುಗಳು

ವ್ಯಕ್ತಿಯ ಬಾಳಿನ ಬಗೆಯನ್ನು ಸೂಕ್ಷ್ಮವಾಗಿ ಬಿಡಿಸಿ ನೋಡಿದುದು ಆಯಿತು. ಇನ್ನು ಜೀವನದ ಶೈಲಿಯ ಗುಟ್ಟನ್ನು ತಿಳಿಯುವುದಕ್ಕೆ ನೆನಹುಗಳು ಬಹಳೇ ಸಹಾಯಕವಾಗಿವೆ. ಉಳಿದ ಯಾವ ಉಪಾಯಕ್ಕಿಂತಲೂ ಒಂದು ವ್ಯಕ್ತಿಯ ಹಳೆಯ ನೆನಹುಗಳನ್ನು ಅರಿತುಕೊಳ್ಳುವುದೇ, ಆತನ ಜೀವಿತದ ತಳಹದಿಯು ಯಾವ ಬಗೆಯದಾಗಿದೆಯೆಂಬುವನ್ನು ನಿರ್ಧರಿಸುವುದಕ್ಕೆ ಸರ್ವೋತ್ತಮ ಸಾಧನ ವಾಗಿದೆ.

ಒಬ್ಬರ ವ್ಯಾಧಿ, ವ್ಯಥೆಗಳ ಕಥೆಯನ್ನು ಕೆಲಮಟ್ಟಿಗೆ ಕೇಳಿಕೊಂಡ ಮೇಲೆ, ಅವರ ಹಳೇ ನೆನಹುಗಳ ಮಾತು ಎತ್ತಬೇಕು. ಅಂತಹ ನೆನಹುಗಳಿಂದ ಸೂಚಿತವಾದ ಮಾತುಗಳನ್ನು, ಉಪಲಬ್ಧವಾದ ಉಳಿದ ಇತಿವೃತ್ತದೊಂದಿಗೆ ಹೋಲಿಸಿ ನೋಡ ಬೇಕು. ಸಾಮಾನ್ಯವಾಗಿ ಜೀವನದ ಶೈಲಿಯಲ್ಲಿ ಪಲ್ಲಟಗಳಾಗುವುದು ಕಡಿಮೆ. ಒಂದು ವ್ಯಕ್ತಿಯ ಅದೇ ವ್ಯಕ್ತಿತ್ವವು ಅದೇ ಜೀವನ ಶೈಲಿಯೂ ಈಗಲೂ ಮುಂದುವರಿದುದು ಕಂಡುಬರುತ್ತದೆ. ಕೆಲವೊಂದು ಹೆಗ್ಗಳಿಕೆಯನ್ನು ಸಂಪಾದಿಸುವು ದಕ್ಕಾಗಿ ನಡೆಯುವ ಹೆಣಗಾಟದೊಳಗಿಂದ ಯಾವದೊಂದು ಜೀವನ ಶೈಲಿಯು ಮೈಗೊಳ್ಳುತ್ತದೆ. ಜೀವನ ಶೈಲಿಯು ಮೈಗೊಂಬ ಬಗೆಯಲ್ಲಿ ಒಂದು ಸೂತ್ರ ಬದ್ಧತೆಯು–ಸುಸಂಬದ್ಧತೆಯು ಕಂಡುಬರುತ್ತದೆ. ಅದಕ್ಕೇ 'ಕರ್ಮಸೂತ್ರ'ವೆನ್ನ ಬಹುದು. ನಮ್ಮ ಪ್ರತಿಯೊಂದು ನಡೆ-ನುಡಿಯೂ ಅರಿಕೆ-ನೆನಿಕೆಗಳೂ ಪರಸ್ಪರ ಹೊಂದಿಕೆಯುಳ್ಳವೂ–ಪೋಷಕವೂ ಆಗಿವೆ. ನಮ್ಮ 'ಕರ್ಮಸೂತ್ರ'ವು ಕೆಲವೆಡೆ ಗಳಲ್ಲಿ ಬಹಳ ನಿಚ್ಚಳವಾಗಿ ವ್ಯಕ್ತವಾಗುತ್ತದೆ. ಹಳೇ ನೆನಹುಗಳಲ್ಲಿ ಇದು ಇನ್ನೂ ನಿಚ್ಚಳವಾಗಿ ಗೋಚರವಾಗುವುದು.

## ಸ್ಮೃತಿ ಚಿತ್ರಗಳ ಹಿನ್ನೆಲೆ 'ಕರ್ಮಸೂತ್ರ'

ನಿನ್ನೆ ಮೊನ್ನೆ ಒದಗಿದ ಸಂಗತಿಗಳ ನೆನಪುಗಳಲ್ಲಿಯೂ 'ಕರ್ಮಸೂತ್ರ'ವು ಕಂಡು ಬರದೆ ಇರುವುದಿಲ್ಲ. ಆದರೆ ಆರಂಭ ಜೀವನದ ಸ್ಮೃತಿಗಳಲ್ಲಿ ಹುದುಗಿರುವ ಕರ್ಮಸೂತ್ರವನ್ನು ಕಂಡುಕೊಳ್ಳುವುದು ಹೆಚ್ಚು ಸುಲಭವೂ, ಉದ್ಬೋಧಕವೂ ಆಗಿದೆ. ನಾಲ್ಕೈದನೆಯ ವರ್ಷ ವಯಸ್ಸಿನಲ್ಲಿ ರೂಪಗೊಂಡ ಜೀವನ ಶೈಲಿಯು ಹಿಂದಿನ ನೆನಹುಗಳಲ್ಲಿಯೂ ಮತ್ತು ನಮ್ಮ ಇಂದಿನ ನಡತೆಯಲ್ಲಿಯೂ ತುಂಬ ಹೊಂದಿಕೆಯಿದ್ದುದು ಅನುಭವಕ್ಕೆ ಬರುತ್ತದೆ. ಇಂತಹ ಹಲವು ಉದಾಹರಣೆಗಳ

ನಿರೀಕ್ಷಣ ಪರೀಕ್ಷಣದಿಂದ, ಹಳೆ ನೆನಹುಗಳಲ್ಲಿಯೇ ಮನೋರೋಗಿಯ ಬೇನೆಯ ಬೇರುಗಳನ್ನು ಸ್ಪಷ್ಟವಾಗಿ ಕಂಡು ಹಿಡಿಯಬಹುದಾಗಿದೆ. ಬೇನೆಯ ಮೂಲವು ತಿಳಿದ ಬಳಿಕ ಅದಕ್ಕೆ ಸರಿಯಾದ ಉಪಾಯಗಳನ್ನು ಮಾಡುವುದೂ ಸುಲಭ ವಾಗುತ್ತದೆ.

ಮನೋರೋಗಿಯು ತನ್ನ ಹಳೆಯ ನೆನಪುಗಳನ್ನು ಕೆಣಕಿ ಜಾಗೃತಪಡಿಸಿದಾಗ ಆತನು ಕೆಲಮಟ್ಟಿಗೆ ಭಾವನಾವಶನಾಗುವುದು ಸಹಜ. ಅವನ ಈ ಭಾವನಾವ ಶತೆಯ ಮೇಲಿಂದ ಆತನ ವ್ಯಕ್ತಿತ್ವವು ಎಂತಹದೆಂಬುದನ್ನು ನಾವು ಅರಿತು ಕೊಳ್ಳಬಹುದು. ನೆನಪಿಗೆ ನಿಲುಕುವಂತಹ ನೆನಹುಗಳಿರಲಿ. ನೆನಪಿನ ಆಚೆಯ-ಪೂರ್ಣ ಮರೆತು ಹೋದ ನೆನಹುಗಳಿರಲಿ, ಅವೆಲ್ಲವೂ ಆ ವ್ಯಕ್ತಿಯು ತನ್ನ ಹೆಗ್ಗಳಿಕೆಗಾಗಿ ನಡಿಸಿದ ಹೋರಾಟದ ಕತೆಯನ್ನೇ ಹೇಳುವಂತಹವುಗಳಾಗಿರುತ್ತವೆ. ಅವುಗಳಲ್ಲಿ ಒಂದು ಬಗೆಯ ಸೂತ್ರಬದ್ಧತೆಯು ಇದ್ದೇ ಇರುತ್ತದೆ. ಆದ್ದರಿಂದ ಅವೆರಡೂ, ಬಾಳಿನ ಮಾದರಿಯ ಮಹತ್ವದ ಅಂಶಗಳಾಗಿರುತ್ತವೆ. ಮರವು ನೆನಹುಗಳ ಹುರುಳು, ಸುಪ್ತ ಇಲ್ಲವೇ ಜಾಗೃತ ಸ್ಮೃತಿಗಳ ರಹಸ್ಯವು ಸಾಮಾನ್ಯ ವಾಗಿ ಆ ವ್ಯಕ್ತಿಗೇ ತಿಳಿಯಲಾರದು. ಅದನ್ನು ತಿಳಿದು ತಿಳಿಸಿ ಹೇಳುವ ಕೆಲಸ ವನ್ನು ಇನ್ನೊಬ್ಬರು ಮಾಡಬೇಕಾಗುತ್ತದೆ.

'ನಿಮ್ಮ ಹಳೆಯ ನೆನಹುಗಳನ್ನು ಕೆಲವು ಹೇಳಿರಿ' ಎಂದು ಬಿನ್ನವಿಸಲು ಕೆಲವರು ತಮಗೆ ಏನೂ ನೆನಪಿಲ್ಲವೆಂದುಸಿರುವರು. ಅಂಥವರು ಸ್ವಲ್ಪ ಧ್ಯಾನಿಸಿ ಯತ್ನ ಮಾಡಿದರೆ, ಮಾಸಿ ಹೋದ ನೆನಪುಗಳು ಮಸಮಸಕಾಗಿ ಆದರೂ ಮೇಲೆ ಬರುವವು. ಪ್ರಯತ್ನಪಟ್ಟೂ ನೆನಹುಗಳನ್ನು ಜಾಗೃತಪಡಿಸಿಕೊಳ್ಳಲಿಕ್ಕಾಗುವು ದಿಲ್ಲವೆಂದು ಹೇಳುವವರೂ ಉಂಟು. ಇಂತವರಿಗೆ ಚಿಕ್ಕಂದಿನ ಕೃತಿಗಳನ್ನು ನೆನೆದುಕೊಂಬುದು ಇಷ್ಟವಿರುವುದಿಲ್ಲ. ಇಂಥವರ ಚಿಕ್ಕಂದಿನ ಬಾಳು ಸಾಕಷ್ಟು ಸುಖಕರವಿದ್ದಿಲ್ಲವೆಂದು ನಿರ್ಣಯಿಸಲು ಅಡ್ಡಿಯಿಲ್ಲ. ಇನ್ನು ಇದಕ್ಕೆ ವಿಪರೀತವಾಗಿ ಕೆಲವರು ತಮ್ಮ ಸ್ಮರಣಶಕ್ತಿಯ ಅಟ್ಟಹಾಸದಲ್ಲಿ ಮೊದಲನೇ ವರ್ಷ ವಯಸ್ಸಿನ ವರೆಗಿನ ನೆನಹುಗಳನ್ನೆಲ್ಲ ಜಂಭದಿಂದ ಹೇಳುವರು ! ಇದು ತೀರ ಅಶಕ್ಯ. ಇಷ್ಟು ಕಿರಿಯಂದಿನ ನೆನಹುಗಳು ಬಹುಶಃ ಕಲ್ಪಿತವಾಗಿರುತ್ತವೆ. ಆದರೂ ಅವನ್ನು ಚೆಲ್ಲಿ ಬಿಡುವ ಕಾರಣವಿಲ್ಲ. ಏಕೆಂದರೆ, ಅವೆಲ್ಲವೂ ವ್ಯಕ್ತಿತ್ವದ ಅಂಶಗಳೇ ಸರಿ. ಕೆಲವರಿಗೆ ತಮ್ಮ ನೆನಹುಗಳಲ್ಲಿ ತಾವು ತಾವೇ ನೆನೆದುಕೊಂಡುವು ಎಷ್ಟು ? ಹಿರಿಯರಿಂದ ಕೇಳಿದುವು ಎಷ್ಟು ? ಎಂಬುದು ಸರಿಯಾಗಿ ಗೊತ್ತಿರುವುದಿಲ್ಲ. ಆದರೆ ಇದೂ ಅಷ್ಟೊಂದು ಮಹತ್ವದ್ದಲ್ಲ. ಏಕೆಂದರೆ, ತಾನೇ ನೆನೆದುಕೊಂಡವಿರಲಿ,

ಹೆರವರು ಹೇಳಿದುವಿರಲಿ, ಆ ಸಂಗತಿಗಳು ಅವರ ನೆನಪಿನಲ್ಲಿ ಬೇರುಬಿಟ್ಟು ನಿಂತವೆಂಬುದರಿಂದಲೇ ಅವರ ಒಲವು ಎತ್ತ ಕಡೆಗಿದೆ ಎಂಬುದನ್ನು ತಿಳಿದುಕೊಳ್ಳ ಬಹುದು.

ಹಳೇ ನೆನಹುಗಳು ಅವರವರ ಸ್ವಭಾವದ ಮಾದರಿಗೆ ಅನುಸರಿಸಿಯೇ ಇರುತ್ತವೆ. ಒಬ್ಬನು ತನ್ನ ಹಳೇ ನೆನಹು ಹೇಳಿದನು : ಆತನ ತೀರ ಮೊದಲನೆಯ ನೆನ ಪೆಂದರೆ ಒಂದು ಸೊಗಸಾದ ಭವ್ಯವಾದ ಭೋಜನ ಸಮಾರಂಭ ! ದಿವ್ಯವಾದ ಮಂಟಪ. ಎಲ್ಲಿ ನೋಡಿದಲ್ಲಿ ದೀಪದ ಬೆಳಕಿನ ಥಳುಕು. ತುಂಬಿದ ಹೊಟ್ಟೆ ಯವರಿಗೂ ತಿನ್ನುವ ಆತುರವನ್ನುಂಟು ಮಾಡುವ ಕಂಪಾದ ರಸರಸದ ಪಕ್ವಾನ್ನಗಳು ! ಈತನ ಈ ನೆನಹಿನಲ್ಲಿ ಅತ್ಯಂತ ಮಾರ್ಮಿಕವಾದ ಅಂಶವು ಯಾವುದು ? ಮೇಜವಾನಿಯೇ ? ಅಲ್ಲ. ಆತನು ತಾನು ಕಂಡೆನೆಂಬುದು ಈತನ ಹೇಳಿಕೆಯಲ್ಲಿ ಕಣ್ಣಿನ ಅನಂದವೇ ವಿಶೇಷವಾಗಿದೆ. ನೋಟದ ಹಿಗ್ಗಿನ–'ಕಣ್ಣಪ್ಪ'ನು ಈತನು. ಈತನು ಮೊದಲು ತನ್ನಲ್ಲಿದ್ದ ದೃಷ್ಟಿದೋಷವನ್ನು ಹೋಗಲಾಡಿಸಿ ಕೊಳ್ಳುವುದಕ್ಕಾಗಿ ತುಂಬ ಹೆಣಗಾಡಿರಬೇಕು. ಕಣ್ಣಿನಲ್ಲಿಯ ಕೊರತೆಯನ್ನು ಹಿಂಗಿಸಿಕೊಂಡು ನೋಟದ ಶಕ್ತಿಯನ್ನು ಬೆಳಿಸಿಕೊಂಡಿರಬೇಕು. ಇದು ಇವನ ಬಾಳ ಮಾದರಿಯ ತೀರ ಮಹತ್ವದ ಭಾಗವಿರಲಿಕ್ಕಿಲ್ಲ. ಆದರೂ ಅದೊಂದು ಮಹತ್ವದ ಅಂಶವಾಗಿದೆ. ಆತನು ಮುಂದಿನ ಬಾಳಿನಲ್ಲಿ ಗೆಲುವುಳ್ಳವನಾಗ ಬೇಕಾಗಿದ್ದರೆ ಕಣ್ಣಿನ ಉಪಯೋಗವೇ ಮುಖ್ಯವಾಗಿರುವ ವ್ಯವಸಾಯವನ್ನು ಕೈಕೊಳ್ಳುವುದು ಉತ್ತಮ.

## ವ್ಯಕ್ತಿಗಳ ಅಂದಗಳೂ ಮತ್ತು ಅವರ ಶಿಕ್ಷಣ ಕ್ರಮವೂ

ವ್ಯಕ್ತಿಗಳ ಶಕ್ತಿವೈಶಿಷ್ಟ್ಯವನ್ನು ಅರಿತುಕೊಂಡು ಶಾಲೆಗಳಲ್ಲಿ ಮಕ್ಕಳಿಗೆ ಶಿಕ್ಷಣವನ್ನು ಕೊಡಬೇಕು. ನೋಟದಲ್ಲಿಯೇ ವಿಶೇಷ ಆಸಕ್ತಿಯುಳ್ಳ ಮಕ್ಕಳು ಚಿತ್ತಗೊಟ್ಟು ಕೇಳಲಾರರು. ಅವರಿಗೆ ಏನಾದರೊಂದು ನೋಡುವ ನಿರೀಕ್ಷಿಸುವ ಬಯಕೆ. ಅಂಥ ಮಕ್ಕಳಿಗೆ ಕಿವಿಯಲು ಕಲಿಸಬೇಕಾದರೆ ನಾವು ತಾಳ್ಮೆಯಿಂದ ಯತ್ನ ಮಾಡಬೇಕು. ಹಲವು ಮಕ್ಕಳಿಗೆ ಕಿವಿ ಚುರುಕಾಗಿರುವುದುಂಟು. ಬೇರೆ ಕೆಲವರಿಗೆ ಚಟುವಟಿಕೆ, ಚಲನವಲನಗಳಲ್ಲಿ ಆನಂದ. ಈ ಎಲ್ಲ ಅಂದದವರಿಗೂ ಶಿಕ್ಷಕನು ಒಂದೇ ಬಗೆಯಿಂದ ಕಲಿಸಿದರೆ ಹೇಗೆ ಸರಿ ಹೋಗಬೇಕು ? ಸಾಮಾನ್ಯವಾಗಿ ಶಾಲೆಗಳಲ್ಲಿ ಕಿವಿಯ ಮುಖಾಂತರವಾಗಿ ಕಲಿಸುವುದೇ ಹೆಚ್ಚು. ಹೀಗಿರುವಲ್ಲಿ ಕಣ್ಣಿನವರಿಗೂ ಮೈಕೈ ಚಟುವಟಿಕೆಯವರಿಗೂ ಕಲಿಯುವ ಬೇಸರಿಕೆ ಬರುವುದು. ಅಂತವರು ಹಿಂದೆ

ಉಳಿದು ಹೆಡ್ಡರೆಂದು ಸುಮ್ಮನೆ ಬಳಲಬೇಕಾಗುವುದು. ಇದರ ಹೊಣೆ ಯಾರ ಮೇಲೆ ?

ಇನ್ನೊಂದು ಉದಾಹರಣೆಯನ್ನು ನೋಡಿರಿ. ಒಬ್ಬ ತರುಣ; ಇಪ್ಪತ್ನಾಲ್ಕು ವಯಸ್ಸು; ಆತನಿಗೆ ಆಗಾಗ ಮೂರ್ಛೆ ಬರುವುದು. ಆತನ ಹಳೆಯ ನೆನಹುಗಳನ್ನು ಕೇಳಲಾಗಿ, ತಾನು ನಾಲ್ಕು ವರ್ಷದವನಿದ್ದಾಗ ಒಂದು ಎಂಜಿನಿನ ಕರ್ಕಶ ಕೂಗನ್ನು ಕೇಳಿ, ತಾನು ಮೊದಲು ಮೂರ್ಛೆಗೊಂಡೆನೆಂದು ಹೇಳಿದನು. ಇವನು 'ಕಿವಿಯಾತನು'. ಈತನಿಗೆ ಕೇಳುವಲ್ಲಿ ಆಸಕ್ತಿ ಹೆಚ್ಚು. ಚಿಕ್ಕಂದಿನಿಂದಲೂ ತರತರದ ಸ್ವರಗಳನ್ನು ಕೇಳುವಲ್ಲಿ ಈತನಿಗೆ ತುಂಬ ಆಸಕ್ತಿ, ತುಂಬ ನಾದಲೋಲ. ಸಂಗೀತದಲ್ಲಿ ಪ್ರೀತಿ ಬಹಳ. ಗಲಭೆ, ಗದ್ದಲ, ಅಪಸ್ವರ ಕರ್ಕಶತೆಗಳು ಈತನಿಗೆ ಬಹಳೇ ಅಸಹ್ಯವೆನಿಸುತ್ತಿದ್ದುವು. ಅದರಿಂದಲೇ ಎಂಜಿನಿನ ಕರ್ಕಶ ಧ್ವನಿಯಿಂದ ಈತನು ಕಂಗೆಟ್ಟುದು ಅಚ್ಚರಿಯಲ್ಲ. ಕೆಲವೊಮ್ಮೆ, ತಾವು ಕಷ್ಟವನ್ನನುಭವಿಸಿದ ಸಂಗತಿಗಳಲ್ಲಿ ಎಷ್ಟೋ ಮಕ್ಕಳು ತುಂಬ ಅಭಿಮಾನಪಟ್ಟುಕೊಳ್ಳುವರು. ಅದನ್ನು ನೆನಪಿಡುವರು.

ತಿಂಡಿತಿನಿಸುಗಳಲ್ಲಿಯೇ ಕೆಲವರಿಗೆ ತುಂಬ ಆಸಕ್ತಿ. ಅವರ ಹಳೇ ನೆನಹುಗಳು ಊಟಪಾಟ, ತಿಂಡಿ ತೀರ್ಥದುವೇ ಇರುತ್ತವೆ. ಏನು ತಿನ್ನಬೇಕು ? ಏನು ತಿನ್ನಬಾರದು ? ಹೇಗೆ ತಿನ್ನಬೇಕು ? ಎಂಬಿವೇ ಈ ಮುಂದಿಯ ಜೀವಾಳದ ಸಮಸ್ಯೆಗಳಾಗಿರುತ್ತವೆ. ಚಿಕ್ಕಂದಿನಲ್ಲಿ ತಿನಸಿನ ಸಂಬಂಧವಾಗಿ ಬಂದ ತೊಂದರೆಗಳ ಮೂಲಕ ಆ ದಿಕ್ಕಿನಲ್ಲಿಯೇ ಅವರ ವಿಚಾರಗಳು ಹರಿಯ ಹತ್ತಿ. ಇವರು ಆಹಾರ ಶಾಸ್ತ್ರಿಗಳಾಗುವರು.

ಕೆಲವರ ಹಳೆಯ ನೆನಹುಗಳು ಮುಖ್ಯವಾಗಿ ಚಿಕ್ಕಂದಿನ ಚಲನವಲನಗಳಿಗೇ ಸಂಬಂಧಿಸಿರುತ್ತವೆ. ಚಿಕ್ಕಂದಿನಲ್ಲಿ ಬಾಲಗ್ರಹ ಮುಂತಾದ ರೋಗಗಳ ಆಘಾತದಿಂದಾಗಲೀ, ಎಲುಬುಗಳು ಚೆನ್ನಾಗಿ ಬೆಳೆಯದ್ದರಿಂದಾಗಲಿ ಹಲವು ಮಕ್ಕಳು ಚಟುವಟಿಕೆಗಳಿಲ್ಲದವರಾಗುತ್ತಾರೆ. ಇಂಥವರು, ಯಾವಾಗಲೂ–ಮುಂದಿನ ಬಾಳಿನಲ್ಲಿಯೂ ಕೂಡ–ಚಲನವಲನ ಕ್ರಿಯೆಯಲ್ಲಿಯೇ ಆಸಕ್ತಿಯುಳ್ಳವರಾಗಿರುವುದುಂಟು. ಚಪಲತನ, ಚಟುವಟಿಕೆಗಳಲ್ಲಿ ಇವರಿಗೆ ಮಿತಿಮೀರಿದ ಆಸಕ್ತಿ ಹುಟ್ಟುವುದು. ಆದರೆ ಇಂಥವರು ಯಾವಾಗಲೂ, ಗಡಿಬಿಡಿಯವರಾಗುವರು. ಚಳವಳ, ವಳವಳ ಇವರಿಗೆ ಹೆಚ್ಚು ಸೇರುವುದು. ಇಂಥದೊಂದು ಉದಾಹರಣೆಯಿದೆ ; ಐವತ್ತು ವರ್ಷದವನೊಬ್ಬನು ಡಾಕ್ಟರರೆಡೆಗೆ ಬಂದು, ತನ್ನ ನೋವನ್ನು ತೋಡಿಕೊಂಡನು : ದಾರಿಯಲ್ಲಿ ಇವನ

ಜೊತೆಗೆ ಇನ್ನೊಬ್ಬನು ಬರುತ್ತಲೆ, ತಾವಿಬ್ಬರೂ ಬಂಡಿಯ ಕೆಳಕ್ಕೆ ಸಿಕ್ಕಿ ಎಲ್ಲಿ ಅಪಘಾತಕ್ಕೆ ಈಡಾಗುವೆವೊ ಎಂಬ ಭೀತಿಯು ಆವರಿಸಿ ಅವನನ್ನು ಬಳಲಿಸುತ್ತಿತ್ತು. ತಾನೊಬ್ಬನೇ ನಡೆವಾಗ ಈ ಹೆದರಿಕೆಯುಂಟಾಗುತ್ತಿರಲಿಲ್ಲ ; ಇಷ್ಟೇ ಅಲ್ಲ, ವಾಹನಗಳ ತುಂಬಾ ಓಡಾಟದ ಹೆದ್ದಾರಿಗಳನ್ನು ದಾಟುವಾಗ ಕೂಡ ಆತನು ಅತ್ಯಂತ ಶಾಂತನೂ ಸಾವಧಾನಿಯೂ ಆಗಿರುತ್ತಿದ್ದನು. ಆದರೆ ಇನ್ನೊಬ್ಬನು ಹತ್ತಿರ ಬಂದೊಡನೆ ಜೊತೆಗಾರನು ಅಪಘಾತಕ್ಕೆ ಈಡಾಗಬಾರದೆಂದು ಆತನನ್ನು ಉಳಿಸಲು ಅಷ್ಟೊಂದು ಗಾಬರಿಗೊಂಡು ಬಳಲುತ್ತಿದ್ದನು. ಜೊತೆಗಾರನ ರಟ್ಟೆ ಹಿಡಿದು ಅತ್ತ ಎಳೆದು, ಇತ್ತ ನೂಕಿ, ಆತನನ್ನು ತೊಂದರೆ ಪಡಿಸುತ್ತಿದ್ದನು. ಇಂತಹ ಈ ವಿಚಿತ್ರ ನಡೆವಳಿಯ ಅರ್ಥವೇನು ?

ಆತನು ಮೂರು ವರ್ಷದವನಿದ್ದಾಗ ಕೆಲವೊಂದು ಎಲುಬಿನ ಬೇನೆಯಿಂದ, ಸರಿಯಾಗಿ ನಡೆದಾಡಲು ಬಾರದೇ ಪೇಚಾಡುತ್ತಿದ್ದನು. ಹೀಗಾಗಿ ಹಿಂದೆ ಒಂದೆರಡು ಬಾರಿ ಬೀದಿಯಲ್ಲಿ ಹಾಯುವಾಗ ಆತನು ವಾಹನಗಳ ಒತ್ತಡದಲ್ಲಿ ಸಿಕ್ಕಿದ್ದನು. ತನ್ನನ್ನು ತಾನು ಸಾವರಿಸಿಕೊಂಡು ಸಂದಣಿಯೊಳಗಿಂದ ಪಾರಾಗಲಾರೆನೆಂಬ ಎದೆಗುಕ್ಕು ಆತನಲ್ಲಿ ನೆಲೆಗೊಂಡಿತು. ಅದುದರಿಂದ ಈಗ ಪ್ರೌಢನಾದ ಮೇಲೆ, ಈ ಎದೆಗುಕ್ಕು ತನ್ನಲ್ಲಿ ಉಳಿದಿಲ್ಲವೆಂದು ಸಾಧಿಸುವುದು, ಆತನಿಗೆ ಅತ್ಯಂತ ಮಹತ್ವದ ಮಾತಾಯಿತು. ವಾಹನಗಳ ರಿಕ್ಕು ಇರುವ ದಾರಿ ದಾಟುವ ಚಪಲತನವು ತನ್ನಲ್ಲಿ ಚೆನ್ನಾಗಿದೆಯೆಂದು ಆತನ ಆ ನಡೆಯು ಪರ್ಯಾಯದಿಂದ ಸೂಚಿಸುವಂತಿತ್ತು. ಇನ್ನೊಬ್ಬರು ಜೊತೆಯಲ್ಲಿದ್ದಾಗಲೇ ತನ್ನಲ್ಲಿ ಆ ಕೀಳರಿಮೆ ಇಲ್ಲವೆಂದು ತೋರಿಸಲು ಶಕ್ಯ. ಇನ್ನು, ನಡುದಾರಿ ದಾಟುವುದಾಗಲಿ ಸರಿದಾರಿ ಹಿಡಿದು ಸಾಗುವುದಾಗಲಿ, ವಿಶೇಷ ಹೆಮ್ಮೆಪಡಬೇಕಾದ ವಿಷಯವೇ ಅಲ್ಲ. ಆದರೆ ಇದು ಸಮವೃತ್ತಿಯ ಮನಸಿನವರ ಸ್ವಭಾವ. ಚಲನವಲನದ ನ್ಯೂನತೆಯಿಂದ ನೊಂದುಕೊಂಡ ಬೇನಿಗ ನಿಗೆ ತನ್ನ ಚಟುವಟಿಕೆಯ ಚಾತುರ್ಯವನ್ನು ಪ್ರದರ್ಶಿಸುವುದೆ ಒಂದು ಹೆಮ್ಮೆಯ ವಿಷಯವಾಗುವುದು.

ಇನ್ನೊಬ್ಬ ಉಡಾಳ ಹುಡುಗನು ಅಪರಾಧಿಯಾಗುವ ದಾರಿಯಲ್ಲಿದ್ದನು. ಕದಿಯು ವುದು ಶಾಲೆ ತಪ್ಪಿಸಿ ಅಲೆಯುವುದು ಆತನ ಚಟ. ಈ ಬಗೆಯ ಪೋಲಿತನದಿಂದ ಆತನ ತಂದೆ–ತಾಯಿಗಳು ಬೇಸತ್ತಿದ್ದರು. ಈ ಹುಡುಗನ ಹಳೆ ನೆನಪುಗಳನ್ನು ವಿಚಾರಿಸಲಾಗಿ, ಅತ್ತಿತ್ತ ಅಲೆದಾಡುವುದು ಅವಸರದಿಂದ ನಡೆಯುವುದೇ ಆತನ ಹಳೆಯ ನೆನಪೆಂದು ಕಂಡು ಬಂದಿತು. ಈಗ ಆತನಿಗೆ ತಂದೆಯ ಜೊತೆಗೆ ದುಡಿದು, ದಿನವೆಲ್ಲ ಒಂದೆಡೆಯಲ್ಲೇ ಕೂತು ಕಳೆಯಬೇಕಾಗುತ್ತದೆ. ಇವರ

ಪ್ರತಿಕ್ರಿಯೆಯು ಈ ಪುಂಡುಪ್ಪೋಕರಿತನ. ಆತನನ್ನು ತಿದ್ದಬೇಕಾಗಿದ್ದರೆ ಆತನು ಕೂತು ಮಾಡಬೇಕಾದ ಕೆಲಸವನ್ನು ತಪ್ಪಿಸಿ, ತಂದೆಯ ವ್ಯವಸಾಯದ ನಿಮಿತ್ತವೇ ಊರು ಊರು ತಿರುಗಾಡುವ, ಚಟುವಟಿಕೆಗೆ ಎಡೆಗೊಡುವ ಕೆಲಸವನ್ನು ಹಚ್ಚಬೇಕು. ಆ ತರುಣನಿಗೆ ಹರವನ-ಎಂದರೆ ಪ್ರವಾಸೀ ವರ್ತಕನ ವೃತ್ತಿಯನ್ನು ಕಲ್ಪಿಸಿ ಕೊಡಲಾಯಿತು. ಉಡಾಳತನವು ಮಾಯವಾಗಿ ಆತನೊಬ್ಬ ಉಪಯೋಗಿಯಾದ ಮನುಷ್ಯನಾದನು. ಶಿಷ್ಟರಲ್ಲಿ ಎಣಿಸಲ್ಪಡಹತ್ತಿದನು.

ಚಿಕ್ಕಂದು ತಾವು ಕಂಡ ಮೊದಲನೆಯ ಸಾವು ಮನಸಿನ ಮೇಲೆ ಅಚ್ಚೊತ್ತಿದಂತೆ ನಿಚ್ಚಳಾಗಿ ಮೂಡಿರುತ್ತದೆ. ಅತ್ಯಂತ ಮಹತ್ವದ ಪರಿಣಾಮಕಾರಿಯಾದ ನೆನಹುಗಳಲ್ಲಿ ಇದು ಒಂದು. ಒಮ್ಮೆಲೇ, ಫಕ್ಕನೆ ಸಾಯುವುದನ್ನು ನೋಡಿದಾಗ ಮಕ್ಕಳ ಮನಸ್ಸಿನ ಮೇಲೆ ಭಯಂಕರವಾದ ಪರಿಣಾಮವು ಆಗುತ್ತದೆ. ಕೆಲವೊಮ್ಮೆ ಅಂಥ ಮಕ್ಕಳು ಉದಾಸಿನ, ಖಿನ್ನಮನಸ್ಕರಾಗುವರು. ಅಥವಾ ಕೆಲವರು ತಮ್ಮ ಮುಂದಿನ ಜೀವನದಲ್ಲಿ ಸಾವಿನ ಸಮಸ್ಯೆಯನ್ನು ಬಿಡಿಸುವುದರಲ್ಲಿಯೂ, ಸಾವು ನೋವುಗಳೊಂದಿಗೂ ಬೇನೆ ಬಿಕ್ಕಟ್ಟುಗಳೊಂದಿಗೂ ಹೋರಾಡುವ ಒಂದಿಲ್ಲೊಂದು ಬಗೆಯ ಕಾರ್ಯಕ್ರಮಗಳಲ್ಲಿಯೂ, ಆಸಕ್ತಿಯುಳ್ಳವರಾಗುವರು. ಇವರಲ್ಲಿ ಹಲವರು ವೈದ್ಯಕದ ಕಡೆಗೆ ಒಲಿಯುವರು. ಇವರ ಈ ಗುರಿಯು ಬಾಳಿನ ನೆಮ್ಮದಿಗೆ ಕಾರಣವಾಗುವುದು. ಆದರೆ ಕೆಲವೊಂದು ಬಾರಿ ಇವರು ತಾವು ಸಾವಿನ ಹೆದರಿಕೆಯೊಳಗಿಂದ ಪಾರಾಗುವರಲ್ಲದೆ ಇನ್ನು ಹಲವರಿಗೂ ಆ ಅಂಜಿಕೆಯಿಂದ ಉಳಿಸುವರು. ಆದರೆ ಕೆಲವೊಂದು ಬಾರಿ ಒಂದು ಬಗೆಯ ಹೆಮ್ಮೆಯ ವಿಕಾರವೂ ಕಾಣಿಸಿಕೊಳ್ಳುವುದು. ಹಿರಿಯಕ್ಕನ ಸಾವಿನಿಂದ ಬಹಳ ನೊಂದು ಬೆಂದ ಓರ್ವ ಹುಡುಗನಿಗೆ 'ನೀನು ಮುಂದೆ ಏನಾಗ ಬಯಸುವೆ ?' ಎಂದು ಕೇಳಲು ಆತನು ತಾನು 'ಗೋರಿ ಅಗೆವವನಾಗುವೆ' ಎಂದು ಉತ್ತರ ಕೊಟ್ಟನು ! ಎಲೋ ಆ ಉದ್ಯೋಗವನ್ನೇಕೆ ಆರಿಸುವೆ ? ಎಂದರೆ 'ನಾನು ಬೇರೆಯವರನ್ನು ಹುಗಿಯುವವನು. ಹುಗಿಸಿಕೊಂಬುವವನಲ್ಲ !' ಇದು ಆತನ ಮಾರುತ್ತರ ! ಸಾವನ್ನು ಗೆಲ್ಲುವ ಆತನ ಬಗೆಯಿದು ! ಆದರೆ ಈ ಗುರಿಯು ಬಾಳಿನ ನಿರುಪಯೋಗಿಯಾದ ದಿಕ್ಕಿನಲ್ಲಿ ಹೊರಟುದು. ಈ ಬಗೆಯ ಮನೋವೃತ್ತಿಯು ಕೇವಲ ತನ್ನ ಮಟ್ಟಿಗೇ ಆಸಕ್ತಿಯಿರುವ ಕ್ಷುದ್ರ ಸ್ವಾರ್ಥದ ಒಂದು ಮಾದರಿ.

## ಮುದ್ದಿನ ಮಕ್ಕಳ ನೆನಹುಗಳು

ಚಿಕ್ಕಂದಿನ ಅಕ್ಕರೆ, ಅಳ್ತಿ(ಅಚ್ಚೆ)ಯಿಂದ ತಾಳಗೆಟ್ಟ ಮಕ್ಕಳ ಹಳೇ ನೆನಹುಗಳನ್ನು

ಇನ್ನು ಪರಿಶೀಲಿಸೋಣ. ಇವರ ಹಳೆಯ ನೆನಹುಗಳಲ್ಲಿ ಇವೆಲ್ಲ ಸಂಗತಿಗಳು ನಿಚ್ಚಳವಾಗಿ ಮೂಡಿದ್ದು ಕಂಡು ಬರುತ್ತದೆ. ಈ ಮಾದರಿಯ ಮಗುವಿಗೆ ಆಗಾಗ ತಾಯಿಯ ನೆನಪೇ ನೆನಪು. ಇದು ಕೆಲಮಟ್ಟಿಗೆ ಸಹಜವೇ. ಆದರೂ ಆತನು ಅನುಕೂಲ ಪರಿಸ್ಥಿತಿಯನ್ನು ಪಡೆಯಲು ಪ್ರಯತ್ನಪಟ್ಟ ಸೂಚನೆಯೂ ಅದರಲ್ಲಿ ಅಡಕವಾಗಿದೆ. ಕೆಲ ಸಾರೆ ಈ ಹಳೇ ನೆನಪುಗಳು ತೀರ ಸಾಮಾನ್ಯವಾಗಿರಬಹುದು. ಆದರೆ ವಿಮರ್ಶಿಸಿದರೆ ಅವುಗಳಲ್ಲಿ ಕೆಲವೊಂದು ಹುರುಳುಂಟೆಂದು ಮನವರಿಕೆ ಯಾಗದೇ ಇರದು. 'ನಾನು ಕೋಣೆಯಲ್ಲಿ ಕುಳಿತಾಗ, ತಾಯಿಯು ಅಲ್ಲಿ ಪೆಟ್ಟಿಗೆಯ ಬಳಿಯಲ್ಲಿ ನಿಂತಳು.' ಎಂದಿಷ್ಟೇ ಒರ್ವನು ಹೇಳುವನು. ಈ ತಾಯಿ ಮತ್ತು ಪೆಟ್ಟಿಗೆಗಳ ಸಾನಿಧ್ಯವು ತೀರ ಅಮುಖ್ಯವೆಂದು ನಮಗೆನಿಸುವುದು. ಆದರೆ ನಿಜವಾಗಿಯೂ ಆ ವ್ಯಕ್ತಿಗೆ ಅದು ಅಮುಖ್ಯವೆನಿಸಿದ್ದರೆ ಅಷ್ಟೊಂದು ಸಣ್ಣ ಸಂಗತಿ ಆತನ ನೆನಪಿನಲ್ಲಿ ನೆಲೆಗೊಂಡು ನಿಲ್ಲುತ್ತಿದ್ದಿಲ್ಲ. ಅರ್ಥಾತ್, ತಾಯಿಯ ನ್ನೊಳಗೊಂಡ ಆ ಸನ್ನಿವೇಶದಲ್ಲಿ ಆ ವ್ಯಕ್ತಿಗೆ ಅದೇನೋ ವಿಶೇಷ ಆಸಕ್ತಿಯೆನಿಸಿದೆ. ಕೆಲ ಬಾರಿ ಇಂಥ ನೆನಹುಗಳಲ್ಲಿ ತಾಯಿಯು ವ್ಯಕ್ತಳಾಗಿ ಹೊರಗೆ ಕಾಣದಿರುವಾಗ ಆ ನೆ ನ ಹು ಗ ಳ ಅರ್ಥವು ತುಂಬ ಗಡಚಾಗುತ್ತದೆ. ಅಂಥಲ್ಲಿ ತಾಯಿಯ ಸಂಬಂಧವನ್ನು ಊಹೆಯಿಂದ ಅರಿತುಕೊಳ್ಳಬೇಕಾಗುತ್ತದೆ. 'ನನಗೊಂದು ಪ್ರವಾಸ ನೆನಪಿದೆ' ಎಂದು ಒಬ್ಬನು ಹೇಳುತ್ತಾನೆ. 'ಪ್ರವಾಸದಲ್ಲಿ ಜೊತೆಗೆ ಯಾರಿದ್ದರು ?' ಎಂದು ಕೇಳಿದರೆ, 'ತಾಯಿಯು' ಎಂಬ ಉತ್ತರ ಬರುವುದು, ಅಥವಾ 'ಒಮ್ಮೆ ನಾನು, ಕೆಲ ದಿನ ಬೇಸಿಗೆಯ ಸೂಟಿಯಲ್ಲಿ ಹಳ್ಳಿಗೆ ಹೋಗಿದ್ದೆ,' ಎಂದು ಒಬ್ಬನು ಹೇಳಿದನು. ಇಲ್ಲಿ ಆತನ ತಂದೆಯು ಆಗ ಪಟ್ಟಣದಲ್ಲಿ ಕೆಲಸದ ಮೇಲೆ ಇದ್ದನು. ತಾಯಿಯು ಮಕ್ಕಳ ಜೊತೆಯಲ್ಲಿ ಇದ್ದಳೆಂದು ವ್ಯಕ್ತವಾಗುತ್ತದೆ. ಹೀಗೆ ಒಳಗೊಳಗೇ ತಾಯಿಯ ಪ್ರಭಾವವು ಎಷ್ಟಿರುವುದೆಂಬುದು ವ್ಯಕ್ತವಾಗುತ್ತದೆ.

ಈ ನೆನಹುಗಳ ವಿಮರ್ಶೆಯಿಂದ ಒಲುಮೆಗಾಗಿ, ಮೆಚ್ಚಿಕೆಗಾಗಿ ಜೀವವು ಹಂಬಲಿಸು ತ್ತಿರುವುದು ಅನುಭವಕ್ಕೆ ಬರುತ್ತದೆ. ಮಗುವು ತಾಯಿಯ ಒಲವಿಗಾಗಿ ಕೊರ ಗುವುದನ್ನು ಇಲ್ಲಿ ಕಾಣಬಹುದು. ಈ ಬಗೆಯ ಹುಡುಗರ ಅಥವಾ ಹಿರಿಯರ ನೆನಪಿನ ಹಿಂದೆ ಒಂದು ಭೀತಿಯ ಅಂಶವು ಅವಿತುಕೊಂಡಿದೆ; ತಮ್ಮನ್ನು ಬಿಟ್ಟು ಇನ್ನೊಬ್ಬರನ್ನು ಮೆಚ್ಚಬಹುದು; ಆಯ್ದುಕೊಳ್ಳಬಹುದು. ಎಂಬ ಸಂದೇಹವು ಇವರನ್ನು ಯಾವಾಗಲೂ ಪೀಡಿಸುತ್ತದೆ. ಭಾವನೆಯು ಬರಬರುತ್ತ ತೀವ್ರ ತರವಾಗಿ ತೀವ್ರತಮವಾಗಿ ಆಗುತ್ತ ನಡೆದಂತೆ ಮನಸಿನ ಕಳವಳವೂ ಮಿತಿ ಮೀರುವುದು. ಚಿಕ್ಕಂದಿನಿಂದ ಹೀಗೆ ಬೆಳೆದ ಜನರು ಮುಂದೆ, ಹೊಟ್ಟೆಕಿಚ್ಚಿನವರು ಆಗುತ್ತಾರೆ.

ಕೆಲಸಾರೆ ಯಾವುದೊಂದೇ ಸಂಗತಿಯ ಬಗ್ಗೆ ಅತೀವ ಆಸಕ್ತಿಯನ್ನು ವ್ಯಕ್ತ ಮಾಡುವರು. 'ನನ್ನ ಚಿಕ್ಕತಂಗಿಯನ್ನು ಎತ್ತಿಕೊಳ್ಳಲು ಒಮ್ಮೆ ಹೇಳಿದ್ದರು. ನಾನು ಅವಳಿಗೆ ಜೋಕೆಯಿಂದ ನೋಡಿಕೊಳ್ಳುತ್ತಲಿದ್ದೆ. ತಂಗಿಯನ್ನು ಒಂದು ಮೇಜಿನ ಮೇಲೆ ಇಟ್ಟೆ. ಆದರೆ ಅರಿವೆಯಲ್ಲಿ ಕಾಲು ತೊಡಕಿ ಅವಳು ಧಪ್ಪನೆ ಕೆಳಗೆ ಬಿದ್ದಳು.' ಎಂದು ಒಂದು ಹುಡುಗಿಯು ತನ್ನ ನೆನಹು ಅರುಹಿದಳು. ನಾಲ್ಕು ವರ್ಷದ ಮಗುವು ಅಷ್ಟೊಂದು ಎಳೆವಯಸ್ಸಿನಲ್ಲಿ, ತನಗಿಂತ ಚಿಕ್ಕ ಕೂಸನ್ನು ಎತ್ತಿಕೊಳ್ಳಬೇಕಾದುದು ಸರಿಯಾದುದಲ್ಲ. ತನ್ನ ತಂಗಿಯನ್ನು ತಾನು ಕಾಪಾಡುತ್ತಿದ್ದಾಗ ಈ ಬಗೆಯಾದ ಅಪಘಾತವು ಸಂಭವಿಸಿದುದನ್ನು ಕಾಣುವುದು ಒಂದು ದುರಂತವೆನಿಸಿತು. ಈ ಅಕ್ಕನು ದೊಡ್ಡವಳಾಗಿ ಮದುವೆಯಾದಳು. ತನಗೆ ವಿಧೇಯನಾದ ಒಬ್ಬ ಗಂಡನನ್ನೇ ಪಡೆದಳು. ಆದರೂ ಆತನ ಬಗ್ಗೆ ಯಾವಾಗಲೂ ಸಂದೇಹ; ಅಸೂಯೆ ಇವಳಿಗೆ! ಬೇರೆಯವಳನ್ನು ಆತನು ಮೆಚ್ಚಬಹುದೆಂಬ ಒಂದು ಕಳವಳವು ಅವಳನ್ನು ಅಳುಕಿಸುತ್ತಿತ್ತು. (ತನ್ನಲ್ಲಿ ಗಂಡನನ್ನು ಕಾಪಾಡಿ ಕಾದಿಟ್ಟುಕೊಳ್ಳುವ ಕೌಶಲವು ಇಲ್ಲವೆಂಬ ಭಾವನೆಯು, ಅಂದು ಕೂಸು ಉರುಳಿ ಬಿದ್ದ ಪ್ರಸಂಗದಿಂದ ಅವಳಲ್ಲಿ ದೃಢವಾಗಿ ಸುಪ್ತ ಮನದಲ್ಲಿ ಕುಳಿತಿತ್ತು.) ಗಂಡನು ಇವಳ ದಿನದ ಈ ಸಂದೇಹ, ಟೀಕೆಗಳಿಗೆ ಬೇಸತ್ತು ಹೆಂಡತಿಯ ಮೇಲಣ ಮನಸ್ಸನ್ನು ಮಕ್ಕಳ ಕಡೆಗೆ ಹೊರಳಿಸಿದನು.

ಕುಟುಂಬದ ಯಾವದೊಂದು ವ್ಯಕ್ತಿಯನ್ನು ನೋಯಿಸಬೇಕು, ಸಾಯಿಸಬೇಕು ಎಂಬ ತಮ್ಮ ಚಿಕ್ಕಂದಿನ ತೀವ್ರವಾದ ಲವಲವಿಕೆಯ ಎನಿಕೆಯನ್ನು ಕೆಲವು ಜನರು ಹೇಳಿದರು. ಇವರು ಕೇವಲ ತಮ್ಮ ವ್ಯವಹಾರ–ವಿಷಯಗಳಲ್ಲಿಯೇ ವ್ಯಗ್ರ ವಾಗಿರುವಂಥವರು. ಇವರಿಗೆ ಹೆರವರೆಂದರೆ ಹೇಸಿಕೆ, ಬೇಸರ. ಹೆರವರೊಡನೆ ಇವರಿಗೆ ಸಾಮಾನ್ಯವಾಗಿ ಒಂದು ಬಗೆಯ ಸ್ಪರ್ಧೆಯ ಭಾವನೆ. ನಮ್ಮ ಗಾದೆಯ ಮಾತು ಹೇಳುವಂತೆ 'ಮೂರನೆಯ ವರುಷದಿಂದಲೇ' ಬೆಳೆದು ಬಂದ ಬುದ್ಧಿಯು.

ಈ ಮಾದರಿಯ ಜನರು ತಾವು ಕೈಕೊಂಡ ಯಾವುದೇ ಕೆಲಸವನ್ನು ಕೊನೆ ಗಾಣಿಸುವುದಿಲ್ಲ. ಏಕೆಂದರೆ, ತನ್ನನ್ನು ಕೂಡಿದವರು ಕೊನೆಯವರೆಗೆ ಉಳಿಯುವ ರೆಂಬ ನೆಚ್ಚಿಗೆ ಇಲ್ಲ. ಈತನಿಗೆ ಅವರು ತನ್ನ ಬಿಟ್ಟು ಇನ್ನೊಬ್ಬರನ್ನು ಸಂಗಾತಿ ಯಾಗಿ ಆರಿಸಬಹುದೆಂಬ ಹೆದರಿಕೆ. ಇವರಿಗೆ ತಮ್ಮೊಡನೆ ಮೇಲಾಟ ನಡೆಸಿದವರು ತಮ್ಮನ್ನು ಹಿಂದಿಕ್ಕುರೆಂಬ ಡವಡವ; ಎದೆಗುಕ್ಕು. ಕೆಲಸದಲ್ಲಿ ತಮ್ಮನ್ನು ಹಿಮ್ಮೆಟ್ಟಬಹುದು ಎಂಬ ಚಿಂತೆ. ಇಂಥವರು ಸಮಾಜದಲ್ಲಿ ಹೊಂದಿಕೊಂಡು ಒಂದುಗೂಡಿರುವುದು ಅವಶ್ಯ. ತನ್ನೊಂದಿಗೆ ಇತರರ ಸ್ಪರ್ಧೆಯಿದೆ. ತನ್ನ ಬದಲು

ಅವರೇ ಮುಂದೆ ಬಂದಾರು. ಅವರೇ ಮಂದಿಗೆ ಹೆಚ್ಚು ಅಚ್ಚು ಮೆಚ್ಚಿನವರಾದರು ಎಂಬ ವಿಕಲ್ಪವು ಇವರ ಸಾಮಾಜಿಕ ಜೀವನಕ್ಕೆ ಅಡ್ಡಿಯನ್ನುಂಟುಮಾಡುತ್ತದೆ. ಪ್ರತಿಯೊಂದು ವ್ಯವಸಾಯದಲ್ಲಿಯೂ ಇಂಥವರು ತೀರ ತೀವ್ರ ಮನೋವೃತ್ತಿಯವರು ಆವೇಗ, ಉದ್ವೇಗಗಳಿಂದ ವ್ಯಥೆಪಡುವವರು ಆಗುತ್ತಾರೆ. ಈವೃತ್ತಿಯು ವಿಶೇಷವಾಗಿ ಪ್ರೇಮ ಮತ್ತು ವಿವಾಹಗಳ ವಿಷಯದಲ್ಲಿ ವ್ಯಕ್ತವಾಗುತ್ತದೆ.

ಹಿಂದೆ ಉಲ್ಲೇಖಿಸಿದ ಓರ್ವ ವ್ಯಕ್ತಿಯು ತನ್ನ ಚಿಕ್ಕಂದಿನ ನೆನಪೆಂದು ತಾಯಿಯೊಂದಿಗೆ ಪೇಟೆಗೆ ಹೋದ ಸಂಗತಿಯನ್ನು ಹೇಳಿದನಷ್ಟೇ. ಆ ಸಂಗತಿಯೇ ಅಷ್ಟೊಂದು ನೆನಪಿನಲ್ಲಿ ಉಳಿದುದೇಕೆ ? ಪೇಟೆಗೆ ಬರುವಾಗ ಮಳೆ ಬಂತು. ದಾರಿಯಲ್ಲಿ ತಮ್ಮನನ್ನು ಕಂಡು ತನ್ನನ್ನು ಇಳಿಸಿ ಆತನನ್ನ ಎತ್ತಿಕೊಂಡಳು. ತನಗಿಂತ ತಮ್ಮನೇ ಅವಳಿಗೆ ಬೇಕಾದನು ಎಂಬ ಈ ವಿಚಾರವೇ ಆತನಲ್ಲಿ ಮೂಡಿ ನೆನಹಿನ ರೂಪದಲ್ಲಿ ಹೆಪ್ಪುಗಟ್ಟಿತು.

## ನೆನಹುಗಳು ಬಾಳ-ಬಗೆಯ ಅವಶೇಷಗಳು

ಹಳೆಯ ನೆನಹುಗಳಿಂದ ಬಾಳಿನ ಬಗೆಯನ್ನು ಅರಿತುಕೊಳ್ಳಬಹುದು. ನೆನಹುಗಳೆಂದರೆ, ಬಾಳ ಬಗೆಯು ಹೇಗೆ ಮಾರ್ಪಡಬಹುದೆಂದು ಸೂಚಿಸುವ ಕುರುಹುಗಳು. ಬಾಳಿನ ಕಾರಣಗಳಲ್ಲ. ಗುರಿಯನ್ನು ಮುಟ್ಟುವುದಕ್ಕಾಗಿ ನಡೆದ ದಾರಿಯೊಳಗಿನ ಹೆಣಗಾಟ ನೆಗೆದಾಟದ ಕತೆಯನ್ನು ಹೇಳುವ ಅವಶೇಷಗಳು ; ಅನುಭವಿಸಿದ ಕಷ್ಟಸಷ್ಟಗಳ ಸ್ಮಾರಕಗಳು. ಯಾವನೊಬ್ಬನು, ಜೀವನದ ಉಪಯುಕ್ತ ಅಥವಾ ನಿರುಪಯುಕ್ತವಾದ ದಿಕ್ಕಿನಲ್ಲಿ ಹೇಗೆ ಹೊರಟನೆಂಬುದನ್ನು ಆ ನೆನಹುಗಳಿಂದ ಅರಿತುಕೊಳ್ಳಬಹುದು.

ಕೆಲವರ ಹಳೆಯ ನೆನಪು ಕಾಮಪ್ರವೃತ್ತಿಗೆ ಸಂಬಧಿಸಿದ್ದಿರುವುದು. ಚಿಕ್ಕಂದಿನಿಂದಲೇ ಅವರಿಗೆ ಲಿಂಗ ವಿಚಾರದಲ್ಲಿ ವಿಶೇಷ ಆಸ್ಥೆಯಿದ್ದುದು ಕಂಡು ಬರುತ್ತದೆ. ಈ ಆಸ್ಥೆಯಲ್ಲಿ ಹಲವು ಪ್ರಕಾರಗಳಿವೆ. ಮೇಲ್ಮಟ್ಟ ಕೆಳಮಟ್ಟಗಳಿವೆ. ಇಂತಹರ ಬಾಳು ಒಂದೇ ಬಗೆಯಾಗಿ ಬೆಳವಣಿಗೆಯನ್ನು ಹೊಂದುವುದಿಲ್ಲ. ಏಕೆಂದರೆ ಕಾಮಭೋಗಕ್ಕೆ ಇವರು ಇಲ್ಲದ ಮಹತ್ವವನ್ನು ಕೊಟ್ಟಿರುತ್ತಾರೆ. ಜೀವನದಪ್ರತಿಯೊಂದು ಚಟುವಟಿಕೆಗೂ ಕಾಮವೇ ಮೂಲವೆಂದು ಹಠದಿಂದ ಹೇಳುವವರಿದ್ದಾರೆ ! ಇದಕ್ಕೆ ಪ್ರತಿಯಾಗಿ ಲೋಕವೆಲ್ಲವೂ ಅನ್ನಬ್ರಹ್ಮನ ತಂತ್ರದಿಂದಲೇ ಕುಣಿಯುವುದೆಂದು

ಹೇಳುವರು. ಅವರಿಂದ ಇಲ್ಲಿಯೂ ಹಳೆಯ ನೆನಹುಗಳು ಮುಂದಿನ ಬಾಳಿಗೆ ಅನುಸರಿಸಿದುವೇ ಇರುತ್ತವೆ.

ಒರ್ವ ಹುಡುಗನಿದ್ದ. ಆತನಿಗೆ ಹೈಸ್ಕೂಲಿಗೆ ಕಳಿಸುವುದೇ ಕಠಿಣವಾಯಿತು. ಏಕೆಂದರೆ ಆತನಿಗೆ ಅಭ್ಯಾಸವೇ ಬೇಡವಾಗಿತ್ತು. ಅಲೆದಾಟದಲ್ಲಿ ಪ್ರೀತಿ ಆತನಿಗೆ. ಅಭ್ಯಾಸ ನಡೆದಾಗ ಕ್ಲಾಸಿನಲ್ಲಿ ಕುಳ್ಳಿರದೆ ಹೋಟಲುಗಳಿಗೆ ಹೋಗುವನು. ಗೆಳೆಯರ ಮನೆಗಳನ್ನು ಸುತ್ತಿಹಾಕುವನು. ಆತನ ಹಳೇ ನೆನಹುಗಳನ್ನು ಕೇಳಲಾಗಿ, 'ಚಿಕ್ಕಂದು ತೊಟ್ಟಿಲಲ್ಲಿ ಬಿದ್ದುಕೊಂಡು ಗೋಡೆಗೆ ಅಂಟಿಸಿದ ಕಾಗದದಲ್ಲಿದ್ದ ಹೂ ಬಳ್ಳಿಗಳ ಸುಳುವಿನ ಚಿತ್ರಗಳನ್ನು ನೋಡುತ್ತಲಿದ್ದೆ' ಎಂದು ಹೇಳಿದನು. ಹೀಗೆ ಸುಮ್ಮನೆ ದಿಟ್ಟಿಸುತ್ತ ತೊಟ್ಟಿಲಲ್ಲಿ ಬಿದ್ದಿರಲು ಸವಿಗಲಿತ ಹುಡುಗನು ಪರೀಕ್ಷೆಗಾಗಿ ವ್ಯಾಸಂಗ ಮಾಡುವುದಕ್ಕಾಗಲೀ, ಪ್ರತಿಷ್ಠೆಗಾಗಿ ವ್ಯವಸಾಯ ಹೂಡಲಿಕ್ಕಾಗಲೀ ದುಡಿಯಲು ಮನಸು ಮಾಡಬಹುದೆ? ಅವನ ಇಚ್ಛೆಯು ಇಬ್ಬಗೆಯಾಗಿ ಯತ್ನವೆಲ್ಲ ಇಕ್ಕಡೆಗೆ ಹಾಯ್ದು ಯಾವುದೇ ಒಂದು ವ್ಯಾಸಂಗ-ವ್ಯವಸಾಯದಲ್ಲಿ ನೆಲೆಹಿಡಿಯದೇ, ಲಕ್ಷವು ಹುರಿಗೊಳ್ಳದೇ ಮನಸ್ಸು ಮೊನೆಗೊಳ್ಳದೇ ಯಶಸ್ಸು ಎಂದಿನಂತೆ ದೂರವೇ ಉಳಿಯುವುದರಲ್ಲಿ ಆಶ್ಚರ್ಯವೇನು? ಈತನು ಅಡ್ಡ ಹಾದಿಗೆ ಬಿದ್ದುದು ಚಿಕ್ಕಂದಿನ ವಿಶೇಷ ಸಲುಗೆ, ಅಕ್ಕರೆ, ಅಳ್ತಿಗಳಿಂದಲೇ ಎಂಬುದು ನಿಶ್ಚಿತ. ಈತನು ಸ್ವಾವಲಂಬಿಯಾಗಿ ಒಮ್ಮನದಿಂದ ದುಡಿಯಲು ಸಿದ್ಧನಾಗುವುದು ಅಶಕ್ಯವಾದ ಮಾತು.

ಇನ್ನು ತಾಯ್ತಂದೆಗಳಿಗೆ ತೀರ ಬೇಡವಾಗಿ ಬದುಕಿದ ಮಕ್ಕಳ ವಿಚಾರ. ಇಂತಹ ಕೂಸುಗಳು ಬಹಳೇ ಅಪರೂಪ. ಇಲ್ಲವೆಂದರೂ ಸಲ್ಲುವುದು. ಹುಟ್ಟಿದಂದಿನಿಂದಲೂ ತಿರಸ್ಕರಿಸಲ್ಪಡುತ್ತಿದ್ದರೆ, ಅದು ಬದುಕಿ ಉಳಿಯುವುದೇ ಅಸಂಭವ. ಎಂತಹ ಕೆಟ್ಟ ಪರಿಸ್ಥಿತಿಯಲ್ಲಿ ಹುಟ್ಟಿ ಬೆಳೆದ ಶಿಶುವಿಗಾದರೂ, ತಕ್ಕಮಟ್ಟಿಗೆ ಅಕ್ಕರೆಯಿಂದ, ಅದರ ಬಯಕೆ ಬೇಡಿಕೆಗಳನ್ನು ಪೂರೈಸುವ ತಂದೆ ತಾಯಿಗಳಾಗಲೀ, ಒಬ್ಬ ದಾದಿಯಾಗಲೀ ಇದ್ದೇ ಇರುತ್ತಾರೆ. ಅನೀತಿ ಸಂಬಂಧದಿಂದ ಹುಟ್ಟಿದುವೂ ಕೊಲೆಪಾತಕಿ ದುಷ್ಕರ್ಮಿಗಳ ಮನೆತನದಲ್ಲಿ ಜನ್ಮತಾಳಿದುವೂ, ಕೆಟ್ಟ ಕಾಲ ಗುಣದಿಂದ ಹುಟ್ಟಿದುವೆಂಬ ಗ್ರಹಿಕೆಯಾದಂತಹವೂ, ತೀರ ಬೇಡವೆನಿಸಿದಾಗ ಹುಟ್ಟಿದಂತಹವೂ ತಾಯ್ತಂದೆಗಳ ಪ್ರೀತಿಗೆ ಎರವಾಗುತ್ತವೆ. ತಿರಸ್ಕರಿಸಲ್ಪಡುತ್ತವೆ. ಇಂಥ ತಿರಸ್ಕೃತ ಶಿಶುಗಳು ಯಾವಾಗಲೂ ಕುಗ್ಗಿದ ಬಗೆಯವರಾಗುವುದುಂಟು. ಇವರ ಹಳೆಯ ನೆನಹುಗಳಲ್ಲಿ ಜನರು ತೋರಿಸಿದ ತಿರಸ್ಕಾರ, ತಾತ್ಸಾರ, ದ್ವೇಷದ ಸಂಗತಿಗಳೇ ತುಂಬಿರುವುದುಂಟು. 'ಅಪ್ಪ ಚನ್ನಾಗಿ ಥಳಿಸಿದ್ದೊಂದು ನೆನಪಿದೆ!'

'ಅವ್ವ ಯಾವಾಗಲೂ ಬಯ್ಯುತ್ತಿದ್ದಳು. ಆ ಕಾಟಕ್ಕೆ ತಲೆಗೆಟ್ಟು ಮನೆಯಿಂದ ಕಾಲ್ದೆಗೆಯು ಬೇಕೆಂದಿನಿಸಿತು !' ಓಡಿ ಹೋಗುವಾಗ ನೀರಲ್ಲಿ ಮುಳುಗುವ ಪ್ರಸಂಗ ಬಂದಿತ್ತು ! ಈ ಬಗೆಯುವೇ ಇವರ ನೆನಹುಗಳು !

ಇಂತಹ ಒಬ್ಬನ ಕತೆ ಹೀಗಿದೆ : ಈತನು ಮನೆಬಿಟ್ಟು ಹೊರಬೀಳಲು ಅಸಾಧ್ಯವಾಗಿತ್ತು. ಹಿಂದೊಮ್ಮೆ ಹೊರಬಿದ್ದು ಗಂಡಾಂತರಕ್ಕೆ ಒಳಗಾಗಿದ್ದನು. ಈ ನೆನಪು ಈತನು ಮನೆಯಿಂದ ಹೊರಬಿದ್ದಾಗೆಲ್ಲ ಮನಃಚಕ್ಷುವಿನ ಮುಂದೆ ನಿಲ್ಲುತ್ತಿತ್ತು. ಸಂಕಟದಲ್ಲಿ ಸಿಲುಕಬೇಕಾದೀತೆಂಬ ಅಂಜಿಕೆ ತಲೆಯೆತ್ತುತಿತ್ತು. ಈತನು ಹುಟ್ಟಾ ಒಳ್ಳೇ ಚುರುಕು ಬುದ್ಧಿಯುವನು. ಆದರೆ, ಪರೀಕ್ಷೆಗಳಲ್ಲಿ ಮೇಲ್ತರಗತಿಯಲ್ಲಿ ತೇರ್ಗಡೆಯಾಗಲಾರೆನೆಂಬ ಅಳುಕು ಈತನನ್ನು ವ್ಯಥೆಗೊಳಿಸುತ್ತಿತ್ತು. ಆದ್ದರಿಂದ ಈತನು ಮುಂದಡಿಯಿಡುತ್ತಿದ್ದಿಲ್ಲ.ಮುಂದೆ ವಿಶ್ವವಿದ್ಯಾಲಯದಲ್ಲಿ ಕಲಿಯುವಾಗಲೂ ಹೀಗೆಯೇ ಹಿಂದುಳಿದನು. ಇದೆಲ್ಲಕ್ಕೂ ಒಂದೇ ಕಾರಣ : ಆ ಹಿಂದಿನ ನೆನಪು.

ಇಂಥ ಇನ್ನೊಂದು ಉದಾಹರಣವಿದೆ : ಓರ್ವ ನಡುವಯಸ್ಸಿನ ಗೃಹಸ್ಥನು ನಿದ್ದೆಯಿಲ್ಲದೇ ಬಳಲುತ್ತಿದ್ದನು. ವಯಸ್ಸು ೪೬-೪೮. ವಿವಾಹಿತ. ಕೆಲವು ಮಕ್ಕಳ ತಂದೆ. ಪ್ರತಿಯೊಬ್ಬರನ್ನೂ ಚಿಕಿತ್ಸಕ ದೃಷ್ಟಿಯಿಂದ ನೋಡುವಾತ. ಯಾವಾಗಲೂ ಹೆರವರ ಟೀಕೆ. ತನ್ನ ಬಳಿಯುವರನ್ನು ಸಂಗಡಿಗರನ್ನೂ ಬಲುಮೆಯಿಂದ ನಡೆಯಿಸಿಕೊಳ್ಳುವಾತ. ಈ ದಬ್ಬಾಳಿಕೆ ಕುಟುಂಬದವರ ಮೇಲೆ ಇನ್ನೂ ಹೆಚ್ಚು. ಈತನ ಈ ವರ್ತನದಿಂದ ಪ್ರತಿಯೊಬ್ಬರೂ ಬೇಸತ್ತು ಹೋಗಿದ್ದರು.

ತುಂಟ ತಂದೆತಾಯಿಗಳ ಬಳಿಯಲ್ಲಿ ಈತನು ಬಾಲ್ಯವನ್ನು ಕಳೆದಿದ್ದನು. ತಂದೆತಾಯಿಗಳೀರ್ವರೂ ಒಬ್ಬರೊಬ್ಬರ ಮೇಲೆ ಆಗಾಗ ಗದ್ದರಿಸುತ್ತಿದ್ದರು. ಮೈಮೇಲೆ ಏರಿಬರುವ ಹೆದರಿಕೆ ಹಾಕುತ್ತಿದ್ದರು. ಇವರ ಪರಿಣಾಮವಾಗಿ ಈ ಹುಡುಗನು ಇಬ್ಬರಿಗೂ ಹೆದರುತ್ತಿದ್ದನು. ಹೊಲಸು ಉಡಿಗೆ ತೊಡಿಗೆಯಲ್ಲೇ ಈತನು ಶಾಲೆಗೆ ಹೋದನು. ಏಕೆಂದರೆ ಈತನ ಕಡೆಗೆ ಕಣ್ಣೆತ್ತಿ ನೋಡಲು ವೇಳೆಯೆಲ್ಲಿತ್ತು, ತಾಯ್ತಂದೆಗಳಿಗೆ ? ಒಮ್ಮೆ ಪ್ರತಿನಿತ್ಯದ ಶಿಕ್ಷಕಿ ಬಂದಿದ್ದಿಲ್ಲ. ಹೊಸಬಳೊಬ್ಬಳು ವರ್ಗವನ್ನು ನಡೆಸಿದಳು. ಅವಳು ಶಿಕ್ಷಣ ಕಾರ್ಯವನ್ನು ಕಲೆಯೆಂದು ಭಾವಿಸಿ ಮಕ್ಕಳನ್ನು ಆಸಕ್ತಿಯಿಂದ ನೋಡುವವಳಾಗಿದ್ದಳು. ಅವಳ ಲಕ್ಷ ಈ ಅನಾಸ್ಥೆಗೆ ಒಳಗಾದ ಅವ್ಯವಸ್ಥಿತ ಹುಡುಗನ ಕಡೆಗೆ ಹೋಯಿತು. ಕರುಣೆಯಿಂದ ಅವಳು ಉತ್ತೇಜನವಿತ್ತಳು. ಈತನು ಮುಂದರಿದನು. ಇಂತಹ ಅಕ್ಕರವು ಆತನಿಗೆ ಲಭಿಸಿದ್ದು ಅದೇ ಮೊದಲು. ಅಂದಿನಿಂದ ಆತನ ಬೆಳವಣಿಗೆಗೆ ಆರಂಭವಾಯಿತು. ಆದರೆ ಈ ಬೆಳವಣಿಗೆಯು ಆ ಶಿಕ್ಷಕ್ಷಿಯ ಪ್ರೋತ್ಸಾಹದ ಒತ್ತಾಯದ ಮೂಲಕ ಸ್ವಯಂ

ಪ್ರೇರಣೆಯಿಂದ ಆದುದಲ್ಲ. ಒತ್ತಾಯದ ಹುರುಪಿನಲ್ಲಿ ಹಗಲಿರುಳೆನ್ನದೆ ಮೈ ಮುರಿದು ದುಡಿಯುಪತ್ತಿದನು. ಅಪರಾತ್ರಿಯಲ್ಲಿಯೂ ಕೆಲಸ ಮಾಡುತ್ತಿದ್ದನು. ಇಲ್ಲವೆ ಕೆಲಸದ ಪ್ರಚಾರದ ಕಳವಳದಲ್ಲಿ ಕಳೆಯುತ್ತಿದ್ದನು. ಆದುದರಿಂದ ನಿಶ್ಚಿಂತ ನಿದ್ದೆಯೆಂಬುದೇ ಈತನಿಗೆ ಇದ್ದಿಲ್ಲ. ಶ್ರಮಕ್ಕೆ ತಕ್ಕ ಶ್ರೇಯಸ್ಸು ಯತ್ನಕ್ಕೆ ತಕ್ಕ ಯಶಸ್ಸು ದೊರಕಬೇಕಾದರೆ, ಇರುಳೆಲ್ಲ ಜಾಗರಣವು ಆಗಲೇಬೇಕೆಂಬ ನಂಬುಗೆಯೊಂದು ಒಳಗೊಳಗೇ ದೃಢವಾಯಿತು.

ಈ ಬಗೆಯಾದ ನಂಬುಗೆಯ ಜನರು ತಮ್ಮ ಕುಟುಂಬದವರ ಮೇಲೂ, ಹತ್ತಿರ ದವರ ಮೇಲೂ ತಮ್ಮ ಗ್ರಹಿಕೆಯಂತೆ ನಡೆವ ಒತ್ತಾಯ ಆಗ್ರಹವನ್ನು ಮಾಡದೆ ಬಿಡುವುದಿಲ್ಲ. ಈತನ ಆಶ್ರಯವನ್ನು ಅಪೇಕ್ಷಿಸಿರುವ ಕುಟುಂಬಸ್ಥರು (ಈತನ ಎದುರು ದುರ್ಬಲರಾಗಿರುವುದರಿಂದ) ಈತನ ಕಾಟವನ್ನು ಸಹಿಸದೆ ಬೇರೆ ಗತಿಯೇ ಇರುವುದಿಲ್ಲ. (ಸರ್ಕಸಿನೊಳಗಿನ ಪ್ರಾಣಿಗಳನ್ನು ಪಳಗಿಸಿಕೊಳ್ಳುವ ದಂಡಧರನಂತೆ) ಈತನು ತನ್ನ ಹೆಂಡತಿ ಮಕ್ಕಳನ್ನು ಬಳಲಿಸುವನು. ಇದಕ್ಕೆಲ್ಲ ಈತನ ಅತಿಪರಿಶ್ರಮವು ಅತ್ಯವಶ್ಯವೆಂಬ ತೀವ್ರವಾದ ತಪ್ಪುಗ್ರಹಿಕೆಯು ಮೂಲ ಕಾರಣವು,

ಅತ್ಯಂತ ತೀವ್ರವಾದ ಕೀಳರಿಮೆಯ ಫಲವಾಗಿ ಇವರಲ್ಲಿ ಕೆಲವೊಂದು ವಿಶೇಷ ಸ್ವಭಾವವು ಮೈಗೊಳ್ಳುವುದು. ಆವೇಗ, ಉದ್ವೇಗ, ಆವೇಶಗಳು ವಿಶೇಷವಾಗಿ ಕಾಣಿಸಿಕೊಳ್ಳುವವು. ತಮ್ಮ ಮನಸಿನ ಉಗ್ರವಾದ ತೀವ್ರಭಾವಕ್ಕೆ 'ವೀರ' ವೃತ್ತಿಯೆಂಬ ಒಳ್ಳೆಯ ಹೆಸರಿನ ಹೊದಿಕೆಯನ್ನು ಹಾಕುವರು. ಇವರು ತಮ್ಮ ಕಣ್ಣೆದುರು ಮಿಗಿಲಾದ ಧ್ಯೇಯವನ್ನಿಟ್ಟಿರುವರೆಂದು ಹೇಳಬಹುದು. ಆದರೂ ಇದು ಅವರ ಹೆಚ್ಚಾದ ಕೀಳರಿಮೆಯ ಕುದಿಯ ಇನ್ನೊಂದು ರೂಪವೆಂದೇ ಕಂಡು ಬರುವುದು. ಈ ತೀವ್ರಭಾವದ ಒದ್ದಾಟವು, ಇವರಲ್ಲಿ ತಮ್ಮ ಧ್ಯೇಯ ಸಿದ್ಧಿ– ಕೊನೆಯ ಯಶಸ್ಸಿನಲ್ಲಿ ಇರುವ ಸಂದೇಹವನ್ನೇ ವ್ಯಕ್ತಪಡಿಸುತ್ತದೆ. ಎಷ್ಟೋ ಬಾರಿ, ಇಂತಹರ ಹಿರಿಮೆಯ ಗುರಿಯು, ಹೆಮ್ಮೆಗಾಗಿ ಹಾಕಿದ ಸೋಗು ಆಗುವುದೂ ಉಂಟು. ಹಳೆಯ ನೆನಹುಗಳ ಇಂತಹ ಮನೋವೃತ್ತಿಯನ್ನು ಚೆನ್ನಾಗಿ ಬಯಲಿಗೆ ಎಳೆಯುತ್ತವೆ.

# ೬ ನಿಲವು ಮತ್ತು ನಡೆವಳಿ

ಒಂದು ವ್ಯಕ್ತಿಯ ಜೀವನ ಶೈಲಿಯನ್ನೂ, ಆತನ ವ್ಯಕ್ತಿತ್ವವನ್ನೂ ಅಭ್ಯಸಿಸುವ ಹಲವು ಸಾಧನಗಳಿವೆ. ಹಿಂದೆ ಹೇಳಿದಂತೆ ಹಳೆಯ ನೆನಹುಗಳ ವಿಮರ್ಶೆ ಒಂದು ಸಾಧನ. ವ್ಯಕ್ತಿಯ ನಿಲವು ಮತ್ತು ನಡೆವಳಿ ಇನ್ನೊಂದು ಸಾಧನ. ಹಳೆಯ ನೆನಹುಗಳ ಬಿಡಿಬಿಡಿ ಮಾತುಗಳಿಂದ ಇಡೀ ಜೀವನದ ಅರ್ಥವನ್ನು ಅರಿತು ಕೊಳ್ಳುವ ಪ್ರಯತ್ನವು ಈ ಸಾಧನಗಳಲ್ಲಿ ಕಂಡು ಬರುತ್ತದೆ. ಒಬ್ಬನ ನಡೆಯಲ್ಲಿ ಆತನ ಗತಿಯ ರೀತಿಯನ್ನೂ ನಿಲುವಿನ ರೀವಿಯನ್ನೂ ನಾವು ಕಂಡುಕೊಳ್ಳ ಬಹುದು. ಇವರಲ್ಲಿ ಅವರವರ ವ್ಯಕ್ತಿತ್ವವು ಹೊರಹೊಮ್ಮುತ್ತಿರುತ್ತದೆ. ಒಬ್ಬರ ನಿಲವು ಅವರ ಜೀವನ ಶೈಲಿಯ ಪ್ರತೀಕ.

ಮೊದಲು ಶಾರೀರಿಕ ಚಲನವಲನಗಳನ್ನೇ ವಿಚಾರಿಸುವ. ಒಬ್ಬನ ನಿಲ್ಲುವ ರೀವಿ, ನೋಡುವ ಬಗೆ, ನಡೆವ ಭಂಗಿ, ಆಡುವ ಬಗೆ ಮೊದಲಾದುವುಗಳಿಂದ ಆತನ ಬೆಲೆ ಕಟ್ಟಬಹುದೆಂಬುದನ್ನು ಎಲ್ಲರೂ ಬಲ್ಲರು. ಆದರೆ ಸಾಮಾನ್ಯವಾಗಿ ಬುದ್ಧಿ ಪುರಸ್ಕಾರವಾಗಿ ಹೀಗೆ ಯಾರೂ ನಿರ್ಣಯ ಮಾಡುತ್ತಿರುವುದಿಲ್ಲ. ಆದರೂ ನಾವು ಕಾಣುವ ವ್ಯಕ್ತಿಯ ಹಾವಭಾವಗಳಿಂದ ಮುಖಮುದ್ರೆಯಿಂದ, ವಿಲಾಸ ವಿಭ್ರಮಗಳಿಂದ ನಮ್ಮ ಮನಸ್ಸಿನ ಮೇಲೆ ಅನುಕೂಲ ಅಥವಾ ಪ್ರತಿಕೂಲವಾದ ಅಭಿಪ್ರಾಯವು ತನ್ನ ತಾನೇ ಒಡಮೂಡುತ್ತದೆ.

## ನಿಲವು ಮತ್ತು ನಡೆವಳಿಗಳ ಸಂಬಂಧ

ಉದಾಹರಣೆಗಾಗಿ, ನಿಲ್ಲುವ ರೀವಿಯನ್ನೇ ನೋಡುವ. ಹುಡುಗನಾಗಲಿ,ಹರೆಯುವ ನಾಗಲಿ ನಿಡಿದಾಗಿ ನಿಂತಿರುವನೋ, ಬಾಗಿರುವನೋ, ಮುದುಡಿಕೊಂಡಿರುವನೋ ಎಂಬುದನ್ನು ನಾವು ಕೂಡಲೇ ಅರಿತುಕೊಳ್ಳುವೆವು. ಇಲ್ಲಿ ನಾವು ವಿಶೇಷವಾಗಿ ಅಸಾಧಾರಣ ಪ್ರಕಾರಗಳನ್ನಷ್ಟೇ ಗಮನಿಸಬೇಕು. ಒಬ್ಬನು ಮಿತಿಮೀರಿ ಸೆಟೆದು ಇಲ್ಲವೆ ಬಿಗಿದು ಬಿಂಕದಿಂದ ನಿಲ್ಲುತ್ತಿದ್ದರೆ ಆತನು ಈ ರೀವಿಗಾಗಿ ಮಿತಿಗಿಂತ ಹೆಚ್ಚು ಶಕ್ತಿಯನ್ನು ವೆಚ್ಚ ಮಾಡುತ್ತಿರುವನೆಂಬುದು ಸ್ಪಷ್ಟವೇ ಇದೆ. ಇಂಥವರು ನಿಜವಾಗಿ ಇರುವ ತಮ್ಮ ಸ್ವರೂಪಕ್ಕಿಂತ ಮಿಗಿಲಾದ ಯೋಗ್ಯತೆಯನ್ನು ತೋರಿಸಿ ಕೊಳ್ಳಲು ಅಪೇಕ್ಷಿಸುತ್ತಾರೆಂದು ತಿಳಿಯಬೇಕು. ಅಥವಾ ಇವರಿಗೆ ತಮ್ಮ ಯೋಗ್ಯತೆಯಿರಬೇಕಾದುದಕ್ಕಿಂತ ಕಡಿಮೆಯಿದೆಯೆಂದು ಎನಿಸುತ್ತಿರಬೇಕು.

ಕೆಲವರು ತಲೆಗುತ್ತಿ ನಿಲ್ಲುವರು. ಯಾವಾಗಲೂ ಬಾಗಿ ನಡೆಯುವರು. ಇದು ಅವರ ಕೆಲವೊಂದು ಪುಕ್ಕತನವನ್ನು, ಅಳುಕುತ್ತಿರುವುದನ್ನು ಸೂಚಿಸುತ್ತದೆ. ಆದರೆ ಇಂಥ ನಿರ್ಣಯಗಳನ್ನು ಯಾವುದೋಂದೇ ಲಕ್ಷಣದಿಂದ ತಟ್ಟನೇ ಮಾಡಿ ಬಿಡುವುದು ಅನ್ಯಾಯವಾದೀತು. ಅದಕ್ಕಾಗಿ ಇನ್ನೂ ಬೇರೆ ಸಂಗತಿಗಳನ್ನೂ ಈ ನಿರ್ಣಯದ ಕಾಲಕ್ಕೆ ಗಮನಿಸುವುದು ಲೇಸು. ನಡೆನುಡಿಯ ಹಾವಭಾವದ ಯಾವುದೊಂದೇ ಬಗೆಯನ್ನು ನೋಡಿ ಅಷ್ಟರ ಮೇಲಿಂದಲೇ ಒಮ್ಮೆಲೇ ನಿರ್ಣಯಕ್ಕೆ ದುಡುಕಬಾರದು. ಬಿಕ್ಕಟ್ಟಿನ ಪ್ರಸಂಗಗಳಲ್ಲಿ ಇಂಥವರು ಹೇಗೆ ನಡೆಯುವರೆಂಬುದನ್ನು ನಾವು ವಿಚಾರಿಸಿಕೊಳ್ಳಬೇಕು.

ಇಂಥವರಲ್ಲಿ ಕೆಲವರಿಗೆ ನಿಂತಾಗ ಅಥವಾ ಕುಳಿತಾಗ ಆನಿಕೆಯಿಲ್ಲದೆ ಆಗುವುದೇ ಇಲ್ಲ. ಎದುರಿನ ಟೇಬಲ್ಲು, ಬೆನ್ನ ಗೋಡೆ, ಬಳಿಯ ಕುರ್ಚಿ ಹೀಗೆ ಒಂದಿಲ್ಲೊಂದಕ್ಕೆ ಒರಗಿಕೊಂಡಿರುವ ಚಟವು ಹಲವರಿಗೆ ಇರುತ್ತದೆ. ಇವರಿಗೆ ತಮ್ಮ ಕರ್ತೃತ್ವ ಶಕ್ತಿಯಲ್ಲಿ ನಂಬುಗೆಯಿರುವುದಿಲ್ಲ. ಇನ್ನೊಬ್ಬರ ನೆರವನ್ನು ಕೋರುವುದೇ ಇವರ ಸ್ವಭಾವ. ಬಾಗಿ ನಡೆವವನು ಅಥವಾ ನಿಲ್ಲುವವನು ಆನಿಕೆಯನ್ನು ಅಪೇಕ್ಷಿಸುವವನಾಗಿದ್ದರೆ ಅಲ್ಲಿ ನಮ್ಮ ನಿರ್ಣಯವು ಇನ್ನಿಷ್ಟು ನಿಶ್ಚಿತವಾಗುವುದು.

ಯಾವಾಗಲೂ ಪರರ ಆಶ್ರಯವನ್ನೇ ಕೋರಬೇಕಾದ-ಪರಾವಲಂಬಿಯಾದ ಹುಡುಗರ ಭಾವ ಭಂಗಿಗಳು, ಸ್ವಾವಲಂಬಿಗಳಾದ ಹುಡುಗರಿಂದ ತೀರ ಭಿನ್ನವಾಗಿರುತ್ತವೆ. ಅವರು ಬೇರೆಯವರ ಹತ್ತಿರ ಬರುವ ಬಗೆ, ನಿಲ್ಲುವ ಭಂಗಿಗಳಿಂದ ಆತನು ಎಷ್ಟರ ಮಟ್ಟಿಗೆ ಸ್ವತಂತ್ರನು ಅಥವಾ ಪರತಂತ್ರನಾಗಿರುವನೆಂಬುದನ್ನು ಹೇಳಬಹುದು. ಹೀಗೆ ಆ ಹುಡುಗನ ಮನಸಿನ ನೆಲೆಯನ್ನು ಕಂಡು ಹಿಡಿದ ಬಳಿಕ ಅದನ್ನು ಸರಿಪಡಿಸಲು ತಕ್ಕ ಉಪಾಯಗಳನ್ನು ಕೈಕೊಳ್ಳಬೇಕು. ಇಂಥ ಮಗುವನ್ನು ಕುರಿತು ಒಂದು ಪ್ರಯೋಗವನ್ನು ಮಾಡೋಣ, ಕೋಣೆಯಲ್ಲಿ ತಾಯಿಯನ್ನು ಕುಳ್ಳಿರಿಸಿ ಮಗುವನ್ನು ಒಳಗೆ ಬಿಡಬೇಕು. ಆ ಮಗುವು ಎಡ ಬಲಕ್ಕೆ ಯಾರ ಬಳಿಗೂ ಹೋಗದೆ ನೇರವಾಗಿ ತಾಯಿ ಇದ್ದಲ್ಲಿ ಹೋಗಿ ಆಕೆಯ ಖುರ್ಚಿಗೆ ಇಲ್ಲವೇ ಮೈಗೆ ಆತುಕೊಂಡು ನಿಲ್ಲುತ್ತದೆ. ತಾಯಿಯ ನೆರವನ್ನು ಕೋರುತ್ತದೆ ಎಂಬ ನಮ್ಮ ನಿರ್ಣಯಕ್ಕೆ ಮತ್ತಿಷ್ಟು ಪುಷ್ಟಿ ದೊರೆಯುತ್ತದೆ. ಒಬ್ಬನ ಬರವು ಇತರರಲ್ಲಿರುವ ಆತನ ನಂಬುಗೆಯ ತಾರತಮ್ಯವನ್ನು ಸೂಚಿಸುತ್ತದೆ. ಇನ್ನೊಬ್ಬರ ಬಳಿಗೆ ನೇರವಾಗಿ ಬರಲು ಹಿಂಜರಿವ, ಯಾವಾಗಲೂ ದೂರದಲ್ಲಿಯೇ ಉಳಿವ ವ್ಯಕ್ತಿಯು ಜೀವನ ಇನ್ನುಳಿದ ಅಂಗಗಳಲ್ಲಿ ಕೂಡ ಹೀಗೆಯೇ ಹಿಂಜರಿವವನೂ ತನ್ನಷ್ಟಕ್ಕೆ ತಾನೇ ಇದ್ದು ಬಿಡುವವನೂ ಆಗಿರುತ್ತಾನೆ.

ಇಂಥವನು ಅಲ್ಪಭಾಷಿಯಾಗಿರುವನು. ಈ ಆಸಾಮಿ ಎಲ್ಲರಿಂದ ಬೇರೆ ಎನಿಸು ವಷ್ಟು ಮಾತಿಲ್ಲದೆ ಕುಳ್ಳಿರುವನು.

ಮನುಷ್ಯನ ವ್ಯಕ್ತಿತ್ವವು ಅಖಂಡವಾಗಿದೆ; ಏಕಸೂತ್ರಬದ್ಧವಾಗಿದೆ. ಆದುದರಿಂದ ಆತನ ನಿಲವಿಗೂ ಇರವಿಗೂ ಅಭೇದ್ಯ ಸಂಬಂಧವಿದೆ. ಇವೆರಡೂ ಒಂದನ್ನು ಇನ್ನೊಂದು ಯಾವಾಗಲೂ ಹಿಂಬಾಲಿಸುತ್ತದೆ. ಒಬ್ಬನ ಗುಣಗಳೂ ಆತನ ಇರವೂ (ನಡೆವಳಿ, ನುಡಿವಳಿ) ತೀರ ಹೊಂದಿಕೆಯಿಲ್ಲದ್ದು ಇರುವುದೇ ಸಾಧ್ಯವಿಲ್ಲ. ಅರಿತುಕೊಳ್ಳುವ ಸೂಕ್ಷ್ಮದೃಷ್ಟಿ ಬೇಕು, ಮಾತ್ರ. ಇಲ್ಲಿ ಒಂದು ಸೂಚಕ ಉದಾಹರಣೆಯನ್ನು ಕೊಡಬಹುದು. ಒಬ್ಬ ತರುಣಿಯು ಮನೋ ವೈದ್ಯನ ಬಳಿಗೆ ಬಂದಳು. ಚಿಕಿತ್ಸೆಗಾಗಿ ಬಂದವಳು ತನ್ನ ಬಳಿಯ ಖುರ್ಚಿ ಯಲ್ಲಿ ಎಲ್ಲರಂತೆ ಕೂಡಬಹುದೆಂದು ಭಾವಿಸಿದ್ದನು. ಆದರೆ ಅವಳು ದೂರದ ಆಸನವೊಂದನ್ನು ಆರಿಸಿದಳು. ಅವಳಿಗೆ ಪರಪುರುಷರ ಸಂಪರ್ಕವು ಬೇಡವಿತ್ತೆಂದು ಇದರಿಂದ ಸೂಚಿತವಾಗುತ್ತದೆ. ತಾನು ವಿವಾಹಿತಳೆಂದು ಹೇಳಿದಳು. ದೂರ ಕುಳಿತುದೂ, ಮದುವೆಯಾಗಿದೆಯೆಂದುದೂ ಆಕೆಯ ಇಡೀ ಮನೋವೃತ್ತಿಯ ನಿದರ್ಶಕಗಳಾಗಿವೆ. ಅವಳಿಗೆ ಗಂಡನ ಹೊರತು ಯಾರೂ ಬೇಡ. ಅಲ್ಲದೆ ಅವಳಿಗೆ ಅಕ್ಕರತೆ ಮಾಡಿಸಿಕೊಳ್ಳುವುದು ಬಹಳ ಸೇರುತ್ತಿತ್ತೆಂದೂ ಇದರಿಂದ ಗೊತ್ತಾಗುತ್ತದೆ. ಗಂಡನು ತನ್ನಲ್ಲಿಯೇ ಆಸಕ್ತನಾಗಿರಬೇಕೆಂದು ಬಯಸುತ್ತಿದ್ದಳು. ವೇಳೆಗೆ ಸರಿಯಾಗಿ ಮನೆಗೆ ಬಂದು ತನ್ನ ಬಳಿಯಲ್ಲಿ ಸುಳಿದಾಡುತ್ತಿರಬೇಕೆಂದು ಆಕೆಯ ಹಾರೈಕೆ ಇರಬೇಕು. ಒಬ್ಬೊಂಟಿಗಳಾಗಿ ಉಳಿದರೆ ಆಕೆ ಉದಾಸೀನ, ಉದ್ವಿಗ್ನಳಾಗಿ ಬಳಲುತ್ತಿದ್ದಳು. ಮನೆಯಿಂದ ಒಬ್ಬಳೇ ಹೊರಬೀಳಲು ಬಯಸು ವವಳಲ್ಲ. ಹಲವರೊಂದಿಗೆ ಕೂಡಿ ಹೆರವರೊಂದಿಗೆ ಬೆರೆತು ಸುಖಿಯಾಗುವ ಜೀವ ಆಕೆಯದಲ್ಲ. ಇದೆಲ್ಲವೂ ಅವಳ ಒಂದೇ ಒಂದು ಚಟುವಟಿಕೆಯಿಂದ ಸೂಚಿತ ವಾಗುತ್ತಿತ್ತು. ಮುಂದೆ ಅವಳು ಹೇಳಿದ ಬೇರೆಯ ಸಂಗತಿಯೂ ಇದನ್ನೇ ಸಮರ್ಥಿಸುತ್ತಿತ್ತು! 'ನಾನು ಚಿಂತೆಯಿಂದ ಬಳಲುತ್ತಿದ್ದೇನೆ' ಎಂದು ಅವಳು ಹೇಳಿದಳು. ಇಲ್ಲಿ ಚಿಂತೆಯೆಂದರೆ ಭವಿಷ್ಯದ ಕುರಿತು ಭೀತಿ. ಇನ್ನು ಅವಳ ಮಾತಿನ ಸ್ವಾರಸ್ಯ ತಿಳಿಯಲು ಮೊದಲು ಒಂದು ಸಂಗತಿಯನ್ನು ಅರಿತಿರಬೇಕು. ಹೆರವರನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಒಂದು ಸಾಧನವೆಂದು, ಹಲವರು ಚಿಂತೆಯೆಂಬ ಅಸ್ತ್ರವನ್ನುಪಯೋಗಿಸುತ್ತಾರೆ. ಚಿಂತೆಯಿಂದ ಬಳಲುವವರು ಸಾಮಾನ್ಯ ವಾಗಿ ಯಾರದಾದರೂ ಆಶ್ರಯವನ್ನು ಸಹಾಯವನ್ನು ಅಪೇಕ್ಷಿಸುತ್ತಿರುತ್ತಾರೆ. ಚಿಂತಾಕ್ರಾಂತರಾದವರಿಗೆ, ನೆರವಾಗಲು ಸಮರ್ಥರಾದ ಬೇರೆ ಯಾರೋ ಇರುವ ರೆಂದು ಊಹಿಸಬಹುದು.

ಇಂತಹವೇ ಮನೋವೃತ್ತಿಯನ್ನು ಸೂಚಿಸುವ ಇನ್ನೊಂದು ಉದಾಹರಣೆಯಿದೆ. ನವದಂಪತಿಗಳವರು. ನವಮತವಾದಿಗಳೂ, ಸ್ವತಂತ್ರ ವಿಚಾರಿಗಳೂ, ಭೋಗ ಸ್ವಾತಂತ್ರ್ಯದ ಪಕ್ಷಪಾತಿಗಳೂ ತಾವಾಗಿರುವೆವೆಂದು ಇವರ ಜಂಭ. ಪತಿ ಪತ್ನಿಗಳು ವಿವಾಹ ಬಾಹ್ಯವಾದ ಯಾವುದೇ ಸಂಬಂಧ ಬೆಳಿಸಿಕೊಂಡರೂ ಅಡ್ಡಿಯಿಲ್ಲ: ಒಬ್ಬರಿಗೊಬ್ಬರು ಅನುಮತಿಕೊಟ್ಟರೆ ಆಯಿತು. ಅನ್ಯೋನ್ಯ ವಂಚನೆಯಿಲ್ಲದ, ಹೇಳಿ ಕೇಳಿ ಮಾಡುವ ಅನ್ಯಾಸಕ್ತಿ–ಅಭಿಸಾರಗಳು ವ್ಯಭಿಚಾರವಲ್ಲ ; ಎಂದು ಈ ಪತಿಪತ್ನಿಗಳು ಪ್ರತಿಪಾತಿಸುತ್ತಿದ್ದರು. ಇದಕ್ಕನುಸರಿಸಿ ಅವಳ ಗಂಡನು ತನ್ನ ಕೆಲವೊಂದು ಪ್ರೇಮಸಂಬಂಧಗಳನ್ನು ಹೆಂಡತಿಗೆ ಹೇಳಿದನು. ಅವಳು ತಮ್ಮ ಉಭಯ ಸಮ್ಮತ ತತ್ವದಂತೆ ಅದನ್ನು ಕೇಳಿಕೊಂಡು ಶಾಂತವಾಗಿ ಉಳಿದಳು. ಆದರೆ ಕೆಲ ದಿನಗಳನಂತರ ಅವಳಿಗೆ ಚಿಂತೆಯ ವ್ಯಾಧಿ ಬಾಧಿಸಿತು. ಗಂಡನನ್ನು ಬಿಟ್ಟು ಏಕಾಕಿಯಾಗಿ ಆಕೆ ಇರದಾದಳು. ತಾನೊಬ್ಬಳೇ ಮನೆಹೊರಗೆ ಬೀಳಳು. ಹೊರಟರೆ ಇಬ್ಬರೂ ಕೂಡಿಯೇ. ಇಂತು ಅವರ ಆಚಾರ ಸ್ವಾತಂತ್ರ್ಯಕ್ಕೆ ಆಕೆಯ ಚಿಂತೆ, ಭೀತಿಗಳಿಂದ ತುಂಬಾ ಅಡ್ಡಿಯುಂಟಾಯಿತು !

## ಸ್ವಾವಲಂಬನದ ಕೊರತೆ, ಮತ್ತು ಮನೋದಾರ್ಢ್ಯ

ಕೆಲವರು ಕುಳ್ಳಿರುವುದು ಗೋಡೆಗೆ ಆತುಕೊಂಡೇ. ನಿಲ್ಲುವುದಾದರೂ ಗೋಡೆಗೆ ನೆಮ್ಮಿಯೇ. ಇವರು ಇನ್ನೊಬ್ಬರ ಆಧಾರವಿಲ್ಲದೆ ನಿಲ್ಲಲಾರರೆಂದೂ, ಬೆಂಬಲಕ್ಕೆ ಯಾರಾದರೂ ಬೇಕೆಂದೂ ಇದರಿಂದ ನಿರ್ಧರಿಸಬಹುದು. ಇವರಲ್ಲಿ ಧೈರ್ಯ, ಆತ್ಮವಿಶ್ವಾಸಗಳು ಸಾಕಷ್ಟು ಇಲ್ಲವೆಂದು ಇದರ ಅರ್ಥ. ಇಂಥದೊಂದು ಉದಾಹರಣವು ಇಲ್ಲಿದೆ : ಒಬ್ಬ ಹುಡುಗನು ಶಾಲೆಯಲ್ಲಿ ತುಂಬ ನಾಚುಬುರುಕನಾಗಿದ್ದನು. ಈ ಸಂಕೋಚ ವೃತ್ತಿಯು ಹೆರವರ ಸಂಪರ್ಕವನ್ನು ಕಡಿದುಕೊಳ್ಳುವ ವೃತ್ತಿಯ ಮುಖ್ಯ ಲಕ್ಷಣ. ಇಂತಹ ಹುಡುಗರಿಗೆ ಶಾಲೆಯಲ್ಲಿ ಗೆಳೆಯರಿರುವುದಿಲ್ಲ. ಯಾರ ಸಂಗಡವೂ ಈತನು ಆಡಲಾರ. ಶಾಲೆ ಬಿಡುವ ವೇಳೆಯನ್ನೇ ಈತನು ಎದುರು ನೋಡುತ್ತಿದ್ದನು. ಕೊನೆಯ ಗಂಟೆಯಾದೊಡನೆ ಮೆಲ್ಲನೆ, ಸಿದ್ಧನವಾಗಿ ಅಟ್ಟದ ಏಣಿಯನ್ನಿಳಿದು ಹೊರಗೆ ಬೀದಿಗೆ ಬಂದು, ಅಲ್ಲಿ ಸುತ್ತಲೂ ಒಮ್ಮೆ ನೋಡಿ, ಕೂಡಲೇ ಮನೆಗೆ ಓಡುವನು ! ಶಾಲೆಯಲ್ಲಿ ಮನಸಿಲ್ಲದ್ದರಿಂದ ಈತನು ಸಹಜವಾಗಿಯೇ ಅಭ್ಯಾಸದಲ್ಲಿ ಹಿಂದುಳಿದವನಾಗಿದ್ದನು. ಮನೆಗೆ ತಾಯಬಳಿಗೆ ಹೋಗಬೇಕೆಂಬುದೇ ಯಾವಾಗಲೂ ಈತನ ಹಂಬಲ ! ತಾಯಿ, ನಿಃಶಕ್ತಳಾದ ಒಬ್ಬ ವಿಧವೆ. ಮಗನಿಗೆ ತೀರ ಕಕ್ಕುಲತೆಯಿಂದ, ಮುಂಗೈ ಅರಗಿಳಿಯಂತೆ

ಬೆಳೆಸಿದ್ದಳು. ಈ ಹುಡುಗನ ಬಗ್ಗೆ ಹೆಚ್ಚು ತಿಳಿದುಕೊಳ್ಳುವುದಕ್ಕಾಗಿ ಡಾಕ್ಟರರು ತಾಯಿಯನ್ನು ಕೇಳಿದರು. 'ನಿಮ್ಮ ಮಗು ರಾತ್ರಿ ಬೇಗ ಮಲಗುವನೇ ?' 'ಅಹುದು.' 'ರಾತ್ರಿ ಎದ್ದು ಅಳುವನೇ ? ಇಲ್ಲವೆ ಕೂಗುವನೇ ?' 'ಇಲ್ಲ.' 'ನಿದ್ದೆಯಲ್ಲಿ ಹಾಸುಗೆ ಹಸಿಯಾಗುವುದೆ ?' 'ಇಲ್ಲ.' ಈ ಉತ್ತರಗಳು ತೋರಿಕೆಗೆ ತೃಪ್ತಿಕರವೆನಿಸುವುದಿಲ್ಲ. ಏಕೆಂದರೆ ಮಕ್ಕಳು ತಾಯಿಯ ಚಿತ್ತವನ್ನು ತಮ್ಮ ಕಡೆಗೆ ಎಳಕೊಳ್ಳುವುದಕ್ಕಾಗಿ ರಾತ್ರಿ ಎದ್ದು ಅಳುವರು. ಇಲ್ಲವೆ ಕೂಗುವರು ಅಥವಾ ಹಾಸಿಗೆಯನ್ನು ಒದ್ದೆ ಮಾಡುವರು. ತಾಯಿಯ ಸಹವಾಸವನ್ನು ಅಷ್ಟೊಂದು ಬಯಸುವ ಹುಡುಗನು ಇವೆರಡರಲ್ಲಿ ಒಂದನ್ನು ಮಾಡದಿದ್ದುದು ಆಶ್ಚರ್ಯ ಕರವಾಗಿದೆ. ಇದರಿಂದ ಇನ್ನು ಒಂದೇ ಊಹೆ ಉಳಿಯಿತು. ಅದೇನೆಂದರೆ ಆ ಹುಡುಗನು ತಾಯಿ ಮಗ್ಗುಲಲ್ಲಿಯೇ ಮಲಗುತ್ತಿರಬೇಕು. ಡಾಕ್ಟರರು ವಿಚಾರಿಸಲಾಗಿ ಅವರ ಆ ತರ್ಕವು ಸರಿಯಾಗಿದ್ದುದು ತಿಳಿಯಿತು. ಇಂತಿವೆಲ್ಲ ಸಣ್ಣ ಪುಟ್ಟ ಸಂಗತಿಗಳಿಂದ ಬಾಳಿನ ಸುಸಂಗತವಾದ ಯೋಜನೆಯೊಂದನ್ನು ಕಂಡುಕೊಳ್ಳ ಬಹುದಾಗಿದೆ.

## ಮನಸಿನ ಒಲವುಗಳು

ಇನ್ನು, ಆಂಗಿಕ ವೃತ್ತಿಗಳಿಂದ ಆಂತರಿಕ ವೃತ್ತಿಗಳತ್ತ ಹೊರಳುವಾ. ಕೆಲವರಿಗೆ ವಿವಾದದಲ್ಲಿ ವಿಶೇಷವಾದ ಪ್ರೀತಿಯಿರುತ್ತದೆ. ಯಾವುದೇ ಮಾತಿನಲ್ಲಿ ಮಾತಿಗೆ ಮಾತು ಬೆಳಿಸಿ ಕಾದುತ್ತ ವಾದಿಸುತ್ತ ತಾವೆಂದುದೇ ಸತ್ಯವೆಂದು ಪ್ರತಿಪಾದಿಸುವ ವೃತ್ತಿ ಇವರಲ್ಲಿ ಬಲವಾಗಿರುತ್ತದೆ. ಕೆಲವರು ಇದಕ್ಕೆ ತೀರ ವಿರುದ್ಧವಾಗಿರುವು ದುಂಟು. ಮತಭೇದ ಬಂದೊಡನೆ ಪ್ರತಿವಾದವಾದೊಡನೆ, ವಿರೋಧವೆದ್ದೊಡನೆ, ತಮ್ಮ ಮಾತನ್ನು ವಿಶೇಷ ಬೆಳಿಸದೆ, ಚರ್ಚೆಗೆ ಶರಣು ಹೊಡೆದು ಸುಮ್ಮನಾಗಿ ಬಿಡುವರು. ಆದರೂ ಇಲ್ಲಿ ಒಂದು ಮಾತನ್ನು ನೆನಪಿಡಬೇಕು. ತಮ್ಮ ಪಕ್ಷವನ್ನು ನಿಜವಾಗಿಯೂ ಯಾರೂ ಬಿಟ್ಟುಕೊಡುವುದಿಲ್ಲ. ಹಾಗೆ ಮಾಡುವುದು ಶಕ್ಯವೇ ಇಲ್ಲ. ಏಕೆಂದರೆ ಇದು ಮನುಷ್ಯ ಸ್ವಭಾವಕ್ಕೇ ಮೀರಿದ ಮಾತು. ತನ್ನ ವಿಚಾರ-ಅಭಿಪ್ರಾಯ-ಶ್ರದ್ಧೆಗಾಗಿ ಕಾದಾಡಲು ಹೆಣಗುವುದು ಹೋರುವುದು ಜೀವಂತ ಪ್ರಾಣಿಯ ಲಕ್ಷಣವು. ಸಾಮಾನ್ಯ ಮನುಷ್ಯರಾರೂ ನಡುವೆ ತಮ್ಮ ಪಂಥವನ್ನು ಬಿಡಲಾರರು; ನಡುವೆ ಬಿಟ್ಟಂತೆ, ಸುಮ್ಮನಿದ್ದಂತೆ, ಕಂಡರೂ ಅದು ತನ್ನ ಹೋರಾಟವನ್ನು ಮುಂದುವರಿಸಲಿಕ್ಕೆ ಆತನು ಮಾಡಿದ ಅದೊಂದು ಹಂಚಿಕೆ ಅಥವಾ ಹೊಂಚೆಂದು ತಿಳಿಯಬೇಕು.

ಇಂಥ ಶರಣ-ವೃತ್ತಿಯ ಮಗುವಿನ ಒಂದು ಮಾದರಿಯ ಉದಾಹರಣವಿದೆ : ಇವನು ಕುಟುಂಬದಲ್ಲಿ ಎಲ್ಲರ ಪ್ರೀತಿಯ ಕೇಂದ್ರನಾಗಿದ್ದನು. ಮನೆಯಲ್ಲಿ ಆತನಿಗಾಗಿ ಎಲ್ಲರೂ ಲಕ್ಷ ಕೊಡುವವರೇ. ಚಿಂತಿಸುವವರೇ. ಉಣಿಸು ತಿನಸಿನ ಚಿಂತೆ ಹೊರುವವರು ಒಬ್ಬರು; ಆತನ ಅಭ್ಯಾಸಕ್ಕಾಗಿ ವಿಚಾರಿಸುವವರು, ಬೈದು ತಿಳಿ ಹೇಳುವವರು ಬೇರೆಯವರು. ಹೀಗೆ ಮಾತು ಮಾತಿಗೂ ಹೆರವರಿಗೆ ಶರಣು ಹೋಗಿ, ಅವರ ಮೇಲೆ ತನ್ನ ಚಿಂತೆಯ ಹೊರೆ ಹೊರಿಸಿ ಅವರನ್ನು ಆಳುವ ಈ ಮಗವು ಇದರಲ್ಲಿ ಒಂದು ಬಗೆಯ ಹೆಗ್ಗರಿವಿನ ಹಿಗ್ಗನ್ನೇ ಪಡೆಯುತ್ತಿರುತ್ತದೆ ! ಇತರರನ್ನು ಆಳಬೇಕು ತನ್ನ ಅಂಕೆಯಲ್ಲಿಡಬೇಕು–ಇದೇ ಈತನ ಬಯಕೆಯಿರುತ್ತದೆ. ಆದರೆ ಆತನ ದಾರಿಯು ಮಾತ್ರ ಸರಿಯಾದುದಲ್ಲ. ಈ ಅಡ್ಡ ದಾರಿಗೆ ಆತನ ಕೀಳರಿಮೆಯ ಅಳುಕೇ ಕಾರಣವಾಗಿರುತ್ತದೆ. ತನ್ನ ಶಕ್ತಿಯಲ್ಲಿ ಆತನಿಗೆ ಸಾಕಷ್ಟು ನಂಬಿಗೆ ಇದ್ದಿಲ್ಲ. ಇಂಥವರು ಒಮ್ಮೊಮ್ಮೆ ನಿರಾಶೆ ನಿರುತ್ಸಾಹದವರೂ ಸಿಡುಕಿನವರೂ ಆಗುತ್ತಾರೆ. ಖಿನ್ನರಾಗಿ ನಿರ್ವಿಣ್ಣರಾಗಿ ಸುಮ್ಮನೆ ಉಳಿವ ವೃತ್ತಿ ಇವರದು. ಆದಲೆ ಇದು ಮೇಲ್ತೋರಿಕೆಯ ವೃತ್ತಿ. ಇಂಥವರು ಮನಸ್ಸಿನ ಆಳದಲ್ಲಿ ಕುದಿಯುತ್ತಿರುತ್ತಾರೆ. ಇವರ ಹಿರಿಯಾಸೆಗಳು, ವಿಕೃತ ರೂಪತಾಳಿ ಅಡ್ಡದಾರಿಯನ್ನು ಹಿಡಿಯುತ್ತವೆ.

ಒಬ್ಬ ೧೭ ವರ್ಷದ ತರುಣ. ಮನೆಯಲ್ಲಿ ಈತನೆ ಹಿರಿಯ ಮಗ. ಒಬ್ಬನಿಗೆ ತಮ್ಮನು ಹುಟ್ಟಿದೊಡನೆ ಅನುಭವಿಸಬೇಕಾಗುವ ತಲ್ಲಳವನ್ನು ಹಿಂದೆ ಹೇಳಿದ್ದಾಗಿದೆ. ಅದರಂತೆ ಈತನಿಗೂ ತಾನು ಮನೆಯವರ ಪ್ರೀತಿಯ ಪಟ್ಟದಿಂದ ತಳ್ಳಲ್ಪಟ್ಟುದಕ್ಕಾಗಿ ದಾಯಾದಿ ತಮ್ಮನ ಹುಟ್ಟಿದುದಕ್ಕೆ ವ್ಯಥೆಯನ್ನು ಅನುಭವಿಸಬೇಕಾಯಿತು. ಈತನು ಸಿಡುಕಿನವನೂ. ಖಿನ್ನನು ಆದನು. ಕೆಲಸವೂ ಇರಲಿಲ್ಲ. ಈತನಿಗೆ ಆತ್ಮಹತ್ಯೆ ಮಾಡಿಕೊಂಬ ಇಚ್ಛೆಯು ಪ್ರಬಲವಾಯ್ತು. ಆಗ ಒಬ್ಬ ಮನೋವಿಜ್ಞಾನಿಯು ಹತ್ತಿರ ಬಂದು ತನ್ನ ಮನೋವೇದನೆಗಳನ್ನು ಅರುಹಿದನು. ಕನಸಿನಲ್ಲಿ ಒಂದು ದಿನ, ತಂದೆಗೆ ಗುಂಡು ಹಾಕಿದುದನ್ನು ತಿಳಿಸಿದನು ! ಇಂತು ಮೈಗಳ್ಳರೂ. ಸುಮ್ಮನೆ ಬಿದ್ದುಕೊಂಡಿರುವವರೂ ಎಂದು ತೋರುವ ಎಷ್ಟೊಂದು ತೀವ್ರ ಭಾವನೆಗಳ ಜ್ವಾಲಾಮುಖಿಯು ಕುದಿಯುತ್ತಿರುತ್ತದೆಂಬುದನ್ನು ಇಲ್ಲಿ ಕಂಡುಕೊಳ್ಳಬಹುದು. ಆದುದರಿಂದ ತೋರಿಕೆಯಲ್ಲಿ ತಣ್ಣಗೆ ಕಾಣುವ ಮೈಗಳ್ಳ, ಉದಾಸೀನವೃತ್ತಿಯವರ ಹೊಟ್ಟೆಯೊಳಗಣ ಕೋಲಾಹಲವನ್ನು ಅರಿತುಕೊಳ್ಳುವುದು ಎಂತೆಂತಹರಿಗೂ ಅರಿದು !

ಮಕ್ಕಳಲ್ಲಿ ನಾಚುಬುರುಕತನ. ತುಂಬಾ ಸಂಕೋಚ ವೃತ್ತಿಗಳು ಕಂಡಿರೆ, ಅದು

ಬಹಳ ಘಾತಕ. ಅದೊಂದು ಭಯ ಸೂಚನೆಯೇ ಸರಿ. ನಾಚುವ ಮಕ್ಕಳ ಬಗ್ಗೆ ಬಹಳೇ ಎಚ್ಚರಿಕೆ ಪಡಬೇಕು. ಬೇಗನೆ ಅವರನ್ನು ಉಪಚರಿಸಬೇಕು. ಈ ಸ್ವಭಾವವನ್ನು ಕೂಡಲೇ ತಿದ್ದಬೇಕು; ಇಲ್ಲವಾದರೆ ಅದು ಅವರ ಮುಂದಿನ ಬಾಳನ್ನೆಲ್ಲ ಹಾಳು ಮಾಡುವುದು. ನಾಚುಬುರುಕತನವನ್ನು ಬೆಳಿಸಿಕೊಂಡ ವ್ಯಕ್ತಿಗೆ ಮುಂದೆ ಸಮಾಜದಲ್ಲಿ ತಲೆಯೆತ್ತಿ ಬಾಳುವುದೂ ಅಸಾಧ್ಯವಾಗುವುದು. ನಮ್ಮ ಆಧುನಿಕ ಸಂಸ್ಕೃತಿಯು ಸಂಕೋಚವೃತ್ತಿಯುವರಿಗೆ ತೀರ ಪ್ರತಿಕೂಲವಿರುವದು. ಎದೆಗಾರಿಕೆಯಿಂದ ಮುನ್ನುಗ್ಗಿ ನಡೆವವರೇ ಆಧುನಿಕ ಸಮಾಜ ವ್ಯವಸ್ಥೆಯಲ್ಲಿ ಯಶಸ್ವಿಯಾಗುವರು; ಎದೆಗಾರಸು ಪೆಟ್ಟು ತಿಂದರೂ, ಸೋಲುಗೊಂಡರೂ ಬಹಳ ನೊಂದುಕೊಳ್ಳುವುದಿಲ್ಲ. ಆದರೆ ನಾಚುಬುರುಕರು ತೊಂದರೆಗಳು ಅಡ್ಡ ಬಂದೊಡನೆ ಬಾಳಿನ ನಿರುಪಯೋಗಿಯಾದ ಮಗ್ಗಲಿಗೆ ಹೊರಳುವರು. ಇವರು ಕೊನೆಗೆ ತಲೆತಿರುಕರಾಗಲಿ, ಹುಚ್ಚರಾಗಲಿ, ನರಗುಂದಿದವರಾಗಲಿ ಆಗುವರು. ಇಂಥವರು ಬಿಡಾಡಿ ನಾಯಿಗಳಂತೆ, ಸಂದಿ ಮೂಲೆ ಹಿಡಿದು ಎಲ್ಲಾದರೂ ಇರುವರು. ಮೊಗದಲ್ಲಿ ನಗುವಿಲ್ಲ ಕಣ್ಣಲ್ಲಿ ಹೊಳಪಿಲ್ಲ. ಹುರುಪು, ಹುಮ್ಮಸಗಳ ಸುಳಿವಿಲ್ಲ. ಇವರು ಮಂದಿಯಲ್ಲಿ ಇರಬೇಕಾದಾಗ ಮುದುಡಿಕೊಳ್ಳುವರು. ಮಾತ ನಾಡುವಾಗ ತಡವರಿಸುವರು ತೊದಲಿಸುವರು; ಇಲ್ಲವೇ ತಣ್ಣಗೆ ಕೂಡುವರು. ಅಥವಾ ಮಂದಿಯಿಂದ ತಪ್ಪಿಸಿಕೊಂಡು ತಮ್ಮ ಮೂಲೆ ಸೇರಿಕೊಳ್ಳುವರು.

ಇವೆಲ್ಲ ಮನೋವೃತ್ತಿಗಳು ಆನುವಂಶಿಕವಲ್ಲ. ಅಥವಾ ಹುಟ್ಟಾ ಬಂದುವೂ ಅಲ್ಲ. ಕೆಲವೊಂದು ವಿಶಿಷ್ಟ ಪರಿಸ್ಥಿತಿಯಲ್ಲಿ ತಲೆದೋರಿದುವು. ಆ ಪರಿಸ್ಥಿತಿಯೊಳಗಿನ ಕ್ರಿಯೆಗೆ ಪ್ರತಿಕ್ರಿಯೇ, ಆ ಮನೋವೃತ್ತಿ. ವ್ಯಕ್ತಿಯು ಆಗಿನ ಜೀವನ ಶೈಲಿಯು ಬಿಡಿಸಲು ಉಂಟು ಮಾಡುವ ಉತ್ತರಗಳು. ನನ್ನ ಪ್ರಕೃತಿಗೆ ಅನುಗುಣವಾದ ಉತ್ತರಗಳು. ಇವು ಹಲವು ಬಾರಿ ತೀರ ಸಯುಕ್ತಿಕವಾದ ವಿಚಾರಯುಕ್ತವಾದ ಪ್ರತೀಕಾರಗಳಾಗಿರಲಿಕ್ಕಿಲ್ಲ. ಆದರೆ ಬಾಲ್ಯದ ಅನುಭವವೂ, ತಪ್ಪುತಡೆಗಳೂ ಕಲಿಸಿದ ಬಾಲ ಮನಸಿಗೆ ಸರಿಯಾದ ಪ್ರತಿಕ್ರಿಯೆಗಳು.

## ಬಾಳಿನ ಹೀಚಿನಲ್ಲಿ ಹಣ್ಣಿನ ಬಗೆ ಕಾಣಬಹುದು

ಬಲಿತವರ ಬಾಳಮಾದರಿಯನ್ನು ತಿಳಿದುಕೊಳ್ಳುವುದು ಗಡಚು. ಏಕೆಂದರೆ ಅದರಲ್ಲಿ ಅವರೊಡನೆ ಕಾಲ ಕಾಲಕ್ಕೆ ಬೆಳೆದು ಬಂದ ತೊಡಕುಗಳೂ ಮಾರ್ಪಾಟುಗಳೂ ಹೆಚ್ಚು. ಆದರೆ ಮಕ್ಕಳ ಹಾಗೂ ವಿಕೃತ ಮನೋವೃತ್ತಿಯುವರ ಬಾಳಮಾದರಿ

ಯನ್ನು ಅರಿತುಕೊಳ್ಳುವುದು ಬಹಳ ಸುಲಭ. ಏಕೆಂದರೆ ಅವರ ಬಾಳಿನಲ್ಲಿ ಇನ್ನೂ ಅಷ್ಟು ಅದಲು ಬದಲುಗಳು ಆಗಿರುವುದಿಲ್ಲ. ಕಗ್ಗಂಟುಗಳು ಬಿದ್ದಿರುವುದಿಲ್ಲ. ಇಂತವರ ಬಾಳಮಾದರಿಯನ್ನು ಹೀಚುಕಾಯಿಗೆ ಹೋಲಿಸಬಹುದು. ಗಾಳಿ, ಬೆಳಕು, ನೀರು, ಗೊಬ್ಬರಗಳನ್ನೆಲ್ಲ ಸ್ವೀಕರಿಸಿ ಹೀಚು ಬೆಳೆಯುವುದು. ಹೀಚು ಮತ್ತು ಹಣ್ಣಿನಲ್ಲಿರುವ ಅಂತರವೇ ಎಳೆ ವಯಸ್ಸಿನ ಬಾಳಮಾದರಿಗೂ ಪ್ರೌಢರ ಬಾಳಬಗೆ (ಜೀವನ ಶೈಲಿ)ಗೂ ಇದೆ. ಹೀಚಿನಂತೆ ಹಣ್ಣಿನ ಪರೀಕ್ಷೆ ಸುಲಭವಲ್ಲ. ಹೀಚಿನಲ್ಲಿ ಹಣ್ಣಿನ ಗುಣದ ಎಷ್ಟೋ ಅಂಶಗಳು ಅಡಕವಾಗಿರುತ್ತವೆಂದು ಕಂಡು ಬರುತ್ತದೆ.

ಚಿಕ್ಕಂದು ಪುಕ್ಕನಾದ ಹುಡುಗನ ಎಲ್ಲ ಚಟುವಟಿಕೆಗಳಲ್ಲೂ ಈ ಸ್ವಭಾವವು ಒಡಮೂಡಿರುವುದನ್ನು ಕಾಣಬಹುದು. ಪುಕ್ಕ ಮತ್ತು ತುಂಟ ಹುಡುಗರಲ್ಲಿ ಅಜ-ಗಜಾಂತರವಿರುತ್ತದೆ. ತುಂಟರಲ್ಲಿ ಸಹಜವಾಗಿಯೆ ಎದೆಗಾರಿಕೆಯು ಕೆಲ ಮಟ್ಟಿಗೆ ಬೆಳೆದು ಬಂದಿರುತ್ತದೆ. ಈ ಎದೆಗಾರಿಕೆಯೆಂದರೇ ಅವರ ವ್ಯವಹಾರ ಜ್ಞಾನದ ಫಲ. ಧೀರತೆಯು ಆತನ 'ಧೀ' (ಬುದ್ಧಿ)ಯು ಇನ್ನೊಂದು ರೂಪ. ಒಮ್ಮೊಮ್ಮೆ ಅಳ್ಳೆದೆಯ ಮಕ್ಕಳೂ ಕೂಡ ದಿಟ್ಟರಂತೆ ಕಾಣಿಸಿಕೊಳ್ಳುವರು. ಗೆಲುವಿಗಾಗಿ ಬುದ್ಧಿಪುರಃಸರವಾಗಿ ಹೋರಾಡಬೇಕೆಂದು ನಿರ್ಧರಿಸಿದಾಗ ಈ ಸ್ವಭಾವವು ಗೋಚರವಾಗುವುದು. ಈಸುವುದನ್ನೇ ಅರಿಯದ ಒರ್ವನು ಈಸಲು ಹವಣಿಸಿದಾಗಿನ ಒಂದು ಘಟನೆಯಿಂದ ಈ ಮಾತು ಚೆನ್ನಾಗಿ ಬೆಳಕಿಗೆ ಬರುತ್ತದೆ. ಕೆಲವು ಗೆಳೆಯರು ಈಸಲು ಹೊರಟಾಗ ಈತನೂ ಅವರೊಡನೆ ಹೋದನು. ನೀರು ಆಳವಾಗಿತ್ತು. ಈಸು ಬಾರದ ಈತನು ತಳಕ್ಕೆ ಹೊರಟನು ! ಇದು ನಿಜವಾದ ಎದೆಗಾರಿಕೆಯಲ್ಲ. ಬಾಳನ್ನು ಹಾಳುಮಾಡಿಕೊಂಬ ಹುಂಬತನ; ಧೈರ್ಯವಲ್ಲ. ಹಲವರು ತನ್ನ ಧೈರ್ಯಕ್ಕೆ ಕೌತುಕ ಪಡಲಿ; ಭಾಪು ಎನ್ನಲಿ ಎಂಬ ಹಂಬಲವು ಆತನನ್ನು ಈ ದಾರಿಯಲ್ಲಿ ನೂಕಿತು. ತನ್ನ ಕುತ್ತನ್ನು ದುರ್ಲಕ್ಷಿಸಿದನು. ಜೀವದ ಹಂಗು ತನಗಿಲ್ಲವೆಂದು ತೋರಿಸಿಕೊಳ್ಳಲು ಹವಣಿಸಿದನು. ಈ ಹವಣಿಕೆಯ ಓಂಬದಿಯಲ್ಲಿ, ಅಲ್ಲಿದ್ದವರು ತನಗೆ ನೆರವಾಗದೆ ಸುಮ್ಮನೆ ಇರರು, ಎಂಬ ಸುಪ್ತ ಆಸೆಯೊಂದು ಬಲವತ್ತರವಾಗಿ ಇದ್ದೇ ಇರುತ್ತದೆ !

ಎದೆಗಾರಿಕೆ ಮತ್ತು ಪುಕ್ಕತನಗಳು, ನಿಯತಿಯ (ದೈವದ) ನಂಬುಗೆಯೊಂದಿಗೆ ನಿಕಟವಾಗಿ ಹೊಂದಿಕೊಂಡಿವೆ. ನಿಯತಿಯ ನಂಬಿಕೆಯು ನಮ್ಮ ದಿನದ ಚಟುವಟಿಕೆ ಗಳ ಮೇಲೆ ತುಂಬ ಪರಿಣಾಮವನ್ನು ಮಾಡುತ್ತದೆ. ದೈವಬಲವು ತಮ್ಮ ಬೆಂಬಲ ಕ್ಕಿದೆ. ತಾವು ಸರ್ವ ಶಕ್ತರು ; ಎಂಬ ವರಿಷ್ಠತೆಯ ಭಾವನೆಯು ಕೆಲವರಲ್ಲಿ

ವಿಪರೀತ ಬೆಳೆದಿರುತ್ತದೆ. ತಮಗೆಲ್ಲ ಗೊತ್ತಿದೆ, ತಾವೆಲ್ಲವನ್ನೂ ಬಲ್ಲವರು. ಇನ್ನು ತಾವು ಕಲಿಯಬೇಕಾದುದೇನೂ ಇಲ್ಲ-ಎಂದು ಈ 'ಅಹಂಬ್ರಹ್ಮರ' ಪ್ರಾಮಾಣಿಕ ಮತವಿರುತ್ತದೆ. ತಮಗೆ ಸೋಲಿಲ್ಲ; ನೋವಿಲ್ಲ-ಏನೂ ಆಗುವುದಿಲ್ಲ ಎಂಬ ನಂಬುಗೆ ಇವರದು. ಇಂತಹ ಅತೀರೇಕದ ಆತ್ಮವಿಶ್ವಾಸವು ಇವರನ್ನು ಕೊನೆಗೆ ಸಂಕಟಕ್ಕೆ ಗುರಿಮಾಡುತ್ತದೆ.

## ನಿಯತಿನಿಷ್ಠೆ ಏಕೆ ಉಂಟಾಗುವುದು ?

ತಾವು ಒಂದೆರಡು ಬಾರಿ ಅಪಘಾತ ಅಥವಾ ಸಂಕಟದೊಳಗಿಂದ ಪಾರಾಗಿದ್ದುದರ ಮೇಲಿಂದ ಇಂತಹರು ನಿಯತಿನಿಷ್ಠರಾಗಿರುತ್ತಾರೆ. ಇಂಥ ಘಟನೆ ತಮ್ಮ ಶ್ರೇಷ್ಠ ನಿಯತಿಯ ಪ್ರತ್ಯಕ್ಷ ಪ್ರಮಾಣವೆಂದು ಅವರಲ್ಲಿ ಹೆಗ್ಗರಿಮೆ ನೆಲೆಗೊಳ್ಳುವುದು. ತಮ್ಮಿಂದ ಯಾವುದೋ ಮಹಾಕಾರ್ಯವು ಜರುಗಲಿದೆ. ತಾವು ಒಬ್ಬ ಅವತಾರಿ ಗಳು, ಕಾರಣ ಪುರುಷರೆಂದು ಅಂದಿನಿಂದ ಅವರಲ್ಲಿ ನಂಬುಗೆಯು ಬೆಳೆಯುತ್ತದೆ. ಕೆಲವರು ಮಿತಿಮೀರಿದ ಲೀನತೆ ದೀನತೆಗಳನ್ನು ತೋರಿಸುವರು. ಇವರ ಈ ಲೀನ ದೀನ ವೃತ್ತಿಯ ಅಡಿಯಲ್ಲಿ ದುರ್ದಮ್ಯವಾದ ಆತ್ಮಪ್ರೌಢಿಯು-ಏನೋ ಅಲೌಕಿಕ ಅತಿಮಾನುಷ ಶಕ್ತಿಯ ಕಾರ್ಯಕ್ಕೆ ತಾವು ಆರಿಸಲ್ಪಟ್ಟ ಸಾಧನ, ತಾವು ಆ ಪರ ಶಕ್ತಿಯ ಕೈಯೊಳಗಿನ ಸೂತ್ರದ ಬೊಂಬೆ ಎಂಬ ಭಾವನೆಯು ಹುದುಗಿರುವು ದುಂಟು. ಇಂಥವರು ಒಮ್ಮೆ ಅನಪೇಕ್ಷಿತವಾಗಿ ವಿಪರೀತ ಅನುಭವಕ್ಕೆ ಗುರಿ ಯಾದೊಡನೆ, ತೀರ ಅಕಲ್ಪಿತವಾದ ಅಪಯಶಸ್ಸಿಗೆ ಒಳಗಾದೊಡನೆ ಅವರ ಎದೆಗಾರಿಕೆಯು ನುಚ್ಚುನೂರಾಗಿ, ಅಂದಿನಿಂದ ಅವರು ಹುರುಪುಕುಗ್ಗಿ ನೆಲ ಹಿಡಿಯುವರು. ಏಕೆಂದರೆ ಅವರ ಬಾಳಿನ ಅಡಿಗಲ್ಲಾದ ಆ ಶ್ರದ್ಧೆಯೇ ನಷ್ಟ ವಾಗುತ್ತದೆ. ಇನ್ನು ಕೆಲವರಿಗೆ ಇಂಥ ಅಪಯಶಸ್ಸನ್ನು ಕೂಡ ಅಡಗಿಸಿಕೊಳ್ಳುವ ಆತ್ಮಸಮರ್ಥನೆಯ ಕೈವಾಡ, ಬಾಯಿಬಢಾಯಿ ಇರುವುದು. ಇಂಥವರು ಆತ್ಮ ವಂಚನೆಯೊಂದಿಗೆ ಪರವಂಚನೆಯನ್ನೂ ಮಾಡುತ್ತಾರೆ.

ದೈವವಾದವು-ನಿಯತಿನಿಷ್ಠೆಯು ಕೇವಲ ವ್ಯಕ್ತಿಗಳಲ್ಲಿ ಮಾತ್ರವಲ್ಲ. ಜನಾಂಗಗಳಲ್ಲಿ, ರಾಷ್ಟ್ರಗಳಲ್ಲಿ ಕೂಡ ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ದೈವವಾದದ ಉಗಮವು ಮಾನವನ ಹೇಡಿತನದಲ್ಲಿದೆ. 'ನಾಹಂ ಕರ್ತಾ ಹರಿಃ ಕರ್ತಾ' ಎಂದು ಹೇಳುವ ಹಲವರಲ್ಲಿ ಒಂದು ಬಗೆಯ ಗುತ್ತುಗಾರಿಕೆಯೆ ಕಂಡು ಬರುತ್ತದೆ. ತಾವು ಕೈಕೊಂಡ ಕೆಲಸವು ಯಶಸ್ವಿಯಾದರೆ. 'ನಾ ಮಾಡಿದೆ;' ಎಂದು ಎದೆತಟ್ಟಿ ಹೇಳುವುದನ್ನು ಕಾಣಬಹುದು. ಅದು ಕೈಗೂಡದಿದ್ದರೆ, 'ಹರಿಯ ಇಚ್ಛೆ. ಉಪಾಯ

ವಿಲ್ಲ.' ಎನ್ನುವರು. ಕೆಲಸದ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳುವ ಹಂಚಿಕೆಯೇ ದೈವವಾದವೆಂದು ಹೇಳಬಹುದು.

ದೈವವಾದ-ನಿಯತಿನಿಷ್ಠೆಯ ಹೊರತಾಗಿ, ಪರರೊಂದಿಗಿರುವ ನಮ್ಮ ಸಂಬಂಧಗಳನ್ನು ಮಾರ್ಪಡಿಸುವ ಇನ್ನೊಂದು ಮೂಲಪ್ರವೃತ್ತಿಯಿದೆ. ಇದುವೆ ಮತ್ಸರ ಇಲ್ಲವೆ ಅಸೂಯೆ. ಸೆಣಸು ಮತ್ತು ಹೊಟ್ಟೆಕಿಚ್ಚು. ಸೆಣಸು ಇಲ್ಲವೆ ಹೊಟ್ಟೆಯಲ್ಲಿ ಕಿಚ್ಚು ಇಲ್ಲದವರೇ ಇಲ್ಲ. ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇದು ಎಲ್ಲರಲ್ಲಿಯೂ ಇದ್ದೇ ಇದೆ. ಇದು ಸಂಪೂರ್ಣವಾಗಿ ದುರ್ಗುಣವೆಂದು ಹೇಳುವದು ನ್ಯಾಯವಲ್ಲ. ಏಕೆಂದರೆ ಸೆಣಸು-ಸ್ಪರ್ಧೆಯು ನಮ್ಮನ್ನು ಮೇಲಾಟಕ್ಕೆ ಹುರಿದುಂಬಿಸುತ್ತದೆ. ಕೆಲವು ಅಂಶದಲ್ಲಿ ಹೊಟ್ಟೆಯಲ್ಲಿ ಕಿಚ್ಚು (ಕಾವು) ಇದ್ದರೆ ಅಹಿತವಿಲ್ಲ. ಹಿತವೇ ಇದೆ. ಇದು ನಮ್ಮನ್ನು ಕೆಲಸಕ್ಕೆ ಒತ್ತಾಯಪಡಿಸುತ್ತದೆ. ಮುನ್ನೂಕುತ್ತದೆ. ಇಂಥಲ್ಲಿ ಇದು ಉಪಯುಕ್ತವೇ ಸರಿ. ಇಂತಹ ಹೊಟ್ಟೆಕಿಚ್ಚು, ಮತ್ಸರವು ಕ್ಷಮ್ಯವಾದುದು.

## ಸೆಣಸು, ಹೊಟ್ಟೆ ಕಿಚ್ಚುಗಳು ಬೇಕೆ ?

ಆದರೆ ಹಲವೊಮ್ಮೆ ಅಸೂಯೆಯು ಜನರನ್ನು ನಿರುಪಯೋಗಿಯಾದ ಹಾದಿಗೆ ಹಚ್ಚುವುದು. ಒಡಲಕಿಚ್ಚು ಭುಗಿಲ್ಲನೆ ಎದ್ದು ತಲೆಕಾಯಿಸುವುದು. ತಲೆ ಕಾಯ್ದರೆ ಕೆಲಸಗಳು ಹದಗೆಡುವವು. ಹೊಟ್ಟೆಕಿಚ್ಚು ತೊಡಕಿನದೂ ತೊಂದರೆಗೆ ಈಡು ಮಾಡುವಂತಹದೂ ಆದ ಮನೋವೃತ್ತಿಯು. ಇದು ನಿಜವಾಗಿಯೂ ನ್ಯೂನತೆಯ ಲಕ್ಷಣವು. ಹೊಟ್ಟೆಯಲ್ಲಿ ಕಿಚ್ಚು ಹೆಚ್ಚಾದರೆ ಆ ಮನುಷ್ಯನು ಯಾವ ಬಗೆಯಿಂದಲೂ ಪ್ರಯೋಜನಕಾರಿಯಾಗಲಾರನು. ತನ್ನ ಪ್ರಗತಿಯನ್ನೂ ಕೆಡಿಸಿಕೊಂಡು ಇತರರ ಪ್ರಗತಿಯಲ್ಲಿಯೂ ತೊಡಕು ತಂದೊಡ್ಡಿ ಬಾಳಿನ ಬೆಳವಣಿಗೆಯನ್ನೇ ತಡೆಯುವನು.

ಕೀಳರಿಮೆಯು ತೀವ್ರವಾದಂತೆ ಹೊಟ್ಟೆಯ ಕಿಚ್ಚು ಹೆಚ್ಚುವುದು. ತನ್ನ ಜೊತೆಗಾರರನ್ನು ಸರಿಗಟ್ಟುವುದು ಅಸಾಧ್ಯವಾಗಿ ಮತ್ಸರವು ತೀವ್ರವಾಗುತ್ತದೆ. ತನ್ನ ಸಹಕಾರಿಯ ಮೇಲೆ ತನ್ನ ಪ್ರಭಾವವನ್ನು ಬೀರುವ ಪ್ರಯತ್ನದಲ್ಲಿಯೇ, ಹಲವು ಬಾರಿ ಒಂದಿಲ್ಲೊಂದು ರೂಪದಲ್ಲಿ ಮತ್ಸರವು ಹೊರಬರುತ್ತಿರುತ್ತದೆ. ಇಂಥವರ ಬಾಳ ಮಾದರಿಯಲ್ಲಿ ಕೆಲವೊಂದು ಕೀಳರಿಮೆಯು ಹುದುಗಿರುತ್ತದೆ. ಸ್ಪರ್ಧೆಯಲ್ಲಿ ಹಿಂದೆ ಒಮ್ಮೆ ಪದಚ್ಯುತನಾದುದರಿಂದ ಮತ್ತೊಮ್ಮೆ ಪದಚ್ಯುತನಾದೇನೆಂಬ ಅಳುಕು ಇಂಥವರ ಪೂರ್ವಕತೆಯಲ್ಲಿ ಕಂಡು ಬಾರದೇ ಇರದು.

ಅಸೂಯೆ–ಮತ್ಸರಗಳ ಸಾಮಾನ್ಯ ವಿವೇಚನೆಯಿಂದ ನಾವಿನ್ನು ಅದರ ವಿಶಿಷ್ಟ ವಾದ ಮಾದರಿಯ ಕಡೆಗೆ ಹೊರಳುವ. ಇಂದಿನ ನಮ್ಮ ಸಮಾಜ ರಚನೆಯಲ್ಲಿ ಗಂಡಸಿಗೇ ಎಲ್ಲ ಅನುಕೂಲತೆಗಳು ಹೆಚ್ಚು. ಹೆಂಗಸರಿಗೆ ಅಡಿಗಡಿಗೂ ಅಡ್ಡಿಗಳು. ಇದರಿಂದ ಸಾಮಾನ್ಯವಾಗಿ ಎಲ್ಲ ಹೆಂಗಸರಿಗೆ ಗಂಡಸರ ಬಗ್ಗೆ ಒಂದು ಬಗೆಯ ಅಸೂಯೆ ಹೊಟ್ಟೆಯುರಿ. ಹೆಂಗಸರೂ, ತಾವು ಗಂಡಸರಾದರೆ ಎಷ್ಟು ಚೆನ್ನಾಗಿತ್ತು ಎಂದು ಕೊರಗುವುದುಂಟು. ಪ್ರಶಂಸೆ, ಪ್ರೋತ್ಸಾಹ ಮತ್ತು ಪ್ರಗತಿಯ ಅನು ಕೂಲಗಳೆಲ್ಲವೂ ಗಂಡಸರಿಗೇ. ನಿಜವಾಗಿ ಇದು ನ್ಯಾಯವಲ್ಲ. ಈ ಬಗೆಯ ಸಮಾಜ ರಚನೆಯನ್ನು ತಿದ್ದಲೇಬೇಕು. ಕುಟುಂಬದಲ್ಲಿ ಗಂಡಿಗೆ ಒಂದು ಬಗೆ ಹೆಣ್ಣಿಗೆ ಒಂದು ಬಗೆಯಾಗಿ ನಡೆಸಿಕೊಳ್ಳುವ ಇಂಥ ವಿಷಮ ವರ್ತನದ ಸಂಸ್ಕಾರಗಳು ವಿಪರೀತ ವಾಗುತ್ತವೆ. ಮನೆಯಲ್ಲಿ ಹುಡುಗರು ತಮಗಿಂತ ಹೆಚ್ಚು ಸುಖ ಹಾಗೂ ಅನು ಕೂಲತೆಗಳನ್ನು ಪಡೆವವರಾಗಿದ್ದು ತಮಗೆ ಮಾತ್ರ ಆ ಯಾವ ನೆಮ್ಮದಿಯ ಏರ್ಪಾಟವೂ ಇಲ್ಲದುದಕ್ಕೆ ಹೆಣ್ಣು ಮಕ್ಕಳು ಒಳಗೊಳಗೇ ನೋಯುವವರು, ಬೇಯುವವರು. ತಮಗಿಂತ ಹೆಚ್ಚಿನ ಸವಲತ್ತು, ಸ್ವಾತಂತ್ರ್ಯಗಳನ್ನು ಗಂಡು ಮಕ್ಕಳು ಉಪಯೋಗಿಸುವುದನ್ನು ಕಂಡು ತಮ್ಮ ಸ್ಥಿತಿಯ ಬಗ್ಗೆ ಹೆಣ್ಣು ಮಕ್ಕಳಲ್ಲಿ ಆಗೆ ಅಸಮಾಧಾನವೆನಿಸುವುದು. ಅವರು ಗಂಡು ಮಕ್ಕಳ ಹಾಗೆ ವರ್ತಿಸುವ ಪ್ರಯತ್ನ ಮಾಡುವರು. ಇಂಥ ಅನುಕರಣದ ಕೆಲವು ಕೃತ್ಯಗಳು ನಿಜವಾಗಿಯೂ ಉಪಯೋಗಿಯಾಗಿವೆ. ಅವನ್ನು ಟೀಕಿಸುವ ಕಾರಣವಿಲ್ಲ. ಉಡುಪು, ತೊಡಪು, ಆಟಪಾಟ ಎಂದು ಬರಹಗಳಲ್ಲಿ ಸ್ಪರ್ಧೆ ನಡೆಯುವುದು. ಈ ಸೆಣ ಸಾಟವು ನಿರುಪಯೋಗಿಯಾದ ದಿಕ್ಕಿನಲ್ಲಿಯೂ ವ್ಯಕ್ತವಾಗುವುದುಂಟು. ಕೆಲವು ಹೆಂಗಸರು ಗಂಡಸರ ಹೆಸರಿನಿಂದ ಪ್ರಸಿದ್ಧರಾಗಬೇಕೆಂದು ಬಯಸುವರು. ಹುಡುಗಿ ಹುಡುಗನಂತೆ ಹೆಸರು ಇಟ್ಟುಕೊಳ್ಳುವಳು. ಗಂಡಸರ ಚಟುವಟಿಕೆಗಳಲ್ಲಿ ಸಹಕರಿಸುವ ಉಪಯುಕ್ತವಾದ ಆಸಕ್ತಿಯನ್ನು ಬೆಳೆಸಿಕೊಳ್ಳುವ ಬದಲು, ಗಂಡಸರ ಕೆಲವೊಂದು ಚಟಗಳನ್ನೂ ಕೆಟ್ಟ ಚಾಳಿಯನ್ನೂ ಆಯ್ದುಕೊಂಡು ತಾವು ಅವರನ್ನು ಸರಿಗಟ್ಟಿದೆವೆಂದು ಭಾವಿಸುವರು. ಇಂಥವರ ಅಸಂತೋಷವು ಬರೇ ಸಾಮಾಜಿಕ ಅನ್ಯಾಯ ಅನಾಸ್ಥೆಯನ್ನು ಕುರಿತು ಮಾತ್ರವಲ್ಲ. ನಿಸರ್ಗದ ಸೇಡು ತೀರಿಸಿಕೊಳ್ಳು ವುದಕ್ಕಾಗಿಯೂ ಇವರು ಹೋರಾಟವನ್ನು ಆರಂಭಿಸುತ್ತಾರೆ. ಪ್ರಕೃತಿ ಸಹಜವಾದ ತಮ್ಮ ನಿಯುತ ಕರ್ಮಗಳನ್ನೂ ಶರೀರ ಧರ್ಮಗಳನ್ನೂ ಮೀರಬೇಕೆಂದು ಅವನ್ನು ತಪ್ಪಿಸಿಕೊಳ್ಳಬೇಕೆಂದೂ ಇವರು ಒದ್ದಾಡುತ್ತಾರೆ. ಇವರಿಗೆ ಮದುವೆ ಬೇಡ. ಮಕ್ಕಳೆಂದರೆ ಬೇಸರ, ತಿರಸ್ಕಾರ. ಹೆಂಡತಿಯಾಗುವುದೆಂದರೆ ದಾಸಿಯಾಗುವುದೆಂದು ಎಣಿಸುತ್ತಾರೆ. ಹೆಣ್ಣುತನವು ಪಾಲಿಗೆ ಬಂದುದಕ್ಕಾಗಿ ಮಮ್ಮಲನೆ ಮರುಗುತ್ತಾರೆ. ಇವೆಲ್ಲವೂ ನಿಜವಾಗಿಯೂ ಭಯಂಕರ ಪ್ರವೃತ್ತಿ. ಸಮಾಜ ಸುಧಾರಣೆ, ಪೋಷಣೆಯ

ದೃಷ್ಟಿಯಿಂದ ಅತ್ಯಂತ ಘಾತುಕ ಹೆಣ್ಣು ಮಕ್ಕಳಲ್ಲಿ ಈ ಘಾತುಕ ಮನಃಪ್ರವೃತ್ತಿಯು ತಲೆದೋರಬಾರದಾಗಿದ್ದರೆ ಸ್ತ್ರೀಯರಿಗಿರುವ ಅನಾನುಕೂಲತೆಗಳನ್ನು ದೂರ ಮಾಡುವುದೊಂದೇ ಉಪಾಯವು.

ಈ ಲೈಂಗಿಕ ಮತ್ಸರದ ವೃತ್ತಿಯು ಋತು ಪ್ರಾಪ್ತಿಯ ಸಂಧಿಕಾಲದಲ್ಲಿ–ಪೌಗಂಡ ಸ್ಥಿತಿಯ ಸಂಕ್ರಮಣ ಕಾಲದಲ್ಲಿ–ವಿಶೇಷವಾಗಿ ತಲೆದೋರುತ್ತದೆ. ಆಗ ಇವರ ಬಾಳಮಾದರಿಯು ಹದಗೆಡುವುದು. ಗಂಡು ಮಕ್ಕಳು ಉಪಭೋಗಿಸುವ ಹೆಚ್ಚಿನ ಅಧಿಕಾರ, ಸವಲತ್ತುಗಳನ್ನು ನೋಡಿ ಅಪರಿಪಕ್ವ ಹೆಣ್ಣು ಹೃದಯವು ಮತ್ಸರದಿಂದ ಉರಿದೇಳುತ್ತದೆ. ಅರ್ಥವಿಲ್ಲದ ಅನುಕರಣದ ಇಲ್ಲವೇ ಅನರ್ಥಕಾರಿ ಅನುಸರಣದ ಅಡ್ಡದಾರಿ ಹಿಡಿದು ಅವರು ತಮ್ಮ ಕೀಳರಿಮೆಯ ತೀವ್ರತೆಯನ್ನು ಹೋಗಲಾಡಿಸುವರು. ಗಂಡಸರಂತಾಗುವ ಹೆಗ್ಗಳಿಕೆಯ ಹಿಗ್ಗಿನಲ್ಲಿ ಕೀಳರಿಮೆಯು ಬೇರೆ ರೂಪ ತಾಳುವುದು.

ಈ ವೃತ್ತಿಯ ಒಂದು ದುಷ್ಪರಿಣಾಮವೆಂದರೆ, ಪ್ರೇಮ ಮತ್ತು ವಿವಾಹಗಳಲ್ಲಿ ಇವರಿಗೆ ತಿರಸ್ಕಾರವುಂಟಾಗುವುದು. ಇನ್ನು ಗಂಡಸಿನ ಅಂಕಿತರಾಗಕೂಡದೆಂದು ಮದುವೆಯೇ ಬೇಡವೆನ್ನುವವಳೂ, ವಿವಾಹಬದ್ಧಳಾಗುವುದಕ್ಕೆ ಒಪ್ಪುವುದನ್ನು ಕಾಣಬಹುದು. ಏಕೆಂದರೆ ವೃದ್ಧಕುಮಾರಿಯರಿಗೆ ಸಮಾಜದಲ್ಲಿ ಮನ್ನಣೆಯಿಲ್ಲ ! ಮದುವೆಯ ಶಾಸ್ತ್ರಕ್ಕೆ ಇದರಿಂದ ಒಪ್ಪಲೇಬೇಕಾಗುತ್ತದೆ. ದಾಂಪತ್ಯ ಜೀವನದಲ್ಲಿ ಅಪೇಕ್ಷೆ ಇಲ್ಲದಿದ್ದರೂ, ವಿವಾಹಿತರೆನಿಸಿಕೊಳ್ಳಬೇಕೆಂಬ ಆಸೆ ಇವರಿಗೆ !

## ಗಂಡು ಹೆಣ್ಣಿನ ಸೆಣಸಿನ ಪರಿಣಾಮ

ಹೆಣ್ಣು ಗಂಡಿನ ಸ್ಥಾನಮಾನಗಳನ್ನು ಸಮಾನ ಭಾವದಿಂದ, ನ್ಯಾಯ ನೀತಿಗಳ ದೃಷ್ಟಿಯಿಂದ ನಿರ್ಧರಿಸುವುದು ಉಚಿತ. ನಿಜ. ಆದರೆ, ಸಮಾನತೆಯೆಂದರೆ ಸರೂಪತೆಯಲ್ಲ. ಗಂಡು ಮತ್ತು ಹೆಣ್ಣು ಪರಸ್ಪರಪೂರಕವಿರುತ್ತವೆ. ಆದ್ದರಿಂದ ಸ್ತ್ರೀಯರ ಪುರುಷೀಕರಣ ಪ್ರವೃತ್ತಿಯು ಎಂದೆಂದಿಗೂ ತ್ಯಾಜ್ಯ. ನಿಂದ್ಯ. ಇದು ನಿಸರ್ಗದ ವಿರುದ್ಧ ಹೂಡಿದ ಬಂಡುಗಾರಿಕೆ. ಹೆಣ್ಣು ತನ್ನ ವ್ಯಕ್ತಿತ್ವವನ್ನು–ಸಹಜ ಸುಂದರವಾದ ಸತ್ತ್ವಸ್ವತ್ವಗಳನ್ನು ಕಳೆದುಕೊಂಡು ಗಂಡಿನ ಪಡಿನೆಳಲು, (ಗಂಡು ಆಗುವುದಂತೂ ಸಾಧ್ಯವಿಲ್ಲ ಗಂಡು ಬೀರಿ ಮಾತ್ರ) ಆಗುವುದು ನಗೆಗೇಡು. ಇದು ಹದಗೆಟ್ಟ ಹೆಗ್ಗರಿವಿನ ವಿಕಾರದ ದುಷ್ಪರಿಣಾಮ. ಈ ತರದ ಪ್ರಮಿಳೆಯರ

ಹುಚ್ಚು ಪುಂಡಾಟಿಕೆಯಿಂದ ಸ್ತ್ರೀಯ ಆರೋಗ್ಯದ ಮೇಲೆ ಅತ್ಯಂತ ದುಷ್ಪರಿಣಾಮಗಳು ಆಗದೆ ಇರುವುದಿಲ್ಲ. ಹೆಣ್ಣತನಕ್ಕೆ ಆಘಾತವಾಗುವುದು. ಚಿಕ್ಕಂದಿನಲ್ಲಿಯೇ ಈ ಮನೋವೃತ್ತಿ ಮತ್ತು ಅದರ ಅನಿಷ್ಟ ಪರಿಣಾಮಗಳ ಉಗಮವನ್ನು ಕಾಣಬಹುದು.

ಗಂಡುತನವನ್ನು ಬಯಸುವ ಹೆಣ್ಣಿನಂತೆ, ಹೆಣ್ತನವನ್ನು ಹಾರೈಸುವ ಗಂಡುಗಳೂ ಉಂಟು. ವಿಲಾಸಿನಿಯರ ವಿಭ್ರಮಗಳ ಅನುಕರಣದಲ್ಲಿಯೇ ಇವರಿಗೆ ವಿಶೇಷವಾದ ಆಸಕ್ತಿ. ಅಂಥ ಇಂಥ ಹೆಣ್ಣು ಇವರ ಆದರ್ಶವಲ್ಲ. ಒಯ್ಯಾರಿಯ ಬೆಡಗು ಬಿನ್ನಾಣಗಳೇ ಇವರ ಗುರಿ. ಆದುದರಿಂದ ಅವಳು ಇಂದು ಮಾಡಿದಂತೆಯೇ ಮರುದಿನ ಸಿಂಗಾರಾಗುವಲ್ಲಿಯೇ ಇವರಿಗೆ ಹಿಗ್ಗು ! ಅವಳಂತೆ ಇವರೂ ನಟನೆ ನಾಜೋಕು ಮಾಡುವರು. ಇದೂ ಒಂದು ಹೆಗ್ಗರಿಮೆಯ ಪ್ರಕಾರವೇ ಆಗಿದೆ.

ಇಂಥ ಹುಡುಗರು ಹೆಚ್ಚಾಗಿ ಹೆಂಗಸರ ನೆಳಲಲ್ಲಿ ಬೆಳೆವವರಿರುತ್ತಾರೆ. ಇವರ ಮೇಲೆ ಹೆಣ್ಣು ವ್ಯಕ್ತಿಯೇ ವಿಶೇಷವಾದ ಪರಿಣಾಮವನ್ನು ಮಾಡಿರುತ್ತದೆ. ತಂದೆಗಿಂತ ತಾಯಿಯ ಪ್ರಭಾವ ಪ್ರಾಬಲ್ಯವೇ ಮನೆಯಲ್ಲಿ ಹೆಚ್ಚಿದ್ದರೆ ಅವಳ ವ್ಯಕ್ತಿತ್ವವೇ ಆ ಬೆಳೆವ ಎಳೆ ಮಕ್ಕಳ ಮನಸಿನ ಮೇಲೆ ಮೂಡಿ ನಿಲ್ಲುತ್ತದೆ. ಇಂಥ ಮಕ್ಕಳು ಶಾಲೆಗೆ ಹೋದ ಮೇಲೆ ಅಲ್ಲಿಯೂ ತಮ್ಮ ಹೆಣ್ತನವನ್ನೇ ಮೆರೆಯಿಸುತ್ತಾರೆ. ದುಡುಕಿನ ಆಟಪಾಟಗಳಿಂದ ಇವರು ನಾಲ್ಕು ಹೆಜ್ಜೆ ದೂರ ಉಳಿಯುವರು. ಸಂಗಡಿಗರೊಡನೆ ಇವರು ಆಡುವ ಮಾತು ನಡೆವ ರೀತಿಗಳಲ್ಲಿ ಹೆಣ್ಣಿನ ಅಂದವೇ ಹೆಚ್ಚಾಗಿರುತ್ತದೆ. ಶಾಲೆಯ ಸಮ್ಮೇಲನಗಳಲ್ಲಿ ಆಗುವ ನಾಟ್ಯ ಪ್ರಯೋಗದಲ್ಲಿ ಇವರು ಸ್ತ್ರೀ ಭೂಮಿಕೆಗಳನ್ನು ವಹಿಸಿ ತಮ್ಮ ಅಸಾಮಾನ್ಯವಾದ ಅಭಿನಯದಿಂದ ಮಂದಿಯ ಮೆಚ್ಚುಗೆ ಪಡೆಯುವರು. ತಮ್ಮ ನಯನಾಜೂಕುಗಳ ಬಗ್ಗೆ ಇವರಿಗೆ ತುಂಬ ಹೆಮ್ಮೆಯಿರುತ್ತದೆ. ಇದು ಕೆಲವರಲ್ಲಿ ಕಾಣಿಸಿಕೊಳ್ಳುವ ವಿಕೃತ ಹೆಗ್ಗರಿವಿನ ಬಗೆಯಿದು. ಇಂಥ ವೃತ್ತಿಯು ತೀರ ಬೆಳೆದರೆ ಮುಂದಿನ ಜೀವನದಲ್ಲಿ ಲೈಂಗಿಕ ತೊಡಕುಗಳಿಗೆ ಕಾರಣವಾಗುವುದು. ●

# ೭ ಕನಸುಗಳೂ ಅವುಗಳ ಅರ್ಥವೂ

ವ್ಯಕ್ತಿಮನೋವಿಜ್ಞಾನಿಯು ಜಾಗ್ರತ ಮತ್ತು ಸುಪ್ತಮನಸ್ಸುಗಳನ್ನು ಒಂದರಿಂದ ಮತ್ತೊಂದು ಭಿನ್ನವೆಂದು ಬಗೆಯುವುದಿಲ್ಲ. ಅವೆರಡೂ ಒಂದಕ್ಕೊಂದು ಹೊಂದಿ ಕೊಂಡು ಅಖಂಡವಾಗಿವೆ ಒಂದೇ ವಸ್ತುವಿನ ಎರಡು ಮೈಗಳಿದ್ದಂತೆ, ಈ ವರೆಗೆ ವಿವೇಚಿಸಿದ ಹಳೆಯ ನೆನಹುಗಳು. ನಿಲವು ಮತ್ತು ನಡೆವಳಿಗಳ ವಿಚಾರವೆಲ್ಲ ಜಾಗ್ರತ ಮನಸಿಗೆ ಸಂಬಂಧಪಟ್ಟುದಾಗಿದೆ. ಇನ್ನು ಸುಪ್ತ ಮನೋಭೂಮಿಕೆಯ ವಿಚಾರವನ್ನು–ನಮ್ಮ ಕನಸಿನ ಬಾಳನ್ನು–ತಿಳಿದುಕೊಳ್ಳುವ. ನಮ್ಮ ಕನಸಿನ ಬಾಳು, ಎಚ್ಚರದ ಬಾಳಿನಷ್ಟೇ ನಮ್ಮ ಜೀವನ ಜೀವಾಳವ ಅಂಗವಾಗಿದೆ. ಎಚ್ಚರವಲ್ಲಿಯ ಚಟುವಟಿಕೆಗಳೆಂದು ಹೆಚ್ಚು ಮಹತ್ವ, ಕನಸಿನ ಕನವರಿಕೆಗಳೆಂದು ಕಡಿಮೆಯವು ಎಂಬೀ ಬಗೆಯಾಗಿ ತಾರತಮ್ಯಕ್ಕೆ ಎಡೆಯಿಲ್ಲ. ಯಾವುದು ಹೆಚ್ಚು ಯಾವುದು ಕಡಿಮೆ ಎಂದು ಹೇಳಲಿಕ್ಕಾಗದು. ಎರಡೂ ಅಷ್ಟೇ ಮಹತ್ವದ ಜೀವನದ ಅಂಗ ಗಳಾಗಿವೆ. ಆದುದರಿಂದ ಬಾಳಿನ ಅರ್ಥವನ್ನು ಅರಿತುಕೊಳ್ಳಲು ಹಳೆಯ ನೆನಹು, ನಿಲುವು ನಡವಳಿಗಳಂತೆ ಕನಸುಗಳ ವಿಮರ್ಶೆಯನ್ನೂ ಉಪಯೋಗಿಸಬೇಕು.

ಜಾಗ್ರತ ಜೀವನದಲ್ಲಿ, ತಾವು ಹಿರಿದಾಗಬೇಕು, ಮೇಲ್ಮೆಯನ್ನು ಪಡೆಯಬೇಕು ಎಂಬ ವಿಚಾರವೇ ಪ್ರಭಾವಿಯಾಗಿರುತ್ತದೆ. ಅದರಂತೆ ಕನಸುಗಳನ್ನೂ ವ್ಯಕ್ತಿಯ ಪರಿಪೃತೆಯ ಆದರ್ಶವೇ ಆಳುತ್ತಿರುತ್ತದೆ. ಕನಸು ಬಾಳಿನ ಬಗೆಯ ಒಂದು ಅಂಶವು. ವ್ಯಕ್ತಿಯ ಆದರ್ಶ, ಅಪೇಕ್ಷೆಗಳ ಬಾಳ ಮಾದರಿಯನ್ನು ಕನಸು ಗಳ ಮೇಲಿಂದ ಊಹಿಸಬಹುದಾಗಿದೆ. ಒಬ್ಬನ ಆದರ್ಶ, ಅಪೇಕ್ಷೆಗಳ ಅಂಶಗಳನ್ನು ಆತನ ಕನಸಿನ ಕನವರಿಕೆಗಳಲ್ಲಿ ಪ್ರತಿಬಿಂಬಿತವಾದುದಾ ಕಂಡಾಗಲೇ ಆ ಕನಸಿನ ನಿಜವಾದ ಅರ್ಥವು ತಿಳಿದಂತೆ. ಅದೇ ಮೇರೆಗೆ ಒಂದು ವ್ಯಕ್ತಿಯ ಪರಿಚಯವು ನಮಗೆ ಚೆನ್ನಾಗಿ ಆಗಿದ್ದರೆ, ಆಕೆಯ ಇಲ್ಲವೇ ಆತನ ಕನಸುಗಳ ಸ್ವರೂಪವನ್ನು ನಾವು ಮೊದಲೇ ಊಹಿಸಬಹುದು.

## ಕನಸುಗಳ ಒಂದು ಜಾತಿ

ಸಾಮಾನ್ಯವಾಗಿ, ಮಾನವನು, ನಿಜವಾಗಿಯೂ ಹೇಡಿಯು. ಈ ಸಾಮಾನ್ಯ ತತ್ವದ ಬಲದಿಂದ ಕನಸುಗಳೆಲ್ಲವೂ, ಹೆಚ್ಚಾಗಿ ಅಂಜಿಕೆ, ಅಳುಕು, ಇಲ್ಲವೇ ಕುತ್ತುಗಳ ಚಿಂತೆಯನ್ನು ಕುರಿತೇ ಇರುತ್ತವೆಂದು ಹೇಳಬಹುದು. ವ್ಯಕ್ತಿಯ

ತನ್ನ ತೊಂವರೆ, ಕುತ್ತುಗಳೊಳಗಿಂದ ತಪ್ಪಿಸಿಕೊಂಡು ಪಾರಾಗಲು ಹವಣಿಸು ತ್ತಿದ್ದರೆ ಆತನು ಕನಸಿನಲ್ಲಿ ಬಿದ್ದಂತೆ ಅಥವಾ ಬಿದ್ದು ಎದ್ದಂತೆ ಅನುಭವಿಸುತ್ತಾನೆ. ಬೀಳುವುದು ನಾಳಿನ ಅಪಯಶದ ಭಯಸೂಚನೆಯು. ಹಲವು ಜನರು ಈ ಬಗೆಯಾಗಿ ಬಿದ್ದ ಕನಸು ಕಾಣುವುದುಂಟು.

ಓದದೆ, ಅಭ್ಯಾಸ ಮಾಡದೆ ಪರೀಕ್ಷೆಗೆ ಹೊರಟ ಹುಡುಗನು ಕಾಣಬಹುದಾದ ಕಸಸು ಎಂತಹದು ? ಎಡಹಿ ಬಿದ್ದುದೇ. ಆದರೆ ತಮ್ಮ ಕೈಕೊಂಡ ಕೆಲಸದಲ್ಲಿ ಎದೆಗಾರಿಕೆಯಿಂದ ಮುಂದೆ ಹೊರಟವರು ಕಾಣುವ ಕನಸು ಇವಕ್ಕೆ ತೀರ ವಿಪರೀತ. ಅವರು ಎತ್ತರವಾದ ಪರ್ವತವನ್ನೇರಿದಂತೆ ಸುತ್ತಲಿನ ಸೊಬಗಿನ ಅಂದವನ್ನು ನೋಡಿ ನಲಿದಂತೆ ಆತನಿಗೆ ಅನುಭವವುಂಟಾಗುವುದು. ಇದು ಆತನ ಬಾಳಿನ ಪ್ರವಾಹದ ದಿಕ್ಕನ್ನು ಸೂಚಿಸುವುದು. ಉದ್ದೇಶಪೂರ್ತಿ ಆದರ್ಶ ಪ್ರಾಪ್ತಿಗಳ ಸೂಚನೆ ಇಂಥ ಕನಸಿನಲ್ಲಿ ಅಡಕವಾಗಿರುತ್ತದೆ.

ಮಧ್ಯಮ ಶಕ್ತಿ ಸಾಮರ್ಥ್ಯದ ಜನಗಳು ಕೆಲವರಿರುವರು. ಇವರಿಗೆ ಕನಸಿನಲ್ಲಿ ಕೆಲವೊಂದು ಕಾಲ, ಮೇಲೆ ಏರಿ ಹೋದ ಅನುಭವವು ಬರುವುದು. ಮುಂದೆ ಹಲವು ಅಡೆತಡೆಗಳ ಕನಸುಗಳು ಕಾಣಿಸಿಕೊಳ್ಳುವವು. ಹಲವು ಬಾರಿ ಯಾರಾದರೂ ತಮ್ಮನ್ನು ಬೆನ್ನಟ್ಟಿ ಬಂದ, ಬೇಟೆಯಾಡಿದ ಪ್ರಸಂಗಗಳು ಇಂಥವರ ಕನಸುಗಳಲ್ಲಿ ತೋರುವವು.

ಕೆಲವರು ತಮ್ಮ ಕನಸುಗಳನ್ನು ನೆನಪೇ ಉಳಿಯುವುದಿಲ್ಲವೆನ್ನುವರು. ಆಗ ಅವರು ಕಲ್ಪಿತ ಕನಸುಗಳನ್ನು ಕಟ್ಟಿ ಹೇಳಲು ಅಡ್ಡಿಯಿಲ್ಲ. ಇಂಥ ಕಟ್ಟುಗನಸು ಗಳಿಂದ ಕಟ್ಟುವಾತನ ಕಲ್ಪನೆಯು, ಆತನ ಬಾಳಿನ ಬಗೆಯು ಅನುಸಂಧಾನದಲ್ಲಿಯೇ ಹರಿಯುತ್ತದೆ. ಇರುಳುಗನಸುಗಳಿರಲಿ, ಹಗಲುಗನಸುಗಳಿರಲಿ, ನಮ್ಮ ಊಹೆ ಉತ್ಪ್ರೇಕ್ಷೆಗಳೂ ನಮ್ಮ ಜೀವನ ಶೈಲಿಯನ್ನೇ ವ್ಯಕ್ತಮಾಡುತ್ತವೆ. ಕೆಲವೊಂದು ವ್ಯಕ್ತಿಗಳು ವಾಸ್ತವ ಪ್ರಪಂಚಕ್ಕಿಂತ ಕಲ್ಪನಾ ಪ್ರಪಂಚದಲ್ಲಿಯೇ ಹೆಚ್ಚಾಗಿ ವಾಸಿಸುವರು. ಇಂಥವರು ಜೀವನದಲ್ಲಿ ಹೇಡಿಗಳಾಗಿದ್ದು ಕನಸಿನಲ್ಲಿ ಧೀರ ವೀರರಂತೆ ವರ್ತಿಸುವರು ! ಬಾಳಿನಲ್ಲಿ ಇವರು ಯಾವ ಕೈಕೊಂಡ ಕೆಲಸವನ್ನೂ ಕೊನೆ ಗಾಣಿಸುವುದಿಲ್ಲ. ಇಂಥ ಆರಂಗೆಲಸಿಗಳ ಈ ವೃತ್ತಿಯು ಇವರ ಧೈರ್ಯ ಸಾಹಸಗಳ ಕನಸುಗಳಲ್ಲಿಯೂ ಚೆನ್ನಾಗಿ ವ್ಯಕ್ತವಾಗುವುದು.

## ಕನಸುಗಳ ರಹಸ್ಯ

ಬಾಳಿನಲ್ಲಿ ಎಲ್ಲರ ಕಣ್ಣು ಸೆಳೆಯುವ ಕೇಂದ್ರವಾಗಬೇಕೆಂದಿರಲಿ, ಎಲ್ಲರನ್ನು ಅಂಕೆ

ಯಲ್ಲಿರಿಸಿ, ಒಂದು ಗುಂಪನ್ನು ಕಟ್ಟಿ ಆಳಬೇಕೆಂದಿರಲಿ, ಇಲ್ಲವೇ ಬಾಳಿಗೆ ಅಂಜಿ ಅದರೊಳಗಿಂದ ತಲೆ ತಪ್ಪಿಸಿ ಜಾರಬೇಕೆಂದಿರಲಿ-ಯಾವುದೇ ಹೆಗ್ಗುರಿಯಿದ್ದರೂ, ಅದನ್ನು ಪಡೆಯಲು ಮಾನವನು ಹಲವು ಬಗೆಯ ಚಟುವಟಿಕೆಗಳನ್ನು ನಡಿಸಿರುತ್ತಾನೆ. ಹಲವು ದಿಕ್ಕಿನಿಂದ ಗುರಿಯನ್ನು ಮುಟ್ಟಲು ಹೊರಟಿರುತ್ತಾನೆ. ಇಂದು ಹೆಗ್ಗುರಿಯತ್ತ ಹೊರಟ, ಅದನ್ನು ಸಾಧಿಸುವ ಒಂದು ಬಗೆಯೇ ಕನಸುಗಳು.

ಕನಸು ತರ್ಕಬದ್ಧವಾಗಲಿ, ಇದ್ದದಿದ್ದಂತೆಯಾಗಲಿ ಕಾಣಿಸಿಕೊಳ್ಳುವುದಿಲ್ಲ. ಒಂದು ಮನೋಭಾವನೆಯನ್ನು ಜಾಗೃತಗೊಳಿಸುವುದೇ ಕನಸಿನ ಮುಖ್ಯ ಉದ್ದೇಶವಾಗಿದೆ. ಈ ಭಾವನೆ ಇಲ್ಲವೇ ಉದ್ರಿಕ್ತ ವೃತ್ತಿಯ ಆಚೆಗಿರುವ ಉದ್ದೀಪನದ ಸರಿಯಾದ ಇತ್ಯರ್ಥ ಮಾಡುವುದು ತೊಡಕಿನದಾಗಿದೆ. ವ್ಯಕ್ತಿಯ ಜೀವನ ಶೈಲಿಯನ್ನವಲಂಬಿಸಿ ಅವನ ಮನಸ್ಸು ಬದುಕಿನ ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ ಅದಕ್ಕನುಗುಣವಾದ ಕ್ರಿಯೆ ಪ್ರತಿಕ್ರಿಯೆಗಳಿಗೆ ಒಳಗಾಗುತ್ತದೆ. ಈ ಪ್ರತಿಕ್ರಿಯೆಗಳು ಮೊದಲೇ ನಿರ್ಧರಿಸಿದ ಹಾಗೆ ತರ್ಕಬದ್ಧವಾಗಿ ಸಾಗುವುದಿಲ್ಲ. ಆದರೂ ಸಾಮಾಜಿಕ ಜನರ ತಿಳುವಳಿಕೆಯ ಸಲುವಾಗಿ ಅವನ್ನು ಆದಷ್ಟು ಸಯುಕ್ತಿಕವಾಗಿ ಸಮಂಜಸವಾಗಿ ಕಾಣುವಂತೆ ರೂಪಗೊಳಿಸುವುದು ನಮ್ಮ ಗುರಿಯಾಗಿದೆ. ಜಾಗೃತ ಮತ್ತು ಸುಷುಪ್ತ ಮನಸುಗಳು ಅಖಂಡ, ಒಂದೇ ಎಂಬುದನ್ನು ನೆನಪಿಟ್ಟುಕೊಂಡರೆ ಜಾಗೃತ ಜೀವನದ ಚಟುವಟಿಕೆಗಳಂತೆಯೇ ಸ್ವಪ್ನ ಜೀವನದ ಚಟುವಟಿಕೆಗಳೂ ಗೂಢ ವೆನಿಸಲಾರವು, ಮೂಢಗೊಳಿಸಲಾರವು. ಜಾಗೃತಿಯಲ್ಲಿ ಅಡಕವಾಗಿರುವ ಜೀವನ ಶೈಲಿಯೇ ಸಾಪೇಕ್ಷವಾಗಿ ಸ್ವಪ್ನ ವ್ಯಾಪಾರಗಳಲ್ಲಿಯೂ ಮುಂದರಿದು ಕಂಡು ಬರುವುದು. ಜಾಗೃತಿ ಮತ್ತು ಕನಸು ಈ ಎರಡೂ ಅವಸ್ಥೆಗಳಲ್ಲಿಯೂ ಆಗುವ ಘಟನೆ ಮತ್ತು ಭಾವನೆಗಳ ಬಗೆಯು ಒಂದೇ. ಆದರೆ ತರಗತಿಯು ಮಾತ್ರ ಬೇರೆ.

ಇತಿಹಾಸ ಕಾಲದಿಂದಲೂ, ಕನಸುಗಳು ಆಗಮ್ಯವಾದ ಅರ್ಥಪೂರ್ಣವಾದ ಗೂಢಗಳೆಂದು ಭಾವಿಸಲಾಗಿತ್ತು. ಕನಸುಗಳಲ್ಲಿ ಭವಿಷ್ಯತ್ತಿನ ಸೂಚನೆಯು ಅಡಕ ವಾಗಿರುತ್ತದೆಂದು ನಂಬಲಾಗಿತ್ತು.

ಕನಸೆಂದರೆ ಬಾಳಿನಲ್ಲಿ ಎದುರಿಸಬೇಕಾದ ತೊಡಕು, ಮತ್ತು ಬಾಳಿನಗುರಿ ಇವೆರಡನ್ನೂ ಜೋಡಿಸುವ ಸೇತುವೆಯು. ಅದುದರಿಂದಲೇ ಕನಸಿನಲ್ಲಿ ಕಂಡ ಘಟನೆಯು ಮುಂದೆ ನಿಜವಾಗಿ ಪರಿಣಮಿಸಿದ್ದುಮು, ಹಲವು ಬಾರಿ ಅನುಭವಕ್ಕೆ

ಬರುತ್ತದೆ. ಏಕೆಂದರೆ ವ್ಯಕ್ತಿಯು ಜಾಗೃತಿಯಲ್ಲಿ ತಾನು ವಹಿಸಬೇಕೆಂದಿರುವ ಭೂಮಿಕೆಯು-ನಿರ್ವಹಿಸಬೇಕಾದ ಹೊಣೆಗಾರಿಕೆಯು-ಅಭ್ಯಾಸವನ್ನೇ ಕನಸಿನಲ್ಲಿ ನಡೆಸಿರುತ್ತಾನೆ. ಇಂತು ಕನಸು ನಿಜವಾಗಲಿಕ್ಕೆ ತಾನೇ ಕಾರಣನಾಗಿರುತ್ತಾನೆ! ಎಚ್ಚರಿದ್ದಾಗ ನಡೆವ ಚಟುವಟಿಕೆ, ಕಾರ್ಯಕಲಾಪಗಳಲ್ಲಿ ಒಂದು ಬಗೆಯ ಸುಸಂಬದ್ಧತೆಯು ಇರುವಂತೆ ಕನಸುಗಳಲ್ಲಿಯೂ ಇದನ್ನು ಕಾಣಬಹುದು. ಸೂಕ್ಷ್ಮ ಹಾಗೂ ತೀಕ್ಷ್ಣ ಬುದ್ಧಿಯವನು ಜಾಗೃತ ಜೀವನದ ಚಟುವಟಿಕೆಗಳನ್ನು ಪೃಥಕ್ಕರಿಸಲಿ, ಅಥವಾ ಸ್ವಪ್ನದೊಳಗಿನ ಆಗುಹೋಗುಗಳನ್ನು ವಿಮರ್ಶಿಸಲಿ, ಅದರಿಂದ ಆತನು ತನ್ನ ನಾಳಿನ ಬಾಳಬಗೆಯನ್ನು ಅರಿತುಕೊಳ್ಳುವನು. ಹೀಗೆ ಗೊತ್ತಾಗುವುದು ನಿಶ್ಚಿತ ಸಂಗತಿಯಲ್ಲ. ಆಗಲಿರುವ ಸಂಗತಿಯ ಸೂಚನೆ ಮಾತ್ರ. ಅದರ ಹೊಳವು, ಒಲವು ಮಾತ್ರ.

ಕನಸುಗಳು ತೀರ ರಹಸ್ಯಮಯ, ಗೂಢವೆನಿಸುವುದಕ್ಕೆ ಒಂದು ಕಾರಣವಿದೆ. ತಮ್ಮ ಕನಸುಗಳ ತಿರುಳು ತಿಳಿದುಕೊಳ್ಳಲು ಎಲ್ಲರಿಗೂ ಸಾಧ್ಯವಿಲ್ಲ. ಏಕೆಂದರೆ ಎಚ್ಚರದಲ್ಲಿರುವಾಗಲೇ, ನಿಜವಾಗಿ ಮೈಮೇಲೆ ಎಚ್ಚರಿದ್ದವರು ಎಷ್ಟು ಜನ? ತಮ್ಮ ಅರಿವು ತಮಗಿರುವವರು ದುರ್ಲಭ. ಪ್ರವಾಹ ಪತಿತರಾಗಿ ಹರಿಯುತ್ತ ನಡೆದವರೇ ಹೆಚ್ಚು. ತಮ್ಮ ಗುರಿಯಾವುದು, ತಮ್ಮ ದಾರಿ ಯಾವ ನಿಟ್ಟಿನಲ್ಲಿದೆ, ಎಂಬುದನ್ನು ಪರಕಿಸಿಕೊಳ್ಳಲು ಬೇಕಾಗುವ ಆತ್ಮವಿಶ್ಲೇಷಣತೆಯ ಆಲೋಚನಾಶಕ್ತಿಯು ಕೆಲವೇ ಜನರಲ್ಲಿರುತ್ತದೆ. ಜಾಗೃತ ಅವಸ್ಥೆಯ ಸ್ಪಷ್ಟ ಘಟನೆಗಳನ್ನು ಪೃಥಕ್ಕರಿಸಿ ತಿಳಿದುಕೊಳ್ಳಲಿಕ್ಕೇ ಆಗದವರು, ಅದರ ತೊಡಕಿನದಾಗಿರುವ ಕನಸಿನ ಸಂಗತಿಗಳನ್ನು ಬಿಡಿಸಿ ತಿಳಕೊಳ್ಳುವುದು ಅವಶ್ಯವಾಗಿದೆ. ಜನಸಾಮಾನ್ಯರಲ್ಲಿ ಇರುವ ಈ ಅಜ್ಞಾನ ಅಸಮರ್ಥತೆಯ ಲಾಭಪಡೆದು, ತಮಗೆ ಭವಿಷ್ಯ ಸೂಚಕ ಕನಸುಗಳು ಬೀಳುವವೆಂದು ಜಂಭದಿಂದ ಹೇಳಿ ತಾವೊಬ್ಬ ಪ್ರವಾದಿಗಳು, ಮಹಾತ್ಮರೆಂಬಂತೆ ನಟಿಸುವವರೂ ಉಂಟು.

## ಕನಸುಗಳಲ್ಲಿಯ ಸಯುಕ್ತಿಕತೆ

ಸ್ವಪ್ನಗಳಲ್ಲಿ ಹುದುಗಿರುವ ಅರ್ಥವನ್ನು ತಿಳಿದುಕೊಳ್ಳಬೇಕಾದರೆ, ಅವುಗಳನ್ನು ಜಾಗೃತ ಅವಸ್ಥೆಯ ಪ್ರತ್ಯಕ್ಷ ಚಟುವಟಿಕೆಗಳೊಂದಿಗೆ ನೇರವಾಗಿ ಹೋಲಿಸಬಾರದು. ವ್ಯಕ್ತಿಯ ಸ್ವಗತವಾದ, ಆಂತರಂಗಿಕ ಭಾವನೆಗಳು ವ್ಯಕ್ತವಾಗುವ ಬಗೆಯೊಡನೆ ತೂಗಿ ನೋಡಬೇಕು. ಮನೋವಿಕೃತಿಯುಳ್ಳ ವ್ಯಕ್ತಿಗಳು ಪೋಲಿ ಹುಡುಗರೂ,

ತಪ್ಪುಗಾರರೂ ಸರಗುಂದಿದವರೂ ಕೆಲವೊಂದು ಸಂಗತಿಗಳ ಬಗ್ಗೆ ದೃಢವಾದ ನಂಬುಗೆಯು ನೆಲೆಗೊಳ್ಳುವುದಕ್ಕಾಗಿ ತಮ್ಮಲ್ಲಿ ಕೆಲವೊಂದು ವಿಶಿಷ್ಟವಾದ ತೀವ್ರ ಮನೋವೃತ್ತಿಯನ್ನು-ಒಂದು ತರದ ಉದ್ದೀಪನ ಭಾವನೆಯನ್ನು ಉಂಟುಮಾಡಿಕೊಳ್ಳುವರು. ಕೊಲೆಗಡಕನು ಕೊಲೆಗೆ ಅಣಿಯಾಗುವ ಮೊದಲು, ತಾನು ಕೊಲ್ಲಲಿರುವ ವ್ಯಕ್ತಿಯು ಈ ಲೋಕದಲ್ಲಿ ಇರಲಾಗದು ; ಇರಲು ಅನರ್ಹನು ಆತನನ್ನು ಕೊಲ್ಲುವುದೇ ಲೇಸು- ಎಂಬೀ ಬಗೆಯ ತೀವ್ರ ಭಾವನೆಯನ್ನು ಬೆಳಿಸಿಕೊಳ್ಳುತ್ತಾನೆ ಮೈತುಂಬಿಸಿಕೊಳ್ಳುತ್ತಾನೆ. ಆಮೇಲೆ ಕೊಲೆ ಮಾಡುತ್ತಾನೆ.

ಕನಸುಗಳ ಉದ್ದೇಶವೂ ಇಂತಹ ಆತ್ಮಸಮರ್ಥನ ಪರ ಭಾವನೆಗಳ ಉದ್ದೀಪನವೇ ಇರುತ್ತದೆ. ತನ್ನ ಕುಂದು ಕೊರತೆಯ ಕೊರಗಿನ ಮೂಲಕ ಕೆಲವೊಂದು ಸಂಗತಿಗಳು ಆತನ ಮನಸ್ಸನ್ನು ಸೆಳೆಯುತ್ತವೆ. ಆಗ ಆ ಸಂಗತಿಗಳುಳ್ಳ ವ್ಯಕ್ತಿ ಅಥವಾ ವಸ್ತುಗಳ ಕುರಿತು ಆಳವಾದ ಅಸೂಯೆ ಆತನಲ್ಲಿ ತಲೆದೋರುತ್ತದೆ. ಈ ಅಸೂಯೆಯ ಗುರಿಯು ತನ್ನಲ್ಲಿರುವ ಆ ಕುಂದು ಕೊರತೆಯನ್ನು ಹೋಗಲಾಡಿಸಿಕೊಂಡು ಹೆಗ್ಗಳಿಕೆಯನ್ನು ಪಡೆಯುವುದೇ ಆಗಿದೆ. ಆತನು ತನ್ನ ಕಲ್ಪನೆಯಿಂದ ನಿರ್ಮಿಸಿಕೊಂಡು ಈ ಗುರಿಯನ್ನು ಸಮರ್ಥಿಸುವ ಅಥವಾ ಅದನ್ನು ಸಾಧಿಸಲು ಸಮರ್ಥಪಡಿಸುವ ಭಾವನೋದ್ದೀಪನವು ಕನಸುಗಳಲ್ಲಿ ನಡೆಯುತ್ತದೆ. ಹೀಗೆ ಕನಸಿನ ಮೂಲಕ ಆ ವ್ಯಕ್ತಿಯು ಆತ್ಮವಂಚನೆಯನ್ನು ಮಾಡಿಕೊಳ್ಳುವುದುಂಟು. ಕೆಲವೊಂದು ಭಾವಾಭಾಸಗಳಲ್ಲಿ ಕಲ್ಪನಾ ವಿಲಾಸಗಳ ಬಲೆಯಲ್ಲಿ ಸಿಕ್ಕಿ ಬೀಳುವುದುಂಟು. ಹೀಗೆ ಮನುಷ್ಯನು ಜೀವನಯಾತ್ರೆಯಲ್ಲಿ ಮೇಲ್ಮೆಯ ತನ್ನ ಗುರಿಯನ್ನು ಸಾಧಿಸಲು ಅವಶ್ಯಕವಾದ ಭಾವನೆಯ ಒಂದು ವಾತಾವರಣವನ್ನು ಯಾವಾಗಲೂ ನಿರ್ಮಿಸಿಕೊಳ್ಳುತ್ತಿರುತ್ತಾನೆ.

## ಕನಸುಗಳ ಅರ್ಥ ಮಾಡುವ ರೀತಿ

ಕನಸುಗಳ ಅರ್ಥ ಮಾಡುವ ವಿಧಾನವು ಆವುದು ? ನೆನಪಿಡಬೇಕಾದ ಮೊದಲನೆಯ ಸಂಗತಿಯೆಂದರೆ : ಕನಸು ವ್ಯಕ್ತಿಯ ಪ್ರತಿಭಾಶಕ್ತಿಯ ಅಂಶವಿರುತ್ತದೆ. ಪ್ರತಿಭೆಯು ಕನಸಿನಲ್ಲಿ ತನ್ನ ರಚನಾಶಕ್ತಿಯ ಬಲದಿಂದ ಸುಸಂಬದ್ಧವಾದ ಒಂದು ಘಟನೆಯನ್ನು ನಿರ್ಮಿಸುತ್ತದೆ. ಈ ಘಟನೆಗಳಲ್ಲಿ ನಿಮಿತ್ತರೂಪವಾಗಿ ಆಯ್ದುಕೊಂಡ ಅನುಭವದ ಅಂಶಗಳು, ಆತನ ಮನಸ್ಸನ್ನು ವ್ಯಗ್ರಗೊಳಿಸುತ್ತಿರುವ ಕೆಲವೊಂದು ಸಂಗತಿಗಳನ್ನೇ ಸೂಚಿಸುತ್ತವೆ. ಸಾಮಾನ್ಯವಾಗಿ ಸಾವಿನ ಭೀತಿಯುಳ್ಳ ವ್ಯಕ್ತಿಗೆ ಕನಸಿನಲ್ಲಿ ಸತ್ತ ಮನುಷ್ಯನೇ ಕಾಣಿಸಿಕೊಂಡು ಮಾತಾಡುತ್ತಾನೆ. ಹೀಗೆ ಕನಸನ್ನು

ಹೆಣೆಯುಲಿಕ್ಕೆ ಬಳಸಿಕೊಂಡ ಅನುಭವದ ಅಂಶಗಳು ನಮ್ಮ ಮನೋವ್ಯಗ್ರತೆಯ ನಿಟ್ಟು-ನೆಲೆಗಳನ್ನು ಹೇಳುತ್ತವೆ. ನಮ್ಮ ಮನಸ್ಸು ಯಾವ ದಿಕ್ಕಿನಲ್ಲಿ ಸಾಗಿದೆ ಯೆಂಬುದರ ಸುಳಿವು, ಕನಸುಗಳಿಂದ ಗೊತ್ತಾಗುತ್ತದೆ.

ಒಬ್ಬ ವಿವಾಹಿತ ಗೃಹಸ್ಥನು ಒಂದು ಕನಸು ಕಂಡನು. ಆತನಿಗೆ ಮೂರನೆದೊಂದು ಮಗು ಆಯ್ತು. ಅದು ಹೇಗೋ ಕಾಣೆಯಾಗಿ ಮರಳಿ ಸಿಕ್ಕಲೇ ಇಲ್ಲ. ಆಗ ಸಿಟ್ಟಾಗಿ ತನ್ನವಳು ಸರಿಯಾಗಿ ರಕ್ಷಿಸದೇ, ಲಕ್ಷಿಸದೇ ಇದ್ದುದರಿಂದ ಹೀಗಾಯಿತೆಂದು, ಆತನು ಹೆಂಡತಿಯನ್ನು ಬೈದನು. ಇನ್ನು ಈ ಕನಸಿನ ಗುಟ್ಟೇನು ? ಆತನ ಮೊದಲ ಕತೆ ಹೀಗಿದೆ. ಆತನಿಗೆ ಕುಟುಂಬ ಸುಖವಿದ್ದಿಲ್ಲ. ಎರಡು ಮಕ್ಕಳಿದ್ದರೂ, ಹೆಂಡತಿಯು ಮಕ್ಕಳ ಆರೈಕೆಯಲ್ಲಿ ಸಾಕಷ್ಟು ಮನಸ್ಸು ಹಾಕದೆ ಉಳಿದ ಸಂಗತಿಗಳಲ್ಲಿಯೇ ತೊಡಗಿರುವಳೆಂದು, ಆತನು ಯಾವಾಗಲೂ ನೊಂದು ಬೆಂದವ ನಾಗಿದ್ದನು. ಹೆಂಡತಿಯನ್ನು ಇದಕ್ಕಾಗಿ ಆಗಾಗ ಟೀಕಿಸಿ ತಿದ್ದಲೂ ಪ್ರಯತ್ನಿಸಿದ್ದನು.

ಈ ಕನಸು ಆತನ ಮನೋಗತಿಯ ದಿಕ್ಕನ್ನು ತೋರಿಸುತ್ತದೆ. ಹೆಂಡತಿಯ ಅಲಕ್ಷದಿಂದ ತನ್ನ ಮಕ್ಕಳಲ್ಲಿ ಯಾವುದಾದರೊಂದು ಮಗುವನ್ನು ಕಳಕೊಳ್ಳ ಬೇಕಾದೀತೆಂದು ಆತನಿಗೆ ಯಾವಾಗಲೂ ಅನಿಸುತ್ತಿತ್ತು. ಆದರೂ ಮಕ್ಕಳ ಮೇಲಿನ ಅಕ್ಕರತೆಯ ಮೂಲಕ ಈಗಣ ಜೀವಂತ ಮಕ್ಕಳಲ್ಲಿಯ ಒಂದನ್ನೂ ಕಳೆದುಕೊಳ್ಳಲು ಕನಸಿನಲ್ಲಿಯೂ ಈತನ ಮನಸು ಒಪ್ಪಲಿಲ್ಲ ! ಅದಕ್ಕಾಗಿ ಕನಸಿ ನಲ್ಲಿ ಮೂರನೆಯ ಮಗುವನ್ನೊಂದು ಪಡೆದನು. ಅದನ್ನು ಕಳೆದುಕೊಂಡನು ! ತನ್ನ ಭೀತಿಯ ಸಫಲಗೊಳಿಸಿದನು. ಹೆಂಡತಿಗೆ ಶಿಕ್ಷಿಸಿದನು.

ಇದರಲ್ಲಿ ಇನ್ನೊಂದು ಸಂಗತಿಯೂ ಅಡಕವಾಗಿದೆ. ತನ್ನ ಇದ್ದ ಮಕ್ಕಳಲ್ಲಿ ಒಂದನ್ನೂ ಅಗಲಲು ಆತನಿಗೆ ಇಷ್ಟವಿಲ್ಲ. ಇವೆರಡು ಮಕ್ಕಳನ್ನು ಹೆತ್ತುದೇ ಹೆಂಡತಿಗೆ ಸಾಕಾಗಿದ್ದು, ಅವನ್ನೂ ಅವಳು ಸಲುಹದಿರುವಾಗ ಇನ್ನೂ ಒಂದು ಹುಟ್ಟಿದರೆ ಏನು ಗತಿ ? ಎಂದು ಆತನಿಗೆ ಅನಿಸುತ್ತಿತ್ತು. ಅಂತೂ ಹುಟ್ಟಿದರೆ ಮೂರನೆಯ ಮಗುವು ಆರೈಕೆಯಿಲ್ಲದೇ ಸಾಯಬಹುದು, ಎಂಬ ಈ ಭೀತಿಯೂ ಕನಸಿನಲ್ಲಿ ವ್ಯಕ್ತವಾಗಿದೆ. 'ತನಗೆ ಇನ್ನೊಂದು ಮಗುವಾಗಬೇಕೆ ? ಬೇಡವೇ ?' ಎಂಬ ಚಿಂತೆಯೂ ಕನಸಿನ ಇತ್ಯರ್ಥದ ಇನ್ನೊಂದು ಬದಿಯಾಗಿದೆ.

ಇನ್ನು ಈ ಕನಸಿನ ಫಲಿತಾಂಶವೇನು ? ಹೆಂಡತಿಯ ವಿರುದ್ಧ ಭಾವನೆಯು ಉದ್ದಿಪ್ತವಾಗುವುದೇ ಫಲ. ಯಾವ ಮಗುವನ್ನೂ ಆತನು ಕಳಕೊಳ್ಳಲಿಲ್ಲ. ಅವರೆ

ಮರುದಿನ ಬೆಳಕಿನಲ್ಲಿ ಏಳುವಾಗ ಮನಸ್ಸಿನ ತಾಳ್ಮೆಯನ್ನು ಮಾತ್ರ ಕಳಕೊಂಡಿದ್ದನು. ಹೆಂಡತಿಯನ್ನು ಟೀಕಿಸುವ ವಿರೋಧಿ ವೃತ್ತಿಯನ್ನು ಹೆಚ್ಚಿಸಿಕೊಂಡನು ! ಕನಸುಗಳೂ ಒಂದು ಬಗೆಯ ಅಮಲು. ಸ್ವಸ್ಥವಾಗಿ ಮಲಗಿದ್ದವರು ಏಳುವಾಗ ಅಮಲೇರಿ, ತಲೆ ತಿರುಗುವವರಂತೆ ಆಗಲು ಕನಸುಗಳೇ ಕಾರಣವಾಗುತ್ತವೆ. ಕನಸಿಗಾಗಿ ಆಯ್ದುಕೊಂಡ ಸನ್ನಿವೇಶ ಪ್ರಸಂಗಗಳೂ ಆ ವ್ಯಕ್ತಿಯ ಹೆಗ್ಗರಿಮೆಗೆ ಪುಟ ಕೊಡುವಂತಹವೇ ಆಗಿರುತ್ತವೆ. ಈ ಕನಸಿನಲ್ಲಿ ಮಕ್ಕಳ ಜೋಪಾನದಲ್ಲಿ ತಾನು ಹೆಂಡತಿಗಿಂತ ಹೆಚ್ಚಿನವನೆಂಬ ಹೆಗ್ಗರಿಮೆಯು ಸ್ಪಷ್ಟವಾಗಿ ಗೋಚರವಾಗುತ್ತದೆ.

## ಕನಸಿನ ಗುರಿ

ಹೀಗೆ ಕನಸುಗಳ ಹುರುಳನ್ನು ತಿಳಿದುಕೊಳ್ಳುವ ಆಧುನಿಕ ಶಾಸ್ತ್ರೀಯ ಪದ್ಧತಿಯು ಆರಂಭವಾಗಿ ಸುಮಾರು ನಾಲ್ವತ್ತು ವರ್ಷಗಳಾದುವು. ಚಿಕ್ಕಂದಿನ ಕಾಮವಾಸನೆಯ ಸಂತೃಪ್ತಿಯನ್ನು ಕನಸಿನಲ್ಲಿ ಪಡೆಯುತ್ತೇವೆ ಎಂದು ಫ್ರಾಯಿಡನು ಮೊದಲು ನಂಬಿದ್ದನು. ಆದರೆ ಈ ಬಗೆಯ ಕಾಮನಾ ಪೂರ್ತಿಯೇ ಕನಸುಗಳ ಸ್ವರೂಪವೆಂದು ಹೇಳುವಲ್ಲಿ ಅತಿ ವ್ಯಾಪ್ತಿದೋಷವಿದೆ. ಪ್ರತಿಯೊಂದು ಕನಸೂ ಕೆಲವೊಂದು ಇಚ್ಛಾಪೂರ್ತಿಗಾಗಿಯೇ ಕಾಣಿಸಿಕೊಂಡಿತೆಂದು ಹೇಳಬೇಕಾದೀತು. ಆದುದರಿಂದ ಕನಸುಗಳೆಂದರೆ ಕಾಮನಾ ಪೂರ್ತಿಯಲ್ಲ. ಎಚ್ಚರಿದ್ದಾಗ ಆಗಲಿ, ಮಲಗಿಕೊಂಡಾಗ ಆಗಲಿ ನಮ್ಮ ಮನೋಜೀವನವೆಲ್ಲ ಏ ಕ ಮು ಖ ವಾ ಗಿ ಅಖಂಡವಾಗಿ ನಮ್ಮ ಜೀವನದಲ್ಲಿ ಸಾಧಿಸಬೇಕೆಂದಿರುವ ಹೆಗ್ಗುರಿಯ ಕಡೆಗೆ ಸಾಗಿರುತ್ತದೆ. ಬಾಳಿನ ಹೆಗ್ಗುರಿಯನ್ನು ಸಾಧಿಸುವುದಕ್ಕಾಗಿ ಜಾಗೃತ ಸ್ಥಿತಿಯಲ್ಲಿ ನಡೆದ ಚಟುವಟಿಕೆಗಳಿಗೆ ಪೋಷಕವಾದ ಭಾವನೆಗಳನ್ನು ಉದ್ದೀಪನಗೊಳಿಸುವುದೇ ಕನಸುಗಳ ಮುಖ್ಯ ಕಾರ್ಯವು. ಕನಸುಗಳು, ಈ ಕಾರ್ಯವನ್ನು ಸಾಧಿಸಲು, ಮಾನವನು ತಾನಾಗಿಯೇ ನಿರ್ಮಿಸಿಕೊಂಡ ಒಂದು ಸಂಮೋಹನಾಸ್ತ್ರವಿದ್ದಂತೆ. ನೇರವಾಗಿ ಹೇಳಿದ ಮಾತಿಗಿಂತ ಸುತ್ತು ಮಾತು, ಪದರುನುಡಿ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಸತ್ಯವನ್ನು ಇದ್ದಕ್ಕಿದ್ದಂತೆ ಹೇಳಿದರೆ ರುಚಿಸದು. ಅದನ್ನು ಉಪಮಾ, ಉತ್ಪ್ರೇಕ್ಷಾದಿ ಅಲಂಕಾರಗಳಿಂದ ಅಂದಗೊಳಿಸಿದರೆ ಕೇಳುವವನು ಮರುಳಾಗುವನು. ಮಂದಿಯನ್ನು ಮರುಳು ಮಾಡುವ ಈ ಮಾಟಗಾರಿಕೆಯು ಮಾತಾಳಿಗಳಿಗೂ ಬಾಯ್ಬಡಕರಿಗೂ ಚೆನ್ನಾಗಿ ಸಾಧಿಸಿರುತ್ತದೆ.

ಕವಿಗಳೂ ಈ ಮಾಟಗಾರಿಕೆಯಲ್ಲಿ ಚೆನ್ನಾಗಿ ಪಳಗಿದವರಾಗಿರುತ್ತಾರೆ. ಅವರ

ಅವರ ಈ ಮಾಟವು ಲೋಕಕ್ಕೆ ಆನಂದದಾಯಕವೂ, ಉದ್ಬೋಧಕವೂ ಆಗಿರುತ್ತದೆ. ಊಹೆ-ಉತ್ಪ್ರೇಕ್ಷೆಗಳ ಇಂದ್ರಜಾಲವನ್ನು ಬೀರಿ, ಕಾವ್ಯಕಲ್ಪನೆಯ ಇಂದ್ರಧನುಷ್ಯವನ್ನು ತೋರಿ ಅವರು ನಮ್ಮ ಮನವನ್ನು ರಂಜಿಸಿ ಮರುಳು ಮಾಡುವರು. ಅವರ ಈ ಕೈವಾಡದಿಂದ ಅವರ ಮಾಟಕ್ಕೆ ಮರುಳಾದವನು ವಾಸ್ತವದಿಂದ ಬಹುದೂರ ಹೋಗಿ ಹಲವು ಬಾರಿ ಸತ್ಯಕ್ಕೆ ಪರಾಙ್ಮುಖ ನಾಗುತ್ತಾನೆ. ಕಾವ್ಯೋನ್ಮಾದದ ಒಂದು ಹುಚ್ಚು ಹುರುಪು, ಹುಸಿಹುಮ್ಮಸವು ಮಾತ್ರ ಅವನಲ್ಲಿ ಉಂಟಾಗುವುದು ನಿಜ.

ಕೆಲವರಿಗೆ ತಮ್ಮ ಮನೋಗತವನ್ನು ಸರಿಯಾಗಿ ವಿವರಿಸಿ, ವಿಶದೀಕರಿಸಿ ಹೇಳು ವುದಕ್ಕಾಗದೆ ಅವರು ಅಂಥ ಸಂದರ್ಭದಲ್ಲಿ ಉಪಮೆಗಳನ್ನೂ ದೃಷ್ಟಾಂತಗಳನ್ನೂ ಉಪಯೋಗಿಸುತ್ತಾರೆ. ಕನಸುಗಳಲ್ಲಿಯೂ ಇದೇ ಬಗೆಯ ಕೈವಾಡವೇ ಅನುಭವಕ್ಕೆ ಬರುವುದು. ತಮ್ಮ ಉನ್ಮಾದವನ್ನು ಉದ್ದೀಪಿಸಿಕೊಳ್ಳುವ ಕಲಾಮಯವಾದ ಉಪಾಯವಿದು.

ತನಗೆ ಬಿದ್ದ ಕನಸಿನ ಉಗಮ, ಉದ್ದೇಶಗಳ ಸಂಪೂರ್ಣ ಮನವರಿಕೆಯಾದರೆ ತಿರುಗಿ ಆ ಕನಸು ಆತನಿಗೆ ಕಾಣಿಸಿಕೊಳ್ಳಲಾರದು. ಏಕೆಂದರೆ ಕನಸಿನಿಂದ ಭಾವನೆಗಳನ್ನು ಉದ್ದೀಪನಗೊಳಿಸಿಕೊಳ್ಳುವುದಕ್ಕೆ ಆತನು ಸಿದ್ಧನಿರುವುದಿಲ್ಲ. ಆಗ ಕನಸಿನ ಉದ್ದೇಶವೇ ವ್ಯರ್ಥವಾಗುವುದು. ಆದರೆ ಕನಸಿನ ಈ ಮನವರಿಕೆಯು ನಿಜವಾಗಿಯೂ ಪರಿಣಾಮಕಾರಿಯಾಗಬೇಕಾದರೆ, ಅದರಿಂದ ಉದ್ದೀಪಿತವಾಗುವ ಭಾವನೆಯ ಬಗ್ಗೆ ನಮ್ಮ ಮನೋವೃತ್ತಿಯೇ ಸಂಪೂರ್ಣ ಪಲ್ಲಟಿಸಬೇಕು.

### ಕನಸು ಕಾಣದವರುಂಟೆ ?

ಕೆಲವರಿಗೆ ಕನಸುಗಳೇ ಕಾಣದಿರುವ ಕಾರಣವೇನೆಂಬುದು ಈಗ ಸ್ಪಷ್ಟವಾಗುವುದು. ಆತ್ಮವಂಚನೆಯನ್ನು ಮಾಡಿಕೊಳ್ಳುವ ಅವಶ್ಯಕತೆ ಇಂಥವರಿಗೆ ಇರುವುದಿಲ್ಲ. ಚಟುವಟಿಕೆ ಚಲನವಲನಗಳೊಂದಿಗೆ ಸಂಯುಕ್ತಿಕ ಸಮಂಜಸತೆಯೊಂದಿಗೆ ಅವರ ಬಾಳು ಅಷ್ಟೊಂದು ಅಂಟಿಕೊಂಡಿರುತ್ತದೆ. ಬದುಕಿನ ಇಕ್ಕಟ್ಟು ಬಿಕ್ಕಟ್ಟುಗಳನ್ನು ಅವರು ಎದೆಗಾರಿಕೆಯಿಂದ ಎದುರಿಸುತ್ತಾರೆ. ವಾಸ್ತವ, ವ್ಯಾವಹಾರಿಕ ಜೀವನದಲ್ಲಿ ಬಗೆಹರಿಯಲಾರದ ಮಾನಸಿಕ ತೊಡಕುಗಳು ಅಂಥವರ ಜೀವನದಲ್ಲಿ ತೀರ ಕಡಿಮೆ. ಅದ್ದರಿಂದ ಅವುಗಳಿಗಾಗಿ ವಿಶಿಷ್ಟ ಉನ್ಮಾದವನ್ನು ಉದ್ರೇಕಿಸಿಕೊಳ್ಳುವ-ಭಾವನೆಯನ್ನು ಉದ್ದೀಪಿಸಿಕೊಳ್ಳುವ ಅವಶ್ಯಕತೆಯೂ ಅವರಿಗೆ ಅಷ್ಟಿಲ್ಲ. ಹೀಗಾಗಿ,

ಅವರು ಕನಸು ಕಾಣಿಸಿಕೊಳ್ಳುವುದೂ ಕಡಿಮೆ. ಕಂಡರೂ ನೆನಪಿರುವುದು ಅದಕ್ಕೂ ಕಡಿಮೆ.

ಕೆಲಸಾರೆ ಒಂದೇ ಕನಸು ತಿರುತಿರುಗಿ ಕಾಣುವುದೇಕೆ ? ಇದೊಂದು ಸೋಜಿಗದ ಸಂಗತಿಯಾಗಿದೆ. ಇದಕ್ಕೆ ನಿಶ್ಚಿತವಾದ ಉತ್ತರವು ಇಲ್ಲ. ಆದರೆ ಇಷ್ಟೊಂದು ನಿಜ. ಅಂಥ ಮತ್ತೆ ಮತ್ತೆ ಕಾಣುವ ಕನಸುಗಳಲ್ಲಿ ನಮ್ಮ ಬಾಳಿನ ಬಗೆಯು ನಿಃಸಂದಿಗ್ಧವಾಗಿ ಹೆಚ್ಚು ನಿಚ್ಚಳವಾಗಿ ಮೂಡಿದ್ದುದು ಕಂಡು ಬರುತ್ತದೆ. ಬಹಳ ಹೊತ್ತಿನ ವರೆಗಿನ ಕನಸುಗಳು ನಮ್ಮ ಗೊತ್ತುಗುರಿಗಳ ಅನಿಶ್ಚಿತತೆಯನ್ನು ಸೂಚಿಸುತ್ತವೆ. ನಿಶ್ಚಿತಾರ್ಥದ ಕನಸುಗಳು ಚಿಕ್ಕವೇ ಇರುತ್ತವೆ. ಕೆಲಬಾರಿ ಅಚ್ಚುಕಟ್ಟಾದ ಒಂದೇ ಚಿತ್ರವನ್ನು ಅಥವಾ ಕೆಲವೇ ಮಾತುಗಳನ್ನು ಒಂದು ಕನಸು ನಮ್ಮ ಮನದ ಮೇಲೆ ಮೂಡಿಸುತ್ತದೆ. ಈ ಕನಸಿಗನು ಆತ್ಮವಂಚನೆಗಾಗಿ ತೀರ ಸುಲಭೋಪಾಯವನ್ನು ಹುಡುಕುತ್ತಿರುತ್ತಾನೆ.

ಇನ್ನು ಕೊನೆಯದಾಗಿ ನಿದ್ದೆಯ ಪ್ರಶ್ನೆಯನ್ನು ಪರಿಶೀಲಿಸಿ ಈ ಸ್ವಪ್ನ ಮೀಮಾಂಸೆಯನ್ನು ಮುಗಿಸೋಣ. ನಿದ್ದೆಯು ಎಚ್ಚರದ ವಿರುದ್ಧವಾದ ಅವಸ್ಥೆ ಯೆಂದು ಹಲವರ ಗ್ರಹಿಕೆಯಿದೆ. ನಿದ್ದೆಯು ಸಾವಿನ ಸೋದರಿಯೆಂದೂ ಭಾವಿಸುವುದುಂಟು. ಆದರೆ ಇವೆಲ್ಲ ವಿಚಾರಗಳು ಯಥಾರ್ಥವಲ್ಲ. ನಿದ್ದೆಯು ಎಚ್ಚರದ ವಿರುದ್ಧ ಅವಸ್ಥೆಯಲ್ಲ. ಅದು ಎಚ್ಚರದ ಬರೇ ತಾರತಮ್ಯದ ಒಂದು ಅಂಶ. ಎಚ್ಚರ ಎಂದರೆ ಹೆಚ್ಚು ಜಾಗೃತಿ, ನಿದ್ರೆಯೆಂದರೆ ಜಾಗೃತಿಯ ಅಜಾಗೃತಿ. ಎಂದರೆ ಕಡಿಮೆ ಎಚ್ಚರ ಎಂದರ್ಥ. ಬಾಳಿನ ಅಖಂಡತೆ, ಏಕಸೂತ್ರತೆಗೆ ಆಧಾರವಾದ ಸ್ವಯಂಪ್ರಜ್ಞೆಯು ನಿದ್ದೆ, ಎಚ್ಚರಗಳನ್ನು ಪೋಣಿಸುವ ಸೂತ್ರವಾಗಿದೆ. ನಿಜವಾಗಿಯೂ ನಿದ್ದೆಯು ಎಚ್ಚರದ ಅವಸ್ಥೆಯಿಂದ ವಿರುದ್ಧವಾದುದಾದರೆ ಜಾಗೃತ ಸುಷುಪ್ತಿಗಳೊಳಗಿನ ಜೀವನವು ಅಸಂಬದ್ಧವಾಗುವುದು. ಆದರೆ ನಿಜವಾಗಿಯೂ ಜಾಗೃತಿಯೊಳಗಿನ ನಾನೂ, ನಿದ್ದೆಯ ನಾನೂ ಬೇರೆಯಲ್ಲ. ನಿದ್ದೆಯಲ್ಲಿಯೂ ನಾವು ವಿಚಾರ ಮಾಡುತ್ತೇವೆ; ಕೇಳುತ್ತೇವೆ. ಕಿವಿಗೊಡುತ್ತೇವೆ. ಎಚ್ಚರದಲ್ಲಿಯ ವಿಚಾರ, ವಿಮರ್ಶೆಗಳು ಆಟಪಾಟಗಳು ಸಾಮಾನ್ಯವಾಗಿ ನಿದ್ದೆ ಯಲ್ಲಿಯೂ ಮುಂದರಿಯುತ್ತಿರುತ್ತವೆ. ಬೀದಿಯ ಸದ್ದು ಕಿವಿಯ ಮೇಲೆ ಅಪ್ಪಳಿಸುತ್ತಿದ್ದರೂ ಗಾಢವಾಗಿ ನಿದ್ದೆ ಮಾಡುವ ತಾಯಿಯು, ಮಗ್ಗುಲಿನ ಮಗುವು ನಸುವೇ ಉಲುಕಿದರೂ ಒಡನೆಯೆ ದಿಗಿಲುಗೊಂಡು ಕಣ್ಣು ತೆರೆಯುತ್ತಾಳೆ. ಈ ಉದಾಹರಣೆಯು ಯಾತರ ದ್ಯೋತಕ ? ನಮ್ಮ ಆಸಕ್ತಿಗಳು ನಿದ್ದೆಯಲ್ಲಿಯೂ ನಿಜವಾಗಿ ಜಾಗೃತವಾಗಿ ಇರುತ್ತವೆ. ಹಾಸುಗೆಯ ಪರಿಮಿತಿಯಲ್ಲಿಯೇ ಉಳಿದು

ನಿದ್ರಿಸಬೇಕೆಂಬ ಅರಿವು ನಿದ್ದೆಯಲ್ಲಿ ಎಲ್ಲಿಂದ ಬಂತು ?

ಹೀಗೆ ಎಚ್ಚರಿರಲಿ, ನಿದ್ದೆಯಿರಲಿ, ಅದರಲ್ಲಿ ನಮ್ಮ ಇಡಿಯಾದ, ಅಖಂಡವಾದ ವ್ಯಕ್ತಿತ್ವವು ಅನುಸ್ಯೂತವಾಗಿದೆ. ಈ ಮಾತು ನಿದ್ದೆಯಂತೆ ಸಂಮೋಹನೆ (hypnotism) ಗೂ ಅನ್ವಯಿಸುತ್ತದೆ. ಸಂಮೋಹನೆಯು ಕೃತ್ರಿಮವಾಗಿ ಇನ್ನೊಬ್ಬನಲ್ಲಿ ಒತ್ತಾಯದಿಂದ ತರಿಸಿದ ನಿದ್ದೆ. ಎಚ್ಚರಿದ್ದಾಗ ನೆನಪಾಗದ ಹಿಂದಿನ ನೆನಹುಗಳನ್ನೂ ವಿಚಾರಗಳನ್ನೂ ಅರಿತುಕೊಳ್ಳಲು ಮನೋವೈದ್ಯರು ಕೆಲವರು ಸಂಮೋಹನೆಯ ಸಾಧನವನ್ನು ಉಪಯೋಗಿಸುತ್ತಾರೆ. ಮರೆತು ಹೋದ, ಅರಿವಿನಾಳದಲ್ಲಿ ಹುಗಿದುಕೊಂಡ ಹಲವು ಹಳೇ ನೆನಹುಗಳನ್ನು ಗೊತ್ತುಹಚ್ಚಿ, ಮನಸಿನ ತೊಡಕು ಕಗ್ಗಂಟುಗಳನ್ನು ಬಿಡಿಸಿ ಬಗೆಹರಿಸಲು ಇದರಿಂದ ಅನುಕೂಲ ವಾಗುವುದು.

ಸಂಮೋಹನೆಯನ್ನು. ಮನೋವ್ಯಾಧಿಯ ಉಪಚಾರ ಪದ್ಧತಿಯಲ್ಲಿ ಉಪಯೋಗಿಸುವುದು ಬಹಳ ಅಪಾಯಕಾರಕವಾಗಿದೆ. ಏಕೆಂದರೆ ಸಂಮೋಹಿತರು ಸಾಮಾನ್ಯವಾಗಿ ಸೇಡುತೀರಿಸಿಕೊಳ್ಳುವ ಸ್ವಭಾವದವರಾಗುತ್ತಾರೆ. ಇವರ ವ್ಯಾಧಿಯು ಮೊದಲು ಅಳಿದು ಹೋದಂತೆ ಎನಿಸಿದರೂ ಅವರು ತಮ್ಮ ಬಾಳಿನ ಬಗೆಯನ್ನು ನಿಜವಾಗಿಯೂ ತಿದ್ದಿಕೊಂಡಿರುವುದಿಲ್ಲ. ಸಂಮೋಹನೆಯು ಒಂದು ಅಮಲು. ಮೆಚ್ಚು ಮದ್ದು. ಅದು ಹುಚ್ಚುಮದ್ದಾಗುವ ಭೀತಿಯೂ ಇದೆ. ಅದರ ಉಪಯೋಗವು ಅನರ್ಥಕಾರಿ ಹಾಗೂ ತಾತ್ಪೂರ್ತಿಕ. ಕ್ಷಣಿಕ. ಅದರಿಂದ ವ್ಯಕ್ತಿಯ ಪ್ರಕೃತಿಯು, ನಿಜವಾಗಿ ಸುಧಾರಿಸುವುದಿಲ್ಲ. ವ್ಯಕ್ತಿಯ ಮನೋ ವ್ಯಾಧಿಯನ್ನು ಗುಣಪಡಿಸಬೇಕಾದರೆ, ಆತನಲ್ಲಿ ಧೈರ್ಯವನ್ನೂ ಆತ್ಮವಿಶ್ವಾಸವನ್ನೂ ತನ್ನ ತಪ್ಪಿನ ಕುರಿತು ಹೆಚ್ಚಿನ ತಿಳುವಳಿಕೆಯನ್ನೂ ಹುಟ್ಟಿಸತಕ್ಕದ್ದು. ಇದುವೇ ನಿಜವಾದ ಸಹಾಯ. ಸರಿಯಾದ ಉಪಾಯ. ಸಂಮೋಹನದಲ್ಲಿ ಈ ಮುಖ್ಯ ಉದ್ದೇಶವು ಈಡೇರುವುದು ಸಾಧ್ಯವೇ ಇಲ್ಲ. ಆದುದರಿಂದ ತೀರ ಅನಿವಾರ್ಯ ಪ್ರಸಂಗಗಳ ಹೊರತು, ಸಂಮೋಹನೆಯನ್ನು ಉಪಚಾರ ಪದ್ಧತಿಯಲ್ಲಿ ಉಪಯೋಗಿಸತಕ್ಕದ್ದಲ್ಲ. ●

# ೮ ಮಕ್ಕಳ ಸಮಸ್ಯೆಗಳು ಮತ್ತು ಶಿಕ್ಷಣವು

ನಮ್ಮ ಮಕ್ಕಳಿಗೆ ಏನು ಕಲಿಸಬೇಕು ? ಹೇಗೆ ಕಲಿಸಬೇಕು ? ಎಂಬುದು ಅತ್ಯಂತ ಮಹತ್ವದ ವಿಚಾರವಾಗಿದೆ. ಇದರಷ್ಟು ಮಹತ್ವದ ಪ್ರಶ್ನೆಯು ಬೇರೆ ಅವುದೂ ಇರಲಾರದು. ಏಕೆಂದರೆ ಮಕ್ಕಳ ಮೇಲೆಯೇ ಮನೆತನ ; ಮಕ್ಕಳ ಮೇಲೆಯೇ ರಾಷ್ಟ್ರವು ಸಂಪೂರ್ಣವಾಗಿ ಅವಲಂಬಿಸಿಿದೆ. ಈ ವಿಷಯಕ್ಕೆ ವ್ಯಕ್ತಿ ಮನೋವಿಜ್ಞಾನವು ಬಹಳ ಸೇವೆ ಸಲ್ಲಿಸಿದೆ. ಶಿಕ್ಷಣವೆಂದರೆ ವ್ಯಕ್ತಿವಿಕಾಸ. ಮನೆಯಲ್ಲಿ ಆಗಲಿ ಶಾಲೆಯಲ್ಲಿ ಆಗಲಿ, ಮಕ್ಕಳ ವ್ಯಕ್ತಿತ್ವವನ್ನು ಸ್ಪಷ್ಟಪಡಿಸಿ, ಪುಷ್ಟಗೊಳಿಸಿ, ಅವರಿಗೆ ಸರಿಯಾದ ನಿಟ್ಟಿನಲ್ಲಿ ಬೆಳೆಯಿಸುವ ಪ್ರಯತ್ನವೇ ಶಿಕ್ಷಣ. ಶಿಕ್ಷಣವೆಂದರೆ ಮನಸಿಗೆ ಸಂಬಂಧಿಸಿದ ವಿಷಯ ಆದ್ದರಿಂದ ಶಿಕ್ಷಣ ಪದ್ಧತಿಯ ಭವ್ಯವಾದ ಮಂದಿರದ ಅಡಿಗಲ್ಲು ಮಾನಸ ಶಾಸ್ತ್ರವೇ ಆಗಿದೆ. ವ್ಯಕ್ತಿ ಮನೋವಿಜ್ಞಾನವನ್ನು ಅರಿಯದವರು ಶಿಕ್ಷಕರಾಗುವುದಕ್ಕೇ ಅಯೋಗ್ಯರು, ಅಷ್ಟೇ ಏಕೆ, ಲೋಕದಲ್ಲಿ ಹೇಗೆ ಬಾಳಿ ಬದುಕಬೇಕೆಂಬುದರ ಗುಟ್ಟು ತಿಳಿಯಬೇಕಾದರೆ ಮಾನಸಶಾಸ್ತ್ರಕ್ಕೇ ಶರಣು ಹೋಗಬೇಕು.

ಮುಂದೆ ಜೀವನದಲ್ಲಿ ಎದುರಿಸಬೇಕಾದ ಪ್ರಶ್ನೆಗಳನ್ನು ಬಿಡಿಸಲು ಮಕ್ಕಳು ಸಮರ್ಥರಾಗುವಂತೆ ಶಿಕ್ಷಣದ ಸ್ವರೂಪವಿರಬೇಕು ಶಿಕ್ಷಣವು ರಾಷ್ಟ್ರೀಯ ಹಾಗೂ ಸಾಮಾಜಿಕ ಜೀವನದ ಜೀವನಕ್ಕೆ ಪೋಷಕವಾಗಿರಬೇಕು. ರಾಷ್ಟ್ರೀಯತ್ವದ ಆದರ್ಶವನ್ನು ಇಟ್ಟುಕೊಂಡು ಮಕ್ಕಳಿಗೆ ಶಿಕ್ಷಣವನ್ನು ಕೊಡದಿದ್ದರೆ. ಮುಂದಿನ ಜೀವನದಲ್ಲಿ ಅವರು ಅರಾಷ್ಟ್ರೀಯರೂ ಸಾಮಾಜಿಕ ಭಾವನಾರಹಿತರೂ ಆಗುವರು. ಸಮಾಜದ ಘಟಕವಾಗಿ ಹೊಂದಿಕೊಂಡು ಬಾಳಲಾರರು. ಇನ್ನು ಕ್ರಮವಾಗಿ ರಾಷ್ಟ್ರೀಯ ಆದರ್ಶಗಳೇ ಬದಲಾಗಬಹುದು ಈ ಬದಲಾವಣೆಯು ಕ್ರಾಂತಿಯಿಂದ ಆಕಸ್ಮಿಕವಾಗಿ ಒದಗಬಹುದು, ಇಲ್ಲವೇ ಮೆಲ್ಲಮೆಲ್ಲನೆ ಮಾರ್ಪಡಬಹುದು. ಆದರೂ ಎಲ್ಲ ಬದಲಾವಣೆಗಳೊಳಗಿಂದಲೂ ಬದಲಾಗದಂತಹ ಕೆಲವೊಂದು ಸಾಮಾನ್ಯವಾದ ಶಾಶ್ವತ ತತ್ವಗಳನ್ನು ತಳಹದಿಯಾಗಿ ಇರಿಸಿಕೊಳ್ಳಬೇಕು. ಮತ್ತು ರಾಷ್ಟ್ರೀಯ ಎಲ್ಲ ಸ್ಥಿತ್ಯಂತರಗಳೊಡನೆಯೂ ಹೊಂದಿಕೊಂಡು ಹೋಗಲು ತಕ್ಕವರಾಗುವಂತೆ ಶಿಕ್ಷಣವನ್ನು ಕೊಡಬೇಕು.

## ಶಿಕ್ಷಣ ಪದ್ಧತಿಯ ಇತಿಹಾಸ

ಐತಿಹಾಸಿಕದೃಷ್ಟಿಯಿಂದ ನೋಡಿದರೆ, ಶಿಕ್ಷಣದ ಗೊತ್ತು ಗುರಿಗಳು ಕಾಲಕಾಲಕ್ಕೆ

ಬದಲಾದುದು ಕಂಡು ಬರುತ್ತದೆ. ಹಿಂದಕ್ಕೆ ಯುರೋಪದಲ್ಲಂತೂ ಮುಖ್ಯವಾಗಿ ಸಿರಿವಂತರ ಮಕ್ಕಳಿಗಾಗಿ ಶಾಲೆಗಳು ಸ್ಥಾಪಿಸಲ್ಪಟ್ಟವು. ಆದುದರಿಂದ ಸಿರಿವಂತಿಕೆಯ ಬಿಂಕು, ಬಿಗುವು ಶಿಕ್ಷಣ ಕ್ರಮದಲ್ಲಿ ವ್ಯಕ್ತವಾಗುತ್ತಿತ್ತು. ಉಳ್ಳವರ ಮಕ್ಕಳೇ ಅಲ್ಲಿ ಕಲಿಯತಕ್ಕವರು. ಆನಂತರ, ಶಿಕ್ಷಣದ ಹೊಣೆಯನ್ನು ಧರ್ಮಸಂಸ್ಥೆಗಳು ವಹಿಸಿ ಕೊಂಡವು. ಶಾಲೆಗಳಿಗೆ ಧಾರ್ಮಿಕ ಸ್ವರೂಪ ಬಂದಿತು. ಕೇವಲ ಭಟ್ಟರು, ಆಚಾರ್ಯರೂ, ಅಯ್ಯನವರೂ ಶಿಕ್ಷಕರಾದರು. ಮಠಗಳೇ ಶಾಲೆಗಳಾದುವು. ಇಷ್ಟರಲ್ಲಿ ರಾಷ್ಟ್ರೀಯತ್ವದ ಕಲ್ಪನೆಯು ಒಡಮೂಡಲಾರಂಭಿಸಿತು. ಬಹು ಮುಖವಾಗಿ ಬೆಳೆಯುವ ಸಾಮಾಜಿಕ ಜೀವನವು ಬಹುವಿಧವಾದ ಜ್ಞಾನವನ್ನು ಹೆಚ್ಚು ಹೆಚ್ಚ ಬೇಡಹತ್ತಿತು. ಕಲಿಸುವ ವಿಷಯಗಳು ಬೆಳೆದಂತೆ ಶಿಕ್ಷಕರ ಸಂಖ್ಯೆಯೂ ಹೆಚ್ಚಾಯಿತು. ಧರ್ಮಸಂಸ್ಥೆಗೆ ಇದನ್ನೆಲ್ಲ ನಿರ್ವಹಿಸಲು ಆಗದಾಯಿತು. ಐಗಳ ಹೊರತಾಗಿ ಬೇರೆ ಜನರನ್ನು ಶಿಕ್ಷಕರೆಂದು ತಕ್ಕೊಳ್ಳುವುದು ಅವಶ್ಯವಾಯ್ತು.

ಭಟ್ಟರು, ಆಚಾರ್ಯರು; ಅಯ್ಯನವರು, ಮುಲ್ಲಾಗಳು ಶಿಕ್ಷಕರಾಗಿದ್ದರೂ, ಅವರ ಮುಖ್ಯ ಹೊರೆ ಶಿಕ್ಷಣವೇ ಆಗಿದ್ದಿಲ್ಲ. ಇದೇ ಸ್ಥಿತಿ ಧರ್ಮಗುರುಗಳ ಹೊರತು ಬೇರೆಯವರು ಶಿಕ್ಷಕವೃತ್ತಿಯನ್ನು ಕೈಕೊಂಡಮೇಲೂ ಮೊನ್ನೆ ಮೊನ್ನೆಯವರೆಗೆ ಇತ್ತು. ಉಪಜೀವನದ ಮುಖ್ಯ ವ್ಯವಸಾಯವು ಒಂದು ಬೇರೆ ಇದ್ದು, ಇನ್ನುಳಿದ ವೇಳೆಯಲ್ಲಿ ತನಗೆ ಗೊತ್ತಿದ್ದ ನಾಲ್ಕಕ್ಷರಗಳನ್ನು ಹೇಗೂ ಕಲಿಸುವ ಪ್ರಯತ್ನ ಮಾಡತಕ್ಕ ಜನಗಳು ಅವರು. 'ದಂಡಂ ದಶಗುಣಂ ಭವೇತ್' ಎಂಬುದು, ಅಂದಿನ ಶಿಕ್ಷಣ ಪದ್ಧತಿಯ ಮೂಲ ಸೂತ್ರವಾಗಿತ್ತು ! 'ಶಿಕ್ಷೆ'ಯೆಂದರೇ ಶಿಕ್ಷಣವು ಅಂದು ! ಎರಡೂ ಸಮಾನಾರ್ಥಕ ಶಬ್ದಗಳು ! ಬಡಿಯುವುದೆಂದರೇ ಕಲಿಸುವುದು, ('ದಶವರ್ಷಾಣಿ ತಾಡಯೇತ') ಅಂದಿನ ರೀತಿ. ಮನಸಿನ ತೊಡಕುಗಳನ್ನು ಬಿಡಿಸುವ ಮಾನಸಶಾಸ್ತ್ರದ ಇಂದಿನ ರೀತಿಯು ಆಗ ಇದ್ದಿಲ್ಲವೆಂದರೆ ತಪ್ಪಾಗದು.

ಆಧುನಿಕ ಶಿಕ್ಷಣಪದ್ಧತಿಯ ಅರುಣೋದಯವು ಪೆಸ್ಟೊಲೊಝಿಯ ಕಾಲದಿಂದ ಆಯಿತು. ಶಿಕ್ಷಣದ ಲಕ್ಷ್ಯ ಲಕ್ಷಣಗಳು ಶಿಕ್ಷೆಯಿಂದ (ಹೊಡೆತದಿಂದ) ಬೇರೆ. ಎಂಬ ತತ್ತ್ವವನ್ನು ಈತನು ಸ್ಥಾಪಿಸಿದನು. ಶಿಕ್ಷಣದಲ್ಲಿ ಒಂದು ಕ್ರಮ, ಪಾಠದಲ್ಲಿ ಒಂದು ಪದ್ಧತಿಯನ್ನು ಇಡುವುದರ ಮಹತ್ತ್ವವನ್ನು ಪೆಸ್ಟೊಲೊಝಿಯು ತೋರಿಸಿ ಕೊಟ್ಟನು. ದುರ್ಬಲ ಮನಸ್ಸಿನ ಮಕ್ಕಳನ್ನು ಬಿಟ್ಟರೆ, ಉಳಿದ ಎಲ್ಲ ಮಕ್ಕಳೂ, ಸರಿಯಾಗಿ ಕಲಿಸಿದರೆ ಓದುಬರೆಯಲಿಕ್ಕೂ ಎಣಿಸಿಗುಣಿಸಲಿಕ್ಕೂ ಹಾಡಿ ಆಡಲಿಕ್ಕೂ ಕಲಿಯಬಲ್ಲರು. ಈಗಿನ ಪದ್ಧತಿಯೇ ಸರಿಯಾದ ಪದ್ಧತಿಯೆಂದು ಹೇಳುವುದು ಕಷ್ಟ. ಅನುದಿನದ ಅನುಭವ, ಸಂಶೋಧನಗಳಿಂದ ಹೆಚ್ಚುಹೆಚ್ಚು ಸರಿಯಾದ

ಪದ್ಧತಿಯು ಗೊತ್ತಾಗುತ್ತ ಹೋಗುವುದು.

ಯುರೋಪದಲ್ಲಿ ಔದ್ಯೋಗಿಕ ಸ್ಥಿತ್ಯಂತರಗಳಾದುವು. ಆರ್ಥಿಕ ಪರಿಸ್ಥಿತಿಯು ಬದಲಾಯಿತು. ಅದಕ್ಕನುಸರಿಸಿ ಸಮಾಜದ ಆದರ್ಶಗಳೂ ಮಾರ್ಪಟ್ಟವು. ಶಿಕ್ಷಣದ ಮೇಲೆಯೂ ಇದರ ಪರಿಣಾಮವು ಆಗದೆ ಉಳಿಯಲಿಲ್ಲ. ಮತ್ತು ಎಣಿಕೆಗಳನ್ನು ಬಲ್ಲ, ತಿಳುವಳಿಕೆಯ ಕೆಲಸಗಾರರ ಅವಶ್ಯಕತೆಯು ಕಾರಾಖಾನೆಗಳಲ್ಲಿ ಹೆಚ್ಚಾಯಿತು. ಶಿಶುವಿಗೊಂದು ಶಾಲೆಯೆಂಬ ಸೊಲ್ಲು ಕೇಳಬರಹತ್ತಿತು. ಸಮಾಜದಲ್ಲಿ ಅಂದು ಸಿರಿವಂತರ ಮಕ್ಕಳು, ಅಧಿಕಾರಿ ವರ್ಗ ಮತ್ತು ನೌಕರರ ವರ್ಗ ಇವರ ಬಗ್ಗೆ ಶಾಲೆಗಳು ಇದ್ದುವು. ಮಿಕ್ಕವರು ಶಾಲೆಗೇ ಕಾಲಿಡುತ್ತಿದ್ದಿಲ್ಲ. ಅಂದಿನ ರಾಷ್ಟ್ರೀಯ ಜೀವನದ ಆದರ್ಶಗಳು ಅಂದಿನ ಶಿಕ್ಷಣದಲ್ಲಿ ಪ್ರತಿಬಿಂಬಿತವಾಗಿದ್ದುವು. ಇಂದಿನ ಆದರ್ಶಗಳು ಅಂದಿನಕ್ಕಿಂತ ತೀರ ಬೇರೆಯಾಗಿವೆ. ಇಂದಿನ ಶಾಲೆಗಳಲ್ಲಿ ಮಕ್ಕಳೆಲ್ಲ ಅಲುಗದೆ, ಸದ್ದು ಮಾಡದೆ ಕೈಕಟ್ಟಿಕೊಂಡು ಶಿಕ್ಷಕನ ಎದುರು ಸಾಲಾಗಿ ಕುಳ್ಳಿರಬೇಕಾಗಿಲ್ಲ. ಇಂದಿನ ಶಿಕ್ಷಣದ ರೀತಿಯೇ ಬದಲಾಗಿದೆ. ಇಂದಿನ ಶಾಲೆಗಳೆಂದರೆ ಮಕ್ಕಳಾಟದ ತೋಟಗಳು. ಮಕ್ಕಳ ಮನಸ್ಸುಗಳೆಂದರೆ, ಬೆಳಕಿಗೆ ಮೋರೆಯೆತ್ತಿ ಎಸಳೆಸಳಾಗಿ ಒಡೆದು ಅರಳಲಿರುವ ಮುದ್ದು ಮುಗುಳಿನ ಗಿಡ ಬಳ್ಳಿಗಳು. ಶಿಕ್ಷಕನು, ಈ ಹೂಗಿಡಗಳಿಗೆ ಕಸಿಮಾಡಿ ಸರಿಯಾದ ಗೊಬ್ಬರ ಹಾಕಿ ನೀರೆರೆವ ತೋಟಿಗನು. ಹಿಂದಿನ ಶಾಲೆಗಳಲ್ಲಿ ಗುರು-ಶಿಷ್ಯರ ಸಂಬಂಧವು ಹೊಡೆವವನು ಮತ್ತು ಹೊಡೆಸಿಕೊಂಬುವವನದು ಆಗಿತ್ತು. ಇಂದು ಶಿಷ್ಯರೆಲ್ಲ ಶಿಕ್ಷಕನ ಒಡನಾಡಿಗಳು. ಎಳೆಗೆಳೆಯರು. ಅಧಿಕಾರದ ಅಳಿಕೆಯೆದುರು ಮಕ್ಕಳು ತಲೆತಗ್ಗಿಸಬೇಕಾಗಿಲ್ಲ. ಅನಿರ್ಬಂಧವಾಗಿ, ಸ್ವಚ್ಛಂದದಿಂದ ತಮ್ಮ ವ್ಯಕ್ತಿತ್ವದ ವಿಕಾಸವನ್ನು ಮಾಡಿಕೊಳ್ಳಲು ಶಿಕ್ಷಕರೇ ಅನುಕೂಲ ವಾತಾವರಣವನ್ನು ಕಲ್ಪಿಸಿಕೊಡುತ್ತಾರೆ. ಸ್ವಯಂನಿರ್ಣಯದ ತತ್ತ್ವವು ರಾಷ್ಟ್ರೀಯ ಜೀವನವನ್ನು ಆಳುವಂತೆ, ಅದು ಶಾಲೆಯ ಶಿಕ್ಷಣವನ್ನೂ ಆಳುತ್ತಿದೆ. ಸ್ವತಂತ್ರ ರಾಷ್ಟ್ರಗಳ ಸಾಮಾಜಿಕ ಆದರ್ಶಗಳೂ ಇಂದಿನ ಅವರ ಶಿಕ್ಷಣ ಕ್ರಮದಲ್ಲಿ ಪ್ರತಿಬಿಂಬಿತವಾಗಿವೆ. ಇಂತಹ ಶಿಕ್ಷಣ ಸಂಸ್ಥೆಗಳು ಅಮೇರಿಕೆಯಲ್ಲಿ ವಿಶೇಷವಾಗಿ ಕಂಡು ಬರುತ್ತವೆ. ಇದು ಅಮೇರಿಕೆಯ ಪ್ರಜಾಪ್ರಭುತ್ವದ ಪರಂಪರೆಗೆ ಅನುಗುಣವಾಗಿಯೇ ಇದೆ. ಒಂದು ದೇಶದಲ್ಲಿ ಎಂತಹ ಸಮಾಜ ಮತ್ತು ಸರಕಾರವೋ, ಅಂತಹದೇ ಆ ದೇಶದ ಶಿಕ್ಷಣಪದ್ಧತಿ.

ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗಳೊಂದಿಗೆ ಇರುವ ಶಿಕ್ಷಣ ಪದ್ಧತಿಯ ಈ ನಿಕಟ ಸಂಬಂಧವು, ಮನೋವಿಜ್ಞಾನದ ದೃಷ್ಟಿಯಿಂದಲೂ ಅನಿವಾರ್ಯವೆಂದು

ಸಿದ್ಧವಾಗುತ್ತದೆ. ಮನೋವಿಜ್ಞಾನದ ದೃಷ್ಟಿಯಿಂದ ಶಿಕ್ಷಣದ ಹೆಗ್ಗುರಿಯು, ಮಕ್ಕಳಲ್ಲಿ ಸಾಮಾಜಿಕತೆಯನ್ನು-ರಾಷ್ಟ್ರೀಯ ಸಾಂಘಿಕ ಭಾವನೆಯನ್ನು ಅಭಿವೃದ್ಧಿಗೊಳಿಸುವುದೇ ಆಗಿದೆ. ಈ ಉದ್ದೇಶವು ಮನೆಗಿಂತಲೂ ಶಾಲೆಯಲ್ಲಿ ಹೆಚ್ಚು ಸಹಜವಾಗಿ ಚೆನ್ನಾಗಿ ಸಾಧ್ಯವಾಗುತ್ತದೆ. ಇಲ್ಲಿ ಮಗುವಿನ ಸಾಮಾಜಿಕ ಭಾವನೆಯು ವಿಕಾಸಕ್ಕೆ ಹೆಚ್ಚು ಅನುಕೂಲವಾದ ಸಂಧಿ, ಸಾಧನಗಳನ್ನು ಒದಗಿಸಿಕೊಡಲು ಬರುತ್ತದೆ. ಏಕೆಂದರೆ, ಶಾಲೆಯು ರಾಷ್ಟ್ರೀಯ ಜೀವನದ ಬೇಕು, ಬೇಡಿಕೆಗಳಿಗೆ ಹೆಚ್ಚು ಹತ್ತಿರವಿದೆ : ಮನೆಯಲ್ಲಿ ಕಾಣಸಿಕೊಳ್ಳುವ ಹುಚ್ಚು ಮೋಹ, ಮಮತೆಗಳು ಶಾಲೆಯ ವಾತಾವರಣವನ್ನು ಹದಗೆಡಿಸುವುದಿಲ್ಲ. ಸಾಮಾನ್ಯವಾಗಿ ಶಾಲೆಯು ಇಂತಹ ಮೋಹಪಾಶಗಳಿಂದ ಹೆಚ್ಚು ದೂರವಿರುತ್ತದೆ. ಆದ್ದರಿಂದ ಮಕ್ಕಳು ಮನೆಗಿಂತ ಶಾಲೆಯಲ್ಲಿ ಹೆಚ್ಚು ಬೇಗನೆ ಸ್ವಾವಲಂಬನ, ಸಾಮಾಜಿಕತೆಯ ಪಾಠಗಳನ್ನು ಕಲಿಯುತ್ತಾರೆ.

## ಕೌಟುಂಬಿಕ ವಾತಾವರಣ ಮತ್ತು ಶಿಕ್ಷಣ

ಕೌಟುಂಬಿಕ ವಾತಾವರಣವು ಹಾಗಿರುವುದಿಲ್ಲ. ಕುಟುಂಬ ಜೀವನದಲ್ಲಿ ಸಾಮಾಜಿಕತೆಗೆ ಪ್ರಧಾನ ಸ್ಥಾನವು ಇರುವುದೆಂಬ ನಿಯಮವಿಲ್ಲ. ಬಹುತರವಾಗಿ ಕುಟುಂಬಗಳಲ್ಲಿ ಸಾಂಪ್ರದಾಯ ಶರಣತೆಯೇ ಹೆಚ್ಚು. ಗತಾನುಗತಿಕತ್ವವೇ ಬಹಳ. ಮನೆಯ ಹಿರಿಯರು ಸ್ವಂತದ ನಡೆವಳಿಯಲ್ಲಿ ಸಾಂಘಿಕ ಜೀವನಕ್ಕೆ ಮಹತ್ವವನ್ನು ಕೊಟ್ಟಿದ್ದರೆ, ಶಿಕ್ಷಣದ ಗುರಿಯು ಸಾಮಾಜಿಕ ಸಾಮರಸ್ಯವೇ ಎಂದು ಅವರ ಮನವರಿಕೆಯಾಗಿದ್ದರೆ ಮಾತ್ರ ಕೌಟುಂಬಿಕ ವಾತಾವರಣದಲ್ಲಿ ಮಕ್ಕಳಲ್ಲಿ ರಾಷ್ಟ್ರೀಯತೆಯು ಬಿಂಬಿಸುವುದು ಶಕ್ಯವಿದೆ. ಈ ರೀತಿಯಾಗಿ ಅರಿತು ನುರಿತ ಹಿರಿಯರಿದ್ದಲ್ಲಿ, ಮಕ್ಕಳಿಗೆ ಸರಿಯಾದ ಶಿಸ್ತು-ಶಿಕ್ಷಣ ಸಿಕ್ಕಿ ಅವರು ಶಾಲೆಯ ಸಾಮಾಜಿಕ ಜೀವನಕ್ಕೂ ಸಿದ್ಧರಾಗುವರು. ಹಾಗೆಯೇ ಮುಂದರಿದು ಶಾಲೆಯಲ್ಲಿಯೂ, ಯೋಗ್ಯ ಶಿಕ್ಷಣಕ್ಕೆ ಒಳಪಟ್ಟು ಸಮಾಜದಲ್ಲಿ ತಮಗೆ ಸಿಗುವ ಹೊಣೆಯನ್ನು ಹೊರುವುದಕ್ಕಾಗಿ, ಅಣಿಯಾಗುವರು. ಮನೆಯಿಂದ ಮೊದಲಾಗಿ ಶಾಲೆಯಲ್ಲಿ ಮುಗಿಯುವ ಮಕ್ಕಳ ಶಿಕ್ಷಣದಲ್ಲಿ ಸಾಮಾಜಿಕತೆಗೆ ಮಹತ್ವದ ಸ್ಥಾನವು ಇರತಕ್ಕದ್ದು. ಶಾಲೆಯು, ಕುಟುಂಬ ಮತ್ತು ರಾಷ್ಟ್ರಗಳನ್ನು ಜೋಡಿಸುವ ಕೊಂಡಿ. ಶಿಶುವನ್ನು ಸಾಮಾಜಿಕತೆಗೆ ಒಯ್ಯುವ ಸೋಪಾನ.

ಕುಟುಂಬದಲ್ಲಿಯೇ ಮಗುವಿನ ಬಾಳಿನ ಬಗೆಯು, ನಾಲ್ಕೈದು ವರ್ಷದ

ವಯಸ್ಸಿನ ಸುಮಾರಿಗೆ ನಿಶ್ಚಿತವಾಗುತ್ತದೆ. ಮೂರು ವರ್ಷದ ಬುದ್ಧಿ, ಮುಂದೆ ನೂರು ವರ್ಷದ ತನಕ. ಮುಂದೆ ಅದನ್ನು ಒಮ್ಮೆಲೆ ಬೇಕಾದಾಗ ಬದಲಿಸಲು ಬರುವುದಿಲ್ಲ. ಮಕ್ಕಳನ್ನು ದೂಷಿಸಿ ದಂಡಿಸಿ ತಿದ್ದಲೆತ್ನಿಸುವುದು ಡೊಂಬ ರೀತಿ. ಮಕ್ಕಳಲ್ಲಿಯ ಸಾಮಾಜಿಕ ಆಸಕ್ತಿಯನ್ನು ಬೆಳೆಸಿ, ಒಂದು ಒಳ್ಳೆಯ ರೂಪ ಗೊಡಲು ಶಾಲೆಯು ಯತ್ನಿಸಬೇಕು. ಬಲಾತ್ಕಾರ ತಿರಸ್ಕಾರಗಳ ತತ್ವದ ಮೇಲೆ ಆಧುನಿಕ ಶಿಕ್ಷಣವು ಸಾಗಕೂಡದು. ಮಗುವಿನ ವ್ಯಕ್ತಿಗತ ತೊಡಕುಗಳನ್ನು ತಿಳಕೊಂಡು, ಸಮರ್ಪಕವಾಗಿ ಬಿಡಿಸಲು ಹವಣಿಸುವುದೇ ಆಧುನಿಕ ಶಿಕ್ಷಣದ ಗುರಿಯಾಗಬೇಕು.

ತಂದೆತಾಯಿಗಳು ಮಕ್ಕಳಿಗೆ ತೀರ ಹತ್ತಿರದವರಾದುದರಿಂದ, ಸಂಘ ಜೀವನವನ್ನು ಇಲ್ಲವೇ ರಾಷ್ಟ್ರೀಯತೆಯನ್ನು ಮಕ್ಕಳಿಗೆ ಮನೆಯಲ್ಲಿ ಕಲಿಸುವುದು ಒಮ್ಮೊಮ್ಮೆ ಬಿಗಿಯಾಗುತ್ತದೆ. ತಂದೆತಾಯಿಗಳು ಕೇವಲ ತಮ್ಮ ಲಾಭದ ದೃಷ್ಟಿಯಿಂದಲೇ ಶಿಕ್ಷಣವನ್ನು ಸಾಗಿಸುವರು. ಇದು ಕೇವಲ ಘಾತುಕ ಸ್ವಾರ್ಥವು. (ಹಿಂದುಸ್ಥಾನ ದಲ್ಲಿ ನಡೆದ ಶಿಕ್ಷಣವು ಈ ಸಮಾಜವಿಘಾತಕ, ಅರಾಷ್ಟ್ರೀಯ ರೀತಿಯಲ್ಲಿಯೇ ಸಾಗಿದೆ. –ಸಂಪಾದಕ.) ಇದರಿಂದ ಮಕ್ಕಳು ಮುಂದಿನ ಜೀವನದಲ್ಲಿ ಸಮಾಜಕ್ಕೂ, ರಾಷ್ಟ್ರಕ್ಕೂ ನಿರುಪಯುಕ್ತವಾದ ಬಾಳಿನವರಾಗುತ್ತಾರೆ. ಕೇವಲ ಸ್ವಾರ್ಥಪರವಾದ ಒಂದು ವಿಚಿತ್ರವಾದ ವೃತ್ತಿಯನ್ನು ಅವರು ಬೆಳೆಸಿಕೊಳ್ಳುತ್ತಾರೆ. ಇಂಥ ವೃತ್ತಿಯಲ್ಲಿ ಬೆಳೆದ ಮಕ್ಕಳು ತಮ್ಮನ್ನೂ ರಾಷ್ಟ್ರವನ್ನೂ ಕೂಡಿಯೆ ಸಂಕಟದಲ್ಲಿ ನೂಕುವರು. ಅಂಥ ಸಂಕಟ. ಬಿಕ್ಕಟ್ಟುಗಳ ಸಂಚುಕಾರವು ಶಾಲೆಯನ್ನು ಸೇರಿ ದೊಡನೆಯೇ ಮುಂಗಡವಾಗಿ ಅವರ ಅನುಭವಕ್ಕೆ ಬರುವುದು. ಇಂಥ ಅನಿಷ್ಟ ಪ್ರಸಂಗವನ್ನು ಹೋಗಲಾಡಿಸುವದಾದರೆ, ತಂದೆತಾಯಿಗಳಿಗೇ ಮೊದಲು ಶಿಕ್ಷಣ ಕೊಡುವುದು ತೀರ ಅವಶ್ಯವಿದೆ. ಆದರೆ ಇದು ಅಷ್ಟು ಸುಲಭವಲ್ಲ. ಕಿರಿಯರಂತೆ, ಹಿರಿಯರು ಅಷ್ಟೊಂದು ಸಹಜವಾಗಿ ಕೈಗೆ ಸಿಕ್ಕುವದಿಲ್ಲ. ಕೈಗೆ ನಿಲುಕಿದರೂ, ಹಿರಿಯರಿಗೆ ರಾಷ್ಟ್ರೀಯ ಆದರ್ಶಗಳಲ್ಲಿ, ಸಾಮಾಜಿಕ ಉದ್ದೇಶಗಳಲ್ಲಿ ವಿಶೇಷ ಆಸಕ್ತಿಯಿರುವುದಿಲ್ಲ. ಸಾಮಾನ್ಯವಾಗಿ ರೂಢಿಮೂಢತೆಯು ಅವರ ತಲೆಹಿಡಿದಿರು ರುತ್ತದೆ. ಹಿಂದಿನದೆಲ್ಲ ಹೊನ್ನು: ಅಂದು ಇದ್ದುದೇ ಮುಂದೆ ಸಾಗಲಿ, ಎಂಬ 'ಭೂತ' ಪೂಜಕರು ಅವರು. ಇಂಥ ತಂದೆತಾಯಂದಿರಿಂದ ಹೆಚ್ಚಿನ ಸಂಗತಿಗಳನ್ನು ಅಪೇಕ್ಷಿಸುವುದು ವ್ಯರ್ಥವೇ ಸರಿ. ಆದುದರಿಂದ, ಇಂಥ ಸಂದರ್ಭದಲ್ಲಿ ಸಾಮಾನ್ಯ ವಾಗಿ ಎಲ್ಲರೂ ತಿಳುವಳಿಕೆಯುಳ್ಳವರಾಗಲೆಂದು ಎಲ್ಲ ರೀತಿಯಿಂದಲೂ ಎಲ್ಲೆಡೆಗೆ ತಿಳಿವಿನ ತಿಳಿಬೆಳಕು ಹಬ್ಬುವಂತೆ ಮಾಡುವುದೊಂದೇ ನಮ್ಮ ಕರ್ತವ್ಯವಾಗುತ್ತದೆ. ಆದುದರಿಂದ ಈ ಬಗೆಯಾಗಿ ಮೊತ್ತ ಮೊದಲು ಬೆಳಕಿನ ಅವಶ್ಯಕತೆಯು ಎಲ್ಲಿ

ಯಾದರೂ ಇದ್ದರೆ ಅದು ಶಾಲೆಗಳಲ್ಲಿಯೇ. ನಾಳಿನ ರಾಷ್ಟ್ರವೆಂದರೆ, ಮಕ್ಕಳು. ಮುಂದೆ ಹಲವು ದಿಕ್ಕಿನಿಂದ ಹೊಸಲಾಗಿ ಹರಿಯಲಿರುವ ರಾಷ್ಟ್ರದ ಜೀವಾಳವೆಲ್ಲ ಶಾಲೆಯಲ್ಲಿ ಒಂದೆಡೆಯಲ್ಲಿ ಒಡ್ಡುಗಟ್ಟಿದಂತೆ ಕಲೆತಿರುತ್ತದೆ. ಕುಟುಂಬದಲ್ಲಿ ಅತಿ ಪರಿಚಯದಿಂದ ಒಗ್ಗಿಹೋದ ವ್ಯಕ್ತಿತ್ವದ ಕುಂದುಕೊರತೆಗಳೆಲ್ಲ ಶಾಲೆಯ ವಾತಾವರಣದಲ್ಲಿ ಒಡೆದು ಎದ್ದು ತೋರುವುವು. ಅವನ್ನೆಲ್ಲ ತಿಳಿದು ತಿದ್ದಲು ತಕ್ಕವರಾದ ನಿರ್ಲಿಪ್ತ ದೃಷ್ಟಿಯ ಶಿಕ್ಷಕರು ಶಾಲೆಯಲ್ಲಿರುವರು. ಮಕ್ಕಳ ಸಮಸ್ಯೆಗಳಲ್ಲಿ ಅವರು ತಜ್ಞರಾಗಿ ಆ ಹೊಣೆ ಹೊರಲು ಸಿದ್ಧರಾಗುವರು. ಇವೆಲ್ಲ ಕಾರಣಗಳಿಂದ ಶಿಕ್ಷಣ ಸಂಸ್ಥೆಗಳೇ ಮಕ್ಕಳ ಬಾಳಮಾದರಿಯನ್ನು ಸರಿಯಾಗಿ ಮಾರ್ಪಡಿಸಲಿಕ್ಕೆ ತಕ್ಕ ಸ್ಥಳಗಳೆಂದು ಹೇಳಬೇಕಾಗುತ್ತದೆ.

ಸಾಮಾನ್ಯ ಸಮವೃತ್ತಿಯ ಮಕ್ಕಳಿದ್ದರೆ ವಿಶೇಷ ಚಿಂತೆಪಡಬೇಕಾಗಿಲ್ಲ. ಸರಿಯಾಗಿ, ಪೂರ್ಣವಾಗಿ ಬೆಳವಣಿಗೆ ಹೊಂದಿದ ಸಮಾಜದೊಂದಿಗೆ ಸಮರಸವಾಗುವಂತೆ ಹೊಂದಿಕೆಗೊಂಡ ಮಕ್ಕಳನ್ನು ಸುಮ್ಮನೆ ನಿರ್ಬಂಧಪಡಿಸದೆ, ಅವರಿಗೆ ತಮ್ಮ ಅದೇ ರೀತಿಯಲ್ಲಿ ವಿಕಾಸವಾಗಗೊಡಬೇಕು. ಇದೇ ಉತ್ತಮವಾದ ಉಪಾಯವು.

ಏಕೆಂದರೆ ಹೀಗೆ ಸರಿ ದಾರಿಯಲ್ಲಿ ಸಾಗಿದ ಮಕ್ಕಳು ಮುಂದೆ ತಮ್ಮ ಏಳ್ಗೆಗಾಗಿ ಬಾಳಿನ ಉಪಯೋಗಿಯಾದ ದಿಕ್ಕಿನಲ್ಲಿಯೇ ಯೋಗ್ಯ ಗುರಿಯನ್ನು ಆಯ್ದುಕೊಂಡು ಬಾಳುವರೆಂದು ನಂಬಲು ಯಾವ ಅಡ್ಡಿಯೂ ಇಲ್ಲ. ಏಕೆಂದರೆ ಅವರ ಹಿರಿಮೆಯ ಭಾವನೆಯು ಹೆಮ್ಮೆಯ ಬಿಂಕದ ರೂಪವನ್ನು ತಾಳಲಾರದು. ಆದ ಕಾರಣ ಹೆಗ್ಗರಿಮೆನಿಂದ ಇವರ ಕಣ್ಣು ತಿರುಗುವ ಹೆದರಿಕೆಯಿಲ್ಲ.

## ಹದಗೆಟ್ಟ ಮಕ್ಕಳ ತೊಡಕುಗಳು

ತೊಡಕು ಉಂಟಾಗುವುದು ವಿಪರ್ಯಸ್ತ ವೃತ್ತಿಯ ಮಕ್ಕಳಲ್ಲಿಯೇ. ಹದಗೆಟ್ಟ ನಡೆನುಡಿಯ ಮಕ್ಕಳಲ್ಲಿ ಕೀಳು-ಮೇಲುಗಳ ಭಾವನೆಗಳು ಅಡ್ಡ ಹಾದಿಯನ್ನು ಹಿಡಿದು ಬಾಳಿನಲ್ಲಿ ಕೆಲಸಕ್ಕೆ ಬಾರದವರಾಗುತ್ತಾರೆ. ಇಂಥ ಹದಗೇಡಿಗಳ ತೊಡಕುಗಳೆಲ್ಲ ಮೊದಲು ತಲೆದೋರಿ ಬೇರೂರುವುದು, ಕೌಟುಂಬಿಕ ಜೀವನದಲ್ಲಿಯೇ. ಮನೆಯಲ್ಲಿಯೇ ಅವರ ಎಳಕ ಬಾಳಮಾದರಿಯ ಹೀಚು ಮುಳುಕು ಆಗುವುದು. ಮುಂದೆ ಅದು ಹಣ್ಣಾದಂತೆ ಅದನ್ನು ಹಾಳು ಮಾಡುವ ಹುಳಗಳೂ ಅದರೊಳಗೆ ಅದರೊಡನೆಯೇ ಬಲಿತು ಬೆಳೆಯುತ್ತವೆ. ಮಕ್ಕಳಿಗೆ ತಮ್ಮ ಮೈ ಅಥವಾ ಮನದ ಕುಂದುಕೊರತೆಗಳ ಕೀಳರಿಮೆಯು ಇದೇ ಕಾಲಕ್ಕೆ ಅವರ

ಬೆಳವಣಿಗೆಯು ಕಾಲ್ತೊಡಕು ಆಗುವುದು. ಇಲ್ಲಿಯೂ ಆ ಊನ ಅಂಗದ ತೊಂದರೆಯು ಹೆಚ್ಚಲ್ಲ. ಅಂಥ ಊನತೆಯಿಂದ ತಲೆದೋರಿದ ಕೀಳರಿಮೆ ಅವರನ್ನು ಹದಗೆಡಿಸುತ್ತದೆ. ಈ ಅರಿವು ಅವರಲ್ಲಿ ಅತಿ ತೀವ್ರವಾಗಿ ಬೆಳೆಯಲು ಕಾರಣವಿದೆ. ತಮ್ಮ ಮೈ–ಮನದ ಕುಂದುಕೊರತೆಗಳ ಮೂಲಕ, ತಾವು ಕೀಳರೂ, ನಿರುಪಯುಕ್ತರೂ ಎಂದು ಬಗೆದು ಸಮಾಜದೊಡನೆ ಹೊಂದಿಕೊಳ್ಳದೆ ದೂರ ವಿರಬೇಕಾಗುವುದರಿಂದ ಮಾನಸಿಕ ವ್ಯಥೆಯು ವೃದ್ಧಿಂಗತವಾಗುವುದು. ಜೀವನವು ಬೇಸರವೆನಿಸುವುದು. ಈ ತೊಡಕು ಬಿಡಿಸುವುದಕ್ಕಾಗಿಯೇ ಶಿಕ್ಷಣವು ಅವಶ್ಯ ವಾಗಿದೆ. ಸಂಘ ಸಮಾಜದೊಡನೆ ಸರಿಯಾಗಿ ಹೊಂದಿಕೊಂಡು ಒಂದುಗೂಡಿ ಹೋಗುವುದನ್ನು ಕಲಿತರೆ ಅಥವಾ ಕಲಿಸಿದರೆ, ಮೈ ಅಥವಾ ಮನದ ಕೊರತೆಗಳು ಆ ವ್ಯಕ್ತಿಗೆ ದೂಷಣವೆನಿಸದೆ, ಭೂಷಣವಾಗಿಯೇ ಪರಿಣಮಿಸುವವು. ಏಕೆಂದರೆ ಇಂಥ ಯಾವದೊಂದು ನ್ಯೂನತೆಯು ಮೂಲಕ ತೀವ್ರವಾದ ತತ್ಪರತೆಯೊಂದು ಮೊಳೆತು ಬಾಳಿಗೆ ಸ್ಫೂರ್ತಿ ಕೊಡುತ್ತದೆ. ಈ ಆಸಕ್ತಿಯನ್ನು ಶಿಕ್ಷಣ ಕೊಟ್ಟು ಸರಿಯಾಗಿ ಬೆಳೆಸಿದಲ್ಲಿ ಆ ವ್ಯಕ್ತಿಯು ಸಮಾಜದ ಉಪಯುಕ್ತವಾದ ಒಂದು ಅಂಶವಾಗುವುದು. ಆ ವ್ಯಕ್ತಿಯ ಚರಿತ್ರಕ್ಕೆ ಸಾರ್ಥಕವಾದ ಗೌರವವು ಉಂಟಾಗುವುದು.

ಮಗುವಿನ ಕುಂದು ಕೊರತೆಗಳ ತೊಡಕು ಬಿಟ್ಟು ಅದು ಉಪಯುಕ್ತವಾಗಿ, ಸಾಮಾಜಿಕರೊಂದಿಗೆ ಹೊಂದಿಕೊಳ್ಳುವಂತೆ ಅದರ ನಡೆನುಡಿಗಳನ್ನು ರೂಪಿಸುವ ಕರ್ಮಕೌಶಲದಲ್ಲಿಯೇ ಶಿಕ್ಷಕನ ಯೋಗಸಿದ್ಧಿಯಿದೆ. ಬರೇ ಕಣ್ಣಿನ ಇಲ್ಲವೇ ಕಿವಿಯ ಆಸಕ್ತಿಯನ್ನು ಬೆಳೆಸಿಕೊಳ್ಳುವುದರಲ್ಲಿ ತೊಡಗಿರುವ ಹುಡುಗರ ಎಲ್ಲ ಇಂದ್ರಿಯಗಳ ಉಪಯೋಗದಲ್ಲಿ ಆಸಕ್ತಿ ಹುಟ್ಟುವಂತೆ, ಸರ್ವಾಂಗೀಣ ಶಿಕ್ಷಣ ಕೊಟ್ಟು, ಸರಿದಾರಿಗೆ ಹಚ್ಚುವುದು ಶಿಕ್ಷಕನ ಕರ್ತವ್ಯವಾಗಿದೆ.

ರೊಡ್ಡತನ ಮುಂತಾದ ಅಂಗಿಕ ಊನತೆಯಿಂದ ತೊಳಲುವ ಮಕ್ಕಳಲ್ಲದೇ ಶಿಕ್ಷಕ ರಿಗೆ ಬಿಡಿಸಬೇಕಾದ ಇನ್ನೂ ಒಂದು ತೊಡಕಿದೆ : ಮನೆಯಲ್ಲಿ ಮಿತಿಮೀರಿದ ಮುದ್ದಾಟ, ಅಳ್ತಿ–ಅಕ್ಕರೆಯಿಂದ ಬೆಳೆಸಿದ ಮಕ್ಕಳೂ ವಿಚಾರಾರ್ಹವಾದ ಒಂದು ದೊಡ್ಡ ತೊಡಕೇ ಆಗಿದೆ. ಶಾಲೆಯು ವಾತಾವರಣವುಳ್ಳ ಇಂಥ ಮಕ್ಕಳಿಗೆ ಸ್ವಲ್ಪವೂ ಬಗ್ಗುವುದಿಲ್ಲ. ಮಕ್ಕಳಿಗೆ ಶಾಲೆಯಲ್ಲಿ ಮನೆಯ ಆ ಕರುಳು ಕಕ್ಕುಲತೆಯ ಮಾತು, ನೋಟದ ಸುಖ ಸಿಕ್ಕದು, ಅಲ್ಲದೆ ಯಾವ ಒಂದೇ ಮಗುವು ಯಾವಾಗಲೂ ಶಾಲೆಯಲ್ಲಿ ಎಲ್ಲ ಶಿಕ್ಷಕರ ಪ್ರೀತಿವಿಶ್ವಾಸದ್ದಾಗಿ ಉಳಿಯುವದು ತೀರ ಅಶಕ್ಯ. ಆದರೆ ಕೆಲಸಾರೆ ಯಾವ ಒಬ್ಬ ಶಿಕ್ಷಕರ ಕೋಮಲ ಹೃದಯದ ಮೂಲಕ ವರ್ಗದಲ್ಲಿ ಯಾವನೊಬ್ಬ ಹುಡುಗನು ಹೆಚ್ಚಿನ ಮೆಚ್ಚುಗೆ ಪಡೆದು

ಮೆರೆಯಬಹುದು. ಆದರೂ ಮೇಲಣ ಇಯತ್ತೆಗಳಿಗೆ ಹೋದಂತೆ ಇಂಥ ನೆಚ್ಚು ಮೆಚ್ಚಿನ ಸ್ಥಾನದಲ್ಲಿ ಭದ್ರವಾಗಿ ಉಳಿಯುವುದು ಅಸಾಧ್ಯವಾಗುತ್ತದೆ. ಶಾಲೆಯ ಶಿಕ್ಷಣಕ್ರಮ ಮುಗಿಸಿ ಜೀವನರಂಗಕ್ಕಿಳಿದ ಮೇಲಂತೂ ಹೆರವರ ಕರುಣ ಕಕ್ಕುಲತೆಯ ನೆಳಲಲ್ಲಿಯೇ ಬೆಳೆದು ಪರಾವಲಂಬಿಗಳೂ, ಅಳ್ಳೆದೆಯವರೂ ಆದ ಇಂಥ ಜೀವಿಗಳ ಪಾಡು ತೀರ ಕರುಣಾಸ್ಪದವಾಗುತ್ತದೆ. ಸಾಮಾಜಿಕರಿಂದ ಸೈಯೆನಿಸಿ ಕೊಳ್ಳತಕ್ಕಂತಹ ಕೆಲಸವನ್ನೇನೂ ಮಾಡದೆ, ಅಂತಹ ಗುಣ, ಯೋಗ್ಯತೆಯನ್ನೇನೂ ವ್ಯಕ್ತಪಡಿಸದೆ ಎಲ್ಲರೂ ತನ್ನನ್ನು ಕೊಂಡು ಕೊಸೆದಾಡಬೇಕು, ಹಾಡಿಹರಸಬೇಕೆಂದು ಹಾರೈಸುವುದು ಶುದ್ಧ ಹುಚ್ಚು. ಇಂದಿನ ಸಮಾಜರಚನೆಯೇ ಹೀಗಿದೆ : ಯಾವುದೊಂದೇ ವ್ಯಕ್ತಿಯು ಅಖಂಡವಾಗಿ ಅನಂತ ಕಾಲದವರೆಗೆ ಲೋಕಪ್ರೀತಿಯ ಕೇಂದ್ರವಾಗಿ ಉಳಿಯಲಾರದು.

ಇಂಥ ಮಕ್ಕಳು ಕೆಲವೊಂದು ವಿಶಿಷ್ಟ ಸ್ವಭಾವದವರಾಗಿರುತ್ತಾರೆ. ಬಾಳಿನ ತೊಡಕು ತೊಂದರೆಗಳನ್ನು ಎದುರಿಸಲು ಸಮರ್ಥರಾಗಿರುವುದಿಲ್ಲ. ಆದರೂ ಮಹತ್ವಾಕಾಂಕ್ಷೆ ಮಾತ್ರ ವಿಪರೀತ ! ತಾವೇ ಆಳಬೇಕೆಂಬ ದುರ್ದಮ್ಯ ಮನೀಷೆ ಇವರಿಗೆ. ಸಂಘ, ಸಮಾಜದ ಪ್ರತಿನಿಧಿಯಾಗಿ ಮುಂದೆ ಬರುವುದನ್ನು ಇವರೂ ಅರಿಯರು. ಅಲ್ಲದೆ ಯಾವಾಗಲೂ ಜಗಳಗಂಟರು. ಇತರರೊಂದಿಗೆ ಹಗೆತನ ವುಳ್ಳವರೂ ಇರುವರು. ಸಾಮಾನ್ಯವಾಗಿ ಇವರು ಹೇಡಿಗಳಾಗಿರುತ್ತಾರೆ. ಜೀವನದ ಎಲ್ಲ ಅಂಗಗಳಲ್ಲಿ ಇವರಿಗೆ ಅಭಿರುಚಿ ಇರುವುದಿಲ್ಲ. ಆಸಿಮಿಸಿ, ತತ್ತರ, ತಡವರಿಸು ವುದು ಇವರ ಸ್ವಭಾವವಾಗಿರುತ್ತದೆ. ಯಾವುದರಲ್ಲೂ ಎದೆಗಾರಿಕೆಯಿಲ್ಲ. ಎದೆಗುಕ್ಕು, ಹಿಂಜರಿಕೆ. ಇಂದಿನ ನಿರ್ಣಯಗಳನ್ನು ನಾಳೆಗೆ ನೂಕುವುದು ಇವರ ವಾಡಿಕೆ. ಆದಷ್ಟು ತಪ್ಪಿಸಿಕೊಳ್ಳಲು ಇಲ್ಲವೇ ಮುಂದೂಡಲು ಹವಣಿಸುತ್ತಾರೆ. ಇಲ್ಲವೆ ತೊಂದರೆ ಬಂದೊಡನೆ ತೆಪ್ಪಗಾಗುವರು. ಅಡ್ಡತಿಡ್ಡ ಸಾಗಿ ಕೆಲಸಗಳನ್ನು ಅರ್ಧ ಮರ್ಧ ಮುಗಿಸುತ್ತಾರೆ. ಇವೆಲ್ಲ ಲಕ್ಷಣಗಳು ಮನೆಗಿಂತ ಶಾಲೆಯಲ್ಲಿ ಚೆನ್ನಾಗಿ ಒಡೆದು ಕಾಣಿಸಿಕೊಳ್ಳುತ್ತವೆ. ಶಾಲೆಯೆಂದರೆ ಇಂಥವರಿಗೆ ಒಂದು ಅಗ್ನಿ ದಿವ್ಯ ವೆನಿಸುವುದು. ಆದರೆ ಶಾಲೆಯೇ ಅವರ ಉದ್ಧಾರದ ಪುಣ್ಯಕ್ಷೇತ್ರ. ಇಂಥವರ ಬಾಳಮಾದರಿಗಳನ್ನು ಅರಿತುಕೊಂಡು, ಅವರಿಗೆ ಮುಂದೆ ತೊಡಕಾಗಬಹುದಾದ ನಡೆನುಡಿಗಳನ್ನು ತಿದ್ದಿ ಯಶಸ್ವಿಯಾಗಿ ಬಾಳಲು ಅವಶ್ಯಕವಾದ ಶಿಕ್ಷಣವನ್ನು ಕೊಡಲು ಶಾಲೆಯೇ ಯೋಗ್ಯವಾದ ಗುರಡಿಯಾಗಿದೆ. ಆದುದರಿಂದ ಬರೆ ಗಿಳಿ ಪಾಠಮಾಡಿಸುವುದು, ಮಾಹಿತಿಯನ್ನು ಹುಡುಗರ ತಲೆಯಲ್ಲಿ ತುರುಕುವುದು ಶಾಲೆಗಳ ಗುರಿಯಲ್ಲ. ಮಕ್ಕಳಿಗೆ ರೀತಿನೀತಿಗಳನ್ನು ಕಲಿಸಿ ಸಮಾಜಕ್ಕೆ, ರಾಷ್ಟ್ರಕ್ಕೆ ಉಪಯುಕ್ತರಾದಂತಹ ನಾಳಿನ ನಾಗರಿಕರನ್ನು ನೇರ್ಪಡಿಸುವುದೇ ಶಾಲೆಗಳ

ಪ್ರಾಧ್ಯಾಪಕರ ಹಿರಿಗುರಿಯಾಗಿರಬೇಕು.

ವಿಶೇಷ ಪುರಸ್ಕರಿಸಿ (ಪ್ರೀತಿಸಿ) ಇಲ್ಲವೇ ತಿರಸ್ಕರಿಸಿ ಹದಗೆಟ್ಟ ಮಕ್ಕಳ ತೊಡಕು ಗಳಂತೂ ಸರಿಯೇ. ಅಲ್ಲದೆ ಶಾಲೆಯಲ್ಲಿ ಇನ್ನೂ ಒಂದು ಸಮಸ್ಯೆ ತಲೆ ದೋರುತ್ತದೆ : ಇದು ಅತ್ಯಂತ ತೀಕ್ಷ್ಣ ಬುದ್ಧಿಯುವರೆಂದು ತಮ್ಮನ್ನು ತಿಳಿದು ಕೊಂಡ 'ಬೃಹಸ್ಪತಿ'ಗಳ ತೊಡಕು. ಕೆಲವೊಂದು ವಿಷಯಗಳಲ್ಲಿ ವಿಶೇಷ ಪ್ರಗತಿ ಯನ್ನು ತೋರುವ ಈ ಮಕ್ಕಳು, ಎಲ್ಲ ವಿಷಯಗಳಲ್ಲೂ ಅಷ್ಟೇ ಬುದ್ಧಿವಂತ ರಾಗಿರುವುದಿಲ್ಲ. ಆದರೂ ಒಂದು ವಿಷಯದಲ್ಲಿ ಮಿಗಿಲಾದವರೆನಿಸಿಕೊಂಡು ಇನ್ನು ಉಳಿದ ವಿಷಯಗಳಲ್ಲಿ ಮಿಕ್ಕ ಮಕ್ಕಳಿಗಿಂತ ಮೇಲೆ ಬಂದು, ಮುಂದೆ ನಿಂತು, ವರ್ಗದಲ್ಲಿ ಮೇಧಾವಿಗಳೆಂದು ಮೆರೆವ ಸಂಧಿ ಇವರ ಪಾಲಿಗೆ ಬರುತ್ತದೆ. ಇದರ ಪರಿಣಾಮವಾಗಿ· ಇವರು ಮಹತ್ವಾಕಾಂಕ್ಷಿಗಳಾಗುವರು. ಒಡನೋದಿಗಳು ಇವರನ್ನು ಒಳಗೊಳಗೇ ತಿರಸ್ಕರಿಸುವರು. 'ಬೃಹಸ್ಪತಿ'ಗಳಿಗೆ ಬೇರೆಯುವರು ಆಡಿದ ಮಾತು ಮನಸಿನಲ್ಲಿ ಬೇಗನೆ ನಡುವುದು. ಅದರಿಂದ ಇವರಿಗೆ ಏನಾದರೂ ಅನ್ನುವುದೇ ತಡ, ಸಂಗಡಿಗರಿಂದ ತತ್‌ಕ್ಷಣವೇ ಸಿಡಿದು ದೂರವಾದರೆಂದೇ ತಿಳಿಯಬೇಕು. ಮಕ್ಕಳ ಮನಸು ಸೂಕ್ಷ್ಮವೂ ತೀಕ್ಷ್ಣವೂ ಇರುತ್ತದೆ. ಇಂಥವನು ತಮ್ಮೊಡನೆ ಹೊಂದಿಕೊಳ್ಳಲಾರನೆಂಬುದು ಮಕ್ಕಳಿಗೆ ಕೂಡಲೇ ಗೊತ್ತಾಗುತ್ತದೆ. ಇಂಥ ಬಾಲ ಬೃಹಸ್ಪತಿಗಳನ್ನು ಎಲ್ಲರೂ ಹೊಗಳಿದರೂ ಹತ್ತಿರ ಯಾರೂ ನಿಲ್ಲುವುದಿಲ್ಲ. ಪ್ರತಿಭಾಶಾಲಿಗಳಾದ ಈ 'ಗ್ರಂಥಿ'ಗಳು ಶಾಲೆಯೊಳಗಿಂದ ಹೆಸರು ಹೊಂದಿ ಹೊರಬೀಳುವರಾದರೂ ಹೊರಗೆ ಸಾಮಾಜಿಕ ಜೀವನದಲ್ಲಿ ಪ್ರವೇಶಿಸುತ್ತಲೆ ಇವ ರೊಂದು 'ಗ್ರಂಥಿಯೆ' ಆಗುವರು. ಬಿಡಿಸಲಾರದ ತೊಡಕು ಕಂಡು ಬರುವುದು. ಜೀವನದಲ್ಲಿ ಮೂರು ಮಿಗಿಲಾದ ಮಾತುಗಳು : ೧ ಸಾಮಾಜಿಕ ಸೌಹಾರ್ದ, ೨ ಸನ್ಮಾನ್ಯ ಕಾಯಕ (ಉಪಜೀವನ ಉದ್ಯೋಗ) ೩ ಮದುವೆ. ಈ ಮೂರು ಪ್ರಸಂಗಗಳೂ ಮಾನವನ ವ್ಯಕ್ತಿತ್ವದ ಬೆಲೆಯನ್ನು ಕಟ್ಟುತ್ತವೆ. ಒಂದು ವ್ಯಕ್ತಿಯ ಯೋಗ್ಯತೆಯು ನಿಶ್ಚಿತವಾಗುವುದು ಈ ಸಂದರ್ಭಗಳಲ್ಲಿಯೇ. ಕುಟುಂಬದ ಅನು ಕೂಲ ವಾತಾವರಣದಲ್ಲಿ ಅಂದು ಕಂಡುಬಾರದ ಕುಂದು ಕೊರತೆಗಳು, ಸಾಮಾಜಿಕ ಜೀವನದ ಈ ಹೊಸ ಸನ್ನಿವೇಶದಲ್ಲಿ ಒಡೆದು ತೋರುವವು. ಪೂರ್ವಾಯುಷ್ಯದಲ್ಲಿ ತಮ್ಮನ್ನು ಸರಿಯಾಗಿ ತಿದ್ದಿಕೊಳ್ಳದ್ದರಿಂದ ಇವರು ಆಗ ದುಃಖಿಗಳಾಗುವರು.

## ಬಾಲರ ಶಿಕ್ಷಣದ ಮುಖ್ಯ ಸೂತ್ರ

'ತಕ್ಕ ಅನುಕೂಲತೆಗಳು ದೊರೆತರೆ, ಒಬ್ಬನು ಮಾಡಿದುದನ್ನು ಯಾವನೂ

ಮಾಡಬಲ್ಲ ;' ಎಂಬುದು ಪ್ರಜಾಪ್ರಭುತ್ವದ ಮೂಲತತ್ವವಾಗಿದೆ. ಮಕ್ಕಳನ್ನು ಮುಂದೆ ತರಲು ಬಯಸುವವರೂ ಅವರಿಗೆ ಮೇಲಿನ ತತ್ವಕ್ಕನುಸರಿಸಿಯೇ ಪ್ರೋತ್ಸಾಹಿಸಬೇಕು. 'ನಿನ್ನಿಂದೇನಾದೀತು, ಹುಟ್ಟಾ ನೀನು ಕೀಳು ಆತ ಮೇಲು,' ಎಂಬೀ ಬಗೆಯ ವಿಷಮಯ ವಾತಾವರಣದಲ್ಲಿ ಮಕ್ಕಳು ಬೆಳೆಯಲಾರರು. ಈ ತತ್ವವನ್ನು ಅನುಸರಿಸಿ, ಸಮಭಾವದ ಪ್ರೋತ್ಸಾಹದ ವಾತಾವರಣವಿರುವ ಮನೆಯಲ್ಲಿ ಬುದ್ಧಿವಂತರೂ, ತೇಜೋವಂತರೂ ಆದ ಮಕ್ಕಳು ಬೆಳೆಯುವರು. ಇವರಲ್ಲಿ ತಾವೇ ಜಾಣರೆಂಬ ಆತ್ಮವಂಚನೆಯಿರುವುದಿಲ್ಲ; ಅಥವಾ ಬಣ ಹೆಮ್ಮೆಯೂ ಕಾಣುವುದಿಲ್ಲ. ತಾವು ಕಲಿತುದು ಅಥವಾ ಮುಂದೆ ಬಂದುದು ತಮಗೆ ದೊರೆತ ಅನುಕೂಲತೆಯ ಫಲ : ಪ್ರಯತ್ನ ಮತ್ತು ಸುದೈವದ ಬಲದಿಂದ ತನ್ನಂತೆ ಬೇರೆ ಯಾರೂ ಕಲಿಯಬಲ್ಲರು, ಹೆಸರು ಹೊಂದಬಹುದೆಂದು ಆತನ ಪ್ರಾಮಾಣಿಕವಾದ ನಂಬುಗೆಯಿರುವುದರಿಂದ, ಇಲ್ಲದ ಉಕ್ಕು ಅಥವಾ ಸೊಕ್ಕಿನ ನಾತವು ಈತನ ನಡೆನುಡಿಗಳಲ್ಲಿ ಎಲ್ಲಿಯೂ ಬರುವುದಿಲ್ಲ.

ಆದರೆ, ಶಿಕ್ಷಣದ ಸಾಕಷ್ಟು ಅನುಕೂಲತೆಗಳು ದೊರೆಯದ, ಪ್ರತಿಕೂಲ ಪರಿಸ್ಥಿತಿಯೊಡನೆ ಹೋರಾಡುವುದರಲ್ಲಿಯೇ ಪೂರ್ವಾಯುಷ್ಯವನ್ನು ಕಳೆಯಬೇಕಾದ ತರುಣರೂ ನಿರಾಶೆಪಡುವ ಕಾರಣವಿಲ್ಲ. ಏಕೆಂದರೆ ಇವರಿಗೆ ಸರಿಯಾದ ಹಂಚಿಕೆಗಳನ್ನು ತಿಳಿಸಿಕೊಟ್ಟು, ಇವರೂ ಸಮಾಜಕ್ಕೆ ಉಪಯುಕ್ತವಾದ ಒಳ್ಳೆಯ ಕೆಲಸಗಾರರಾಗುವಂತೆ ಮಾಡಬಹುದು.

ಇಂಥ ಹಿಂದುಳಿದ ಮಕ್ಕಳಲ್ಲಿ ಹೆಚ್ಚಾಗಿ ಧೈರ್ಯದ ಅಭಾವವಿರುತ್ತದೆ. ಅವರ ಈ ಎದೆಗುಕ್ಕು ಅಂಜಿಕೆಗಳನ್ನು ಹೋಗಲಾಡಿಸಿ ಮೊದಲು ಅವರಲ್ಲಿ ನೆಲೆಗೊಂಡ ನ್ಯೂನತೆಯ ಭಾವನೆಯನ್ನು ತೆಗೆದು ಹಾಕಬೇಕು. ಇವರಿಗೆ ಶಾಲೆಯಲ್ಲಿ ಬಂದಷ್ಟು ತೊಡಕುಗಳು ಆ ಮೊದಲು ಅವರಿಗೆ ಎಂದೂ ಬಂದಿದ್ದಿಲ್ಲ. ಆದ್ದರಿಂದ ಕಂಗೆಟ್ಟು ಅವರು ಶಾಲೆ ತಪ್ಪಿಸಿ ಅಡ್ಡ ಹಾದಿಗೆ ಬೀಳುವರು. ಶಾಲೆಯಲ್ಲಿ ತಮಗೆ ಉಳಿಗಾಲವಿಲ್ಲವೆಂದು ಅವರು ನೆರೆನಂಬುವರು. ಆದರೆ ಅವರ ಈ ನಂಬುಗೆಯು ತಪ್ಪಾಗಿದೆಯೆಂದು ತೋರಿಸುವುದಕ್ಕೆ ಪ್ರಯತ್ನಪಡಬೇಕು.

ಮಗುವು ಶಾಲೆಗೆ ಬಂದ ಬಳಿಕ ಆತನಿಗೆ ಆಯುಷ್ಯದಲ್ಲಿ ಮೊದಲನೆಯ ಸಲ ಹೊಸ, ವಿಪರೀತ ಪರಿಸ್ಥಿತಿಯನ್ನು ಎದುರಿಸುವ ಪ್ರಸಂಗವು ಬರುತ್ತದೆ. ಮನೆಯಲ್ಲಿ ತೀರ ಅಕ್ಕರೆಯಿಂದ ಬೆಳಿಸಿದ್ದರೆ ಆ ಅಕ್ಕರೆ ಕಕ್ಕುಲತೆಗಳ ಒಂದಂಶವೂ ಶಾಲೆಯ ಶಿಸ್ತಿನ ವಾತಾವರಣದಲ್ಲಿ ಅನುಭವಕ್ಕೆ ಬಾರದೆ ಮಕ್ಕಳು ತುಂಬ

ಗೋಳಾಡುವರು. ಅಭ್ಯಾಸವು, ಈ ಮನಸ್ಥಿತಿಯಲ್ಲಿ ತಲೆಯಲ್ಲಿ ಸೇರುವುದಿಲ್ಲ. ಹೆಡ್ಡನೆಂದು, ಅಥವಾ ಅಭ್ಯಾಸವನ್ನು ತಪ್ಪಿಸುವವನೆಂದು ಹೀಯಾಳಿಸಿಕೊಳ್ಳ ಬೇಕಾಗುವುದು. ಶಾಲೆಯಲ್ಲಿ ಅಭ್ಯಾಸ ಮಾಡದೆ ಹಿಂದುಳಿಯುತ್ತಿದ್ದಾನೆಂದು ಶಾಲೆಯಿಂದ ಮನೆಗೆ ವರದಿ ಬಂದೊಡನೆ ಮನೆಯ ವಾತಾವರಣದಲ್ಲಿಯೂ ಬದಲಾದುದು ಆತನಿಗೆ ಕಂಡು ಬರುತ್ತದೆ. ಒಮ್ಮೊಮ್ಮೆ ಇಂಥ ಪರಿಸ್ಥಿತಿಯು ಒಂದು ಉದ್ವೇಕಜನಕವಾದ ಶಿಕರಕ್ಕೆ ಮುಟ್ಟುವುದು. ಮನೆಯಲ್ಲಿ ಮುದ್ದಿನಿಂದ ಬೆಳಿಸಿದ ಮೂಲಕ ಅಲ್ಲಿ ಒಳ್ಳೆಯವನಾಗಿದ್ದ ಹುಡುಗನು ಮನೆಯ ಸಂಬಂಧ ತಪ್ಪಿದೊಡನೆಯೇ ಹೊಸಪರಿಸ್ಥಿತಿಯಲ್ಲಿ ಆತನ ಕೀಳರಿಮೆಯು ಮೇಲೆ ನೆಗೆದು ತೊಂದರೆಗೆ ಈಡಾಗುವನು. ಶಾಲೆಯಲ್ಲಿ ಕೆಟ್ಟ ಹುಡುಗನೆಂತ ಎಣಿಸಲ್ಪಡುವನು. ಇಂಥ ಪರಿಸ್ಥಿತಿಯ ಕಟುವಾದ ಪರಿಣಾಮವೆಂದರೆ, ಆತನಿಗೆ ತನ್ನ ತಾಯಿಯಲ್ಲಿ ತೀವ್ರ ತಿರಸ್ಕಾರ ಉಂಟಾಗುವುದು. ಏಕೆಂದರೆ ತನಗೆ ಅವಳು ಅಕ್ಕರೆ ಮಾಡಿ ಕೆಡಿಸಿದಳು. ಹಿತಮಾಡಲಿಲ್ಲ ಎಂಬ ಅರಿವು ತಲೆದೋರುವುದು. ಅವಳು ತನ್ನನ್ನು ಮೋಸಗೊಳಿಸಿದಳೆಂದು ಆ ದುರ್ದೈವಿ ಹುಡುಗನ ತಿಳುವಳಿಕೆಯಾಗುವುದು. ಈ ಹೊಸ ಸನ್ನಿವೇಶದಲ್ಲಿ ಆತನ ಮೊದಲಿನ ಅಕ್ಕರೆಯ ಮುದ್ದು ಮೊಗವು ಚಿಂತೆ ಬೇಸರು ಆಸರುಗಳ ನೆಲೆಬೀಡಾದುದು ಗೋಚರವಾಗುವುದು.

ಮನೆಯಲ್ಲಿ ತುಂಟನೂ ಜಗಳಗಂಟನೂ ಎನಿಸಿದ ಹುಡುಗನು ಶಾಲೆಯಲ್ಲಿ ಶಾಂತನೂ ಸಂಯಮಿಯೂ ಆಗುವುದು ಕಂಡು ಬರುವುದು. ಮನೆಯೊಳಗಿನ ಉಡಾಳತನದ ಉಪಟಳಕ್ಕೆ ಬೇಸತ್ತ ತಾಯಿಯು ಶಾಲೆಗೆ ಬಂದು ದೂರು ಹೇಳಿದಾಗ ಶಿಕ್ಷಕನಿಗೆ ಸೋಜಿಗವೆನಿಸುವುದು. ಶಾಲೆಯಲ್ಲಿ ಆತನು ಒಳ್ಳೆಯ ನಡತೆಯುವನಾಗಿದ್ದಾನೆ. ಚಿಂತಿಸಬೇಡಿ ಎಂದು ಹೇಳಿ ಕಳಿಸಬೇಕಾಗುವದು. ಇವಕ್ಕೆ ವಿರುದ್ಧವಾಗಿ, ಮನೆಯಲ್ಲಿ ತನ್ನ ಮಗನು ಎಲ್ಲಿರಿಗೂ ಬೆಲ್ಲದಂತೆ ಬೇಕಾಗಿ ರುವನೆಂದು ಹೆಮ್ಮೆಯಿಂದ ಹೇಳಬಂದ ಬಡತಾಯಿಯನ್ನು, ಶಿಕ್ಷಕನು, ಅದೇ ಹುಡುಗನು ವರ್ಗವನ್ನೇ ಕೆಡಿಸುವ ತಾಳಗೆಟ್ಟ ನಡತೆಯ ಪುಂಡನಾಗಿದ್ದುದನ್ನು ತಿಳಿಸುವ ಪ್ರಸಂಗವು ಬರುವುದು. ಮನೆಯಲ್ಲಾಗಲಿ ಶಾಲೆಯಲ್ಲಾಗಲಿ, ಮಕ್ಕಳು ಎಲ್ಲರ ಕಣ್ಮನಗಳೂ ತಮ್ಮ ಕಡೆಗೇ ಇರಬೇಕೆಂದು ಬಯಸುತ್ತಾರೆ. ಮಂದಿಯ ಮೆಚ್ಚುಗೆಯನ್ನು ಪಡೆಯಲು ಒದ್ದಾಡುತ್ತಾರೆ. ಇದು ಕೈಗೂಡಿದಾಗ ಅವರು ಒಳ್ಳೆಯವರಾಗಿ ಇರುತ್ತಾರೆ. ಹವಗೆಟ್ಟಲ್ಲಿ ಸಿಡಿಮಿಡಿಗೊಂಡು ಬಳಲುತ್ತಾರೆ.

### ಮನೆ ಮತ್ತು ಶಾಲೆ ಎರಡೂ ಎಡೆಯಲ್ಲಿ ಬೇಡವಾದರೆ ?

ಕೆಲವು ಮಕ್ಕಳಿಗೆ ಮನೆಯಷ್ಟೇ ಶಾಲೆಯೂ ಬೇಡವಾಗಿರುತ್ತದೆ. ಮನೆಯಲ್ಲಿಯೂ

ಬೈಗಳು ; ಶಾಲೆಯಲ್ಲಿಯೂ ಶಿಕ್ಷಕರ ಅಪಕೃಪೆ. ಇಂಥ ಸ್ಥಿತಿಯಲ್ಲಿ ಮಕ್ಕಳು ತುಂಬ ಸಂಕಟಪಟ್ಟುಕೊಳ್ಳುತ್ತಾರೆ. ಅವರ ತಪ್ಪುಗಳು ಇನ್ನೂ ಹೆಚ್ಚಾಗುತ್ತವೆ. ಅವ್ಯವಸ್ಥಿತತನ, ಹೊಲಸು ವೈಕ್ರಿಗಳು ಅವರ ಮನಸಿನ ಮಾಲಿನ್ಯ ದರ್ಶಕವೇ ಆಗುತ್ತವೆ. ಮನೆ ಮತ್ತು ಶಾಲೆಯಲ್ಲಿ ಎರಡೂ ಕಡೆಯು ಅವರ ನಡೆವಳಿಯು ಸರಿಯಾಗಿ ಇದ್ದಿಲ್ಲವಾಗಿದ್ದರೆ ಅವರ ಪೂರ್ವಚರಿತೆಯೊಳಗಿನ ಆಗು ಹೋಗುಗಳನ್ನು ಅರಿತುಕೊಳ್ಳಬೇಕು. ಎರಡೂ ಕಡೆಯ ಅವರ ನಡೆನುಡಿಗಳ ಸೂಕ್ಷ್ಮಪರೀಕ್ಷಣವು ಅತ್ಯವಶ್ಯಕವಾಗಿದೆ.

ಕೆಲಸಾರೆ ಮಧ್ಯಮ ತರಗತಿಯ ಜನರು ತಮ್ಮ ಮಕ್ಕಳು ಸಮಾಜದಲ್ಲಿ ಮೇಲಣ ವರ್ಗದವರೆನಿಸಿಕೊಳ್ಳಬೇಕೆಂಬ ಹಿರಿಯಾಸೆಯಿಂದ ಸಿರಿವಂತರ ಮಕ್ಕಳು ಕಲಿವ ಶಾಲೆಗೇ ಅವರನ್ನು ಕಳಿಸುವ ಹಟಹಿಡಿಯುತ್ತಾರೆ. ಇದರಿಂದ ಆ ಸಾಮಾನ್ಯರ ಮಕ್ಕಳಿಗೆ ಊರ ಶ್ರೇಷ್ಠಗಳ ಮಕ್ಕಳ ಸಾಲಿನಲ್ಲಿ ಇದ್ದಾಗ ಹಲವು ಬಗೆಯ ಅವ ಮಾನ ಚುಚ್ಚು ಮಾತುಗಳಿಗೆ ಗುರಿಯಾಗಬೇಕಾಗುವುದು. ಇಂಥವರು ಇಲ್ಲದ ಹಿರಿಯಾಸೆಯಿಂದ ತಮ್ಮ ಮಕ್ಕಳ ಮನಸಿನ ಮೇಲೆ ತೀರ ಅನಿಷ್ಟ ಪರಿಣಾಮ ಗಳಾಗುವುದಕ್ಕೆ ಕಾರಣರಾಗುತ್ತಾರೆ. ಶಾಲೆಯಲ್ಲಿಯ ಸಿರಿವಂತರ ಮಕ್ಕಳೆಲ್ಲ ಹೊಸದಾಗಿ ಬಂದ ಈ ಬಡಹುಡುಗರನ್ನು ತೀರಾ ಅಸಡ್ಡೆಯಿಂದಲೂ, ಅಸಹನೆ ಯಿಂದಲೂ ನೋಡಿ, ಕಾಡುವರು. ಹೊಸಬರ ವಿರುದ್ಧ ಹಗೆಕಟ್ಟಿ ನಿಲ್ಲುವರು. ಹೀಗೆ ಒಮ್ಮಿಂದೊಮ್ಮೆ ಹೊಂದುಗೂಡದ ವಾತಾವರಣದಲ್ಲಿ ತಂದೊಗೆಯಲ್ಪಟ್ಟ ಮಕ್ಕಳಿಗೆ ಶಾಲೆಯೆಂದರೆ, ಸೆರೆಮನೆಯೆನಿಸದೆ ಇರದು. ಆದರೂ, ಈ ಬಡ ಪಾಯಿಗಳು ಪಿಟ್ಟೆನ್ನದೇ ಅದೆಲ್ಲಕ್ಕೂ ತಲೆಬಾಗಿ, ತೊಳಲಾಡುತ್ತ ದಿನಗಳನ್ನು ನೂಕುವರು. ಮನೆಯುವರಿಗೆ ಕೂಡ ತಮ್ಮ ಈ ದುರ್ದಶೆಯನ್ನು ಅವರು ತಿಳಿ ಸುವುದಿಲ್ಲ. ನಾಚಿಕೆಗೀಡಾಗಿ ಅದೆಲ್ಲ ಅಪಮಾನ ಉಪಹಾಸಗಳನ್ನೂ ಸುಮ್ಮನೆ ಸಹಿಸುವರು. ಆದರೆ ಇಂತಹ ಮೂಕ ವೇದನೆಯು ಮುಂದಿನ ನಡೆವಳಿಯ ಅನರ್ಥಕಾರಿಯಾದ ಪರಿಣಾಮವನ್ನು ಮಾಡುವುದು. ಹೀಗೆ ನೊಂದು ಬೆಂದ ಮಕ್ಕಳು, ಹದಿನಾರು ಹದಿನೆಂಟು ವರ್ಷ ವಯಸ್ಸಿಗೆ ಬಂದೊಡನೆ, ಅವರ ಎಲ್ಲ ಪ್ರಗತಿಯು ಕುಂಠಿತವಾಗುತ್ತದೆ. ಅವರಲ್ಲಿ ಮನೋಮಾಲಿನ್ಯವು ಬೆಳೆದು ಎದೆಗುಂದಿದವರಾಗಿ, ಆತ್ಮ ವಿಶ್ವಾಸವೇ ಇಲ್ಲದಾಗುವುದು. ಬಾಳಿನ ಜೊತೆಗಾತಿ ಯೊಡನಾಗಲಿ, ಸಂಗಾತಿ ಗೆಳೆಯರೊಂದಿಗಾಗಲಿ ಹೊಂದಿಕೊಂಡು ಹಿರಿಮೆ ಹೊಂದುವ ಸಾಮಾಜಿಕತೆಯು ಈತನಲ್ಲಿ ಲುಪ್ತವಾಗುವುದು (ಕರ್ಣನ ಬಾಳಿನ ಗೋಳನ್ನು ಇಲ್ಲಿ ನೆನೆದುಕೊಳ್ಳಬಹುದು)

ಇಂಥ ಮಕ್ಕಳಿಗೆ ಏನು ಉಪಾಯ ? ತಮ್ಮ ಶಕ್ತಿಗಳನ್ನು ವ್ಯಕ್ತಮಾಡಲು

ಅವರಿಗೆ ಎಡೆ ಸಿಕ್ಕಿರುವುದಿಲ್ಲ. ಜಗತ್ತಿನಿಂದ ತಾವು ಬೇರ್ಪಟ್ಟಿರುವೆವೆಂದು ಅವರ ನಂಬುಗೆಯಾಗಿರುತ್ತದೆ. ಇಂಥವರಲ್ಲಿ ಕೆಲವರು ತಾವು ನೊಂದು ಹೆರವ ರನ್ನೂ ನೋಯಿಸಬಯಸುವರು. ಇವರು ಆತ್ಮಹತ್ಯೆಗೆ ಅಣಿಯಾಗುವರು ! ಇನ್ನು ಕೆಲವರಿಗೆ ಪರಿಚಿತರಿಂದ ಕಣ್ಮರೆಯಾಗಬೇಕೆಂಬ ಬಯಕೆ ಪೀಡಿಸುವುದು. ಹಲವರಿಗೆ ಹುಚ್ಚರ ಆಸ್ಪತ್ರೆಯನ್ನು ಆಶ್ರಯಿಸಬೇಕಾಗುವುದು. ಅಲ್ಲಿ, ಹೊರಗೆ ಇದ್ದ ಅಲ್ಪ ಸ್ವಲ್ಪ ಸಾಮಾಜಿಕತೆಯ ಸಂಧಿಯು ಕೂಡ ಇಲ್ಲದಾಗುವದು. ವ್ಯವಹಾರ ಲೋಕ ದಿಂದ ಅವರು ಇನ್ನೂ ದೂರ ಹೋಗಿ ನಿರಾಧಾರವಾದ ಕಲ್ಪನಾರಾಜ್ಯದಲ್ಲಿ ತೊಳ ಲಾಡುವರು. ತಲೆಯ ನೆಲೆತಪ್ಪಿ, ಮಾತಿನ ಬಗೆ ಬೇರೆಯಾಗಿ ತಮಗೆ ಜಗತ್ತೇ ಹಗೆಯಾಗಿದ್ದಂತೆ ಗ್ರಹಿಸಿ ಲೋಕವನ್ನೇ ತೆಗಳಿ ಉರಿದುರಿದು ಮಾತಾಡುವರು, ಉನ್ಮಾದದ ಸ್ಥಿತಿಯಲ್ಲಿ ಕಾಲಕಳೆವರು. ಇದು ಬುದ್ಧಿಭ್ರಂಶದ ಲಕ್ಷಣ. ಈ ದಾರಿಗೆ ಉರುಳುತ್ತಿರುವರನ್ನು ಉಳಿಸಿಕೊಳ್ಳಬೇಕಾದರೆ, ಅವರಲ್ಲಿ ಧೈರ್ಯವನ್ನೂ ಕಲ್ಪನೆಗಿಂತ ಕೆಲಸದ ಪ್ರೀತಿಯನ್ನೂ ಉಂಟು ಮಾಡಬೇಕು. ಇದು ಬಹಳ ಕಠಿಣವಾದ ಕೆಲಸ, ಆದರೂ ಪ್ರಯತ್ನಪಟ್ಟರೆ ಅಶಕ್ಯವಲ್ಲ.

ಮಕ್ಕಳ ಶೈಕ್ಷಣಿಕ ಸಮಸ್ಯೆಗಳ ಚರ್ಚೆ ಚಿಕಿತ್ಸೆಗಾಗಿ ಅವರ ಅಪೇಕ್ಷೆ ಆದರ್ಶ ಬಾಳಿನ ಬಗೆಯ ನಿದಾನವನ್ನು ಮಾಡುವುದು ಮೊದಲ ಕೆಲಸ. ಮಕ್ಕಳ ಎಳೆ ವಯಸ್ಸಿನ ಬೆಳವಣಿಗೆಯ ಸೂಕ್ಷ್ಮ ಪರಿಶೀಲನ, ಹಳೆ ನೆನಹುಗಳ ಸಂಕಲನ. ಅವರ ಮುಂದಿನ ಬಾಳಿನ ಆಲೋಚನೆ ವಿಚಾರಣೆ, ಕಲ್ಪನೆಗಿಂತ ಕೃತಿಯ ಪ್ರೀತಿ ಯನ್ನು ಉಂಟು ಮಾಡಬೇಕು. ಶಾರೀರಿಕ ಚಲನವಲನಗಳ ನಿರೀಕ್ಷಣ ಪರೀಕ್ಷಣ ಮೊದಲಾದ ಸಾಧನಗಳಿಂದ ಮಕ್ಕಳ ಮನೋರಚನೆಯ ಚಿಕಿತ್ಸೆಯನ್ನು ಮಾಡಬೇಕು.

## ಚೊಚ್ಚಿಲ, ನಡುವಲ ಮಕ್ಕಳ ಸ್ವಭಾವ ಭೇದ

ಮನೆಯಲ್ಲಿ ಹಿರಿಯ ಮಗನ ಸ್ಥಾನಮಾನಗಳನ್ನು ಕುರಿತು ಈ ಮೊದಲೇ ಸ್ವಲ್ಪ ವಿವರಿಸಿದ್ದಾಗಿದೆ. ಹಿರಿಯನು, ಕಿರಿಯರು ಬೆನ್ನಲಿ ಬರುವವರಿಗೆ ಏಕಮಾತ್ರ ಪುತ್ರನಾದ್ದರಿಂದ ಅನಿಯಂತ್ರಿತ ಅಧಿಕಾರ-ಉಪಚಾರಗಳನ್ನು ಅನುಭವಿಸುವನು. ಅನಂತರ ಅವನು ಪದಚ್ಯುತನಾಗುವನು. ಕಿರಿಯರಲ್ಲಿ ತಾವು ಹಿರಿಯರಲ್ಲವೆಂಬ ಅರಿವು ಮೊಳೆತು ಕೆಲವೊಂದು ನ್ಯೂನ ಭಾವನೆಯು ಬೆಳೆಯುವುದು. ಕುಟುಂಬದಲ್ಲಿ ಎಷ್ಟನೆಯ ಮಗುವು ಎಂಬುದು, ಆ ಮಗುವಿನ ಮನೋವೃತ್ತಿಯನ್ನು ಅರಿತು ಕೊಳ್ಳಲು ಅತ್ಯಂತ ಮಹತ್ವದ ಸಂಗತಿಯಾಗಿದೆ.

ಚೊಚ್ಚಿಲ ಮಕ್ಕಳಲ್ಲಿ ಕ್ರಾಂತಿಕಾರಿಗಳು ಕಡಿಮೆ. ಪರಂಪರಾ ಪ್ರೀತಿಯೇ ಹೆಚ್ಚು. ಇದ್ದುದು ಇದ್ದಂತೆಯೇ ಉಳಿಯಲೆಂಬ ಮನೋಭಾವವುಳ್ಳವರದು. ಅಧಿಕಾರಿಗಳು ಅಧಿಕಾರದಲ್ಲಿಯೇ ಉಳಿಯಬೇಕೆಂಬ ವಿಚಾರ ಇವರಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವುದು. ತಮ್ಮನು ಹುಟ್ಟಿದ ಒಂದು ಆಕಸ್ಮಿಕ ಕಾರಣಕ್ಕಾಗಿ ಅವರು ಅಕ್ಕರೆಯ ಪಟ್ಟದಿಂದ ಪದಚ್ಯುತರಾದರೂ ಅವರ ಅಧಿಕಾರ ಪ್ರೀತಿಯು ನಷ್ಟವಾಗಿರುವುದಿಲ್ಲ. ಎರಡನೆಯ ಹುಡುಗನ ಪರಿಸ್ಥಿತಿಯು ಇದಕ್ಕಿಂತ ತೀರ ಬೇರೆಯಾಗಿರುತ್ತದೆ. ಅವನೆದುರು ಸ್ಪರ್ಧೆಗೆ ಒಬ್ಬನು (ಹಿರಿಯನು) ಯಾವಾಗಲೂ ಇದ್ದೇ ಇರುತ್ತಾನೆ. ಆತನನ್ನು ಸರಿಗಟ್ಟುವುದರಲ್ಲಿಯೇ ಅವನು ತೊಡಗಿರುತ್ತಾನೆ. ಮನೆಯವರ ಪ್ರೀತಿಯ ಮೊದಲ ಮೀಸಲದ ಮಧುರಫಲವನ್ನು ಸವಿವ ಭಾಗ್ಯವು ತನ್ನದಲ್ಲವೆಂದು ಕಿರಿಯನು ಬಲ್ಲನಾದರೂ ಆತನಿಗೆ ಹಿರಿಯನೇ ಯಾವಾಗಲೂ ಮೇಲೆ ಉಳಿಯಬೇಕೆಂದು ಎನಿಸುವುದಿಲ್ಲ. ಈತನು ಅಧಿಕಾರವನ್ನು ಮನ್ನಿಸಿ ಅದಕ್ಕೆ ತಲೆಬಾಗತಕ್ಕವನಲ್ಲ. ಈರ್ಷೆಯಿಂದ ಸೆಣೆಸಿ ಅದನ್ನು ಪಡೆವ ಹಂಬಲಿಗನು; ಅಧಿಕಾರವು ತನ್ನ ಕೈ ಸೇರಬೇಕೆಂದು ಬಯಸುವವನು. ಅವನ ಚಟುವಟಿಕೆಗಳಲ್ಲಿ ಈಗಿದ್ದುದಕ್ಕಿಂತ ಮುಂದಿನದೊಂದು ಮೆಟ್ಟಕ್ಕೆ ಏರಿ ಹೋಗಬೇಕೆಂಬ ಹಂಬಲ ಹುಮ್ಮಸಗಳು ಒಡೆದು ಕಾಣುತ್ತವೆ. ನಿಸರ್ಗದ ಮತ್ತು ವಿಜ್ಞಾನದ ನಿಯಮಗಳನ್ನೂ ಪಲ್ಲಟಿಸುವ ಇಚ್ಛೆ ಅವರಿಗೆ. ರಾಜಕಾರಣದಲ್ಲಿ ಅಲ್ಲವಾದರೂ ಸಾಮಾಜಿಕ ಜೀವನದಲ್ಲಂತೂ ಈತನು ಕ್ರಾಂತಿಕಾರಿ. (ಬಲರಾಮ ಕೃಷ್ಣರು ಇಂತಹ ಹಿರಿಕಿರಿಯ ಸೋದರರ ಮನೋವೃತ್ತಿಯ ಪ್ರಾತಿನಿಧಿಕ ಪ್ರತೀಕರಾಗಿದ್ದಾರೆ; ಬಲರಾಮ ಪರಂಪರಾ ಪ್ರಿಯ, ಕೃಷ್ಣ ಕ್ರಾಂತಿಕಾರಕ ಕಾರಸ್ಥಾನಿ. ಧರ್ಮ, ಭೀಮರ ಮನೋವೃತ್ತಿಯಲ್ಲಿದ್ದ ಭೇದವೂ ವಿಚಾರಾರ್ಹವಾಗಿದೆ) ಎಲ್ಲಕ್ಕೂ ಕಿರಿಯ ಮಗುವಿನ ಸ್ಥಾನವು ಮನೋವಿಜ್ಞಾನದ ದೃಷ್ಟಿಯಿಂದ ಅತ್ಯಂತ ಸ್ವಾರಸ್ಯದ್ದಾಗಿದೆ. ಎಲ್ಲಕ್ಕೂ ಕಿರಿಯನಾದವನನ್ನು ಮಹತ್ವದ ಪದದಿಂದ ತಳ್ಳಲು ಮತ್ತಾರೂ ಇರುವುದಿಲ್ಲ. ಆತನಿಗೆ ಉಳಿದ ಪರಿಸ್ಥಿತಿಯು ಸರಿಯಾಗಿದ್ದರೆ, ಅವನ ವಿಕಾಸವು ಚೆನ್ನಾಗಿಯೇ ಆಗುವುದು, ಉತ್ಸಾಹ ಉದ್ಯೋಗ ಪ್ರಿಯತೆಗಳಲ್ಲಿ ಈತನು ಮರುಚಲನನ್ನು ಹೋಲುತ್ತಾನೆ. ಈತನಿಗೂ ಸರಿಗಟ್ಟಬೇಕಾದ ಮುಂದಾಳುಗಳಿರುತ್ತಾರೆ; ಸೆಣಸಾಡಬೇಕಾದ ಎದುರಾಳಿಗಳಿರುತ್ತಾರೆ. ಆದರೂ ಮಿಕ್ಕ ಎಲ್ಲರಿಗಿಂತ ಈತನು ಬೇರೆಯಾದ ಒಂದು ಬಗೆಯಲ್ಲಿ ನಡೆಯುತ್ತಾನೆ. ಕುಟುಂಬದವರೆಲ್ಲ ವಿಜ್ಞಾನಿಗಳಿದ್ದರೆ, ಈತನು ಕಲಾವಿದನಾಗಬಹುದು. ಕುಟುಂಬದವರೆಲ್ಲ ಧನಿಕ ಶ್ರೇಷ್ಠಿಗಳಿದ್ದರೆ ಈತನು ಕವಿಯಾಗಬಹುದು. ತಂದೆ ಅಣ್ಣಂದಿರೆಲ್ಲ ವಕೀಲರಾಗಿದ್ದರೆ ಈತನು ವೈದ್ಯನಾಗಬಹುದು. ಈತನದು ಯಾವಾಗಲೂ ತನ್ನದೇ ಒಂದು ದಾರಿ ಬೇರೆ. ಒಂದೇ ಕಾರ್ಯಕ್ಷೇತ್ರದಲ್ಲಿ ಅಣ್ಣಂದಿರೊಡನೆ ಸಾಗುವಲ್ಲಿ ಪ್ರತಿಸ್ಪರ್ಧೆಯ ತೊಡಕು ಹೆಚ್ಚು;

ಬೇರೆ ಹಾದಿ ಹಿಡಿದರೆ ಸಲೀಲವಾಗಿ ಸ್ಪರ್ಧೆ ವಿರೋಧವಿಲ್ಲದೇ ಮುಂದರಿಯ ಬಹುದು. ಈ ನಡೆವಳಿಯು ಆತನಲ್ಲಿರುವ ಧೈರ್ಯದ ಕೆಲವೊಂದು ಕೊರತೆಯ ಲಕ್ಷಣವಾಗಿದೆ. ಧೈರ್ಯವು ಸಾಕಷ್ಟಿದ್ದುದಾದರೆ, ಆತನು ತನಗಾಗಿ ಹೊಸ ಹಾದಿಯನ್ನು ಹುಡುಕುತ್ತಿದ್ದಿಲ್ಲ. ಮನೆತನದ ಮಿಕ್ಕವರ ಮಾರ್ಗದಲ್ಲಿಯೇ ಸ್ಪರ್ಧೆಗಾಗಿ ಸೇರಲು ಸಿದ್ಧನಾಗುತ್ತಿದ್ದನು.

ಆದರೆ ಇಲ್ಲಿ ಒಂದು ಮಾತು ನೆನಪಿಡಬೇಕು. ಕುಟುಂಬದಲ್ಲಿಯ ಅನುಕ್ರಮಿಕ ಸ್ಥಾನದ ಮೂಲಕ ಮಕ್ಕಳ ಸ್ವಭಾವ ಧರ್ಮದಲ್ಲಿ ಒದಗುವ ವ್ಯತ್ಯಾಸಗಳ ಸ್ಥೂಲ ಪ್ರವೃತ್ತಿಗಳನ್ನಷ್ಟೇ ಇಲ್ಲಿ ಸೂಚಿಸಲಾಗಿದೆ. ಇವಿಷ್ಟೇ ಪ್ರವೃತ್ತಿಗಳು ಮಾತ್ರ ಆತನಲ್ಲಿ ಕಾಣಿಸಿಕೊಳ್ಳುವವೆಂದು ಗ್ರಹಿಸಲಾಗದು. ಉದಾಹರಣೆಗಾಗಿ, ಹಿರಿಯ ಮಗುವು ಒಳ್ಳೇ ಮೇಧಾವಿಯಾಗಿದ್ದುದಾದರೆ, ಮಿಕ್ಕ ಮಕ್ಕಳಿಂದ ಅವನನ್ನು ಸರಿಗಟ್ಟಿ ಹಿಮ್ಮೆಟ್ಟಿಸಲಿಕ್ಕಾದೀತೆಂಬುದು ಶಕ್ಯವಿಲ್ಲ. ಆದ್ದರಿಂದ ಆತನ ಬಾಳಿನಲ್ಲಿ ಪದಚ್ಯುತಿಯ ದುರಂತ ಸಂಭವಿಸಲಿಕ್ಕಿಲ್ಲ. ತನ್ನ ತಮ್ಮಂದಿರನ್ನು ಈರ್ಷೆ ಅಸೂಯೆ ಗಳಿಂದ ನೋಡಲಿಕ್ಕಿಲ್ಲ. ಆದರೆ ಇಂಥಲ್ಲಿ ತಮ್ಮನು ಬಿಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸಬೇಕಾಗುವುದು. ಏಕೆಂದರೆ ಈತನು ತನ್ನ ಅಣ್ಣನನ್ನು ನಿಜವಾಗಿಯೂ ಸರಿಗಟ್ಟಲಾರ. ಹಿಮ್ಮೆಟ್ಟಿಸಲಾರ. ಇದರಿಂದ ಇವರು ಎದೆಗೆಟ್ಟು, ಆಸೆ ಬಿಟ್ಟು, ಬಾಳಿನಲ್ಲಿ ಅಡ್ಡ ಹಾದಿಗೆ ಬೀಳುವ ಸಂಭವವಿದೆ. (ಅಣ್ಣ ಬಾಳಾಜಿ ಬಾಜೀರಾಯನನ್ನು ಸರಿಗಟ್ಟಲಿಕ್ಕಾಗದ ಪೇಶವೆ ರಾಘೋಬನ ಉದಾಹರಣೆ ನೋಡಬಹುದು) ಈತನು ಅಸೂಯೆಯವನಾಗುವನು. ಆಶೆಯ ಬಂಧನದಲ್ಲಿದ್ದರೇ ಜೀವನದ ಹೆದ್ದಾರಿಯ ಜಯದ ಜೂಜಾಟವಲ್ಲಿ ನುಗ್ಗಿ ಮುಂದೆ ನಡೆಯುವನು. ಸಾಮಾನ್ಯ ರಿಗೆ ಆಶೆಯು ಅಳಿದರೆ ಬಾಳಿನ ಸೊಗಸೇ ಹಾಳಾಗುವುದು. ಮರದ ಬೆಳವಣಿಗೆಗೆ ಬೇರಿನ ಬಂಧನವು ಬೇಕಾಗುವಂತೆ, ಮನುಷ್ಯನ ಬಾಳಿನ ವಿಕಾಸಕ್ಕೂ ಕೂಡ ಆಶೆಯುಪಾಶದ ಬಿಗಿತವು ಬೇಕು.

## ಏಕ ಪುತ್ರ ವಿಷಯ

ಏಕಾಕಿಯಾದ ಮಗುವಿನ ತೊಡಕೂ ಅಷ್ಟಿಷ್ಟಲ್ಲ. ಚಿಕ್ಕಂದಿನಲ್ಲಿ ಮನೆಯಲ್ಲಿ ಈತನ ಮಾತೇ ಮಾತು. ಈತನ ವಿಚಾರವೇ ವಿಚಾರ. ಎಲ್ಲರ ಕಣ್ಣ ಹಬ್ಬವಾಗಿ ಎಲ್ಲರ ಅಕ್ಕರೆಯ ವಸ್ತುವಾಗಿ ಬೆಳೆದ ಈ ಮಗುವು ಮುಂದಿನ ಆಯುಷ್ಯದಲ್ಲಿಯೂ ಹೀಗೆಯೇ ಮೆರೆಯಲು ಬಯಸುತ್ತದೆ. ಮಂದಿಯ ತಲೆಯ ಮೇಲೆ ಮೆಣಸು ಅರೆಯಲು ಹಾರೈಸುತ್ತದೆ.ತಾನೇ ಸರ್ವಾಧಿಕಾರಿಯಾಗಿ ಎಲ್ಲರ ಮೇಲೂ

ಆಳಬೇಕೆಂದು ಹಾತೊರೆಯುತ್ತದೆ. ಆದರೆ ಜೀವನ ಕಲಹದ ಕೋಲಾಹಲದಲ್ಲಿ ಇದು ಎಷ್ಟರವುಟ್ಟಿಗೆ ಶಕ್ಯವೆಂಬುದರ ವಿಚಾರವೂ ಅದರ ತಲೆಗೆ ಸೋಂಕುವುದಿಲ್ಲ ! ನೆತ್ತಿಗೇರಿದ ಕಣ್ಣಿನಿಂದಲೇ ಇದು ಲೋಕವನ್ನೆಲ್ಲ ಕಾಣುವುದು. ಇದರ ಬಾಳಿನ ಬಗೆಯೆ ಇಂತಹದು. ಅಂತಹರ ಮಾತಿನಲ್ಲಿ ವಿಚಾರಕ್ಕೆ ತರ್ಕಬದ್ಧತೆಗೆ ಬೆಲೆಯಿಲ್ಲ. ವಿಕಾರ, ಅಹಂಕಾರಗಳೇ ಇವರ ಮಾತಿನ ಪ್ರಚೋದಕ ಶಕ್ತಿಯಾಗಿರುತ್ತವೆ. ಇವರಂತೆ ಹಲವು ಹೆಣ್ಣು ಮಕ್ಕಳಲ್ಲಿ ಒಬ್ಬನೇ ತಮ್ಮನಾಗಿ ಹುಟ್ಟಿ ಬೆಳೆದ ಹುಡುಗನ ಸಮಸ್ಯೆಯೂ ಗಡಚಾಗಿದೆ. ಅಕ್ಕತಂಗಿಯರಲ್ಲಿಯೇ ಪೂರ್ಣವಾಗಿ ಬೆಳೆದ ಹುಡುಗನಲ್ಲಿ (ಉತ್ತರ ಕುಮಾರನಂತೆ) ಹೆಣ್ಣು ಸ್ವಭಾವವೇ ಹೆಚ್ಚಾಗಿ ಒಡಮೂಡುವುದು. ಆದರೂ ಇದು ಸ್ವಲ್ಪ ಅತಿಶಯೋಕ್ತಿಯಾಗಿದೆ. ಹಾಗೆ ನೋಡಿದರೆ ಹೆಣ್ಣಿನ ಮಡಿಲಲ್ಲಿಯೇ ಬೆಳೆದು ಅವರ ಆರೈಕೆ ಉಪಚಾರಗಳಿಂದ ದೊಡ್ಡವರಾಗಿ ಕೊನೆಗೆ ಒಬ್ಬ ಜೊತೆಗಾತಿಯೊಡನೆಯೇ ಕಾಲಕಳೆಯಬೇಕಾದ ಗಂಡು, ಹೆಣ್ಣಿನ ಪ್ರಭಾವಕ್ಕೆ ಒಳಗಾಗಿಯೇ ಇಲ್ಲವೆಂದು ಹೇಳುವುದು ಅನುಚಿತವಾದೀತು. ಆದರೂ ಕೇವಲ ಅಕ್ಕತಂಗಿಯರಲ್ಲಿಯೇ ಬೆಳೆಯಬೇಕಾದವರ ಬಿಕ್ಕಟ್ಟೇನೆಂದರೆ, ಅವರ ಇಡೀ ಕುಟುಂಬವು ಹೆಣ್ಣಿನ ಪಾಳಿಗಾಗಿಯೇ ಮೀಸಲು ಇಟ್ಟಂತೆ ಇರುತ್ತದೆ. ಒಂದು ಮನೆಯೊಳಗೆ ಕಾಲಿಟ್ಟೊಡನೆಯೇ ಆ ಕುಟುಂಬದಲ್ಲಿ ಹೆಣ್ಣು ಹೆಚ್ಚೋ ಗಂಡು ಹೆಚ್ಚೋ ಎಂಬುದನ್ನು ಹೇಳಬಹುದು. ಹುಡುಗರು ಹೆಚ್ಚಿದ್ದಲ್ಲಿ ಸಾಮಾನ್ಯವಾಗಿ ಒಡಕು ಮುರುಕು ಒಡವೆಗಳು ಹೆಚ್ಚು. ಹಾಗೆಯೇ ಹುಡುಗಿಯರು ಹೆಚ್ಚಿದ್ದ ಮನೆ ಹಸನಾಗಿಯೂ ಅಚ್ಚುಕಟ್ಟಾಗಿಯೂ ಕಾಣುವುದು. ಹೆಂಗಳೆಯರಲ್ಲಿ ಬೆಳೆದ ಹುಡುಗನು ಕೆಲವಾರೆ ಹೆಣ್ತನವನ್ನು ಅನುಕರಿಸುವ ಬದಲು, ಪ್ರತಿಕ್ರಿಯೆಯೆಂದು ತನ್ನ ಗಂಡು ಗುಣಗಳನ್ನೇ ಮೆರೆಯಿಸಲು ವಿಶೇಷವಾಗಿ ಹೆಣಗುವುದೂ ಉಂಟು. ಅಥವಾ ಅಕ್ಕತಂಗಿಯರ ಪ್ರಭಾವದಿಂದ ಹೆಣ್ಣು ಗುಣಗಳೇ ಆತನ ಮೈಗೂಡುವವು. ಆತನು ತೀರ ಮೆಲು ಮಾತಿನವನೂ, ಕೋಮಲ ಅಂತಃಕರಣೆಯೂ ಆಗುವನು. ತೀರ ಒರಟು ತೀರ ಬಿರುಸು ಸ್ವಭಾವವನ್ನಾದರೂ ಬೆಳೆಸಿಕೊಳ್ಳುವನು. ತನ್ನ ಅಕ್ಕತಂಗಿಯರಿಂದ ತಾನು ಬೇರೆಯೆಂಬುದನ್ನು ತೋರಿಸಿಕೊಳ್ಳುವ ಹಠದ ವಿಪರೀತ ಪರಿಣಾಮವಿದು.

ಹಾಗೆಯೇ ಹಲವು ಹುಡುಗರ ನಡುವೆ ಬೆಳೆದ ಓರ್ವಳೇ ಮಗಳೂ ವಿಶೇಷವಾದ ಬಿಕ್ಕಟ್ಟಿಗೆ ಒಳಗಾಗುತ್ತಾಳೆ. ಇವಳೂ ತನ್ನ ಪರಿಸ್ಥಿತಿಯ ವಿರುದ್ಧ ತೀವ್ರವಾಗಿ ಹೋರಾಡುವಳು. ಇವಳಲ್ಲಿಯೂ ಮೇಲಿನಂತೆ ಎರಡು ವಿಶೇಷ ವೃತ್ತಿಗಳು ಕಾಣಿಸಿಕೊಳ್ಳುವವು. ಹೆಣ್ಣುತನದ ಮೃದುಭಾವವನ್ನೇ ಅತಿಯಾಗಿ ಬೆಳೆಸಿಕೊಂಡು, ಬಹಳ ಶಾಂತಳಾಗಿ ಸೌಮ್ಯಳಾಗಿ ವರ್ತಿಸಬಹುದು. ಇಲ್ಲವೇ ಇವಕ್ಕೆ ವಿರುದ್ಧವಾಗಿ

ತನ್ನ ಒಡನಾಡಿ ಅಣ್ಣತಮ್ಮಂದಿರನ್ನು ಅವರ ಒರಟು ಉರಟು ಸ್ವಭಾವಗಳಿಂದಲೇ ಸರಿಗಟ್ಟಲು ಹೆಣಗಿ ಗಂಡುಬೀರಿಯಾದರೂ ಆಗಬಹುದು. ಈ ವೃತ್ತಿಯು ಹಾಗೆಯೇ ಬಲಿತರೆ ಮುಂದೆ ಯೌವನದಲ್ಲಿ ಅನಿಷ್ಟ ಪರಿಣಾಮಗಳು ಆಗುವವು. ದಾಂಪತ್ಯ ಜೀವನದಲ್ಲಿ ತಾನು ಪುರುಷ-ಭೂಮಿಕೆಯನ್ನೇ ವಹಿಸಬೇಕೆಂಬ ಹುಸಿಯಾದ ಪಟಕ್ಕೆ ಬಿದ್ದು ಬಾಳಿನಲ್ಲಿ ಅಂಡಗೇಡಿಯೆನಿಸುವಳು. ಗಂಡಸರನ್ನು ಅನುಕರಿಸುವ ಭರದಲ್ಲಿ ಅವರಂತೆ ತಾನೂ ಏಕೆ, ಲೈಂಗಿಕ ಸ್ವಾತಂತ್ರ್ಯವನ್ನು ವಹಿಸಬಾರದೆಂಬ ಹುಚ್ಚು ಹಂಬಲವನ್ನು ತಲೆಯಲ್ಲಿ ಹಾಕಿಕೊಳ್ಳುತ್ತಾಳೆ. ಏಕೆಂದರೆ, ಗಂಡಸರು ಹಾಗೆ ಇರುವರೆಂದು ಇವಳ ಗ್ರಹಿಕೆಯಾಗಿರುತ್ತದೆ.

ಕೆಲಸಾರೆ ಹಿರಿಯ ಮಗುವು ಗಂಡು ಮತ್ತು ಎರಡನೆಯದು ಹೆಣ್ಣು ಆಗಿದ್ದಲ್ಲಿ ಒಂದು ವಿಚಿತ್ರ ಪರಿಸ್ಥಿತಿಯು ಉಂಟಾಗುತ್ತದೆ. ಇಂಥಲ್ಲಿ, ಅಣ್ಣ ತಂಗಿಯರ ಬಾಳಿನ ಬೆಳವಣಿಗೆಯು ತೀವ್ರ ಸ್ಪರ್ಧೆಯ ಸ್ವರೂಪವನ್ನು ತಾಳುತ್ತದೆ. ಹಿರಿ ಹುಡುಗನ ವಿರುದ್ಧ ತಂಗಿಯನ್ನು ಎರಡನೇ ಶಿಶುವೆಂದಲ್ಲದೆ, ಹೆಂಗಸೆಂದೂ ಅವಳನ್ನೂ ಮುಂದೂಡಲಾಗುತ್ತದೆ. ಅವಳ ಮಾನಸಿಕ ಬೆಳವಣಿಕೆ ತೀವ್ರವಾಗಿ ಸಾಗುತ್ತದೆ. ಶಿಕ್ಷಣದಲ್ಲೂ ಅವನನ್ನು ಬೆನ್ನಟ್ಟುತ್ತಾಳೆ. ಅವಳು ಸಮರ್ಥಳೂ ಸ್ವತಂತ್ರಳೂ ಆಗಿ ಬೆಳೆಯುವಳು. ತಂಗಿಯು ತನ್ನನ್ನು ಸರಿಗಟ್ಟುವಳೆಂಬುದನ್ನು ಕಂಡು ಹಿರಿಯ ಹುಡುಗನು ಗಾಬರಿಯಾಗುವನು. ಹುಡುಗರಿಗಿಂತ ಹುಡುಗೆಯರು ಮೈ ಕೈಗಳಿಂದ ಭರದಿಂದ ಬೆಳೆಯುವರು. ಹನ್ನೆರಡು ವರ್ಷ ವಯಸ್ಸಿನ ಹುಡುಗಿಯು ಅದೇ ವಯಸ್ಸಿನ ಹುಡುಗನಿಗಿಂತ ಹೆಚ್ಚು ಎದ್ದು ಕಾಣುವಳು. ಬುದ್ಧಿಯಿಂದ ಹೆಚ್ಚು ತೀಕ್ಷ್ಣಳಿರುವಳು. ಅವಳ ಎಲ್ಲ ಶಕ್ತಿಗಳ ವಿಕಾಸವು ಹೆಚ್ಚು ವೇಗವಾಗಿ ಆಗುವುದು. ಹುಡುಗನು ಇದನ್ನು ಕಂಡು ನೊಂದುಕೊಳ್ಳುವನು. ತಾನು ಹಿಂದೆ ಬೀಳುವೆನೆಂದು ಹೆದರುವನು. ತನ್ನ ತಂಗಿಗಿಂತ ತಾನು ಕಿರುಕುಳನೇ ಎಂಬ ಸಂದೇಹವು ಬಾಧಿಸಹತ್ತುವುದು. ಕೀಳರಿಮೆ ತಲೆ ಎತ್ತುವುದು. ಬಾಳಿನ ಸ್ಪರ್ಧೆಯಲ್ಲಿ ಆತನು ಹಿಂದೆ ಬೀಳಹತ್ತುವನು. ಬಾಳಿನ ನಡುಗಾಳೆಗದಲ್ಲಿ ಕೈಯೊಳಗಿನ ಆಯುಧ ಚೆಲ್ಲಿ ಕಣದಿಂದ ಕಾಲ್ದೆಗೆಯಬಯಸುವನು. ಆತನಿಗೆ ಇನ್ನು ಮುನ್ನಡೆಯಿಲ್ಲ. ಕೆಲವೊಮ್ಮೆ ತನ್ನ ಈ ಪಲಾಯನಕ್ಕಾಗಿ ಆತನು ಸಂಗೀತ, ಚಿತ್ರಕಲೆಯ ಕಾಲು ದಾರಿಯನ್ನು ಹಿಡಿಯುವನು. ಆದರೆ ಹಲವೊಮ್ಮೆ ಆತನ ಮನೋವಿಕೃತಿಯ ರೋಗವು ಒಲಿಯುವುದು. ಸುಳ್ಳು ತುಡುಗುಗಳ ಕಡೆಗೆ ಒಲಿಯುವನು. ಇಲ್ಲವೇ ಬುದ್ಧಿಭ್ರಂಶಕ್ಕೆ ಬಲಿಯಾಗಿ ಅರೆಹುಚ್ಚ, ಪೆದ್ದ-ಪೆಚ್ಚನೆನಿಸುವನು. ತನ್ನ ಗಂಡು ಗುರಿಯನ್ನೇ ವಿಕಾಸಗೊಳಿಸಿ ಮುಂದುವರಿವ ಧೈರ್ಯಸಾಮರ್ಥ್ಯಗಳು ತನ್ನಲ್ಲಿ ಉಂಟೆಂದು ಆತನಿಗೆನಿಸುವುದಿಲ್ಲ. ಇಂಥವರ ಬಿಕ್ಕಟ್ಟನ್ನು ಬಗೆಹರಿಸಲು, ಅವರ ಈ

ಸ್ಪರ್ಧಾಭಯವನ್ನು ಹೋಗಲಾಡಿಸುವುದು ಅಗತ್ಯ. ಅದಕ್ಕಾಗಿ ಸೋದರ ಸೋದರಿಯನ್ನು ಸೆಣಸಾಟಕ್ಕೆ ಅವಕಾಶವಿಲ್ಲದ ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ತೊಡಗಿಸುವುದು ಉಚಿತ. ಇದಲ್ಲದೇ ತಂಗಿಯ ಹೆಚ್ಚಿನ ಯಶಸ್ವಿತೆಯ ಕಾರಣವು, ಆಕೆಯ ಯತ್ನದ, ಎಡಬಿಡದ ಪ್ರಯತ್ನದ ಫಲವೆಂದು ಅಣ್ಣನ ಮನಸ್ಸಿನ ಮೇಲೆ ಬಿಂಬಿಸಬೇಕು. ತನಗಿಂತ ಹೆಚ್ಚು ಅಭ್ಯಾಸ ಅಧ್ಯವಸಾಯ ಮಾಡಿದ ಮೂಲಕವೇ ಆಕೆ ತನ್ನನ್ನು ಮೀರಲು ಸಮರ್ಥಳಾದಳೆಂಬುದನ್ನು ಆತನಿಗೆ ಮನಗಾಣಿಸಿ ಕೊಡ ಬೇಕು. ಪ್ರತಿಯೊಬ್ಬರ ಗುಣ, ಶಕ್ತಿಗಳು ಸರಿಯಾಗಿ ವಿಕಾಸವಾಗುವಂತಹ ಬೇರೆ ಬೇರೆ ಕಾರ್ಯಕ್ಷೇತ್ರಗಳನ್ನು ತೋರಿಸಿಕೊಟ್ಟು, ವ್ಯರ್ಥವಾದ ಜೂಜಿನ ಮಕ್ಕಳು ಜೀವನದಲ್ಲಿ ಗೋಳಾಟಕ್ಕೆ ಈಡಾಗುವುದನ್ನು ತಪ್ಪಿಸುವುದು ತಾಯ್ತಂದೆ ಗಳ ಕರ್ತವ್ಯವಾಗಿದೆ. ●

# ೯ ಸಾಮಾಜಿಕ ಸಮಸ್ಯೆಗಳೂ-ಸಾಮರಸ್ಯವೂ

ಸಮಾಜದೊಡನೆ ಒಂದಿಕೊಂಡು, ಹೊಂದಿಕೊಂಡು ಹೇಗೆ ಬಾಳಬೇಕೆಂದು ಕಲಿಸುವುದೇ ವ್ಯಕ್ತಿಮನೋವಿಜ್ಞಾನದ ಗುರಿ. ಇದು ವಿರೋಧಾಭಾಸವೆನಿಸಿದರೂ ಕೇವಲ ಮೇಲ ತೋರಿಕೆಯದು. ಏಕೆಂದರೆ ವ್ಯಕ್ತಿಜೀವನದ ವ್ಯವಹಾರ್ಯ ಸ್ವರೂಪದ ವಿಚಾರವನ್ನು ಮಾಡುವ ಪ್ರತಿಯೊಬ್ಬರಿಗೂ ಮಾನವನು ಸಮಾಜದ ಅವಿಭಾಜ್ಯವಾದ ಅಂಗವಾಗಿರುವನೆಂಬ ಮನವರಿಕೆಯು ಆಗದೆ ಇರದು : ಸಮಾಜವೆಂಬುದೇ ಇಲ್ಲದಿದ್ದಲ್ಲಿ ವ್ಯಕ್ತಿಯ ವ್ಯಕ್ತಿತ್ವಕ್ಕೆ ಬೆಲೆಯೇ ಇದ್ದಿಲ್ಲ. ಸಮಾಜವಿರುವುದರಿಂದಲೇ ವ್ಯಕ್ತಿ ಬಾಳಿದೆ. ಬದುಕಿದೆ. ವ್ಯಕ್ತಿಯ ಅಳಿವು, ಉಳಿವು ಸಮಾಜವನ್ನೇ ಅವಲಂಬಿಸಿದೆ. ಆದುದರಿಂದ ವ್ಯಕ್ತಿಯ ಗುರಿಯು ತನ್ನ ಸಾಮಾಜಿಕ ಉಪಯುಕ್ತತೆಯನ್ನು ವಿಕಾಸಗೊಳಿಸಿಕೊಳ್ಳುವುದೇ ಆಗಿದೆ. ಇದುವರೆಗೆ ವ್ಯಕ್ತಿತ್ವದ ವೈಯಕ್ತಿಕ ದೃಷ್ಟಿಯಿಂದ ಬಾಳಿನ ಬಗೆಯನ್ನು ಪರಿಕಿಸಿದ್ದಾಯಿತು. ಇದೀಗ ಸಾಮಾಜಿಕತೆಯ ದೃಷ್ಟಿಯಿಂದ ಅದರ ಸಮಸ್ಯೆಗಳನ್ನು ವಿವರಿಸುವುದಗತ್ಯವಾಗಿದೆ. ವ್ಯಕ್ತಿ ಜೀವನದ ಶೈಲಿಗಳ ವಿಚಾರ ಮಾಡಿದನಂತರ ಇನ್ನು ಅಂಥ ಜೀವನ ಶೈಲಿಗಳು ಕಾರ್ಯಕಾರಿಯಾಗುವ ಬಗೆಯನ್ನು ವಿವರಿಸಬೇಕು ಮತ್ತು ಆ ಬಾಳಿನ ಬಗೆಯು ಹೆಚ್ಚಿನ ಸಮರ್ಪಕ ಕಾರ್ಯವನ್ನು ನಿರ್ವಹಿಸುವ ಪದ್ಧತಿಗಳನ್ನು ಪರ್ಯಾಲೋಚಿಸುವುದೂ ಕರ್ತವ್ಯವಾಗಿದೆ.

## ಶಿಕ್ಷಣದೊಂದಿಗಿರುವ ಸಾಮಾಜಿಕತೆಯ ಸಂಬಂಧ

ವ್ಯಕ್ತಿಯ ಶಿಕ್ಷಣದ ಸಮಸ್ಯೆಗಳ ಚರ್ಚೆಯಲ್ಲಿಯೇ ಅವರ ಸಾಮಾಜಿಕ ತೊಡಕಿನ ವಿಚಾರವೂ ಅಡಕವಾಗಿದೆ. ಬಾಲಮಂದಿರಗಳೂ ಪಾಠಶಾಲೆಗಳೂ ಒಂದು ಬಗೆಯ ಸಣ್ಣ ಪ್ರಮಾಣದ ಸಾಮಾಜಿಕ ಸಂಸ್ಥೆಗಳೇ ಸರಿ. ಅಲ್ಲಿ ಮಕ್ಕಳ ಸಾಮಾಜಿಕ ತೊಡಕುಗಳನ್ನು ಸರಲವಾಗ ವಿರಲವಾಗಿ ಅಭ್ಯಸಿಸಬಹುದು. ಮಾದರಿಗ ಒಂದು ಐದು ವರ್ಷದ ಕೂಸಿನ ಉದಾಹರಣವನ್ನೇ ತೆಗೆದುಕೊಳ್ಳೋಣ. ಆತನ ಬಗ್ಗೆ ತಾಯಿಯ ದೂರು ಹೀಗಿದೆ : 'ಮಗು ಚಂಚಲ ವೃತ್ತಿಯದು. ಸುಮ್ಮನಿದ್ದು ಗೊತ್ತೇ ಇಲ್ಲ. ಇದರ ಕಾಟ, ಎಂದರೆ ಹೇಳ ತೀರದು. ದಿನವೆಲ್ಲ ಇದನ್ನು ಕಾಯ್ದು ಸಂಜೆಗೆ ಜೀವ ನುಗ್ಗಾಗಿ ಹೋಗುತ್ತದೆ. ಇನ್ನು ಈ ವ್ರಾತ್ಯನನ್ನು ಹಿಡಿಯುವದು ನನ್ನಿಂದಾಗದು. ನನ್ನ ತಾಳ್ಮೆ ಮೀರಿದೆ. ಯಾರಾದರೂ ಉಪಚರಿಸಿ, ಸರಿದಾರಿಗೆ ತರುವ ಮನೋವೈದ್ಯರು ದೊರೆತರೆ ಅವರಿಗೆ ಈ ಹುಡುಗನನ್ನು

ಒಪ್ಪಿಸಬೇಕೆಂದಿದ್ದೇನೆ.' ಕೂಸಿನ ಮಿತಿಮೀರಿದ ಚಟುವಟಿಕೆಯಿಂದ ಆತನ ಸನ್ನಿವೇಶವನ್ನೆಲ್ಲ ಅರಿತುಕೊಳ್ಳಬಹುದಾಗಿದೆ. ನಾವೇ ಆತನ ವಯಸ್ಸಿನವರಾಗಿ ಆತನು ಏನು ಮಾಡುತ್ತಿರಬಹುದೆಂಬುದನ್ನು ತಿಳಿದುಕೊಳ್ಳಬಹುದು. ಮೈ ಕೈಯೆಲ್ಲ ಹೊಲಸು ಮಾಡಿಕೊಂಡು, ಮನೆತುಂಬ ಸಾಮಾನು ಅಸ್ತವ್ಯಸ್ತ ಹರಡಿ ಮನೆಯನ್ನೇ ತಲೆಯಮೇಲೆತ್ತಿಕೊಂಡು ಕುಣಿವ ಪುಂಡಾಟಿಕೆ ಅದು ಇರಬೇಕು. ತಂದೆ ತಾಯಿಗಳ ಓದು ಕೆಡಿಸಲು ನಡುವೆ ದೀಪವಾರಿಸುವುದು, ಇಲ್ಲವೇ ಯಾರೊಡನಾಗಲಿ ಮಾತಾಡುತ್ತಿದ್ದರೆ ಅಥವಾ ಹಾಡುತ್ತಿದ್ದರೆ ಕೂಗಿ, ಕೆರಳಿ ರಂಭಾಟ ಮಾಡುವುದು—ಇವೆಲ್ಲ ಆತನ ಲೀಲೆಗಳಾಗಿರಬೇಕು. ಬೇಡಿದ್ದುಕೊಡದಿದ್ದರೆ ಚೆಂಡಿತನ ಮಾಡುವುದು. ಇಂಥ ಮಕ್ಕಳು ಮುಂದಾದರೂ ತಂಟರೂ ಪುಂಡರೂ ಆಗುವರು. ಅವರ ನಡೆನುಡಿಯೆಲ್ಲ ಹೆರವರನ್ನು ಕೆಣಕುವಂತಹದೇ ಆಗಿರುತ್ತದೆ. ಹಗಲಿರುಳು ಎಷ್ಟು ಪೋಲಿತನ ಮಾಡಿದರೂ ಅವರಿಗೆ ಬೇಸರವಿಲ್ಲ. ತಾಯ್ತಂದೆಗಳ ಮನಸ್ಸನ್ನು ತಮ್ಮೆಡೆಗೆ ಸೆಳೆಕೊಳ್ಳಲು ಅವರು ಏನೂ ಮಾಡುವರು. ಸಭೆ ಸಂಭಾಷಣ ಸಂಗೀತ ಕಚೇರಿಗಳಲ್ಲಿ ನಡುವೆಯೇ ಕೂಗಿ, ಕರೆದು ಅಥವಾ ಕೋಣೆಯೆಲ್ಲ ಸುತ್ತಾಡಿ ಎಲ್ಲರೂ ತಮ್ಮತ್ತ ಹೊರಳುವಂತೆ ಮಾಡುವರು! ತಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಲು ಇಂತಹ ಹುಡುಗರು ಮಾಡುವ ಹಂಚಿಕೆಗಳು ಇವು!

ಇಂಥ ಹುಡುಗರು ಹದಗೆಟ್ಟವರಿರುತ್ತಾರೆ. ಆದರೆ ಇವರ ಈ ಪುಂಡಾಟದಲ್ಲಿ, ಪೋಲಿತನದಲ್ಲಿಯೂ ಒಂದು ಬಗೆಯ ಜಾಣತನದ ಯೋಜನೆ ಅಥವಾ ಎಣಿಕೆಯಿರುತ್ತದೆ. ಇವರೂ ತಮ್ಮ ತಿಳುವಳಿಕೆಯಂತೆ ವಿಚಾರಪೂರ್ವಕವಾಗಿಯೇ ನಡೆದುಕೊಳ್ಳುತ್ತಾರೆ. ತಮ್ಮ ಯೋಜನೆಗನುಸಾರವಾಗಿಯೇ ಇವರ ಚಟುವಟಿಕೆ ಪುಂಡಾಟಿಕೆಗಳು ನಡೆಯುತ್ತವೆ. ಇಂಥ ಮಕ್ಕಳು ವಿಷಮವೃತ್ತಿಯವರಿದ್ದರೂ, ಮಂದಬುದ್ಧಿಗಳು ಅಥವಾ ಪೆಚ್ಚರು ಇರುವುದಿಲ್ಲ. ದುರ್ಬಲ ಮನಸಿನವರ ನಡೆವಳಿಯಲ್ಲಿ ಯಾವದೇ ವಿಚಾರ ಯೋಜನೆ, ಎಣಿಕೆ ಕಂಡು ಬರುವುದಿಲ್ಲ. ಅಸಂಬದ್ಧ ಜೊಳ್ಳು ಜೀವನ ಅವರದು. ತುಂಟ ಹುಡುಗರ ಪುಂಡತನಕ್ಕೆ ಮುಖ್ಯ ಕಾರಣವೆಂದರೆ ಅವರಿಗೆ ತಮ್ಮ ಶ್ರೇಷ್ಠತೆಯನ್ನು ಒಂದಿಲ್ಲೊಂದು ಬಗೆಯಿಂದ ಸ್ಥಾಪಿಸುವುದಿರುತ್ತದೆ. ಮನೆಯಲ್ಲಿ ಮೊದಲು ತಾವೊಬ್ಬರೇ ತಾಯ್ತಂದೆಗಳ ಪ್ರೀತಿಯ ವಸ್ತುವಾಗಿದ್ದು, ಮುಂದೆ ಇನ್ನೊಬ್ಬ ಪ್ರತಿಸ್ಪರ್ಧಿಯು ಆ ಅಕ್ಕರೆ ಪ್ರೀತಿಗಳಿಗೆ ಕಾರಣನಾಗಲು ಉಂಟಾದ ಮನಸಿನ ತೊಳಲಾಟವು ಮೇಲ್ಕಾಣಿಸಿದ ಬಗೆಯ ಪುಂಡಾಟಿಕೆಗೆ ಕಾರಣವಾಗುತ್ತದೆ. ಮನೆಯವರೂ ಮೊದಲು ಮಿತಿಮೀರಿ ಅಕ್ಕರೆ ತೋರಿ ಹುಡುಗರನ್ನು ತಲೆಗೇರಿಸಿಕೊಳ್ಳುತ್ತಾರೆ. ಮಕ್ಕಳಲ್ಲಿ, ಓರಿಗೆಯವರೊಡನೆ ಒಲವಿನಿಂದ ನಡೆಕೊಳ್ಳುವ ಚಟವನ್ನುಂಟುಮಾಡುವುದಿಲ್ಲ. ಆ

ಹುಡುಗನ ಇಚ್ಛೆಯಂತೆಯೇ ಉಳಿದವರು ನಡೆದುಕೊಳ್ಳುವಂತೆ ಸನ್ನಿವೇಶಗಳನ್ನು ಕಲ್ಪಿಸಿಕೊಟ್ಟಿರುತ್ತಾರೆ! ಇವರಿಂದ ಆ ಮಕ್ಕಳು ಯಾವಾಗಲೂ ಹೆರವರ ಮೇಲೆ ತಮ್ಮ ಒತ್ತಾಯವನ್ನು ನಡೆಸುವ 'ಕಾಡಪ್ಪ'ನವರಾಗಿಯೇ ಬಾಳುವುದಕ್ಕೆ ಸವಿಗಲಿಯುವರು. ಅದರಿಂದ ಸಹಕಾರಿತೆಯು ಸಾಮುದಾಯಿಕತೆಯ ವೃತ್ತಿಯೇ ಅವರಲ್ಲಿ ಬೇರೂರುವುದಿಲ್ಲ. ತಂಗಿ ತಮ್ಮಂದಿರೊಡನೆ ಹೊಂದಿಕೊಂಡಿರಲು ಸಂಸ್ಕಾರ ಸಿಕ್ಕಿಲ್ಲ. ಎಲ್ಲವೂ ತನ್ನ ಪಾಲು; ಎಲ್ಲರಿಗಿಂತ ತಾನು ಮೇಲು ಹೀಗೆ ಕೇವಲ ಸ್ವಾರ್ಥವನ್ನೇ ಮುಂದುಡುವುರು. ಆದ್ದರಿಂದ ಇವರಿಗೆ ಸಾಮಾಜಿಕ ಸಾಮರಸ್ಯವು ಸಾಧಿಸದೆ ಕೊನೆಗೆ ದುಃಖಕ್ಕೆ ಒಳಗಾಗುತ್ತಾರೆ.

ಇಂಥ ಮಕ್ಕಳು ತಮ್ಮ ತಮ್ಮಂದಿರೊಂದಿಗೆ ಆಡುವಾಗ ಯಾವಾಗಲೂ ಅವರನ್ನು ನೂಕಿ ಕೆಡುಹುವುದುಂಟು. ಹಾಗೆಯೇ ಬೇರೆ ಮಕ್ಕಳೊಂದಿಗೆ ಆಡುವಾಗ ಹೊಡೆದಾಡುವುರು. ಆದರೆ ಈ ಕಾದಾಟದಲ್ಲಿಯೂ ಒಂದು ಧೂರ್ತತೆಯಿರುತ್ತದೆ. ಇವರು ಎಡಬಿಡದೆ ಕಾದಾಡುವುದಿಲ್ಲ. ನಡುನಡುವೆ ಒಪ್ಪಂದದಿಂದ ಕೂಡುವ ಜಾಗ್ರತೆ ಇವರಿಗಿರುತ್ತದೆ. ಒಂದೇ ಸವನೆ ಜಗಳಾಡಿದರೆ ತಂದೆತಾಯಿಗಳು ಚೆನ್ನಾಗಿ ಥಳಿಸುವರೆಂಬ ಅರಿವು ಇವರಿಗಿರುತ್ತದೆ. ಆದ್ದರಿಂದ ನಡುನಡುವೆ ಒಳ್ಳೇ ನಡತೆಯಿಂದ ಇರುವ ಜಾಣತನ ತೋರಿಸುವರು. ಇವೆಲ್ಲವೂ ಮತ್ತೊಮ್ಮೆ ಜಗಳಾಡಲು ಅನುಕೂಲವಾಗಬೇಕೆಂದೇ. ನೂಕಿ ನೋಯಿಸಲು, ದೂಡಿ ಕಾಡಲು, ಕಾದು ಕೆಡುಹಲು ಸಿಗಬೇಕೆಂದೇ. ಇದುವೆ ಪುಂಡರ ಸಭ್ಯನಡತೆಯು ರಹಸ್ಯವು. ಕೆಲಸಾರೆ ತಾಯಿ ಥಳಿಸಿದರೆ ಇಂಥವರು, ಅವಳಿಗೆ ನಕ್ಕು, ತಮಗೆ ನೋವೇ ಆಗಿಲ್ಲವೆಂದು ಒತ್ತಿ ಹೇಳುವರು! ಹೆಚ್ಚು ಹೊಡೆದರೆ ತುಸು ಹೊತ್ತು ಸುಮ್ಮನುಳಿದು ಮತ್ತೆ ಉಪಟಳಕ್ಕೆ ಮೊದಲು ಮಾಡುವರು. ಹೀಗೆ ಇವರ ಎಲ್ಲ ಚಟುವಟಿಕೆಗಳಲ್ಲಿ ಒಂದು ಸೂತ್ರಬದ್ಧತೆಯಿದೆ. ಆದ್ದರಿಂದ ಇಂಥವರ ನಡತೆಯನ್ನು ಮೊದಲೇ ಊಹಿಸಬಹುದು. ಇಂಥ ಹುಡುಗನು ಶಾಲೆಗೆ ಹೋದರೆ, ಅಲ್ಲಿ ಪೊಳ್ಳು ಕಂಡರೆ ಅಧಿಕಾರ ನಡೆಸುವನು. ತುಸು ಬಿಗಿಯಾದ ಸನ್ನಿವೇಶವಿದ್ದರೆ ತನ್ನದೇ ನಡೆಸಲು ಕಾದಾಡುವನು. ಆದ್ದರಿಂದ ಶಾಲೆಯು ಶಿಕ್ಷಕರು ಉಗ್ರರಾಗಿದ್ದರೆ ಶಿಸ್ತಿನ ಭಕ್ತರಿದ್ದರೆ ಈ ಹುಡುಗನಿಗೆ ಬೇಗನೆ ಶಾಲೆಗೆ ಶರಣು ಹೊಡೆಯಬೇಕಾಗುತ್ತದೆ. ಅಥವಾ ಶಾಲೆಯು ಬಿಕ್ಕಟ್ಟಿನ ವಾತಾವರಣಕ್ಕೆ ಬೇಸತ್ತು, ತೊಳಲಾಡಿ ತಾಳಲಾರದೇ ತಲೆನೋವು, ತಳಮಳ ಮೊದಲಾದುವುನ್ನು ಬೆಳಿಸಿಕೊಂಡು, ಮನೆಯಲ್ಲಿ ಉಳಿಯಲು ಆರಂಭಿಸುವನು. ಇದರ ಬದಲು ಶಾಲೆಯಲ್ಲಿ ಬಿಗುವು ಕಡಿಮೆಯಿದ್ದರೆ ಇಂಥ ಹುಡುಗರಿಗೆ ಅದೊಂದು ಸುಗ್ಗಿಯೇ ಸರಿ, ಇಂಥಲ್ಲಿ ಅವರು ಚೆನ್ನಾಗಿಯೇ ಮೆರೆಯುವರು. ಶಾಲೆಯಲ್ಲಿ ಮುಂದಾಳಾಗಿ ಹಿಗ್ಗುಗೊಳ್ಳುವರು. ಸಾಮಾಜಿಕ

ಸಮಸ್ಯೆಗಳನ್ನು ಸಣ್ಣ ಪ್ರಮಾಣದಲ್ಲಿ ಬಿಡಿಸಿ, ಅನುಭವ ಪಡೆವಂತಹ ಗರಡಿಯೇ ಮಕ್ಕಳ ಪಾಠಶಾಲೆಗಳು. ಆದುದರಿಂದ ಸಮಾಜದಂತೆ ಶಾಲೆಯಲ್ಲಿಯೂ ಇತರ ರೊಡನೆ ಹೊಂದಿಕೊಂಡು, ಹಲವರಿಗೆ ಉಪಯುಕ್ತನಾಗಿ ವರ್ತಿಸಲು ಕಲಿಸುವುದೇ ಶಾಲೆಯ ಕಾರ್ಯವಾಗಿದೆ. ಇತರರಿಗೆ ಉಪಯೋಗಿಯಾಗಲು ಅವರಲ್ಲಿ ಸ್ನೇಹ ಪ್ರೀತಿ ಆಸಕ್ತಿಗಳುಂಟಾಗಬೇಕು. ತನ್ನ ಓರಗೆಯವರಲ್ಲಿ ಹತ್ತಿರದರಲ್ಲಿ ಪ್ರೀತಿ ವಿಶ್ವಾಸಗಳು ಬೆಳೆಯಲು ನಾನೇ ಮೇಲು ಎಂಬ ತನ್ನ ಸ್ವಾರ್ಥವನ್ನು ಒಂದಿಷ್ಟು ಕಡಿಮೆ ಮಾಡಿಕೊಳ್ಳಲಿಕ್ಕೆ ಕಲಿಸಬೇಕಾಗುತ್ತದೆ.

ಮುಂದೆ ಮಾಧ್ಯಮಿಕ ಶಾಲೆಯಲ್ಲಿಯೂ ಇಂತಹ ಹುಡುಗರು ತಮ್ಮ ಒಡನಾಡಿ ಗಳೊಡನೆ ನಡೆದುಕೊಂಬ ಬಗೆಯ ಮೇಲೆಯೇ ಅವರ ಉತ್ಕರ್ಷ ಅಪಕರ್ಷಗಳು ಅವಲಂಬಿಸಿರುತ್ತವೆ. ವರ್ಗದಲ್ಲಿ ತನ್ನ ವರ್ಚಸ್ವಿತೆಯನ್ನು ಸಾಧಿಸಲು ಸುಲಭ ವಾಗುವ ಸಂದರ್ಭದಲ್ಲಿ ಆ ಹುಡುಗನ ವಿಷಯ ವೃತ್ತಿಯು ಒಡೆದು ಕಾಣಲಿಕ್ಕಿಲ್ಲ. ಆತನು ತನ್ನ ವರ್ಗದ ಶಿಖಾಮಣಿಯಾಗಿಯೂ ಮೆರೆಯಬಹುದು. ಹೀಗೆ ವರ್ಗದಲ್ಲಿ ವರಿಷ್ಠತೆಯು ಸಾಧ್ಯವಾದುದರ ಪರಿಣಾಮವಾಗಿ ಆತನು ಮನೆಯಲ್ಲಿಯೂ ಒಳ್ಳೆಯವನಾಗಿ ನಡೆಯಬಹುದು. ರಂಪು ರಕ್ಕಸತನ ಮಾಯವಾಗಬಹುದು. ಆದರೆ ಸಾಮಾನ್ಯವಾಗಿ ಈ ಬಗೆಯ ಉದಾಹರಣೆಗಳು ವಿರಳ. ಮನೆಯಲ್ಲಿ ಎಲ್ಲರ ಮೆಚ್ಚುಗೆ ಪಡೆದು ಬಹಳೇ ವಿಧೇಯರಾಗಿ ನಡೆದ ಮಕ್ಕಳು ಶಾಲೆಯಲ್ಲಿ ಇಡೀ ವರ್ಗವನ್ನೇ ಕೆಡಿಸುವಷ್ಟು ವಿಪರೀತವಾಗಿ ವರ್ತಿಸುವುದುಂಟು. ಶಾಲೆಯು ಮನೆ ಮತ್ತು ಸಮಾಜಗಳನ್ನು ಜೋಡಿಸುವ ಕೊಂಡಿ ಎಂದು ಹಿಂದೆ ಹೇಳಿದೆ. ಎಂದ ಬಳಿಕ ಶಾಲೆಯಲ್ಲಿ ಹೀಗೆ ನಡೆದುಕೊಂಡ ವ್ಯಕ್ತಿ ಮುಂದೆ ಬಾಳಿನಲ್ಲಿ ಯಾವ ಅವತಾರ ಕಾರ್ಯ ಜರುಗಿಸುವನೆಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಶಾಲೆಯಲ್ಲಿ ಒಮ್ಮೊಮ್ಮೆ ದೊರೆಯುವಂಥ ಅನುಕೂಲ ಪರಿಸ್ಥಿತಿಯು ಬಾಳಿನಲ್ಲಿ ಆತನ ಪಾಲಿಗೆ ಬರುವುದಿಲ್ಲ. ಮನೆಯಲ್ಲಿ ತುಂಬ ಜಾಣರೆಂದೂ ಶಾಲೆಯಲ್ಲಿ ವಿಚಕ್ಷಣ ಬುದ್ಧಿಯವರೆಂದೂ ಬೆಳೆದು ಬೆಳಗಿದ ತಮ್ಮ ಮಕ್ಕಳು ಬಾಳಿನಲ್ಲಿ ಬೆಲೆ ಬಾರದೆ, ಕಳೆಗೆಟ್ಟು ನಿರುಪಯುಕ್ತ ವಸ್ತುಗಳಾಗಿ ಬಿದ್ದಿರುವುದನ್ನು ನೋಡಿ ಜನರಿಗೆ ಹಲವು ಬಾರಿ ವಿಸ್ಮಯವೆನಿಸುತ್ತದೆ. ಇದಕ್ಕೆ ಕಾರಣವಿಷ್ಟೇ; ಮನೆ ಮತ್ತು ಶಾಲೆಗಳಲ್ಲಿ ಯೋಗಾಯೋಗದಿಂದ ಅನುಕೂಲವಾದ ಸನ್ನಿವೇಶಗಳು ಅವರಿಗೆ ದೊರೆತಿರುತ್ತವೆ. ಆದರೆ ಮುಂದಿನ ಬಾಳಿನಲ್ಲಿ ಈ ಅನುಕೂಲತೆಗಳು ಅವರಿಗೆ ದೊರೆಯುವುದಿಲ್ಲ. ಕೆಲವರಂತೂ ಪ್ರೌಢರಾದ ಮೇಲೆ ತಿಳಿಗೇಡಿಗಳೂ, ಹುಚ್ಚರೂ ಆದುದು ಕಂಡುಬರುತ್ತದೆ. ಅನುಕೂಲವಾದ ಪರಿಸ್ಥಿತಿಯಲ್ಲಿ ಬೆಳೆವ ಕಾಲಕ್ಕೆ ಅವರ ಬಾಳ ಮಾದರಿಯ ಹೀಚು ಕಾಯಿಗಳಲ್ಲಿ ಅಡಗಿಕೊಂಡಿದ್ದ ಹುಳುಕು

ಯಾರ ಕಣ್ಣಿಗೂ ಬಿದ್ದಿರುವುದಿಲ್ಲ. ಆದ್ದರಿಂದ ವಿಪರೀತ ವಾತಾವರಣದ ಮೂಲಕ ಚಿಕ್ಕಂದಿನಲ್ಲಿಯೇ ಮನೋವೃತ್ತಿಯು ಹದಗೆಡು ಸ್ಪಷ್ಟವಾಗಿ ಕಾಣಿಸುವ ಮಕ್ಕಳನ್ನು ತಿದ್ದುವುದು ಗೊತ್ತಾಗುತ್ತದೆ. ಆದರೆ ಅನುಕೂಲ ವಾತಾವರಣದಲ್ಲಿ ಭರದಿಂದ ಬೆಳೆವ ಬಾಳಮಾದರಿಯುಳ್ಳಿ ಹುದುಗಿರುವ ಕೇಡಿ ಕಾಣದೆ ಇರುವಾಗ ಅಂಥ ಮಕ್ಕಳನ್ನು ಕುರಿತು ಯಾವ ಜಾಗ್ರತೆ ವಹಿಸಬೇಕೆಂಬುದೇ ತಿಳಿಯದಾಗುತ್ತದೆ. ಆದ್ದರಿಂದ ಮಕ್ಕಳು ಮೊದಲು ತೋರಿಸುವ ಯಶಸ್ಸು ಶ್ರೇಯಸ್ಸುಗಳಲ್ಲಿ ಅವರ ತಿದ್ದಿದ ಬಾಳಮಾದರಿಯ ಯತ್ನದ ಫಲವೆಷ್ಟು, ಪರಿಸ್ಥಿತಿಯ ಅನುಕೂಲತೆಯ ಅಂಶವೆಷ್ಟೆಂಬುದನ್ನು ನಿದಾನಿಸಿ, ಹುದುಗಿರುವ ಹದಗೆಟ್ಟ ಬಾಳಿನ ಬಗೆಯ ಕುಂದು ಕೊರತೆಗಳನ್ನು ಆಗಲೇ ನೋಡಿಡುವುದು ಅತ್ಯಂತ ಅಗತ್ಯವಾದ ಕೆಲಸವಾಗಿದೆ. ತಪ್ಪಿದ ಬಾಳ ಮಾದರಿಯ ನಿಶ್ಚಿತವಾದ ಕೆಲವೊಂದು ಲಕ್ಷಣಗಳನ್ನು ಅನುಕೂಲ ಸನ್ನಿವೇಶದಲ್ಲಿಯೂ ಕೂಡ ತಿಳಿದುಕೊಳ್ಳಬಹುದು. ಹೆರವರ ಲಕ್ಷ್ಯವನ್ನು ತನ್ನೆಡೆಗೆ ಸೆಳಕೊಳ್ಳಲು ಹೆಣಗುತ್ತಿದರೂ ಸಾಮಾಜಿಕ ಆಸಕ್ತಿಯು ಮಾತ್ರ ಇಲ್ಲದಿರುವ ಹುಡುಗನಲ್ಲಿ ಬಹುಶಃ ವ್ಯವಸ್ಥಿತತನವು ಕಡಿಮೆಯಿರುತ್ತದೆ. ಹೇಸಿ ಚಟ, ಹೊಲಸು ಮೈ ಕೈಗಳನ್ನು ಆತನಲ್ಲಿ ಕಾಣಬಹುದು. ಹೀಗೆ ಹೊಲಸು ಉಡುಪು ಮೊದಲಾದವುಗಳಿಂದ ಹೆರವರನ್ನು ತನ್ನ ಕಡೆಗೆ ನೋಡುವಂತೆ ಮಾಡುವುದರಲ್ಲಿಯೆ ತೃಪ್ತನಾಗುವನು. ಅದೇ ಮೇರೆಗೆ ರಾತ್ರಿ ಬೇಗ ಮಲಗುವ ಹಟಹಿಡಿಯುವ, ಇಲ್ಲವೇ ಅತ್ತು ನಿದ್ದೆಗೆಡಿಸುವ, ಹಾಸುಗೆ ಹಸಿಮಾಡುವ ಈ ಚಟಗಳೆಲ್ಲವೂ ತಾಯಿಯ ಲಕ್ಷ್ಯವನ್ನು ತನ್ನ ಕಡೆಗೆ ಎಳೆವ ಹಂಚಿಕೆಗಳೇ ಆಗಿವೆ. ಇಂತಿವೆಲ್ಲ ಲಕ್ಷಣಗಳು ಹಲವುಬಾರಿ ಅನುಕೂಲ ಸನ್ನಿವೇಶದಲ್ಲಿ ಕೂಡ ಒಡೆದು ಕಾಣುವವು. ಈ ಕೊರತೆ, ಹೀನತೆಗಳನ್ನು ಅರಿತುಕೊಂಡು ಅವುಗಳಿಗೆ ಸರಿಯಾದ ಉಪಾಯಮಾಡಿದರೆ ಸುಪರಿಣಾಮಗಳು ಕಂಡು ಬರದೆ ಇರಲಾರವು.

## ಮೂರು ಮುಖ್ಯ ಪ್ರಶ್ನೆಗಳು

ಹರೆಯದ ಹೆಬ್ಬಾಗಿಲಲ್ಲಿ ನಿಂತಾಗ ಈ ತಪ್ಪಿದ ಬಾಳಮಾದರಿಯ ಹುಡುಗನು ಹೇಗೆ ನಡೆವನು ? ೧೭–೧೮ ನೆಯ ವರ್ಷ ವಯಸ್ಸಿನಲ್ಲಿ ಯೌವ್ವನದಲ್ಲಿ ಅಡಿಯಿಡು ವಾಗ ಆತನ ಮುನ್ನೋಟ, ಮುನ್ನಡೆ ಯಾವ ನಿಟ್ಟಿನಲ್ಲಿ, ಯಾವ ಬಗೆಯಾಗಿ ಸಾಗುವುದು ? ಆತನು ಬಿಡಿಸಬೇಕಾದ ಮೂರು ಮುಖ್ಯ ಪ್ರಶ್ನೆಗಳು ಆ ಯೆಂದು ಬಾಯ್ತೆರೆದು ನಿಂತಿರುತ್ತವೆ : ೧. ಸಮಾಜದಲ್ಲಿಯ ತನ್ನ ಸ್ಥಾನ ಮಾನಗಳ ನಿರ್ಣಯ ಮಾಡಿಕೊಳ್ಳುವುದು; ೨. ಸನ್ಮಾನ್ಯ ಉಪಜೀವನದ ವೃತ್ತಿಯನ್ನು ಕಲ್ಪಿಸಿಕೊಳ್ಳುವುದು; ೩. ಜೀವನದ ಜೊತೆಗಾರ್ತಿಯನ್ನು ಕಂಡುಕೊಳ್ಳುವುದು.

ಒಬ್ಬನ ಜೀವನದ ಸಾರ್ಥಕತೆ ಅಥವಾ ನಿರರ್ಥಕತೆಯು ಈ ತೊಡಕು ಆತನು ಹೇಗೆ ಬಿಡಿಸಿಕೊಳ್ಳುವನೆಂಬುದರ ಮೇಲೆಯೇ ಅವಲಂಬಿಸಿದೆ. ಮನುಷ್ಯನ ಭುಕ್ತಿ-ಮುಕ್ತಿಗಳು, ವರ್ತಮಾನ-ವರಮಾನಗಳು ಇವರಲ್ಲಿಯೆ ಅಡಕವಾಗಿವೆ. ಎಲ್ಲರೂ ಒಲವಿನಿಂದ, ನಲವಿನಿಂದ ಕೂಡಿ ಬೆಳೆದರೆ ಬಾಳಿನಲ್ಲಿ ಸುಖ ಸಂತೋಷವುಂಟು. ಇನ್ನು ಉದ್ಯೋಗ, ವ್ಯವಸಾಯದ ಪ್ರಶ್ನೆ. ಶಾಲೆಯ ನಡೆವಳಿಯಿಂದ ಯಾವು ದೊಂದು ಹುಡುಗನ ಮುಂದಿನ ಜೀವನದ ರೀತಿ, ಪದ್ಧತಿಗಳನ್ನು ಊಹಿಸಿ ಕೊಳ್ಳಬಹುದಾಗಿದೆ. ತಾನೇ ಶ್ರೇಷ್ಠನೆಂಬ ಹೆಮ್ಮೆಯಿಂದ ಯಾವುದೊಂದು ಉದ್ಯೋಗವನ್ನು ಕೈಕೊಂಡರೆ ಅದರಲ್ಲಿ ಯಶಸ್ಸು ಪಡೆಯುವುದು ಸ್ವಲ್ಪ ಗಡ ಚಾಗುವದು ನಿಶ್ಚಿತ. ಉಳಿದವರೊಡನೆ ಕೂಡಿಕೊಂಡು ಕೆಲಸ ಮಾಡಲಾರದ ಇನ್ನೊಬ್ಬರಿಗೆ ವಿಧೇಯನಾಗಿ, ಹೊಣೆಗಾರನಿಗೆ ತಲೆಬಾಗಲು ಸಿದ್ಧನಿಲ್ಲದ ತರುಣ ನಿಗೆ ಎಲ್ಲಿಯೂ ಕೆಲಸ ಸಿಗುವುದು ದುರ್ಲಭ. ಸಿಕ್ಕರೂ ಅದರಲ್ಲಿ ಆತನು ಯಶಸ್ವಿಯಾಗಿ ಹೆಸರು ಪಡೆಯುವುದು ಇನ್ನೂ ದುಸ್ತರ. ಏಕೆಂದರೆ ಕೇವಲ ತನ್ನ ಹಿತ, ಸ್ವ-ಅರ್ಥವನ್ನೇ ಲಕ್ಷಿಸುವಂತಹ ತರುಣನು ಪಲವರೊಡನೆ ಕೂಡಿ ಕೊಂಡಿರಬೇಕಾದ ವ್ಯವಸಾಯವನ್ನು ತೂಗಿಸಿಕೊಂಡು ಹೋಗಲಾರ. ಕರ್ತವ್ಯ ನಿಷ್ಠೆಗಿಂತ ಸ್ವಪ್ರತಿಷ್ಠೆಯನ್ನೇ ಪ್ರಧಾನವಾಗಿರಿಸಿಕೊಂಡಿರುವ ಈ ಮಾದರಿಯ ಮನುಷ್ಯರು ವ್ಯವಹಾರದಲ್ಲಿ ವಿಶ್ವಾಸಯೋಗ್ಯರಾಗಿಯೂ ಇರುವುದಿಲ್ಲ.

ಸಾಮಾನ್ಯವಾಗಿ, ಯಾವುದೊಂದು ಉದ್ಯೋಗದಲ್ಲಿಯ ಉತ್ಕರ್ಷವು, ಅಥವಾ ಯಶಸ್ವಿತೆಯು ಆತನ ಸಾಮಾಜಿಕ ಸಾಮರಸ್ಯವನ್ನವಲಂಬಿಸಿ ಇರುತ್ತದೆಂದು ಧಾರಾಳವಾಗಿ ಹೇಳಬಹುದು. ತಮ್ಮ ನೆರೆಹೊರೆಯವರ ಬೇಕುಬೇಡಗಳನ್ನು ಪರಕಿಸಿಕೊಳ್ಳಲಿಕ್ಕೆ, ಮಂದಿಯ ಕಣ್ಣಿನಿಂದ ನೋಡುವ ಮಂದಿಯ ಮನಸ್ಸಿನಂತೆ ತಿಳಿದು ನಡೆವ ಅವರೇ ತಾನಾಗುವ ಸಾಮರ್ಥ್ಯವು-ಸಾಮಾಜಿಕ ಸಾಮರಸ್ಯದಿಂದ ಬರುವ ಈ ಸಾಮರ್ಥ್ಯವು-ಮಾನವನ ಸುಖ ಜೀವನಕ್ಕೆ ಯಶಸ್ವಿತೆಗೆ ತುಂಬ ಸಹಾಯಕಾರಿಯಾಗಿದೆ. ಇಂಥ ಸಾಮರ್ಥ್ಯವಿದ್ದವರೇ ತಮ್ಮ ಉದ್ಯೋಗದಲ್ಲಿ ಉನ್ನತಿಯನ್ನು ಸಾಧಿಸುತ್ತಾರೆ. ಆದರೆ ಮೇಲೆ ವರ್ಣಿಸಿದ ಹುಡುಗನು, ಬೇರೆ ಯಾಗಿ ತನ್ನ ಸುತ್ತಲಿನವರೊಂದಿಗೆ ಹೊಂದಿಕೊಳ್ಳಲು, ಅಸಮರ್ಥನಾದ್ದರಿಂದ ಆತನು ಎಲ್ಲೆಡೆಯಲ್ಲಿ ಪೆಟ್ಟು ತಿನ್ನುವನು. ಕೇವಲ ತನ್ನ ಸ್ವಾರ್ಥವನ್ನೇ ಮುಂದಿಟ್ಟು ಕೊಂಡು ಆ ಸಿಟ್ಟಿನಲ್ಲಿಯೇ ನಡೆಯುವನು. ಪ್ರಗತಿಗೆ ಬೇಕಾದ ಗುಣಧರ್ಮಗಳಲ್ಲಿ ಕೇವಲ ಒಂದನ್ನೇ, ಎಂದರೆ ಸ್ವಾರ್ಥಪರತೆಯನ್ನೇ ಮಾತ್ರ ಆತನು ಬೆಳಿಸಿ ಕೊಳ್ಳುವನು. ನಿಜವಾಗಿ ಸ್ವಾರ್ಥಕ್ಕೂ ಪರಾರ್ಥಕ್ಕೂ ಸಂಬಂಧವೇ ಇಲ್ಲವೆಂಬ ಈತನ ತಿಳಿಗೇಡಿತನದ ಕಲ್ಪನೆಯು ಈತನನ್ನು ಹಾಳುಮಾಡಿದೆ. ಸ್ವಾರ್ಥವು

ಪರಾರ್ಥದಿಂದ ಭಿನ್ನವಿಲ್ಲ. ಪರಾರ್ಥದ ಹೊಟ್ಟೆಯಲ್ಲಿ ಸ್ವಾರ್ಥವೂ ಒಳಗೊಳ್ಳುವುದು ಎಂಬ ಅರಿವೂ ಇಲ್ಲದ್ದರಿಂದ ಈತನು ಯಾವ ಉದ್ಯೋಗದಲ್ಲೂ ಮುಂದೆ ಬರದೆ ವ್ಯರ್ಥವಾಗಿ ಅನರ್ಥಕ್ಕೆ ಗುರಿಯಾಗುವನು. ಇಂಥ ವ್ಯಕ್ತಿಗಳು ಯಾವುದೊಂದು ವ್ಯವಸಾಯವನ್ನು ಕೈಕೊಳ್ಳುವ ಮೊದಲು ಅದರ ಪೂರ್ವ ಸಿದ್ಧತೆಯಲ್ಲಿಯೇ ತುಂಬ ಕಾಲಹರಣ ಮಾಡುವರು. ವ್ಯರ್ಥವಾದ ಶಾಬ್ದಿಕ ಚರ್ಚೆಯನ್ನು ನಡೆಸುವರು. ಯಾವ ಕೆಲಸ ಕೈಕೊಳ್ಳಬೇಕೆಂಬ ನಿರ್ಧಾರವನ್ನು ಬೇಗ ಮಾಡುವುದಿಲ್ಲ. ಅದನ್ನು ಮಾಡಿ ಮುಗಿಸಲು ಅವರಲ್ಲಿ ಆತುರವಿರುವುದಿಲ್ಲ. ಮೂವತ್ತು ವರ್ಷ ಉರುಳಿದ್ದರೂ ಯಾವುದೊಂದು ವೃತ್ತಿಯನ್ನು ಕೈಕೊಳ್ಳದೇ ಉಳಿಯುವುದೂ, ಇನ್ನೂ ಆಗಾಗ ವ್ಯವಸಾಯ ಬದಲಿಸುವುದೂ, ತಮ್ಮ ಬಾಳಿನ ಮುಂದೇನೆಂಬುದನ್ನು ನಿಶ್ಚಿತ ಮಾಡದಿರುವುದೂ ಈ ಜಾತಿಯ ಜನರ ಲಕ್ಷಣಗಳೇ ಆಗಿವೆ. ತಮ್ಮ ವಿದ್ಯಾರ್ಥಿದೆಸೆಯನ್ನು ಮಿತಿಮೀರಿ ಮುಂದರಿಸುತ್ತ ಬೇರೆ ಬೇರೆ ಅಭ್ಯಾಸ ಕ್ರಮವನ್ನು ಅರಸುತ್ತ, ಅರಿಸುತ್ತ ಯಾವ ನಿಶ್ಚಿತ ಉದ್ಯೋಗಕ್ಕೂ ಅಂಟಿಕೊಳ್ಳದೆ ದಿನಗಳನ್ನು ನೂಕುತ್ತಾರೆ. ಈ ಚಂಚಲತೆಯು, ಅವರ ಬಾಳಿನ ಹೊಲಬು ತಪ್ಪಿದ ಹೆಗ್ಗುರುತು. ೧೭–೧೮ ವರ್ಷದ ಇಂಥ ಹುಡುಗರು ಅಸುಗೋಲಿಲ್ಲದ ಕುರುಡನಂತೆ ಗೊತ್ತುಗುರಿಯಿಲ್ಲದೇ ತೊಳಲಾಡುತ್ತ, ಬಾಳದಾರಿಯನ್ನು ತುಳಿಯುವುದು ಅಡಿಗಡಿಗೆ ಕಣ್ಣಿಗೆ ಬೀಳುತ್ತದೆ. ಆಗಲೇ ಅವರ ತೊಡಕನ್ನು ಅರಿತುಕೊಂಡು, ಯಾವುದಾದರೊಂದು ನಿಟ್ಟಿನಲ್ಲಿ ಅವರ ದಿಟ್ಟಿಯನ್ನು ಸ್ಥಿರಗೊಳಿಸಿ ದಿಟ್ಟತನದಿಂದ ಮುಂದರಿಯುವ ಶಿಕ್ಷಣವನ್ನು ಆತನಿಗೆ ಕೊಡುವುದು ಶಕ್ಯವಿದೆ. ಶಾಲೆಯಲ್ಲಿಯೂ ಮನೆಯಲ್ಲಿಯೂ, ಗುರುಹಿರಿಯರು ಇಂಥ ಮಕ್ಕಳಿಗೆ ವಯಸ್ಸಿಗೆ ಬರುವ ಮುಂಚಿನಿಂದಲೇ ಭಾವೀ ಜೀವನದ ಉದ್ಯೋಗಗಳ ಬಗ್ಗೆ ಉಪಜೀವಿಕೆಯ ಸಾಧನಗಳ ಬಗ್ಗೆ ವಿಚಾರ ಮಾಡುವ ಕುತೂಹಲವನ್ನು ಉಂಟು ಮಾಡಬೇಕು. 'ಮುಂದೇನು ?' ಎಂಬ ಪ್ರಶ್ನೆಯನ್ನು ನೇರವಾಗಿ ಅವರೆದುರು ಇರಿಸಿ ಅದನ್ನು ಕುರಿತು ವಿಚಾರ, ಚರ್ಚೆ ಮಾಡುವ ಚಟವನ್ನು ವಿದ್ಯಾರ್ಥಿದೆಸೆಯಲ್ಲಿಯೇ ಹಚ್ಚಿದರೆ, ಮುಂದೆ ವೇಳೆ ಮೀರಿ ಹದಗೇಡಾದ ಮೇಲೆ ಮಿಡುಕಬೇಕಾದ ಹೊತ್ತು ಬರುವುದಿಲ್ಲ.

ತರುಣರ ತಲೆತಿನ್ನುವ ಇನ್ನೊಂದು ಪ್ರಶ್ನೆಯೆಂದರೆ ಮದುವೆಯ ವಿಚಾರ. ಗಂಡು ಮತ್ತು ಹೆಣ್ಣೆಂದು ಸಮಾಜವು ಎರಡು ಹೋಳಾಗಿ ವಿಭಾಗಿಸಲ್ಪಟ್ಟಿದೆ. ಇವೆರಡೂ ಭಿನ್ನ ಲಿಂಗಗಳ ಲೋಕಗಳೇ ಬೇರೆ ಎನ್ನುವಷ್ಟು ಒಮ್ಮೊಮ್ಮೆ ಅಂತರವು ಕಾಣಿಸಿಕೊಳ್ಳುತ್ತದೆ. ಇವರಲ್ಲಿ ಒಬ್ಬರು ಇನ್ನೊಬ್ಬರನ್ನು ಕಾಣುವಾಗ ಒಂದು ಲೋಕದವರು ಮತ್ತೊಂದು ಲೋಕವನ್ನು ಪ್ರವೇಶಿಸಿದಷ್ಟು ಪರಕೀಯರಂತೆ

ಒಬ್ಬರೊಬ್ಬರನ್ನು ವಿಚಿತ್ರವಾಗಿ ಕಾಣುತ್ತಾರೆ. ಈ ಪರಕೀಯತೆಯು ಹೋಗಿ ಒಬ್ಬರೊಬ್ಬರನ್ನು ಸಹಜ ಸ್ವಾಭಾವಿಕತೆಯಿಂದ ನೋಡಿ ನಡಿಸಿಕೊಳ್ಳಲು ಚಿಕ್ಕಂದಿನಿಂದಲೂ ಆ ಬಗೆಯ ಶಿಕ್ಷಣವನ್ನು ಕೊಡುವುದು ಅವಶ್ಯ. ಗಂಡು ಮತ್ತು ಹೆಣ್ಣು ಭೆಟ್ಟಿಯಾದಾಗ ಅವರ ನಿಲ್ಲುವ, ನೋಡುವ ಹಾಗೂ ಮಾತ ನಾಡುವ ರೀತಿಯೊಳಗಿನ ಅಂಜಿಕೆ ಅಳುಕುಗಳೂ, ಎಡಚೂ, ಅಡೆತಡೆಗಳೂ ಅವರ ಸಾಮಾಜಿಕ ಆಸಕ್ತಿಯ ಕೊರತೆಯನ್ನೇ ಸೂಚಿಸುತ್ತದೆ. ಕೇವಲ ತನ್ನ ಹೊರತು ಇನ್ನೊಂದು ಲೋಕದ ಅರಿವಿಲ್ಲದ ಎಗ್ಗರಿಗೆ ಭಿನ್ನ ಲಿಂಗದ ಇನ್ನೊಂದು ವ್ಯಕ್ತಿಯೊಡನೆ ಸರಿಯಾಗಿ ಹೇಗೆ ವ್ಯವಹರಿಸಬೇಕೆಂಬುದೇ ಗೊತ್ತಿರುವುದಿಲ್ಲ. ಲಿಂಗ ಭಿನ್ನತೆಯು ಒಂದು ಲಾಭವಿದೆ; ಲೈಂಗಿಕ ಆಕರ್ಷದಿಂದ ಒಂದು ಉದ್ದೇಶವು ಸಾಧಿಸುತ್ತಿದೆ. ಗಂಡು ಹೆಣ್ಣನ್ನೂ, ಹೆಣ್ಣು ಗಂಡನ್ನೂ ಅವರವರ ಸಂಕುಚಿತ ಸ್ವಾರ್ಥದ ಮುಸುಕಿನೊಳಗಿಂದ ಹೊರಗೆಳೆದು ಅವರನ್ನು ಸಾಮಾಜಿಕ ಜೀವನಕ್ಕಾಗಿ ಸಿದ್ಧಪಡಿಸುತ್ತದೆ. ನಾವು ನಮ್ಮ ಕ್ಷುದ್ರ ಸ್ವಾರ್ಥವನ್ನು ಮರೆತು ಇನ್ನೊಬ್ಬ ರೊಡನೆ ಬೆರೆತು ಸುಖಿಗಳಾಗಲು ಕಲಿಯುತ್ತೇವೆ. ಎಂತಹ ಮನುಷ್ಯರನ್ನೂ (ಹೆಣ್ಣು ಅಥವಾ ಗಂಡು) ತಮ್ಮ ಹೊರಗೆ ಆತ್ಮೀಯತೆಯಿಂದ ಮೊತ್ತಮೊದಲು ನೋಡಲು ಹುಚ್ಚುವ ಶಕ್ತಿ ಇದು. ಇದುವೆ ಲಿಂಗ ಶಕ್ತಿ. ಇಂತಿದು ಲಿಂಗ ಸಾಮರ್ಥ್ಯ. ಜಗಚ್ಚಾಲಕ ಶಕ್ತಿ. ಪ್ರಕೃತಿ. ಈ ಪ್ರಕೃತಿಗೆ ಪ್ರಯತ್ನವೂ ಸಹಕಾರಿ ಯಾಗಬೇಕು. ಹೆಣ್ಣು ಗಂಡಿಗೆ ಒಬ್ಬರೊಬ್ಬರೊಡನೆ ಸಾಮಾಜಿಕ ವ್ಯವಹಾರಗಳಲ್ಲಿ ಪರಸ್ಪರರೊಡನೆ ಹೇಗೆ ನಡೆಮುಕೊಳ್ಳಬೇಕೆಂಬುದನ್ನು ಕುರಿತು ಮೊದಲಿನಿಂದಲೇ ಶಿಕ್ಷಣವನ್ನು ಕೊಡಬೇಕು.

ಈ ವಿವರಿಸಿದ ಜೀವನದ ಮುಖ್ಯ ಮೂರು ಸಮಸ್ಯೆಗಳನ್ನು ಸರಿಯಾಗಿ ಬಿಡಿಸಿಕೊಳ್ಳಲಾರದೆ ಹದಗೆಟ್ಟ ಬಾಳವಾದರಿಯ ವ್ಯಕ್ತಿಗಳು ಹತಾಶವಾಗಿ ಉದಾಸವಾಗಿ ನಿಲ್ಲುವರು. 'ಕಾರ್ಪಣ್ಯ ದೋಷೋಪಹತ ಸ್ವಭಾವ'ರಾಗುವರು. ಸ್ವಪ್ರತಿಷ್ಠೆಯ ಅಹಂಕಾರದ ಅತಿರೇಕವು ಬಾಳಿನ ಎಲ್ಲ ಪ್ರಶ್ನೆಗಳನ್ನೂ ಆವರಿಸಿ, ನಮ್ಮನ್ನು ಅಡ್ಡದಾರಿಗೆ ಒಯ್ಯುತ್ತದೆ. ಆಗ ನಾವು ಕರ್ತವ್ಯ ವಿಮೂಢರಾಗಿ ಕಂಗೆಡುತ್ತೇವೆ. ಸಮಾಜವನ್ನು ಸೇರದೇ, ಅದರಿಂದ ಸಿಡಿದು ದೂರ ನಿಂತು ಮಂದಿಯ ಮೇಲೆಲ್ಲ ಮುನಿದೆದ್ದು, ಜನಗಳನ್ನು ತೆಗಳುತ್ತ ಸಂಶಯಾತ್ಮರಾಗಿ ಮೂಲೆಗುಂಪಾಗಿ ತನ್ನ ಮನೆ ಹಾಗೂ ಮನಸ್ಸಿನ ಸೆರೆಮನೆಯಲ್ಲಿಯೇ ಮಿಡುಕುತ್ತ ಬಿದ್ದುಕೊಳ್ಳುತ್ತಾರೆ. ತನಗೆ ಜನದ ಪರಿವೆಯಿಲ್ಲವೆನ್ನುತ್ತಾರೆ. ಉದಾಸೀನತೆಯಲ್ಲಿ ಪೊಲಸು ಉಡಿಗೆ ತೊಡಿಗೆಯಲ್ಲಿ ಹುಚ್ಚು ಕಳೆ ಸುರಿಸುತ್ತ ಅಲೆಯುತ್ತಾರೆ. ಈ ದುರ್ದೈವಿಗೆ ಮಂದಿಯೊಂದಿಗೆ ಮಾತುಕತೆ ಕೂಡ ಸೇರದು. ಹೀಗೆ ಬಾಳಿನ

ಬೆಳಕಿನಲ್ಲಿದ್ದರೂ ತಿಳಿಗೇಡಿತನದಿಂದ ಕತ್ತಲೆಯ ಕೋಣೆಯೊಳಗೇ ಬಿದ್ದುಕೊಂಡು ದಿನಗಳೆವ ಈ ಜೀವನ ಕ್ರಮವು ಇವರನ್ನು ನೆಟ್ಟಗೆ ಹುಚ್ಚರ ಮನೆಗೆ ಒಯ್ಯುವುದು. ಅಥವಾ ಹಲವು ಸಾರೆ ಆತನ ಹೆಮ್ಮೆಯು ವರಿಷ್ಠತೆಯ ಗುರಿಯು ಆತನನ್ನು ಇತರರಿಂದ ಅಗಲಿ ದೂರ ಇರಹಚ್ಚಿ, ತಾನೂ ಒಬ್ಬ ಏಕಾಂತ ಪ್ರಿಯ ತಪಸ್ವಿ ಎಂಬ ಭ್ರಾಂತಿಯನ್ನುಂಟುಮಾಡುತ್ತದೆ. ಇದರಿಂದ ಆತನ ಲೈಂಗಿಕ ವಾಸನೆಯ ಶಕ್ತಿಗಳೆಲ್ಲ ವಿಕೃತಿಗೊಂಡು ಸರಿ ದಾರಿಯಿಂದ ಸಮಾಜದಿಂದ ಆತನು ಇನ್ನೂ ದೂರ ಹೋಗುವನು. ತಾನು ಅವತಾರಿಯೆಂದಾಗಲಿ ಅಲೌಕಿಕ ವ್ಯಕ್ತಿಯೆಂದಾಗಲಿ, ಗ್ರಹಿಸುವನು. ಇಲ್ಲವೆ ಈ ಮೃತ್ಯ ಲೋಕದ ಸಂಗತಿಯೇ ಸಾಕೆಂದು ಶಪಿಸಿ ಸಿದ್ಧನಾಗಿ ವಿಮಾನಕ್ಕಾಗಿ ದಾರಿ ಕಾಯುತ್ತ ನಿಂತ ಅವಿರ್ಭಾವದಲ್ಲಿರುವನು. ಅಥವಾ ತಾನೇ ಹಗ್ಗದಿಂದ ಸ್ವರ್ಗವನ್ನೇರುವನು. ಇಲ್ಲವೆ ಅಲ್ಲಿಗೆ ಒಯ್ಯಲು ಜಲದೇವತೆಯರಿಗೆ ಮೊರೆ ಹೋಗುವನು. ಅಥವಾ ಶಸ್ತ್ರದಿಂದ ವೀರ ಸ್ವರ್ಗ ಪಡೆಯಲೆತ್ನಿಸುವನು. ಬಾಳಿನಲ್ಲಿ ಇನ್ನೊಬ್ಬರೊಡನೆ ಹೊಂದಿಕೊಳ್ಳಲು ಸಮಾಜದ ಹಿತಾಹಿತಗಳೇ ತನ್ನ ಹಿತಾಹಿತಗಳೆಂದು ಸಮಾಜ (ದೇಶ)ದ ವಿಶಾಲವಾದ ಆತ್ಮನೊಡನೆ ಸಮರಸವಾಗಲು ಆಗದ ಹೇಡಿ ಜೀವಿಗಳು ತಮ್ಮ ಜೀವನವನ್ನು ಕೊನೆಗಾಣಿಸುವ ಬಗೆಗಳಿವು.

## ಸಾಮಾಜಿಕತೆಯ ಶಿಕ್ಷಣ

ಬಾಳಿನ ಎಲ್ಲ ಸಮಸ್ಯೆಗಳು ಮೂಲತಃ ಸಾಮಾಜಿಕ ಸಮಸ್ಯೆಗಳೇ ಆಗಿವೆ. ಪಡಸಾಲೆಯಲ್ಲಿರಲಿ, ಪಾಠಶಾಲೆಯಲ್ಲಿರಲಿ, ಗೆಳೆಯರಲ್ಲಿರಲಿ, ಗಳಿಕೆಯಲ್ಲಿರಲಿ, ರಾಜಕಾರಣ ಧರ್ಮಾಚರಣ ಆರ್ಥಿಕ ಪ್ರಕರಣ-ಮುಂತಾದವುಗಳಲ್ಲೆಲ್ಲ ಸಾಮಾಜಿಕತೆಯ ಸಮಸ್ಯೆಗಳೇ ಅಡಕವಾಗಿವೆ. ನಮ್ಮ ಶಕ್ತಿ ಸಾಮರ್ಥ್ಯಗಳೆಲ್ಲ ಸಮಾಜದೊಡನೆ ಬರುವ ವಿವಿಧ ಒಳ್ಳೆಯ ಸಂಬಂಧಗಳಿಂದಲೇ ಹದಗೊಂಡು ಹುರಿಯಾಗಿ ಕೇಂದ್ರೀಕೃತವಾಗುತ್ತವೆ. ಅವುಗಳ ವಿನಿಯೋಗದ ದಿಶೆಯೂ ಸಾಮಾಜಿಕವೇ ಆಗಿದೆ. ಅವುಗಳನ್ನು ಮಾನವ ಕುಟುಂಬದ ಕಲ್ಯಾಣದ ಸಲುವಾಗಿ ವಿನಿಯೋಗಿಸುವುದರಲ್ಲಿಯೇ ಅವುಗಳ ಸಾರ್ಥಕವಿದೆ.

ಸಾಮಾಜಿಕ ಜೀವನಕ್ಕೆ ಮುಂದೆ ಅಡೆತಡೆಗಳನ್ನು ಉಂಟು ಮಾಡುವ ಒಲವುಗಳೂ ಸ್ವಭಾವ ವಿಶೇಷಗಳೂ ಬಾಳಮಾದರಿಯು ಚಿಕ್ಕಂದು ಇನ್ನೂ ರೂಪಗೊಳ್ಳುತ್ತಿರುವಾಗಲೇ ತಲೆದೋರುತ್ತವೆ. ಆದಕಾರಣ ಈ ಕುಂದುಗಳನ್ನು ವೇಳೆಮೀರುವ ಮುನ್ನವೇ ತಿದ್ದುವುದೆಂತು ? ಎಂಬುವದೇ ಮುಖ್ಯ ಪ್ರಶ್ನೆಯಾಗಿದೆ. ಬಾಳ ಮಾದರಿಯಲ್ಲಿಯ ದೊಡ್ಡ ದೋಷಗಳನ್ನು ಹೇಗೆ ನಿವಾರಿಸಿಕೊಳ್ಳಬೇಕು. ಸಣ್ಣ

ದೋಷಗಳ ಸುಳಿವನ್ನು ಮೊದಲೇ ಹೇಗೆ ತಿಳಿಯಬೇಕು ? ತಿಳಿದು ಸರಿಪಡಿಸಬೇಕು ? ಎಂಬುದನ್ನು ತಂದೆತಾಯಿಗಳು ಚೆನ್ನಾಗಿ ತಿಳಿದಿರುವುದು ಬಹಳೇ ಲಾಭಕರವಾಗಿದೆ. ಇವನ್ನೆಲ್ಲ ಅರಿತು ನುರಿತ ಹಿರಿಯರು ತೀರ ವಿರಳ. ಮನೋವಿಜ್ಞಾನದಲ್ಲಿಯೂ ಶಿಕ್ಷಣದ ಪ್ರಶ್ನೆಗಳಲ್ಲಿಯೂ ಹಿರಿಯರ ಆಸಕ್ತಿ ತೀರ ಕಡಿಮೆ. ಹುಚ್ಚು ಮೋಹ ಮಮತೆಯು ತಮ್ಮ ಮಕ್ಕಳನ್ನು ತಾವು ಸರಿಯಾಗಿ ತಿಳಕೊಳ್ಳಲು ಅಡ್ಡ ಬರುತ್ತವೆ. ಪರರು ತಮ್ಮ ಮಕ್ಕಳ ಬಗ್ಗೆ ಇದ್ದಂತೆ ಹೇಳಿದರೆ ಕೂಡ ಅವರಿಗೆ ಅಸಹ್ಯವೆನಿಸುತ್ತದೆ. ತಮ್ಮ ಮಕ್ಕಳು ಬುದ್ಧಿವಂತರು ಮತ್ತು ಒಳ್ಳೆಡೆಯವರು ಎಂದು ಕೆಲವರು ಕಣ್ಣು ಮುಚ್ಚಿ ನಂಬಿರುತ್ತಾರೆ. ಅಥವಾ ಇದಕ್ಕೆ ವಿಪರೀತವಾಗಿ ತಮ್ಮ ಮಕ್ಕಳು ನೆರೆಯವರ ಮಕ್ಕಳಿಗಿಂತ ಕಡಿಮೆ ಯೋಗ್ಯತೆಯವರು, ನಿರುಪಯೋಗಿಗಳು ಎಂದು ನಿಂದಿಸುತ್ತಾರೆ. ಇಲ್ಲವೇ ಮಕ್ಕಳನ್ನು ತೀರ ಉಪೇಕ್ಷಿಸುತ್ತಾರೆ. ಇಂಥವರು ತಜ್ಞರಿಗೆ ತಮ್ಮ ಮಕ್ಕಳ ತೊಡಕುಗಳನ್ನು ತಿಳಿಸಿ ಉಪಾಯ ಮಾಡಿಸುವುದು ಹೆಚ್ಚು ಹಿತಕರ.

ಆದರೆ ಇಂಥ ಬಿಡಿಯಾದ ವೈಯಕ್ತಿಕ ಪ್ರಯತ್ನಗಳ ಹೊರತಾಗಿ ಇನ್ನೊಂದು ಉಪಾಯವೆಂದರೆ ಒಳ್ಳೆಯ ಶಿಕ್ಷಣ ಸಂಸ್ಥೆಗಳು. ಬಹುಶಃ ಶಾಲೆಯನ್ನು ಸೇರುವ ವರೆಗೂ ಮಕ್ಕಳ ಬಾಳವಾದರಿಯಲ್ಲಿಯ ಲೋಪ ದೋಷಗಳು ಒಡೆದು ಕಾಣುವು ದಿಲ್ಲ. ಶಾಲೆಯಲ್ಲಿ ತಜ್ಞ ಶಿಕ್ಷಕರು ತಪ್ಪಿದ ಮಾದರಿಗಳನ್ನು ಸ್ವಲ್ಪ ಅವಧಿಯ ಲ್ಲಿಯೇ ಕಂಡುಹಿಡಿಯಬಹುದು-ಮಗುವು ಶಾಲೆಗೆ ಬಂದ ಮೊದಲಿನ ವಾರದಲ್ಲಿಯೇ ಗೊತ್ತು ಪಡಿಸಬಹುದು. ಈ ಕೆಲಸ ಶಿಕ್ಷಕರಿಗೇ ಹೆಚ್ಚು ಸುಕರ ಮತ್ತು ಸಾಧ್ಯ. ಏಕೆಂದರೆ ಅವರ ಆ ಸ್ಥಾನವೇ ಅವರಿಗೆ ಆ ಯೋಗ್ಯತೆಯನ್ನು ಕೊಟ್ಟಿದೆ. ಜೀವನದ ಸಾಮಾಜಿಕ ಬೇಕು ಬೇಡಗಳಿಗೆ ಸರಿಯಾಗಿ ಮಕ್ಕಳನ್ನು ಸಂಸ್ಕಾರ ಗೊಳಿಸುವುದು ಮನೆಯಲ್ಲಿ ಸಾಕಷ್ಟು ಸರಿಯಾಗಿ ನೀಗದು. ಆದುದರಿಂದಲೇ ಶಿಕ್ಷಣ ಸಂಸ್ಥೆಗಳು ತಲೆದೋರಿವೆ. ಶಾಲೆಯು ಮನೆಯದೇ ಒಂದು ಹೊರಮೈಯು. ಕುಟುಂಬ ಸಂಸ್ಥೆಯ ಉತ್ತಮಾಂಗವು. ಬಾಳನ್ನು ಗೆಲ್ಲುವ ಬಲ್ಲಿದ ತನದ ಮಲ್ಲ ವಿದ್ಯೆಯನ್ನು ಕಲಿಸುವ ಗರಡೀಮನೆಗಳೆಂದರೆ ಶಿಕ್ಷಣ ಸಂಸ್ಥೆಗಳು. ಆದರೆ ಈ ಕರ್ತವ್ಯವನ್ನು ನಿರ್ವಹಿಸಲು, ಮೊದಲು ಶಿಕ್ಷಕರಲ್ಲಿ ಮನೋವಿಜ್ಞಾನದ ಸೂಕ್ಷ್ಮ ದೃಷ್ಟಿಯು ಬರಬೇಕು. ಮಕ್ಕಳ ಮನಸ್ಸನ್ನು ಓದುವ, ಹೃದಯವನ್ನು ಅರಿವ, ಅವರ ಗೊತ್ತು ಗುರಿಗಳನ್ನು ತಿಳಿದು ನೋಡಿ ಅವರವರ ಒಲವಿನಿಂದ ಆ ಮಕ್ಕಳು ಯೋಗ್ಯವಾದ ಆದರ್ಶ, ಆಕಾಂಕ್ಷೆಗಳುಳ್ಳವರಾಗುವಂತೆ ಮಾಡುವ ಕರ್ಮಕೌಶಲವು ಶಿಕ್ಷಕರಲ್ಲಿ ಇರಬೇಕು. ಶಿಕ್ಷಣದ ನಿಜವಾದ ಉದ್ದೇಶ ಶೀಲ ಸಂವರ್ಧನೆ. ಶಾಲೆಯ ಕರ್ತವ್ಯ ಮಕ್ಕಳಲ್ಲಿ ಶೀಲವನ್ನು ಮೈಗೊಳ್ಳುವಂತೆ ಮಾಡುವದು. ಬರೇ ಶುದ್ಧ ಲೇಖನ, ಗಣಿತ ವಾಚನಗಳ, ಪುಸ್ತಕಪಾಠಗಳೆಂದರೆ ಶಿಕ್ಷಣವಲ್ಲ.

# ೧೦ ಕೆಳೆ (ಸಾಮಾಜಿಕ ಭಾವನೆ) ತಿಳಿವು ಮತ್ತು ಕೀಳರಿಮೆ

ತಾವು ಕೀಳರೆಂಬ ಭಾವನೆ ವಿಪರೀತವಾಗಿ ಹಾಳಾಗುತ್ತಿರುವವರು ಕೆಲವರು; 'ನಮ್ಮ ಸಮಾನರಿನ್ನಾರು ?' 'ನಾವೇ ಇಂದ್ರ;' 'ನಾವೇ ಚಂದ್ರ' ಎಂದು ಹೆಮ್ಮೆ-ಹೆಗ್ಗಳಿಕೆಗಳಿಂದ ಹಾರಾಡುತ್ತಿರುವವರು. ಇಂಥವರ ಆಚಾರ ವಿಚಾರಗಳ ದುಷ್ಪರಿಣಾಮಗಳನ್ನು ಸಮಾಜಕ್ಕೆ ಅನುಭವಿಸಬೇಕಾಗುತ್ತದೆ. ಸಮಾಜವ ಸಾಮರಸ್ಯವು ಇಂತು ನಷ್ಟವಾಗಿ ಅದರಲ್ಲಿ ಒಡಕು, ಹುಳುಕುಗಳು ತಲೆದೋರಲು ಕೀಳರಿಮೆ ಹಾಗೂ ಮೇಲರಿಮೆಗಳೇ ಮುಖ್ಯ ಕಾರಣಗಳಾಗಿವೆ. ಮತ್ತು ಕನಿಷ್ಠತೆ, ವರಿಷ್ಠತೆಗಳನ್ನು ಪ್ರೇರಿಸುವ ಕೀಳರಿಮೆ ಹೆಗ್ಗರಿಮೆಗಳು ಮೂಲತಃ ಬಾಳ ಮಾದರಿಯ ಹದಗೆಟ್ಟ ಅಂಶವನ್ನೇ ಸೂಚಿಸುತ್ತವೆಂಬುದನ್ನು ಈವರೆಗೆ ವಿವರಿಸಿದ್ದಾಯಿತು. ಇವೆರಡೂ ಕುಂದುಗಳು ಆಗಂತುಕ. ಆನುವಂಶಿಕ ಅಲ್ಲ. ಅಥವಾ ರಕ್ತವಾಹಿನಿಯಲ್ಲಿಯ ವಿಷಬೀಜಗಳೂ ಅಲ್ಲ. ವ್ಯಕ್ತಿಯ ಮನಸು ಮತ್ತು ಸುತ್ತಲಿನ ಪರಿಸ್ಥಿತಿ ಇವೆರಡರ ತಿಕ್ಕಾಟ ತಾಕಲಾಟಗಳ ಪರಸ್ಪರ ಪ್ರತಿಕ್ರಿಯೆಗಳಲ್ಲಿ ಒದಗುವ ವೃತ್ತಿ ವಿಶೇಷಗಳಿವು. ಹಾಗಾದರೆ, ಈ ವೃತ್ತಿ ವಿಶೇಷಗಳು ಈ ಮನಸಿನ ತೊಡಕುಗಳು ಎಲ್ಲರಲ್ಲಿಯೂ ಏಕೆ ಒದಗಿ ಬರುವುದಿಲ್ಲ ? ಕೆಲವೊಂದು ನ್ಯೂನತೆಯ ಭಾವನೆ-ಕೊರತೆಯ ಕೊರಗು, ವರಿಷ್ಠತೆಯ ಕುರಿತು ಪ್ರೇರಣೆ-ಹಿರಿಮೆಯ ಕೋರಿಕೆಗಳು ಮನುಷ್ಯ ಮಾತ್ರರಿಗೇ ಸಹಜವಾಗಿದ್ದರೂ, ಆ ಜನರು ಈ ಭಾವನೆ ಮತ್ತು ಅದರಿಂದಾದ ಈ ಪ್ರೇರಣೆಗಳನ್ನು ಸಮಾಜಕ್ಕೆ ಉಪಯೋಗಿಯಾಗುವ ರೀತಿಯಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಮಾನವನು ತಾನು ಪಡೆದಿರುವ ಸಾಮರ್ಥ್ಯ-ಸಂಪತ್ತುಗಳನ್ನು ಸಮಾಜ ಹಿತ ಸಾಧನೆಗಾಗಿ ಉಪಯೋಗಿಸುವುದರಲ್ಲಿಯೇ ಅದರ ಸಾರ್ಥಕತೆಯಿದೆ. ದೂರ ದೃಷ್ಟಿಯಿದೆ. ಸ್ವಾರ್ಥ-ಪರಾರ್ಥಗಳೆರಡನ್ನೂ ಸಾಧಿಸಿ ಕೊಂಬ ಜಾಣ್ಮೆಯಿದೆ. ಏಕೆಂದರೆ ಸಾಮಾಜಿಕ ಆಸಕ್ತಿಯು ಹೆಚ್ಚಿದಂತೆ ವ್ಯಕ್ತಿಯೊಳಗಿನ ಶಕ್ತಿ ಸಾಮರ್ಥ್ಯಗಳು ವೃದ್ಧಿಂಗತವಾಗುವವು. ಇದನ್ನು ಅರಿತವರೇ ತಿಳಿವವರು. ಉಳಿದವರು ತಿಳಿಗೇಡಿಗಳು.

ಕೀಳರಿಮೆಯು ಮಿತಿಮೀರಿರದಿದ್ದರೆ, ಆ ವ್ಯಕ್ತಿಯು ಜೀವನದಲ್ಲಿ ಉಪಯೋಗಿಯಾಗಿಯೇ ಬೆಳೆಯಲು ಹೆಣಗುವುದು. ಅದರ ಸ್ವಾರ್ಥ ಸಾಧನೆಯ ಉದ್ದೇಶವೇ ಅದಕ್ಕೆ ಪರಾರ್ಥ ಧೋರಣೆಯನ್ನೂ ಉಪದೇಶಿಸುವುದು. ಇತರರಲ್ಲಿ ಆಸಕ್ತಿ ಬೆಳಿಸಿ ಅವರೊಡನೆ ಕೂಡಿ ತನ್ನ ಗುರಿಯನ್ನು ಸಾಧಿಸಲು ಕಲಿಯುವುದು. ಹವೆಯ ಭಾರವು ನಮ್ಮ ದೇಹಕ್ಕೆ ಹೊರೆಯೆನಿಸದಂತೆ, ಸಮಾಜದಲ್ಲಿ ಬೆಳೆದ

ನಮ್ಮ ಪಿಂಡಕ್ಕೆ ಸಾಮಾನ್ಯವಾಗಿ ಸಾಮಾಜಿಕತೆ ಮೈಯುಂಡಿದೆ. ತನ್ನ ಅಸಹಾಯತೆಯನ್ನು ಕೆಲಮಟ್ಟಿಗೆ ಕಡಿಮೆ ಮಾಡಿಕೊಳ್ಳಲು ವ್ಯಕ್ತಿಯು ಸಾಮಾಜಿಕ ಸಹಕಾರಕ್ಕೆ ಸಿದ್ಧನಾಗುತ್ತಾನೆ. ವ್ಯಕ್ತಿಯ ಪರಿಪುಷ್ಟತೆಯ ಹೆಣಗಾಟದ್ದೇ ಅದೊಂದು ಸಂಘಟಿತ ಸ್ವರೂಪ. ಇಂಥ ಸಾಮಾಜಿಕತೆಯ ಅರಿವನ್ನು ಬೆಳೆಸಿಕೊಳ್ಳದ ತರುಳನಾಗಲೀ ತರುಣನಾಗಲೀ ತೀರ ವಿರಳವೆಂದರೂ ಅಡ್ಡಿ ಇಲ್ಲ. ತನ್ನಷ್ಟಕ್ಕೆ ತಾನು; ಬೇರೆಯವರ ಉಸಾಬರಿ ಏಕೆ ? ಎಂದು ಮುಂತಾಗಿ ಮಾತಾಡುವುದು ವ್ಯರ್ಥ. 'ಹೆರವರ ಗೊಡವೆ ನನಗೆಬೇಡ'ವೆಂಬ ಪೊಳ್ಳು ಬಿಂಕದಿಂದ ಸಮಾಜದಿಂದ ದೂರವಾಗಿ ಒಬ್ಬಿಬ್ಬರು ನಡೆಯಬಹುದು. 'ಜಗತ್ತಿನ ಆಗು ಹೋಗಿನ ಸೂತಕ ಪಾತಕಗಳಾವುವೂ ತನಗೆ ಸೋಂಕುವುದಿಲ್ಲ' 'ಜಗತ್ತಿನಲ್ಲಿ ಸ್ವಾರಸ್ಯವೇ ಇಲ್ಲ' ಎಂಬ ಅವಿಭಾರ್ವದಿಂದ ಕೆಲವರು ವರ್ತಿಸಬಹುದು. ಆದರೆ ನಿಜವಾಗಿ ಈ ವರ್ತನವಲ್ಲಿ ಆತನ ಆತ್ಮಸಮರ್ಥನೆ ಇಲ್ಲ. ಈ ಮಾತಿನಿಂದ ಆತನು ತನ್ನನ್ನಾಗಲೀ ಇನ್ನಾರನ್ನಾಗಲೀ, ಕೇವಲ, ವಂಚಿಸುತ್ತಿರುತ್ತಾನೆ. ಇದಕ್ಕೆ ವಿಪರೀತವಾಗಿ ಕೆಲವರು ತಮ್ಮ ಸಾಮಾಜಿಕ ಅನಾಸ್ಥೆಯನ್ನು ಅಡಗಿಸಲು, ಇತರರಲ್ಲಿ ತನ್ನ ಆಸಕ್ತಿ ಇದೆಯೆಂತಲೂ ಮೇಲ್ತೋರಿಕೆಯ ಒತ್ತಾಯದಿಂದ ತೋರಿಸಬಹುದು. ಇವೆರಡೂ, ಸರ್ವಸಾಮಾನ್ಯವಾದ ಸಾಮಾಜಿಕ ಭಾವನೆಯ ಅಸ್ತಿತ್ವದ ಮೂಕಪ್ರಮಾಣಗಳೇ ಸರಿ.

## ಅನುಕೂಲ ಸನ್ನಿವೇಶಗಳ ದುಷ್ಪರಿಣಾಮ

ಕೆಲವು ವ್ಯಕ್ತಿಗಳಲ್ಲಿ ಸಾಮಾಜಿಕ ಆಸಕ್ತಿಯೇ ಇರುವುದಿಲ್ಲ. ಆದರೆ ಅದು ಹೊರಗೆ ತೋರುತ್ತಿರುವುದಿಲ್ಲ. ಆಸಕ್ತಿ ಅನಾಸಕ್ತಿಗಳ ಅಂಚಿನಲ್ಲಿ ಕೆಲವು ವ್ಯಕ್ತಿಗಳು ಅಲೆಯುತ್ತಾರೆ. ಇವರಲ್ಲಿ ಕೆಲವು ಮಾನಸಿಕ ವಿಕೃತಿಗಳು ಬಲಿತಿದ್ದರೂ, ಅನುಕೂಲ ಸನ್ನಿವೇಶದ ಮೂಲಕ ಹುದುಗಿರುತ್ತವೆ. ಬಿಕ್ಕಟ್ಟು, ತೊಂದರೆ ಬರುವತನಕ ಅವರು ಒಳ್ಳೆ ಸರಿಯಾಗಿಯೇ ಇರುತ್ತಾರೆ, ಇವರ ಬಾಳು ನುಣ್ಣಗೆ ಸಾಗುತ್ತದೆ. ಆದರೂ ಇಂಥವರನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಅವರು ಬಾಯಿಂದ ಹೇಳದಿದ್ದರೂ, ಅವರ ನಡೆ-ನಿಲವುಗಳು, ಇವರು ನ್ಯೂನತೆಯಿಂದ ಕೊರಗುತ್ತಿರುವರೆಂದು ಸೂಚಿಸದೇ ಇರುವುದಿಲ್ಲ. ತಮ್ಮ ಸ್ವಾರ್ಥನಿಷ್ಠತೆಯ ಮೂಲಕ, ಹೊತ್ತುಕೊಂಡ ಬಾಳಿನ ಹೊಣೆಗಳಿಂದ. ಬಿಡುಗಡೆಯನ್ನು ಬಯಸುತ್ತ ಬಳಲುವುದು, ಸಾಮಾಜಿಕ ಆಸಕ್ತಿಯ ನ್ಯೂನತಾಭಾವನೆಯುಳ್ಳ ವ್ಯಕ್ತಿಗಳ ಲಕ್ಷಣವಾಗಿದೆ. ಕೆಲವರು ತಮ್ಮ ಕೀಳರಿಮೆಯನ್ನು ಒಳಗೆ ಅಡಗಿಸಿಟ್ಟುಕೊಂಡು ನಡೆಯುತ್ತಾರೆ, ಬೇರೆ ಕೆಲವರು ತಮ್ಮ ನ್ಯೂನತೆಯನ್ನು ಬಾಯಿಬಿಚ್ಚಿ ಹೇಳಿಬಿಡುತ್ತಾರೆ. ತಾವು ಕೀಳರಿಮೆ

ಉಳ್ಳವರೆಂದು ಒಡೆದು ಆಡುವುದರಲ್ಲಿಯೇ ಇವರಿಗೆ ಏನೋ ಹೆಮ್ಮೆಯೆನಿಸುತ್ತದೆ. ತಮ್ಮ ಕುಂದು ಒಪ್ಪಿಕೊಳ್ಳುವ ಬಿಚ್ಚು ಮನವ ಹಿಗ್ಗು ಇವರಿಗೆನಿಸುತ್ತದೆ. ಆದರೆ ಕೀಳರಿಮೆಯೆ ತಮ್ಮ ದುಃಖದ ಕಾರಣವೆಂದು ಮೊದಲು ಸೂಚಿಸಿ, ಮರುಮಾತಿನಲ್ಲಿಯೇ ತಮ್ಮ ದುಃಸ್ಥಿತಿಗೆ ಮುಳವಾದ ಬೇರೆ ಹಲವಾರು ಸಂಗತಿಗಳನ್ನೂ ಮುಂದೊಡ್ಡುತ್ತಾರೆ, ತಾವು ಹಿಂದೆ ಬೀಳಲು ಹಿರಿಯರ ದಬ್ಬಾಳಿಕೆ, ಮನೆತನದ ತಾಪತ್ರಯ, ಸರಿಯಾದ ಶಿಕ್ಷಣದ ಅಭಾವ ಕೆಲವೊಮ್ಮೆ ಅಪಘಾತ, ಇವೇ ಮುಂತಾದ ಸಂಗತಿಗಳನ್ನು ವಿವರಿಸುತ್ತಾರೆ. ಕೆಲವೊಮ್ಮೆ ತೋರಿಕೆಯ ಹೆಗ್ಗರಿಮೆಯ ಬುಡದಲ್ಲಿ ತಮ್ಮ ಕೀಳರಿಮೆಯನ್ನು ಅಡಗಿಸಿ ಇಡುವವರೂ ಕೆಲವರು ಉಂಟು. ಇಂಥವರು ಉದ್ಧಟರೂ, ಒಣ ಹೆಮ್ಮೆಯವರೂ, ನಡುವೆ ಕೈಬಾಯಿ ಹಾಕುವ ಅಸಡ್ಡಾಳರೂ ಹೊರಡಂಭದಿಂದ ಹೆರವರಿಗೆ ಮೂಗು ಮುರಿಯುವವರೂ, ನೆರೆಯವರ ವಾಸನೆ ಕೂಡ ಅಸಹ್ಯವೆಂದು ತೋರಿಸುವ ಪೊಳ್ಳು ಬಿಂಕದವರೂ ಆಗಿರುತ್ತಾರೆ. ಇಂಥವರು ಆಚರಣೆಗಿಂತ ಅವಿರ್ಭಾವದಲ್ಲಿ, ಇರುವದಕ್ಕಿಂತ ತೋರುವುದರಲ್ಲಿ. ಓರಣ ಉಪಚಾರಗಳಲ್ಲಿ ಹೆಚ್ಚು ಆಸ್ಥೆ ವಹಿಸುವರು. ಇಂಥವರು ಆರಂಭದ ಪ್ರಯತ್ನಗಳಲ್ಲ ಕೆಲವೊಂದು ನರಗುಂದಿದವರಾಗಿ ತೋರುವರು. ಸಭಾ ಕಂಪವು ಕಂಡು ಬರುವುದು. ಕೈಕೊಂಡ ಕೆಲಸದಲ್ಲಿ ಸೋತರೆ, ಅನಂತರ ಆ ಅಳುಕನ್ನೇ ತಮ್ಮ ಅಪಯಶದ ಸಮರ್ಥನೆಗಾಗಿ ಮುಂದೆ ಮುಂದೆ ಒಡ್ಡುವರು. 'ಏನು ಮಾಡಲಿ ! ಈ ಸಭಾಕಂಪ ಒಂದಿರದಿದ್ದರೆ, ನೋಡಬೇಕಾಗಿತ್ತು. ನನ್ನ ಉಪನ್ಯಾಸ' 'ಇದರಲ್ಲಿ ಏನು ಮಹಾ ; ನಾನು ಇದಕ್ಕೂ ಚೆನ್ನಾಗಿ ಮಾಡಬಹುದು. ಆದರೆ...' ಇಂಥ ಉದ್ಗಾರಗಳು ಇವರ ನಾಲಿಗೆಯ ಮೇಲೆ ಯಾವಾಗಲೂ ಕುಣಿಯುತ್ತಿರುತ್ತವೆ. '...ಹೀಗೆ ಇದ್ದಿದ್ದರೆ' '...ಆದರೆ...' ಎಂಬ ಪಲ್ಲವಿಯುಳ್ಳ ಮಾತಿನವರು ತಮ್ಮ ಕೀಳರಿಮೆಯನ್ನು ಅಡಗಿಸಿಡಲು ಹವಣಿಸುತ್ತಾರೆ. ಕ್ರಿಯಾಸಿದ್ಧಿಗೆ ತಮ್ಮಲ್ಲಿ ಸತ್ವದ ಕೊರತೆಯುಂಟೆಂಬುದನ್ನು ಮುಚ್ಚಲು,ಮರೆಮಾಚಲು ಇಂಥ ಮಾತುಗಳನ್ನು ಬಳಸುತ್ತಾರೆ.

ಇದಲ್ಲದೆ ಕೀಳರಿಮೆಯನ್ನು ಸೂಚಿಸುವ ಇನ್ನೂ ಹಲವು ಲಕ್ಷಣಗಳಿರುತ್ತವೆ. ನಡೆನುಡಿಯಲ್ಲಿಯ ಧೂರ್ತ ವಿನಯವು ಒಳಗಣ ಠಕ್ಕಿಗೆ ಹಾಕಿದ ಒಳ್ಳೆ ಸೋಗು ಅದು. ಮುಂಜಾಗ್ರತೆಯ ನಡೆ, ಒಣ ಪಾಂಡಿತ್ಯದ ಪ್ರದರ್ಶನ, ಬಹು ಶ್ರುತತೆಯ ಪ್ರದರ್ಶನ, ಬಾಯಿಬಡಾಯಿ. ಜೀವನದ ಮಹತ್ವದ ಸಮಸ್ಯೆಗಳ ಕುರಿತು ಉಪೇಕ್ಷೆ, ಸಂಕುಚಿತ ಕಾರ್ಯಕ್ಷೇತ್ರವನ್ನು ಆರಿಸಿ ಅದರಲ್ಲಿಯೂ ಹಲವಾರು ಬಿಗಿಯಾದ ಕಟ್ಟು ಕಟ್ಟಳೆಗಳ ಬಂಧನಗಳಲ್ಲಿ ಕೆಲಸ ಮಾಡುವ ಹಂಚಿಕೆ, ಯಾವಾಗಲೂ ಕೈಗೋಲಿನ ಅನಿಕೆ ಇವೆಲ್ಲವೂ ಕೀಳರಿಮೆಯ ನಿಶ್ಚಿತ ಕುರುಹುಗಳು.

ಇಂಥವರ ಅಭಿರುಚಿಯು ವಿಚಿತ್ರ ರೀತಿಯಲ್ಲಿ ಬೆಳೆಯುತ್ತದೆ. ಕ್ಷುಲ್ಲಕ ವಸ್ತುಗಳನ್ನು ಕಲೆ ಹಾಕುವುದು ಇವರಿಗೆ ಹೆಚ್ಚು ಸೇರುತ್ತದೆ. ಮಹತ್ವವಿಲ್ಲದ ತಲೆ ಹರಟೆ, ವಾದವಿವಾದ, ಆಟ ಮೊದಲಾದ ಸಣ್ಣ ಪುಟ್ಟ ಸಂಗತಿಗಳಲ್ಲಿ ವೇಳೆಯನ್ನು ಕಳೆದು ಉಳಿದ ಕಡೆಯ ತಮ್ಮ ಕರ್ತವ್ಯಚ್ಯುತಿಯ ಸಮರ್ಥನೆಯನ್ನೇ ಮಾಡಿ ಕೊಳ್ಳುವರು !

ಮಕ್ಕಳ ಎಲ್ಲ ತೊಡಕುಗಳ ಮೂಲವು ಒಂದು ಬಗೆಯ ಕೀಳರಿಮೆಯಲ್ಲಿಯೇ ಇದೆ. ಬಾಳಿನ ಪಾತಾಳಿಯ ಮೇಲೆ ಮಕ್ಕಳ ತೊಡಕುಗಳ ರೂಪ ಹೇಗೂ ಕಂಡರೂ ಅವುಗಳ ಆಳದಲ್ಲಿ ಕೆಲವೊಂದು ಕೀಳರಿಮೆಯೇ ಗೋಚರವಾಗುತ್ತದೆ. ಉದಾಹರಣಾರ್ಥವಾಗಿ ಮೈಗಳ್ಳನಾಗಿರುವುದು, ಪರ್ಯಾಯದಿಂದ ಬಾಳಿನ ಮುಖ್ಯ ಕಾರ್ಯಗಳನ್ನು ಉಪೇಕ್ಷಿಸುವುದೇ ಸರಿ. ಆದ್ದರಿಂದ ನಿಜವಾಗಿಯೂ ಸೋಮಾರಿಯು ಒಂದು ಮನೋವಿಕೃತಿಯ ತೊಡಕಿನಲ್ಲಿ ಸಿಕ್ಕಿ ಸುಮ್ಮನೆ ಬಿದ್ದುಕೊಳ್ಳುತ್ತಿರುತ್ತಾನೆ. ತುಡುಗು ಮಾಡುವುದೆಂದರೆ ಹೆರವರ ಅಜಾಗೃತೆಯ ಇಲ್ಲವೇ ಅವರ ಇಲ್ಲಮೆಯ (ಗೈರಹಾಜರಿಯ) ಲಾಭ ಪಡೆಯುವುದೇ ಆಗಿದೆ. ಸುಳ್ಳಾಡುವುದು ನಿಜವನ್ನು ನುಡಿವ ಎದೆಗಾರಿಕೆಯಿಲ್ಲದಿರುವ ಲಕ್ಷಣ. ಹೆರವರ ಸಹಾನುಭೂತಿ ಆಶ್ರಯಗಳನ್ನು ಪಡೆಯಲು ಸರಗುಂದಿದವರಾಗುವರು. ಇವೆಲ್ಲ ವಿಪರ್ಯಯಗಳ ತಳದಲ್ಲಿ ಕೀಳರಿಮೆಯೇ ಇದ್ದುದನ್ನು ಬಿಡಿಸಿ ನಿಟ್ಟಿಸಿನೋಡಿ ಮನಗಾಣಬಹುದು.

## ಧೈರ್ಯದ ಕೊರತೆ ಮುಖ್ಯ ಕಾರಣ

ಮನೋವಿಕೃತಿಗಳು ಬೆಳೆಯುವುದಕ್ಕೆ ಸಮಾಜದಲ್ಲಿ ತಮಗೆ ಉಪಯುಕ್ತರಾಗಿ ವರ್ತಿಸಲಿಕ್ಕೂ ಏಳ್ಗೆ ಹೊಂದಲಿಕ್ಕೂ ಆಗದುದೇ ಮುಖ್ಯ ಕಾರಣವೆಂದು ಮನ ಗಾಣಬಹುದು. ಸಮಾಜಕ್ಕೆ ಉಪಯುಕ್ತರಾಗಿ ವರ್ತಿಸುವುದಕ್ಕೆ ಎದೆಗಾರಿಕೆ ಬೇಕು. ಅಳ್ಳೆದೆಯವರಿಂದ ಇದು ಸಾಧ್ಯವಿಲ್ಲ. ಸಮಾಜದಲ್ಲಿ ಕೂಡಿ ನಡೆಯುವುದೆಂದರೆ ಇವರಿಗೆ ಮೈಮೇಲೆ ಏನೋ ಕುತ್ತ ಬಂದಂತೆ ಎನಿಸುವುದು. ಈ ಧೈರ್ಯ ಗೇಡಿತನದೊಂದಿಗೆ ಅವರ ತಿಳಿಗೇಡಿತನ-ಅದೂರ ದೃಷ್ಟಿಯೂ ಇನ್ನೊಂದು ಕಾರಣ. ಹಲವರ ಗೆಳೆತನ, ಸಾಮಾಜಿಕ ಸಂಬಂಧಗಳು ಇವುಗಳ ಅವಶ್ಯಕತೆ ಉಪಯುಕ್ತತೆಗಳನ್ನು ಅವರಿಂದಾಗುವ ಸ್ವಪರ ಲಾಭಗಳನ್ನು ತಿಳಿದುಕೊಳ್ಳಲು ಇವರು ಅಸಮರ್ಥರಿರುತ್ತಾರೆ. ಒಂದು ಬಗೆಯ ಸಾಮಾಜಿಕ ಹೇಡಿತನ, ಮತ್ತು

(ಲೌಕಿಕ ವ್ಯವಹಾರದಲ್ಲಿಯ) ತೀಳಿಗೇಡಿತನವು ಇವರಲ್ಲಿ ನೆಲೆಗೊಂಡಿರುತ್ತದೆ. ಹೇಡಿಯೇ ತಿಳಿಗೇಡಿ; ತಿಳಿಗೇಡಿಯೇ ಹೇಡಿ. ಇವೆರಡೂ ಗುಣಗಳೂ ಒಂದೇ ವಸ್ತುವಿನ ಎರಡು ಬದಿಗಳು. ಈ ವೃತ್ತಿಯ ಅತಿರೇಕದ ದುಷ್ಪರಿಣಾಮಗಳು ಅಪರಾಧಿ ವ್ಯಕ್ತಿಗಳಲ್ಲಿ ಕಂಡು ಬರುತ್ತವೆ. ಹಾಗೆಯೇ ಸೆರೆಗುಡಕತನದಲ್ಲಿಯೂ ಒಂದು ಬಗೆಯ ಹೇಡಿತನವೇ ಹುದುಗಿರುತ್ತದೆ. ಬಾಳಿನಲ್ಲಿ ಎದುರಿಸಬೇಕಾದ ಕಷ್ಟನಷ್ಟಗಳಿಗೆ ಬೆದರಿ ಬೇಸತ್ತು, ಸೆರೆಯ ಅಮಲಿನಲ್ಲಿ ತನ್ನನ್ನು ಮರೆವ ಚಟವು ಕೀಳರಿಮೆಯ ತೀರ ವಿಕೃತಿಯನ್ನೇ ವ್ಯಕ್ತಪಡಿಸುತ್ತದೆ. ಬುದ್ಧಿಯನ್ನು ಬಧಿರ ಗೊಳಿಸಿ ಮನಸ್ಸಿಗೆ ಮಂಕು ಹಿಡಿಸಿ ಬಾಳಿನ ಕುತ್ತಕ್ಕೆ ಬೆನ್ನು ತೋರಿಸಿ ಕುಡುಕ ತನದ ಕಗ್ಗತ್ತಲೆಯಲ್ಲಿ ಮೋರೆ ಅಡಗಿಸುವ ಈ ಜನರಲ್ಲಿ ಎದೆಗಾರಿಕೆ ಶೂನ್ಯ ವಿರುತ್ತದೆಂದು ಮೇಲೆಯೇ ತೋರುತ್ತದೆ.

ಸಾಮಾನ್ಯರಲ್ಲಿ ಸಾಮಾಜಿಕ ವೃತ್ತಿಯ ವಿವೇಕದೊದಿಗೆ ಕೆಲವೊಂದು ಎದೆಗಾರಿಕೆ ಯಿರುತ್ತದೆ. ಆದರೆ ಇದಕ್ಕೆ ವಿ ಪ ರೀ ತ ವಾ ಗಿ ಕೀಳರಿಮೆಯಿರುವ ಜನರು ಯಾವಾಗಲೂ ಅಳ್ಳೆದೆಯವರು. ಅಲ್ಲದೆ ಇವರಲ್ಲಿ ಇನ್ನೂ ಒಂದು ದುರ್ಗುಣ ವಿರುತ್ತದೆ. ಇವರಿಗೆ ಆತ್ಮಸಮರ್ಥನೆಗಾಗಿ ಹೆರವರ ಮೇಲೆ ಆರೋಪ ಹೊರಿಸುವ ಚಟವು ಅಂಟಿಕೊಂಡಿರುತ್ತದೆ. ಜನಸಮಾಜದಿಂದ ತಮಗೆ ಏನೂ ಲಾಭವಾಗಿಲ್ಲ ವೆಂದು, ಸಮಾಜದ ಕ್ರೂರತನವನ್ನು ಎತ್ತಿ ಎತ್ತಿ ಬಣ್ಣಿಸುತ್ತಾರೆ. ತಮ್ಮ ಹೊಟ್ಟೆಯ ಪಾಡನ್ನೇ ಹಾಡುತ್ತಾರೆ. ಸಮಾಜ ವಿಘಾತಕವೂ ಅರಾಷ್ಟ್ರೀಯವೂ ಆದ ತಮ್ಮ ಅಪಕಾರ್ಯಗಳ ಹೊಣೆಯನ್ನು ಹೊಟ್ಟೆಯ ಮೇಲೆ ಹೇರುತ್ತಾರೆ. ಸಾಮಾಜಿಕ ಕಾರ್ಯಕಲಾಪ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಇವರಿಗೆ ಆದರ ಅಭಿಮಾನ ಗಳೆನಿಸುವುದಿಲ್ಲ. ತಮ್ಮದೇ ಆದ ಸಂಕುಚಿತವಾದ ನೈತಿಕ ಒರೆಗಲ್ಲಿಗೆ ಹಚ್ಚಿ ಜನರ ಬೆಲೆ ಕಟ್ಟುತ್ತಾರೆ.

ತಮ್ಮ ಸಮಾಜ ವಿಮುಖತೆಯನ್ನು ಅಥವಾ ಸಮಾಜ ವಿಘಾತಕ, ಅರಾಷ್ಟ್ರೀಯ ಕೃತಿಗಳನ್ನು (ಅಪರಾಧಗಳನ್ನು) ಒಣ ಬಣಗು ತರ್ಕ ಪದ್ಧತಿಯಿಂದ ಇಲ್ಲವೆ ಬಾಯಿಬಡಕತನದಿಂದ ಮಂಡನ ಮಾಡಿಕೊಳ್ಳುವ ಜನರಿದ್ದಾರೆ. ಆದರೆ ಇದು ಸ್ವಪರವಂಚನೆಗಾಗಿ ಹೂಡಿದ ಹುರುಳಿಲ್ಲದ ಹುಸಿಮಾತಿನ ಆತ್ಮವಂಚನೆ. ಇವರ ಬಾಳಿನ ಇಡೀ ನೋಟವೇ ಸಾಮಾಜಿಕ ರೀತಿಯಲ್ಲಿ ನಿರುಪಯೋಗಿಯಾದ ಗುರಿಯತ್ತ ತಿರುಗಿರುತ್ತದೆ. ಆದುದರಿಂದಲೇ ತಮ್ಮ ಆ ಕಾರ್ಯಕ್ಕೆ ತಿಳುವಳಿಕೆಯ ಒಪ್ಪ ಹಾಕಿ ಇವರಿಗೆ ಆತ್ಮಸಮರ್ಥನೆಯ ಭಾಷ್ಯ ಬರೆಯಬೇಕಾಗುತ್ತದೆ. ಸಮಾಜಕ್ಕೆ ಸದುಪ ಯೋಗಿಯಾದವರಿಗೆ ತಮ್ಮ ನಡೆವಳಿಕೆಯ ಬಗ್ಗೆ ವಿವರಣೆ ಹೇಳಿಕೆಯನ್ನು

ಕೊಡಬೇಕಾಗುವುದಿಲ್ಲ. ಅವರು ತಮ್ಮ ಕೆಲಸದಲ್ಲಿಯೆ ತೊಡಗಿರುತ್ತಾರೆ.

ಇಂಥ ಮನೋಕೃತಿಯ ವ್ಯಕ್ತಿಗಳ ತೊಡಕುಗಳನ್ನು ಬಿಡಿಸಲು ವಿಶಾಲವಾದ ಅಂತಃಕರಣವು ಬೇಕು. ಇನ್ನೊಬ್ಬರೊಡನೆ ತಾದಾತ್ಮ್ಯವನ್ನು ಹೊಂದುವ ಶಕ್ತಿಬೇಕು. ಅಂದರೆ ಚಿಕಿತ್ಸಕನು ಅಂಥ ವ್ಯಕ್ತಿಯ ಬಾಳಿನೊಡನೆ ಒಂದಾಗಿ ಸಮರಸನಾಗಿ, ಆ ವ್ಯಕ್ತಿಯ ಸ್ಥಾನದಲ್ಲಿ ನಿಂತು ನೋಡಿ, ಬಗೆದು ಭಾವಿಸುವ ಅತ್ಯಂತ ಮಹತ್ವದ ಸಾಮರ್ಥ್ಯವು ಅವರಿಗೆ ಬೇಕು. ಮನೋವಿಕೃತಿಯ ಜನರಿಗೆ ಎದೆಗೆಡದಿರುವಂತೆ ಮಾಡಿದರೆ, ಪ್ರೋತ್ಸಾಹಿಸಿದರೆ, ಉತ್ತೇಜನೆಯನ್ನು ಕೊಟ್ಟರೆ ಇವರೂ ಉಪಯುಕ್ತರಾದ ಮನುಷ್ಯರಾಗುವರು. ಇಂತಹರು ಒಮ್ಮೊಮ್ಮೆ ತಮ್ಮಲ್ಲಿ ಕೆಲವೊಂದು ವಿಶೇಷ ಶಕ್ತಿಯು, ಕರ್ತೃತ್ವವು ಇಲ್ಲವೆಂಬ ತೀವ್ರವಾದ ವಿಚಾರದ ಪರಿಣಾಮವಾಗಿ ಮನೋವಿಕೃತಿಗೆ ಎಡೆಕೊಟ್ಟಿರುತ್ತಾರೆ. ಹುಟ್ಟಿದೊಡನೆಯೆ ಮಹಾತ್ಮರಾದವರು ಯಾರೂ ಇಲ್ಲ. ಆದರೂ ಅವತಾರ ಮಹಾತ್ಮಗಳನ್ನು ಪುರಾಣಗಳನ್ನು ಹೇಳಿ ಮಿಕ್ಕವರು ಅವರ ಮಟ್ಟಕ್ಕೆ ಮುಟ್ಟುವವರಲ್ಲ. ಕೆಲವರು ಹುಟ್ಟಾ ದೊಡ್ಡವರು. ದೊಡ್ಡವರದೆಲ್ಲ ಬಗೆ ದೊಡ್ಡದೇ ಎಂಬೀ ಬಗೆಯ ಅಭಿಪ್ರಾಯಗಳ ಪ್ರಚಾರವು ನಡೆದೇ ಇದೆ. ಇವರ ಹಿಂದೆ ಇರುವ ಮಾನವನ ಕೀಳರಿಮೆಯೆ ಒಡೆದು ಕಾಣುತ್ತದೆ. ಇಂಥ ಹತಾಶೆಯ ಉಸಿರು 'ಒಬ್ಬನು ಮಾಡಬಹುದಾದುದನ್ನು ಅನುಕೂಲತೆಗಳು ದೊರೆತರೆ ಇನ್ನೊಬ್ಬನೂ ಮಾಡಬಲ್ಲ; ನರನು ತನ್ನ ತಪೋಬಲದಿಂದ ನಾರಾಯಣನಾಗಬಲ್ಲ.' ಎಂಬ ಮನೋವೈಜ್ಞಾನಿಕ ಸೂತ್ರಕ್ಕೆ-ಬಾಳಿನ ಚೆಲುವು, ನಲವುಗಳನ್ನು ಗೆಲ್ಲುವ ಶಕ್ತಿದಾಯಕವಾದ ಈ ಸೂತ್ರಕ್ಕೆ ಇಂಥ ಕೀಳರಿಮೆ ತೀರ ವಿರುದ್ಧವಾಗಿದೆ. ಇದೇ ಮೇರೆಗೆ ಕೀಳರಿಮೆಯ ಅಂಗವಾಗಿ ಇನ್ನೊಂದು ತಪ್ಪು ಗ್ರಹಿಕೆಯು ಜನರಲ್ಲಿ ಬೇರೂರಿದೆ. ಅದು ಆನುವಂಶಿಕ ಗುಣಧರ್ಮಗಳಲ್ಲಿಯ ನಂಬುಗೆ. ಈ ನಂಬುಗೆಯು ಸಂಪೂರ್ಣವಾಗಿ ನಿಜವಿದ್ದುದಾದರೆ ಮನೋವಿಜ್ಞಾನಿಯ ಯತ್ನ, ಯೋಜನೆಗಳೆಲ್ಲವೂ ಬಿಸಿಲು ಕುದುರೆಯ ಜೂಜಾಟವೇ ಆಗುತ್ತಿತ್ತು. ಆದರೆ ವಸ್ತುಸ್ಥಿತಿಯು ಕೇವಲ ಹಾಗಿಲ್ಲ. ಏನೇ ಆಗಲಿ, ಯಶಸ್ಸು ಶ್ರೇಯಸ್ಸುಗಳು ಮುಖ್ಯವಾಗಿ ಧೈರ್ಯದಿಂದ ನಡೆವ ಪ್ರಯತ್ನದ ಫಲವೆಂಬುದು ಅನುಭವಸಿದ್ಧವಾದ ಮಾತಾಗಿದೆ. ಒಂದು ವ್ಯಕ್ತಿಯಲ್ಲಿ ತಲೆದೋರುತ್ತಿರುವ ನಿರಾಶೆಯ ಕಗ್ಗತ್ತಲೆಯನ್ನು ಹೊಡೆದೋಡಿಸಿ, ಸದಿಚ್ಛೆ ಸತ್‌ಸಂಕಲ್ಪದ ತೇಜವನ್ನು ಅಂತರಂಗವಲ್ಲಿ ವಿರಾಜಿಸುವಂತೆ ಮಾಡಿ 'ಉದ್ಧರೇತ್ ಆತ್ಮನಾತ್ಮಾನಮ್' ಎಂಬ ಆತ್ಮವಿಶ್ವಾಸದ ಅಗಾಧ ಶಕ್ತಿಯನ್ನುಂಟು ಮಾಡುವ ಶ್ರದ್ಧೆಯ ವಜ್ರಕವಚವನ್ನು ತೊಡಿಸಿ, ಹಲವರ ಹಿತ ಕಾರ್ಯದಲ್ಲಿ ಆತನ ಮನಸ್ಸು ಆಸಕ್ತವಾಗುವಂತೆ ಮಾಡುವುದೇ ಮನೋವಿಜ್ಞಾನಿಯ ಕರ್ತವ್ಯವಾಗಿದೆ.

ತನ್ನ ನ್ಯೂನತೆಯ ಕೊರಗಿನ ಕೊಳೆಯಲ್ಲಿ ಪೊಳೆತ ವಿಕೃತ, ವಿಕ್ಷಿಪ್ತ ವಿಚಾರಗಳ ಮುಳುಗಳ್ಳಿಯಲ್ಲಿ ಸಿಕ್ಕುಬಿದ್ದವನನ್ನು ಎತ್ತಿ ಹೊರದೆಗೆದು ಸಾಮಾನ್ಯವಾದ ವಿವೇಕ ಶಕ್ತಿಯ ಉಲ್ಲಸಿತವಾದ ಆಶಾವಾದದ ಹೂದೋಟದಂತಹ ಮನೋ ಭೂಮಿಕೆಯಲ್ಲಿ ವಿಹರಿಸಲು ಕಲಿಸುವುದೇ ವ್ಯಕ್ತಿ ಮನೋವಿಜ್ಞಾನಿಯ ಗುರಿ ಯಾಗಿದೆ. ಇರುಳಿನಲ್ಲಿ ಹಾದಿತಪ್ಪಿದ ಒಂಟೆಯಂತೆ ಒಂಟಿಯಾಗಿ ನಿರಾಶೆಯ ಮರುಭೂಮಿಯಲ್ಲಿ ಸಾಗಿ ಬಾಳನ್ನೆಲ್ಲ ಸುಂಟರಗಾಳಿಯೆಂದು ಭಾವಿಸಿ ಬೆದರಿ ಕಂಗೆಡುವ ಜೀವಿಯನ್ನು ಸಮಾಜ ಧರ್ಮದ ಸ್ನೇಹರಜ್ಜುವಿನಿಂದ ಬದ್ಧರಾಗಿ ಒಂದುಗೂಡಿ ರಾಷ್ಟ್ರದ ಗುರಿಯನ್ನು ಮುಟ್ಟಲು ಹೊರಟ ಕಾರವಾನದಲ್ಲಿ ಸೇರಿಸಿ, ಆತನ ದಿಗ್ಭ್ರಮೆಗೊಂಡ ದೃಷ್ಟಿಯನ್ನು ಸಾಮುದಾಯಿಕ ಸುಖದ ಧ್ರುವ-ನಕ್ಷತ್ರ ದಲ್ಲಿ ಸ್ಥಿರಗೊಳಿಸಿ ಆತನನ್ನು ಬಾಂಧವ್ಯದ ಬಂಧನದಲ್ಲಿ ಆನಂದಿಸುವಂತೆ ಮಾಡು ವುದೇ ಮನೋವೈದ್ಯನ ಕರ್ತವ್ಯವು. ತನ್ನಂತೆ ಪರರ ಬಗೆಯುವುದಕ್ಕೆ ಕಲಿಯುವು ದೆಂದರೆ, ಪರರ ಸ್ಥಳದಲ್ಲಿ ತನ್ನನ್ನು ಕಲ್ಪಿಸಿಕೊಳ್ಳುವುದೂ ಒಂದು ಸಾಧನವಾಗಿದೆ. ತಾನು ಇನ್ನೊಬ್ಬನು (ಅಥವಾ ಇನ್ನೊಬ್ಬಳು) ಆಗಿ, ಇನ್ನೊಬ್ಬರ ದೃಷ್ಟಿಯಿಂದ ಬಗೆದು ಭಾವಿಸುವ ಶಕ್ತಿಯು-ಬರಿ ತರ್ಕಿಸುವುದಲ್ಲ; ಇಲ್ಲದವರಿಗೆ ಬಾಳಿನಲ್ಲಿ ಸುಖವಿಲ್ಲ. ಈ ಶಕ್ತಿಯು ಕಡಿಮೆ ಇರುವವರೇ ವಿಕೃತ ಮನೋವೃತ್ತಿಯವ ರಾಗಿರುತ್ತಾರೆ. ಬಾಳಿನಲ್ಲಿ ತಾವು ಕಷ್ಟನಷ್ಟಗಳಿಗೆ ಗುರಿಯಾಗುವುದಲ್ಲದೆ ಹೆರವರನ್ನೂ-ಸಮಾಜವನ್ನೂ ದುಃಖಕ್ಕೆ ಈಡು ಮಾಡುತ್ತಾರೆ. ಸಾಮರಸ್ಯವು ಕಡಿಮೆ ಇರುವ ಮನೆಯಲ್ಲಿ ತಂದೆತಾಯಿಗಳು ಮಕ್ಕಳ ಸುಖದುಃಖಗಳನ್ನು ತಿಳಿಯಲು ಅಸಮರ್ಥ ರಾಗುತ್ತಾರೆ. ಒಂದು ಮನೆಯಲ್ಲಿ ಹನ್ನೊಂದು ವರುಷದ ಹುಡುಗಿಯಿದ್ದಳು. ಅವಳಿಗೆ ಎದ್ದರೆ, ಕುಳಿತರೆ ಟೀಕಿಸಿಕೊಳ್ಳಬೇಕಾಗುತ್ತಿತ್ತು. ಅದರಿಂದ ಅವಳು ಮೊದಮೊದಲು ವಿರೋಧಿಸಿದಳು. ಆದರೆ ಅದು ನಿರುಪಯುಕ್ತವೆಂದು ಕಂಡು ಬಂದಿತು. ಅವಳು ಸಿಡುಕಿನವಳೂ, ಗಂಟುಮೋರೆಯವಳೂ. ಜಗಳಗಂಟಿಯೂ ಆದಳು. ಇದರಿಂದಲೂ ಅವಳಿಗೆ ತನ್ನ ಸ್ಥಿತಿ ಸುಧಾರಿಸಿತೆಂದು ಎನಿಸಲಿಲ್ಲ. ಮನೆ ಯವರ ಬಗ್ಗೆ ಅವಳಿಗೂ ಆದರವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಮನೆಯಲ್ಲಿ ಕದಿಯುವುದಕ್ಕೆ ಯಾವ ಸಂಕೋಚವು ಎನಿಸುವುದಿಲ್ಲ. ಆ ಹುಡುಗಿ ಸಣ್ಣಪುಟ್ಟ ವಸ್ತುಗಳನ್ನು ಕಳವು ಮಾಡಲಾರಂಭಿಸಿದುದು ಕಂಡು ಬಂದಿತು. ಮನೆಯವರಲ್ಲಿ ಅವಳಿಗೆ ಆತ್ಮೀಯತೆಯೂ, ಅವಳಲ್ಲಿ ಮನೆಯವರಿಗೆ ಅಕ್ಕರೆಯೂ ಇದ್ದುದಾಗಿ ದ್ದರೆ ಆ ಹುಡುಗಿ ಈ ಕೀಳುದಾರಿಗೆ ಬೀಳುತ್ತಿದ್ದಿಲ್ಲ.

ಇನ್ನೊಬ್ಬಳು ಆರೋಗ್ಯವಂತ ಹುಡುಗಿ. ಅದರಿಂದಲೆ ಅವಳ ಕಡೆಗೆ ಮನೆಯವರ ದುರ್ಲಕ್ಷ. ಏಕೆಂದರೆ ಮನೆಯಲ್ಲಿ ಇಬ್ಬರು ಬೇನಿಗರಾದ ತಂಗೆಂದಿರು. ತಾಯಿಗೆ

ಇವರಿಬ್ಬರ ಆರೈಕೆ ಮತ್ತು ಗಂಡನ ಕೆಲಸಗಳಲ್ಲಿಯೇ ಸಾಕಾಗುತ್ತಿತ್ತು. ಇವಳಿಗೆ ಒಬ್ಬ ಬುದ್ಧಿವಂತ ಹುಡುಗನೂ ಇದ್ದನು. ಆತನೂ ಅಶಕ್ತ. ಹೀಗಾಗಿ ಈ ಆರೋಗ್ಯವಂತ ಹುಡುಗಿಯನ್ನು ಮಾತನಾಡಿಸುವವರಾರು ? ತನಗೆ ಯಾರೂ ಅಕ್ಕರೆಯಿಂದ ಮಾತನಾಡಿಸುವವರೆ ಇಲ್ಲವೆಂದು ಇವಳಿಗೆ ಒಳಗೊಳಗೇ ತುಂಬ ಅಸಮಾಧಾನ. ಶಾಲೆಯಲ್ಲಿ ಇವಳು ಚೆನ್ನಾಗಿ ಅಭ್ಯಾಸ ಮಾಡುತ್ತಿದ್ದಳು. ಮೇಲಾದ ಮಳೆನಿಸಿದ್ದಳು. ಶಿಕ್ಷಕಿಯ ಪ್ರೀತಿಯನ್ನು ಪಡೆದಿದ್ದಳು. ಅಷ್ಟರಲ್ಲಿ ಈ ಶಿಕ್ಷಕಿಯ ಸ್ಥಳದಲ್ಲಿ ಇನ್ನೊಬ್ಬಳು ಬಂದಳು. ಹೊಸ ಶಿಕ್ಷಕಿಗೆ ಈ ಹುಡುಗಿಯ ಮೆಚ್ಚುಗೆ ಯಾವಳಾಗಲಿಲ್ಲ. ಆದರಿಂದ ಮನೆಯಂತೆ ಶಾಲೆಯಲ್ಲಿಯೂ ಇವಳಿಗೆ ವಿಪರೀತ ವಾತಾವರಣದಲ್ಲಿ ಇರಬೇಕಾಯಿತು. ಅಭ್ಯಾಸದಲ್ಲಿ ಹಿಂದೆ ಬೀಳಲಾರಂಭಿಸಿದಳು. ತನ್ನ ಗೆಳೆಯರನ್ನು ಟೀಕಿಸಿ, ಅವರ ಮೇಲೆ ತನ್ನ ಅಧಿಕಾರ ನಡಿಸುವುದಕ್ಕೆ ಹವಣಿಸಿದಳು. ಇವಳಿಗೆ ಪೆರವರಿಂದ ಟೀಕೆ ಬೇಡ, ಹೆರವರೆಲ್ಲ ಅವರ ಅಕ್ಕರೆ ಗಳಿಂದಲೇ ತನ್ನನ್ನು ಕಾಣಬೇಕೆಂಬ ಹಂಬಲ ಇವಳಿಗೆ. ಪೆರವರ ಹೊಗಳಿಕೆ ಪ್ರೀತಿಗಳನ್ನು ಸಂಪಾದಿಸಬೇಕೆಂಬುದೇ ಇವಳ ಗುರಿಯಾಗಿತ್ತು. ಇದು ಶಾಲೆ ಯಲ್ಲಿಯೇ ಸಾಧ್ಯವೆಂದು ಮೊದಲು ಕಂಡುಬಂದಿತು. ಶಾಲೆಯ ಕೆಲಸದಲ್ಲಿ ಅವಳ ಪ್ರೀತಿ, ಆಸಕ್ತಿ ಹೆಚ್ಚಾಗಿತ್ತು. ಅಲ್ಲಿಯೂ ತನ್ನನ್ನು ಕೇಳುವವರು ಯಾರೂ ಇಲ್ಲವೆಂದು ಅನುಭವಕ್ಕೆ ಬಂದೊಡನೆ, ಶಾಲೆಯು ಬೇಸರ ಬಂದಿತು. ತಪ್ಪಿಸಿ ಕೆಲದಿನ ಓಡಿ ಹೋದುದೂ ಆಯ್ತು. ಮರಳಿ ಬಂದಾಗ ಶಿಕ್ಷಕಿಯು ಅವಳ ಹೆಸರನ್ನು ಕಿತ್ತಿ ಬಿಟ್ಟಿದ್ದಳು.

ಆ ಹುಡುಗಿಯನ್ನು ಶಾಲೆಯಿಂದ ತಳ್ಳಿಬಿಟ್ಟು ಯಾವ ಲಾಭವನ್ನು ಸಾಧಿಸಿ ದಂತೆಯೂ ಆಗಲಿಲ್ಲ. ಶಾಲೆಯವರಾಗಲಿ ಶಿಕ್ಷಕನಾಗಲಿ ಈ ಹುಡುಗಿಯ ತೊಡ ಕನ್ನು ಬಿಡಿಸಲು ತಾವು ಅಸಮರ್ಥರೆಂದೇ ಸಾರಿದಂತಾಯಿತು. ವಿದ್ಯಾರ್ಥಿಯು ಶಾಲೆ ತಪ್ಪಿಸುತ್ತಲೇ ಅವನನ್ನು ತಳ್ಳಿ ಬಿಡುವುದು ಆತನನ್ನು (ಅವಳನ್ನು) ಸುಧಾರಿಸುವ ಮಾರ್ಗವಲ್ಲ. ಮನೆಯ ನೀರಸವಾತಾವರಣವು ಅವಳಿಗೆ ಮೊದಲೇ ಬೇಸರಿಕೆಯನ್ನುಂಟು ಮಾಡಿತ್ತು. ಶಾಲೆಯಲ್ಲಿಯ ಕಕ್ಕುಲತೆಯ ಕೊನೆಯ ಆಶಾ ತಂತುವೂ ಹರಿದು ಹೋದ ಬಳಿಕ ಅವಳು ನಿರಾಧಾರಿಯಾದಳು. ಮನೆ ಮತ್ತು ಶಾಲೆಗಳೆರಡರಿಂದ ದೂರ ಹೊರಟಳು. ಒಬ್ಬ ತರುಣ ಸೈನಿಕನು ಅವಳಲ್ಲಿ ಒಲವು ತೋರುತ್ತಿದ್ದನು. ಪ್ರೀತಿಗಾಗಿ ಹಸಿದ ಅವಳಿಗೆ ಈ ಲೋಕದಲ್ಲಿ ಅವನೊಂದೇ ಆಧಾರ ವೆನಿಸಿತು. ಕೆಲದಿನಗಳ ತರುವಾಯ ತಾಯಿಗೆ ಅವಳು ಒಂದು ಪತ್ರ ಕಳುಹಿದಳು. ತಾನು ದಿನದಲ್ಲಿ ಇದ್ದು, ಇನ್ನು ವಿಷಪಾನ ಮಾಡಬೇಕೆಂದಿರುವೆನೆಂದು ಬರೆದಿದ್ದಳು. ತನ್ನ ತಾಯಿ ತನ್ನನ್ನು ಬಿಡಲಾರಳೆಂದು ಅವಳಿಗೆ ಗೊತ್ತು. ಏಕೆಂದರೆ ಕರುಳಿಗೆ

ನಾಚುಗೆಯಿಲ್ಲ ; ಅಂಗಾಲಿಗೆ ಹೇಸಿಗೆಯಿಲ್ಲ. ವಿಷಪಾನದ ಸುದ್ದಿ ತಿಳಿದೊಡನೆ ಹೇಗಾದರೂ ಇರಲಿ, ಏನಾದರೂ ಆಗಲಿ ಮಗಳು ಬಂದರೆ ಸಾಕು, ಎಂದು ಮನೆಯವರು ಆತುರಪಡುವರೆಂದು ಅವಳ ನಂಬುಗೆಯಾಗಿತ್ತು. ತನ್ನನ್ನು ಸಂಕಟದಲ್ಲಿ ನೂಕಿಕೊಂಡು ಹೆರವರ ಹೃದಯ-ಮನಸ್ಸುಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳುವ-ಅವರ ಪ್ರೀತಿ, ಸೇವೆಗಳನ್ನು ಪಡೆವ ಹಂಚಿಕೆಯು ಈ ಪತ್ರ ಲೇಖನದ ಅಡಿಯಲ್ಲಿದೆ.

ಇಂತಹ ಎಲ್ಲ ಸಂದರ್ಭಗಳಲ್ಲಿ, ತೊಡಕು ಬಿಡಿಸಬೇಕೆಂಬುವವರಿಗೆ ವಿಶಾಲವಾದ ಸಹಾನುಭೂತಿಯು ಅವಶ್ಯಕ. ಲಿಂಗ ಭೇದ, ಕುಲಶೀಲ ಭೇದಗಳೆಲ್ಲವನ್ನೂ ಮೀರಿ, ಇನ್ನೊಬ್ಬರ ಸುಖದುಃಖಗಳನ್ನು ಅರಿತುಕೊಳ್ಳಬೇಕಾದರೆ ಸ-ಹೃದಯತೆ ಬೇಕು. ನೋವರೊಡನೆ ಅನುತಾಪಪಟ್ಟು ಅವರ ಅಂತಃಕರಣವನ್ನು ಗೆಲ್ಲುವ ಸಾಮರ್ಥ್ಯಬೇಕು. ನೊಂದು ಬೆಂದು ಮನೋವಿಕೃತಿಗೆ ಪಕ್ಕಾದವರನ್ನು ಒಲಿಸಿಕೊಂಡು, ಅವರಲ್ಲಿ ಧೈರ್ಯವು ಮೊಳೆತು ಬೆಳೆಯುವಂತೆ ಪ್ರಯತ್ನಪಡಬೇಕು. ಮತ್ತು ಇಂತಹ ಬೆಂದ ಜೀವಿಗಳು ಧೈರ್ಯದಿಂದ ತಲೆಯೆತ್ತಿ, ಯಾವುದೊಂದು ಉಪಯುಕ್ತವಾದ ಕೆಲಸದಲ್ಲಿ ತಮ್ಮ ಆಸಕ್ತಿಯನ್ನು ಬೆಳೆಸಿಕೊಳ್ಳುವಂತೆ ಅವರನ್ನು ಪ್ರೋತ್ಸಾಹಿಸಬೇಕು. ತೀವ್ರವಾದ ಕೀಳರಿಮೆಯಿಂದ ತಾವು ಹೀನರೆಂದು ನಂಬಿ, ದೈನ್ಯದಿಂದ ಕಂಗೆಟ್ಟು ವಂಚಕ, ಕಳ್ಳರಾಗಿ ಅಥವಾ ವ್ಯೈಗಳ್ಳರಾಗಿ ಬಾಳನ್ನು ಹಾಳು ಮಾಡಿಕೊಳ್ಳುತ್ತಿರುವ ಜೀವಿಗಳನ್ನು ಮೇಲೆತ್ತುವ ಶ್ರೇಷ್ಠವಾದ ಉಪಾಯವೆಂದರೆ ಇದುವೆ ಒಂದು. ●

# ೧೧ ಮದುವೆಯ ತೊಡಕು

ಇನ್ನೊಬ್ಬರ ಸುಖ-ದುಃಖಗಳನ್ನು ತನ್ನ ಸುಖದುಃಖಗಳೆಂದು ಆತ್ಮೀಯತೆಯಿಂದ ಅನುಭವಿಸಲಿಕ್ಕೆ (ಕೇವಲ ತರ್ಕದಿಂದ ಊಹಿಸಲಿಕ್ಕಲ್ಲ.) ಅಸಮರ್ಥರಾದವರು ಮದುವೆಯ ಉಸಾಬರಿಗೇ ಹೋಗಬಾರದು. ಅದರಂತೆ ಸಾಮಾಜಿಕ ಭಾವನೆಗಳ ಅಭಾವವಿದ್ದರೂ ಮದುವೆಯ ಮಾತೆತ್ತದಿರುವುದು ಲೇಸು. ಏಕೆಂದರೆ ಇಂತವರಿಗೆ ಮದುವೆಯು ದುಃಖದಾಯಕವಾದ ಒಂದು ತೊಡಕು ಆಗುವುದು ನಿಶ್ಚಿತ. ಕೇವಲ ಕಾಮೋಪಭೋಗವು ಮದುವೆಯ ಗುರಿಯಲ್ಲ. ಸಮಾಜಧಾರಣೆಗೆ ಕಾರಣ ವಾಗುವ ಕಾಮವು ಪಾಪವಲ್ಲ. ದಾಂಪತ್ಯ ಸುಖ ಮತ್ತು ಕುಟುಂಬ ಸಂವರ್ಧನೆ ಇವೆರಡರಲ್ಲಿ ಕಾಮತೃಪ್ತಿಯು ಸಾಮಾನ್ಯ ಸಮಾಧಾನವನ್ನು ಹೊಂದುವುದಕ್ಕೆ ಮದುವೆಯ ಮೊದಲು ಮನಸಿನ ಸಿದ್ಧತೆಯನ್ನು ಮಾಡಬೇಕು. ಮನಸಿಗೆ ಈ ಬಗೆಯ ಶಿಕ್ಷಣ ಸಂಸ್ಕಾರವು ಇಲ್ಲದಿದ್ದರೆ ಮದುವೆಯು ಸಮಾಜಕ್ಕೆ ಪೋಷಕ ವಾಗದೆ ಘಾತಕವಾಗುವುದು. ಮದುವೆಯ ತೊಡಕಿನಲ್ಲಿಯೂ ಮೂರು ವರುಷದ ಬುದ್ಧಿಯಲ್ಲಿ ನಮ್ಮಲ್ಲಿ ಬೇರೂರಿದ, ಹಿಂದಿನ ಬಾಳಮಾದರಿಯ ಕೈವಾಡವೇ ಕಂಡು ಬರುತ್ತದೆ. ಚಿಕ್ಕಂದಿನ ಆಶೆ ಆಕಾಂಕ್ಷೆ (ಆದರ್ಶ) ಗಳ ಪರಿಣಾಮವು ಪ್ರಾಯ ದಲ್ಲಿ ಮದುವೆ ಮಾತಿನ ಮೇಲೂ ಆಗಿದ್ದದು ಅನುಭವಕ್ಕೆ ಬರುತ್ತದೆ.

ನಮ್ಮ ನಲುಮೆಯ ನಲ್ಲೆಯನ್ನು ಪಡೆದೊಡನೆ ಸ್ವರ್ಗ ಸುಖವು ಸಿಕ್ಕುವುದೆಂದು ಗಾಳಿಗೋಪುರಗಳನ್ನು ಕಟ್ಟುವುದರಲ್ಲಿ ಹುರುಳಿಲ್ಲ. ಹೀಗೆ ಭಾವಿಸುವುದು ತೀರ ಮರುಳು. ದಾಂಪತ್ಯದ ದೇವಲೋಕದಲ್ಲಿ, ಪ್ರೇಮದ ಕಲ್ಪವೃಕ್ಷದ ನೆಳಲಿನಲ್ಲಿ ನಿಂತಕೂಡಲೇ ತನ್ನ ಎಲ್ಲ ಬಯಕೆ ಬೇಡಿಕೆಗಳು ಈಡೇರುವುವೆಂದು ತಿಳಿಯುವದು ತೀರ ತಿಳಿಗೇಡಿತನ. ವಿವಾಹದ ವೇದಿಕೆ, ನಂದನವನದ ಪ್ರವೇಶ ದ್ವಾರವಲ್ಲ. ಮದುವೆಯಾದ ಮೇಲೂ ಬಿಡಿಸಬೇಕಾದ ಹಲವು ತೊಡಕುಗಳು ಇವೆ. ನೀಗಿಸ ಬೇಕಾದ ಹೊಣೆಗಾರಿಕೆಗಳಿವೆ. ತನ್ನ ಮಟ್ಟಿಗೆ ತಾನೆಂಬುದನ್ನು ಬಿಟ್ಟು ಇನ್ನೊಂದು ಜೀವದೊಡಗೂಡಿ ಜೀವಾಳದ ಜೊತೆ ಬೆಳೆಸಿ ಸಹಧರ್ಮಚಾರಿಣಿಯ ಹಿತಮತಗಳನ್ನು ಎಣಿಸಿ, ನೆನಸಿ ಸಮಭಾವದಿಂದ ನಡೆಯಬೇಕಾಗುವದು. ಬಾಳಿನ ಹಾಡಿನ ಸರಳ ರಗಳೆಗೆ ದ್ವಿಪದಿಯ ಕಟ್ಟಿನಿಂದ ಒಂದು ರಸದ ಕಳೆಯೇರುತ್ತದೆ. ವ್ಯಕ್ತಿ ಸ್ವಾತಂತ್ರ್ಯದ ಏಕತಾರಿಯನ್ನು ಬದಿಗಿರಿಸಿ ದಾಂಪತ್ಯದ ದ್ವಂದ್ವಗೀತವನ್ನು ಎರಡು ಜೀವತಂತುಗಳ ಸಂವಾದದಿಂದ ನುಡಿಸಬೇಕಾಗುತ್ತದೆ.

## ಮದುವೆಯು ಅಡಿಗಲ್ಲು ಸಾಮಾಜಿಕತೆಯು

ಸಾಮಾಜಿಕ ಸಮಸ್ಯೆಗಳ ಸಾಮಾನ್ಯತೆಯೊಂದಿಗೆ ವಿವಾಹಬದ್ಧನಾಗಬೇಕೆಂಬವರಲ್ಲಿ ಇನ್ನೂ ಒಂದು ವಿಶೇಷ ಗುಣವು ಬೇಕು. ಒಲವಿನಲ್ಲಿ ಹಾಗೂ ಮದುವೆಯಲ್ಲಿ ಗಂಡು ಮತ್ತು ಹೆಣ್ಣಿನಲ್ಲಿ ಅತ್ಯಂತವಾದ ತಾದಾತ್ಮ್ಯವು ಇದ್ದಷ್ಟೂ ಸುಖವು ಹೆಚ್ಚು ಸಿಕ್ಕುತ್ತದೆ. ಒಬ್ಬರೊಬ್ಬರ ಹೃದಯವನ್ನರಿತು ಒಬ್ಬರು ಇನ್ನೊಬ್ಬರ ಕಣ್ಣಿಂದ ಕಾಣಲು ಕಲಿಯಬೇಕು. ತಾನು ಅವರಾಗಿ ವಿಚಾರಿಸಲಿಕ್ಕೆ ಬರಬೇಕು. ಈ ಶಕ್ತಿಯು ಇಲ್ಲದವರ ದಾಂಪತ್ಯ ಜೀವನವು ವಿರಸವಾಗುವದು ನಿಶ್ಚಿತ. ಅಂಥಲ್ಲಿ ಕೌಟುಂಬಿಕ ಸ್ವಾರಸ್ಯವೇ ವಿರಳ. ಚಿಕ್ಕಂದಿನಿಂದ ಸ್ವಪ್ರತಿಷ್ಠೆಯಲ್ಲಿ ಸ್ವಾರ್ಥ ನಿಷ್ಠೆಯಿಂದಲೇ ಬೆಳೆದವರು ಮದುವೆಯಾದೊಡನೆ ಒಮ್ಮೆಲೇ ತಮ್ಮ ಸ್ವಭಾವದ ರೀತಿಯನ್ನು ಬದಲಿಸಿ ಇನ್ನೊಬ್ಬರೊಡನೆ ಕೂಡಿ ಸಮಾನಭಾವದಿಂದ ನಡೆಯಲು ಸಮರ್ಥರಾಗಲಾರರು. ಬರೇ ಹರೆಯದವರಾದರು, ವಯಸ್ಸಿಗೆ ಬಂದರು; ಲೈಂಗಿಕ ಪ್ರವೃತ್ತಿಯು ಬಲಿತಿತು, ಎಂದು ಮದುವೆಯಾಗುವದು ತಪ್ಪು. ಹಸಿವೆಯ ಗಡಿಬಿಡಿಯಲ್ಲಿ ಆಹಾರವನ್ನು ಸುರಿಸದೆ ಇಡೀ ರೊಟ್ಟಿಯನ್ನು ಹೊಟ್ಟೆಯಲ್ಲಿ ತುರುಕಿಕೊಂಡಂತೆ ಮದುವೆಗೆ ಗಂಡುತನ ಅಥವಾ ಹೆಣ್ತನವು ಹಣ್ಣದರೆ ಸಾಲದು. ಇದರ ಸದುಪಯೋಗಕ್ಕೆ ಯೋಗ್ಯವಾದ ಶಿಕ್ಷಣ, ಸಂಸ್ಕಾರಗಳೂ ಬೇಕು. ದೈಹಿಕ ಸಿದ್ಧತೆಯಂತೆ ಹೃದಯ ಮನಸ್ಸುಗಳೂ ಹದ ಗೊಂಡವುಗಳಾಗಿರಬೇಕು. ಇಲ್ಲವಾದರ ಮದುವೆಯಾದ ಬಳಿಕ ರಿಕ್ಕಿನಲ್ಲಿ ಕಾಲು ಸಿಕ್ಕು ಒದ್ದಾಡುವ ಮಂಗನಂತೆ, ಮದುವೆಯಾದುದು ಮೂರ್ಖತನವಾಯ್ತೆಂದು ಮಿಡುಕಾಡಬೇಕಾದೀತು. ವಿವಾಹ, ಪ್ರೇಮಗಳ ಸಮಸ್ಯೆಯು ಆತನಿಗೆ ಬಗೆಹರಿಯದಂತಾಗಿ ಒದ್ದಾಡಬೇಕಾಗುವದು.

ಸಾಮಾಜಿಕ ಆಸಕ್ತಿಯು, ಸಾವಕಾಶವಾಗಿ ವಿಕಾಸವಾಗತಕ್ಕ ಒಂದು ಗುಣ. ಆದುದರಿಂದ ಭಿನ್ನ ಲಿಂಗದ ವ್ಯಕ್ತಿಯೊಡನೆ ಕೂಡಿ ಬಾಳಲು ಬೇಕಾದ ಒಗೆತನದ ಸಿದ್ಧತೆಯು ವ್ಯಕ್ತಿಯ ಸ್ವಭಾವದಲ್ಲಿ ಉಂಟಾಗಿದೆಯೋ ಇಲ್ಲವೋ ಎಂಬುದನ್ನು ಸಹಜವಾಗಿ ಗುರುತಿಸಬಹುದು. ಪ್ರಯೋಜನಕಾರಿಯಾದ ಕೆಲಸಗಳನ್ನು ಕೈಗೊಂಡು ಮಾಡುವವರು ಧೈರ್ಯವುಳ್ಳವರೂ ಆತ್ಮವಿಶ್ವಾಸವುಳ್ಳವರೂ ಆಗಿರುತ್ತಾರೆ. ಅವರಿಗೆ ಸಂಗಡಿಗರಿರುತ್ತಾರೆ. ಸಹಕಾರಿಗಳಿರುತ್ತಾರೆ. ನೆರೆಹೊರೆಯವರೊಂದಿಗೆ ಒಡ ನಾಡಿ ಹೆರವರೊಡನೆ ಕೂಡಿ ಬಾಳುತ್ತಾರೆ. ಹೀಗಿಲ್ಲದವರ ಬಗ್ಗೆ ನಾವು ಸಂಶಯ ಪಟ್ಟರೆ ತಪ್ಪಿಲ್ಲ. ಅಂಥವರು ಪ್ರೇಮಕ್ಕೆ ಅರ್ಹರಲ್ಲ. ಮದುವೆಗೆ ತಕ್ಕವರಲ್ಲ. ತಮ್ಮ ವ್ಯವಸಾಯ ಉದ್ಯೋಗಗಳಲ್ಲಿ ಚೆನ್ನಾಗಿ ಮೇಲ್ಮೆಯನ್ನು ಪಡೆದು ಕೈತುಂಬ

ಗಳಿಸಲು ಸಮರ್ಥರಾದೊಡನೆ ಅವರು ಮದುವೆಗೆ ತಕ್ಕವರಾದರೆಂದು ಸಾಮಾನ್ಯ ವಾಗಿ ಎಲ್ಲರ ಭಾವನೆ. ಹಣ ಗಳಿಸುವ ಸಾಮರ್ಥ್ಯವು ಆ ಗಳಿಸಾಳಿಯ ಹೃದಯವು ಎಂತಹದು, ಎಂಬುದರ ನಿದರ್ಶಕವಲ್ಲ. ಆತನ ಉದ್ಯಮಶೀಲತೆ ಮೊದಲಾದ ಗುಣಗಳನ್ನು ಅದು ವ್ಯಕ್ತಪಡಿಸಬಲ್ಲದು. ಆದುದರಿಂದ ಗಳಿಸಾಳಿಯಾಗಿದ್ದರೆ ಕೈ ಹಿಡಿದವರಿಗೆ ಹೊಟ್ಟೆಯ ಚಿಂತೆಯಿಲ್ಲ. ಎಂದಿಷ್ಟೇ ಹೇಳಬಹುದು. ಇದು ಮದುವೆ ಯಾಗತಕ್ಕವರಲ್ಲಿ ಇರಬೇಕಾದ ಒಂದು ಗುಣವೆಂಬುದು ನಿಜ.

ಕೈ ಹಿಡಿಯುತಕ್ಕವರನ್ನು ತನ್ನ ಸಮಾನಾರೆಂದು ಎಣಿಸಿ, ಹಾಗೆ ನಡೆದುಕೊಳ್ಳಲು ತತ್ಪರರಾಗಿದ್ದವರೇ ನಿಜವಾಗಿಯೂ ಪ್ರೇಮಕ್ಕೆ ಪಾತ್ರರು, ಮದುವೆಗೆ ಯೋಗ್ಯರು. ಈ ಮೂಲಭೂತವಾದ ಪರಸ್ಪರ ಸಮಾನಭಾವದ ವೃತ್ತಿಯೇ ಮಹತ್ವದ ಸಂಗತಿಯು. ದಾಂಪತ್ಯದಲ್ಲಿ ಕುರುಡು ಪ್ರೇಮ ಒಂದೇ ಬಾಳಿನ ಎಲ್ಲ ತೊಡಕು ಗಳನ್ನು ಸರಿಪಡಿಸಲಾರದು. ಏಕೆಂದರೆ ಪ್ರೇಮದಲ್ಲಿಯೂ ಹಲವು ತರತರದ ರೀತಿಗಳಿವೆ. ಪರಸ್ಪರ ಪೂರಕವಾದ, ತಾರತಮ್ಯ ರಹಿತವಾದ ಆಕರ್ಷಣವೇ ನಿಜವಾದ ಪ್ರೇಮ. ಉಳಿದುದು ಪ್ರೇಮದ ಭ್ರಮ; ಸಮನಾದ ಭೂಮಿಕೆಯ ಮೇಲೆ ನೆಲೆಗೊಂಡ ಪ್ರೇಮವೇ ವಿವಾಹದ ಯಶಸ್ವಿತೆಗೆ ಕಾರಣವಾಗುವುದು. 'ಒಡಲೆರಡು ಜೀವ ಒಂದೇ' ಎಂಬ ಪ್ರೇಮಿಗಳ ಮದುವೆಯಾದ ಬಳಿಕ ಹೆಣ್ಣು ಗಂಡನ್ನು ಅಥವಾ ಗಂಡು ಹೆಣ್ಣನ್ನು ತನ್ನ ಅಂಕೆಯಲ್ಲಿರಿಸಿ, ತಾನೇ ಸರ್ವಾಧಿ ಕಾರಿಯಾಗಿ ಆಳಬೇಕೆಂದು ಹಂಬಲಿಸಿದರೆ ಆ ಸಂಸಾರವು ದುಃಖದ ನೆಲೆವೀಡಾ ಗುವುದು. ಇಂಥ ಸ್ವಾರ್ಥದಿಂದ ವಿವಾಹದ ಸಿದ್ಧತೆ ನಡಿಸುವುದು ಯೋಗ್ಯವಾದ ರೀತಿಯಲ್ಲ. ವಿವಾಹವೆಂದರೆ ವಿಜಯಕ್ಕಾಗಿ ಒಡ್ಡಿದ ವ್ಯೂಹವೆಂದು ಕಲ್ಪಿಸಿದವರಿಗೆ ಅವರ ವಿಚಾರದ ವಿಫಲತೆಯು ಮನವರಿಕೆಯಾಗಲಿಕ್ಕೆ ಬಹಳ ದಿನಗಳು ಹತ್ತುವದಿಲ್ಲ. ಮನೆಯು ಸೋಲು ಗೆಲುವಿನ ಕಾಳಗದ ಕಣವಲ್ಲ. ಕುಟುಂಬದಲ್ಲಿ ಗಂಡಹೆಂಡಿರು ಸೋಲೂ ಗೆಲುವಿನ ಹಂಬಲವಿಟ್ಟು ನಡೆಯುವುದರಿಂದ ಕೌಟುಂಬಿಕ ಸ್ವಾಸ್ಥ್ಯವು ನಾಶವಾಗುವುದು. ತಾವು ಇನ್ನೊಬ್ಬರಾಗಿ ಒಂದು ಮನದವರಾಗಿ ಅನ್ಯೋನ್ಯ ಆತ್ಮೀಯತೆಯ ಸಹಕಾರದಿಂದ ನಡೆದು ಬಾಳಿನ ತೊಡಕುಗಳನ್ನು ಬಿಡಿಸಿ ಕೊಳ್ಳಬೇಕು.

## ಮನವನ್ನು ಸೆಳೆದ ಮನದನ್ನಳು(ನು)

ಮಗುವಾಗಿ ಬೆಳೆಯುತ್ತಿದ್ದಾಗಿನಿಂದಲೆ ಮದುವೆಯ ಪೂರ್ವಸಿದ್ಧತೆಯು ನಡೆದಿರು ತ್ತದೆ. ಹೆಣ್ಣು-ಗಂಡಿನ ಆಕರ್ಷಣದಲ್ಲಿ ಸಾಮಾಜಿಕತೆಯ ಶಿಕ್ಷಣವೂ ಅಡಕವಾಗಿದೆ;

ಸಮಾಜದಿಂದ ಸಿಡಿದು ದೂರ ಹೋಗದೆ, ಅವರೊಡನೆ ಸಹಕಾರದಿಂದ ನಡೆಯ ಬೇಕೆಂಬ ಸಂಸ್ಕಾರವು ಬುದ್ಧಿಗೆ ದೊರೆಯುತ್ತದೆ. ತರಲರು ತಾರುಣ್ಯದಲ್ಲಿ ಅಡಿ ಯಿಡುವ ಹೊತ್ತಿಗೆ, ತಾವು ಎಂತಹರ ಕೈಹಿಡಿದರೆ ಉತ್ತಮ, ಎಂಬುದನ್ನು ಸ್ಥೂಲವಾಗಿ ನಿರ್ಧರಿಸಿಕೊಳ್ಳುವುದಕ್ಕೆ ಆರಂಭಿಸಿರುತ್ತಾರೆ. ಗಂಡು ತನ್ನ ಮನ ದನ್ನೆಯನ್ನೂ ಹೆಣ್ಣು. ತನ್ನ ಮನದನ್ನನನ್ನೂ ಎದೆಯಲ್ಲಿ ರೂಪಿಸಿಕೊಂಡಿರುತ್ತಾರೆ. ಗಂಡು ತನ್ನ ಮನದಂತೆ ಹೆಣ್ಣನ್ನು ಚಿತ್ರಿಸಿಕೊಳ್ಳುವುದೆಂದರೇನು ? ಸಾಮಾನ್ಯ ವಾಗಿ ತನ್ನ ತಾಯಿಯಂತಹವಳನ್ನೇ ಆತನು ಆರಿಸುವನು. ತಾಯಿ ಮಗನಲ್ಲಿ ಎಣ್ಣೆ-ಸೀಗೆಯಷ್ಟು ಹಿತವಿದ್ದರೆ, ಅವನು ತಾಯಿಗೆ ತೀರ ವಿಪರೀತವಾಗಿರುವ ಹುಡುಗಿಯನ್ನೇ ಹುಡುಕುವನು. ಎಷ್ಟೋಸಾರಿ ತಾಯಿಯಂತಹಳ ಆಯ್ಕೆಯಲ್ಲಿ ಕಣ್ಣು, ಮೂಗು, ಕೂದಲಿನ ಹೋಲಿಕೆಯನ್ನೂ ಕೂಡ ಕಾಣಬಹುದು.

ತಾಯಿಯ ಅಧಿಕಾರಕ್ಕೆ ಸಂಪೂರ್ಣ ಒಳಪಟ್ಟ ಹುಡುಗನಾಗಿದ್ದರೆ, ಆತನಿಗೆ ತನ್ನ ಇಚ್ಛೆ ಆಕಾಂಕ್ಷೆಗಳನ್ನು ಹತ್ತಿಕ್ಕಡಬೇಕಾಗುತ್ತಿದ್ದರೆ, ಪ್ರೇಮ ಸಂಬಂಧವನ್ನು ಬೆಳಿಸುವ ಸಾಹಸವು ಅವನಿಂದ ಆಗಲಿಕ್ಕಿಲ್ಲ; ಮದುವೆಯ ಮಾತಿನಲ್ಲಿ ಸ್ವಾತಂತ್ರ್ಯ ವಹಿಸಲಿಕ್ಕಿಲ್ಲ. 'ತಮ್ಮ ಚರಣಾರವಿಂದದ ದಾಸಿ' ಎಂದು ಸ್ವತ್ವವಿಲ್ಲದೆ ಇರಲು ಒಪ್ಪುವ ಆತ್ಮಶಕ್ತಿಯಿಲ್ಲದ, ಕೈಗೊಂಬೆಯನ್ನೆ ಒಂದು ಮದುವೆಯಾಗುವನು. ಕಾದಾಡುವ ಸ್ವಭಾವದವನಾಗಿದ್ದರೆ ಮದುವೆಯಾದ ಬಳಿಕ ಹೆಂಡತಿಯೊಡನೆಯೂ ಹೋರಾಡುವನು, ಅವಳನ್ನು ತನ್ನ ಮುಷ್ಟಿಯಲ್ಲಿ ಬಿಗಿದಿಡಲು ಹೆಣಗುವನು.

ತೀವ್ರವಾದ ಕೀಳರಿಮೆಯ ಗಂಡನು ತನ್ನ ಮದುವೆಯ ವಿಚಾರದಲ್ಲೂ ಹವಗೇಡಿ ಯಾಗುವನು. ಮನಸಿನಿಂದ ದುರ್ಬಲನಾಗಿರುವುದರಿಂದ ಈತನು ಯಾವಾಗಲೂ ಹೆರವರ ಬೆಂಬಲವನ್ನು ಹಾರೈಸುತ್ತಿರುತ್ತಾನೆ. ಇಂಥ ಮಾದರಿಯವರು ಹೆಚ್ಚಾಗಿ ತಾಯಿಯಂಥ ಹೆಂಡತಿಯನ್ನು, ತಾಯಿಯಂತೆ ಮುದ್ದು ಮಾಡುವವಳನ್ನು ಹುಡುಕುತ್ತಾರೆ. ಇಲ್ಲವೇ ಒಮ್ಮೊಮ್ಮೆ ತಮ್ಮ ಮಿಕ್ಕ ಬಾಳಿನಲ್ಲಿಯ ಕೀಳ್ತನವ ನ್ಯೂನತೆಯನ್ನು ತುಂಬಿಕೊಳ್ಳಲೆಂದು ಮನೆಯಲ್ಲಿ ಹೆಂಡತಿಯೊಡನೆ ಹೆಮ್ಮೆಯಿಂದ ಇರಬಹುದು, ಅಬ್ಬರವನ್ನು ತೋರಬಹುದು. ಒಮ್ಮೊಮ್ಮೆ ಜಗಳಗಂಟ ತುಂಟ ಹುಡುಗಿಯನ್ನೇ ವರಿಸಿ ಹೋರಾಡಿ ಅವಳನ್ನು ಹಣ್ಣಿಗೆ ತಂದ ಹೆಮ್ಮೆಯಿಂದ ಜನರಲ್ಲಿ ಮಿಗಿಲೆನಿಸಿಕೊಳ್ಳಲು ಹವಣಿಸಬಹುದು.

ಆದರೆ ಒಬ್ಬರು ಇನ್ನೊಬ್ಬರನ್ನು ಗೆದ್ದು ತಮ್ಮ ವರ್ಚಸ್ಸಿನ ಪಂಜರದಲ್ಲಿ ಇರಿಸ ಬೇಕೆಂಬ ಈ ಬಗೆಯ ವರ್ತನದಿಂದ ಗಂಡಾಗಲೀ, ಹೆಣ್ಣಾಗಲೀ ದಾಂಪತ್ಯದ

ನಿಜವಾದ ಸುಖವನ್ನು ಎಂದೂ ಹೊಂದರು. ಗಂಡಹೆಂಡಿರ ಸರಸವೆಲ್ಲ ವಿರಸವಾಗಿ ಬಾಳನ್ನು ಕಲುಷಿತ ಮಾಡುವ ನಿರಾಶೆಯೊಂದೇ ಪಾಲಿಗೆ ಬರುತ್ತದೆ. ಕಚೇರಿಯಲ್ಲಿ ಮೇಲಧಿಕಾರಿಯಿಂದ ಬೈಸಿಕೊಂಡು ಬಂದು, ಮನೆಯಲ್ಲಿ ಏನಾದರೂ ನೆವದಿಂದ ಹೆಂಡತಿಯನ್ನು ಒದ್ದು ತಮ್ಮ ಶ್ರೇಷ್ಠತೆಯನ್ನು ಪ್ರಸ್ಥಾಪಿಸುವ ಗಂಡರು ಉಂಟು. ಅರ್ಧಾಂಗಿಯ ಮುಂದೆ ಮಗುವಿನಂತೆ ವರ್ತಿಸಿ ಅವಳಿಂದ ಅಕ್ಕರೆ ಮಾಡಿಸಿ ಕೊಳ್ಳುವುದಾಗಲಿ, ಅವಳನ್ನು ಹೆದರಿಸಿ, ಬೈದು, ಬಡೆದು ಅಥವಾ ತನ್ನ ಪೌರುಷದ ಸುಳ್ಳು ಕತೆಗಳನ್ನು ಹೇಳಿ ಪ್ರತಿಷ್ಠಿತನೆಂದು ಮೆರೆಯುವುದಾಗಲಿ, ಇವೆಲ್ಲವೂ ನಿಜವಾಗಿ ನಗೆಗೀಡು, ಶುದ್ಧ ತಿಳಿಗೇಡಿತನ ಆದರೂ ಇಂಥ ದುರ್ಘಟನೆ ಗಳೇ ಹೆಚ್ಚು. ದಾಂಪತ್ಯ ಜೀವನದ ಉದಾಹರಣೆಗಳನ್ನು ಲಕ್ಷಗೊಟ್ಟು ನಿರೀಕ್ಷಿ ಸಿದರೆ, ಹಲವು ವ್ಯಕ್ತಿಗಳು ಹುಡುಕಿಕೊಳ್ಳುವ ಸಹಚರರು, ಅವರ ಕೇವಲ ಸೂತ್ರದ ಬೊಂಬೆಗಳಾಗಿರುತ್ತಾರೆ. ಇದು ಗಂಡು ಅಥವಾ ಹೆಣ್ತನದ ದುರುಪ ಯೋಗವು. ದಾಂಪತ್ಯದಲ್ಲಿ ಒಬ್ಬರು ಗೆಲವುಗಾರರಾಗಲು ಹೆಣಗಿದರೆ ಇನ್ನೊಬ್ಬರು ಸೋಲುಗಾರರಾಗಿರಲು ಒಪ್ಪುವರೇ ? ಅವರೂ ಎದುರಾಳಿಯಾಗಿ, ಗೆಲ್ಲಲು ಹವಣಿಸುವರು. ಇದರ ಪರಿಣಾಮವಾಗಿ ಪ್ರಣಯದ ಪ್ರಳಯವೆಸಗಿ ಬಾಳುವುದೇ ಅಶಕ್ಯವಾಗುವದು. ಪತಿಪತ್ನಿಯರ ಆಯ್ಕೆಯಲ್ಲಿ ಕೀಳರಿಮೆ ಅಥವಾ ಹೆಗ್ಗರಿಮೆಯ ಹಲವು, ರುಚಿವೈಚಿತ್ರ್ಯಗಳು ಕಾಣಿಸಿಕೊಳ್ಳುವವು. ಕೆಲವು ವ್ಯಕ್ತಿಗಳು ದುರ್ಬಲರನ್ನೂ, ಬೇನೆಯುಳ್ಳವರನ್ನೂ ಅಥವಾ ವಯಸ್ಕರನ್ನೂ ಸಹಚರಿ ಅಥವಾ ಸಹಚರನೆಂದು ಆರಿಸುವರು. ಏಕೆಂದರೆ ಅವರು ಸಂಪೂರ್ಣ ತಮ್ಮ ಅಂಕೆಯಲ್ಲಿರಬಹುದೆಂಬ ಆಶೆ. ಮದುವೆಯಾದವರನ್ನೂ ಆರಿಸುವರು. ಕೆಲವೊಮ್ಮೆ ಇಬ್ಬರು ಸ್ತ್ರೀಯರನ್ನಾಗಲೀ ಇಬ್ಬರು ಪುರುಷರನ್ನಾಗಲೀ ಒಂದು ವ್ಯಕ್ತಿ ಒಮ್ಮೆಲೇ ಪ್ರೀತಿಸುತ್ತ ಪೇಚಾಡುವದುಂಟು. ಇದಕ್ಕೆಲ್ಲ ಪುಕ್ಕತನವೇ ಕಾರಣವಾಗಿದೆ. ನಿಜವಾದ ಸಮಸ್ಯೆಯನ್ನು ತಪ್ಪಿಸಿಕೊಳ್ಳುವ, ಏಕನಿಷ್ಠತೆಯನ್ನು ನಿರ್ವಹಿಸಲು ಬೇಕಾದ ನಿಷ್ಠುರ ನಿಯಂತ್ರಣವನ್ನು ಒಪ್ಪದಿರುವ, ವಿಕೃತ ಮನೋವೃತ್ತಿಯೇ ಇವೆಲ್ಲ ವೈಚಿತ್ರ್ಯಗಳಿಗೆ ಕಾರಣವಾಗಿರುತ್ತದೆ. ಕೆಲವರು ಸಂದೇಹ ಸ್ವಭಾವದವ ರಾಗಿ ಕೀಳರಿಮೆ ಮೂಲಕ ಮದುವೆಯನ್ನು ಮಾಡಿಕೊಳ್ಳಲು ಎದೆಯಿಲ್ಲದೆ ಅದನ್ನು ಮುಂದೆ ನೂಕುತ್ತ ಕಾಲ ಕಳೆವರು. ಇಲ್ಲವೆ ಮಾತು ಆಗಿದ್ದರೂ ಮದುವೆ ಯಾಗದೆ ಹಾಗೇ ಉಳಿಯುವರು.

ಬಾಲ್ಯದಲ್ಲಿ ಲಲ್ಲೆಗೆಯ್ದು ಹದಗೆಟ್ಟ ಮಕ್ಕಳು ಮದುವೆಯಲ್ಲೂ ಸುಮ್ಮನೆ ತೊಡಕುಗಳನ್ನು ಹೆಚ್ಚಿಸಿಕೊಳ್ಳುತ್ತಾರೆ. ದಾಂಪತ್ಯದ ಜೀವನದ ಜೊತೆಗಾರ ರಿಂದಲೂ ಅದೇ ಬಗೆಯಾಗಿ ಲಾಲನೆ ಪಾಲನೆಯನ್ನು ಬಯಸುತ್ತಾರೆ. ಹೊಸ

ಹರೆಯದ ಪ್ರಣಯದ ಚಿನ್ನಾಟದಲ್ಲಿ, ಇಲ್ಲವೇ ಮದುವೆಯಾದ ಮೊದಲ ವರ್ಷದ ಹರ್ಷ–ಸಂಭ್ರಮದಲ್ಲಿ ಇದು ಕೆಲಮಟ್ಟಿಗೆ ಶಕ್ಯವಿರಬಹುದು. ಆದರೆ ಮುಂದೂ ಹೀಗೆಯೇ ತಮ್ಮನ್ನು ಮುಂಗೈಯ ಅರಗಿಳಿಯಂತೆ ಆಡಿಸಬೇಕು; ಕುಣಿಸಬೇಕು; ಮುದ್ದಿಸಬೇಕೆಂದು ಆಶೆಪಟ್ಟರೆ ಈ ಪ್ರವೃತ್ತಿಯಿಂದ ಬಾಳಿನಲ್ಲಿ ಪತಿಪತ್ನಿಗಳಿರ್ವರೂ ತೊಂದರೆಗೆ ಈಡಾಗಬೇಕಾಗುವದು. ಇಬ್ಬರೂ ಒಬ್ಬರೊಬ್ಬರಿಂದ ಹೊಗಳಿಕೆ, ಮೆಚ್ಚಿಕೆ ಮುದ್ದಾಟವನ್ನು ಬಯಸುವರು. ಒಬ್ಬರೂ ಇನ್ನೊಬ್ಬರಿಗೆ ಮೊದಲು ಒಲವು ತೋರಿಸರು. ಒಬ್ಬರಿಗೊಬ್ಬರು ಎದುರು ಬದುರು ನಿಂತು ಒಲವಿಗಾಗಿ ನವೆಯುತ್ತಿದ್ದರೂ ಅವನು ಬರಲಿ ಎಂದು ಇವಳೂ, ಅವಳು ಬರಲೆಂದು ಇವನೂ ಕಾದು ಕಾದು ಕೊರಗುವರು ! ತನ್ನಲ್ಲಿ ಪ್ರೇಮವೇ ಇಲ್ಲವೆಂದು ಇಬ್ಬರೂ ಗೊಣಗುವರು ! ಇವರಲ್ಲಿ ಯಾರು ತಪ್ಪುಗಾರರೆಂದು ಹೇಳುವುದೇ ಕಷ್ಟ !

## ಒಗೆತನದ ಹದಗೇಡು

ತನ್ನ ನಲ್ಲನು ತನ್ನನ್ನು ಮೆಚ್ಚಿ ಅಕ್ಕರೆಯ ಸರಸ ಸಲ್ಲಾಪಗಳನ್ನು ಮಾಡುವುದಿಲ್ಲ. ತನ್ನೊಡನೆ ಹೆಚ್ಚು ಹೊತ್ತು ಕಳೆಯುವುದಿಲ್ಲವೆಂದು ಹೆಣ್ಣಿನ ಕಲ್ಪನೆಯಾದರೆ, ಅಥವಾ ತನ್ನ ಮನದನ್ನೆಯು ತನ್ನ ಒನಪು ಒಯ್ಯಾರಗಳಿಂದ, ಆದರ–ಉಪಚಾರದ ನಡೆನುಡಿಗಳಿಂದ ತನ್ನನ್ನು ಹಿಗ್ಗಿಸುವುದಿಲ್ಲ. ತನ್ನಿಂದ ಯಾವಾಗಲೂ ದೂರಿರ ಬಯಸುವಳು. ಎಂದು ಗಂಡು ಭಾವಿಸಿದರೆ ಅದುವೆ ಒಗೆತನದ ಹದಗೇಡು. ಬಾಳುವೆಯ ಅಂದಗೇಡು. ಈ ಬಗೆಯ ಭಾವನೆಯು ಯಾರ ಒಬ್ಬರ ಮನದಲ್ಲಿ ಸುಳಿದರೂ, ಅದು ಸಂಸಾರದ ಕೆನೆವಾಲಿನಲ್ಲಿ ಹುಳಿಬಿದ್ದಂತೆ. ಅದು ಒಂದೇ ಹನಿಯಾಗಿದ್ದರೂ ಕೊಡ ಹಾಲನ್ನು ಕೆಡಿಸಬಲ್ಲುದು. ಇಂಥ ಹದಗೆಟ್ಟ ಬಾಳಿನ ಒಂದು ಲಕ್ಷಣವೆಂದರೆ ಆ ಮನೆಯಲ್ಲಿ ಮುಗುಳು ನಗೆಯಸುರುಗುಂಪಿನ ಸುಳವೂ ಸೋಂಕದು. ಸಹಜ ವಿನೋದ, ಸಹಜ ಸ್ವಚ್ಛಂದದ ಮಾತು ಕತೆಗಳೆಲ್ಲ ಕುಗ್ಗಿ ಮುಗ್ಗಿದುದನ್ನು ಕಾಣಬಹುದು. ಪತಿಪತ್ನಿಯರ ಪರಸ್ಪರ ವರ್ತನದಲ್ಲಿ ವ್ಯತ್ಯಾಸವಾಗುವುದು. ನ್ಯೂನತೆಯ ಭಾವನೆ ಬಲಿತು ಕನಿಷ್ಟತೆಯ ಕೊರಗು ಬೆಳೆದು ಅಂಥ ತೊಡಕಿನಿಂದ ಬಿಡುಗಡೆಯನ್ನು ಹುಡುಕಲು ಪ್ರತಿಯೊಬ್ಬರೂ ಹವಣಿಸುವರು. ದಂಪತಿಗಳಲ್ಲಿ ಇಂಥ ಭಾವನೆ ವಿಶೇಷವಾಗಿ ಕೆದಕು, ತೀರ ಅಸಹಾಯತೆಯು ಎನಿಸತೊಡಗಿದರೆ ಒಬ್ಬರು ಇನ್ನೊಬ್ಬರಿಗೆ ತೊಂದರೆ ಕೊಟ್ಟು ತಮ್ಮ ಶಕ್ತಿಯನ್ನು ತೋರಲು, ತಮ್ಮ ಅವಶ್ಯಕತೆಯನ್ನು ಸಿದ್ಧಪಡಿಸಲು ಬಯಸುವರು. ಇದರ ಮುಂದಿನ ಮೆಟ್ಟಲು ಎಂದರೆ, ಪರಸ್ಪರರಿಗೆ ದ್ರೋಹ ಮಾಡುವುದು; ತನ್ನ

ಮನವನ್ನು ಸೆಳೆವ ಅಥವಾ ಸೆಳೆದಂತೆ ನಟಿಸಿದ ಇನ್ನೊಬ್ಬರನ್ನು ಪ್ರೀತಿಸ ಲಾರಂಭಿಸುವುದು. ಇಂಥ ಅನ್ಯಾಯಸಕ್ತಿಯನ್ನು ಸಮರ್ಥಿಸಲಿಕ್ಕೆ ದಾಂಪತ್ಯ ದ್ರೋಹಿ ಗಳು ಭೃಂಗವೃತ್ತಿ, ಸ್ವಚ್ಛಂದ ಪ್ರೇಮದ ತತ್ವಜ್ಞಾನವನ್ನು ಮುಂದೊಡ್ಡುವರು ! ತನ್ನನ್ನು ನೀನು ಪ್ರೀತಿಸದಿದ್ದರೂ ಇನ್ನು ಬೇರೆಯವರು ಮೆಚ್ಚಿ ಮುದ್ದಾಡು ವವರಿದ್ದಾರೆ ಎಂದು ತೋರಿಸಿಕೊಂಬ ಗುಪ್ತವಾದ ವರಿಷ್ಠತೆಯ ಭಾವನೆಯು ಈ ಸ್ವೈರಾಚಾರದಲ್ಲಿ ಹುದುಗಿರುತ್ತದೆ. ಇಂಥವರಿಗೆ ಮಕ್ಕಳಾಗಿದ್ದರೆ ತೊಡಕು ಇನ್ನೂ ಹೆಚ್ಚುತ್ತದೆ. ಮಕ್ಕಳು ಉಭಯತರ ಅನುರಾಗವನ್ನು ದೃಢಪಡಿಸುವುದಕ್ಕೆ ಕಾರಣವಾಗುವ ಬದಲು ಅವರ ಪ್ರೇಮದ ನಲಿದಾಟಕ್ಕೆ, ಅನಿರ್ಬಂಧ ಕಾಮೋ ಪಭೋಗಕ್ಕೆ ಅಡ್ಡ ಬಂದಂತೆ ಎನಿಸುತ್ತಾರೆ. ನಿರಾಶೆಗೆ ಮೂಲವಾಗುತ್ತಾರೆ. ಯಾವಾಗಲೂ ತನ್ನನ್ನೇ ಹೊಗಳಿಹಿಂಬಾಲಿಸುತ್ತಿದ್ದ ಗಂಡನು ಇನ್ನು ತನ್ನ ಮಗು ವಿನ ಬಾಲಲೀಲೆಗಳಲ್ಲಿಯೇ ಮೈಮರೆತು ತನ್ನನ್ನು ಉಪೇಕ್ಷಿಸಿದನೆಂದು ಹೆಂಡತಿಯು ಕಳವಳಪಡುತ್ತಾಳೆ. ಹೆಂಡತಿಯ ಲಲ್ಲೆಗೆ, ಸಹವಾಸಕ್ಕೆ ಸವಿಗಲಿತ ಗಂಡನು, ತನ್ನ ಮೇಲಿನ ಮಡದಿಯ ಆಸಕ್ತಿಯನ್ನು ಅಪಹರಿಸಲು ಈ ಹೊಸ ಕುನ್ನಿ ಹುಟ್ಟಿದೆ ಯೆಂಬ ವ್ಯಕ್ತಾವ್ಯಕ್ತ ಅಸೂಯೆಯಿಂದ ಮಗುವಿನ ಕಡೆಗೆ ಕಿಸುಗಣ್ಣಿಂದ ನೋಡಹತ್ತುವನು. ತಳಮಳಿಸುವನು. ಹೀಗೆ ಈರ್ವರ ಮೊದಲೇ ನಿರಾಶೆ, ಸಂದೇಹಗಳಿಂದ ಒಳಗೊಳಗೇ ಹೊತ್ತುತ್ತಲಿದ್ದ ಕಿಡಿಗೆ ಹುಲ್ಲು ಹಾಕಿದಂತೆ ಆಗುತ್ತದೆ. ಇದರಿಂದ ಸಂಸಾರಸೌಖ್ಯವೇ ಸುಟ್ಟು ಬೂದಿಯಾಗದೆ ಇರುವುದಿಲ್ಲ. ಸಂಶಯದ ವಿಷವು ತೀವ್ರ ಘಾತುಕವಾದದ್ದು. ಕೆಲವರು ಮಗುವಿನ ಮಟ್ಟಿಗೆ ತಮ್ಮ ತಂದೆತಾಯಿತನದ ಕರ್ತವ್ಯವನ್ನು ಸರಿಯಾಗಿ ತೂಗಿಸಿಕೊಂಡು ಸಾಗಿದ್ದರೂ ಗಂಡ–ಹೆಂಡರಿರ್ವರೂ ತಮ್ಮ ಪರಸ್ಪರ ಪ್ರೇಮವು ಕುಗ್ಗತೊಡಗಿದೆಯೆಂದು ಭಾವಿಸಿ ಬಳಲಹತ್ತುವರು. ಇಂಥ ಅಂಜಿದ ಸಂಜಿನ ನೋಟಕ್ಕೆ ಇಬ್ಬರಿಗೂ ಪರಸ್ಪರರ ಪ್ರತಿಯೊಂದು ನಡೆನುಡಿ, ಚಟುವಟಿಕೆಯಲ್ಲಿಯೂ ಪ್ರೀತಿಯ ಹ್ರಾಸವು ಕಾಣುವದು ಅಶಕ್ಯವಲ್ಲ. ಪ್ರೀತಿಯು ಕಡಿಮೆಯಾಗುವುದೆಂದು ಹೆದರಿ ಒಬ್ಬರಿ ಗೊಬ್ಬರು ಒತ್ತಾಯದಿಂದ ಹೇಗೋ ಅಂಟಿಕೊಂಡಿರಲು ಇಬ್ಬರೂ ಹವಣಿಸುವರು. ಒತ್ತಾಯ ಒಡನಾಟದಲ್ಲಿ ಹಿಗ್ಗಿಲ್ಲ. ಒಡನಾಡಿಗಳಿಗೆ 'ಅಂದೊಮ್ಮೆ ಏನೊಂದು ನಗೆಯಿತ್ತು' ಎಂಬ ನೆನಹು ಬಾಧಿಸುವುದು. ಒಬ್ಬರಿಂದೊಬ್ಬರು ಬಿಡುಗಡೆ ಪಡೆಯಲು, ದೂರವಾಗಲು ಒದ್ದಾಡುವರು. ಇದರಿಂದ ಅನ್ಯೋನ್ಯರ ಅಸಮಾ ಧಾನ, ಸಂದೇಹಗಳು ಇನ್ನಷ್ಟು ಬೆಳೆಯುವವು.

ಮದುವೆಯ ವಿಚಾರದಲ್ಲಿ ಹಲವು ಬಗೆಯ ತಪ್ಪುಗಳು ಆಗುವವು. ಆದರೆ 'ಇವೆಲ್ಲ ಅನಿವಾರ್ಯವೇ ?' ಎಂಬ ಪ್ರಶ್ನೆ ಮುಂದೆ ನಿಲ್ಲುತ್ತದೆ. ಈ ತಪ್ಪುಗಳ ಉಗಮವು

ಚಿಕ್ಕಂದಿನ ನಡೆವಳಿಯಲ್ಲಿಯೇ ಆಗುತ್ತದೆ. ಅಂದಿನ ಬಾಳವಾದರಿಯಲ್ಲಿ ಆದ ಕುಂದು ಕೊರತೆಗಳನ್ನು ಹಿಂದೆ ಹೇಳಿದ ರೀತಿಯಲ್ಲಿ ಹಳೆ ನೆನಹು, ಕನಸು ಮೊದಲಾದವುಗಳ ಸಹಾಯದಿಂದ ತಿಳಿದುಕೊಂಡು, ನಮ್ಮ ಇಂದಿನ ತಪ್ಪುಗಳನ್ನು ತಿದ್ದಿಕೊಳ್ಳಬಹುದು. ವೈವಾಹಿಕ ಜೀವನದ ಈ ತೊಡಕುಗಳನ್ನು ಬಿಡಿಸಿ ಗಂಡ-ಹೆಂಡರಿಗೆ ಸಲಹೆ ಕೊಡಲು ಕೋರ್ಟುಗಳು ಸರಿಯಾದ ಸ್ಥಳಗಳಲ್ಲ. ಮನೋವಿಜ್ಞಾನಿಗಳ ಒಂದು ತಜ್ಞ ಮಂಡಳವನ್ನು ಸ್ಥಾಪಿಸಬೇಕು. ಸಲಹೆ ಕೇಳಲು ಬಂದ ಗಂಡು ಹೆಣ್ಣಿಗೆ ಅವರು ಸಹಾನುಭೂತಿಯಿಂದ ಉಪದೇಶಿಸಿ ಸರಿದಾರಿ ತೋರಬಲ್ಲರು. ಇಂಥ ಸಮಸ್ಯೆಗಳಿಗೆ ಘಟಸ್ಫೋಟವು ನಿವಾರಣೋಪಾಯವಲ್ಲ. ಘಟಸ್ಫೋಟ ಪಡೆದು ಮಾಡುವುದೇನು ? ಮತ್ತೆ ಹೊಸ ಮದುವೆ ; ಮತ್ತೆ ಘ ಟ ಸ್ಫೋ ೀ ಟ ! ಮತ್ತೆ ಮದುವೆ ; ಮತ್ತೆ ಘಟಸ್ಫೋಟ ! ಇಂತಹರ ಬಾಳಮಾದರಿಯನ್ನು ಸರಿಪಡಿಸಿದ ಹೊರತು ಹೊರಗಿನ ಯಾವುದೇ ಸ್ಥಿತ್ಯಂತರವು ಬಾಳಿನ ಬಗೆಯನ್ನು ಪಲ್ಲಟಿಸಲಾರದು. ಚಿಕ್ಕಂದಿನಲ್ಲಿ ಕೆಲವೊಂದು ಸಣ್ಣಪುಟ್ಟ ತಪ್ಪುಗಳು ಸಂಭವಿಸುಪವು. ಅವೇ ಮುಂದೆ ದಾಂಪತ್ಯ ಪ್ರೇಮವು ಕೈಗೂಡದಿರುವುದಕ್ಕೆ ಕಾರಣವಾಗುವವು. ಉದಾಹರಣೆಗಾಗಿ, ಕೆಲವರು, ತಮ್ಮ ಜೀವನದಲ್ಲಿ ಯಾವಾಗಲೂ ನಿರಾಶೆಯೆ ನಿಶ್ಚಿತವೆಂದು ಭಾವಿಸಿರುತ್ತಾರೆ. ಈ ನಿರಾಶೆಯ ಭೀತಿಯ ಮೂಲಕ ಇಂಥ ಮಕ್ಕಳು ಯಾವಾಗಲೂ ನಿರಾಶೆಯ ದುಃಖದ ಸಂಶಯದಿಂದಲೇ ಕಷ್ಟ, ಕಳವಳಗಳಿಗೆ ಒಳಗಾಗುತ್ತಾರೆ. ಇಂಥ ನಿರಾಶೆಯ ಭೀತಿಯೇ ಮುಂದೆ ದಾಂಪತ್ಯ ಜೀವನದಲ್ಲಿ ಅಸೂಯೆ ಅಸಹನೆಗಳನ್ನೂ, ಸಂಶಯ ಸಂತಾಪಗಳನ್ನೂ ಉಂಟುಮಾಡುವುದು.

ಇನ್ನು ಹೆಂಗಸರಲ್ಲಿಯೂ ಒಂದು ಗ್ರಹಿಕೆಯು ಕಂಡು ಬರುತ್ತದೆ. ತಾವು ಗಂಡಸರ ಕೈಗೊಂಬೆ, ಅಥವಾ ಅವರ ಬರಿ ನೆಳಲು ಅವರು ಇಟ್ಟಂತೆ ಇರಬೇಕಾದ ದಾಸಿ. ಸಾಮಾನ್ಯವಾಗಿ ಗಂಡಸು ಮನಬಂದಂತೆ ನಡೆವ ಸ್ವೈರವೃತ್ತಿಯ ಪ್ರಾಣಿಯು. ಇಂಥ ಅಪನಂಬಿಕೆಯ ಭಾವನೆಯ ಭೂಮಿಕೆಯ ಮೇಲೆ ನಿಂತ ದಾಂಪತ್ಯ ಸುಖದ ಕಟ್ಟಡವು ಏಸು ದಿನ ತಾಳೀ ? ಒಬ್ಬರು ಹೀಗೆ ವಿಶ್ವಾಸಗೇಡಿಗಳು, ನಿಷ್ಠೆಯಿಲ್ಲದ ದುಷ್ಟ ಖೋಡಿಗಳು ಎಂಬ ಗ್ರಹಿಕೆಯಿಂದ ಇನ್ನೊಬ್ಬರು ನಡೆಯ ತೊಡಗಿದರೆ, ಇಬ್ಬರಲ್ಲಿ ಪ್ರೀತಿ ವಿಶ್ವಾಸಗಳು ಬೆಳೆಯುವುದು ಎಂತು ?

### ವಿವಾಹದ ಪ್ರಶ್ನೆಯ ಸ್ಥಾನವೇನು ?

ಮದುವೆಯ ತೊಡಕಿನಲ್ಲಿ, ಇಜ್ಜೋಡಿನ ಇಕ್ಕಟ್ಟಿನಲ್ಲಿ ಸಿಲುಕಿ ಪೇಚಾಡುವ

ಸಾವಿರಾರು ಜನಗಳನ್ನು ನೋಡಿದರೆ ಆಯುಷ್ಯದಲ್ಲಿ ಮದುವೆಯೊಂದೇ ಮುಖ್ಯ ವಾದ ಪ್ರಶ್ನೆಯೆಂದು ಭಾಸವಾಗುವಂತಿದೆ. ನಿಜ ಸ್ಥಿತಿ ಹೀಗಿಲ್ಲ. ವಿವಾಹದ ಪ್ರಶ್ನೆಯು ಮಾತ್ರ ಅತ್ಯಂತ ಮಹತ್ವದೆಂಬುದು ಸರಿಯಲ್ಲ. ಜೀವನದ ಎಲ್ಲ ಪ್ರಶ್ನೆಗಳೂ ಮಹತ್ವಪವುಗಳಾಗಿವೆ. ಆದ್ದರಿಂದ ಕೇವಲ ಮದುವೆ ಮಾತನ್ನು ಮಾತ್ರ ಎತ್ತಿ ಹಿಡಿದು ಅದಕ್ಕೆ ಇಲ್ಲದ ಮಹತ್ವವನ್ನು ಕೊಡುವುದೆಂದರೆ ಅದು ವ್ಯಕ್ತಿಯ ದೃಷ್ಟಿ ದೋಷ. ಹಾಗಾದರೆ ವ್ಯಕ್ತಿಗೆ ವಿವಾಹದ ವಿಷಯವೇ ಇಷ್ಟೊಂದು ದಿಗ್ಭ್ರಮೆಗೊಳಿಸುವುದೇಕೆ ? ಇದಕ್ಕೆ ಕಾರಣವೆಂದರೆ, ಉಳಿದ ವಿಷಯದ ಶಿಕ್ಷಣ ಕೊಡುವಂತೆ ವೈವಾಹಿಕ ಜೀವನದ ಬಗ್ಗೆ ಇರುವ ಶಿಕ್ಷಣದ ಅಭಾವ. ಜೀವನದಲ್ಲಿ ಮುಖ್ಯ ಮೂರು ವಿಷಯದ ಶಿಕ್ಷಣ ಬೇಕು. ೧. ಸಾಮಾಜಿಕ ೨. ವ್ಯಾವಸಾಯಿಕ, ಮತ್ತು ೩. ವೈವಾಹಿಕ. ಇವು ಮೂರು ಸಮಾನ ಮಹತ್ವದ ಸಮಸ್ಯೆಗಳಿರುವುವು. ಈ ಮೂರು ಒಗಟುಗಳ ಬಗೆಹರಿಕೆಯು ತ್ರಿತಾಲದ ಮೇಲೆಯೇ ಜೀವನ ಸಂಗೀತದ ಸ್ವಾರಸ್ಯವು ಅವಲಂಬಿಸಿದೆ. ಆದರೆ ಶಿಕ್ಷಣ ದಲ್ಲಿ ಮೊದಲಿನವೆರಡು ಪ್ರಶ್ನೆಗಳಿಗೆ ಕೊಡಲಾದ ಅವಕಾಶ, ಅವಧಾನಗಳು ಮೂರನೆ ಯದರ ಪಾಲಿಗೆ ಸಲ್ಲಿಸಲಾಗಿಲ್ಲ. ನಮ್ಮ ಬಾಳಿನ ಮೊದಲಿನ ದಿನದಿಂದಲೇ ಮಂದಿಯೊಂದಿಗೆ ಬೆರೆತು ಬೆಸೆದು ಹೇಗೆ ನಡೆಯಬೇಕೆಂಬುವರ ಶಿಕ್ಷಣಕ್ಕೆ ಆರಂಭ ವಾಗುತ್ತದೆ. ಹಾಗೆಯೇ ಕೆಲಸ, ಕೈಗಾರಿಕೆಗಳನ್ನು ಕಲಿಸುವ ಶಿಕ್ಷಕರೂ, ಪುಸ್ತಕಗಳೂ ನಮ್ಮನ್ನು ವೃತ್ತಿ ವ್ಯವಸಾಯುಗಳ ಪ್ರಶ್ನೆಯನ್ನೆದುರಿಸಲು ಸಾಕಷ್ಟು ಅಣಿಮಾಡುತ್ತವೆ. ಆದರೆ ಕಡೆಯದಾದರೂ ಕನಿಷ್ಠವಲ್ಲದಂಥ ವಿವಾಹದ ಸಮಸ್ಯೆಯ ಕುರಿತು ಸರಿಯಾದ ಸಂಸ್ಕಾರ ಶಿಕ್ಷಣ ಕೊಡುವ ಯಾವ ಏರ್ಪಾಟವೂ ಇಲ್ಲದುದು ಶೋಚನೀಯವಾಗಿದೆ. ಕಥೆ ಕಾದಂಬರಿಗಳನ್ನೋದಿ ಮದುವೆಯ ಗುಟ್ಟು ನಿಟ್ಟುಗಳನ್ನು ತಿಳಿದುಕೊಳ್ಳಬೇಕೆ? ಇನ್ನು ಈ ಸಾಹಿತ್ಯವೆಲ್ಲವೂ ಹುಚ್ಚಾಟದ ಪ್ರಣಯ ಕಥೆಗಳಿಂದ ತುಂಬಿದೆ. ಕೊನೆಗೆ ಮದುವೆಯಾಗಿ ಸುಖವಾಗಿ ಬಾಳಿದವುಗಳಿಗಿಂತ ಮದುವೆಯಾಗಿ ತೊಳಲಾಡಿದ ದುರಂತದ ಕತೆಗಳೇ ಹೆಚ್ಚು. ಸರಿಯಾದ ಬಾಳಿನ ಪರಿಜ್ಞಾನ ಮಾಡಿಕೊಡುವ ಸಾಹಿ ತ್ಯವು ತೀರ ವಿರಳ. ಕಥೆ ಕಾದಂಬರಿ ನಾಟಕಾದಿಗಳ ಆನಂದವನ್ನು ಅನುಭವಿಸುತ್ತ, ಕೌಟುಂಬಿಕ ಜೀವನದ ಬಗ್ಗೆ ತಮ್ಮ ಆಶೆ ಆಕಾಂಕ್ಷೆಗಳನ್ನು ರೂಪಿಸಿಕೊಳ್ಳುವವರೇ ಹೆಚ್ಚು. ಆದರೆ ಸಾಹಿತ್ಯ ಓದಿ ಬಾಳಿನ ಬೆಳಕು ಪಡೆವ ಓದುಗರ ಕಣ್ಣ ಮುಂದೆ ಇರುವ ಸ್ತ್ರೀಪುರುಷರ ಮಾದರಿಗಳು ಎಂತಹವು ? ಮದುವೆಯಾಗಿ ಹೆಂಡತಿಯನ್ನು ಮರೆತ ದುಃಷ್ಯಂತ ; ವಿರಹಿ ಶಕುಂತಲೆ ; ಅಗ್ನಿದಿವ್ಯ ಮಾಡಿದ ಮೇಲೂ ಅರಣ್ಯವಾಸ ತಪ್ಪದಿರುವ ಸೀತೆ. ಮರೆವಿನಿಂದ ಕರವಸ್ತ್ರ ಕಳಕೊಂಡು ದಕ್ಕಾಗಿ ವ್ಯಭಿಚಾರದ ಆರೋಪದಿಂದ ಜೀವಕ್ಕೆ ಎರವಾಗಬೇಕಾದ ಡೆಸ್ಡಿಮೊನಾ : ಉರ್ವಶಿಯ ಉನ್ಮಾದದಲ್ಲಿ ಅಲೆವ ಪುರೂರವ ; ಇಂತಹ ದುರಂತದ ನಾಯಕ

ನಾಯಕಿಯರೇ ಕಣ್ಣಮುಂದೆ ನಿಂತು ಬಾಳಿನ ಭೀಕರತೆಯೇ ಎದ್ದು ಕಾಣುವುದು. ಸುಖಿಯಾಗಿ ಬಾಳಲು ಬೇಕಾದ ಹವಣು ಹಂಚಿಕೆಗಳನ್ನು ತಿಳಿಸುವ ಸಾಹಿತ್ಯವು ನಮ್ಮಲ್ಲಿ ಇಲ್ಲವೆಂದರೂ ಸುಳ್ಳಲ್ಲ. ಗಂಡ ಹೆಂಡಿರು ಪ್ರೀತಿಯಿಂದ ಕೂಡಿ, ಮಕ್ಕಳನ್ನು ಪಡೆದು ಸಮಾಜಕ್ಕೆ ಆಧಾರವಾಗಿ ಸುಖಶಾಂತಿಯಲ್ಲಿ ಹೇಗೆ ಸಂಸಾರವನ್ನು ಸಾಗಿಸಬೇಕೆಂಬುವನ್ನು ವಿವರವಾಗಿ ತಿಳಿಸಿಕೊಡುವ ಸಾಹಿತ್ಯವು ನಮಗೆ ಅತ್ಯಂತ ಅವಶ್ಯಕವಾಗಿದೆ. ವಿದ್ಯುದ್ದೀಪದ ಬೆಳಕು ಇದ್ದರೂ ಸಂಸಾರವನ್ನು ಹೇಗೆ ನಡಿಸಬೇಕೆಂಬ ಬೆಳಕು ತಲೆಯಲ್ಲಿ ಇಲ್ಲದ್ದರಿಂದ ಮನೆಮನೆಗಳೆಲ್ಲವೂ ಕಗ್ಗತ್ತಲೆಯ ಗವಿಗಳಾಗಿವೆ.

ಪುರಾಣಗಳ ಕಾಲದಿಂದಲೂ, ಹೆಣ್ಣೇ ಸರ್ವ ಪಾಪದ ಮೂಲವೆಂಬ ಗೃಹಿಕೆಯು ದೃಢವಾಗುತ್ತ ಬಂದಿದೆ. ನಾರಿಯೆ ಮಾರಿಯು ಎಂದು ಜನಗಳು ಆಡುವುದುಂಟು. ಸಂಸಾರವೆಂಬ ದುಃಖಸಾಗರದಲ್ಲಿ ಸ್ತ್ರೀಯು ತನ್ನ ಮೋಹಪಾಶದಿಂದ ಆಕರ್ಷಿಸಿ ನಮ್ಮನ್ನೆಲ್ಲ ನೂಕುವಳು ಎಂದು ಅಳುದನಿಯಲ್ಲಿ ಕೂಗಿಕೊಳ್ಳುತ್ತಿರುವ ಗಂಡಸರ ಸಂಖ್ಯೆ ಕಡಿಮೆಯಿಲ್ಲ. ಸ್ತ್ರೀಯು ವಿಷಯ ವ್ಯಾಮೋಹದ ಆಗರವೆಂದು ನಿಂದಿಸಿದರೂ ವಿವಾಹವೂ ಒಂದು ಅನಿವಾರ್ಯವಾದ ಆಪತ್ತಿಯೆಂದು ಹೇಳುವರು. ಮದುವೆಯಾಗುವುದೆಂದರೆ ಅದೊಂದು ಅಪಕೃತಿ; ಪಾಪ ಎಂದು ನೆರೆನಂಬಿದವರಿದ್ದಾರೆ. ಮದುವೆಯೆಂದರೆ ನರಕದ ಸಿದ್ಧತೆ, ಆಧ್ಯಾತ್ಮಕ್ಕೆ ಬೆನ್ನ ತಿರುವಿದಂತೆ ಎಂದು ಜನ ಸಾಮಾನ್ಯರ ತಿಳುವಳಿಕೆ ಆದರೂ ಪ್ರತಿವರ್ಷ ಲಕ್ಷಾವಧಿ ಮದುವೆಗಳಾಗುವುದು ನಿಂತಿಲ್ಲ ! ಹೆಣ್ಣನ್ನೂ ಹೀಗೆ ಹೀಯಾಳಿಸುವಲ್ಲಿ ಗಂಡಿಸಿನ ಕೀಳರಿಮೆಯೇ ವ್ಯಕ್ತವಾಗುತ್ತಿದೆ. ತನ್ನಲ್ಲಿ ಸಂಯಮವು ಕಡಿಮೆ ಎಂದು ಒಪ್ಪುವ ಬದಲು ಅವರು (ಹೆಂಗಸರು) ಆಕರ್ಷಿಸುತ್ತಾರೆ ಎನ್ನುವುದು ಯಾವ ನ್ಯಾಯ ? ತಾವು ಪಾಪ ಮಾಡಿದ್ದರಿಂದ ಹೆಣ್ಣಾಗಿ ಹುಟ್ಟಿದೆವೆಂದು ಭಾವಿಸಿರುವ ಹೆಂಗಸರು ಉಂಟು. ಪಾಪ ! ಇವರು ಗಂಡಸಿನ ಅಪಪ್ರಚಾರಕ್ಕೆ ಬಲಿ ಬಿದ್ದವರೆಂಬಲ್ಲಿ ಸಂದೇಹವೆ ಇಲ್ಲ. ಈ ಕಾಲದಲ್ಲಿಯೂ, ಸ್ತ್ರೀಯರಿಗೆ ತಾವು ಕನಿಷ್ಟರೆಂದು ಎನಿಸುವುದು ನಮ್ಮ ಸಂಸ್ಕೃತಿಯ ಅಪಯಶದ ಕುರುಹು. ಸ್ತ್ರೀಯರನ್ನು ನೋಡುವ ನಮ್ಮ ದೃಷ್ಟಿಕೋನವು ಅನಾಗರಿಕತೆಯ ಸೂಚಕವಾಗಿದೆ. ಇದಕ್ಕೆ ಸ್ತ್ರೀಯರನ್ನು ನಾವು ನಡೆಸಿಕೊಳ್ಳುವ ರೀತಿಯೇ ಸಾಕ್ಷಿ. ಹೆಣ್ಣು ಕೀಳು, ಗಂಡು ಹೆಚ್ಚು; ಎಂಬ ವಿಚಾರದ ವಿಷಬೀಜಗಳನ್ನು ಚಿಕ್ಕಂದಿನಲ್ಲೆ ಮನದಲ್ಲಿ ಬಿತ್ತಿ ಮುಂದಿನ ಆಯುಷ್ಯದಲ್ಲಿ ಅವರ ಕಹಿಫಲವನ್ನು ತಿಂದು ಜೀವನವನ್ನೆಲ್ಲ ದುಃಖಮಯ ಮಾಡಿಕೊಳ್ಳುವುದಕ್ಕಿಂತ, ಹೆಣ್ಣು ಗಂಡಿನಲ್ಲಿ ಮೇಲು ಕೀಳಿಲ್ಲ, ಎರಡೂ ಅರ್ಧ ಅಂಗಗಳು; ಎರಡು ಅರ್ಧಗಳು ಕೂಡಿದಾಗಲೆ ಒಂದು ಬಾಳು ಪೂರ್ಣವಾಗುವುದೆಂದು

ಸಮಾನಭಾವದ ವಿಚಾರ ಆಚಾರಗಳಿಂದ ಜೀವನವನ್ನು ಸುಖಮಯ ಮಾಡಿಕೊಂಬುದೇ ಜಾಣ್ಮೆಯಲ್ಲವೆ ?

ಹೆಣ್ಣಿಗೂ ಗಂಡಿಗೂ ಅವರವರಲ್ಲಿರುವ ನಿಸರ್ಗದತ್ತ ಗುಣಗಳನ್ನು ವಿಕಾಸ ಪಡಿಸಿಕೊಳ್ಳುವದಕ್ಕೆ ಶಿಕ್ಷಣವನ್ನೇ ಕೊಡಬೇಕು. ಗಂಡು ಹೆಣ್ಣುಗಳನ್ನು ಪ್ರತಿಸ್ಪರ್ಧಿಗಳಂತೆ ಹೋರಾಡಲು ಹಚ್ಚುವ ಶಿಕ್ಷಣವು ಸಮಾಜಕ್ಕೆ ವಿಘಾತಕವಾಗಿದೆ. ಹೆಣ್ಣು ಮತ್ತು ಗಂಡುಗಳಲ್ಲಿ ಮೇಲು ಕೀಳುಗಳನ್ನು ಕಲ್ಪಿಸುವದು ತಿಳಿಗೇಡಿತನ. ಇಬ್ಬರೂ ಒಬ್ಬರೊಬ್ಬರಿಗೆ ಪೂರಕ. ಒಬ್ಬರೊಬ್ಬರಿಗೆ ಪೋಷಕ. ಹೆಣ್ಣಿಲ್ಲದೆ ಜಗತ್ತು ಇಲ್ಲ. ಆದ್ದರಿಂದ ಹೆಣ್ಣೆಂದರೆ ನರಕದ ದಾರಿಯೆಂಬುದು ಕೇವಲ ಅನ್ಯಾಯ. ಹೆಣ್ಣು ಕೀಳೆಂಬ ತಿಳುವಳಿಕೆಯ ಮೂಲಕ ಅವಳ ಕೀಳರಿಮೆಯು ಅವಳಿಂದ ಕೆಲವು ಬಾರಿ ಮಿತಿಮೀರಿದ ಕೆಲಸ ಮಾಡಿಸುತ್ತದೆ. ಗಂಡನನ್ನು ತನ್ನ ಬಲೆಯಲ್ಲಿಟ್ಟುಕೊಳ್ಳಲು ತುಂಬ ಹೆಣಗುತ್ತಾರೆ. ಅವರು ಬಹುಶಃ ಇದಕ್ಕಾಗಿ ಅವಶ್ಯಕತೆಗಿಂತ ಹೆಚ್ಚಾಗಿ ಯೋಜನೆ, ಸಿದ್ಧತೆಗಳನ್ನು ನಡಿಸುವರು. ಅದೇ ಮೇರೆಗೆ ಅವರು ಪುರುಷರಿಗಿಂತ ಹೆಚ್ಚು ತಮ್ಮಲ್ಲಿಯೆ ಹುದುಗಿಕೊಂಡಿರುವರು. ಕೇವಲ ತಮ್ಮ ಹಿತವನ್ನು ಮೊದಲು ನೋಡುವರು. ಅವರ ಈ ಪ್ರವೃತ್ತಿಯನ್ನು ಇನ್ನು ಮುಂದೆ ಹೋಗಲಾಡಿಸಿ, ಸ್ತ್ರೀಯರಲ್ಲಿ ಸಾಮಾಜಿಕ ಆಸಕ್ತಿಯು ಹೆಚ್ಚಾಗಿ ಬೆಳೆಯುವಂತೆ ಶಿಕ್ಷಣವು ಕೊಡಲ್ಪಡಬೇಕು. ಆದರೆ ಮೊದಲು ಪುರುಷರ ವಿಶೇಷಾಧಿಕಾರಗಳ ಹುಚ್ಚು ಹೋಗಬೇಕು. ಗಂಡಿನ ಸುಖ-ಸೌಕರ್ಯಕ್ಕಾಗಿ ಹೆಣ್ಣಿನ ಆಯುಷ್ಯವಿದೆಯೆಂಬ ನಿಂದ್ಯ ಸ್ವಾರ್ಥದ ದೃಷ್ಟಿಯು ಬದಲಾಗಬೇಕು.

## ವಿವಾಹದ ಅಧಿಕಾರ ಯಾರಿಗೆ ?

ಒಂದು ವ್ಯಕ್ತಿಯಲ್ಲಿ ಮದುವೆಯಾಗುವ ಯೋಗ್ಯತೆಯು ಬಂದಿದೆಯೊ ಇಲ್ಲವೆಂಬುದನ್ನು ಅರಿತುಕೊಳ್ಳುವ ಹಲವು ಲಕ್ಷಣಗಳಿವೆ : ಮಾತು ಕೊಟ್ಟು ಹೊತ್ತಿಗೆ ಬರದವನೂ, ತಡಮಾಡಿ ಬಂದೂ ಯೋಗ್ಯ ಕಾರಣವನ್ನು ಕೊಡದೆ ತನ್ನ ಅನಿಯಮಿತತನವನ್ನೇ ಎತ್ತಿ ಹಿಡಿಯುವವನೂ, ಗೆಳೆತನದಲ್ಲೂ ಪ್ರಿಯಾರಾಧನೆಯಲ್ಲಿಯೂ ನಂಬುಗೆಯುವನಲ್ಲವೆಂದು ತಿಳಿಯಬೇಕು. ಇಂಥ ವೃತ್ತಿಯೂ, ಆತನ ಹೆಮ್ಮೆ ಅಥವಾ ಸಾಶಂಕತೆಯನ್ನು ತೋರಿಸುವುದು. ಇಂಥ ಸಾಶಂಕತೆಯು ಬಾಳಿನ ಬಿಕ್ಕಟ್ಟುಗಳಿಗೆ ಎದೆಗೊಡುವ ಕಸುವನ್ನು ಕುಗ್ಗಿಸುತ್ತದೆ. ಅದೇ ಮೇರೆಗೆ ಗಂಡ ಹೆಂಡಿರು ಒಬ್ಬರು ಇನ್ನೊಬ್ಬರನ್ನು ಯಾವಾಗಲೂ ಬುದ್ಧಿ ಕಲಿಸುವ ಇಲ್ಲವೇ ಟೀಕಿಸುತ್ತಿರುವ ಚಟವೂ ಸುಖದ ಬಾಳಿಗೆ ಹಾನಿಕರ. ಅದೇ ಮೇರೆಗೆ ಮಾತು

ಮಾತಿಗೂ ನೊಂದುಕೊಳ್ಳುವ ತೀರ ಮಿದುಮನದ ವೃತ್ತಿಯೂ ಕೀಳರಿಮೆಯ ಮನೋವಿಕೃತಿಯನ್ನೇ ಸೂಚಿಸುತ್ತದೆ. ಗೆಳೆಯರಿಲ್ಲದ, ಸಾಮಾಜಿಕ ಭಾವನೆಯಿಲ್ಲದ ವ್ಯಕ್ತಿಗಳೂ ದಾಂಪತ್ಯ ಜೀವನಕ್ಕೆ ಅಯೋಗ್ಯರಾಗಿದ್ದಾರೆ. ಜೀವನದಲ್ಲಿ ಯಾವು ದೊಂದು ಕಾಯಕವನ್ನು ಕೈಕೊಳ್ಳಲು ಹಿಂದೆಗೆಯುತ್ತ ಅಥವಾ ಆಗಾಗ ಬದಲಿ ಸುತ್ತ ಕಾಲನೂಕುವ ವ್ಯಕ್ತಿಯೂ ಮದುವೆಗೆ ಅಯೋಗ್ಯರು. ನಿರಾಶಾವಾದಿಯೂ ಹವಗೇಡಿಯೂ ಒಗೆತನಕ್ಕೆ ನಿರುಪಯುಕ್ತರು. ಬಂದ ಪ್ರಸಂಗವನ್ನು ಎದುರಿಸಲು ಬೇಕಾಗಿರುವ ಧೈರ್ಯದ ಅಭಾವವೇ ನಿರಾಶಾವಾದದಲ್ಲಿ ಬೈಲಿಗೆ ಬರುತ್ತದೆ. ಇನ್ನು ಈ ಅಯೋಗ್ಯರ ಪಟ್ಟಿಯನ್ನು ನೋಡಿ ದಿಗಿಲುಗೊಳ್ಳುವ ಕಾರಣವಿಲ್ಲ. ಯೋಗ್ಯ ವ್ಯಕ್ತಿಯನ್ನು ಆರಿಸುವದು ಅಷ್ಟೇನೂ ಬಿಗಿಯಲ್ಲ. ಕಾಲಕ್ರಮದಲ್ಲಿ ಯೋಗ್ಯ ಸಂಸ್ಕಾರಗಳನ್ನು ಪಡೆಯಲು ಸಿದ್ಧರಿರುವ ವ್ಯಕ್ತಿಗಳನ್ನು ಆರಿಸಬಹುದು. ಏಕೆಂದರೆ ಆದರ್ಶ ವ್ಯಕ್ತಿಗಳನ್ನೇ ವರಿಸಬೇಕೆಂದರೆ ನಡೆಯದು. ಇಷ್ಟೇ ಅಲ್ಲ: ಕೇವಲ ಆದರ್ಶ ಪತಿ ಇಲ್ಲವೇ ಪತ್ನಿಗಾಗಿಯೇ ಹಂಬಲಿಸುತ್ತ ದಿನಗಳೆವುದೂ ಕೀಳರಿ ಮೆಯ ಕುರುಹು. ಸಂದೇಹಿಗಳ ಲಕ್ಷಣ. ಇದು ಪ್ರಗತಿಗೆ ವಿಮುಖವಾದ ಪ್ರವೃತ್ತಿ. ಜರ್ಮನಿಯಲ್ಲಿ ವಧೂ-ವರ ಪರೀಕ್ಷೆಯ ಒಂದು ರೀತಿಯಿದೆ. ಅಲ್ಲಿಯ ಹಳ್ಳಿಗರ ಸಮಾಜಗಳಲ್ಲಿಮದುವೆಯಾಗಬಯಸುವ ವಧೂವರರನ್ನು ವಾಙ್ನಿಶ್ಚಯದ ಮೊದಲು ಕರಗಸದ ಎರಡು ತುದಿಯ ಹಿಡಿಕೆಗಳನ್ನು ವಧೂವರರಿಂದ ಹಿಡಿಸಿ ಮರದ ತುಂಡೊಂದನ್ನು ಕೊರೆಯಲು ಹೇಳುತ್ತಾರೆ. ಆಪ್ತರಿಷ್ಟರೆಲ್ಲ ಸುತ್ತಲು ನಿಂತು ಅವರು ಒಬ್ಬರೊಬ್ಬರಿಗೆ ಅನುಕೂಲರಾಗಿ ಕೊರೆಯುವರೇ ಎಂಬುದನ್ನು ನಿರೀಕ್ಷಿಸು ತ್ತಾರೆ. ಕಟ್ಟಿಗೆ ಕೊರೆಯುವ ಕೆಲಸವು ಇಬ್ಬರ ನೆರವಿನಿಂದ ನಡೆಯಬೇಕಾಗುತ್ತದೆ. ಪ್ರತಿಯೊಬ್ಬರೂ ಇನ್ನೊಬ್ಬರ ಗತಿಯನ್ನು ಲಕ್ಷಿಸಿ ಅವರ ಹಿಡಿತ ಎಳೆತಗಳ ಹದಕ್ಕೆ ಹೊಂದಿಕೆಯಾಗುವಂತೆ ತಮ್ಮ ಕೈ ನಡೆಸಬೇಕಾಗುತ್ತದೆ. ಹೀಗೆ ಅನ್ಯೋನ್ಯ ಆಸಕ್ತಿಯ ಸಹಕಾರವು ಇಬ್ಬರಲ್ಲಿ ಎಷ್ಟರ ಮಟ್ಟಿಗೆ ಇದೆಯೆಂಬುದನ್ನು ಕಂಡು ಕೊಳ್ಳದೆ ಮದುವೆಯ ಹೊಣೆಗಾರಿಕೆಯನ್ನು ಹೊರಿಸಿ ವಿವಾಹ ಬಂಧನದಿಂದ ಇಬ್ಬರನ್ನು ಕಟ್ಟಿಬಿಡುವದು ಅನ್ಯಾಯವಾಗುವದು. ಏಕೆಂದರೆ ಮದುವೆಯು ಇಬ್ಬರು ತೂಗಿಸಬೇಕಾದ ಹೊಣೆ. ಆದರೆ ಈ ಬಗೆಯಾಗಿ ಗಂಡ ಹೆಂಡಿರು ಸಹಕಾರದಿಂದ ಒಬ್ಬರೊಬ್ಬರಿಗೆ ಪ್ರೇಮಪೂರಕರಾಗಿ ಕೆಲಸ ಮಾಡುವ ಶಿಕ್ಷಣವೇ ಕೊಡಲ್ಪಡುವ ದಿಲ್ಲ. ಸಮಾಜದಲ್ಲಿ ಒಬ್ಬರೇ ಸಾಗಿಸಬಹುದಾದಂಥ ಕೆಲಸಗಳ ಇಲ್ಲವೇ ಹಲವರೊಂದಿಗೆ ಭಾಗಿಸಿಕೊಂಡು ನೆರವೇರಿಸಬೇಕಾದ ವ್ಯವಹಾರ ವ್ಯವಸಾಯಗಳ ಶಿಕ್ಷಣವನ್ನು ಕೊಡಲಾಗುತ್ತದೆ. ಆದರೆ ಗಂಡಹೆಂಡಿರಾಗಿ ನಿರ್ವಹಿಸಬೇಕಾದ ಕಾರ್ಯಭಾರದ ಕುರಿತು ಯಾವ ಶಿಕ್ಷಣವೂ ಸಿಗುವದಿಲ್ಲ. ಆದರೂ ವಿವಾಹಬದ್ಧರಾಗಬಯಸುವ ವ್ಯಕ್ತಿಗಳು ವಿವೇಕ ವಿಮರ್ಶೆಗಳಿಂದ ತಮ್ಮ ನಡೆನುಡಿಗಳೊಳಗಿನ ಕುಂದು ಕೊರತೆ

ಗಳನ್ನು ಅರಿತುಕೊಂಡು, ಹೋಗಲಾಡಿಸಿ. ಪರಸ್ಪರರು ಸಮಾನಭಾವದಿಂದ ಬಾಳುವೆ ಮಾಡುವದನ್ನು ನಿರ್ಧರಿಸಿದರೆ ಅವರ ಜೀವನವು ಯಶಸ್ವೀಯಾದೀತು; ಬಾಳು ಸುಖಮಯವಾದಿತೆಂಬಲ್ಲಿ ಸಂದೇಹವೇ ಇಲ್ಲ.

ಇಲ್ಲಿ ಇನ್ನೊಂದು ಮಾತು ಮಹತ್ವದ್ದಾಗಿದೆ. ವಿವಾಹ ಸಂಸ್ಥೆಯ ಸರ್ವ ಶ್ರೇಷ್ಠ ಸ್ವರೂಪವೆಂದರೆ ಏಕನಿಷ್ಠತೆಯ ವ್ರತ. ಏಕಪತ್ನಿತ್ವ ; ಏಕಪತಿತ್ವ ; ದಂಪತಿಗಳ ಐಕ್ಯ ಸಾಧನೆಯಲ್ಲಿಯೇ ಬಾಳಿನ ಗೆಲುವಿದೆ. ಗಂಡು ಮತ್ತು ಹೆಣ್ಣು ಸಂಯಮ ದಿಂದ ನಡೆದರೆ ಇಬ್ಬರಲ್ಲಿ ಜಗಳಕ್ಕೆ ಎಡೆಯೇ ಇಲ್ಲ. ಐಕ್ಯವು ಸಾಧ್ಯವಾಗುವುದು. ಇದರಲ್ಲಿಯೇ ಪ್ರೇಮದ ಸಿದ್ಧಿಯಿದೆ. ಸಂಸ್ಕೃತಿಯ ಸಾರ್ಥಕತೆಯಿದೆ. ಕೆಲವರು ಅರ್ಥಶಾಸ್ತ್ರೀಯ ಆಧಾರಗಳನ್ನು ಮುಂದೆ ತೋರಿ ಕೆಲವೊಂದು ಸ್ವೈರಾಚಾರದ ಪ್ರತಿಪಾದನೆಯನ್ನು ಮಾಡುತ್ತಾರೆ. ಗಂಡು ಭೃಂಗ ವೃತ್ತಿಯದು. ಹೂವಿನಿಂದ ಹೂವಿಗೆ ಅಲೆಯುವುದು. ಇದು ಅದರ ಸ್ವಭಾವ. ಆದುದರಿಂದ ಹಲವು ಹೆಣ್ಣು ಮದುವೆಯಾಗುವುದು ಗಂಡಿನ ಹಕ್ಕು ಇದೆ. ಏಕಪತ್ನಿವ್ರತವು ನೈಸರ್ಗಿಕವಲ್ಲವೆಂದು ಅವರ ಪ್ರತಿಪಾದನೆ. ಆದರೆ ಇದರಲ್ಲಿ ಹುರುಳಿಲ್ಲ. ಏಕೆಂದರೆ ಈ ತೆರನಾಗಿ ವಿಚಾರಿಸಿದರೆ ನಾಗರಿಕತೆಯೇ ನೈಸರ್ಗಿಕವಲ್ಲ. ಆದ್ದರಿಂದ ಈ ನಿರ್ಣಯವನ್ನು ಒಪ್ಪಿಕೊಳ್ಳಲು ಬರುವಂತಿಲ್ಲ. ನಮ್ಮ ಸಂಸ್ಕೃತಿಯಲ್ಲಿ ಮದುವೆಯು ಕೇವಲ ಭೋಗ ವಿಲಾಸಕ್ಕಲ್ಲ. 'ಪ್ರಜಾಯೈ ಗೃಹಮೇಧಿ' ಯಾಗುವುದು ನಿಜವಾದ ಗುರಿಯಾಗಿದೆ. ಮದುವೆಯು ಕೇವಲ ವ್ಯಕ್ತಿಯ ಪ್ರಶ್ನೆಯಲ್ಲ. ಇದು ಕೌಟುಂಬಿಕ ಪ್ರಶ್ನೆ. ಸಮಾಜ ಮತ್ತು ಶಾಸ್ತ್ರದ ನಾಳಿನ ಹಿತಾಹಿತಗಳು ಇದನ್ನೇ ಅವಲಂಬಿಸಿವೆ. ಮದುವೆಯಲ್ಲಿ ವೈಯಕ್ತಿಕ ಸುಖಶಾಂತಿಗಳ ವಿಚಾರವು ಅಡಕವಾಗಿರುವಂತೆ. ಕುಟುಂಬದ ಸ್ಥೈರ್ಯ, ಸಮಾಜದ ಆಸ್ತಿತ್ವ ರಾಷ್ಟ್ರದ ಜೀವಂತತನವೂ ಮದುವೆ ಯನ್ನೇ ಅವಲಂಬಿಸಿದೆ. ●

# ೧೨. ಕಾಮವೂ ಅದರ ಪ್ರವೃತ್ತಿಯೂ, ವಿಕೃತಿಯೂ

ಮದುವೆಯ ತೊಡಕಿನ ಸಾಮಾನ್ಯ ವಿವರಣೆಯನ್ನು ಹಿಂದಿನ ಅಧ್ಯಾಯದಲ್ಲಿ ಮಾಡಿದ್ದಾಯಿತು. ಇನ್ನು ಅದೇ ಪ್ರಶ್ನೆಯ ವಿಶಿಷ್ಟ ರೂಪಗಳಾದ ಲೈಂಗಿಕ ಸಮಸ್ಯೆಗಳನ್ನು ಕುರಿತು ವಿಚಾರಿಸತಕ್ಕದಿದೆ. ಲಿಂಗವೇ ಉತ್ತಮಾಂಗ, ಅದುವೆ ಸರ್ವಪ್ರಧಾನ : ಎಂಬ ಅವಿಚಾರದ ದೃಢವಿಶ್ವಾಸದಿಂದ ಆಯುಷ್ಯವನ್ನೆಲ್ಲ ಹಾಳು ಮಾಡಿಕೊಂಡವರಿದ್ದಾರೆ. ಈ ಯೋನಿ-ಲಿಂಗ ಪೂಜಕರ ಕಲ್ಪಿತ ಅಥವಾ ವಾಸ್ತವ ಮನೋವಿಕೃತಿಗಳ ಪರಿಣಾಮಗಳನ್ನು ಕುರಿತು ಇಲ್ಲಿ ಗಮನಿಸಬೇಕಾಗಿದೆ. ಏಕೆಂದರೆ ಈ ಯೋನಿ ಪುರಾಣ, ಲಿಂಗ ಮಹಾತ್ಮ್ಯಗಳಲ್ಲಿ ಎಷ್ಟೋ ಭ್ರಾಮಕ ಕಲ್ಪನೆಗಳೂ, ವಿಕೃತ ವಿಕಾರಗಳೂ ವಿಕ್ಷಿಪ್ತ ವಿಧಾನಗಳೂ ತುಂಬಿಕೊಂಡಿವೆ. ಅವನ್ನೆಲ್ಲ ಬಿಡಿಸಿ ತೋರಿಸಿ ತಪ್ಪು ತಿಳುವಳಿಕೆಗಳನ್ನು ದೂರ ಮಾಡಬೇಕಾಗಿದೆ.

ಕೆಲವರಲ್ಲಿ ಕಾಮವಾಸನೆಯು ತೀವ್ರವಾಗಿರುವುದಕ್ಕೂ, ಕೆಲವರಿಗೆ ಅದು ಕಡಿಮೆ ಯಾಗಿರುವುದಕ್ಕೂ ಅವರವರ ಆನುವಂಶಿಕ ಸಂಸ್ಕಾರಗಳೇ ಕಾರಣವೆಂದು ಒಂದು ಗ್ರಹಿಕೆಯಿದೆ. ಮಾತು ಮಾತಿಗೆ ಆನುವಂಶಿಕ ಸಂಸ್ಕಾರದ ನೆಪವನ್ನು ಮುಂದೆ ಒಡ್ಡಿ, ತಮ್ಮ ಬೇಕಾದ ಭ್ರಾಮಕ ಕಲ್ಪನೆಗಳನ್ನು ಜನರು ಸಮರ್ಥಿಸಿಕೊಳ್ಳುವುದನ್ನು ಕಾಣಬಹುದು. ಹೀಗಾದಲ್ಲಿ ಪ್ರಗತಿಗೆ ಅದೊಂದು ಕಾಲ್ತೊಡಕೇ ಸರಿ. ಆದ್ದರಿಂದ ಆನುವಂಶಿಕ ಸಂಸ್ಕಾರವೆಂಬ ಹೆಸರಿನಿಂದ ಹೀಗೆ ಪ್ರಚಾರದಲ್ಲಿರುವ ಕೆಲವೊಂದು ಅಶಾಸ್ತ್ರೀಯ ಅಭಿಪ್ರಾಯಗಳನ್ನು ತಿಳಿಯಾಗಿ ತಿಳಿಸಿ ಹೇಳುವುದು ಅಗತ್ಯವಿದೆ. ಏಕೆಂದರೆ ಸರ್ವಸಾಧಾರಣ ವ್ಯಕ್ತಿಯು ಇಂಥ ಅಭಿಪ್ರಾಯಗಳನ್ನು ನಿಜವೆಂದು ನಂಬಿ ದಿಗಿಲುಗೊಂಡು ಅಡ್ಡದಾರಿಗೆ ಬೀಳುತ್ತಾನೆ. ಏಕೆಂದರೆ ಆನುವಂಶಿಕ ಸಂಸ್ಕಾರಗಳೆಂದು ಹೇಳುವ ಲೈಂಗಿಕ ವಿಕೃತಿಗಳಿಗೆ ಕಾರಣವಾಗಿರುವ ಕಾಮ ವಾಸನೆಯನ್ನು ಹತ್ತಿಕ್ಕಿದ ದುಷ್ಪರಿಣಾಮವೆಷ್ಟು ? ಕೃತ್ರಿಮ ಉತ್ತೇಜನದ ಉದ್ರೇಕವೆಷ್ಟು ? ಎಂಬುದನ್ನು ಗೊತ್ತುಪಡಿಸುವುದು ಸಾಧಾರಣ ವ್ಯಕ್ತಿಯ ಶಕ್ತಿಗೆ ಮೀರಿದ ವಿಷಯವು.

## ಲೈಂಗಿಕತೆಯ ವಿಕಾಸ

ಕಾಮದ ಅಂಕುರವನ್ನು ತೀರ ಬಾಲ್ಯದಿಂದಲೂ ಕಾಣಬಹುದು. ಮಗುವು ಈ ಲೋಕವಲ್ಲಿ ಅಡಿಯಿಟ್ಟ ಒಂದೆರಡು ವಾರಗಳಲ್ಲಿಯೇ ಅದರ ಲೈಂಗಿಕ ಚಲನ ವಲನಗಳಿಂದ ಕಾಮದ ಕಿಡಿಯು ಆ ಎ ಳೆ ಹ ಸು ಳೆ ಯ ಲ್ಲಿ ಯೂ ಹುದಿಗಿ

ಕೊಂಡಿರುವವನ್ನು ಸೂಕ್ಷ್ಮ ನೀರಿಕ್ಷಣೆಯ ದಾದಿಯರು ಕಂಡು ಹಿಡಿದಿರಲು ಸಾಕು. ಆದರೂ ಲೈಂಗಿಕತೆಯ ಈ ಪ್ರದರ್ಶನವು ಹೆಚ್ಚಾಗಿ ಪರಿಸ್ಥಿತಿಯನ್ನೇ ಅವಲಂಬಿಸಿದೆ ಆದ್ದರಿಂದ ಶಿಶುವು ಹೀಗೆ ತನ್ನ ವಿಕಾರವನ್ನು ವ್ಯಕ್ತ ಮಾಡಲು ಆರಂಭಿಸಿದಲ್ಲಿ ತಂದೆ ತಾಯಿಗಳು ಮಗುವಿನ ಆ ಕಡೆಯ ಲಕ್ಷ್ಯವನ್ನು ತಪ್ಪಿಸಿ ಬೇರೆ ಕಡೆಗೆ ಹಚ್ಚಲು ಉಪಾಯಗಳನ್ನು ಮಾಡಬೇಕು. ಹಲವು ಬಾರಿ ತಕ್ಕ ಉಪಾಯಗಳು ಯಾವವು ಎಂಬುದೇ ತಾಯ್ತಂದೆಗಳಿಗೆ ಗೊತ್ತಾಗದೆ, ಅವರು ಮಾಡಿದ ಉಪಾಯಗಳಿಂದ ಸರಿಯಾದ ಫಲವು ದೊರೆಯುವದಿಲ್ಲ. ಆರಂಭದಲ್ಲಿಯೇ ಯೋಗ್ಯವಾದ ಚಟುವಟಿಕೆಗಳ ಕಡೆಗೆ ಮನಸ್ಸನ್ನು ಹಚ್ಚದ್ದರಿಂದ ಲೈಂಗಿಕ ಚಲನವಲನಗಳಲ್ಲಿಯೇ ಮಗುವು ವಿಶೇಷವಾದ ಆಸ್ಥೆಯನ್ನು ವಹಿಸುವದು. ಯಾವದೇ ಇಂದ್ರಿಯದ ಚಟುವಟಿಕೆಯ ಚಟವು ಒಮ್ಮೆ ಅಂಟಿಕೊಂಡರೆ ಅದರಲ್ಲಿಯೇ ಒಂದು ಬಗೆಯ ಸಮಾಧಾನವು ದೊರೆಯುತ್ತವುದು ಎಂಬ ಸಾಮಾನ್ಯ ನಿಯಮವು ಇಲ್ಲಿಯೂ ಸರಿಹೋಗುತ್ತದೆ.

ಶಿಶುವಿನ ಲೈಂಗಿಕ ಚಲನವಲನಗಳನ್ನು ನೋಡಿ ಗಾಬರಿಯಾಗಬೇಕಾದುದೇನೂ ಇಲ್ಲ. ಕೆಲಮಟ್ಟಿಗೆ ಬಾಲ್ಯದಿಂದಲೂ ಇದು ಕಾಣಿಸಿಕೊಳ್ಳುವದು ಸಾಮಾನ್ಯ ರೀತಿಯೇ ಆಗಿದೆ. ಅರ್ಧ ಅಂಗಗಳು, ಎಂದರೆ ಗಂಡು ಮತ್ತು ಹೆಣ್ಣು ಕೂಡಿ ಒಂದು ಇಡಿಯಾದ ವ್ಯಕ್ತಿಯಾಗಬೇಕೆಂಬುದೇ ಲೈಂಗಿಕ ಆಕರ್ಷಣದ ಅಂತಿಮ ಧ್ಯೇಯವಾಗಿದೆ. ಆದುದರಿಂದ ಮಗುವಿನಲ್ಲಿ ಕಾಣಿಸಿಕೊಳ್ಳುವ ಕಾಮದ ಅಂಕುರವನ್ನು ಕಂಡು ಗಾಬರಿಗೊಂಡು ಅದನ್ನು ಚಿವುಟಿ ಒಗೆವ ಹುಚ್ಚುತನವನ್ನು ಮಾಡಬಾರದು. ಅದರಿಂದ ವಿಪರೀತ ಪರಿಣಾಮಗಳಾಗುವವು. ಪಾಲಕರು ಈ ವಿಷಯದಲ್ಲಿ ತುಂಬ ಜಾಗರೂಕರಾಗಿದ್ದು ಲೈಂಗಿಕತೆಯ ಅಭಿವ್ಯಕ್ತಿಯು ತಪ್ಪು ದಾರಿ ಹಿಡಿಯದಂತೆ ಮಾತ್ರ ಚೆನ್ನಾಗಿ ನೋಡುತ್ತಿರಬೇಕು. ಚಿಕ್ಕಂದಿನಲ್ಲಿ ಶಿಶುವು ಕೆಲವೊಂದು ಕಾರಣದಿಂದ ತನ್ನಷ್ಟಕ್ಕೆ ತಾನೇ ಕಲಿತುಕೊಳ್ಳುವ ಲೈಂಗಿಕ ಚಟುವಟಿಕೆಯನ್ನು ಆನುವಂಶಿಕ ವೈಗುಣ್ಯವೆಂದು ಗ್ರಹಿಸುವವರು ಹಲವರಿದ್ದಾರೆ. ಗಂಡು ಹೆಣ್ಣನ್ನು ಅಥವಾ ಹೆಣ್ಣು ಗಂಡನ್ನು ಆಕರ್ಷಿಸುವದು ಸ್ವಾಭಾವಿಕ. ಆದರೆ ಇದಕ್ಕೆ ವಿರುದ್ಧವಾಗಿ ಯಾರೊಬ್ಬರು ತಮ್ಮಲ್ಲಿಯೇ ಹೆಚ್ಚು ಆಸಕ್ತಿಯನ್ನು ತೋರಿಸುತ್ತಿದ್ದರೆ, ಅದು ಅಸ್ವಾಭಾವಿಕ. ನಿಸರ್ಗ ವಿರುದ್ಧ. ಆದರೆ ಆನುವಂಶಿಕ ನ್ಯೂನತೆಯೆಂದು ಎಣಿಸುವದು ತಪ್ಪು. ಈ ಚಟವು ಮಗುವಿನಲ್ಲಿ ಕ್ರಮಕ್ರಮವಾಗಿ ಬೆಳೆದಿರುತ್ತದೆ.

ಕೆಲವರು ತಮ್ಮ ಈ ಚಟವನ್ನು ಕೆಲವೊಂದು ಕಾಲದ ನಂತರ ನಿಲ್ಲಿಸುವದುಂಟು. ಉದಾಹರಣೆಗಾಗಿ ಕೆಲವರಿಗೆ ಸೋಲಿನ ಅಂಜಿಕೆಯಿರುವದು, ಅವರು ಕೀಳರಿಮೆಯ

ಅಳುಕಿಸವರಾಗಿರುತ್ತಾರೆ. ಈ ಕೀಳರಿಮೆಯು ಹೆಗ್ಗರಿಮೆಯಾಗುವ ತನಕ ಈ ಚಟವು ಅವರಲ್ಲಿ ಉಳಿಯುವದು. ಈ ಬಗೆಯ ಜನರಲ್ಲಿ ಎದ್ದು ಕಾಣುವ ಕಾಮ ವಿಕಾರವು ಅವರು ಅತಿರೇಕದಿಂದ ಹೆಚ್ಚಿಸಿಕೊಂಡದ್ದಾಗಿರುತ್ತದೆ. ಇಂಥವರಲ್ಲಿ ಹಲವು ಬಾರಿ ಲಿಂಗ ಸಾಮರ್ಥ್ಯವೂ ವಿಶೇಷವಾಗಿದ್ದುದು ಕಂಡು ಬರುತ್ತದೆ. ಯಾವುದೊಂದು ಚಟವು ಅನುಕೂಲ ಸನ್ನಿವೇಶಗಳಿಂದ ಇನ್ನೂ ಮಿತಿಮೀರಿ ಬೆಳೆಯುತ್ತದೆ. ಕಾಮುಕತೆಯ ಚಿತ್ರಗಳು, ಕಥೆ ಕಾದಂಬರಿಗಳು, ಚಲಚ್ಚಿತ್ರಗಳು, ಕೆಲವೊಂದು ವಿಲಾಸಿ ವರ್ಗದವರ ಸ್ನೇಹ ಸಂಬಂಧಗಳು ಇವೆಲ್ಲ ಕೂಡಿ ಸುಪ್ತ ವಾಗಿದ್ದ ಕಾಮವಾಸನೆಯು-ಭೋಗ ಲಾಲಸೆಯು ಜ್ವಾಲಾಮುಖಿಯಂತೆ ಭುಗಿಲ್ಲನೆ ಜಾಗೃತವಾಗುವದು ಮತ್ತು ಅದು ಯಾವದೊಂದು ವ್ಯಕ್ತಿಯನ್ನೂ ಹುಚ್ಚೆದ್ದು ಕುಣಿಸಬಲ್ಲದು. ಉಡುಪು ತೊಡಪು ಮುಂತಾದ ಪ್ರತಿಯೊಂದು ಸಂಗತಿಯೂ ಕಾಮ ವಿಕಾರವನ್ನು ಅತಿರೇಕಕ್ಕೆ ಒಯ್ಯಲು ಪೋಷಕವಾಗಿದೆಯೆಂದೇ ಹೇಳಬಹುದು. ಆದರೆ ಇದಕ್ಕೆ ಹೆದರಿ ಬೇಗುದಿಗೊಳ್ಳಬೇಕಾಗಿಲ್ಲ. ಕೇವಲ ಈ ಕಾಮುಕತೆಯಿಂದ ಹುಚ್ಚರಾಗಿ ವಿಕಾರಿಗಳಂತೆ ಸಮಾಜ ಘಾತಕರಾಗಿ ನಡೆದು ಕೊಳ್ಳದಂತೆ ಜೋಕೆಯಿಂದಿರಬೇಕು. ಆದರೆ ಈ ಜೋಕೆಯಲ್ಲಿಯೂ ಒಂದು ತೂಕವಿರಬೇಕು. ತಾಯಿತಂದೆಗಳು ಮಿತಿಮೀರಿ ಗಾಬರಿಯಾಗಿ ಬಹಳ ಲಕ್ಷ್ಯವನ್ನು ಪೂರೈಸತೊಡಗಿದರೆ ಹಲವು ಸಾರೆ ಅದರ ವಿರುದ್ಧ ಪರಿಣಾಮವಾದುದೇ ಕಂಡು ಬರುವದು. 'ನೀನು ಹೀಗೆ ಮಾಡಬೇಡ; ಲೈಂಗಿಕ ಚಲನವಲನ ಅಪಾಯಕರ' ಎಂದು ಮುಂತಾಗಿ ಉಪದೇಶಿಸುತ್ತ ಹಿರಿಯರು ಹೆದರಿಕೊಂಡು ಮಗುವನ್ನು ಹಾದಿಗೆ ತರಲು ಹಗಲಿರುಳು ಆ ವಿಷಯವಾಗಿಯೇ ಮಾತನಾಡಿ ಮಕ್ಕಳಿಗೆ ಹೆದರಿಸುವರು. 'ಬೇಡ', ಎಂಬುದನ್ನು ಇನ್ನಿಷ್ಟು ಮಾಡುವದು ಮಕ್ಕಳ ಸ್ವಭಾವ. ಹೀಗಾಗಿ ಮಗುವಿನ ತಲೆಯಲ್ಲಿ ಆ ವಿಷಯವು ಇನ್ನಿಷ್ಟು ಬೇರೂರಿ ನಿಲ್ಲುವದು. ಮನೆಯವರೆಲ್ಲರೂ ತನ್ನನ್ನೇ ಮಾತಾಡಿಸಬೇಕು. ತಾನೇ ಎಲ್ಲರ ಕಣ್ಮಣಿ ಯಾಗಬೇಕೆಂದು ಹಂಬಲಿಸುವುದು ಅವರ ಸ್ವಭಾವ. ತಮ್ಮ ವಿಶಿಷ್ಟ ನಡತೆಯಿಂದ ಹಿರಿಯರು ತಮಗಾಗಿ ತುಂಬ ಚಿಂತೆ ವಹಿಸುವರು. ತಾನೇ ಅವರ ವಿಚಾರದ ಕೇಂದ್ರವಾಗುವೆವೆಂದುಕೊಂಡು ಮಕ್ಕಳು ಒಂದು ಬಗೆಯ ಸಮಾಧಾನಪಟ್ಟು ಕೊಳ್ಳುವರು. ಹಿರಿಯರು ದೂಷಿಸುವರೆಂಬ, ದಂಡಿಸುವರೆಂಬ ಮೂಲಕವೆ ತಮ್ಮ ಚಟಗಳಲ್ಲಿ ಹಟದಿಂದ ಅವರು ಮುಂದರಿಯುವರು ! ಆದ್ದರಿಂದ ಹಿರಿಯರು ತಾವು ವಹಿಸುವ ಜಾಗೃತೆಯ ಬಗ್ಗೆಯೇ ಜಾಗೃತರಾಗಿ ಇರಬೇಕು. ಮಕ್ಕಳೊಂದಿಗೆ ಇಂಥ ವಿಷಯದ ವಿಷಮವರ್ತನದ ಪ್ರಶ್ನೆಗಳನ್ನು ಬಿಟ್ಟೂ ಬಿಡದೆ ಎತ್ತಿ ಮಾತನಾಡಬಾರದು. ಮಕ್ಕಳ ಇತರ ತೊಡಕುಗಳಂತೆಯೇ ಸಾಮಾನ್ಯ ವಾಗಿ ಈ ವಿಷಯವನ್ನೂ ಎಣಿಸಬೇಕು. ಮಕ್ಕಳಿಗೆ ತಾವು ವಿಚಿತ್ರವಾಗಿ ಗಾಬರಿ

ಯಾಗಿ ಚಿಂತಿಸುತ್ತಿರುವುವನ್ನು ತೋರಿಸಿಕೊಳ್ಳದಿದ್ದರೆ ಮುಂದಿನ ಕೆಲಸವು ಎಷ್ಟೋ ಸುಲಭವಾಗುವುದು.

ಕೆಲವೊಮ್ಮೆ ತಾಯಿಯು ಮಗುವನ್ನು ಮುದ್ದಾಡುವ ಬಗೆಯೇ ಆದರ ಲಿಂಗ ಚೇಷ್ಟೆಗಳನ್ನು ಉದ್ರೇಕಗೊಳಿಸುತ್ತದೆ. ಅದರ ದುಷ್ಪರಿಣಾಮಗಳು ಆಗದೆ ಇರುವುದಿಲ್ಲ. ತಾಯಿಯ ಮೋಹಾಂಧತೆಯ ಈ ತರದ ಅತಿರೇಕವು ಕೂಸಿಗೆಂದೂ ಅಹಿತಕರವೇ ಆಗಿದೆ. ವಿಶೇಷ ಮುದ್ದಿನಿಂದ ಬೆಳೆದ ಕೂಸಿನ ಕಾಮುಕತೆಯು ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಹಿತವಾಗಿ, ಮಿತವಾಗಿರುವ ಕಾಮಪ್ರವೃತ್ತಿಯು ಅದಕ್ಕೆ ಗೊತ್ತೇ ಇರುವುದಿಲ್ಲ. ಜೀವನದ ಆದರ್ಶ, ಆಕಾಂಕ್ಷೆಗಳಿಗೂ ಕಾಮ ಪ್ರವೃತ್ತಿಯು ವ್ಯಕ್ತವಾಗುವ ರೀತಿಗೂ ಅತ್ಯಂತ ನಿಕಟ ಸಂಬಂಧವಿದೆ. ಬಾಳಿನಲ್ಲಿ ಎಲ್ಲರ ಚಿತ್ತಾಕರ್ಷಕನಾಗಿ ಬೆಳೆದು, ತಾನು ಗೆಲವುಗಾರನಾಗಬೇಕೆಂದು ಹೆಣಗುವ ವರಿಷ್ಠತೆಯ ಗುರಿಯ ವ್ಯಕ್ತಿಯು ಕಾಮ ಸಂಬಂಧದಲ್ಲಿಯೂ ಅದೇ ಗೆಲವು ಗಾರಿಕೆಯನ್ನೇ ಹಾರೈಸುವುದು ಸ್ವಾಭಾವಿಕವಾಗಿದೆ. ಹಲವು ಹೆಣ್ಣುಗಳನ್ನು ಆಳುವ ಗಂಡನೆಂದು ಎನಿಸಿಕೊಳ್ಳುವುದರಲ್ಲಿಯೇ ಹೆಮ್ಮೆ ಪಟ್ಟುಕೊಳ್ಳುವವರೂ ಉಂಟು. ಹೆಗ್ಗರಿಮೆಯನ್ನು ವ್ಯಕ್ತಪಡಿಸಿಕೊಳ್ಳುವ ಕೆಲವರ ರೀತಿಯಿದು. ಹಲವು ಪ್ರಣಯ ಸಂಬಂಧಗಳನ್ನು ಬೆಳಿಸಿ ಬುದ್ಧಿಪೂರ್ವಕವಾಗಿ ತಮ್ಮ ಕಾಮುಕ ಆಸಕ್ತಿಯನ್ನು ಪ್ರದರ್ಶಿಸಿಕೊಂಬುವವರು ಕೆಲವರು ಇರುತ್ತಾರೆ. ಈ ತರದ ಭಾವನೆಯಲ್ಲಿ ವರಿಷ್ಠತೆಯ (ಇತರರನ್ನು ಆಳುವ ಗೆಲುವುಗಾರಿಕೆಯ) ಅಭಾಸವಿದ್ದರೂ, ಇದು ಕೇವಲ ಅವರ ಕೀಳರಿಮೆಯನ್ನು ಹೆಗ್ಗರಿಮೆಯಾಗಿಸಿ ತೃಪ್ತಿಪಟ್ಟುಕೊಳ್ಳುವ ಒಂದು ರೀತಿ !

## ಲೈಂಗಿಕ ವಿಕೃತಿಯ ಮೂಲ

ಆದುದರಿಂದ ಇಂತಿವೆಲ್ಲ ಬಗೆಯ ಕಾಮುಕ ರೀತಿ, ನಡೆವಳಿಗಳ ಬುಡದಲ್ಲೆಲ್ಲ ಒಂದು ಬಗೆಯ ಕೀಳರಿಮೆಯೇ ಹುದುಗಿಕೊಂಡಿರುವುದು ಗೋಚರವಾಗುತ್ತದೆ. ಕೀಳರಿಮೆಯಿಂದ ಬಳಲುವಾತನು ಅದರ ಕಾಟದಿಂದ ಬಿಡುಗಡೆ ಹೊಂದಲು ಯಾವಾಗಲೂ ಸುಲಭವಾದ ಹಾದಿಯನ್ನೇ ಹುಡುಕುತ್ತಿರುತ್ತಾನೆ; ಬಾಳಿನ ಬಿಕ್ಕಟ್ಟಾದ ಮಿಕ್ಕ ಮಾರ್ಗಗಳನ್ನೆಲ್ಲ ಬಿಟ್ಟು ಕಾಮದ ದಾರಿಯಲ್ಲಿಯೇ ಮಿತಿಮೀರಿ ಮುಂದರಿಯುವುದು ಸುಲಭ ಎನಿಸುವುದು. ಇನ್ನು ಈ ದಾರಿಯಲ್ಲಿ ಭಿನ್ನ ಲಿಂಗದ ವ್ಯಕ್ತಿಯನ್ನು ತನ್ನೆಡೆಗೆ ಆಕರ್ಷಿಸಿಕೊಳ್ಳುವುದಕ್ಕೂ ಕೆಲವರು ಅಸಮರ್ಥರಾಗಿರುತ್ತಾರೆ. ಆ ಯೋಗ್ಯತೆಯೂ ತಮ್ಮಲ್ಲಿ ಇರುವುದಿಲ್ಲವೆಂಬುದರ

ಸೇಡನ್ನು ಇವರು ಇನ್ನೊಂದು ತೆರನಾಗಿ ತೀರಿಸಿಕೊಳ್ಳುತ್ತಾರೆ. ಭಿನ್ನ ಲಿಂಗದ ಬೆಸುಗೆಗಿಂತ ತಮ್ಮ ಲಿಂಗದವರ ಕೂಟವೇ ಇವರಿಗೆ ಸುಲಭವೆನಿಸಿ ಅದರಲ್ಲಿಯೇ ಆಸಕ್ತರಾಗುತ್ತಾರೆ. ಇದಕ್ಕೆ ಕೆಲವೊಮ್ಮೆ ಕೌಟುಂಬಿಕ ವಾತಾವರಣವೂ ಕಾರಣ ವಾಗುತ್ತದೆ. ಮನೆಯಲ್ಲಿ ತನ್ನೊಂದಿಗೆ ಬೆಳೆಯುವ ಹುಡುಗಿಯರ ಮತ್ತು ಹಿರಿಯ ಹೆಂಗಸರ (ಅಕ್ಕ ತಾಯಂದಿರ) ಕೈಕೂಸಾಗಿ ಬೆಳೆದು ಸ್ತ್ರೀಯೆಂದೊಡನೆ ತಾಯಿ ಅಥವಾ ಅಕ್ಕನಂತೆ ಮೇಲ್ಮೆಯವರು, ತನ್ನ ಮೇಲೆ ಅಧಿಕಾರ ನಡಿಸಿ ಆಳುವವರು ಎಂಬ ದೃಢ ನಂಬುಗೆಯಾಗಿ ಬಿಟ್ಟವರಲ್ಲಿ, ಹೆಂಗಸರನ್ನು ಸೆಳಕೊಳ್ಳುವಷ್ಟು ಸಾಮರ್ಥ್ಯವು ತಮ್ಮಲ್ಲಿ ಇಲ್ಲವೆಂಬ ವಿಚಾರವು ಆ ಹುಡುಗರಿಗೆ ತಿಳಿಯದಲೆಯೇ ಅವರಲ್ಲಿ ಮನೆ ಮಾಡುವ ಸಂಭವವಿದೆ. ಇದಕ್ಕೆ ವಿಪರೀತವಾಗಿ ಹೆಂಗಸರು ತೀರ ಕಠೋರ ವೃತ್ತಿಯವರೂ, ಟೀಕಾ ಪ್ರವೃತ್ತಿಯವರೂ ಇದ್ದು, ಅಂಥ ಹೆಣ್ಣು ಜಾತಿಯ ಸಂಪರ್ಕವು ಸ್ವಲ್ಪವೂ ಸುಖಕರವಾಗಲೀ ಸುಕರವಾಗಲೀ ಅಲ್ಲವೆಂದು ಕೆಲವು ಹುಡುಗರು ತಾವು ಚಿಕ್ಕಂದು ಕಂಡ ಚೆಂಡಿ ತಾಯಿ ಅಥವಾ ಬೇರೆ ಹೆಂಗಸರ ಮೇಲಿಂದ ದೃಢವಾಗಿ ಗೃಹಿಸಿಬಿಡುವದುಂಟು. ಈ ಬಗೆಯ ಪರಿಣಾಮವಾಗಿ ಒಬ್ಬ ಹುಡುಗನು ಹೆಣ್ಣಿನಿಂದ ನಾಲ್ಕು ಹೆಜ್ಜೆ ದೂರವಿರುವದಕ್ಕೆ ಹವಣಿಸ ಹತ್ತಿದನು. ಹೆಣ್ಣಿನ ಹಗೆಯಾಗಿ ಹದಗೆಟ್ಟು ನಡೆಯಲಾರಂಭಿಸಿದನು. ನಿಸರ್ಗದ ವಿರುದ್ಧ ನಡೆವ ಅಪೇಕ್ಷೆಯುಳ್ಳವನಾದನು. ಪಲವು ಬಾರಿ ಎಳೆ ಮಕ್ಕಳನ್ನು ದಂಡಿಸಿ, ಪೀಡಿಸುವುದರಲ್ಲಿ ಇವರಿಗೆ ಮೆಚ್ಚುಗೆಯೆನಿಸುವದು. ಸ್ವತಃ ಯಾತನೆಯನ್ನು ಅನುಭವಿಸಿ ಬಳಲುವುದರಲ್ಲಿಯೂ ಆಸಕ್ತಿಯೆನಿಸುವದು. ಇಂಥ ಪೀಡೆಯಾತನೆಯ ವಾಸ್ತವ ಇಲ್ಲವೇ ಕಲ್ಪಿತ ಅನುಭವದಲ್ಲಿಯೇ ಕಾಮವಾಸನೆಯ ತೃಪ್ತಿಯನ್ನು ಪಡೆಯಬಹುದು. ಇಂಥವರು ಭಯಚಕಿತರಾದಾಗ ಆ ನಿರ್ವಿಣ್ಣ ಅವಸ್ಥೆಯಲ್ಲಿಯೇ ಕಾಮಸಂತೃಪ್ತಿಯ ಸಮಾಧಾನವನ್ನು ಪಡೆಯುವದುಂಟು.

ಜನರಿಗೆ ತಮ್ಮ ನಡೆವಳಿಯಲ್ಲಿರುವ ಅಸಂಬದ್ಧತೆಯ ಎಚ್ಚರವಿರುವದು ಕಡಿಮೆ. ಚಿಕ್ಕಂದಿನಲ್ಲಿ ಒಂದು ಸಣ್ಣ ತಪ್ಪು ಚಟವು ಬೇರೂರಿಕೊಂಡರೆ, ಮುಂದೆ ದೊಡ್ಡ ವರಾದ ಬಳಿಕ ಅದರ ದುಷ್ಪರಿಣಾಮಗಳು ಕಾಣಿಸಿಕೊಳ್ಳಲಾರಂಭಿಸುವವು. ಪ್ರೌಢ ರಾದ ಮೇಲೆ ೨೫-೩೦ ವರ್ಷದ ವಯಸ್ಸಿನಲ್ಲಿ ವ್ಯಕ್ತಿಯ ಹದಗೆಟ್ಟ ಬಾಳಿನ ಬಗೆಯನ್ನು ತಿದ್ದುವುದು ತೀರ ಬಿಗಿಯಾಗುತ್ತದೆ. ಯೋಗ್ಯವಾದ ಉಪಾಯ ಯೋಜನೆಯ ಸಮಯವು ಎಳೆ ವಯಸ್ಸೇ ಸರಿ. ಆದರೆ ಎಳೆ ವಯಸ್ಸಿನಲ್ಲಿ ತಂದೆ ತಾಯಿಗಳೊಂದಿಗಿರುವ ಮನಸಿನ ತೊಡಕಿನ ಸಂಬಂಧಗಳ ಮೂಲಕವಾಗಿಯೇ ಮಕ್ಕಳು ಹಲವು ಸಾರೆ ಅಡ್ಡದಾರಿಗೆ ಬಿದ್ದಿರುತ್ತಾರೆ. ತುಂಟ ಮಕ್ಕಳು ತಂದೆ ತಾಯಿಗಳ ವಿರುದ್ಧ ಸೇಡು ತೀರಿಸಿಕೊಳ್ಳುವದಕ್ಕಾಗಿಯೇ ಬುದ್ಧಿಪೂರ್ವಕವಾಗಿ

ಲಿಂಗದ ಆಟವಾಡುವರು. ಇದು ಬೆಂಕಿಯು ಕೂಡ ಸರಸವಾಡಿದಂತೆ ಎಂಬುದು ಆಗ ತಿಳಿಯುವುದಿಲ್ಲ. ಮುಂದೆ ಕೆಟ್ಟ ಮೇಲೆ ಬುದ್ಧಿ ಬರುವದು! ಆಗ ಮಾಡುವದೇನು? ಮಿಡುಕುವದೊಂದೇ ಉಪಾಯ! ತಂದೆ ತಾಯಿಗಳೊಂದಿಗೆ ಏನಾದರೊಂದು ತಿಕ್ಕಾಟವಾದೊಡನೆಯೇ ಆ ರೊಚ್ಚಿನಲ್ಲಿ ಕಾಮ ಕೃತ್ಯದಲ್ಲಿ ತೊಡಗುವ ಹುಡುಗ ಹುಡುಗಿಯರ ಉದಾಹರಣೆಗಳುಂಟು. ತಂದೆ ತಾಯಿಗಳು ಲೈಂಗಿಕ ವಿಷಯದಲ್ಲಿ ಅಸಹನೆಯುಳ್ಳವರೆಂದು ಗೊತ್ತಿದ್ದರೆ ಈ ಬಗೆಯಾಗಿ ಹಿರಿಯರಿಗೆ ಬೇಡವಾದುದನ್ನು ಮಾಡಿಯೇ ತೀರುವದು ಮಕ್ಕಳ ವಿಶೇಷ ರೀತಿಯಾಗಿದೆ. ಮಕ್ಕಳಿಗೆ, ಅವರ ನಡೆನುಡಿಗಳ ಸುಪರಿಣಾಮ ಅಥವಾ ದುಷ್ಪರಿಣಾಮಗಳನ್ನು ಅವರಿಗೇ ಅನುಭವಿಸಬೇಕಾಗುತ್ತದೆ; ಎಂಬುದನ್ನು ಚಿಕ್ಕಂದಿನಿಂದಲೇ ಮನಗಾಣಿಸಿ ಕೊಟ್ಟರೆ, ಇಂತಹ ಆತ್ಮನಾಶಕ ಕೆಲಸಗಳಲ್ಲಿ ಅವರು ಆಸಕ್ತಿಯನ್ನು ವಹಿಸುವದು ಕಡಿಮೆಯಾಗುವದು. ಮಕ್ಕಳ ಚಿಂತೆಯ ಭಾರವನ್ನೆಲ್ಲ ಹಿರಿಯರು ತಾವೇ ವಹಿಸಿದರೆ, ಮಕ್ಕಳು ತಮ್ಮ ಮೇಲೆ ಏನೂ ಹೊಣೆಗಾರಿಕೆಯಿಲ್ಲದವರ ಹಾಗೆ ಮನಬಂದಂತೆ ನಡೆಯಹತ್ತುವರು. ಆದುದರಿಂದ ಹುಡುಗರಿಗೆ ಅವರ ಕರ್ಮಫಲಗಳನ್ನು ಅವರಿಗೆ ಉಣ್ಣಬೇಕಾಗುವದೆಂದು ಮನಗಾಣಿಸಬೇಕು. ತಮ್ಮ ಅಕೃತ್ಯಗಳಿಂದ ತಂದೆತಾಯಿಗಳಿಗೆ ಆಗುವ ಕೇಡಿಗಿಂತಲೂ ತಾವೇ ಹೆಚ್ಚು ಅನರ್ಥಕ್ಕೆ ಈಡಾಗಿ ಪೇಚಾಡಬೇಕಾಗುವದೆಂಬುದು ಅವರಿಗೆ ಚೆನ್ನಾಗಿ ಮನವರಿಕೆಯಾದರೆ ಮಕ್ಕಳು ಸಹಸಾ ಅಡ್ಡದಾರಿ ಹಿಡಿಯುವದಿಲ್ಲ.

ಈ ವಿಷಯದಲ್ಲಿ ಮೂರು ವರುಷದ ಬುದ್ಧಿ ನೂರು ವರುಷದವರೆಗೆ ಎಂಬುದಂತೂ ಸರಿಯೇ. ಅಲ್ಲದೆ ದೇಶದ ರಾಜಕೀಯ ಆರ್ಥಿಕ ಸ್ಥಿತಿಗತಿಗಳ ಪ್ರಭಾವವೂ ಹೆಣ್ಣು ಗಂಡಿನ ಕಾಮ ಪ್ರವೃತ್ತಿಯ ಮೇಲೆ ತುಂಬ ಆಗುತ್ತಿರುತ್ತದೆ. ರಾವಣೀಯ ರಾಜ್ಯ ಪದ್ಧತಿಯು ಜನಗಳ ಕರ್ತೃತ್ವಕ್ಕೆ ಏನೂ ಎಡೆಗೊಡದೆ ದೇಶವನ್ನು ಹಿಂಡಿ ಸಿಪ್ಪೆ ಮಾಡುತ್ತಿರುವಾಗ ಜನಸಾಮಾನ್ಯರ ಪರಾಕ್ರಮ ಪೌರುಷಗಳಿಗೆ ಕಾಮುಕತೆಯ ಹೊರತು ಬೇರೆ ಏನು ದಾರಿ? ದೇಶದ ಪ್ರಗತಿಯು ಕಟ್ಟಾಗಿದೆ. ಪರಾಕ್ರಮ ಪುರುಷಾರ್ಥಗಳು ಕೆಟ್ಟು ಹೋಗಿವೆ. ಸಾಮುದಾಯಿಕ ಅಪಯಶಸ್ಸಿನ ನಿರಾಶೆಯ ದುರ್ದಶೆಯಲ್ಲಿ ಆತ್ಮವಿಶ್ವಾಸವು ನಷ್ಟವಾಗಿದೆ. ಈ ಪರಿಸ್ಥಿತಿಯಲ್ಲಿ ಮನಸ್ಸಿಗೆ ಉತ್ತೇಜಕವೆಂದರೆ ಉತ್ತಾನ ವಿಷಯಾಸಕ್ತಿಯೊಂದೇ ಇದೆ. ಇಂಥ ಸಂಕ್ರಮಣಾವಸ್ಥೆಯಲ್ಲಿ ಹೆಣ್ಣಿನ ಹುಚ್ಚೇ ಗಂಡಿನ ಪರಮ ಪುರುಷಾರ್ಥವಾಗುವದು. ಅದರಂತೆ ರಾಜ್ಯಕ್ರಾಂತಿ, ಮಹಾಯುದ್ಧ ಮುಂತಾದ ಕ್ಷೋಭ ವಿಪ್ಲವಗಳ ಕಾಲದಲ್ಲೂ ಈ ಬಗೆಯ ಕಾಮುಕತೆಯ ಅತಿರೇಕವು ಕಂಡು ಬರುತ್ತದೆ.

ಹೋರಾಟ, ಹೊಡೆದಾಟಗಳಂತಹ ಭಾರಿ ಕೆಲಸಗಳ ತರುವಾಯ ಆ ದಣುವನ್ನು ಕಳೆದುಕೊಳ್ಳಲು ಕಾಮವಿಕಾರಗಳಲ್ಲಿ ಮೈಮರೆಯುವದೊಂದು ಮಾನವನ ಸ್ವಭಾವವೇ ಆಗಿದೆ. ಪೋಲಿಸರು ಈ ಕೀಲವನ್ನು ಚೆನ್ನಾಗಿ ಬಲ್ಲರು. ಆದುದರಿಂದ ಕೊಲೆ ಸುಲಿಗೆಗಾರರನ್ನು ಹಿಡಿಯುವದಕ್ಕಾಗಿ ಪೋಲಿಸರು ಮೊದಲು ಎಲ್ಲ ಸೂಳೆಗೇರಿಗಳನ್ನು ಹುಡುಕುವರು. ಅಪರಾಧಿಗಳು ಹೀಗೆ ಲಿಂಗಾಸಕ್ತರಾಗುವದೇಕೆ ? ಅಪರಾಧಕೃತ್ಯವು ಮುಗಿದ ಕೂಡಲೇ ಅವರಿಗೆ ತಮ್ಮ ನ್ಯೂನತೆಯ ಅಳುಕು ತೀವ್ರವಾಗಿ, ಅದರಿಂದ ಮುಕ್ತರಾಗಲು ಏನಾದರೊಂದು ದಾರಿ ಹುಡುಕುವರು. ಕಾಮಭೋಗದಲ್ಲಿ ತನ್ಮಯರಾಗುವರು. ಆಗ ಅವರಿಗೆ ತಮ್ಮ ಆ ಸಂಕುಚಿತ ವಾತಾವರಣದಲ್ಲಿ ತಮ್ಮ ಹೆಣ್ಣಿನೆದುರು ತಾವೇ ಇಂದ್ರರು, ತಾವೇ ಚಂದ್ರರೆಂದೆನಿಸಿ ಹೆಗ್ಗಳಿಮೆಯ ಹಿಗ್ಗು ದೊರೆಯುವದು. ಸಂಕುಚಿತವಾದ ಇಂತಹ ಸ್ವಾನಂದ ಸಾಮ್ರಾಜ್ಯದಲ್ಲಿ ಲೋಲಾಡಿ ಕೃತಾರ್ಥರಾದೆವು, ಜನ್ಮ ಸಾರ್ಥಕವಾಯಿತೆಂದು ಗ್ರಹಿಸಿ ಸಂತೋಷ-ಸಮಾಧಾನದಿಂದ ಇರುವ ಪ್ರಯತ್ನಪಡುವ ಕೀಳರಿಮೆಯ ಮನೋವಿಕೃತಿಯ ಜನಗಳು ಹಲವರಿದ್ದಾರೆ.

ಮನುಷ್ಯನೆಂಬರೆ ಹಸಿವೆಯಿಲ್ಲದಾಗಲೂ ಉಣ್ಣುವ ಪ್ರಾಣಿ; ನೀರಡಿಕೆಯಿಲ್ಲದಾಗಲೂ ಕುಡಿಯುವ ಪ್ರಾಣಿ, ಮತ್ತು ಬೆದೆಯಿಲ್ಲದಾಗಲೂ ಬೆಸೆಯುವ ಪ್ರಾಣಿ, ಎಂದು ಒಬ್ಬ ಫ್ರೆಂಚ ವಿದ್ವಾಂಸನು ಮನುಷ್ಯನ ವ್ಯಾಖ್ಯೆ ಮಾಡಿರುವನು. ಇದು ಒಂದು ರೀತಿಯಲ್ಲಿ ತೀರ ಸತ್ಯವಾಗಿದೆ. ನಮ್ಮ ಇತರ ಭೋಗ ಪ್ರವೃತ್ತಿಗಳ ಅತಿರೇಕದಷ್ಟೇ ಸಂಭೋಗ ಪ್ರವೃತ್ತಿಯೂ ಮರ್ಯಾದೆ ಮೀರುತ್ತದೆ. ಯಾವುದೇ ಒಂದು ಚಟವು ಮಿತಿಮೀರಿದರೆ, ಅಥವಾ ಯಾವದು ಒಂದೇ ಆಸಕ್ತಿಯು ಹೆಚ್ಚಾದರೆ, ಅಂತವರ ಬಾಳಿನ ತೂಕವು ತಪ್ಪುವದು; ಹದಗೆಡುವದು. ಇಂಥ ಕೆಲವೊಂದು ಅಳತೆಗೆಟ್ಟ ಅಭ್ಯಾಸದ, ಮಿತಿಮೀರಿದ ಆಸಕ್ತಿಯ ಒತ್ತಾಯವೇ ವ್ಯಕ್ತಿಯನ್ನು ಆಳಹತ್ತುವದು. ಹಣದ ಹುಚ್ಚು ಹಿಡಿದ ಜಿಪುಣರು ಕೇವಲ ದುಡ್ಡನ್ನು ಕೂಡಿಡುವದಕ್ಕಾಗಿ ತಾವು ಸುಖ ಪಡದೇ ಕುಟುಂಬಸ್ಥರಿಗೂ ತಿನ್ನಗೊಡದೆ ಹೇಗೆ ತಮ್ಮ ಬಾಳನ್ನು ಹಾಳು ಮಾಡಿಕೊಳ್ಳುರೆಂಬುವದು ಎಲ್ಲರಿಗೂ ಗೊತ್ತಿರುವ ಮಾತು. ಇದರಂತೆ ಕೆಲವರಿಗೆ ಸ್ವಚ್ಛತೆಯ ಹುಚ್ಚು ! ತೊಳೆದವರಲ್ಲಿ, ತಿಕ್ಕುವದರಲ್ಲಿಯೇ ತಮ್ಮ ಅಮೌಲಿಕ ದಿನದ ಹಗಲನೆಲ್ಲ ಹಾಳು ಮಾಡುವರಲ್ಲದೆ ನಟ್ಟಿರುಳವರೆಗೂ ನಿದ್ದೆಗೆಟ್ಟು ಇವರು ಮಾಡುವದೇನು ? ಮಡಿ ! ಸ್ವಚ್ಛತೆ ! ಸ್ವಚ್ಛತೆಯನ್ನೇ ಮಿತಿಮೀರಿದ ಮಹತ್ವದಿಂದ ನೋಡುವರು ಇನ್ನು ತಿನ್ನುವ ಭಾಂದಸಿಗರೇ ಕೆಲವರು. ಇವರ ವಿಚಾರಗಳು ಯಾವಾಗಲೂ ತಿಂಡಿತಿನಿಸುಗಳನ್ನು ಕುರಿತೇ. ಇವರಂತೆ ಭಗವೇ ಭಾಗ್ಯವೆಂದು ನಡೆವವರು ಇದ್ದಾರೆ. ಇವರಿಗೆ ಯೋನಿ-ಲಿಂಗಗಳ ಹೊರತು ಬೇರೆ

ಮಾತೇ ಇಲ್ಲ. ಕಾಮಾಸಕ್ತಿಗಾಗಿಯೇ ಬದುಕಿರುವಂತೆ ಆಯುಷ್ಯವನ್ನು ಸೂರೆ ಗೈಯುತ್ತಾರೆ. ಇಂತಹ ತೂಕವಿಲ್ಲದ ಜೀವಿಗಳಿಂದ ಸಮಾಜಕ್ಕೆ ಆಗಬೇಕಾದಷ್ಟು ಉಪಯೋಗವು ಆಗುವುದಿಲ್ಲ. ತಮಗೆ ಸರಿಯಾದ ಧ್ಯೇಯವನ್ನು ಕಣ್ಣೆದುರಿಗೆ ಇಟ್ಟುಕೊಂಡು ಹೊರಡದೆ ಇರುವುದರಿಂದಲೇ ಬಾಳಿನಲ್ಲಿ ಈ ಜನಗಳು, ಹೀಗೆ ಹವಗೇಡಿಗಳು ಆಗುತ್ತಾರೆ. ತಮಗೂ ಸಮಾಜಕ್ಕೂ ಹಾನಿಯನ್ನುಂಟು ಮಾಡು ತ್ತಾರೆ. ಇಂತಹ ಆತ್ಮಘಾತಕರು ಕೊನೆಗೆ ಸಮಾಜಕ್ಕೇ ಬಯ್ದು ಬೊಗಳುವ ಪ್ರತಲುಬ್ಧರಾಗುತ್ತಾರೆ. ತಮ್ಮ ತೂಕ ತಪ್ಪಿದ ಎಚ್ಚರವೇ ಈ ಜನಕ್ಕೆ ಇರುವದಿಲ್ಲ. ಕಾಮ ವಾಸನೆಯನ್ನಾಗಲಿ ಅಥವಾ ಉಳಿದ ಯಾವದೇ ಬಗೆಯ ಛಾಂದಸತನ ವನ್ನಾಗಲಿ ಹೋಗಲಾಡಿಸಿ ಒಂದು ವ್ಯಕ್ತಿಯನ್ನು ಸರಿಯಾದ ದಾರಿಗೆ ಹಚ್ಚಲು ಒಂದೇ ಉಪಾಯವುಂಟು. ಅದು ಚಿಕ್ಕಂದಿನಿಂದಲೂ ಯೋಗ್ಯವಾದ ಗುರಿಯೊಂದು ಮಕ್ಕಳ ಕಣ್ಣೆದುರು ಯಾವಾಗಲೂ ಇರುವಂತೆ ಎಚ್ಚರಪಡಬೇಕು. ಆ ಗುರಿ ಯನ್ನು ಮುಟ್ಟುವದಕ್ಕಾಗಿ ತಾವು ದಾರಿಯನ್ನು ಕ್ರಮಿಸುತ್ತಿರುವೆವೆಂಬ ಅರಿವು ಅವರಲ್ಲಿ ಯಾವಾಗಲೂ ಜಾಗೃತವಾಗಿರುವಂತೆ ಮಾಡಬೇಕು. ಕಣ್ಣ ಮುಂದಿರ ತಕ್ಕ ಗುರಿಯು ಸಾಮಾಜಿಕತೆಗೂ ರಾಷ್ಟ್ರೀಯತ್ವಕ್ಕೂ ಯಾವಾಗಲೂ ಪೋಷಕ ವಾಗಿರತಕ್ಕದ್ದು.

ಯೋಗ್ಯ ಗುರಿಯ ನಿಟ್ಟಿನಲ್ಲಿ ನಡೆದಾಗ ಇನ್ನೊಂದು ಅನರ್ಥವಾಗದಂತೆಯೂ ಲಕ್ಷಿಸಬೇಕು. ಧ್ಯೇಯ ಸಾಧನೆಗಾಗಿ ಎಲ್ಲ ಪ್ರವೃತ್ತಿಗಳನ್ನೂ ಆಸಕ್ತಿಗಳನ್ನೂ ನಿಯಂತ್ರಣದಲ್ಲಿಟ್ಟುಕೊಳ್ಳುವ ಭರದಲ್ಲಿ ಮೂಲಪ್ರವೃತ್ತಿಗಳನ್ನೇ ಸಮೂಲ ನಷ್ಟ ಪಡಿಸುವ ಹುಚ್ಚು ಹಂಬಲವು ತಲೆಯಲ್ಲಿ ಸೇರುವ ಭೀತಿಯಿದೆ. ಮಿತಾಹಾರವೆಂದರೆ ಹಸಿವನ್ನೇ ಕೊಲ್ಲುವದಲ್ಲ! ಕಾಮುಕತೆಯು ಅಪಾಯಕರ. ಎಂದರೆ ಮದುವೆಯೇ ಬೇಡವೆಂತಲ್ಲ! ಯಾವುದೇ ಆಗಲಿ, ಹಿಡಿತದಲ್ಲಿದ್ದುದು ಹಿತಕರ, ಹವಣ ಮೀರಿದರೆ ಪ್ರಾಣಘಾತುಕ. ಹವಣದಿಂದ ಹೆಜ್ಜೆ ಹಾಕುವ ಯೋಗದ ವಿವೇಕವೇ ಬಾಳಿನ ಧರ್ಮವಾಗಿರಬೇಕು. ಸುಧಾರಣ ಜೀವನದ ಶೈಲಿಯಲ್ಲಿ ಕಾಮತೃಪ್ತಿಗೂ ಯೋಗ್ಯ ವಾದ ಅವಕಾಶವು ಇದ್ದೇ ಇದೆ. ಆದರೆ ಕಾಮವಾಸನೆಯೇ? ಎಲ್ಲ ಮನೋ ವಿಕೃತಿಗಳ ಮೂಲವೆಂಬುದು ಅಷ್ಟು ಸತ್ಯವಲ್ಲ. ಸಮಂಜಸವೂ ಅಲ್ಲ. ನಿಜಸ್ಥಿತಿಯು ಇದಕ್ಕೆ ವಿಪರೀತವಾಗಿದೆ. ಮನೋವಿಕೃತಿಯುಳ್ಳವರು ನಿಜವಾಗಿಯೂ ಸರಿಯಾಗಿ ರತಿಸುಖವನ್ನು ಅನುಭವಿಸುವುದಕ್ಕೆ ಅಸಮರ್ಥರಾಗಿರುತ್ತಾರೆ. ನರಗುಂದಿದ ಈ ಜನರ ಕಾಮಭಾವನೆಗಳೆಲ್ಲ ಬಾಯ್ಮಾತಿನಲ್ಲೇ ಹೊರಹೊಮ್ಮುತ್ತಿರುತ್ತವೆ. ಆದುದರಿಂದ ಇಂಥವರಿಗೆ 'ನಿಮಗೆ ಕಾಮಸಂಯಮದಿಂದ ಮಾನಸಿಕ ಪೀಡೆ ಯಾಗುತ್ತದೆ. ಈ ಬಗೆಯ ಸಂಯಮವು ಅಪಾಯಕರ' ಎಂದೂ ಹೇಳಿದರೆ

ಅವರನ್ನು ಇನ್ನಿಷ್ಟು ಅನರ್ಥಕಾರಿಯಾದ ದಾರಿಗೆ ಹಚ್ಚಿದಂತೆಯೇ ಸರಿ. ಇಂಥ ವರಿಗೆ ಸರಿದಾರಿಗೆ ತರುವ ಒಂದೇ ಒಂದು ಉಪಾಯವೆಂದರೆ, ಇವರು ಯಾವಾಗಲೂ (ರಾಷ್ಟ್ರಕ್ಕೆ ತಾವು ಯಾವುದಾದರೊಂದು ಬಗೆಯಿಂದ ಉಪ ಯುಕ್ತರಾಗುವ) ಶ್ರೇಷ್ಠವಾದ ಒಂದು ಗುರಿಯನ್ನು ಕಣ್ಣೆದುರು ಇರಿಸಿಕೊಳ್ಳ ಬೇಕು. ಮತ್ತು ತಮ್ಮ ಶಕ್ತಿಗಳನ್ನು ಸಾಮಾಜಿಕ ಉಪಯುಕ್ತತೆಯ ಆ ದಿಕ್ಕಿ ನಲ್ಲಿಯೇ ವಿನಿಯೋಗಿಸಬೇಕು. ಇದರಿಂದ ಇವರ ಲೈಂಗಿಕ ಆಸಕ್ತಿಯು ತನ್ನ ತಾನೆ ಕುಗ್ಗುವದು, ಕಾಮವಿಕೃತಿಯು ರತಿವಿಲಾಸದಿಂದ ತೃಪ್ತವಾದೀತೆಂದು ಗೃಹಿಸುವುದು ತಪ್ಪು. ಬೆಂಕಿಯಲ್ಲಿ ತುಪ್ಪವನ್ನು ಸುರುವಿ ಅದನ್ನು ನಂದಿಸುವೆ ನೆಂಬ ಎಗ್ಗನಂತೆ, ಈ ದಾರಿಯಿಂದ ಅದು ವಿಪರೀತ ಹೆಚ್ಚಾದೀತೇ ವಿನಾ ಕಡಿಮೆ ಯಾಗದು. ಬಾಳಬಗೆ (ಜೀವನದ ಆದರ್ಶ) ತಪ್ಪಿದುದರಿಂದಲೇ ಈ ಬಗೆಯಾಗಿ ಲಿಂಗದ ಸೆಳವಿನಲ್ಲಿ ಸಿಕ್ಕು ಬಿದ್ದಿರುವುದುಂಟು. ಆ ತಪ್ಪಿದ ಜೀವನ ಶೈಲಿಯನ್ನು ತಿದ್ದಿಕೊಳ್ಳುವುದು ಎಂದರೆ ಸಮಾಜಕ್ಕೆ-ರಾಷ್ಟ್ರಕ್ಕೆ ಉಪಯುಕ್ತರಾಗುವ ರೀತಿಯಲ್ಲಿ ಜೀವಿಸಲಾರಂಭಿಸುವದೇ ಲೈಂಗಿಕ ಆಸಕ್ತಿಯಿಂದ ಪಾರಾಗುವ ಒಂದು ಶ್ರೇಷ್ಠವಾದ ಉಪಾಯವಾಗಿದೆ.

ಆದ್ದರಿಂದ ವ್ಯಕ್ತಿಮನೋವಿಜ್ಞಾನಿಯ ನಿಃಸಂದಿಗ್ಧವಾದ, ನಿಶ್ಚಿತವಾದ ಅಭಿಪ್ರಾಯ ವೇನೆಂದರೆ, ಸುಖಿಯಾದ ದಾಂಪತ್ಯ ಜೀವನವೇ ಕಾಮುಕತೆಯ ತೊಂದರೆಗಳನ್ನು ಸಮಾಧಾನಕರವಾಗಿ ಪರಿಹರಿಸುವ ಏಕಮೇವ ಉಪಾಯವಾಗಿದೆ. ಕಾಮವು ಮನುಷ್ಯನ ಮೂಲ ಪ್ರವೃತ್ತಿಗಳಲ್ಲೊಂದು.. ಹಸಿವು ನೀರಡಿಕೆಗಳಂತೆ. ಹಸಿವು ಉಂಟೆಂದು ಲೋಕವನ್ನೇ ನುಂಗಬೇಕೆಂದ ಹಾಗಲ್ಲ. ಕಾಮವು ಸಮಾಜಹಿತಕ್ಕೂ, ರಾಷ್ಟ್ರಹಿತಕ್ಕೂ ಅವಿರೋಧವಾಗಿರಬೇಕು. ಅದೇಕೆ, ರಾಷ್ಟ್ರಹಿತ ಪೋಷಕವಾಗುವಂತೆ ಅದನ್ನು ಉಪಯೋಗಿಸಿಕೊಂಬುವಲ್ಲಿಯೇ ಮಾನವನ ಜಾಣ್ಮೆಯಿದೆ. ಸಾಮಾಜಿಕ ಧ್ಯೇಯ-ಧೋರಣಗಳನ್ನು ಗಮನಿಸದೇ, ಸೂಚಿಸಲಾಗುವ ಕಾಮತೃಪ್ತಿಯ ಉಪಾಯಗಳು ಯಾವವೂ ಯುಕ್ತವಲ್ಲ. ಕಾಮುಕ ಮನೋವಿಕೃತಿಯುಳ್ಳವರಿಗೆ ಮದುವೆಯ ಬಂಧನವು ಬೇಡವಾಗಿರುತ್ತದೆ. ಏಕೆಂದರೆ ಅವರು ಹೇಡಿಗಳಾ ಗಿರುತ್ತಾರೆ. ಅವರಿಗೆ ಮದುವೆಯಾಗಿ, ಸಂಸಾರ ಬಂಧನಗಳಲ್ಲಿರುವದಕ್ಕೆ ಬೇಸರ. ಸಂಸಾರದ ತೊಂದರೆಗಳನ್ನು ಎದುರಿಸುವದಕ್ಕೆ ಎದೆಗಾರಿಕೆಯಿರುವದಿಲ್ಲ. ಯಾವದೊಂದಕ್ಕೆ ಅಂಟಿಕೊಂಡು ಅದನ್ನು ಸರಿಯಾಗಿ ಪ್ರಾಮಾಣಿಕವಾಗಿ ಕೊನೆ ಗಾಣಿಸುವ ಸ್ವಭಾವವು ಇವರಲ್ಲಿ ಇರುವದಿಲ್ಲ. ಆದುದರಿಂದ ತಮ್ಮ ಸ್ವೈರಾಚಾರಗಳ ಮೇಲೆ ಒಳ್ಳೇ ತಾತ್ವಿಕ ವಿಚಾರಗಳ ಶಾಲು ಹೊದಿಸಿ ತಮ್ಮ ಲಿಂಗ ಭಕ್ತಿಯನ್ನು ಮರೆಯಿಸಬೇಕೆನ್ನುತ್ತಾರೆ; ಮೆರೆಯಿಸಬೇಕೆನ್ನುತ್ತಾರೆ! ವಿವಾಹ ಬಂಧನಗಳು

ಕೃತ್ರಿಮ; ಸೃಷ್ಟಿಯ ಉಳಿದ ಪ್ರಾಣಿಗಳಂತೆ (ಪಶುಗಳಂತೆ ?) ಸಹಜ ಸ್ವಾಭಾವಿಕವಾಗಿ ವಿಹರಿಸಬೇಕು, ಎಂದು ಕೆಲರ ತತ್ವಜ್ಞಾನ; ಆಜನ್ಮ ಮದುವೆಯ ಕಾಲ್ತೊಡಕೇಕೆ ? ವರುಷ, ಎರಡು ವರುಷದ ಕರಾರಿನ ಕೂಟವು ಲೇಸು,–ಇದರಿಂದ ಯಾರ ಸ್ವಾತಂತ್ರ್ಯವೂ ಅನಿಯಮಿತ ಕಾಲಾವಧಿಯವರೆಗೆ ಹಾಳಾಗುವುದಿಲ್ಲ. ಕೊನೆಯವರೆಗೆ ಯಾರೂ ಯಾರ ಕೊರಳ ಗುದ್ದಿಯಾಗಬೇಕಿಲ್ಲ, ಎಂದು ಇನ್ನು ಕೆಲರು. ಒಗೆತನದ ಪ್ರಯೋಗಕ್ಕಾಗಿ ಕೆಲದಿನ ಕೂಡಿರುವ ರೂಢಿಯು ಅಗತ್ಯ; ಆ ಮೇಲೆ ಆಗುವ ಮದುವೆ ದೃಢವಾಗಿ ಆಗುವದೆಂಬ ಎನಿಕೆ ಕೆಲರದು. ಮದುವೆಯೇ ಏಕೆ ? ಒಲವಿರುವವರೆಗೆ ಕೆಳೆಯ ಕೆಳದಿಯರಾಗಿದ್ದು ನಲಿದಾಡುವದರಲ್ಲೇ ಜೀವನದ ಸೊಗಸು; ಎಂಬ ಬಿನ್ನಾಣದವರು ಕೆಲರು. ಇಂತು ಇವೆಲ್ಲವೂ ಒಂದಿಲ್ಲೊಂದು ನೆಪದಿಂದ ಸಾಮಾಜಿಕ ಹೊಣೆಗಾರಿಕೆಯಿಂದ ತಲೆತಪ್ಪಿಸಿಕೊಳ್ಳುವ ಹೊಂಚುಗಳು ! ಜೀವನದ ಸೊಗಸನ್ನು ಸೂರೆಗೆಯ್ಯಲು–ದೋಚಿಕೊಂಡು ಉಪಭೋಗಿಸಲು ಹುಡುಕಿದ ಕಳ್ಳದಾರಿಗಳಿವು, ಈ ಅಡ್ಡ ಹಾದಿಯಿಂದ ಹೋಗಿ ಸಂಸಾರದ ಸಾಮಾಜಿಕ ಹೊಣೆಯನ್ನು ತಪ್ಪಿಸಿಕೊಳ್ಳಬೇಕೆಂಬ ಹೇಡಿ ಮನೋಭಾವನೆಯೆ ಇದರಲ್ಲಿ ವ್ಯಕ್ತವಾಗುತ್ತಿದೆ. ವೈವಾಹಿಕ ಸುಖದ ದಾರಿ ಕಷ್ಟಕವಿರಬಹುದು ಆದರೆ ಸುಲಭವಾಗಿ ಬಂದುದು ಸುಲಭವಾಗಿ ಹೋಗುವುದು. ಕಷ್ಟದಿಂದ ಗಳಿಸಿದ ಸುಖವೇ ನಿಜವಾಗಿ ಹಿತಪರಿಣಾಮಕಾರಿಯಾಗುವದು, ಎಂಬುದನ್ನು ಮರೆಯಲಾಗದು. ●

# ಗೊನೆ ಅಥವಾ ಗ್ರಂಥ-ಸಾರ

ಈ ವರೆಗೆ ವಿವರಿಸಿದಂತೆ, ವ್ಯಕ್ತಿ ಮನೋವಿಜ್ಞಾನದ ಮೊದಲು ಮತ್ತು ಕೊನೆ ಯೆಲ್ಲವೂ ಕೀಳ್ಮೆಯ ಅರಿವಿನಲ್ಲಿಯೇ ಇದೆ. ವ್ಯಕ್ತಿ ಮನೋವಿಜ್ಞಾನದ ಅಡಿಗಲ್ಲೇ ಕೀಳರಿಮೆ ಮಾನವನ ಎಲ್ಲ ಗೆಲವುಗಳ ಉಗಮವು ಆತನ ಅಥವಾ ಆವಳ ಕೀಳರಿಮೆಯಲ್ಲಿಯೇ ಇದೆ. ಅದರಂತೆ ಆತನ ಸಾಮಾಜಿಕ ಹದಗೇಡಿ ನಡೆವಳಿಗೂ ಕೀಳರಿಮೆಯೇ ಕಾರಣವಾಗಿದೆ. ಯೋಗ್ಯವಾದ ಸುಸಾಧ್ಯವಾದ ವರಿಷ್ಠತೆಯ ಗುರಿಯು, ವಾಸ್ತವ ಆದರ್ಶವು ನಮ್ಮ ಹೃದಯ, ಬುದ್ಧಿಗಳನ್ನು ಸೆಳೆಯಲು ಇಲ್ಲದಾಗಲು ಕೀಳರಿಮೆಯು ತಲೆದೋರಿ, ಅದರ ನೋವು ತೀವ್ರವಾಗುತ್ತ ನಡೆಯುವದು. ಈ ನ್ಯೂನ ಭಾವನಾವಿಕಾರದ ಕಾಟ ತಪ್ಪಿಸಲು-ತಾನು ಕ್ಷುಲ್ಲಕನು ಕಿರುಕುಳನು ಎಂಬ ಅರಿವಿನಿಂದ ಮನದಲ್ಲಿ ಉಂಟಾಗುತ್ತಿರುವ ವೇದನೆಗಳನ್ನು ಕಳೆದುಕೊಳ್ಳಲು, ಮನುಷ್ಯನು ತಾನೊಬ್ಬ ಹೆಗ್ಗಡೆ-ಹೆಚ್ಚಿನವ-ಅಸಾಮಾನ್ಯ ಎಂಬ ಭ್ರಾಂತಿಯನ್ನುಂಟು ಮಾಡಿಕೊಳ್ಳುವದು ಅನಿವಾರ್ಯವಾಗುತ್ತದೆ. ಇದುವೆ ಹೆಗ್ಗಳಿಕೆಯ ಅರಿಮೆ-ಹೆಗ್ಗರಿಮೆ. ಈ ಹೆಗ್ಗರಿಮೆಯ ಸಂಭ್ರಮದಲ್ಲಿ, ಹುಸಿ ಹೆಮ್ಮೆಯ ವ್ಯರ್ಥ ಹಿಗ್ಗಿನಲ್ಲಿ. ಸುಳ್ಳು ಯಶಸ್ವಿತೆಯ ಆನಂದದ ಆಭಾಸದಲ್ಲಿ ಸಮಾಧಾನ ಪಡುವನು ! ಇಂತವರು ಸಮಾಜಕ್ಕೆ ಉಪಯುಕ್ತವಾದ ರೀತಿಯಲ್ಲಿ ಬಾಳಿ ಬದುಕಲು ಅಸಮರ್ಥರಾಗಿರುತ್ತಾರೆ.

ಮಾನವನ ಮನೋರಚನೆಯ ರಹಸ್ಯವಿದು. ಕುಂಬಾರನು ಮಡಿಕೆಯನ್ನು ಮಾಡುವಾಗ ಅದು ಹಸಿಯಿರುವಾಗ, ಆರಂಭದಲ್ಲಿಯೆ ತನಗೆ ಬೇಕಾದ ರೂಪ ಆಕಾರಗಳನ್ನು ಅದಕ್ಕೆ ಕೊಡಬಹುದು. ಕಾಲಮೀರಿದ ಬಳಿಕ ಅದು ಕೈಮೀರುವದು. ಅದರಂತೆ ಮಗುವಿನ ಜೀವನ ಶೈಲಿಯನ್ನು ರೂಪಿಸುವ ಕೆಲಸವು ನಾಲ್ಕು ಅಥವಾ ಐದುವರುಷದೊಳಗಾಗಿಯೇ ಆಗಬೇಕು. ಆಮೇಲೆ ಅದನ್ನು ತಿದ್ದುವದು ದುಸ್ತರ. ಅಂದು ಬಿತ್ತಿದುದನ್ನೆ ಮುಂದೆ ಬೆಳೆದುಕೊಳ್ಳಬೇಕು. ಆಗ ಬೇವಿನ ಬೀಜ ಬಿತ್ತಿ, ಮುಂದೆ ರಸಾಲ ಫಲಗಳನ್ನು ಹಾರೈಸಿದರೆ ! ಆದುದರಿಂದ ನಾಲ್ಕು-ಐದರ ವರೆಗಿನ ವಯಸ್ಸೆಂದರೆ ಅದೊಂದು ಅಮೌಲಿಕ ಕಾಲ. ಮಕ್ಕಳ ಮುಂದಿನ ಬಾಳಿನ ಪಡಿಯಚ್ಚು ಈಗಲೆ ನಿಶ್ಚಿತವಾಗಿ ಬಿಡತಕ್ಕದ್ದಿರುತ್ತದೆ. ನಾಳಿನ ಬಾಳು ಸುಖಕರ ಅಥವಾ ದುಃಖಕರವಾಗುವದು, ನಾಲ್ಕೈದನೆಯ ವರುಷದ ಸುಮಾರಿಗೆ ಅದು ರೂಪಗೊಳ್ಳುವ ರೀತಿಯನ್ನೇ ಸಂಪೂರ್ಣವಾಗಿ ಅವಲಂಬಿಸಿದೆ.

ಇನ್ನು ಶಿಶುಸಂವರ್ಧನೆಯ ಕಾಲದಲ್ಲಿ ನೆನಪಿಡಬೇಕಾದ ಮುಖ್ಯ ತತ್ವವೊಂದಿದೆ : ಮಕ್ಕಳಲ್ಲಿ ಸರಿಯಾದ ಸಾಮಾಜಿಕ ಆಸಕ್ತಿಯನ್ನು ಹುಟ್ಟಿಸಬೇಕು; ಬೆಳೆಯಿಸಬೇಕು. ಅವರ ಕಣ್ಣೆದುರು ಸ್ಪಷ್ಟವಾದ ಸುಂದರವಾದ ಒಳ್ಳೆಯ ಗುರಿಯನ್ನು ನಿಲ್ಲಿಸಬೇಕು. ಆ ಗುರಿಯು ಸಮಾಜಕ್ಕೆ (ರಾಷ್ಟ್ರೀಯತ್ವಕ್ಕೆ) ಉಪಯುಕ್ತವೂ, ಪೋಷಕವೂ ಆಗಿರಬೇಕು. ಹೀಗೆ ಮಕ್ಕಳು ಆದರ್ಶದಲ್ಲಿ ಆಸಕ್ತಿಯುಳ್ಳವರಾಗಿ ಸಮಾಜಕ್ಕೆ ಉಪಯುಕ್ತರಾಗಿ, ಅವರೊಡನೆ ಹೊಂದಿಕೊಂಡು ಹೋಗಲು, ಕೂಡಿ ಕೆಲಸ ಮಾಡಲು ಕಲಿಯಬೇಕು. ಇದರಿಂದಲೇ ಮಕ್ಕಳಲ್ಲಿ ಕೀಳರಿಮೆಯಾಗಲಿ ಹೆಗ್ಗರಿಮೆಯಾಗಲಿ ತೀಕ್ಷ್ಣವಾದ ವಿಕೃತ ರೂಪವನ್ನು ತಾಳದೆ, ಅದು ಹಿತವಾದ ಮಿತವಾದ ಅಳತೆಯಲ್ಲಿಯೇ ಉಳಿಯುವದು. ಮಕ್ಕಳು ಬಾಳಿನಲ್ಲಿ ಉಪಯುಕ್ತರಾಗಿ, ನಾಲ್ಕು ಮಂದಿಗೆ ಬೇಕಾಗಿ ಮುಂದೆ ಬದುಕಲು ಸಮರ್ಥರಾಗುತ್ತಾರೆ.

ಸಮಾಜದ ಆಧಾರ, ಬೆಂಬಲಗಳು ಇಲ್ಲದೆ ಯಾವ ವ್ಯಕ್ತಿಯೂ ಬದುಕಲಾರದು. ಮನುಷ್ಯನು ವೈಯಕ್ತಿಕವಾಗಿ ಕನಿಷ್ಠನೂ, ನಿಃಶಕ್ತನೂ ಆಗಿರುವ ಮೂಲಕವೇ, ಆತನು ಸಾಮಾಜಿಕವಾಗಿ ಜೀವಿಸಿ, ಸಾಮುದಾಯಿಕ ಸಂಘಟನೆಯ ಬೆಂಬಲ ಪಡೆಯಲು ಪ್ರಯತ್ನಿಸುತ್ತಾನೆ. ಆದ್ದರಿಂದ ಸಾಮಾಜಿಕ ಆಸಕ್ತಿ, ಸಾಮಾಜಿಕ ಸಹಕಾರದ ಶಕ್ತಿಗಳಲ್ಲಿಯೇ ವ್ಯಕ್ತಿ ಜೀವನದ ಸಫಲತೆಯಿದೆ. ಸಾಯುಜ್ಯ ಮುಕ್ತಿಯಿದೆ. ●

---

‘ಜೀವನವಿಜ್ಞಾನ’ ಎಂಬ ಹೆಸರಿನಿಂದ ಇಲ್ಲಿ ಸೇರ್ಪಡೆಯಾದ ಈ ಗ್ರಂಥದ ಶಿರೋನಾಮೆ ‘ಬಾಳಿನ ಗುಟ್ಟು’ ಎಂಬುದಾಗಿದೆ. ಲೇಖಕರ ಸಲಹೆಯ ಮೇರೆಗೇ ಹೆಸರಲ್ಲಿ ಈ ಬದಲಾವಣೆ ಮಾಡಿದೆ.

— ಸಂ.

# ಮನೋವಿಜ್ಞಾನ - ವಿಕಾಸ

ಪಶುಪಕ್ಷಿಗಳಂತೆ ಮನುಷ್ಯನೂ ಒಂದು ಪ್ರಾಣಿ. ಶರೀರಚನೆಯಲ್ಲಿ ಉಳಿದ ಪ್ರಾಣಿ ವರ್ಗದಿಂದ ಮಾನವನೂ ಭಿನ್ನವಾಗಿಲ್ಲ. ಈ ಮಾತನ್ನು ಡಾರ್ವಿನ್ ವಿಕಾಸವಾದವು ಚೆನ್ನಾಗಿ ಮನದಟ್ಟಾಗುವಂತೆ ಮಂಡಿಸಿರುತ್ತದೆ. ಮನುಷ್ಯನೂ ಪಶುಜಾತಿಗೆ ಸೇರಿದವನು; ಪಶುವರ್ಗದಲ್ಲಿ ಒಂದು ಪಂಗಡ ಎಂಬುದು ನಿಜವಿದ್ದರೆ ಆತನು ಮಿಕ್ಕ ಪ್ರಾಣಿ ವರ್ಗಗಳನ್ನೆಲ್ಲ ಹಿಂದಿಕ್ಕಿ, ಅವೆಲ್ಲ ವರ್ಗದ ತಲೆಮೆಟ್ಟಿ ನಿಂತು, ಚರಾಚರ ಸೃಷ್ಟಿಯೆಲ್ಲವನ್ನೂ ಆಳುವ ಹಂಚಿಕೆಯಲ್ಲಿರುವನಲ್ಲ ! ಇದು ಆತನಿಗೆ ಹೇಗೆ ತಾನೆ ಸಾಧ್ಯವಾಯ್ತು ? ಮಾನವನ ಮೊದಲಿಗನೆಂದು ಸಿದ್ಧವಾಗಿರುವ ಮಂಗರಾಯನಿಗೇಕೆ ಈ ಸಾಮರ್ಥ್ಯವು ಪ್ರಾಪ್ತವಾಗಲಿಲ್ಲ ? ಮನುಷ್ಯನು ಸಸ್ತನಿ ವರ್ಗದ ಪ್ರಾಣಿ; ನಾಯಿಯೂ ಇದೇ ಗುಂಪಿಗೆ ಸೇರಿದ್ದು. ಆದರೆ ನಾಯಿಗೂ ಮನುಷ್ಯನಿಗೂ ಏನು ಮಹದಂತರ ? ಕಸುವಿನಲ್ಲಿ, ಹಾರಿಕೆಯಲ್ಲಿ ಏರಿಕೆಯಲ್ಲಿ ಮಾನವನನ್ನು ಕಾಲಕಸವಾಗಿಸಬಲ್ಲ ಆನೆ, ಸಿಂಹ, ತಿಮಿಂಗಿಲುಗಳಲ್ಲಿ ಆವುದೊಂದೂ ಸೃಷ್ಟಿರಂಗದಲ್ಲಿ ಮಾನವನನ್ನು ನಾಯಕ ಪಟ್ಟದಿಂದ ತಳ್ಳಲು ಸಮರ್ಥವಾಗದಿರುವದಕ್ಕೆ ಕಾರಣವೇನು ?

'ಮಾನವನ ಮಿದುಳೇ ಆತನ ಶ್ರೇಷ್ಠತೆಯ ಮುಖ್ಯ ಕಾರಣ' ಎಂದು ಕೆಲವರು ಉಸಿರಬಹುದು. ಆದರೆ ಮಿದುಳಿರುವ ಪ್ರಾಣಿಯು ಮಾನವನೊಬ್ಬನೇ ಅಲ್ಲ. ಮನುಷ್ಯನ ಜಟಿಲವಾದ ರಚನೆಯನ್ನು ಹೋಲುವಂತಹದೇ ಮಿದುಳು ತಿಮಿಂಗಲಕ್ಕೂ ಉಂಟು. ಆದರೆ ತಿಮಿಂಗಲವು ಇದುವರೆಗೆ ಸೃಷ್ಟಿಯ ಪ್ರಭುತ್ವಕ್ಕಾಗಿ ಮನುಷ್ಯನೊಡನೆ ಸ್ಪರ್ಧೆಮಾಡಿದ ಸಂಗತಿಯು ಯಾರಿಗೂ ಕಂಡುಬಂದಿಲ್ಲ !

ಮನುಷ್ಯನಿಗೆ ಶ್ರೇಷ್ಠ ತರಗತಿಯ ಮನಸ್ಸು ಇರುವದೆಂದು ಇನ್ನೊಬ್ಬ ಜಾಣರು ಕಿರುದನಿಯಲ್ಲಿ ಸೂಚಿಸಬಹುದು. ಅವನಿಗೆ (ಅಥವಾ ಅವಳಿಗೆ) ಬುದ್ಧಿ, ವಿವೇಕ, ಕಲ್ಪಕತೆಗಳೆಂಬ ಶಕ್ತಿಗಳುಂಟೆಂದು ಮತ್ತೊಬ್ಬರು ಪುಷ್ಟಿ ಕೊಡಬಹುದು. ಇಷ್ಟೇ ಅಲ್ಲ, ಕೇವಲ ಮನುಷ್ಯನಿಗೇ ದಯಾಘನನಾದ ಶ್ರೀಮನ್ನಾರಾಯಣನು ಕರುಣಾಮಯನಾಗಿ ಅಮರವಾದ ಚಿಚ್ಛಕ್ತಿಯನ್ನು ಆತ್ಮೋದ್ಧಾರಕ್ಕಾಗಿ ದಯಪಾಲಿಸಿರುವನೆಂಬುದು ನಿಮ್ಮ ಮಂಕು ಬುದ್ಧಿಗೆ ಹೊಳೆದಿಲ್ಲವೇ ? ಎಂದು ಬೇರೊಬ್ಬರು ನಸು ಉಪಹಾಸದಿಂದ ಪ್ರಶ್ನೆ ಕೇಳಬಹುದು.

ಇವೆಲ್ಲ ಉತ್ತರ, ಅಭಿಪ್ರಾಯಗಳಲ್ಲಿಯೂ ಒಂದೊಂದು ಸತ್ಯಾಂಶವಿದೆ. ಆದರೆ

ಇವೆಲ್ಲವುಗಳ ನಿಶ್ಚಿತಾರ್ಥವೇನು ? ಬುದ್ಧಿ, ವಿವೇಕ, ಕಲ್ಪಕತೆ, ಮನಸ್ಸು, ಆತ್ಮ–ಎಂದರೇನು ? ಮೇಲಣ ಉತ್ತರಗಳು ಪ್ರಶ್ನೆಯನ್ನು ತಿಳಿಯಾಗಿಸಿ ಬಗೆ ಹರಿಸುವ ಬದಲು ಇನ್ನಿಷ್ಟು ಗಡಚು ಮಾಡುವವು, ನಮ್ಮನ್ನು ಇನ್ನೂ ಹೆಚ್ಚಿನ ತೊಡಕಿನ ಸಮಸ್ಯೆಗಳಲ್ಲಿ ಸಿಲುಕಿಸುವವು ! ಈ ಪಶ್ನೆಗಳನ್ನು ಸರಿಯಾಗಿ ಬಿಡಿಸಿ ಸಮರ್ಪಕವಾಗಿ ಉತ್ತರ ಕೊಡುವದೂ ಮನೋವಿಜ್ಞಾನದ ಒಂದು ಹಿರಿಗುರಿ ಯಾಗಿದೆ.

ಇಂದಿನ ಯಾವುದೇ ವೃತ್ತಪತ್ರಿಕೆ ಮಾಸಪತ್ರಿಕೆಯನ್ನು ತೆರೆದು ನೋಡಿರಿ. ಮಾನಸ ಶಾಸ್ತ್ರದ ನಿರ್ದೇಶವಿಲ್ಲದ ಒಂದೂ ಸಂಚಿಕೆ ಕಂಡು ಬರುವದಿಲ್ಲ. ಜಾಗತಿಕ ಯುದ್ಧ, ಅಂತರ್‌ರಾಷ್ಟ್ರೀಯ ಶಾಂತಿ, ಶಿಕ್ಷಣ, ನ್ಯಾಯವಿಚಾರಣೆ, ವ್ಯಾಪಾರೋ ದ್ಯೋಗ, ಧರ್ಮಸಂಸ್ಥೆ, ಹೆಚ್ಚೇನು ? ಮನುಷ್ಯಜೀವನಕ್ಕೆ ಒಪ್ಪಿದ ರೀತಿನೀತಿಗಳ ಕುರಿತು ಮನೋವೈಜ್ಞಾನಿಕ ಮೀಮಾಂಸೆಯಿಂದ ತುಂಬಿದ ವಿವೇಚನೆಗಳುಳ್ಳ ಬರಹ ಭಾಷಣಗಳು ಎಲ್ಲೆಡೆಗೆ ಕಂಡು ಕೇಳಬರುತ್ತವೆ. ತಮ್ಮ ಮಾತುಕತೆಯಲ್ಲಿ ಮನೋವಿಜ್ಞಾನದ ಒಂದೆರಡು ಶಬ್ದಗಳನ್ನು ಸೇರಿಸದೇ ತಮ್ಮ ಸುಶಿಕ್ಷಿತತನವು ಸಾಕಷ್ಟು ಸಿದ್ಧವಾಗುವದಿಲ್ಲವೆಂತಲೂ ಕೆಲವರು ತಿಳಿದಂತಿದೆ !

ಸಾಮಾನ್ಯ ವ್ಯವಹಾರದಲ್ಲಿ ಕೂಡ ಮನೋವಿಜ್ಞಾನದ ಪರಿಭಾಷೆಯು ಬಳಿಕೆಯಲ್ಲಿ ಬಂದಿದೆ. ನೆರೆಮನೆಯವರು ನಮ್ಮನ್ನು ಬೇಸರಪಡಿಸಿದರೆ ನಾವು ತಿಳಕೊಂಡಷ್ಟು ಮಹತ್ವವನ್ನು ನಮಗೆ ಕೊಡುವದಿಲ್ಲವಾದರೆ-ಆತನಿಗೆ "ನ್ಯೂನಗಂಡ" ವೋ ಇನ್ನಾವ "ಗಂಡ" (complex) ವೋ ಆಗಿದೆಯೆಂದು ಹೇಳಿ ನಮ್ಮ ಸೇಡು ತೀರಿಸಿ ಕೊಂಡು ಬಿಡುತ್ತೇವೆ ! 'ಮಾನಸಿಕ ವಿಕೃತಿ' 'ಭಾವನೆಗಳ ದಮನ' 'ಭೀತಿಗಳು' ಮುಂತಾದ ಬಾಯ್ತುಂಬ ಶಬ್ದಾವಲಿಗಳಿಂದ ನಾವು ನಮ್ಮ ಪಾಂಡಿತ್ಯ ಪ್ರದರ್ಶನ ಮಾಡಿ ಕೊಳ್ಳುತ್ತೇವೆ. ಬುದ್ಧಿವಂತರೆನಿಸಿಕೊಳ್ಳುವವರು, ಸಾಕಷ್ಟು ಬಲ್ಲಿದರು, ಶಿಷ್ಟರು ಒಂದೆಡೆಗೆ ಕಲೆತರೆ ಅವರ ಹರಟೆಗಳ ಸಾವಿರ ಸುತ್ತುಗಳ ನಡುವೆ ಒಂದಿಲ್ಲೊಂದು ಮನೋವಿಜ್ಞಾನದ ಗಂಟು ತಲೆ ಎತ್ತದೇ ಬಿಡುವದೇ ಇಲ್ಲ.

ಮನೋವಿಜ್ಞಾನವು ಮಾನವನಷ್ಟೇ ಪುರಾತನ. ತನ್ನ ಅರಿವು ತನಗಾದಂದಿನಿಂದಲೇ, ಮಾನವನು ತನ್ನ ಮನಸ್ಸಿನ ಆಳವನ್ನು ತಕ್ಕಮಟ್ಟಿಗೆ ಅರಿತು ಬೆಳೆದನು. ಆದರೂ ಪ್ರತ್ಯೇಕ ವಿಜ್ಞಾನವೆಂಬ ಹೆಸರಿಗೆ ಒಪ್ಪುವಂತೆ ಸುವ್ಯವಸ್ಥಿತವಾದ ಹಾಗೂ ಸುಸಂಗತವಾದ ಶಾಸ್ತ್ರೀಯ ಪದ್ಧತಿಯಲ್ಲಿ ಕಳೆದ ಶತಮಾನದಿಂದ ಮನೋ ವಿಜ್ಞಾನದ ಪ್ರಪಂಚದಲ್ಲಿ ಒಂದು ಒಂದೇಕೆ ? ಹಲವು ಕ್ರಾಂತಿಗಳ ಒಂದು

ಶ್ರೇಣಿಯೇ ತಲೆದೋರಿತು. ಆದ್ದರಿಂದ ಮನೋವಿಜ್ಞಾನವೆಂತ ಏಕವಚನದಲ್ಲಿ ಮಾತನಾಡುವದಕ್ಕಿಂತ ಮನೋವಿಜ್ಞಾನದ ಸಾಂಪ್ರದಾಯಗಳು ಎಂಬ ಬಹು ವಚನ ಪ್ರಯೋಗವೇ ಸವ್ಯಕ್ಕೆ ಸುರಕ್ಷಿತವಿರುತ್ತದೆ.

ಯುಗ ಯುಗಾಂತರಗಳ ಹಿಂದಿನ ಒಂದಾನೊಂದು ಕಾಲದಲ್ಲಿ ಗವಿಯ ಗಂಡ ಸಾಗಲೀ ಹೆಂಗಸಾಗಲೀ ತನ್ನ ಮನಸ್ಸಿನಲ್ಲಿ ಹೊಳೆತ ವಿಚಾರಗಳಿಂದಾಗಲೀ, ಕನಸಿನಲ್ಲಿ ಸುಳಿದಾಡಿದ ವಿಚಾರಗಳಿಂದಾಗಲಿ ತೊಂದರೆಪಡುತ್ತಿರು ವಾಗ ಆ ಆದಿಮಾನವನು ಅವುಗಳ ಹುಟ್ಟು ಕಟ್ಟುಗಳನ್ನು ಹುಡುಕಲು ಹೊರಟಾಗಲೇ ಒಂದು ಬಗೆಯ ಮನೊವಿಜ್ಞಾನವು ಹೊಳೆತಿತ್ತು. ಆದರೆ ಆಧುನಿಕ ಮನೋವಿಜ್ಞಾನದ ಸಾಂಪ್ರದಾಯಗಳು, ಆಧುನಿಕ ಮೋಟರ ರೇಡಿಯೋ ಸಿನೇಮಾಗಳಷ್ಟೇ ಅಭಿನವವಾಗಿವೆ. ಹೀಗೆ ಪುರಾತನಕ್ಕಿಂತ ಪುರಾತನ ವಾದ ಈ ಶಾಸ್ತ್ರವು ಇಂದು ಅದ್ಯತನದಲ್ಲಿ ಅದ್ಯತನವೂ ಆಗಿ ಮೆರೆಯುವಂತಹ ಕಾಯಾಕಲ್ಪದ ಪುಟವನ್ನು ಹೇಗೆ ಪಡೆಯಿತು ? ಈ ಕಾಯಾಕಲ್ಪವೇ ಮನೋ ವಿಜ್ಞಾನದಲ್ಲಿ ಒದಗಿವ ಕ್ರಾಂತಿಯು. ಈ ಕ್ರಾಂತಿಯು ಸ್ವರೂಪವೇನು ?

ಈ ಕ್ರಾಂತಿಯು ಮೊದಲಿನ ತೊದಲ್ನುಡಿಗಳು ಹಲವು ಶತಮಾನಗಳ ಅಚೆಯಿಂದಲೇ ಅಸ್ಪಷ್ಟವಾಗಿ ಕೇಳಿ ಬರುತ್ತಿದ್ದವು. ಆದರೂ ಅದು ಪ್ರೌಢಗಂಭೀರವಾಣಿಯಾಗಿ ಪರಿಣಮಿಸಿದ್ದು ಇಂದಿನ ಶತಮಾನದಲ್ಲಿಯೇ.

## ಮನೋವಿಜ್ಞಾನವು ಶಾಸ್ತ್ರವೇ ?

ಕಳೆದ ೧೯ ನೆಯ ಶತಮಾನದಲ್ಲಿ ಕೂಡ ಮನೋವಿಜ್ಞಾನವು ಒಂದು ಊಹಾತ್ಮಕ ವಾದ ವಿಷಯವಾಗಿತ್ತು ; ಹರಟೆಯ ಜಗಲಿಯ ಮಾತಿನ ಕಂತೆ ಪುರಾಣ ದಂತಿದ್ದಿತು. ಘಟಪಟಾದಿಯ ಚರ್ಪಟ ಪಂಜರಿಯಾಗಿತ್ತು. ಅಭ್ಯಾಸದ ಕೋಣೆಯಲ್ಲಿ ಹುಟ್ಟಿ ಜನಸಂಪರ್ಕದಿಂದ ಅಲಿಪ್ತವಾಗಿ ಶಾಸ್ತ್ರರೂಪವಾಗಿ ಬೆಳೆಯಿತು. ಆದರೆ ೨೦ ನೆಯ ಶತಮಾನದೊಂದಿಗೆ ಅದರಲ್ಲಿ ಹೊಸದೊಂದು ಮಾರ್ಪಾಟವಾಯಿತು. ಮನೋವಿಜ್ಞಾನಿಯು ತನ್ನ ಶಾಸ್ತ್ರಿತನದ ಶಾಲನ್ನು ಬದಿಗಿರಿಸಿ ಪ್ರಾಧ್ಯಾಪಕತನದ ನಿಲುವಂಗಿಯನ್ನು ಗೂಟಕ್ಕೇರಿಸಿ ದಿನಗೆಲಸದ ಕಣಕ್ಕಿಳಿದನು ; ಪಾಠಶಾಲೆಯಿಂದ ಪ್ರಯೋಗಶಾಲೆಯಲ್ಲಿ ಹೊಕ್ಕನು. ಪ್ರತ್ಯಕ್ಷ ಅನುಭವ, ಪ್ರಯೋಗಗಳ ಬೆಂಬಲ ವಿಲ್ಲದ ಕಾಲ್ಪನಿಕ ಊಹೆಗಳು ತಾರ್ಕಿಕ ಸಿದ್ಧಾಂತಗಳು ಶಾಸ್ತ್ರ, ವಿಜ್ಞಾನ ಎಂಬ ಹೆಸರಿಗೆ ಅರ್ಹವಾಗಲಾರವು. ಆಧುನಿಕ ಮನೋವಿಜ್ಞಾನಿಗಳಲ್ಲಿ ಅಗ್ರಗಣಿಗಳಾದ ವಿಲಿಯಮ್ ಜೇಮ್ಸ ಎಂಬುವರು ಹೀಗೆಂದಿರುವರು: 'ಜೀವನಕ್ಕೆ ಪ್ರತ್ಯಕ್ಷವಾಗಿ

ಅತ್ಯಂತ ಸಮೀಪವಾಗಿ ಹೊಂದಿಕೊಂಡಿರುವ ವಿಜ್ಞಾನವೇ ಯಥಾರ್ಥವಾದ ವಿಜ್ಞಾನವು' ಅಲಿಫ್ರೆಡ್ ಎಡ್ಲರ್ ಎಂಬ ಇನ್ನೊಬ್ಬ ಆಧುನಿಕ ಮನೋವಿಜ್ಞಾನಿಯು ಅಂದಂತೆ 'ವಿಜ್ಞಾನದಲ್ಲಿ-ಜೀವನಕ್ಕೆ ನೇರವಾಗಿ ಸಂಬಂಧಿಸಿರುವ ವಿಜ್ಞಾನದಲ್ಲಿ-ತತ್ವ ಮತ್ತು ವಿನಿಯೋಗವು ಸಿದ್ಧಾಂತವೂ ಅದರ ವ್ಯವಹಾರಿಕ ಪ್ರಯೋಗವೂ ಪರಸ್ಪರ ಪೂರಕವಾಗಿವೆ.' ಈ ದೃಷ್ಟಿಯಂತೆ ಮನೋವಿಜ್ಞಾನವೂ ಇದೀಗ ಯಥಾರ್ಥವಾಗಿ ವಿಜ್ಞಾನವಾಗಿದೆ.

ಮನೋವಿಜ್ಞಾನವು ಒಂದು ನಿಶ್ಚಿತವಾದ ಶಾಸ್ತ್ರವಲ್ಲವೆಂದು ಕೆಲವರ ಮತ. ಇದಕ್ಕೆ ಉತ್ತರವಿಷ್ಟೇ : ಮನೋವಿಜ್ಞಾನವು ಹಾಗೆ ನಿಶ್ಚಿತವಾದದ್ದೆಂದೂ, ಆಗಲಿಕ್ಕಿಲ್ಲವೇನೋ. ಏಕೆಂದರೆ, ಮನೋವಿಜ್ಞಾನದ ವಿಷಯವು ಮನಸ್ಸು! ಮನಸ್ಸು ಅತ್ಯಂತ ಸೂಕ್ಷ್ಮವೂ ಚಂಚಲವೂ ಆದ ವಿಷಯವು! ಮನಸ್ಸಿನ ಒಳಒಳಗಣ ಪದರುಗಳನ್ನು ಜಿಡಿಸಿ ಊಹಿಸಿ, ಅನುಭವಿಸಿ ಅರಿತುಕೊಂಡ ಸಂಗತಿಗಳು ವಿಜ್ಞಾನ, ಗಣಿತ ಅಥವಾ ಪದಾರ್ಥವಿಜ್ಞಾನದಷ್ಟು ಹೇಗೆ ನಿಶ್ಚಯಾತ್ಮಕವಾದೀತು ? ಆದರೆ ಇಷ್ಟರಿಂದಲೇ, ಕೆಲವರು ಗ್ರಹಿಸುವಂತೆ ಮನೋವಿಜ್ಞಾನದ ಎಲ್ಲ ಗ್ರಹೀತ ಕೃತ್ಯಗಳೂ ಸಿದ್ಧಾಂತಗಳೂ ಅವುಗಳಿಂದ ಹೊರಡುವ ಪರಿಣಾಮಗಳೂ ಸಂಶಯಾಸ್ಪದಗಳೆಂದು ಅನ್ನುವುದು ಸಮಂಜಸ ವಾಗಲಾರದು. ಏಕೆಂದರೆ, ಸತ್ಯವೇ ಸಾಪೇಕ್ಷವಾಗಿದೆ. ಅದನ್ನು ಕಂಡುಕೊಳ್ಳಲು ಹೊರಟ ವಿಜ್ಞಾನವೂ ಪರಿವರ್ತನೆ ಪರಿವರ್ಧನೆಗಳನ್ನು ಹೊಂದುವದು ಅಪರಿಹಾರ್ಯ. ಒಮ್ಮೆ ಕಂಡ ಸತ್ಯಾಂಶವು ಕೊನೆಯ ವರೆಗೂ ನಿಶ್ಚಯಾತ್ಮಕವಾಗಿ ಇರಬೇಕೆಂಬ ಹಟವಿಟ್ಟುಕೊಂಡು, ಹಾಗಲ್ಲದ ಎಲ್ಲ ಜ್ಞಾನವೂ ಯೋಗ್ಯವಲ್ಲವೆಂದು ಗ್ರಹಿಸುವ ಮನೋವೃತ್ತಿಯನ್ನು ಸರಿಯೆಂದು ಒಪ್ಪಿಕೊಂಡರೆ, ಅನುಭವಜನ್ಯ ವಾದ, ಪ್ರಯೋಗಸಿದ್ಧವಾಗುವ, ಎಲ್ಲ ವಿಜ್ಞಾನವೂ ಸಂಬಲು ಅಯೋಗ್ಯವೆಂದು ಶಂಕಿಸಬೇಕಾದೀತು !

ಮನೋವಿಜ್ಞಾನದ ವಿರುದ್ಧ ಎತ್ತುವ ಮತ್ತೊಂದು ಆಕ್ಷೇಪವಿದೆ. ಈ ಆಕ್ಷೇಪವು ನಿಜವಾಗಿಯೂ ಮೇಲಿನ ಆಕ್ಷೇಪದ ಮರಿಯು. ಮನೋವಿಜ್ಞಾನವು ಇನ್ನೂ ಪ್ರಯೋಗಾವಸ್ಥೆಯಲ್ಲಿದೆ ಎಂದು ಆಕ್ಷೇಪ. ಇದಕ್ಕೆ ಉತ್ತರವಿಷ್ಟೇ: ಎಲ್ಲ ಶಾಸ್ತ್ರಗಳು-ವಿಜ್ಞಾನಗಳು-ಇದೇ ರೀತಿಯಾಗಿವೆ. ಮನುಷ್ಯಜೀವನವೇ ಪ್ರಯೋಗಾತ್ಮಕ ವಾದುದು. ಅದರ ನಿರೀಕ್ಷಣ ಪರೀಕ್ಷಣದ ಮೇಲೆ ನೆಲೆಗೊಂಡು ಶಾಸ್ತ್ರಗಳು ಒಮ್ಮೆಲೆ ಪರಿಪೂರ್ಣವಾಗಿ ಹೇಗೆ ಆದಾವು ? ಆದರೂ ಮನೋವಿಜ್ಞಾನವು ಆಕ್ಷೇಪಕರು ತಿಳಿದುಕೊಂಡಷ್ಟು ಪ್ರಯೋಗಾವಸ್ಥೆಯಲ್ಲಿ ಇಲ್ಲ. ಮನೋವಿಜ್ಞಾನದ

ವಿಕಾಸದ ಇತಿಹಾಸವನ್ನೇ ಸ್ವಲ್ಪ ಪರಾಮರಿಸಿದರೆ ಈ ಮಾತಿನ ಮನವರಿಕೆ ಯಾಗುವದು.

## ಮನೋವಿಜ್ಞಾನವು ಪ್ರಾಚೀನ

ಆಧುನಿಕ ಮನೋವಿಜ್ಞಾನವು ಕ್ರಾಂತಿಗೊಂಡಿದೆಯೆಂದು ಹಿಂದೆ ಹೇಳಿದೆಯಷ್ಟೇ. ಆದರೆ ಯಾವುದೇ ಕ್ರಾಂತಿಯು–ಅದು ಎಷ್ಟೇ ವಿಧ್ವಂಸಕ ಸ್ವರೂಪದ್ದಾಗಿರಲಿ ಎಷ್ಟೇ ಆಮೂಲಾಗ್ರ ಪರಿವರ್ತನೆಮಾಡುವಂತಹವಿರಲಿ-ಭೂತಕಾಲದಿಂದ ಪರಂಪರೆ ಯಿಂದ ಪೂರ್ಣವಾಗಿ ವಿಭಕ್ತವಾಗಿರಲಾರದು. ತಾನು ಧ್ವಂಸ ಮಾಡಲು ಹೊರಟ ಪುರಾತನ ಪರಂಪರೆಯ ಪದ್ಧತಿಗಳ ಹಲವು ಅಂಶಗಳನ್ನು ಪ್ರತಿಯೊಂದು ಕ್ರಾಂತಿಯೂ ತನ್ನ ಹೊಸ ರಚನೆಯ ರೀತಿಯಲ್ಲಿ ಅನಿವಾರ್ಯವಾಗಿ ಅರಗಿಸಿ ಕೊಳ್ಳುತ್ತದೆ. ಕಳೆದುಹೋಗದ ಅಳಿಸಬೇಕಾಗುವ ಪರಿಸ್ಥಿತಿಯೊಳಗಿನ ಪೋಷಕ ಅಂಶಗಳನ್ನು ಹೊಸ ವ್ಯವಸ್ಥೆಯಲ್ಲಿ ಪುನರ್ಘಟಿಸಿಕೊಳ್ಳಬೇಕಾಗುತ್ತದೆ. ಹೀಗೆ ವಿಧ್ವಂಸಕ ಸ್ವರೂಪದ ಕ್ರಾಂತಿಯಲ್ಲಿ ಕೂಡ ಪರಂಪರೆಯು ಪೂರ್ಣವಾಗಿ ಕಡಿದು ಹೋಗುವದಿಲ್ಲವೆಂದ ಮೇಲೆ, ವಿಧಾಯಕ ಸ್ವರೂಪದ ಕ್ರಾಂತಿಯಲ್ಲಿ ಪರಂಪರೆ ಯನ್ನು ಬಿಡುವ ಮಾತೆಂತು ಸಂಭವಿಸುವದು ? ನಮ್ಮ ಆಧುನಿಕ ಮನೋ ವಿಜ್ಞಾನವು ಮೂಲತಃ ರಚನಾತ್ಮಕ ವಿಧಾಯಕವಾಗಿರುವದು. ಅಂದಮೇಲೆ ಅದು ತನ್ನ ಪೂರ್ವವನ್ನು ಮರೆಯುವಂತಿಲ್ಲ; ಭೂತಕಾಲದಿಂದ ತೀರ ಬೇರೆಯಾಗಿ ಮಾರ್ಪಡುವದು ಶಕ್ಯವಿಲ್ಲ.

ಆದರೆ ಈ ಮಾತನ್ನು ನಾವು ನೆನಪಿಡುವದಿಲ್ಲ. ಹೊಸತು ಯಾವಾಗಲೂ ಕುತೂಹಲದ ವಿಷಯವಾಗುತ್ತದೆ. ಇಂದಿನ ಮನೋವಿಜ್ಞಾನದಲ್ಲಿಯ ಹೊಸ ಅಂಶಗಳನ್ನೆ ಎತ್ತಿ, ಮಂದಿ ಮೆಚ್ಚುವ ರೀತಿಯಲ್ಲಿ ಅವನ್ನು ಪ್ರಕಟಿಸುತ್ತಲಿರು ವದರಿಂದ ಮನೋವಿಜ್ಞಾನದ ಹೊಸ ರೂಪಗಳ ಕಡೆಗೇ ಜನರ ಲಕ್ಷ್ಯ ಹೆಚ್ಚು ಹೆಚ್ಚು ಸೆಳೆದಿದೆ. ಅದೇ ಮೇರೆಗೆ, ಶತಮಾನಗಳಿಂದ ಒಪ್ಪಿ ಬಂದ ಹಳೇ ತತ್ವಗಳ ಕಡೆಗೆ ಜಿಜ್ಞಾಸುಗಳ ಕಣ್ಣು ಹಾಯಲಿಲ್ಲ. ಉದಾಹರಣೆಗೆ ಇಂದಿನ ಮನೋ ವಿಶ್ಲೇಷಣದ ಸಿದ್ಧಾಂತವನ್ನೇ ಕೊಡಬಹುದು. ಆಧುನಿಕ ಮನೋವಿಜ್ಞಾನದಲ್ಲಿ ಈ ಸಿದ್ಧಾಂತವು ಅತಿಶಯ ಕ್ರಾಂತಿಕಾರಿಯೂ ಅತ್ಯಂತ ಆಶ್ಚರ್ಯಕಾರಿಯೂ ಆಗಿರುವದೆಂಬ ಮಾತು ನಿಜ. ಆದರೆ ಇಷ್ಟರಿಂದಲೇ, ಮನೋವಿಶ್ಲೇಷಣವು ಆಕಸ್ಮಿಕವಾಗಿ ಒಂದು ಅಂಧವಾದ ಮುಂಜಾವಿನಲ್ಲಿ ಶೂನ್ಯದಿಂದ ಉಂಟಾಗಿ ದೇವರ ಅಪ್ಪಣೆಯಂತೆ ಮೂಡಿ ನಿಲ್ಲಲಿಲ್ಲ! ವಿಯೆನ್ನಾದ ಡಾ. ಸಿಗ್ಮಂಡ ಫ್ರ್ಯಾಡ

(ಜನ್ಮ ೧೮೫೬) ಎಂಬ ವಿದ್ವಾಂಸರು ಈ ಸಿದ್ಧಾಂತದ ಪ್ರಣೇತರು. ತನ್ನ ಸಿದ್ಧಾಂತದೊಳಗಿನ ಹಲವು ವಿಚಾರಗಳು ಸ್ವತಂತ್ರವಾದವೂ ತೀರ ಹೊಸದಾದವೂ ಇರುವವೆಂಬ ಮನವರಿಕೆಯು ಅವರಿಗಿದ್ದಷ್ಟು ಹೆರವರಿಗಿರಲಿಕ್ಕಿಲ್ಲ. ಆದರೂ ಅವರು ತನ್ನ ಗ್ರಂಥದ ಉಪೋದ್ಘಾತದಲ್ಲಿ ಹೀಗೆ ಸಾರಿರುವರು. 'ಸಾಧಾರಣವಾಗಿ ಮನೋವಿಶ್ಲೇಷಣವು ಇದುವರೆಗೆ ಜನರಿಗೆ ತಿಳಿದಿರುವ ವಿಷಯಕ್ಕೆ ಕೆಲವು ಹೊಸ ಸಂಗತಿಗಳ ಕಾಣಿಕೆ ಕೊಟ್ಟಿದೆ.' ತನ್ನ ಆತ್ಮಚರಿತ್ರೆಯಲ್ಲಿಯೂ ಅವರು ಹೀಗೆ ಬರೆದಿರುವರು : 'ಹಿಸ್ಟೀರಿಯಾ ವಿಕಾರವು ಕಾಮುಕತೆಯೆಂದು ಸಾಧಿಸುವಾಗ ನಾನು ತತ್ವತಃ ಚಿಕಿತ್ಸಾಶಾಸ್ತ್ರದ ಮೂಲಕ್ಕೆ ತಲ್ಪಿದೆನೆಂಬುದೂ, ಅಂದಿನ ಪ್ಲೆಟೋನ ವಿಚಾರವನ್ನೇ ನಾನು ಅನುಸರಿಸಿ ಮುಂದರಿಸಿದೆನೆಂಬುವದೂ ನನಗೆ ಆಗ ಗೊತ್ತಿರಲಿಲ್ಲ.' ಸ್ವಲ್ಪ ಮುಂದೆ ಸಾಗಿ ಅವರು ಓದುಗರಿಗೆ ನೆನಪಿಗೆ ತಂದು ಕೊಡುವದೇನೆಂಪರೆ ಎರಿಸ್ಟೋಟಲನು ಮಾಡಿದ ಸ್ವಪ್ನದ ವ್ಯಾಖ್ಯೆಯು–ನಿದ್ದೆಯಲ್ಲಿಯ ಮನಸ್ಸಿನ ಜೀವನವೇ ಕನಸು ಎಂಬುವದು–ಇನ್ನೂ ಅಬಾಧಿತವಾಗಿ ನಿಂತಿದೆ. ('ಮನಸಿನಲ್ಲಿ ಇದ್ದದ್ದು ಕನಸಿನಲ್ಲಿ' ಎಂಬ ನಮ್ಮ ಹಿಂದೂ ಜನರ ಹಳೆಯ ಜಾಣ್ಮೆಯ ನಾಣ್ಣುಡಿಯು ಇದನ್ನೇ ಸೂತ್ರರೂಪವಾಗಿ ಹೇಳುವದಿಲ್ಲವೇ ?) ಹೀಗೆ ಮನೋವಿಶ್ಲೇಷಣದಂತಹ ಅತ್ಯಂತ ಕ್ರಾಂತಿಕಾರಿಯಾದ ಸಿದ್ಧಾಂತವನ್ನು ಒಳಗೊಂಡ ಎರಡು ಮೂಲತತ್ವಗಳು ಕ್ರಿಸ್ತಶಕದ ಹಿಂದೆ ಮೂರು ಶತಮಾನಗಳ ಮೊದಲು ಬರೆದಿದ್ದ ಗ್ರೀಕರ ಗ್ರಂಥಗಳಲ್ಲಿ ಕಣ್ಣಿಗೆ ಬೀಳುತ್ತವೆ. ಆದುದರಿಂದ ಇಂದಿನ ಕ್ರಾಂತಿಮಯನಾಗಿ ಮಾರ್ಪಟ್ಟ ಮನೋವಿಜ್ಞಾನದ ಬೇರುಗಳೂ ಪುರಾತನಕಾಲದಿಂದಲೂ ಸಿಕ್ಕುವವೆಂದು ಬೇರೆ ಹೇಳಬೇಕೇ ?

## ಮನೋವಿಜ್ಞಾನವೂ ಗ್ರೀಕ ದಾರ್ಶನಿಕ ಪ್ಲೇಟೊ, ಎರಿಸ್ಟೋಟಲರು

ವೈಜ್ಞಾನಿಕ ಮನಃಶಾಸ್ತ್ರವು ಪ್ಲೇಟೊ, ಎರಿಸ್ಟೋಟಲರಿಗಿಂತ ಹಿಂದಿನದು. ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿಯೇ ಗ್ರೀಕ ವೈದ್ಯರು ಜ್ಞಾನೇಂದ್ರಿಯಗಳಿಂದ ಪ್ರಾಪ್ತವಾಗುವ ಬಾಹ್ಯ ಭೌತಿಕಜ್ಞಾನಕ್ಕೂ, ಮನದಲ್ಲಿ ಬೆಳೆದು ಹಣ್ಣಾದ ವಿಚಾರಕ್ಕೂ ಕೆಲವೊಂದು ತಾರತಮ್ಯವಿರುವದೆಂದು ಮನಗಂಡಿದ್ದರು. ಜ್ಞಾನದ ಘಟಕಗಳನ್ನು ಬೆರಿಸಿ ಕೂಡಿಸಿ ಸುಸಂಗತವಾಗಿ ಒಂದಾಗಿಸುವ ಶಕ್ತಿಯಾಗಲಿ ವೃತ್ತಿಯಾಗಲಿ ಮನುಷ್ಯನಲ್ಲಿ ತಾನಾಗಿ ಇರುತ್ತದೆ ಎಂದು ಅವರಿಗೆ ಸ್ಪಷ್ಟವಾಗಿತ್ತು. ಗ್ರೀಕರಿಗೂ ಪ್ರಾಚೀನರಾದ ನಮ್ಮ ಭಾರತೀಯ ದಾರ್ಶನಿಕರೂ, ಗೀತಾಕಾರರೂ, ಯೋಗಸೂತ್ರಕಾರರೂ ಮೊದಲಾದವರು ಮನಸ್ಸಿನ ಸ್ವರೂಪವನ್ನು ಕುರಿತು

ಇದಕ್ಕೂ ಮುಂಪಡಿ ಇಟ್ಟು ಇದಕ್ಕೂ ಹೆಚ್ಚು ಸೂಕ್ಷ್ಮವಾದ ಸಿದ್ಧಾಂತಗಳನ್ನು ಕಂಡುಹಿಡಿದು ಪ್ರತಿಪಾದಿಸಿದ್ದಾರೆ. ಮನಸು, ಬುದ್ಧಿ, ಅಹಂಕಾರಗಳೆಂಬ ಮನ ಸ್ತತ್ವದ ಮೂರು ಬಗೆಗಳನ್ನು ಕಲ್ಪಿಸಿ ಅವುಗಳ ಲಕ್ಷಣಭೇದಗಳನ್ನು ನಿಚ್ಚಳವಾಗಿ ವಿವರಿಸಿದ್ದಾರೆ. ಇಂದ್ರಿಯಜನ್ಯ ಜ್ಞಾನದಿಂದಲೇ ಸಾಮಾನ್ಯ ಕಲ್ಪನೆಗಳೂ ಭಾವಾತ್ಮಕ ವಿಚಾರಗಳೂ ಉಂಟಾಗುವವು ಎಂಬ ಮಾತು ಗ್ರೀಕರಿಗೆ ಒಪ್ಪಿಗೆಯಾಗಿದ್ದಿಲ್ಲ. ಆದ್ದರಿಂದ ಅಂದಿನ ಗ್ರೀಕ ವಿಚಾರಿಗಳು, ಮನಸ್ಸು ಸ್ವತಂತ್ರವಾಗಿ ಕೆಲವು ಜ್ಞಾನದ ಘಟಕಗಳನ್ನು ಅಂಟುತ್ತಿರಲಿಕ್ಕೆ ಬೇಕು, ಎಂದೂ ಗ್ರಹಿಸಿದ್ದರು.

ಅದೇ ಶತಮಾನದಲ್ಲಿ ಮುಂದೆ, ಪಾಯಥಗೋರಸ್ (೫೮೨-೫೦೬ ಕ್ರಿ. ಪೂ.) ಎಂಬ ಪ್ರಸಿದ್ಧ ತತ್ವವೇತ್ತನೂ ಗಣಿತಜ್ಞನೂ ಭಾರತೀಯರು ಈ ಮೊದಲೇ ಕಂಡು ಸಾರಿದ ಆತ್ಮತತ್ವವನ್ನು ಕುರಿತು ಯುರೋಪಖಂಡದಲ್ಲಿ ಪ್ರಚಾರ ನಡಿಸಿದನು. ಜಡವಾದ ಮರ್ತ್ಯವಾದ ದೇಹದಲ್ಲಿ ಒಂದು ಮರಣಾತೀತವಾದ ಆತ್ಮವಿದ್ದು ಮರಣದ ನಂತರ ಅದು ಬಿಡುಗಡೆ ಹೊಂದುವದು; ಎಂದು ಅವನು ಪ್ರತಿಪಾದಿಸಿದನು.

ಮನುಷ್ಯನಲ್ಲಿ ಆತ್ಮ ಎಂಬುದೊಂದು ಉಂಟೆ ? ಇದ್ದರೆ, ಅದು ದೇಹದೊಂದಿಗೆ ಸಾಯುವಂತಹದೊ ? ಇಲ್ಲವೇ ಸಾವಿಗೆ ಮೀರಿ ಉಳಿಯುವಂತಹದೊ ? ಅದರಂತೆ ಆತ್ಮವೂ ಮನಸ್ಸೂ ಒಂದೇ ? ಎರಡೇ ? ಹಾಗಿದ್ದರೆ, ಶರೀರ ಮತ್ತು ಮನಸ್ಸು ಇವು ಯಾವ ಅನ್ಯೋನ್ಯ ಸಂಬಂಧದಲ್ಲಿ ನಿಂತಿರುತ್ತವೆ ? ಅವೆರಡೂ ಒಂದೇ ವ್ಯಕ್ತಿತ್ವದ ಬೇರೆ ಬೇರೆ ಬದಿಗಳೋ ? ಇಲ್ಲವೇ ಪರಸ್ಪರರಿಂದ ಸ್ವತಂತ್ರ ವಾದ ಎರಡು ವ್ಯಕ್ತಿತ್ವಗಳೋ ?

ಸಮರ್ಪಕವಾಗಿ ನುಡಿಯುವುದಾದರೆ, ಮೇಲಿನ ಈ ಪ್ರಶ್ನೆಗಳು ಮನೋ ವಿಜ್ಞಾನಕ್ಕೆ ಸೇರಿದವಲ್ಲ. ಇವು ತತ್ವಜ್ಞಾನದ ವಿಷಯಗಳು. ಆದರೂ, ಸೋಜಿಗದ ಮಾತೇನೆಂದರೆ, ಹಲವು ಶತಮಾನಗಳಿಂದ ಈ ಪ್ರಶ್ನೆಗಳೇ ಮನೋವಿಜ್ಞಾನದ ವಿಚಾರ ವಿವೇಚನೆಗಳ ಮೇಲೆ ಪ್ರಭಾವ ನಡೆಸುತ್ತಿದ್ದವು. ಇದಕ್ಕೆ ಮನೋವಿಜ್ಞಾನದ ಪರ್ಯಾಯ ಶಬ್ದವಾದ 'ಸಾಯಕೊಲಜಿ' ಎಂಬುದೇ ಸಾಕ್ಷಿ. 'ಸಾಯ್ಕಿ' ಎಂಬ ಪದದರ್ಥ 'ಆತ್ಮ' ಎಂತ 'ಲೊಗೊಸ್' ಅಂದರೆ ವಿದ್ಯೆ, ಜ್ಞಾನ. ಅಂದಮೇಲೆ ಇಂದು ಮನೋವಿಜ್ಞಾನವೆಂದು ಹೆಸರಾದ ಜ್ಞಾನವು ಅಂದು ಆತ್ಮಜ್ಞಾನವೇ-ಆಧ್ಯಾತ್ಮ ವಿದ್ಯೆಯೇ ಆಗಿತ್ತು ಎಂಬುವದು ಸ್ಪಷ್ಟವಾಗುದಿಲ್ಲವೇ ?

ಪುರಾತನ ಗ್ರೀಕ ವಿದ್ವಾಂಸರೂ ತತ್ವಜ್ಞಾನದಲ್ಲಿ ಬಹಳೇ ಮುಂದುವರಿದಿದ್ದರು. ಆದರೆ ಅವರಿಗೆ ಪ್ರಾಣಿ ಶರೀರಶಾಸ್ತ್ರದ ಜ್ಞಾನವು ತೀರ ಸ್ವಲ್ಪ ಇದ್ದಿತು. ಭಾರತೀಯ ದರ್ಶನಕಾರರ ಅವಸ್ಥೆಯೂ ಇದಕ್ಕಿಂತ ಭಿನ್ನವಾಗಿದ್ದಿಲ್ಲ. ಆದ್ದರಿಂದ ಮನೋವಿಜ್ಞಾನದ ಶಾರೀರಿಕ ಮತ್ತು ಮಾನಸಿಕ ಹೀಗೆ ಎರಡು ಅಂಗಗಳ ಕುರಿತು ಅವರ ಲಕ್ಷವಿದ್ದರೂ ಅವರು ಕೊಟ್ಟ ಉಪಪತ್ತಿಗಳು ಹೆಚ್ಚಾಗಿ ತಾತ್ವಿಕ ಸ್ವರೂಪ ದವಾಗಿದ್ದವು. ಆ ದೃಷ್ಟಿಯಿಂದಲೇ ಅವರ ಅನುಮಾನಗಳು ಹೆಚ್ಚು ಸಫಲ ವಾಗುತ್ತಿದ್ದವು. ಅನಂತರ ಮಧ್ಯಯುಗದಲ್ಲಿ ಕ್ರೈಸ್ತ ತತ್ವಜ್ಞಾನಿಗಳೂ ಈ ವಿಷಯವ ಕುರಿತು ವ್ಯಾಸಂಗ ಮಾಡಲು ಹೊರಟರು. ಅವರ ಕುತೂಹಲವು ಈ ವಿಷಯದ ವೈಜ್ಞಾನಿಕ ಗುರಿಗಿಂತ ಆಧ್ಯಾತ್ಮಿಕ ನಿಟ್ಟಿನಲ್ಲಿಯೇ ಹೆಚ್ಚಾಗಿ ಹರಡಿತ್ತು.

ಪ್ಲೇಟೊನಿಗಾಗಲಿ, ಎರಿಸ್ಟೋಟಲನಿಗಾಗಲಿ ಶರೀರದೊಳಗಿನ ಜ್ಞಾನ (ಮಜ್ಜಾ) ತಂತುಗಳ ವಿಷಯ ಏನೂ ಗೊತ್ತಿದ್ದಿಲ್ಲ. ವೇದನೆ, ವಿಚಾರ ಮತ್ತು ಶಕ್ತಿಗಳು ರಕ್ತವಾಹಿನಿಗಳ ಮುಖಾಂತರವೇ ಹವೆಯೊಂದಿಗೆ ಶರೀರದಲ್ಲಿ ಹರಿದಾಡುವವೆಂದು ಅವರು ಭಾವಿಸಿದ್ದರು ! ಈ ತಪ್ಪು ಗ್ರಹಿಕೆಯು ೧೮ನೆಯ ಶತಮಾನದ ತನಕವೂ ಒಂದಿಲ್ಲೊಂದು ರೂಪದಲ್ಲಿ ಬೇರೂರಿಕೊಂಡಿತ್ತು. ಎರಿಸ್ಟೋಟಲನು ವಿಚಾರಗಳು ಹೃದಯದಿಂದ ಬರತ್ತವೆಂದು ಕಲ್ಪಿಸಿದ್ದನು. ನಮ್ಮ ಬಳಕೆಯ ಮಾತುಗಳಲ್ಲಿ ಕಾಣಿಸಿಕೊಳ್ಳುವ ಪಡೆನುಡಿಗಳನ್ನು (idioms) ನೋಡಿದರೆ ಇದೇ ಮಾತು ಬೆಳಕಿಗೆ ಬರುವದು. ನಮ್ಮವರ ಕಲ್ಪನೆಯಂತೆ ಧ್ಯಾನದ ಆಧಾರವೂ ಭಾವನೆಗಳ ನೆಲೆಬೀಡೂ ಹೃದಯವೇ ಸರಿ. ಇದೇ ಹೃದಯಕ್ಕೆ ಹಳ್ಳಿಗರು ಕರುಳು ಎನ್ನುವರು. 'ಕಲ್ಲೆದೆ.' 'ಕರಳು ಕರಗಿತು' ಮುಂತಾದ ಪದಗಳಲ್ಲಿ ಧ್ವನಿತವಾಗುವ ಮನೋ ವಿಜ್ಞಾನದ ಶಾರೀರಿಕ ಉಪಪತ್ತಿಯು ಹಿಂದಿನ ಗ್ರೀಕರ ತಿಳುವಳಿಕೆಗಿಂತ ಬೇರೆ ಯಾಗಿಲ್ಲ. ಕಾಮನೆ (ಇಚ್ಛೆ)ಯು ಯಕೃತ್‌ದಿಂದ ಉದ್ಭವಿಸುತ್ತದೇದು ಪ್ಲೇಟೋನ ಮತವಿತ್ತು. ಅಂದು ರೂಢವಾಗಿದ್ದ ವೈದ್ಯಕೀಯ ಜ್ಞಾನದ ಆಧಾರದಿಂದಲೇ ಅವರು ನಿಶ್ಯಂಕವಾಗಿ ಮನುಷ್ಯಸ್ವಭಾವದ ಉಗಮವನ್ನು ಕಲ್ಪಿಸಿಕೊಂಡಿದ್ದರು. ಮನುಷ್ಯನ ವಿಶಿಷ್ಟವಾದ ಮನಃ ಪ್ರವೃತ್ತಿಯು ವಾತ, ಪಿತ್ಥ, ಕಫ, ಮತ್ತು ರಕ್ತಗಳಂತಹ ನಾಲ್ಕು ಪ್ರಕೃತ್ತಿಗಳ ಪ್ರಮಾಣದಲ್ಲಿ ಉಂಟಾಗುತ್ತದೆಂದು ಅವರ ಭಾವನೆಯಿತ್ತು. ಪಿತ್ಥದಲ್ಲಿಯೂ ಕಪ್ಪು ಮತ್ತು ಅರಿಶಿನವೆಂದು ಎರಡು ಭೇದ ಗಳಿದ್ದವಂತೆ. ಭಾರತೀಯ ದಾರ್ಶನಿಕರು ಸ್ವಭಾವದಲ್ಲಿ ಕಲ್ಪಿಸಿದ ತ್ರಿಗುಣ ವಿಶಿಷ್ಟವಾದ ವರ್ಗೀಕರಣವು ಆಯುರ್ವೇದದ ತ್ರಿದೋಷಗಳ ಪ್ರಭಾವದಿಂದಲೂ ಇರಬಹುದು. ಈಗಲೂ ಭಾವಾವಿಷ್ಟವಾದ ಸಿಟ್ಟಿನ ಸ್ವಭಾವಕ್ಕೆ ನಾವು ಪಿತ್ಥ

ಪ್ರಕೋಪದ ಹೆಸರಿಡುತ್ತೇವೆ. ಮನುಷ್ಯನ ಸಾಮಾನ್ಯ ಮನೋವೃತ್ತಿಯು ಆತನ ಶರೀರದಲ್ಲಿಯ ಅಂತಸ್ರಾವದ ಗ್ರಂಥಿಗಳನ್ನು ಅವಲಂಬಿಸಿರುತ್ತದೆಂಬುವದು ಈಗ ತಿಳಿದು ಬಂದಿದೆ. ಆದರೆ ಈ ಜ್ಞಾನವು ಪ್ರಾಚೀನರಿಗೂ ಇದ್ದಿತೆಂದು ಹೇಳುವುದಕ್ಕೆ ಆಧಾರಗಳಿಲ್ಲ. ಇಂಥ ಸ್ಥಿತಿಯಲ್ಲಿ ಇಂದಿನ ವೈಜ್ಞಾನಿಕ ಪದ್ಧತಿಯಿಂದ ಮನಸ್ಸಿನ ಕುರಿತು ಶೋಧವಾಗುವದೂ ಶೋಧದಲ್ಲಿ ಸರಿಯಾದ ಪ್ರಗತಿಯಾಗುವದು ಎಷ್ಟು ಬಿಗಿಯಾದ ಕೆಲಸವಾಗಿತ್ತೆಂಬುದು ಮನವರಿಕೆಯಾಗಬಹುದು. ಶರೀರವನ್ನವಲಂಬಿಸಿ ಇರುವ ಮನಸ್ಸಿನ ರೂಪರಚನೆಗಳ ಕುರಿತು ಜ್ಞಾನವು ಬೆಳೆಯಬೇಕಾದರೆ ಆ ಬೆಳವಣಿಗೆಯು ಶರೀರಶಾಸ್ತ್ರದ ಸೂಕ್ಷ್ಮವಾದ ಜ್ಞಾನದ ಪ್ರಗತಿಯೊಂದಿಗೆ ಸಮಾಂತರವಾಗಿಯೇ ನಡೆಯಬೇಕಾಗುತ್ತದೆ. ಈ ಸಂಬಂಧವು ತಪ್ಪಿದಲ್ಲಿ ಮನಸ್ಸಿನ ಕುರಿತು ಮಾಡಿದ ಊಹೆ, ಅನುಮಾನಗಳೆಲ್ಲ ಬರೇ ತಾತ್ವಿಕವಾದ ಪರಿಣಮಿಸುವವು. ಅಂತೆಯೇ ಪ್ಲೇಟೊ ಮತ್ತು ಎರಿಸ್ಟೋಟಲರು ಮುಂದುವರಿಸಿದ ಮನೋವೈಜ್ಞಾನಿಕ ಸಿದ್ಧಾಂತಗಳ ಶೋಧವು ಆಗ ತತ್ವಜ್ಞಾನದ ಪ್ರಪಂಚವನ್ನೇ ಸೇರಿತು.

ಪ್ಲೇಟೋನು. (೪೨೯-೩೪೭ ಕ್ರಿ. ಪೂ) ಪಾಯಥಾಗೊರಸ್ಸನ ಅಮರ ಆತ್ಮದ ಸಿದ್ಧಾಂತವನ್ನೇ ಸ್ವೀಕರಿಸಿ ವಿಕಾಸಗೊಳಿಸಿದನು. ಜಡಶರೀರಕ್ಕೆ ಶಕ್ತಿಕೊಟ್ಟು ಸೇಂದ್ರಿಯ ಸಾವಯವವಾದ ಈ ಯಂತ್ರವನ್ನು ನಡೆಯಿಸುವ ಶಕ್ತಿಕೇಂದ್ರ 'ಡಾಯಿನೆಮೊ' ಅಂದರೆ ಆತ್ಮವು ಎಂದು ಆತನ ಮತ. ಸಜೀವ ವಸ್ತುವಿಗೆ ಒಂದು ಆತ್ಮವು ಇರುತ್ತದೆ. ಗಿಡಬಳ್ಳಿಗಳಿಗೂ (ಪೋಷಕ) ಆತ್ಮವಿದೆ. ಅವೂ ಆಹಾರವನ್ನು ಹೀರಿಕೊಂಡು ಬೆಳೆದು ಸಜಾತೀಯ ಸಸ್ಯಗಳನ್ನು ಉಂಟುಮಾಡುವ ಶಕ್ತಿಯುಕ್ತವಾಗಿವೆ. ಪ್ರಾಣಿಗಳಿಗೆ ಇಷ್ಟೆಲ್ಲ ಕ್ರಿಯೆಯೊಂದಿಗೂ, ಐಚ್ಛಿಕವಾಗಿ ಚಲನವಲನ ಮಾಡುವ, ಶಿತೋಷ್ಣ ಸುಖದುಃಖಗಳನ್ನು ಅನುಭವಿಸುವ ಸಾಮರ್ಥ್ಯವುಳ್ಳ ವೇದನಾಯುಕ್ತವಾದ ಆತ್ಮಗಳಿರುತ್ತವೆ. ಇವೆಲ್ಲ ಕ್ರಿಯೆಗಳನ್ನೊಳಗೊಂಡು, ಮೇಲೆ ಮತ್ತೆ ಬುದ್ಧಿಯುಕ್ತವಾಗಿ ವಿಚಾರಮಾಡುವ ಸಾಮರ್ಥ್ಯವಿರುವ ಮೇಲ್ತರಗತಿಯ ಆತ್ಮವು ಮನುಷ್ಯನದಿರುತ್ತದೆ. ಈ ಆತ್ಮದಿಂದಲೇ ಆತನು ಸೇಂದ್ರಿಯ ನಿರಿಂದ್ರಿಯ ಸೃಷ್ಟಿಯ ಒಡೆಯನಾಗಿದ್ದಾನೆ ಎಂದು ಪ್ಲೇಟೋನು ಆತ್ಮವಿವೇಚನೆ ಮಾಡಿದ್ದಾನೆ.

ಇಂದು ಇದು ತುಸು ವಿಕ್ಷಿಪ್ತ ಸಿದ್ಧಾಂತವೆಂದು ತೋರಬಹುದು. ಆದರೂ ಇಂದು ಆಧುನಿಕ ಮನೋವಿಜ್ಞಾನಿಗಳು ಶರೀರಶಾಸ್ತ್ರದ ಆಧಾರದಿಂದ ಸಿದ್ಧಮಾಡಿದ ಮೂಲಭೂತವಾದ ಶೋಧವನ್ನೇ ಅಂದು ಪ್ಲೇಟೋನು ಮೇಲಿನ ಸಿದ್ಧಾಂತಗಳ

ಸಹಾಯದಿಂದ ಕಂಡುಹಿಡಿದನು. ಮನುಷ್ಯನ ವ್ಯಕ್ತಿತ್ವದ ವಿಕಾಸದಲ್ಲಿ ಕಾಮನೆಯು-ಪ್ಲೇಟೋನ ಮಾತಿನಲ್ಲಿ ಹೇಳುವದಾದರೆ ಕ್ಷುಧೆಯು-ಬುದ್ಧಿಯೊಂದಿಗೆ ವಿರೋಧ ಮಾಡುವ ಪ್ರಸಂಗವು ಬಂದೇ ತೀರುವದು; ಮತ್ತು ಅಂತಹ ಬುದ್ಧಿ ಕಾಮನೆಗಳ ವಿರೋಧ ವಿಗ್ರಹದೊಳಗಿಂದಲೇ ವಿವೇಕ ಮತ್ತು ಸಂಕಲ್ಪಶಕ್ತಿಗಳು-ನಿಶ್ಚಯಾತ್ಮಕ ಬುದ್ಧಿ ಮತ್ತು ಇಚ್ಛಾಶಕ್ತಿಗಳು ಉಂಟಾಗುತ್ತವೆ ಎಂಬುವದೇ ಆ ಮೂಲಭೂತ ವಾದ ಶೋಧವು.

ಮನೋವಿಜ್ಞಾನವನ್ನು ಶಿಕ್ಷಣಕ್ಕಾಗಿ ವಿನಿಯೋಗಿಸಿಕೊಂಡವರಲ್ಲಿ ಪ್ಲೇಟೋನು ಆದ್ಯಾಚಾರ್ಯನು. ಅವನು ಪ್ರತಿಪಾದಿಸಿದ ಶೈಕ್ಷಣಿಕ ಸಿದ್ಧಾಂತಗಳು ಕೂಡ ಹಲವು ಬಗೆಗಳಲ್ಲಿ ಇಂದಿನ ಶಿಕ್ಷಣದ ತತ್ವಗಳಿಗೆ ಹೋಲುತ್ತವೆ. ಹೊರಗಿನ ಪರಿಸ್ಥಿತಿಯೊಂದಿಗೂ, ತಾನು ಹುಟ್ಟಿ ಬೆಳೆದ ಸಮಾಜದೊಂದಿಗೂ ಒರ್ವ ವ್ಯಕ್ತಿಯು ಸುಸಂಗತವಾಗಿ ಹೊಂದಿ ಹೋಗುವಂತೆ ಮಾಡಿ ಆತನ ಆತ್ಮವನ್ನು ಅರಳಿಸಿ ಕೊಳ್ಳುವ ಪದ್ಧತಿಯೆ ಶಿಕ್ಷಣವೆಂದು ಪ್ಲೇಟೋನು ಪ್ರತಿಪಾದಿಸಿದನು. ಶಿಕ್ಷಣದಲ್ಲಿ ಕಲಿಸುವಿಕೆಯ ಉದ್ದೇಶವು, ಪ್ಲೇಟೋನ ಮತದಂತೆ, ಶಿಷ್ಯನಿಗೆ ಶುದ್ಧ (ನಿರುಪಾಧಿಕ) ವಿಚಾರದಲ್ಲಿ ತಜ್ಞನನ್ನಾಗಿ ಮಾಡುವದೇ ಸರಿ. ಎಕೆಂದರೆ ಶುದ್ಧ ವಿಚಾರವೇ ಶ್ರೇಷ್ಠ ಬುದ್ಧಿಯ ಅರ್ಥವು. ಬುದ್ಧಿ ಶಕ್ತಿಯ ಮಿಗಿಲಾದ ಕುರುಹೆಂದರೆ ವಸ್ತು, ವಸ್ತು ವಿನಲ್ಲಿಯ ಅನ್ಯೋನ್ಯ ಸಂಬಂಧಗಳನ್ನು ಸರಿಯಾಗಿ (ಬಿಡಿಯಾಗಿಯೂ ಇಡಿ ಯಾಗಿಯೂ) ಅರಿತುಕೊಳ್ಳುವ ಯೋಗ್ಯತೆಯೇ ಸರಿ ಎಂದು ಪ್ಲೇಟೋನ ಅಭಿಪ್ರಾಯು. ಇಲ್ಲಿ ಸೋಜಿಗವೆಂದೆನಿಸುವ ಸಂಗತಿಯೇನೆಂದರೆ ಅತ್ಯಂತ ಆಧುನಿಕ ಕ್ಲಪ್ತಿಯಾದ ಬುದ್ಧಿ ಪರೀಕ್ಷೆಯ ಪದ್ಧತಿಯಾದರೂ ಇದೇ ವ್ಯಾಖ್ಯೆಯನ್ನು ಸಮರ್ಥಿಸುತ್ತದೆ !

ಎರಿಸ್ಟೋಟಲನು (೩೮೪-೩೨೨ ಕ್ರಿ.ಪೂ) ಆತ್ಮವನ್ನು ಕುರಿತು ಒಂದು ಚೆಂದವಾದ ಸಿದ್ಧಾಂತವನ್ನು ಪ್ರತಿಪಾದಿಸಿದನು. ಇವನು ಕಲ್ಪಿಸಿದ ಆತ್ಮವು ಪ್ಲೇಟೊ ಪ್ರಣೀತ ವಾದ ಆತ್ಮತತ್ವತ್ತಿಕಿಂತ ಬೇರೆಯಾದದ್ದೂ ಹೆಚ್ಚು ಬುದ್ಧಿ ಗ್ರಾಹ್ಯವಾದದ್ದೂ ಇದೆ. ಅತ್ಮವು ಮರಣಾಧೀನವೊ ಮರಣಾತೀತವೊ ಎಂಬುದರ ವಿಷಯಕ್ಕೆ ಈತನ ಮತವೇನಿತ್ತೆಂದು ನಿಶ್ಚಯವಾಗಿ ಹೇಳಲು ಬರುವಂತಿಲ್ಲ. ಆದರೆ ಆತನು ಒಂದರ್ಥದಿಂದ ದೇಹಾತ್ಮವಾದಿಯು. ಅಂದರೆ ದೇಹವೇ ಆತ್ಮವೆಂದು ಅವನು ನಂಬಿದ್ದನೆಂಬ ಅರ್ಥವಲ್ಲ. ಶರೀರದಿಂದ ಬೇರೆಯಾಗಿ-ಅಂದರೆ ಪರ್ಯಾಯವಾಗಿ ಶರೀರವು ಅಳಿದ ಮೇಲೆ ಆತ್ಮವು ಸ್ವತಂತ್ರವಾಗಿರುತ್ತದೆಂಬ ಕಲ್ಪನೆಯನ್ನು ಈತನು ತಿರಸ್ಕರಿಸಿದನು ಈತನ ಕಲ್ಪನೆಯಂತೆ ಆತ್ಮವೆಂದರೆ ವಸ್ತುವಿಗೆ (ದ್ರವ್ಯಕ್ಕೆ)

ಸಾರ್ಥಕತೆಯನ್ನು ಕೊಡುವ ರೂಪವು. ವಸ್ತುವಿಗೆ ರೂಪವಿಲ್ಲದೇ ಅರ್ಥವಿಲ್ಲ. ಅದೇ ಮೇರೆಗೆ ರೂಪವೂ ವಸ್ತು ವ್ಯತಿರಿಕ್ತವಾಗಿ ಇರಲಾರದು. ಆದ್ದರಿಂದ ವಸ್ತು ಮತ್ತು ರೂಪ ಇವೆರಡೂ ಕೂಡಿ ಒಂದಾಗಿ ಸಾರ್ಥಕವಾದ ಸತ್ಯವನ್ನು ಮೂರ್ತಗೊಳಿಸುತ್ತವೆ. ಒಂದು ಹಾಲುಗಲ್ಲು ಒಂದು ಸುಣ್ಣದ ಮಣ್ಣಿನ ಮುದ್ದೆ, ಇವುಗಳಿಗೆ ರೂಪವಿಲ್ಲದಿರುವವರಿಂದ ಬರೇ ಅರ್ಥಶೂನ್ಯವಾದ ನಿರ್ಗುಣವಾದ ಅಸ್ತಿತ್ವವಿರುತ್ತದೆ. ಆವರೆ ಒಂದನ್ನು ಶಿಲ್ಪಿಯು ಅಪ್ಸರೆಯ ಮೂರ್ತಿಯನ್ನಾಗಿ ರೂಪಗೊಳಿಸುವನು; ಇನ್ನೊಂದನ್ನು ಕುಂಬಾರನು ಅಂದವಾದ ಗಡಿಗೆಯನ್ನಾಗಿ ಮಾರ್ಪಡಿಸುವನು. ಇದು ಜಡಸೃಷ್ಟಿಯ ಮಾತು. ಚೇತನಕ್ಕೂ ಇದೇ ವ್ಯಾಖ್ಯೆ ಅನ್ವಯಿಸುವದು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸ್ವಂತ ವ್ಯಕ್ತಿತ್ವದ ಶಿಲ್ಪಿ ಯಾಗಿದ್ದಾನೆ. ತನ್ನ ವ್ಯಕ್ತಿತ್ವಕ್ಕೆ ತಾನು ಕೊಟ್ಟ ರೂಪವೇ–ಸಾರ್ಥಕವಾದ ಸ್ವತ್ವವೇ ಆ ವ್ಯಕ್ತಿಯ ಆತ್ಮವು. ಅಂದರೆ ಎರಿಸ್ಟೋಟಲನ ಅಭಿಪ್ರಾಯದಿಂದ ಶರೀರದ ಎಲ್ಲ ಇಂದ್ರಿಯಾವಯವಗಳ ಸುಸಂಘಟಿತವಾದ ಸುಸಂಗತವಾದ ಕಾರ್ಯದಲ್ಲಿ ರೂಪಗೊಳ್ಳುವ ವ್ಯಕ್ತಿಯ ಸ್ವಾಭಾವಿಕವಾದ ಪರಿಪೂರ್ಣ ವಿಕಾಸದ ಸ್ಥಿತಿಯೇ ಆತ್ಮವು.

ಆತ್ಮದ ಕಲ್ಪನೆಯನ್ನು ಹೀಗೆ ಮಾಡಿಕೊಂಡುದರ ಪರಿಣಾಮವಾಗಿ ಎರಿಸ್ಟೋಟಲನು ಶ ರೀ ರ ದ ವಿವಿಧವ್ಯಾಪಾರಗಳನ್ನು ತಿಳಿದುಕೊಳ್ಳಲು ಹವಣಿಸಬೇಕಾಯಿತು. ಏಕೆಂದರೆ ಎರಿಸ್ಟೋಟಲನು ಕೇವಲ ತತ್ವನಿಷ್ಠನಾದ ಜ್ಞಾನಿಯಲ್ಲದೆ ವಸ್ತುನಿಷ್ಠನಾದ ವಿಜ್ಞಾನಿಯೂ ಆಗಿದ್ದನು. ಅವನು ಇಂದ್ರಿಯ ಜ್ಞಾನದ ಸ್ವರೂಪವನ್ನು ಪರಿಶೀಲಿಸಿದನು. ವೇದನೆಯೆಂದರೆ ಮನಸ್ಸಿನಲ್ಲಿಯ ಒಂದು ವಿಕಾರವು. ಸ್ಮೃತಿ ಯೆಂದರೆ ವೇದನೆಗಳ ಸ್ಥಿರವಾದ ಮುದ್ರೆಯು. ಮಾನವೀ ಅನುಭವವೆಂದರೆ ಇಂತಹ ಸ್ಮೃತಿಗಳ ಸಮುದಾಯವೇ ಸರಿ. ವೇದನೆ ಮತ್ತು ಬುದ್ಧಿ ಇವುಗಳಲ್ಲಿ ಆತನು ಒಂದು ಕ್ರಮಗೊಳ್ಳುವ ಸಂಬಂಧವನ್ನು ಕಂಡನು. ಅದರಂತೆಯೇ ಕಾಮನೆ ಮತ್ತು ಸಂಕಲ್ಪ (ಇಚ್ಛೆ)ಗಳಲ್ಲಿ ಅದೇ ರೂಪದ ಕ್ರಮಸಂಬಂಧವನ್ನು ಸ್ಥಾಪಿಸಿದನು. ಮನಸ್ಸಿನ ಮುಖ್ಯ ಧರ್ಮಗಳು ಎರಡು, ಇಚ್ಛಿಸುವದು ಮತ್ತು ವಿಚಾರಿಸುವದು. ಮ ನ ಸ್ಸು ಮತ್ತು ಅದು ಯಾತರೊಳಗಿಂದ ಕಾರ್ಯ ಮಾಡುವದೋ ಆ ಶಾರೀರಿಕ ಇಂದ್ರಿಯ ಇವೆರಡರಲ್ಲಿ ಭಿನ್ನತೆಯಿದೆ. ಹೀಗೆ ಎರಿಸ್ಟೋಟಲನು ಮನಸ್ಸಿನ ಕುರಿತು ಕೆಲವು ತತ್ವಗಳನ್ನು ಮಂಡಿಸಿದನು.

ಈ ರೀತಿಯಾಗಿ ಸುಮಾರು ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಮನೋ ವಿಜ್ಞಾನದ ವಿಚಾರ ಪ್ರಣಾಲಿಯು ಬೆಳೆಯುಹತ್ತಿತು. ಎರಿಸ್ಟೋಟಲನ ರೀತಿಯು

ಹೇಳತಕ್ಕಂತಹದಿತ್ತು. ಒಂದೆಡೆಗೆ ಆತನು ನಿಜವಾದ ವಿಜ್ಞಾನಿಗೆ ಒಪ್ಪುವ ರೀತಿಯಲ್ಲಿ ಪರೀಕ್ಷಣೆ ಪ್ರಯೋಗಗಳನ್ನು ಮಾಡುತ್ತಿದ್ದನು. ಇನ್ನೊಂದೆಡೆಗೆ ಆತನು ದಾರ್ಶನಿಕ ರೀತಿಯಲ್ಲಿ ದೂರದರ್ಶಿಯಾದ ಉಹೆಗಳಿಂದ ತನ್ನ ತತ್ವಜ್ಞಾನವನ್ನು ಉಂಟು ಮಾಡುತ್ತಿದ್ದನು. ಅಂದರೆ ಕೇವಲ ವಿಚಾರದ ತಳಹದಿಯ ಮೇಲೆ ಮನಸ್ಸಿನ ಸ್ವರೂಪದ ಕುರಿತು ಸಿದ್ಧಾಂತಗಳನ್ನು ಅನುಮಾನಿಸುತ್ತಿದ್ದನು.

## ಮನೋವಿಜ್ಞಾನದ ಸಂಶೋಧನ ಪದ್ಧತಿ

ಈ ನಡುವೆ ಮನೋವೈಜ್ಞಾನಿಕ ಸಂಶೋಧನೆಯ ಪದ್ಧತಿಯು ಹೇಗಿರುವ ದೆಂಬುದನ್ನು ಸ್ವಲ್ಪ ನಿರೂಪಿಸುವದು ಅಪ್ರಸ್ತುತವೆನಿಸಲಿಕ್ಕಿಲ್ಲ. ಮಿಕ್ಕ ವಿಷಯಗಳಲ್ಲಿ ಬರುವ ತೊಂದರೆಗಳಿಗಿಂತ ಮನಸ್ಸಿನ ಅಭ್ಯಾಸ ಮಾಡುತ್ತಿರುವಾಗ ಹಲವು ವಿಶೇಷವಾದ ತೊಡಕುಗಳು ಇದಿರು ಬರುತ್ತವೆ. ಇನ್ನು ಮನಸ್ಸಿನ ಅಸ್ತಿತ್ವವನ್ನೇ ಅಲ್ಲಗಳೆದು ಎಲ್ಲ ಮಾನಸಿಕವೆಂದು ಕರೆಯಲ್ಪಡುವ ವ್ಯಾಪಾರಗಳನ್ನು ಶಾರೀರಿಕ ಸ್ವರೂಪದವೆಂದು ಸಾಧಿಸುವದಾದರೆ ಬಹುತರ ತೊಡಕು ತೊಂದರೆಗಳು ದೂರ ವಾಗುತ್ತವೆ. ಆಗ ಮನೋವಿಜ್ಞಾನವನ್ನು ಒಂದು ಪೂರ್ಣವಾಗಿ ವಸ್ತುನಿಷ್ಠವಾದ ನಿಶ್ಚಿತ ಶಾಸ್ತ್ರವನ್ನಾಗಿ ಮಾಡಲು ಬರುವದು. ಅಂದರೆ ಹೊರಗಿನ ಭೌತಿಕ ಪ್ರಮಾಣಗಳ ಮತ್ತು ಪ್ರಯೋಗಗಳ ಮೇಲೆಯೇ–ಅವುಗಳ ಮಟ್ಟಿಗೇ ಮನೋ ವಿಜ್ಞಾನವನ್ನು ನಿರ್ಮಿಸಬಹುದು. ಮಿದುಳಿನ ರಚನೆಯನ್ನು ನಿರೀಕ್ಷಿಸಿ ಜ್ಞಾನತಂತು ಜ್ಞಾನೇಂದ್ರಿಯಗಳ ರಚನೆ ರೀತಿಗಳನ್ನು ಕಂಡುಹಿಡಿದು, ಮನುಷ್ಯನ ಪ್ರತ್ಯಕ್ಷವಾದ ನಡತೆಯಲ್ಲಿ ಮೂಡುವ ಮಾನಸಿಕ ವ್ಯಾಪಾರಗಳ ಪರಿಣಾಮಗಳನ್ನು ವಿಂಗಡಿಸಿ ವಿವರಿಸಿ, ಇದುವರೆಗೆ ಕಂಡುಹಿಡಿದ ಶಾರೀರಿಕ ಅಂತರ್ಜ್ಞಾನವನ್ನು ಮೇಲಿನ ಆಚಾರಜ್ಞಾನದೊಂದಿಗೆ ಇಟ್ಟು, ಅವೆರಡರ ಪರಸ್ಪರ ಸಂಬಂಧಗಳನ್ನು ಸ್ಥಾಪಿಸಿದರೆ ವಸ್ತುನಿಷ್ಠವಾದ ಮನೋವಿಜ್ಞಾನದ ಕೆಲಸವು ಮುಗಿಯಿತು.

ಈ ವಸ್ತುನಿಷ್ಠವಾದ ಪದ್ಧತಿಯು ಪ್ರಾಯೋಗಿಕವಾದುದು, ಪ್ರಾತ್ಯಕ್ಷಿಕವಾದುದು. ಈ ಪದ್ಧತಿಯನ್ನು ಹಲವು ಬಾರಿ ಸ್ವೀಕರಿಸಿ ಮನೋವಿಜ್ಞಾನದ ಪ್ರಗತಿ ಮಾಡಿಕೊಂಡದ್ದುಂಟು. ಆದರೆ ಇಂತಹ ಬರೇ ಸ್ಥೂಲದೃಷ್ಟಿಯ ಬಾಹ್ಯವಾಸ್ತವಿ ಕತೆಯ ಭೂಮಿಕೆಯನ್ನು ಮನಸ್ಸಿನ ಕುರಿತು ಅಂಗೀಕರಿಸಲು ಮನುಷ್ಯನು ಸಾಮಾನ್ಯವಾಗಿ ಒಪ್ಪುವದಿಲ್ಲ. ತನ್ನ ಶರೀರದಲ್ಲಿ ಬರೇ ಆಮ್ಲಕ್ಷಾರ ಮುಂತಾದ ರಾಸಾಯನಿಕ ದ್ರವ್ಯಗಳ ಯಾಂತ್ರಿಕ ಕ್ರಿಯೆ–ಪ್ರತಿಕ್ರಿಯೆಗಳ ಪಾತಳಿಗೆ ಇಳಿಸಲು ಬಾರದಂತಹದೊಂದು ಅನಂತ ಶಕ್ತಿ ಇರುತ್ತದೆ. ಈ ಶಕ್ತಿಯೇ ಮೇಲ್ತರಗತಿಯ

ಮನೋವ್ಯಾಪಾರಗಳ ಪ್ರೇರಣೆಯಾಗಿದೆ ಎಂಬುವ ನಂಬಿಗೆಯೇ ಮನುಷ್ಯನ ಆತ್ಮಸಂಭಾವನೆಗೆ ಹೆಚ್ಚು ಸೇರುತ್ತದೆ, ಹೆಚ್ಚು ಸಮಂಜಸವೆಂದು ತೋರುತ್ತದೆ.

ಆದರೆ ಇದು ಬರೇ ಒಂದು ಅನಂತಶಕ್ತಿಯುಂಟೆಂಬ ನಮ್ಮ ಕಲ್ಪನೆಯು ನವಿ ಎಣಿಕೆಗಳಿಂದ ಸಮಾಧಾನಪಟ್ಟರೆ ಬಗೆಹರಿಯುವ, ಸಮಂಜಸವೆಂದು ತೀರ್ಪು ಕೊಟ್ಟಮಾತ್ರಕ್ಕೆ ತೀರುವ ತೊಡಕಲ್ಲ. ಏಕೆಂದರೆ ಇಂತಹ ಶಕ್ತಿಯ ಸ್ವರೂಪವನ್ನು ತಿಳಿದುಕೊಳ್ಳುವ ಬಗೆ ಹೇಗೆ ? ಇಂಥ ಸ್ವಯಂಭೂ ಮನಃ ಶಕ್ತಿಯ ಶೋಧ ಮಾಡುವ ರೀತಿ ಹೇಗೆ ? ರೀತಿ ಒಂದೇ. ತನ್ನ ಮನಸ್ಸಿನಲ್ಲಿಯೇ ಇಣಿಕಿ ನೋಡಿ ಅದರ ಕ್ರಿಯೆಗಳನ್ನು ನಿರಿಕಿಸಿ ಅದರ ಪ್ರಕೃತಿಪದ್ಧತಿಗಳನ್ನು ಪರಕಿಸಿಕೊಳ್ಳುವದೇ ಆ ಶೋಧನ ರೀತಿ. ಇದಕ್ಕೇ ಆತ್ಮನಿರೀಕ್ಷಣೆ-ಅಂತರ್ ದೃಷ್ಟಿಯೆಂಬ ಹೆಸರು ಕೊಡಬಹುದು. ಈ ಅಂತರ ದೃಷ್ಟಿಯನ್ನು ಉಪಯೋಗಿಸು ವವರಲ್ಲಿಯೂ ಒಂದು ದೊಡ್ಡ ಕೊರತೆಯಿದೆ. ಆತ್ಮನಿರೀಕ್ಷಣೆಯಲ್ಲಿ ಆತ್ಮವಂಚನೆಯಾಗುವ ಭೀತಿಯಿದೆ-ಅಷ್ಟೇ ಅಲ್ಲ, ತಟಸ್ಥ ದೃಷ್ಟಿಯಿಂದ ತನ್ನ ಮನಸ್ಸನ್ನು ನಿರೀಕ್ಷಿಸಿಕೊಂಡರೂ, ಇತರರ ಮನಸ್ಸುಗಳೂ ತನ್ನಂತೆಯೇ ನಿಶ್ಚಿತ ವಾಗಿ ಕಾರ್ಯಮಾಡುವವೆಂದು ಎದೆತಟ್ಟಿ ಹೇಳಲು ಹೇಗೆ ತಾನೆ ಸಾಧ್ಯ ? ಇದಲ್ಲದೆ ಎಲ್ಲ ಮಾನಸಿಕ ವ್ಯಾಪಾರಗಳನ್ನು ಸಮಗ್ರವಾಗಿ ನಿರೀಕ್ಷಿಸಲು ಅವನು ಸಮರ್ಥನಾಗುವದಿಲ್ಲ. ಏಕೆಂದರೆ ಅಂತಹ ನಿರೀಕ್ಷಣದ ಅಂತರ್ದೃಷ್ಟಿಯಿಂದಲೇ ಮನ ಸ್ಸಿನ ಕ್ರಿಯೆಯಲ್ಲಿ-ಸಂಜ್ಞಾಪ್ರವಾಹದಲ್ಲಿ ವ್ಯತ್ಯಯವಾಗಲಿ ವಿಕಲ್ಪವಾಗಲಿ ತಂದೊ ಡ್ಡಿದಂತೆಆಗುತ್ತದೆ! ಆತ್ಮನಿರಿಕ್ಷಣದಲ್ಲಿಯ ಈ ಕುಂದನ್ನು ಪೂರೈಸಿಕೊಳ್ಳಲು ಒಂದು ಮಾರ್ಗವಿದೆ. ನೀರಿಕ್ಷಕನು ಬೇರೆ ಜನರಿಂದ ಅವರ ಅನುಭವ ಅನಿಸಿಕೆಗಳನ್ನು ಕೇಳಿ ಕೂಡಿಹಾಕಬಹುದು. ಇದರಿಂದ ತಮ್ಮ ತಮ್ಮ ಮನೋವ್ಯಾಪಾರ ಮನೋ ವೃತ್ತಿಗಳ ವಿಷಯವಾಗಿ ಇತರರು ಮಾಡಿಕೊಂಡ ಕಲ್ಪನೆ ಗ್ರಹಿಕೆಗಳೊಂದಿಗೆ ತನ್ನ ಅಂತರ್ಜ್ಞಾನವನ್ನು ಹೊಂದಿಸಿ ಹೋಲಿಸಿ ನೋಡಲಸಾವಾಗುವದು. ಆದರೆ ಇಲ್ಲಿ ಒಂದು ಮಾತು ಮರೆಯಲಾಗದು. ಇಂಥ ಹೆರವರ ಗ್ರಹಿಕೆಗಳೂ ತಮ್ಮ ಸ್ವಂತದ ಗ್ರಹಿಕೆ ಅಭಿಪ್ರಾಯಗಳಂತೆಯೇ ಆತ್ಮವಂಚನೆಗೆ ಎಡೆಗೊಡುವಂಥವಿರುವದ ರಿಂದ ಅವೂ ಅಪೂರ್ಣವಾಗಿಯೇ ಇರುತ್ತವೆ. ಆದ್ದರಿಂದ ಮನೋವಿಜ್ಞಾನದಲ್ಲಿ, ಪ್ರಾಯೋಗಿಕ ಪ್ರಾತ್ಯಕ್ಷಿಕವಾದ ವಸ್ತುನಿಷ್ಠ ಪದ್ಧತಿಯನ್ನೂ ಅಂತರ್‌ದೃಷ್ಟಿಯ ಆತ್ಮನೀರಿಕ್ಷಣಪರವಾದ ಏಕಾಂತಿಕ ಪದ್ಧತಿಯನ್ನೂ ಅನ್ಯೋನ್ಯ ಪೂರಕವಾಗಿ ಸಮಂಜಸವಾದ ಪ್ರಮಾಣದಲ್ಲಿ ಹೊಂದಿಸಿ ಉಪಯೋಗಿಸುವದೇ ಶೋಧಕನಿಗೆ ಉತ್ತಮವಾದ ಹಾದಿಯೆಂದು ಹೇಳಬಹುದು. ಎರಿಸ್ಟೋಟಲನ ವಿಶೇಷತೆಯು ಇದೇ ಸರಿ. ಅವನು ಇಂತಹ ಸಮನ್ವಯವನ್ನು ಚಿಂತನಾತ್ಮಕವಾದ ಮತ್ತು

ಚಿಕಿತ್ಸಕವಾದ ರೀತಿಗಳ ಹೊಂದಿಕೆಯನ್ನು– ತನ್ನ ಸಂಶೋಧನ ಕಾರ್ಯದಲ್ಲಿ ಕೈಕೊಂಡನು. ಇನ್ನು ಆತನ ಸಿದ್ಧಾಂತಗಳಲ್ಲಿ ತಲೆದೋರಿದ ಹಲಕೆಲವು ದೋಷ– ಲೋಪಗಳಿಗೆ ಆತನು ಅನುಸರಿಸಿದ ಸಂಶೋಧನ ಪದ್ಧತಿಯು ಕಾರಣವಲ್ಲ; ಆತನ ಕಾಲಕ್ಕೆ, ವಸ್ತುನಿಷ್ಠ ಪ್ರಯೋಗಗಳಿಗೆ ಅವಶ್ಯವಿರುವ ವೈಜ್ಞಾನಿಕ ಜ್ಞಾನದ ಅಪೂರ್ಣತೆಯೇ ಅಂತಹ ಕುಂದುಕೊರತೆಗಳಿಗೆ ಕಾರಣವಾಯಿತು. ಆತನ ಕಾಲದಲ್ಲಿ ತತ್ವಜ್ಞಾನವು ಹೊಂದಿದ ಪ್ರಗತಿಯಷ್ಟೇ ವಿಜ್ಞಾನದ ಪ್ರಗತಿಯಾಗಿದ್ದಾದರೆ, ಹಲವು ಶತಮಾನಗಳ ಹಿಂದೆಯೇ ಮನೋವಿಜ್ಞಾನವು ನಿಶ್ಚಿತವಾದ ಭವ್ಯ ತಳಹದಿಯ ಮೇಲೆ ನಿಲ್ಲುತ್ತಿತ್ತು. ಎರಿಸ್ಟೋಟಲನ ನಂತರದ ವಿಚಾರಕರು ಮನೋವಿಜ್ಞಾನದ ಕುರಿತು ಕೇವಲ ಶಾರೀರಿಕ (ವಸ್ತುನಿಷ್ಠ)ವಾದ ಇಲ್ಲವೆ ಕೇವಲ ಆಧ್ಯಾತ್ಮಿಕ (ತತ್ವನಿಷ್ಠ)ವಾದ ಪದ್ಧತಿಯನ್ನು ಹಿಂಬಾಲಿಸಿದರು. ಏಕೆಂದರೆ ಎರಿಸ್ಟೋಟಲನ ದೃಷ್ಟಿಯ ವಿಶಾಲತೆಯೂ ಸರ್ವಸಂಗ್ರಾಹಕವಾದ ಸಮನ್ವಯ ಬುದ್ಧಿಯ ಸಮತೂಕವೂ ಅವರಲ್ಲಿ ಇದ್ದಿಲ್ಲ.

## ಮಧ್ಯಯುಗವೂ ಪುನರುಜ್ಜೀವನ ಕಾಲವೂ

ಎರಿಸ್ಟೋಟಲನ ನಂತರ ಮನಸ್ಸಿನ ಕುರಿತು (ಅಂದರೆ ಅಂದಿನ ಕಲ್ಪನೆಯಂತೆ ಆತ್ಮನ ಕುರಿತು) ಅಭ್ಯಾಸ ಮಾಡಿದವರು ಕ್ರೈಸ್ತ ತತ್ವಜ್ಞಾನಿಗಳು. ಇವರೆಲ್ಲ ಮುಮುಕ್ಷುಗಳು, ಸಾಧಕರೂ ಆದ್ದರಿಂದ ಸ್ವಾಭಾವಿಕವಾಗಿಯೇ ಆತ್ಮದ ಉತ್ಪತ್ತಿ, ಸ್ವರೂಪ ಮತ್ತು ಭವಿತವ್ಯ ಇವುಗಳ ವಿಷಯವಾಗಿ ತಾತ್ವಿಕ ಪ್ರಶ್ನೆಗಳನ್ನು ಬ್ರಹ್ಮಜ್ಞಾನದ ದೃಷ್ಟಿಯಿಂದ ಬಿಡಿಸುವವರಲ್ಲಿ ತೊಡಗಿದರು. ಗ್ರೀಸದ ಸಂಸ್ಕೃತಿ ಸೂರ್ಯನು ಅಸ್ತಂಗತನಾದ ಮೇಲೆ, ಆಗಿನ ಅಂಧಃಕಾರದ ಯುಗದಲ್ಲಿ ವಿಜ್ಞಾನವು ಬೆಳೆಯುವದೆಂತು ? ಅಜ್ಞಾನದ ಆಧಾರದ ಮೇಲೆ ಅಂಧಶ್ರದ್ಧೆಯು ಜನರನ್ನು ಆಳುತ್ತಿರುವಾಗ ಧರ್ಮಗ್ರಂಥದ ಹೊರಗಿನ ವಿಷಯವೆಲ್ಲ ವಿದ್ಯೆಯಲ್ಲ, ಪಾಪ ಎಂದು ಪರಿಗಣಿಸಲ್ಪಡಲಾರಂಭವಾಯಿತು. ಇಂಥ ಸಂದರ್ಭದಲ್ಲಿ ವಸ್ತುನಿಷ್ಠವಾದ ವಿಜ್ಞಾನವೂ ಅದನ್ನೊಳಗೊಂಡ ಶರೀರಶಾಸ್ತ್ರವೂ, ಜ್ಞಾನತಂತುಗಳ ವ್ಯವಸ್ಥೆಯೇ ಮೊದಲಾದ ಕೆಲವು ಶೋಧಗಳನ್ನೂ ಸಿದ್ಧಾಂತಗಳನ್ನೂ ಕಂಡು ಹಿಡಿಯುವವರೆಗೆ ಕುರುಡುನಂಬುಗೆ ಹೆಚ್ಚಾಯ್ತು; ಹೊಸ ವಿಚಾರಗಳು ಕಣ್ಮರೆಯಾಗಿ ಹೋದವು. ಆದ್ದರಿಂದ ಮುಂದೆ ಕೆಲವು ಶತಮಾನಗಳವರೆಗೂ ಮನೋವಿಜ್ಞಾನವು ವಿಜ್ಞಾನವಾಗಿ ಬೆಳೆಯಲಿಲ್ಲ. ಬ್ರಹ್ಮಜ್ಞಾನದ, ಆಧ್ಯಾತ್ಮ ವಿದ್ಯೆಯ, ತಾತ್ವಿಕ ಶಬ್ದಜಾಲದ ಒಂದು ಅಂಗವಾಗಿ ಉಳಿಯಿತು.

ಇಂಥ ಕಗ್ಗತ್ತಲೆಯ ಕಾಲವು ೧೫–೧೬ನೆಯ ಶತಮಾನಗಳ ತನಕವೂ ಉಳಿಯಿತು.

ಆಮೇಲೆ ಸಾಂಸ್ಕೃತಿಕ ಪುನರುಜ್ಜೀವನದ ಗಾಳಿಯು ಯುರೋಪದಲ್ಲಿ ಬೀಸತೊಡಗಿ ಆ ಮಬ್ಬು ಕಡಿಮೆಯಾಗಿ ನಸಕು ಹರಿಯಿತು. ನಮ್ಮ ಭಾರತದಲ್ಲಿ ಮಾತ್ರ ಶ್ರೀ ಹರ್ಷವರ್ಧನನ ಆಳಿಕೆಯು ನಂತರ ನಷ್ಟವಾದ ರಾಜಕೀಯ ಮತ್ತು ಸಾಂಸ್ಕೃತಿಕ ಜೀವನವು ಒಂದರ ಹಿಂದೊಂದು ಬಂದ ಪರಕೀಯದಾಳಿಗಾರರ ಭಾರದಡಿಗೆ ತೊತ್ತುಳಿಗೊಳ್ಳುತ್ತ ಇದುವರೆಗೆ ತಲೆಯೆತ್ತದೇ ತೊಳಲಾಡುತ್ತದೆ. ಬೌದ್ಧಧರ್ಮದ ಬೌದ್ಧಿಕ ಅಂದೋಲನದ ವಿರುದ್ಧ ಪ್ರತಿಷ್ಠಿತ ಸನಾತನಧರ್ಮವು ಯಶಸ್ವಿಯಾಗಿ ಉಂಟುಮಾಡಿದ-ಕುಮಾರಿಲಭಟ್ಟರಿಂದ ಆರಂಭವಾದ–ಪ್ರತಿ ಕ್ರಾಂತಿಯು ಭಾರತೀಯ ಜ್ಞಾನ ವಿಜ್ಞಾನದ ವಿಕಾಸವನ್ನು ತಡೆದು ಚಿಕಿತ್ಸಕ ಬುದ್ಧಿಯನ್ನು ಹೆಪ್ಪುಗಟ್ಟಿಸಿಬಿಟ್ಟಿತ್ತು. ಹಿಂದೆ ೧೬ನೆಯ ಶತಕದಲ್ಲಿ ಯುರೋಪದಲ್ಲಿ ಆದ ವಿಚಾರಕ್ರಾಂತಿಯು ಪುನರುಜ್ಜೀವನದ ಯುಗಾಂತರವು ನಮ್ಮಲ್ಲಿ ೨೦ನೆಯ ಶತಮಾನದಲ್ಲಿ ಇದೀಗ ತಲೆದೋರಬೇಕಾಗಿದೆ ! ಹೀಗೆ ಅಂದು ಸಾಂಸ್ಕೃತಿಕ ಪುನರುಜ್ಜೀವನವಾದ ಮೇಲೆಯೇ ಮನೋವಿಜ್ಞಾನದ ವಿಚಾರದಲ್ಲಿ ಪ್ರಗತಿಯು ಕಾಣಿಸಿಕೊಂಡಿತು. ಆಧುನಿಕ ಮನೋವಿಜ್ಞಾನದ ಆರಂಭವು ಈ ಕಾಲದಿಂದಲೇ ಎಂದು ಹೇಳಬಹುದು. ಆದರೂ ಅದರ ಪರಿಣಾಮಗಳ ಪ್ರಭಾವವು ಅದರ ತತ್ವ, ತಥ್ಯಗಳ ಉಪಯೋಗವು–ಜನಜೀವನದಲ್ಲಿ ೧೯ನೆಯ ಶತಮಾನದ ಉತ್ತರಾರ್ಧದಿಂದಲೇ ಆಗತೊಡಗಿತು. ಇಂದಿಗೂ ಆ ಮನೋವೈಜ್ಞಾನಿಕ ಸಿದ್ಧಾಂತಗಳ ಪೂರ್ಣತೆಯು ಪ್ರತಿಪಾದಿತವಾಗುವದರಲ್ಲಿಯೇ ಇರುತ್ತದೆ. ಜನತೆಯ ತಪ್ಪು ತಿಳುವಳಿಕೆ, ಪೂರ್ವಗ್ರಹಗಳೊಂದಿಗೆ ಮನೋವಿಜ್ಞಾನವು ಇನ್ನೂ ಕೊನೆಯ ಕಾಳಗಗಳನ್ನು ಗೆಲ್ಲಬೇಕಾಗಿದೆ.

ಪುನರುಜ್ಜೀವನ ಯುಗದ ಅಂತಸ್ಫೂರ್ತಿಯು ಭೌತಿಕವಾದದಲ್ಲಿದೆ. ಪರದಿಂದ ಇಹಕ್ಕೆ ಹೊರಳಿದ ದೃಷ್ಟಿಯು ಜೀವನಕ್ರಾಂತಿಯ ಹಾದಿಯನ್ನು ಕಂಡುಹಿಡಿಯಿತು. ಈ ಕ್ರಾಂತಿಯ ಪ್ರೇರೇಪಕರು ವಾಸ್ತವವಾದಿಗಳು. ಬುದ್ಧಿಯನ್ನೇ ಪ್ರಮಾಣ ವಾಗಿಟ್ಟುಕೊಂಡು ವಸ್ತುನಿಷ್ಠವಾದ ಶೋಧಕ ದೃಷ್ಟಿಯವರು. ತಿತೀಕ್ಷೆ ಮುಮುಕ್ಷೆಗಳ ಬದಲು ಜಿಜ್ಞಾಸೆ ಚಿಕೀರ್ಷೆಗಳು ಜೀವನದ ಅಡಿಗಲ್ಲುಗಳಾದವು. ಮಧ್ಯಯುಗದಲ್ಲಿ ಪಾಶ್ಚಾತ್ಯ ಮನುಷ್ಯನು ಜೀವನ್ಮುಕ್ತನಾಗಲು ಹೊರಟ ಜೀವನ್ಮೃತನಾಗಿದ್ದನು. ಆತನ ತನುಮನವೆಲ್ಲ ಪರಲೋಕದ ಚಿಂತೆಯಲ್ಲಿ ವ್ಯಗ್ರ ವಾಗಿದ್ದವು. ಆದರೆ ಈಗ ಆತನು ಸುತ್ತಲಿನ ಪ್ರಪಂಚದಲ್ಲಿ ಇಹಲೋಕದ ಆಗು ಹೋಗುಗಳಲ್ಲಿ ಕುತೂಹಲವುಳ್ಳವನಾದನು. ಹೀಗೆ ಜೀವನದ ಕುರಿತು ನೋಡುವ ವೃತ್ತಿಯಲ್ಲಿ ಒಂದು ಪರಿವರ್ತನೆ ಆಯಿತು. ಇದರ ಪರಿಣಾಮವಾಗಿ ಮನುಷ್ಯನು ತನ್ನನ್ನು ತಾನು ನೋಡಿಕೊಳ್ಳಲು ಹೊಸದೊಂದು ನೋಟದ ನಿಟ್ಟನ್ನು ಪಡೆದನು.

ಸ್ವಲ್ಪದರಲ್ಲಿ ಹೇಳುವದಾದರೆ ಮನುಷ್ಯನ ವಿಚಾರದ ಕೇಂದ್ರವು ಕೇವಲ ಕಾಲ್ಪನಿಕ ಮಾನವೀ ಆದರ್ಶಗಳಿಂದ ಮಾನವೀ ವರ್ತನದ ವಸ್ತುಸ್ಥಿತಿಗಳಲ್ಲಿ ಬಂದಿಳಿದು ನಿಂತಿತು. ಈ ಮೊದಲು ಒಳಿತಿನ ಕಲ್ಪನೆಯು ಜಗತ್ತಿಗಾಗಲಿ ಜೀವನಕ್ಕಾಗಲಿ ಹೊಂದಿಕೊಂಡಿದ್ದಿಲ್ಲ. ಶ್ರೇಯ ಮತ್ತು ಪ್ರೇಯಗಳಲ್ಲಿ ವ್ಯತ್ಯಾಸ–ವಿರೋಧಗಳನ್ನು ತತ್ವಜ್ಞಾನಿಗಳು ಕಲ್ಪಿಸಿದ್ದರು. ನಿರಪೇಕ್ಷವಾದ ಸ್ವತಃ ಸಿದ್ಧವಾದ ಶುಭತತ್ವ ಒಂದಿದ್ದು, ಅದರ ಶೋಧನೆಯಲ್ಲಿ ಬುದ್ಧಿಪೂರ್ವಕವಾಗಿ ಎಡಬಿಡದೆ ತೊಡಗಿರುವದೇ ಮನುಷ್ಯನಿಗೆ ಮಾರ್ಗದರ್ಶಕವಾದ ಆದರ್ಶವೆಂದು ಅಂದಿನ ತತ್ವವೇತ್ತರು ಒಪ್ಪಿಕೊಂಡಿದ್ದರು. ನಮ್ಮಲ್ಲಿಯೂ 'ಆತ್ಮಾರ್ಥೇ ಪೃಥ್ವೀಂತ್ಯಜೇತ್' ಎಂಬ ಅತ್ಯಂತ ವ್ಯಕ್ತಿನಿಷ್ಠವಾದ ತಾತ್ವಿಕ ಸ್ವಾರ್ಥವೂ ಐಹಿಕ ಹೊಣೆಗಾರಿಕೆಗಳನ್ನು ಹರಿದೊಗೆವ ಹಟವೂ ಜನರ ಆದರಕ್ಕೆ ಪಾತ್ರವಾಗಿದ್ದವು. ಆದರೆ ಪುನರುಜ್ಜೀವನವ ಯುಗದಿಂದ–ಹೊಸ ಭೂಮಿ ಹೊಸ ಭಾಗ್ಯ ತೆರೆವಂದಿನಿಂದ–ಈ ಆದರ್ಶವಾದಿಯ ಮುಗಿಲಿನ ಕಡೆಯ ನೋಟವು ನೆಲದ ಕಡೆಗೆ ತಿರುಗಿತು. ಮನುಷ್ಯಸ್ವಭಾವದ ಕುರಿತು ಹೊಸ ಬೆಳಕನ್ನು ಮೇಧಾವಿಗಳು ಕಂಡರು. ಮನುಷ್ಯನು ಮೂಲತಃ ಬುದ್ಧಿಯಿಂದ ಪ್ರಚೋದಿತನಾಗುವದಿಲ್ಲ. ಮನುಷ್ಯನ ನಿತ್ಯದ ಬಾಳುವೆಯಲ್ಲಿ ಬುದ್ಧಿಯು ಪ್ರೇರಣೆಯನ್ನು ಕೊಡುವದಿಲ್ಲ. ಮನುಷ್ಯನ ಕಾಮನೆ ಕ್ಷುಧೆಗಳೇ ಆತನ ಆಚಾರವನ್ನು ಪ್ರಚೋದಿಸುತ್ತವೆ, ಆತನ ಬದುಕಿಗೆ ರೂಪ ಬಣ್ಣಗಳನ್ನು ನೀಡುತ್ತವೆ-ಎಂದು ಈಗಿನವರು ಪ್ರತಿಪಾದಿಸಿವರು. ಈ ಸಿದ್ಧಾಂತದಿಂದ ಮನುಷ್ಯನಲ್ಲಿ ಅಮರವಾದ ಆತ್ಮವು ಇರಬಹುದೆಂಬ ಮಾತು ತನ್ನ ತಾನೆ ಮೂಲಿಗುಂಪಾಯಿತು. ಈ ಸಮಯದಲ್ಲಿಯೇ ವೈಜ್ಞಾನಿಕ ವಿಚಾರ ಪದ್ಧತಿಯೂ ಶಾಸ್ತ್ರಶುದ್ಧ ಕಾರ್ಯಪ್ರವೃತ್ತಿಯೂ ಜನರ ತಿಳುವಳಿಕೆಯನ್ನು ಆಳಹತ್ತಿದವು. ಇವರ ಪ್ರಭಾವವು ಎರಡು ರೀತಿಯಾಗಿ ಕಂಡುಬಂತು. ಒಂದೆಡೆಗೆ ಮನೋವಿಜ್ಞಾನಿಗಳು ಮಾನಸಿಕ ಜೀವನವನ್ನು ಮನೋವ್ಯಾಪಾರಗಳ ಶಾರೀರಿಕ ದೃಷ್ಟಿಯಿಂದ ಸೂಕ್ಷ್ಮವಾಗಿ ಶೋಧಿಸಲಿಕ್ಕೆ ತೊಡಗಿದರು. ಇನ್ನೊಂದೆಡೆಗೆ, ಮಾನಸಿಕ ವ್ಯಾಪಾರಗಳ ವಿವೇಚನೆಯಲ್ಲಿ ಅತಿಶಯ ತರ್ಕಶುದ್ಧವಾಗಿ ನಡೆಯುವ ವೃತ್ತಿ ತಲೆದೋರಿತು. ಹಿಂದಿನವರಂತೆ ಶಾಸ್ತ್ರೀಯ ವಿಷಯದಲ್ಲಿ ಕೂಡ ಪ್ರಮಾಣಗಳನ್ನು ಮೀರಿ ಅನುಮಾನಗಳನ್ನು ಮಾಡುತ್ತ ಹಾರುವ ಕಲ್ಪನೆಗೆ ಕಡಿವಾಣ ಬಿತ್ತು. ಇಂಥ ಒಂದು ತರ್ಕ ಕರ್ಕಶವಾದ ವಿಶ್ಲೇಷಕ ವೃತ್ತಿಯಿಂದ ಮನಸ್ಸಿನ ಸ್ವರೂಪದ ಕುರಿತು ಯಾಂತ್ರಿಕ ಕಲ್ಪನೆಯುಂಟಾಗಲು ಕಾರಣವಾಯಿತು.

### ಹೊಬ್ಸನೂ, ಡೆಕಾರ್ಟೀಯೂ

೧೭ ನೆಯ ಶತಮಾನದಲ್ಲಿ ಇಂಗ್ಲಂಡದಲ್ಲಿ ಥೊಮಸ್ ಹೊಬ್ಸ ಎಂಬ ತತ್ವ

ಜ್ಞಾನಿಯು ಮನೋವಿಜ್ಞಾನದ ಒಂದು ವಿಚಾರಪ್ರಣಾಳಿಯನ್ನು ಉಂಟು ಮಾಡಿದನು. ಅದು ಈ ರೀತಿಯಾಗಿತ್ತು:-ಬಾಹ್ಯನಿಮಿತ್ತದಿಂದ ಮನೋಯಂತ್ರದಲ್ಲಿ ಉಂಟಾಗುವ ವಿಶಿಷ್ಟವಾದ ಗತಿಯೆಂದರೆ ಅನಿಸಿಕೆ (ವೇದನೆ)ಯು. ಮತ್ತು ಬುದ್ಧಿಯೆಂದರೆ (ವಿಚಾರಶಕ್ತಿಯೆಂದರೆ) ಅನುಭವವನ್ನು ಒಳಗೊಂಡಿರುವ, ಕಲ್ಪನೆ ಗಳನ್ನು ಕೂಡಿಸುವ ಇಲ್ಲವೆ ಕಳೆಯುವ ಒಂದು ಗಣಿತ ಕ್ರಿಯೆಯ ಕ್ರಮವು. ವೇದನೆ ಯೆಂದರೆ ನೋವನ್ನಾಗಲಿ ನಲುಮೆಯನ್ನಾಗಲಿ ಕೆಣಕುವ ಒಂದು ಒಳಬಗೆಯ ಆಘಾತವು. ಇದೇ ತೆರನಾದ ಆಘಾತವು ಹೊರಬಗೆಯದಾದರೆ-ಅಂತರ್ಮುಖ ಆಘಾತದ ವ್ಯಸ್ತರೂಪವಾದ ಬಹಿರ್ಮುಖ ಆಘಾತವಾದರೆ, ಅದೇ ಇಚ್ಛೆ ಇಲ್ಲವೆ ಸಂಕಲ್ಪವು. ಅದು ನೋವು ನಲುಮೆಗಳನ್ನು ಉಂಟುಮಾಡಲು ನಮ್ಮನ್ನು ಪ್ರೇರಿಸುತ್ತದೆ. ಮನುಷ್ಯನಲ್ಲಿ ಈ ಇಚ್ಛೆಯು ನಿರ್ಣಯಾತ್ಮಕ ಬುದ್ಧಿಯಿಂದ ಪರಿಪಕ್ವವಾಗುತ್ತದೆ-ಹದಗೊಳ್ಳುತ್ತದೆ. ಹೀಗೆ ಇಚ್ಛೆ ಬುದ್ಧಿಗಳಲ್ಲಿ ತಿಕ್ಕಾಟವಾಗಿ ಹದಗೊಂಡು ಹುರಿಗೊಂಡು ತಾಳಿ ನಿಲ್ಲುವ ಬಯಕೆಯೇ ದೃಢವಾಗಿ ಕ್ರಿಯಾಶಕ್ತಿ ಯಾಗುತ್ತದೆ. ಹಲವು ಶತಮಾನಗಳ ಹಿಂದೆ ಪ್ಲೇಟೋನು ಕೂಡ ಇದೇ ನಿರ್ಣಯಕ್ಕೆ ಮುಟ್ಟಿದ್ದನು.

ಇತರ ವಿಜ್ಞಾನಶಾಸ್ತ್ರಗಳಂತೆಯೆ ಮನೋವಿಜ್ಞಾನದ ಸಂಶೋಧನವಲ್ಲಿಯೂ ನಿರೀಕ್ಷಣ, ಪರೀಕ್ಷಣ, ತುಲನಾತ್ಮಕ ಪದ್ಧತಿಯನ್ನು ಅನುಸರಿಸುವದು ಅಗತ್ಯ ವೆಂದು ಹೊಬ್ಸನು ತೋರಿಸಿಕೊಟ್ಟನು. ಇದರಲ್ಲಿಯೇ ಆತನ ಮನೋವಿಜ್ಞಾನ-ಸಿದ್ಧಾಂತಗಳ ಮುಖ್ಯ ಬೆಲೆಯಿದೆ. ಈ ಕಾರಣದಿಂದಲೇ ಆತನಿಗೆ ಆಧುನಿಕ ಮನೋವಿಜ್ಞಾನದ ಪಿತಾಮಹನೆಂದು ಕರೆಯುತ್ತಾರೆ. (ನಿಜವಾಗಿಯೂ ನೋಡಿದರೆ ಮನೋವಿಜ್ಞಾನವನ್ನೊಳಗೊಂಡ ಎಲ್ಲ ಭೌತಿಕಶಾಸ್ತ್ರಗಳಿಗೆ ಎರಿಸ್ಟೋಟಲನು ಆದಿ ಗುರುವಾಗುವದರಿಂದ ಹೊಬ್ಸನು ಮನೋವಿಜ್ಞಾನದ ಮಟ್ಟಿಗೆ ಜನಕ ನೆಂದು ಹೇಳಬಹುದು.)

ಹೊಬ್ಸನು ಇಂಗ್ಲಂಡದಲ್ಲಿ ತನ್ನ ತತ್ವಗಳನ್ನು ಮಂಡಿಸುತ್ತಿರುವಾಗಲೇ, ಬ್ರಿಟಿಶ ಸಾಮುದ್ರಧುನಿಯಾಚೆಗೆ ಅದೇ ಕಾಲದಲ್ಲಿ ಮತ್ತೊಬ್ಬ ತತ್ವಜ್ಞಾನಿಯು ಇದೇ ವಿಷಯದ-ಮನೋವಿಜ್ಞಾನದ ಸಂಶೋಧನೆಯಲ್ಲಿ ತೊಡಗಿದ್ದನು. ಆತನ ಹೆಸರು ರೇನ್ಹೇ ಡೆಕ್ಕಾರ್ಡೇ. ಸತ್ಯಶೋಧನೆಯಲ್ಲಿ ಈತನ ದೃಷ್ಟಿಯು ಏಕನಿಷ್ಠ ವಿಜ್ಞಾನಿಯದಾಗಿತ್ತು. ಆ ಮೊದಲಿನ ಮನಃ ತತ್ವದ ಕುರಿತು ನಡೆದುಬಂದ ಎಲ್ಲ ಸಿದ್ಧಾಂತಗಳನ್ನು ಬಿಸುಟಿ ಈತನು ಹೆರವರಿಂದ ಎರವಾಗಿ ತಂದ ಏನೊಂದು ಗೃಹಿಕೆಯನ್ನಿಟ್ಟುಕೊಳ್ಳದೆ ಮನದ ಹಸನಾದ ಬರೆಗಾಗದದ ಮೇಲೆ ತನ್ನವೇ

ಆವ ತಾತ್ವಿಕ ಶೋಧಗಳನ್ನು ಬರೆಯಲಾರಂಭಿಸಿದನು. ಬುದ್ಧಿಪ್ರಮಾಣವನ್ನೇ ತನ್ನ ಊರಗೋಲನ್ನು ಮಾಡಿಕೊಂಡ ಎದೆಗಾರನಿವನು. ಪ್ರತಿಯೊಂದು ಸಂಗತಿಯ ಸತ್ಯಸ್ಥಿತಿಯನ್ನು ಈತನು ಸಿದ್ಧಮಾಡಲು ಹೊರಟನು. ಯಾವದೇ ಸಂದೇಹಕ್ಕೆ ಎಡೆಗೊಡದ ಸ್ವಯಂಭೂ ಸತ್ಯವಾಗಿರುವಂಥ ಯಾವದಾದರೊಂದು ಶಕ್ತಿ ಇಲ್ಲವೆ ತತ್ವವು ಇರುವದೋ ಎಂದು ಈತನು ಹುಡುಕಬಯಸಿದನು. ಕೊನೆಗೆ ಈತನಿಗೆ ಅಂತಹದೊಂದು ತತ್ವವು ದೊರಕಿತು. ಅದನ್ನು ಈತನು ಹೆಸರಾದ ಒಂದು ಸೂತ್ರದಲ್ಲಿ ಸಾರಿ ಹೇಳಿದನು. 'ಯತಶ್ಚಿಂತಯಾಮಿ, ತತೋ ಹ ಮಸ್ಮಿ' ಎಂಬರ್ಥದ ಅವನ 'ಮಹಾವಾಕ್ಯವು' ಲ್ಯಾಟಿನ್ ಭಾಷೆಯಲ್ಲಿದೆ. 'ನಾನು ವಿಚಾರ ಮಾಡುತ್ತೇನೆ–ನನ್ನ ಇರುವಿನ ಅರಿವು ನನಗಾಗುತ್ತದೆ. ಆದ್ದರಿಂದ ನಾನು ಇದ್ದೇನೆಂಬುದು ಸತ್ಯ. ಅಂದರೆ ನನ್ನ ಅರಿವೇ ನನ್ನ ಇರವಿನ ಪ್ರಮಾಣ' ಎಂಬುದು ಆತನ ತತ್ವ. ಈ ಸೂತ್ರವನ್ನೊಮ್ಮೆ ಸಾರಿದ ಮೇಲೆ ಇದರ ಒರೆಗೆ ಹಚ್ಚಿ ಪ್ರತಿಯೊಂದನ್ನು ವಿಮರ್ಶಿಸಿದನು. ಇದೇ ತತ್ವದಿಂದ ಆತನು ದೇವರ ಅಸ್ತಿತ್ವವನ್ನು ಸಿದ್ಧಮಾಡಿದನು. ದೇವರ ನೆರಳು ಇನ್ನೂ ಮನೋವಿಜ್ಞಾನದ ಮೇಲೆ ಬಿದ್ದೇ ಇತ್ತು. ದೇವರ ಸ್ವರೂಪದಿಂದ ಆತನು, ಮನುಷ್ಯನ ಮನಸ್ಸಿನ ಸ್ಥಿರತೆಯು ನಂಬಲರ್ಹವಾಗಿದೆಯೆಂದು ಪ್ರತಿಪಾದಿಸಿದನು. ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಬಾಹ್ಯಪ್ರಪಂಚದ ಸ್ವರೂಪದಿಂದ ಮನಸ್‌ತತ್ವವೂ ಭೌತಿಕ ಜಡತ್ವವೂ ಪೂರ್ಣವಾಗಿ ಬೇರೆ ಬೇರೆ ವಸ್ತುಗಳಾಗಿರುವವೆಂದು ಸಾಧಿಸಿದನು. ಈಗೊಂದು ತೊಂದರೆ ತಲೆದೋರಿತು. ಮನಸ್ತತ್ವವೂ ಭೌತಿಕವಸ್ತು ಜಾತವೂ ಹೀಗೆ ಪರಸ್ಪರದಿಂದ ಪ್ರತ್ಯೇಕವಾಗಿ ಪೃಥಕ್ಕಾಗಿರುವವೆಂದು ಒಪ್ಪಿದರೆ, ಅವೆರಡೂ ತತ್ವಗಳು ಮನುಷ್ಯನಲ್ಲಿ ಒತ್ತಟ್ಟಿಗೆ ಒಂದಾದಂತೆ ಕೆಲಸ ಮಾಡುವದು ಹೇಗೆ ? ತನ್ನ ತನ್ನ ಮಟ್ಟಿಗೆ ಸ್ವತಂತ್ರವಾಗಿರುವ ಮನಸ್ಸು ಮತ್ತು ಜಡದ್ರವ್ಯ ಇವೆರಡು ತತ್ವಗಳ ಅನ್ಯೋನ್ಯ ಸಂಬಂಧವನ್ನು ಸ್ಪಷ್ಟವಾಗಿ ನಿರ್ಣಯಿಸ ಬೇಕಾಯಿತು. ಡೆಕ್ಕಾರ್ಡೆಯ ಜಾಣ್ಮೆಯು ಈ ತೊಡಕನ್ನು ಬಿಡಿಸಿತು.

ಪಶುಗಳಿಗೆ ಮನಸ್ಸೇ ಇಲ್ಲವೆಂದು ಆತನು ಅಭಿಪ್ರಾಯಪಟ್ಟನು. ಪಶುಗಳೆಂದರೆ ಸರಳವಾಗಿ ಸುಸೂತ್ರವಾಗಿ ಸ್ವಯಂಪ್ರೇರಣೆಯಿಂದಲೇ ನಡೆವ ದುಡಿವ ಯಂತ್ರಗಳು ! ಮನುಷ್ಯನ ಶರೀರವಾದರೂ ಅಂತಹದೇ ಒಂದು ಯಂತ್ರವು. ಆದರೆ ಈ ಯಂತ್ರದಿಂದ ಮಿದುಳಿನಲ್ಲಿ ಇರುವ 'ಪೀನಿಯಲ್' ಎಂಬ ಗ್ರಂಥಿಗೆ ಭಾವನೆಗಳು ಹರಿದು ಹೋಗುವವು; ಮತ್ತು ಅಲ್ಲಿ ಮನಸ್ಸು ಅವುಗಳನ್ನು ಸ್ವೀಕರಿಸಿ ತಿರುಗಿ ಶರೀರಕ್ಕೆ ನಡೆ ನುಡಿಯ ಪ್ರೇರಣೆ ಕೊಡುವದು. ಹೀಗೆ ಶರೀರದಲ್ಲಿಯ ಜಡ ತತ್ವವನ್ನು ಮನಸ್ತತ್ವವು ಅಂಕೆಯಲ್ಲಿಟ್ಟು ಆಳುವದು.

ಡೆಕ್ಕಾರ್ಡೆಯು ಕೊಟ್ಟ ಈ ಮಾರುದ್ದ ಸಮರ್ಥನೆಯು ತಳಪದಿಯೇ ಒಂದು ಸಂಗತಿಯಿಂದ ಕುಸಿದು ಬೀಳುತ್ತದೆ. ಅದೇನೆಂದರೆ, ಮನುಷ್ಯನಿಗೆ ಮಾತ್ರವಲ್ಲದೇ ಪಶುಗಳಿಗೂ ಆತನು ಹೇಳುವ 'ಪೀನಿಯಲ್' ಗ್ರಂಥಿಯು ಇರುತ್ತದೆ. ಈ ಮಾತನ್ನು ಆಧುನಿಕ ಶೋಧವು ಗೊತ್ತು ಹಚ್ಚಿದೆ. ಆದರೆ ಈ ಶೋಧವಾಗುವ ಮೊದಲು ಡೆಕ್ಕಾರ್ಡೆಯ ವಿಚಾರಗಳ ಪ್ರಭಾವವು ಆ ಕಾಲದ ತತ್ವಜ್ಞಾನದ ಮೇಲೆ ಬಹಳವಾಗಿ ಬಿತ್ತು. ಹೀಗಾಗಿ ಮನುಸ್ಸು ಮತ್ತು ಶರೀರ ಇವು ಪರಸ್ಪರ ಭಿನ್ನವಾದ ಬೇರೆಯಾದ ವಸ್ತುಗಳೆಂದೇ ಅಂದಿನವರ ಸಾಮಾನ್ಯ ತಿಳುವಳಿಕೆ ಯಾಯಿತು. ನಮ್ಮಲ್ಲಿಯೂ ತತ್ವಜ್ಞಾನಿಗಳು ಜೀವವನ್ನು ಜಡದಿಂದ ಬೇರೆಯೆಂತ ಕಲ್ಪಿಸಿದ್ದಾರೆ. ತಿಂಗಳ ಸಂಬಳ ಬಂದೊಡನೆಯೇ ತನ್ನ ಹಳೇಹರಕು ಬಟ್ಟೆಗಳನ್ನು ('ವಾಸಾಂಸಿ–ಜೀರ್ಣಾನಿ') ಒಗೆದು ಹೊಸ ಶರ್ಟು ಹೊಲಿಸಿಕೊಳ್ಳುವ ('ನವಾನಿ–ಗೃಹ್ಣಾತಿ') ಕಾರಕೂನನ ಭೂಮಿಕೆಯನ್ನು ಜೀವಕ್ಕೆ ಕೊಟ್ಟಿಲ್ಲವೇ ?

ಹೀಗೆ ಎಷ್ಟೋ ಸಾಕಷ್ಟು ತಪ್ಪು ವಿಧಾನಗಳನ್ನು ಮಾಡಿದ್ದರೂ ಡೆಕ್ಕಾರ್ಡೆಯು ಮನೋವಿಜ್ಞಾನದ ಬೆಳವಣಿಗೆಗೆ ತುಂಬ ನೆರವಾದನೆಂಬಲ್ಲಿ ಸಂದೇಹವಿಲ್ಲ. ಏಕೆಂದರೆ ಶರೀರದಲ್ಲಿಯ ಪರಾವರ್ತನ ಕ್ರಿಯೆಯ ತತ್ವವನ್ನು ಅಂದರೆ ಹೊರಗಿನ ನೆವಗಳಿಗೆ ದೇಹದಿಂದಾಗುವ ಅನೈಚ್ಛಿಕವಾದ ತಾತ್ಕಾಲಿಕವಾದ (ಎವೆಯಿಕ್ಕುವದೇ ಮುಂತಾದ) ಪ್ರತಿಕ್ರಿಯೆಗಳ ತತ್ವವನ್ನು ಪ್ರತಿಪಾದಿಸಿದವನು ನಿಜವಾಗಿಯೂ ಇವನೇ ಮೊದಲು ಈ ವಿಷಯದ ಮಟ್ಟಿಗೆ ತನ್ನ ಕಾಲಮಾನ ಜ್ಞಾನದ ಮಟ್ಟವನ್ನು ಮೀರಿ ಮುಂದಡಿ ಇಟ್ಟನು. ಆತನ ಈ ಪರಾವರ್ತನ ಕ್ರಿಯೆಯ ತತ್ವವು ಅದೆಷ್ಟೋ ಕಾಲ ಕೇವಲ ಅನುಮಾನವಾಗಿಯೇ ನಿಂತಿತು. ೧೯ನೆಯ ಶತಮಾನದ ಆದಿಯ ತನಕವೂ ಆ ತತ್ವವು ಪ್ರಯೋಗ ಪ್ರಮಾಣಗಳಿಂದ ಸಮರ್ಥಿಸಲ್ಪಡಲಿಲ್ಲ. ಡೆಕ್ಕಾರ್ಡೆಯು ಶರೀರದಲ್ಲಿಯ ಚಟುವಟಿಕೆ ಮತ್ತು ತಿಳುವಳಿಕೆ ಇವೆರಡೂ ಕ್ರಮಗಳ ಸ್ವರೂಪವನ್ನು ಶರೀರರಚನಾಶಾಸ್ತ್ರದ ದೃಷ್ಟಿಯಿಂದ ಚೆನ್ನಾಗಿ ಮನಗಂಡಿದ್ದನು. ಅದೇ ಮೇರೆಗೆ ಭಾವನೆಗಳ ರೂಪ ರೀತಿಗಳ ಕುರಿತು ಅವನು ಕೊಟ್ಟ ಎಷ್ಟೋ ಮತಗಳು ಬೆಲೆಯುಳ್ಳವಿದ್ದುವು. ಇದಲ್ಲದೆ ಆತನು ಮನಸ್ತತ್ವಕ್ಕೆ ಅರಿವನ್ನು–ಸ್ವಯಂಪ್ರಜ್ಞೆಯನ್ನು–ನಿರೂಪಿಸಿ ಅದರ ಸ್ವರೂಪವನ್ನು ಹೆಚ್ಚು ವಿಶಾಲವಾಗಿ ಮಾಡಿದನು.

## ಲೊಕ್ ಮತ್ತು ಹ್ಯೂಮ

ಡೆಕ್ಕಾರ್ಡೆಯ ನಂತರ ಮನೋವಿಜ್ಞಾನದ ಮುಂದಡಿಗೆ ಜೊನ್‌ಲೊಕ್ ಎಂಬ

ತತ್ವಜ್ಞನು ಕಾರಣನಾದನು. ಈ ಮೇಧಾವಿಯು 'ಮಾನವೀ ಬುದ್ಧಿಯ ಕುರಿತು ಒಂದು ಪ್ರಬಂಧ'ವೆಂಬ ಒಂದು ಪ್ರಚಂಡ ಗ್ರಂಥವನ್ನು ಪ್ರಕಟಿಸಿದನು. ಇಂಗ್ಲಂಡದ ಮಟ್ಟಿಗೆ ಈತನೇ ಮನೋವಿಜ್ಞಾನದ ಜನಕನೆನಿಸಿಕೊಂಡನು. ಜ್ಞಾನವೆಂದರೇನು ? ಎಂಬುದನ್ನೇ ಈತನು ತನ್ನ ತತ್ವಜ್ಞಾನದ ವಿಷಯ ವನ್ನಾಗಿಟ್ಟುಕೊಂಡನು. ಆ ವಿಷಯದ ಒಂದು ಅಂಗವನ್ನು ವಿವೇಚಿಸಲು ಮೇಲೆ ಹೇಳಿದ ಬೃಹದ್ಗ್ರಂಥವನ್ನು ಬರೆದನು. ಗ್ರಂಥದಲ್ಲಿಯ ವಿಷಯವು ಆತನ ಮುಖ್ಯ ತತ್ವಜ್ಞಾನದ ದೃಷ್ಟಿಯಿಂದ ಗೌಣವಾಗಿದ್ದರೂ, ಅಷ್ಟರಮಟ್ಟಿಗೆ ಅದರ ಬೆಲೆ ಕಡಿಮೆಯಿಲ್ಲ. ಜ್ಞಾನದ ಸ್ವರೂಪವನ್ನು ವಿಶದಮಾಡಿ ತೋರಿಸುವ ಸಲುವಾಗಿ ಲೊಕ್‌ನು ಜ್ಞಾನದ ಉಗಮದ ಉಪಪತ್ತಿಯನ್ನು ವಿವರಿಸಬೇಕಾಯಿತು. ಹೀಗೆ ಮಾಡುವಲ್ಲಿ ಈತನು ತಿಳಿವಿನ ಕ್ರಮವನ್ನು ವರ್ಣಿಸುತ್ತ ಅದರ ಹುಟ್ಟಿನ ತನಕ ಓಮುಗರನ್ನು ಒಯ್ಯಬೇಕಾಯಿತು. ಹೀಗೆ ಆತನಿಂದ ಮನೋವಿಜ್ಞಾನವು ಮುಂದುವರಿಯಿತು. ಮನಸ್ಸಿನ ಒಂದು ಕ್ರಿಯೆಯಾದ ಜ್ಞಾನೋತ್ಪತ್ತಿಯ ಮೀಮಾಂಸೆಯನ್ನು ಮಾಡಿ ಲೊಕ್‌ನು ಮನೋವಿಜ್ಞಾನಕ್ಕೆ ಒಂದೂ ಹೊಸ ಅಂಶವನ್ನು ಪೂರೈಸಿದನು. ಮನಸ್ಸಿನ ಒಂದು ಸ್ವರೂಪವನ್ನು ಒಪ್ಪಿಕೊಂಡೇ ಹೊರಡುವ ಬದಲು ಲೊಕ್‌ನು, ನಿರೀಕ್ಷಣೆಯ ಘಟಕಾಂಶಗಳಿಂದ ಮಾನಸಿಕ ಜೀವನದ ತತ್ವಗಳನ್ನು ಕಟ್ಟಿದನು. ಜ್ಞಾನವು ಅನುಭವದಿಂದ ಉಂಟಾಗುವ ಸಂಗತಿಯೆಂದು ಆತನು ಸಾಧಿಸಿದನು. ವೇದನೆ ಮತ್ತು ಚಿಂತನೆಗಳೇ–ಅನಸಿಕೆ ನೆನಸಿಕೆಗಳೇ ಜ್ಞಾನಮಂದಿರವನ್ನು ಕಟ್ಟುವ ಇಟ್ಟಿಗೆಗಳೆಂದು ಅವನು ಪ್ರತಿ ಪಾದಿಸಿದನು.

ಬಾಹ್ಯಪ್ರಪಂಚವು ಪರಿಮಾಣ ಮತ್ತು ಗುಣಗಳಿಂದ ಕೂಡಿದೆ. ವೇದನೆಯ ಮೂಲಕ ನಾವು ಅವನ್ನು ಅರಿತುಕೊಳ್ಳುತ್ತೇವೆ. (ಇಲ್ಲಿ ವೇದನೆಯೆಂದರೆ ಇಂದ್ರಿಯ ಜ್ಞಾನ–'ತನ್ಮಾತ್ರಾಬೋಧ' ಎಂಬರ್ಥದಲ್ಲಿ ಬರೆದಿದೆ.) ಹೀಗೆ ವೇದನೆಯು ನೇರವಾಗಿ ಬಿಡಿಯಾಗಿ ಕಲ್ಪನೆಗಳನ್ನು ನಮಗೆ ಕೊಡುವದು. ಈ ವೇದನಾಜನ್ಯ ಕಲ್ಪನೆಗಳ ಚಿಂತನೆಯು (ಮನನ, ನಿಧಿಧ್ಯಾಸವು) ಮನಸ್ಸಿನ ಒಳಬದುಕಿನ ಪರಿಚಯುವನ್ನು ನಮಗೆ ಮಾಡಿಕೊಡುವದು. ಇಲ್ಲಿ ಬುದ್ಧಿ ಮತ್ತು ಇಚ್ಛಾಶಕ್ತಿಗಳು ಕೆಲಸ ಮಾಡುತ್ತಿರುತ್ತವೆ. ಮನಸ್ಸಿನ ಈ ಅಂತಃಪ್ರಪಂಚದಲ್ಲಿಯ ಕೆಲಸದ ರೀತಿಯೇನು ? ಹೊರಗಿನ ವೇದನೆಗಳಿಂದ ಬಂದ ನೇರವಾದ ಕಲ್ಪನೆ ಗಳನ್ನು ಸ್ವೀಕರಿಸಿ ಅವುಗಳನ್ನು ಹೋಲಿಸಿ ಹೊಂದಿಸಿ ಅವುಗಳೊಳಗಿಂದ ಸಮ್ಮಿಶ್ರವಾದ ಹೆಚ್ಚು ಜಟಿಲವಾದ ಕಲ್ಪನೆಗಳ ಮಂದಿರವನ್ನು ಕಟ್ಟುವದು. ಇದು

ಜ್ಞಾನದ ಉಗಮದ ರೀತಿಯೆಂದು ಲೊಕ್‌ನ ಮತವು.

ಲೊಕ್‌ನ ಈ ಸಿದ್ಧಾಂತವು ಹಿಂದೆ ಬಣ್ಣಿಸಿದ ಫ್ರೆಂಚ ತತ್ವಜ್ಞಾನಿಯಾದ ಡೆಕ್ಕಾರ್ಡೇಯ ಸಿದ್ಧಾಂತಕ್ಕೆ ಕೇವಲ ವಿರುದ್ಧವಾಗಿದೆ. ಬಾಹ್ಯ ಜಗತ್ತನ್ನೂ ಮನಸ್ತತ್ವವನ್ನೂ ಒಂದರಿಂದೊಂದು ಬೇರೆಯಾಗಿರಿಸಿ ನೋಡುವ ಆತನ ದ್ವೈತ ದೃಷ್ಟಿಯೆಲ್ಲಿ ? ಮತ್ತು ಬಾಹ್ಯ ಜಗತ್ತಿನ ವೇದನೆಗಳಿಂದಲೇ ರೂಪಗೊಳ್ಳುವ ಮಾನಸಿಕ ಜೀವನದ ಕಲ್ಪನೆಯನ್ನು ಮಾಡುವ ಅದ್ವೈತ ಸೃಷ್ಟಿಯೆಲ್ಲಿ ? ಇಷ್ಟೇ ಅಲ್ಲ, ಡೆಕ್ಕಾರ್ಡೇಯು ಶರೀರವನ್ನು ಮನಸ್ಸಿನ ಆಳಾಗಿ ಮಾಡಿದನು. ಆದರೆ ಲೊಕ್‌ನು ಮನಸ್ಸನ್ನೇ ಕೊನೆಗೆ ಶರೀರವನ್ನವಲಂಬಿಸಿರುವಂತೆ ಹೇಳಿದನು. ಅವರೂ ಕಲ್ಪನೆಗಳು ಮನಸ್ಸಿನಲ್ಲಿಯೇ ಉಗಮ ಹೊಂದುವವೆಂದು ಆತನು ಒಪ್ಪಿದನು.

ಮನುಷ್ಯನಿಗೆ ಆತ್ಮವೆಂಬುದೊಂದು ತತ್ವವಿದೆಯೇ ? ಎಂಬ ಪ್ರಶ್ನೆಗೆ ಲೊಕ್‌ನು ಉತ್ತರ ಕೊಡಲು ಅವಸರಪಡಲಿಲ್ಲ. ಮನುಷ್ಯನಿಗೆ ಕಾರ್ಯಕಾರಿಯಾದ ಮನಸ್ಸೊಂದಿದೆಯೆಂದು ಅವನು ನಂಬಿದ್ದನು. ಆದರೆ ಈ ಮನಸ್ಸಿನ ವ್ಯವಸಾಯ ವ್ಯಾಪಾರಗಳಲ್ಲಿ ಶರೀರದ ವಿಶಿಷ್ಟ ಉಪಾಧಿಗಳು-ನಿಯತ ಕರ್ಮಗಳು, ಎಂದು ಆತನು ತಿಳಿದಿದ್ದನು. ಇದಲ್ಲದೆ ಬುದ್ಧಿಯೂ ಅದರ ಅನುಮಾನಬದ್ಧವಾದ ವಿಚಾರಕ್ರಿಯೆಯೂ ವೇದನೆಗಳನ್ನು ಅಂದರೆ ಶಾರೀರಿಕ ಅನುಭವಗಳನ್ನು ಅವಲಂಬಿಸಿರುವವೆಂದು ಆತನು ಸಾಧಿಸಿದನು.

ಈ ಶಾರೀರಿಕ ಅನುಭವವು ಮನಸ್ಸಿನೊಂದಿಗೆ ಯಾವ ಬಗೆಯ ಸಂಬಂಧದಲ್ಲಿರುತ್ತದೆ ? ಎಂಬ ಈ ಪ್ರಶ್ನೆಯನ್ನು ಲೊಕ್‌ನು ಪೂರ್ಣವಾಗಿ ಬಿಡಿಸಲಿಲ್ಲ. ಅವನು ತನ್ನ ಉತ್ತರವನ್ನು ಪರ್ಯಾಯವಾಗಿ ಸೂಚಿಸಿದನು. ಅವನು ಸೂಚಿಸಿದ ತತ್ವವೇ ಮುಂದೆ ಡೇವ್ಹಿಡ್ ಹ್ಯೂಮ ಎಂಬ ತತ್ವವೇತ್ತನೂ ಆತನ ಅನುಯಾಯಿಗಳೂ ಬಲಿಸಿ ಬೆಳೆಸಿಕೊಂಡರು. ಅದೇ ತತ್ವವು ಇಂದು ನಿನ್ನೆಯ ತನಕ ಮನೋವಿಜ್ಞಾನದ ಪದ್ಧತಿಯ ತಳಹದಿಯಾಗಿ ನಡೆದು ಬಂದಿತ್ತು. ಲೊಕ್‌ನು ನಿರ್ದೇಶಿಸಿದ ಆ ತತ್ವವು ಯಾವದು ? ಅದು ವಿಚಾರಸಂಯೋಜನೆ ಅಥವಾ ಕಲ್ಪನಾ ಸಂಗತಿಯ ತತ್ವವು.

ಡೆಕ್ಕಾರ್ಡೆಯು ಬಾಹ್ಯಜಗತ್ತಿನ ವಾಸ್ತವ ಅಸ್ತಿತ್ವವನ್ನು ಒಪ್ಪಿಕೊಂಡಿದ್ದನು. ಲೊಕ್‌ನು ಕಾರ್ಯಕಾರಿಯಾದ ಮನಸ್ತತ್ವವನ್ನು ಒಪ್ಪಿದ್ದನು. ಆದರೆ ಹ್ಯೂಮನು

ಇವೆರಡನ್ನೂ ಒಪ್ಪಲಿಲ್ಲ! ಭೌತಿಕ ವಸ್ತುವಿನದಾಗಲಿ ಮನಸ್ಸಿನದಾಗಲಿ ಪಾರ್ಥಿವ ಅಸ್ತಿತ್ವವನ್ನು ಆತನು ಅಲ್ಲಗಳೆವನು.

ಈತನ ವಿಚಾರದ ರೀತಿ ಹೀಗಿದೆ; ಮನಸ್ಸಿಗೆ ಪ್ರೇರಣಾಶಕ್ತಿಯಿಲ್ಲ. ಅನುಭವವೆಂಬುವದು; ಪ್ರಭಾವ-ಪ್ರತಿಬಿಂಬಗಳ ಮತ್ತು ಕಲ್ಪನೆಗಳ ಸಂಘಟಿತವಾದ ಒಂದು ಸಮಾಹಾರವು. ಈ ಪ್ರಭಾವಗಳು ಇಂದ್ರಿಯ ಜ್ಞಾನ ಮತ್ತು ಚಿಂತನಗಳ ಪಡಿನೆಳಲುಗಳು. ಕಲ್ಪನೆಗಳೆಂದರೆ ಇಂಥ ಪ್ರಭಾವಗಳು ಉಂಟುಮಾಡುವ ಮಾನಸಿಕ ಪಡಿಯಚ್ಚುಗಳು-ಅಂದರೆ ಬಾಹ್ಯಪ್ರಭಾವಗಳ ಪರಿಣಾಮುವಾದ ಅತಃ ಪ್ರಭಾವಗಳು. ಆದರೆ ಇವೆಲ್ಲ ಪಡಿಯಚ್ಚುಗಳನ್ನು ಕಟ್ಟಿ ಮಾನಸಿಕ ಜೀವನದ ಅನವರತತನವನ್ನು ಕಾಯ್ದುಕೊಳ್ಳುವ ಸಂಗತಿ ಯಾವುದು? ಆ ಸಂಗತಿಯೇ ಕಲ್ಪನಾಸಾಹಚರ್ಯ, ಕಲ್ಪನಾಸಂಗತಿಯ ತತ್ವ. ದೇಶ ಕಾಲ, ಕಾರ್ಯಕಾರಣ, ಸಾಮ್ಯ, ವಿರೋಧ-ಇವೆಲ್ಲವುಗಳ ಸಾಮುದಾಯಿಕವಾದ ನೆನಪು. ಈ ಕಲ್ಪನಾ ಸಂಗತಿಯು ಮೊತ್ತದಲ್ಲಿ ಆದ ಬಾಹ್ಯಪ್ರಪಂಚದ ಬೋಧ ವೇದನೆಗಳಿಂದಲೇ ಮೊಳೆತು ಬೆಳೆಯುತ್ತದೆ. ಹೀಗೆ ಮನಸ್ಸೆಂದರೆ ಸ್ವತಃಸಿದ್ಧವಾದ ಪ್ರೇರಣಾತ್ಮಕವಾದ ತತ್ವವಲ್ಲ. ಆದೊಂದು ಸಂಜ್ಞಾಪ್ರವಾಹ; ಒಂದಕ್ಕೊಂದು ಜೋಡಿಸಲ್ಪಟ್ಟ ನೆನಪಿನಿಂದ ಪವಣಿಸಲ್ಪಟ್ಟ ಅನಿಸಿಕೆ, ಅರಿವುಗಳ ಒಂದು ಬೆಳೆಯುವ ಗುಂಪು!

ಇಂದಿನ ಓದುಗನಿಗೆ ಡೆವ್ಹಿಡ್ ಹ್ಯೂಮನು ಪ್ರತಿಪಾದಿಸಿದ 'ಕಲ್ಪನಾ ಸಂಗತಿ'ಯ ಈ ಮತಸಾಂಪ್ರದಾಯವು ಹುರುಳಿಲ್ಲದುದೆಂದು ಕೂಡಲೇ ಹೊಳೆಯಬಹುದು. ಈ ಸಿದ್ಧಾಂತದಿಂದ ಮನಸ್ಸಿನ ಜೀವಕಳೆ ಚೇತನೆಯನ್ನೇ ಅಲ್ಲಗಳೆದಂತಿದೆ. ಮನಸ್ಸೆಂದರೆ ಹಲವು ಸರಕುಗಳನ್ನು ಅಚ್ಚುಕಟ್ಟಾಗಿ ಕಟ್ಟಿ ಸರಿಯಾಗಿ ಹೇರಿರಿಸಿದ ಒಂದು ಉಗ್ರಾಣವಂತೆ ಕಾಣುತ್ತದೆ! ಶಕ್ತಿಯಾಗಲೀ ಸ್ಫೂರ್ತಿಯಾಗಲೀ ಇಲ್ಲದ ಒಂದು 'ಸ್ಥಿತ ಪ್ರಜ್ಞ'ಯಾಗುತ್ತದೆ; ಹ್ಯೂಮನು ತನ್ನ ಮತವನ್ನು ಪರಿಪೂರ್ಣಗೊಳಿಸಿ ಕಾಣಿಸುವ ಭರದಲ್ಲಿ ಮನುಷ್ಯನ ಇಚ್ಛಾಶಕ್ತಿಯನ್ನು ಕೂಡ ಇಂದ್ರಿಯ ವೇದನೆಗಳ ಕ್ರಮದ ಪಾತಳಿಗೆ ತಂದಿಳಿಸಿದನು.

ಈ ಕಲ್ಪನಾ ಸಂಗತಿವಾದದ ಒಣ ಓರಣದ ಪಾಂಡಿತ್ಯ ಪೂರ್ಣ ಸ್ವರೂಪದ ಪರಿಣಾಮವೇನಾಯಿತೆಂದರೆ, ೧೯ ನೇ ಶತಮಾನದಲ್ಲಿ ಮನೋವಿಜ್ಞಾನವು ಒಂದು ಹುರುಳಿಲ್ಲದ ಹರಟೆಯೆಂದು ತಿಳಿದವರು ತಿರಸ್ಕರಿಸ ತೊಡಗಿದರು. ಮನೋವಿಜ್ಞಾನದ ಕುರಿತು ಜನತೆಯು ಸಂಶಯದಿಂದ ನೋಡಲು ಹ್ಯೂಮನ ಮನೋವಿಜ್ಞಾನದ ಹೊಸ ರೂಪವೇ ಮುಖ್ಯವಾಗಿ ಕಾರಣವಾಯಿತು. ಆದರೂ ಹ್ಯೂಮನ

ಈ ಕಲ್ಪನಾಸಂಗತಿವಾದವು ಸರ್ವಥಾ ಸುಳ್ಳೆಂಬ ಅರ್ಥವಲ್ಲ. ಇಂದಿನ ಮನೋವಿಜ್ಞಾನಿಗಳು ಈ ಕಲ್ಪನಾ ಸಂಗತಿಯ ತತ್ವವನ್ನು ಪೂರ್ಣವಾಗಿ ಅಲ್ಲಗಳೆದಿರುವರೆಂತಲೂ ತಿಳಿಯಬೇಕಾಗಿಲ್ಲ. ಆ ತತ್ವವು ಮನೋವಿಜ್ಞಾನದ ಎಲ್ಲ ಆಧುನಿಕ ಪದ್ಧತಿಗಳಲ್ಲಿ ಸಮಾವಿಷ್ಟವಾಗಿದೆ. ಆದರೆ ಇಂದು ಕಲ್ಪನಾಸಂಗತಿಯ ತತ್ವವು ಹ್ಯೂಮನು ಕಲ್ಪಿಸಿದಂತೆ ಮನಸ್ಸಿನ ಸ್ವರೂಪವೆಂದಾಗಲೀ, ಮನೋವಿಜ್ಞಾನದ ತಳಹದಿಯೆಂದಾಗಲೀ ಯಾರೂ ಸ್ವೀಕರಿಸಿಲ್ಲ ; ಮನೋವಿಜ್ಞಾನದ ಪದ್ಧತಿಯ ಹಲವು ಘಟಕಗಳಲ್ಲಿ ಅದೊಂದೆಂದು ಎಣಿಸಲ್ಪಟ್ಟಿದೆ.

ಕಳೆದ ಶತಮಾನದಲ್ಲಿ ಈ ಕಲ್ಪನಾ ಸಂಗತಿಯ ತತ್ವವು ಮನೋವಿಜ್ಞಾನದ ಕ್ಷೇತ್ರವನ್ನು ಆಕ್ರಮಿಸಿ ಆಳಹತ್ತಿತಷ್ಟೇ. ಈ ತತ್ವವನ್ನು ಪೂರ್ಣವಾಗಿ ಅಳಿಸಿ ಆಧುನಿಕ ಮನೋವಿಜ್ಞಾನದ ಸಿದ್ಧಾಂತಗಳನ್ನು ಸ್ಥಾಪಿಸಲು ಇನ್ನು ಮುಂದೆ ಬರಲಿರುವ ಒಂದು ವಿಚಾರ ಕ್ರಾಂತಿಯ ದೂರದ ಸದ್ದು ಆದಾಗಲೇ ಕೇಳಬರ ತೊಡಗಿತ್ತು. ಈಗಿನ ಎಲ್ಲ ಮನೋವೈಜ್ಞಾನಿಕ ಸಾಂಪ್ರದಾಯಗಳು ಮಿಕ್ಕ ಸಂಗತಿಗಳ ಕುರಿತು ಎಷ್ಟೇ ಮತ ಬೇಧವುಳ್ಳವಾದರೂ ಒಂದು ಮಾತನ್ನು ಎಲ್ಲರೂ ಒಪ್ಪಿಕೊಂಡಂತಿದೆ. ಅದೇನೆಂದರೆ ಮನಸ್ಸು ಒಂದು ಕ್ರಿಯಾಚೈತನ್ಯ ತತ್ವವು; ಮನಸು ಬರೇ ಹೊರಗಿನ ವ್ಯಾಪಾರಗಳ ಪಡಿನೆಳಲುಗಳ ಗುಂಪಲ್ಲವೆಂದು ಗ್ರಹಿಸಿದಂತಿದೆ. ಈ ಹೊಸ ವಿಚಾರಕ್ಕೆ ಮೇಲೆ ಹೇಳಿದ ಹ್ಯೂಮನೇ ಒಂದು ರೀತಿಯಿಂದ ಕಾರಣನು. ಹ್ಯೂಮನ ವಿಚಾರಗಳ ಒಂದು ಅಂಗವು ಮನೋವಿಜ್ಞಾನದ ಕ್ಷೇತ್ರದಲ್ಲಿ ಉಪಕಾರಿಯಾಗಿಯೇ ಪರಿಣಮಿಸಿತು. ಆತನು ಮನೋವಿಜ್ಞಾನವನ್ನು ಪಾರಮಾರ್ಥಿಕ ಮತ್ತು ಆಧ್ಯಾತ್ಮಿಕ ಪೂರ್ವಗ್ರಹಿಕೆಗಳ ವಾತಾವರಣದಿಂದ ಪೂರ್ಣವಾಗಿ ಹೊರಗೆ ತಂದಿರಿಸಿದನು; ಮತ್ತು ಮನೋವಿಜ್ಞಾನದ ವಿಷಯವೆಂದರೆ ಪ್ರಜ್ಞೆಯ ಸ್ವರೂಪವು ಅದರ ಬೇರೆ ಬೇರೆ ಬಗೆಗಳನ್ನು ಜೋಡಿಸುವ ಸಂಬಂಧಗಳ ವಿವರವೂ ಆಗಿರುತ್ತದೆಂದೂ ತಿಳಿಸಿದನು.

## ಮನೋವಿಜ್ಞಾನವೂ ಜರ್ಮನ್ ದಾರ್ಶನಿಕರೂ 'ಸಂವೇದನಾತ್ಮಕ ದ್ರವ್ಯವಿಚಾರ'

ಡೆವ್ಹಿಡ್ ಹ್ಯೂಮನು ಆರು ವರ್ಷದ ಮಗುವಿರುವಾಗಲೇ ಜರ್ಮನಿಯಲ್ಲಿ ಓರ್ವ ತತ್ವವೇತ್ತನಾಗಿ ಹೋದನು. ಆತನ ಹೆಸರು ಗೊಟ್‌ಫ್ರಿಡ್ ವಿಲ್ ಹೆಲ್ಮ ಲಿಬ್ನಿಟಝು. ಈತನು ಸ್ವತಂತ್ರವಾದ-ಕ್ರಿಯಾತ್ಮಕವಾದ ಮನಸ್ತತ್ವದ ವಸ್ತುಗಳಿಂದ

'ಮೊನಾಡ' ಎಂಬ ಚಿನ್ಮಯ ಕಣಗಳಿಂದ – ಈ ವಿಶ್ವವು ಮಾರ್ಪಟ್ಟಿದೆ. ಇಂಥ ಚಿನ್ಮಯ ವಸ್ತುಗಳಲ್ಲಿ ಆತ್ಮವು ಒಂದು, ಎಂದು ಮುಂತಾಗಿ ಒಂದು ವಾದ ವನ್ನು ಬೆಳೆಸಿದನು. ಅರಿವನ್ನು ಮೀರಿದ ಅಜಾಗ್ರತವಾದ ಮಾನಸಿಕ ಚಟುವಟಿಕೆಯ ಕಲ್ಪನೆಯನ್ನು ಈತನೇ ಬಳಕೆಯಲ್ಲಿ ತಂದನು. ಆ ಕಲ್ಪನೆಯನ್ನೇ ಮುಂದೆ ಸುಪ್ರಸಿದ್ಧ ಜರ್ಮನ್ ತತ್ತ್ವಜ್ಞಾನಿಯಾದ ಅರ್ಥರ್ ಶೊಫೆನಾಯರ್ ಎಂಬವನು ಸ್ವೀಕರಿಸಿದನು. ಸಾರಭೂತವಾದ ಸತ್ಯವೆಂದರೆ, ವಿಶ್ವದ ಜೀವಾಳವೆಂದರೆ ಇಚ್ಛಾ ಶಕ್ತಿ. ಇಚ್ಛಾಶಕ್ತಿಯಲ್ಲಿ ಜಾಗ್ರತವಾದ ಕಾಮನೆಯೂ, ಅಜಾಗ್ರತವಾದ ಮೂಲ ಪ್ರವೃತ್ತಿಯೂ ಕೂಡಿಯೇ ಒಳಪಟ್ಟಿವೆ. (ಇಲ್ಲಿ ಜಾಗೃತ, ಅಜಾಗ್ರತವೆಂದರೆ ತನ್ನ ಅರಿವು ಇದ್ದ, ಇಲ್ಲದೆ ಇಲ್ಲವಾದುದೆಂಬ ಅರ್ಥ) ಹೀಗೆ ವಾದಿಸುವಲ್ಲಿ ಇಚ್ಛಾಶಕ್ತಿಯ ಜಾಗೃತ–ಅಜಾಗ್ರತವೆಂಬೆರಡು ಅಂಗಗಳನ್ನು ಕಲ್ಪಿಸುವದರಲ್ಲಿ– ಶೊಫೆನಾಯರನು ಮುಂದೆ ಬರಲಿರುವ ಫ್ರಾಡನ ವಿಚಾರ ಪದ್ಧತಿಯ ಸಂಚ ಕಾರವನ್ನು ಕೊಟ್ಟಂತಾಯಿತು.

ಅನಂತರ ಮನೋವಿಜ್ಞಾನಕ್ಕೆ ತನ್ನ ಕೈಗಾಣಿಕೆಯನ್ನಿತ್ತ ಜ್ಞಾನಿಯೆಂದರೆ ಇಮ್ಯಾನ್ಯುಅಲ್ ಕಾಂಟ ಎಂಬುವನು. ಈತನು ೧೮ನೇ ಶತಮಾನದಲ್ಲಿ ಜರ್ಮನಿ ಯಲ್ಲಿ ಆಗಿಹೋದನು. ಈತನು ಹ್ಯೂಮನಂತೆ ಮನೋವಿಜ್ಞಾನವು ಬ್ರಹ್ಮ ಜ್ಞಾನ ಅಥವಾ ಆತ್ಮಾನಾತ್ಮ ವಿವೇಚನೆಗಳೊಂದಿಗೆ ಹೊಂದಿರುವ ವಿಷಯವೇ ಅಲ್ಲವೆಂದು ಒಪ್ಪಿದನು. ಮನೋವಿಜ್ಞಾನದ ಅಭ್ಯಾಸ ಕ್ಷೇತ್ರವು ಅನುಭವವು. ಅನುಭವವನ್ನು ಚೆನ್ನಾಗಿ ಅಭ್ಯಾಸಿಸಬೇಕಾದರೆ ಗಣಿತಶಾಸ್ತ್ರದ ರೀತಿಗಳನ್ನು ಅನುಸರಿಸಬೇಕು–ಎಂದು ಮುಂತಾಗಿ ಕಾಂಟನು ಸಾರಿದನು. ಶೊಫೆನಾಯರನಂತೆ ಇಚ್ಛಾಶಕ್ತಿಯ ಮತ್ತು ಅದರ ಜೊತೆಗೆ ಭಾವನೆಯ ಮಹತ್ವವನ್ನು ಒತ್ತಿ ಹೇಳಿ ಆತನು ಮನೋವಿಜ್ಞಾನದ ವಿಚಾರ ಪದ್ಧತಿಯ ಮೇಲೆ ತುಂಬ ಪರಿಣಾಮವನ್ನು ಮಾಡಿದನು.

ಕ್ಯಾಂಟನ ಸಮಕಾಲಿನನಾದರೂ ಅವನ ನಂತರವೂ ३೬ ವರ್ಷ ಬಾಳಿ ಹೋದ ಜೋನ್ಸ್ ಫ್ರೆಡ್‌ರಿಶ್ ಹರಬರ್ಟ ಎಂಬ ಮೇಧಾವಿಯು ಕಾಂಟನಿಂದಲೂ ಒಂದಡಿ ಮುಂದಿಟ್ಟು ಮನಸ್ಸಿನ ಅಭ್ಯಾಸಕ್ಕೆ ಗಣಿತಶಾಸ್ತ್ರದ ನಿಯಮಗಳನ್ನು ವಿನಿಯೋಗಿಸಿಯೇ ಬಿಟ್ಟನು. ಜೇಡಿನ ಜಾಳಿಗೆಯಂತಹ ಜಟಿಲವಾದ ಗಣಿತದ ಸೂತ್ರಗಳನ್ನು ಆತನು ಉಂಟುಮಾಡಿದನು. ಇವುಗಳನ್ನು ತಿಳಕೊಂಡವರು ಕೆಲವರೇ ಇದ್ದರು. ಇವುಗಳನ್ನು ನಂಬುವವರು ಅವರಿಗಿಂತ ಕಡಿಮೆ ಜನರಿದ್ದರು. ಆದರೂ, ಈ ಪಂಡಿತನ ದಾರಿಯು ಸರಿಯಾದುದಾಗಿದ್ದಿತು. ಕಲ್ಪನೆಗಳು

('ಕಲ್ಪನಾಸಂಗತಿ' ವಾದಿಗಳೆನ್ನುವಂತೆ) ಜಡರೀತಿಯೆಲ್ಲ ಯಾಂತ್ರಿಕವಾಗಿ ಜೋಡಿಸಲ್ಪಡಲಾರವು- ಅವು ಮಾನಸಿಕ ಶಕ್ತಿಗಳಿಂದ ಚೇತನಗೊಂಡು ಕೂಡುವವು- ಎಂದು ಹರಬರ್ಟನ ಮತವಿತ್ತು. ಹೀಗೆ ಮನಃಶಕ್ತಿಯು ಗುಂಪುಗೂಡಿಸಿದ ಕಲ್ಪನೆಗಳ ರಾಶಿಗೆ ಆತನು 'ಸಂವೇದನಾತ್ಮಕ ದ್ರವ್ಯ' ವೆಂದು ಕರೆದನು. ಮನಸ್ಸಿನಲ್ಲಿಯ ಈ ಸಂವೇದನಾತ್ಮಕ ದ್ರವ್ಯದೊಂದಿಗೆ ಹೊಸ ಹೊಸ ಕಲ್ಪನೆಗಳು ಕೂಡುತ್ತಲಿರುತ್ತವೆಂದು ಆತನ ಉಪಸಿದ್ಧಾಂತ.

ಹರಬರ್ಟನಿಗೆ ಮನೋವಿಜ್ಞಾನದ ವ್ಯಾವಹಾರಿಕ ಬೆಲೆಯು ಅರಿವು ಚೆನ್ನಾಗಿತ್ತು. ಆದ್ದರಿಂದ ಆಗಿಹೋದ ಅನುಭವದ ನೆನಪಿನ ರಾಶಿಗೆ (ಸಂವೇದನಾತ್ಮಕ ದ್ರವ್ಯಕ್ಕೆ) ಹೊಸದಾದ ವಸ್ತು ಬೋಧವನ್ನು ಹೊಂದಿಸಿ ಕೊಳ್ಳುವ ಈ ತತ್ವವನ್ನು ಆತನು ಶಿಕ್ಷಣ ಪದ್ಧತಿಯ ವಿವರಣೆಯಲ್ಲಿ ವಿನಿಯೋಗಿಸಿ, ಮುಂದಾಗಲಿರುವ ಅನೇಕ ತಲೆಮಾರುಗಳ ಶಿಕ್ಷಕರನ್ನು ಉಪಕಾರದಲ್ಲಿ ಇರಿಸಿರುವನು.

ಹರಬರ್ಟನು ಆತ್ಮವಾದಿಯಾಗಿದ್ದನು. ಆತನ ಮತದಂತೆ ಆತ್ಮವೆಂಬುವದು ಒಂದು ಶಕ್ತಿಪುಂಜವು. ಪ್ರತಿಯೊಂದು ಅನುಭವವು ಉಂಟಾಗುವದರಲ್ಲಿ ಬಹಳ ಶಕ್ತಿಯು (ಚೈತನ್ಯವು) ವೆಚ್ಚವಾಗಬೇಕಾಗುತ್ತದೆ. (ಈ ಆತ್ಮ ಶಕ್ತಿಯು ವೆಚ್ಚದ ಪ್ರಮಾಣ ಕೋಷ್ಟಕಗಳನ್ನೇ ಆತನು ಗಣಿತ ಪದ್ಧತಿಯಿಂದ ತೋರಿಸಲು ಯತ್ನಿಸಿದ್ದ !) ಈ ರೀತಿಯಾಗಿ ಹೊಸ ಹೊಸ ಅನುಭವದಿಂದ ತಲೆದೋರುವ ಹೇರಳವಾದ ಕಲ್ಪನೆಗಳ ಸಂಬಂಧ ವಿರೋಧಗಳ ಗೊಂದಲದಲ್ಲಿ ತನ್ನ ಏಕತೆಯನ್ನು ಕಾಯ್ದುಕೊಳ್ಳುವದರಲ್ಲಿ ಆತ್ಮವು ಎಡೆಬಿಡದೆ ವ್ಯಗ್ರವಾಗಿರುತ್ತದೆಂಬುದು ಮುಂತಾಗಿ ಹರಬರ್ಟನು ಪ್ರತಿಪಾದಿಸಿದನು.

ಯಾವದೊಂದು ಕಲ್ಪನೆಯು–ಬಿಡಿಯಾದ ವಿಚಾರವು–ಅರಿವಿನ–ಜಾಗೃತ ಪ್ರಜ್ಞೆಯ- ಮೆಟ್ಟಿಲ ಕೆಳಗಿಂದಲೇ ಮನಸ್ಸನ್ನು ಪ್ರವೇಶಿಸುತ್ತದೆಂದು ಆತನು ಪ್ರತಿಪಾದಿಸಿದನು. ಆ ಕಲ್ಪನೆಯು ಉತ್ತೇಜಿತವಾಯಿತೆಂದರೆ, ಹೆಚ್ಚು ಹೆಚ್ಚು ಪ್ರಚೋದನೆಯಿಂದ ಸ್ಪಷ್ಟವಾಗಿ ಮೂಡಲು ಸುರುವಾಯಿತೆಂದರೆ ಅದು ಅರಿವಿನ ಗ್ರಹಿಕೆಯಲ್ಲಿ ಬರುವ ತನಕ ಸಂವೇದನಾತ್ಮಕ ದ್ರವ್ಯವಾಗುವನಕ ಮೇಲೆರುವದು. (ಇಲ್ಲಿ ಮೆಟ್ಟಿಲು, ಮೇಲೇರುವದು–ಮುಂತಾದ ಶಬ್ದಗಳನ್ನು ಲಾಕ್ಷಣಿಕವಾಗಿ ಉಪಯೋಗಿಸಲಾಗಿದೆ.) ಕಲ್ಪನೆಯು ಅರಿವಿನಾಳದಲ್ಲಿ ಮಸಮಸಕಾಗಿ ಮೂಡುವದು ಆಮೇಲೆ ಹೆಚ್ಚು ಹೆಚ್ಚು ತಿಳಿಯಾಗಿ ನಮ್ಮ ಅವಧಾನದ (ಲಕ್ಷ್ಯದ) ವಿಷಯವಾಗುವದು ಎಂಬುದೇ

ಇಲ್ಲಿ ಅಭಿಪ್ರೇತವಾದ ಅರ್ಥ. ಹೀಗೆ ಒಮ್ಮೆ ಸ್ಪಷ್ಟವಾಗಿ ಸಂವೇದನಾತ್ಮಕ ದ್ರವ್ಯದೊಂದಿಗೆ ಹೊಂದಿಕೊಂಡು ನಮ್ಮ ಲಕ್ಷ್ಯಕ್ಕೆ ಬಂದರೂ ಮರಳಿ ಆ ಕಲ್ಪನೆಯು ಅಜಾಗ್ರತ ಮನಃಸ್ತರಗಳಲ್ಲಿ ಹುದುಗಿಕೊಳ್ಳಬಹುದು. ಈ ಸಿದ್ಧಾಂತದ ಸಾರ್ಥಕತೆಯು, ಸ್ವಲ್ಪವಾದರೂ ಕಲಿಸುವ ಕೆಲಸ ಮಾಡಿದ ಯಾವದೇ ವ್ಯಕ್ತಿಗೂ ಮನದಟ್ಟಾಗುವಂತಿದೆ.

ಗಣಿತವನ್ನು ಮನೋವಿಜ್ಞಾನಕ್ಕೆ ಹಚ್ಚುವ ಪ್ರಯತ್ನದಲ್ಲಿ ಹರಬರ್ಟನು ಯಶಸ್ವಿಯಾಗಲಿಲ್ಲ. ಆದರೂ ಅವನ ರೀತಿಯು ಒಂದು ದಾರಿಯನ್ನು ತೋರಿಸಿತು. ಅರ್ನೆಸ್ಟ ಹೈನ್ರಿಶ್ ವೆಬರ್ ಎಂಬೋರ್ವ ಜರ್ಮನ್ ವಿಜ್ಞಾನಿಯು ಶ್ರವಣ ಮತ್ತು ಸ್ಪರ್ಶೇಂದ್ರಿಯದ ಕುರಿತು ಬಹಳ ಸಂಶೋಧನೆಯನ್ನು ಮಾಡಿ ತನ್ನ ಹೆಸರಿನಿಂದ ಒಂದು ನಿಯಮವನ್ನೇ ಸ್ಥಾಪಿಸಿದನು. ಆ 'ವೆಬರ ನಿಯಮವು' ಹೀಗಿದೆ :– ಹೆಚ್ಚು ಹೆಚ್ಚು ಸಂವೇದನೆ (ಅನಿಸಿಕೆ) ಯನ್ನುಂಟು ಮಾಡಲು ಬೇಕಾಗುವ ಹೆಚ್ಚಿನ ಪ್ರಚೋದನೆಯು (ಬಾಹ್ಯನಿಮಿತ್ತದ ಪ್ರೇರಣೆಯು) ಒಂದು ನಿಶ್ಚಿತವಾದ ಸ್ವತಂತ್ರವಾದ ಪರಿಮಾಣವುಳ್ಳದ್ದಲ್ಲ. ಅಂದರೆ ಹೊರಗಿನ ಇಂದ್ರಿಯ ಜ್ಞಾನವನ್ನು ಕೊಡುವ ಆಘಾತವು ಇಂತಿಷ್ಟೇ ಉತ್ಕಟವಾದಲ್ಲಿಯೇ ಅದರ ಸಂವೇದನೆಯು ಆ ಪ್ರಮಾಣದಲ್ಲಿ ಹೆಚ್ಚು ತೀವ್ರವಾಗುವದೆಂತಲ್ಲ. ಹೊರಗಿನ ಪ್ರಚೋದನೆಯು ಎಷ್ಟು ಹೆಚ್ಚಾಗಬೇಕೆಂಬುದರ ಪ್ರಮಾಣವು ಆಗಲೇ ಅದಕ್ಕೆ ಹೊಂದಿಕೊಂಡು ಹಿಂದೆ ಒದಗಿದ ಸಂವೇದನೆಯ (ಸಂಸ್ಕಾರದ) ಮೇಲೆ ಅವಲಂಬಿಸಿರುತ್ತದೆ. ಮೊದಲು ಮೂಡಿದ ಸಂವೇದನೆಯ ಸ್ಮೃತಿಯು ಅಳಿಯದೇ ಉಳಿದಲ್ಲಿ ಹೊಸ ಸಂವೇದನೆಯ ತೀವ್ರತೆಗೆ ಬಹಳ ಹೆಚ್ಚಿನ ಬಾಹ್ಯಪ್ರಚೋದನೆಯು ಅಗತ್ಯವಿರುವದಿಲ್ಲ. ಅಂದರೆ ಹರಬರ್ಟನ ಪರಿಭಾಷೆಯಲ್ಲಿ ಹೇಳುವದಾದರೆ ಒಂದು ತಿಳಕೊಳ್ಳಬೇಕಾದ ವಿಷಯ–ಇಲ್ಲವೇ ಪರಿಸ್ಥಿತಿಯ ಕುರಿತು– ಹಿಂದಿನ ಜ್ಞಾನದ ಸಂವೇದನಾತ್ಮಕ ದ್ರವ್ಯವು ಕೆರಳಿಕೊಂಡಿದ್ದುದಾದರೆ, ಆ ವಿಷಯದ ಹೊಸ ಜ್ಞಾನವನ್ನು ಆಳವಾಗಿ ಮೂಡಿಸಲು ಅಷ್ಟೇನು ಬಲವಾದ ಆಕರ್ಷಣವನ್ನುಂಟುಮಾಡಬೇಕಾಗುವದಿಲ್ಲ. ಜ್ಞಾನದಲ್ಲಿ ಆಸಕ್ತಿಯಿದ್ದರೆ, ಜ್ಞೇಯದ ಹೆಚ್ಚಿನ ಆಕರ್ಷಣದ ಅವಶ್ಯಕತೆಯಿಲ್ಲ ?

ಹೀಗೆ ಗಣಿತದ ನಿಯಮಗಳನ್ನು ಮನೋವಿಜ್ಞಾನಕ್ಕೆ ಅನ್ವಯಿಸಿ ಶಾಸ್ತ್ರವನ್ನು ಹೆಚ್ಚು ನಿಶ್ಚಿತವಾಗಿ ಮಾಡುವ ಮೊದಲೇ, ಶರೀರಶಾಸ್ತ್ರದಲ್ಲಿ ಹಲವು ಪ್ರತಿಭಾಪೂರ್ಣವಾದ ಶೋಧಗಳಾಗಿದ್ದವು. ಈ ಶೋಧಗಳು, ಮಾನಸಿಕ ಜೀವನದ ಕುರಿತು ಪ್ರಾಪ್ತವಾದ ಜ್ಞಾನವನ್ನೆಲ್ಲ ಕೊನೆಗೆ ಶಾಸ್ತ್ರೀಯ ವ್ಯವಸ್ಥೆಯಿಂದ ಕಟ್ಟಿ

ಒಂದು ಸಂಘಟಿತ ಶಾಸ್ತ್ರವನ್ನಾಗಿ ಮಾಡಲು ಅಣಿಯಾಗಬಹುದೆಂಬ ನಂಬಿಗೆ ಉಂಟಾಯಿತು ಮತ್ತು ಶರೀರ ಶಾಸ್ತ್ರದ ಆಧಾರದಿಂದ ಹೀಗೆ ಏರ್ಪಡಿಸಿದ ಮನಃಶಾಸ್ತ್ರವು ಮನಸ್ಸಿನ ಗಾಢವಾದ ಹಾಗು ಗೂಢವಾದ ಸಮಸ್ಯೆಯನ್ನು ಬಗೆಹರಿಸಲು ಸಾಕಷ್ಟು ಸಮರ್ಥವಾಗಬಹುದೆಂಬ ಆಶೆ ವಿಜ್ಞಾನಿಗಳಲ್ಲಿ ತಲೆದೋರಿತು.

## ಮನೋವಿಜ್ಞಾನದ ಮೇಲೆ, ಶರೀರ ಶಾಸ್ತ್ರ ಮತ್ತು ಉತ್ಕ್ರಾಂತಿವಾದಗಳ ಪರಿಣಾಮ :

೧೮ನೇ ಶತಮಾನದಲ್ಲಿ ಕೆಲವು ಫ್ರೆಂಚ ವಿಜ್ಞಾನಿಗಳು ಮಾನಸಿಕ ಕುಂದುಗಳುಳ್ಳ–ಬುದ್ಧಿಗೇಡಿ ಭಾವಗೇಡಿಯಾಗಿ ಬೋಡಿಗಳಾದ–ಮಕ್ಕಳ ಶಿಕ್ಷಣದ ಪ್ರಯೋಗಗಳನ್ನು ಕೈಗೊಂಡಿದ್ದರು. ಇದು ಇತಿಹಾಸವಲ್ಲಿಯೇ ಮೊಟ್ಟಮೊದಲು ಕಾಣಿಸಿಕೊಂಡಿರುವ ಹೊಸ ದೃಷ್ಟಿ. ಮಾನಸಿಕ ಅವ್ಯವಸ್ಥೆ ಅನವಸ್ಥೆಗಳನ್ನು, ಅಜ್ಞಾತವಾದ ಪ್ರೇತ ಪಿಶಾಚಗಳು ಮೈಸೇರಿ ಮಾಡುವ ಹುಚ್ಚಾಟಗಳೆಂದು ತಿಳಿದುಕೊಳ್ಳುವ ಬದಲು, ಸ್ವಾಭಾವಿಕವಾದ ಉಪಾಯ ಉಪಚಾರಗಳಿಂದ ಹೋಗಲಾಡಿಸಲು ಬರಬಹುದೆಂಬ ವೈಜ್ಞಾನಿಕ ದೃಷ್ಟಿಯನ್ನು ಆ ಫ್ರೆಂಚ ವಿಜ್ಞಾನಿಗಳು ಕಾಣಿಸಿದರು. ಅದೇ ಸಮಯ ಕಿವುಡರೂ ಮೂಕರೂ ಆದ ಮಕ್ಕಳನ್ನು ಕಲಿಸುವ ಕೆಲಸವನ್ನೂ ಕೈಗೊಳ್ಳಲಾಯಿತು. ಇಂದಿನ ೨೦ನೇ ಶತಮಾನದಲ್ಲಿ ನಡೆದ ಶಿಕ್ಷಣ ಕ್ಷೇತ್ರದಲ್ಲಿಯ ಮಹತ್ವದ ಕಾರ್ಯಗಳ ಬೀಜಗಳು ಅಂದಿನ ಆ ಪ್ರಯತ್ನ ಪ್ರಯೋಗಗಳಲ್ಲಿ ಕಂಡುಬರುವವು. ಈ ಪ್ರಯತ್ನ ಪ್ರಯೋಗಗಳಿಗೆ ಮತ್ತೊಂದರ್ಥದಲ್ಲಿ ಮಹತ್ವ ಇದೆ. ಸಮವಾದ ಮನಸ್ಸಿನ ಪ್ರಕೃತಿ ಮತ್ತು ವಿಷಮವಾದ ಮನಸ್ಸಿನ ವಿಕೃತಿ ಇವುಗಳಲ್ಲಿಯ ಸಮೀಪದ ಸಂಬಂಧವನ್ನು ಅವು ಕಾಣಿಸಿದವು.

ಅದೇ ಶತಮಾನದಲ್ಲಿ ಮತ್ತೆರಡು ವಿಜ್ಞಾನಿಗಳು ಮನೋವಿಜ್ಞಾನದ ತಳಹದಿಯನ್ನು ಭದ್ರಗೊಳಿಸಲು ಸಹಾಯಕರಾದರು. ಆಸ್ಟ್ರಿಯಾದಲ್ಲಿ ಫ್ರೆಂಝು ಜೊಸೆಫಗಾಲ ಎಂಬಾತನು ಮಿದುಳಿನ ರಚನೆಯ ಕುರಿತು ಬೆಲೆಯುಳ್ಳ ಶೋಧಗಳನ್ನು ಮಾಡಿದನು. ಅದೇ ಮೇರೆಗೆ ಇಂಗ್ಲಂಡದಲ್ಲಿ ಸರ್ ಚಾರ್ಲಸ್ ಬೆಲ್ ಎಂಬವನು ಮೊಟ್ಟಮೊದಲು ಜ್ಞಾನ (ಮಜ್ಜಾ) ತಂತುಗಳಲ್ಲಿಯ ಎರಡು ಪ್ರಕಾರಗಳನ್ನು ಕಂಡು ಹಿಡಿದನು. ಮಜ್ಜಾ ತಂತುಗಳಲ್ಲಿಯ ಸಂವೇದಕ ತಂತುಗಳೂ ಪ್ರೇರಕ ತಂತುಗಳೂ ಹೀಗೆ ಎರಡು ವಿಧಗಳಿರುತ್ತವೆಂದೂ ಆತನು ಸಿದ್ಧ ಮಾಡಿದನು. ಸಂವೇದಕ ತಂತುಗಳು ಹೊರಗಿನ ಪ್ರಪಂಚದ ಅರಿವನ್ನು ಮಿದುಳಿಗೆ ಮಾಡಿಕೊಡುತ್ತವೆಂದೂ, ಪ್ರೇರಕ ತಂತುಗಳು ಆ ಅರಿವಿನ

ಪರಿಣಾಮವಾಗಿ ಮಿದುಳಿನ ಪ್ರತಿಕ್ರಿಯೆಗಳನ್ನು, ಬೇರೆ ಬೇರೆ ಚಟುವಟಿಕೆಗಳನ್ನು ಪ್ರೇರಿಸಿ ಅವಯುವಗಳಿಗೆ ತಲ್ಪಿಸುವವೆಂದೂ ಆತನು ಸಾರಿದನು. ಜ್ಞಾನ (ಮಜ್ಜಾ) ತಂತುಗಳ ಈ ಶೋಧದಿಂದ ಪರಾವರ್ತನ ಕ್ರಿಯೆಯ ತತ್ವವು–ಅನೈಚ್ಛಿಕವಾಗಿ ತಾತ್ಕಾಲಿಕವಾಗಿ ಜರುಗುವ ಚಲನವಲನಗಳ ತತ್ವವು–ಸ್ಥಾಪಿಸಲ್ಪಟ್ಟಿತು.

೧೯ನೇ ಶತಮಾನದ ಪೂರ್ವಾರ್ಧದಲ್ಲಿ ಜೋನ್ಸ ಪೀಟರ ಮುಲ್ಲರ ಎಂಬ ಪ್ರಸಿದ್ಧ ಜರ್ಮನ್ ಶರೀರ ಶಾಸ್ತ್ರಜ್ಞನೂ, ಆತನನ್ನು ಹಿಂಬಾಲಿಸಿದ ಇತರ ಶಾಸ್ತ್ರಜ್ಞರೂ ಮಾಡಿದ ಸಂಶೋಧನಗಳಿಂದ ಶರೀರ ಶಾಸ್ತ್ರದ ಪ್ರಗತಿಯು ಒಂದು ಮೇಲ್ಮಟ್ಟಕ್ಕೆ ಬಂದು ನಿಂತಿತು. ಮುಲ್ಲರನು ವಿಶೇಷವಾಗಿ ಇಂದ್ರಿಯ ಜ್ಞಾನ ಮತ್ತು ಜ್ಞಾನ ತಂತುಗಳ ವಿಷಯದ ಸಂಶೋಧನವನ್ನು ಕೈಕೊಂಡನು. ಈ ಸಂಶೋಧನದ ಪರಿಣಾಮವಾಗಿ ಆತನು ಸಿದ್ಧಮಾಡಿದ್ದೇನೆಂದರೆ–ನಾವು ಅನುಭವಿಸುವ ಸಂವೇದನೆಯ ಜಾತಿಯು (ಸ್ವರೂಪವು) ಅಂಥ ವೇದನೆಯನ್ನು ಮಿದುಳಿನ ಮಜ್ಜಾ ಕೇಂದ್ರಗಳಿಗೆ ಕಳುಹಿಸುವ ಜ್ಞಾನೇಂದ್ರಿಯದ ಸ್ವರೂಪವನ್ನವಲಂಬಿಸಿರುತ್ತದೆ. ಆ ಆ ಜ್ಞಾನೇಂದ್ರಿಯದ ಸ್ವಾಸ್ಥ್ಯ-ಸಾಮರ್ಥ್ಯವೇ ಅದರಿಂದ ಬರುವ ವೇದನೆಯ ರೂಪವನ್ನು ಗೊತ್ತುಪಡಿಸುತ್ತದೆ. ಈ ತತ್ವವನ್ನು ಮೊದಲು ಶೋಧಿಸಿದವನು ಮುಲ್ಲರನೇ.

ಈ ರೀತಿಯಾಗಿ ೧೯ನೇ ಶತಮಾನದ ಮಧ್ಯದ ವರೆಗೆ ಮನೋವಿಜ್ಞಾನದ ಮೇಲೆ ಎರಡು ವಿಚಾರಸರಣಿಗಳು ಬಲವಾಗಿ ಪ್ರಭಾವ ಬೀರುತ್ತಿದ್ದವು. ಒಂದೆಡೆಯಲ್ಲಿ ತತ್ವಜ್ಞಾನಿಗಳು ಮನಸ್ಸು ಸ್ಫೂರ್ತಿರೂಪವಾದುದೂ, ಕ್ರಿಯಾ ಚೈತನ್ಯಮಯವಾದುದೂ ಇರುವದೆಂದು ಆಗ್ರಹಪಡುತ್ತಿದ್ದರು. ಇನ್ನೊಂದೆಡೆಗೆ, ತಮ್ಮ ನಿಶ್ಚಿತವಾದ ನಿಚ್ಚಳವಾದ ಶಾಸ್ತ್ರೀಯಪ್ರಯೋಗಗಳಿಂದ, ವಿಜ್ಞಾನಿಗಳು, ಸಂವೇದಕ ಮತ್ತು ಪ್ರೇರಕ ತಂತುಗಳು ಮಿದುಳಿನೊಂದಿಗೆ ಜ್ಞಾನದ ವಿನಿಮಯವನ್ನು ಸತತವಾಗಿ ಹೇಗೆ ಮಾಡುತ್ತಿರುತ್ತದೆಂಬುದನ್ನು ಸ್ಪಷ್ಟವಾಗಿ ಕಾಣಿಸುತ್ತಿದ್ದರು. ಹೀಗೆ ಮನೋವಿಜ್ಞಾನದ ಕುರಿತು ಒಂದು ಹೊಸ ದೃಷ್ಟಿಯು ಬೆಳೆಯತೊಡಗಿತು; ಮತ್ತು ಮನೋವಿಜ್ಞಾನದ ಶಾರೀರಿಕ ಅಂಗ-ಅಂಶಗಳು ವೇಗದಿಂದ ಬೆಳಕಿಗೆ ಬರತೊಡಗಿದವು.

ಅನಂತರ, ಮೂರನೆಯದೊಂದು ಬಹಳ ಪ್ರಭಾವಶಾಲಿಯಾದ ವಿಚಾರ ಸರಣಿಯೊಂದು ತಲೆದೋರಿತು. ೧೮೫೯ರಲ್ಲಿ ಚಾರ್ಲಸ್ ಡಾರ್ವಿನ್‌ನು ತನ್ನ ಕ್ರಾಂತಿಕಾರಿಯಾದ ಗ್ರಂಥವನ್ನು ಪ್ರಕಟಿಸಿದನು. 'ನೈಸರ್ಗಿಕ ಆಯ್ಕೆಯಿಂದ ಆಗುವ

ಪ್ರಾಣಿಜಾತಿಗಳ ಉತ್ಪತ್ತಿ' ಎಂಬುದೇ ಆ ಗ್ರಂಥ. ಹನ್ನೆರಡು ವರ್ಷಗಳ ನಂತರ ಇನ್ನೂ ಕೆಲವು ಪುಸ್ತಕಗಳನ್ನೆ ಪ್ರಕಟಿಸಿದನು. ಅವುಗಳಲ್ಲಿ 'ಮಾನವನ ಅವತಾರ ಮತ್ತು ಲಿಂಗವೃಷ್ಟಿಯಿಂದ ಜಾತಿ ವಿಭಿನ್ನತೆ', ಅನಂತರ 'ಮನುಷ್ಯ ಮತ್ತು ಪ್ರಾಣಿಗಳಲ್ಲಿ ಭಾವನೆಗಳ ಅಭಿವ್ಯಕ್ತಿ' ಎಂಬವುಗಳೇ ಮುಖ್ಯವಾದುವು.

ಡಾರ್ವಿನನ ಉತ್ಕ್ರಾಂತಿವಾದವು ಇತರ ಶಾಸ್ತ್ರಗಳ ಮೇಲೆ ಎಷ್ಟು ಆಳವಾದ ಪರಿಣಾಮ ವನ್ನು ಮಾಡಿತೊ ಅಷ್ಟೇ ಆಳವಾಗಿ ಮನೋವಿಜ್ಞಾನದ ಮೇಲೂ ಅದರ ಪರಿಣಾಮ ವಾಗದೆ ಇರಲಿಲ್ಲ. ಲಂಡನ ವಿಶ್ವವಿದ್ಯಾಲಯದ ಮನೋವಿಜ್ಞಾನದ ಆಚಾರ್ಯನಾದ ಡಾ. ಫ್ರಾನ್ಸಿಸ್ ಎವ್ಹೆಲಿಂಗ ಎಂಬವನು ಅಂದಂತೆ ಉತ್ಕ್ರಾಂತಿವಾದದ ಪ್ರಭಾವವು ಮನೋವಿಜ್ಞಾನದ ಮೇಲೆ ಬಹಳೇ ಆಗಿದೆ. ಉತ್ಕ್ರಾಂತಿವಾದದ ಪರಿಣಾಮದಿಂದ ಮಾನವ ಪ್ರಾಣಿ ಮತ್ತು ಮಿಕ್ಕ ಪಶು ಕೋಟಿಯ ನಡುವಿನ ಅಂತರವನ್ನು ಕಡಿಯುವ ಒಂದು ಸೇತುವೆ ಕಟ್ಟಿದಂತಾಯಿತು.

ಇದುವರೆಗೆ, ಮನುಷ್ಯನ ಮನಸ್ಸನ್ನು ಒಂದು ಸ್ವತಂತ್ರವಾದ ಏಕಮೇವವಾದ ಘಟನೆಯೆಂದು ಅಭ್ಯಾಸಿಸುತ್ತಿದ್ದರು. ಹಾಳಾಗಬಾರದೆಂದು ಬರ್ಫದಲ್ಲಿ ಹೂಳಿಟ್ಟ ವಸ್ತುವಿನಂತೆ, ಮನಸ್ತತ್ವವನ್ನು ಅವರು ಬೇರೆಯಾಗಿ ಬಿಡಿಯಾಗಿ ವಿಶ್ಲೇಷಿಸಿ, ವಿಭಜಿಸಿ, ತಿರುಗಿ ಅದರ ಭಾಗಗಳನ್ನೆಲ್ಲ ಒಂದುಗೂಡಿಸಿ ಕಟ್ಟಿ ಆ ವಿಷಯದ ವಿವೇಚನೆಯು ಅಲ್ಲಿಗೇ ಮುಗಿಯಿತೆಂದು ಸಮಾಧಾನಪಡುತ್ತಿದ್ದರು. ಆದರೆ ಈಗ– ಅಂದರೆ ಉತ್ಕ್ರಾಂತಿವಾದವು ಪ್ರಸ್ಥಾಪಿತವಾದೊಡನೆಯೇ–ಈ ಪರಿಸ್ಥಿತಿಯು ಒಮ್ಮೆಲೇ ಮಾರ್ಪಟ್ಟಿತು. ಮನೋವಿಜ್ಞಾನವು ತಾವು ತಿಳಿಕೊಂಡುದಕಿಂತ ಅಪರಿಮಿತವಾಗಿ ವಿಶಾಲವಾದ ಮತ್ತು ಜಟಿಲವಾದ ಸಮಸ್ಯೆಯಾಗಿದೆಯೆಂಬ ಮಾತು ವಿಜ್ಞಾನಿಗಳ ನಿದರ್ಶನಕ್ಕೆ ಬಂದಿತು. ಶರೀರದ ಬೆಳವಣಿಗೆ, ಬದಲಾವಣೆ ಗಳನ್ನು ತಿಳಿದುಕೊಳ್ಳಲು ಉಪಯೋಗಿಸಿಕೊಂಡಂತೆಯೆ ಈಗ ಮನಸ್ಸಿನ ರೂಪ ರೀತಿಗಳನ್ನು ಅರಿತುಕೊಳ್ಳಲು ವಿನಿಯೋಗಿಸಿಕೊಳ್ಳಲಾರಂಭಿಸಿದರು.

ಉತ್ಕ್ರಾಂತಿವಾದದ ಹೊಸ ಬೆಳಕಿನಲ್ಲಿ ಮನಸ್ಸಿನ ಬೆಳವಣಿಗೆಯ ಕ್ರಮವನ್ನು ಕಂಡು ಕೊಳ್ಳುವದು ಅಗತ್ಯವಾಯಿತು. ಏಕಪೇಶೀಯ ಜಂತುವಿನಿಂದ–ಒಂದೇ ಅಣುಕೋಶದಿಂದ ಆದ ಸಜೀವ ದ್ರವ್ಯದಿಂದ–ಕ್ರಮವಾಗಿ ವಿಕಾಸವಾಗುತ್ತ ಮನುಷ್ಯನ ಶರೀರವು ಬೆಳೆದು ಬಂದಂತೆಯೇ, ಆತನ ಮನಸ್ಸು ಕೂಡ ಕ್ರಮಶಃ ಅರಳುತ್ತ ಬಂದಿರಬೇಕೆಂಬುದು ಒಪ್ಪಿಕೊಳ್ಳಬೇಕಾಯಿತು. ಮನಸ್ಸಿನ ಸೆಲೆ, ನೆಲೆಗಳನ್ನು ಕಂಡು ಹಿಡಿಯಬೇಕಾದರೆ, ಪ್ರಾಣಿಸೃಷ್ಟಿಯ ಕೆಳಗಿನ ಥರಗಳಗನಕ

ಹೋಗಿ ಅಲ್ಲಿ ಅಂಕುರರೂಪದಿಂದ ಕಾಣಿಸಿಕೊಳ್ಳುವ ಮನಸ್ತತ್ವವನ್ನು ನಿರೀಕ್ಷಿಸಬೇಕು. ಅಲ್ಲಿಂದ ಮನುಷ್ಯನಲ್ಲಿ ಅದು ಹೇಗೆ ಪರಿಣತ ಸ್ಥಿತಿಗೆ ಮುಟ್ಟಿದೆ ಎಂಬುದನ್ನು ಕಂಡುಕೊಂಡು ಬರಬೇಕಾಗುವದು. ಹೀಗೆ ಮನೋವಿಜ್ಞಾನದ ಅಭ್ಯಾಸಕ್ಕಾಗಿ ಇಡಿಯಾಗಿ ಪ್ರಾಣಿಕೋಟಿಯನ್ನೇ ಪರ್ಯಾಲೋಚಿಸಬೇಕಾಗುವದು. ಅದೇ ಮೇರೆಗೆ, ಮನುಷ್ಯನ ಮಟ್ಟಿಗೆ ಕೂಡ, ಬರೇ ಬಲಿತ ಬುದ್ಧಿಯ, ವಯಸ್ಸಿಗೆ ಬಂದವರ ಮನವನ್ನೇ ನೋಡಿಕೊಂಡರೆ ತೀರುವದಿಲ್ಲ, ಕೇವಲ ಸುಶಿಕ್ಷಿತ ನಾಗರಿಕತೆಯಲ್ಲಿ ಹುಟ್ಟಿ ಬೆಳೆದವರ ಮನಸ್ಸನ್ನು ನಿರೀಕ್ಷಿಸಿದರೆ ಮುಗಿಯಲಿಲ್ಲ. ಮನಸ್ಸಿನ ಸಮ್ಯಕ್‌ಜ್ಞಾನವಾಗಬೇಕಾದರೆ, ಪಶು ಕೋಟಿಯ ಅಭ್ಯಾಸ ಮಾಡುವಂತೆಯೇ, ಹುಟ್ಟಿದ ಮಗುವಿನಿಂದ ಕ್ರಮವಾಗಿ ಬೆಳೆದುಬರುವ ಮನಸ್ಸನ್ನೂ, ಬಾಳಿನ ಕೀಳುಂತರಗತಿಯಲ್ಲಿರುವ ಕಾಡಿನಲ್ಲಿ ಬಾಳುವ ಅನಾಗರಿಕತೆಯ ಮಟ್ಟದಲ್ಲಿ ಇನ್ನೂ ಉಳಿದ ಜನಾಂಗಗಳ ಮನಸ್ಸಿನ ಒಲವು, ಇರವುಗಳನ್ನು ಅರಿತುಕೊಳ್ಳಬೇಕು. ಮಾನವೀ ಮನಸ್ಸಿನ ವಿಕಾಸಕ್ರಮದ ಸ್ಥಿತಿ ಗತಿಗಳನ್ನು ತಿಳಿದುಕೊಳ್ಳಬೇಕು.

ಇಷ್ಟು ವಿಶಾಲವಾಗಿರುವ ಅಭ್ಯಾಸಕ್ಷೇತ್ರದಲ್ಲಿ ಬೇರೆ ಬೇರೆ ವಿಭಾಗಗಳನ್ನು ಮಾಡಿ, ಅವುಗಳನ್ನು ಒಂದೊಂದಾಗಿ ಸಂಶೋಧಿಸಿ ನೋಡುವದು ಅಗತ್ಯವು! ಅಂತೆಯೇ, ಮನೋವಿಜ್ಞಾನ ಮಂದಿರದ ದೊಡ್ಡ ಕಟ್ಟಡದಲ್ಲಿ ಅದರ ಶಾಖೋಪಶಾಖೆಗಳ ಹಲವು ಕೋಣೆಗಳಿವೆ. ಪಶು ಮನೋವಿಜ್ಞಾನ ತುಲನಾತ್ಮಕ ಮನೋವಿಜ್ಞಾನ (ಅಂದರೆ ಮನುಷ್ಯನನ್ನು ಪಶುಗಳೊಂದಿಗೆ ಹೋಲಿಸಿ ಮಾನಸಿಕ ಜೀವನದಲ್ಲಿಯ ತಾರತಮ್ಯವನ್ನು ತಿಳಿಯ ಹೊರಟ ಶಾಸ್ತ್ರ) ಶಿಶುಮನೋವಿಜ್ಞಾನವೆಂಬ ಮೂರು ಮುಖ್ಯ ವಿಭಾಗಗಳಾದ ಮನೋವಿಜ್ಞಾನವು ಮೂರ್ತಿಗೊಂಡಿದೆ.

'ಪ್ರಾಣಿಜಾತಿಗಳ ಉತ್ಪತ್ತಿ' ಎಂಬ ಗ್ರಂಥದಲ್ಲಿ ಡಾರ್ವಿನನು ಮನಸಿನ ಮೂಲ ಪ್ರವೃತ್ತಿಗಳ ಕುರಿತು ಚರ್ಚೆಮಾಡಿರುವನು. 'ಮಾನವನ ಅವತಾರ'ವೆಂಬ ಗ್ರಂಥದಲ್ಲಿ ಮನುಷ್ಯನ ಮತ್ತು ಉಳಿದ ಪ್ರಾಣಿಗಳ ಮಾನಸಿಕ ಶಕ್ತಿಗಳು ಹೇಗೆ ವಿಕಾಸಗೊಂಡುವೆಂಬುದನ್ನು ವಿವೇಚಿಸಿದನು. ಪಶುಗಳ ಮನೋರಚನೆಯು ಮನುಷ್ಯನಿಂದ ತೀರ ಭಿನ್ನವಾಗಿದೆಯೆಂಬ ಸಿದ್ಧಾಂತವನ್ನು ಡಾರ್ವಿನನು ಖಂಡಿಸಿದನು. ಆದ್ದರಿಂದ ಮನುಷ್ಯನ ನಡತೆಯ ಮೇಲೆ ಬೆಳಕು ಕೆಡುಹಲು ಪಶುಗಳ ನಡತೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಪದ್ಧತಿಯುಂಟಾಯಿತು. ಈ ತೆರನಾಗಿ ಪರಿಶೀಲನೆ ಮಾಡಿದಂತೆ ಅತ್ಯಂತ ಉಪಯುಕ್ತವಾದ ಹೊಸ ಹೊಸ ಸಂಗತಿಗಳು ಬೆಳಕಿಗೆ ಬಂದವು.

ಮನುಷ್ಯ ಪ್ರಾಣಿಯು, ಗರ್ಭಾವಸ್ಥೆಯ ವಿಕಾಸದಲ್ಲಿಯೂ, ಬಾಲ್ಯಾವಸ್ಥೆಯ ಪೂರ್ವಾರ್ಧದಲ್ಲಿಯೂ ಮಾನವನ ವಂಶದ ವಿಕಾಸಕ್ರಮವನ್ನು ಕೆಲವಂಶದಲ್ಲಿ ಕಂಡುಕೊಳ್ಳಬಹುದಾಗಿದೆ. ಪ್ರತಿಯೊಂದು ವ್ಯಕ್ತಿಯು ಆಯುಷ್ಯದ ಮೊದಲ ಭಾಗದಲ್ಲಿ ಮಾನವಜಾತಿಯು ವಿಕಾಸದ ಬೇರೆ ಬೇರೆ ಅವಸ್ಥೆಗಳ ಪಡಿನೆಳಲು ಸಂಕ್ಷಿಪ್ತವಾಗಿ ಮೂಡಿದುದು ಗೋಚರವಾಗುತ್ತದೆ. ಆದುದರಿಂದ ಒಂದು ವ್ಯಕ್ತಿಯ ಬಾಲ್ಯಾವಸ್ಥೆಯನ್ನು ಕುರಿತು ಬರೆದ ಮಾತೇ ಮಾನವ ಜಾತಿಯ ಬಾಲ್ಯಾವಸ್ಥೆಗೆ ಅನ್ವಯಿಸುತ್ತದೆ. ಮಹಾಸಾಗರಗಳಲ್ಲಿಯ ನಡುಗಡ್ಡೆಗಳಲ್ಲಿಯೂ, ಕಾಡುಬೆಳೆದ ಭೂಖಂಡಗಳ ನಡುಭಾಗಗಳಲ್ಲಿಯೂ ಹುಟ್ಟಿ ಬೆಳೆದು ಇನ್ನೂ ಪ್ರಾಥಮಿಕ ಸ್ಥಿತಿಯಲ್ಲಿ ಬಾಳುವ ಜನರ ಗುಂಪುಗಳ ನಡೆನುಡಿಗಳಲ್ಲಿ ಸಂಸ್ಕೃತಿಯಲ್ಲಿ, ಮಾನವ ಜಾತಿಯು ಮುನ್ನಡೆಯ ಬೇರೆ ಬೇರೆ ಪುಟಗಳನ್ನು ಕಾಣಬಹುದು. ಇಂತಹರ ಜೀವನದ ಮಾದರಿಗಳೇ, ಮಾನವ ಜಾತಿಯ ಬಾಲ್ಯಾವಸ್ಥೆಯ ಚಿತ್ರವನ್ನು ಕಲ್ಪಿಸಲು ಸಹಾಯಕವಾಗಿವೆ. ಆದುದರಿಂದ ಈ ಜನಾಂಗಗಳ ಮೇಲು ಕೀಳು ಮಾದರಿಗಳೂ ಮನೋವಿಜ್ಞಾನದ ಅಭ್ಯಾಸದ ವಿಷಯಗಳಾದುವು. ಬೇರೆ ಬೇರೆ ಜನಾಂಗಗಳಲ್ಲಿ ದೊರಕುವ ಜಾನಪದ ಸಾಹಿತ್ಯ, ಪುರಾಣ, ವಾಙ್ಮಯ, ಕಥೆ, ಗಾದೆಗಳು, ಹಳೇ ಆಚಾರ ಪ್ರಕಾರಗಳು ನಡೆನುಡಿಯ ರೀತಿಗಳು, ಧಾರ್ಮಿಕ ಸಾಂಪ್ರದಾಯಗಳು, ಪ್ರಾಚೀನ ಮತ್ತು ಮಧ್ಯಯುಗದ ಸಾಹಿತ್ಯಗಳು–ಇವೆಲ್ಲ ವಿಷಯಗಳನ್ನೂ ಮಾನಸಶಾಸ್ತ್ರದ ಸಂಶೋಧಕರು ತಮ್ಮ ಅಭ್ಯಾಸದಲ್ಲಿ ಬಳಸಿ ಕೊಳ್ಳುವದಕ್ಕೆ ಆರಂಭಿಸಿದರು. ಇದೇ ಮೇರೆಗೆ ಭ್ರಮಿಷ್ಟ ಮತ್ತು ಬುದ್ಧಿಭ್ರಷ್ಟ, ಮನಸ್ಸಿನ ವ್ಯಾಧಿ ವಿಕೃತಗಳಿಂದ ಬಳಲುವಂಥ, ಹುಟ್ಟು ಮೂಢರಾದ ಮಂದಿಯೆಲ್ಲ ಮನೋವೈಜ್ಞಾನಿಕ ಅಭ್ಯಾಸಕ್ಕೆ ವಿಷಯರಾದರು. ಏಕೆಂದರೆ ಇಂಥ ಹದಗೆಟ್ಟ ಮನಸ್ಸುಗಳನ್ನು ನಿರೀಕ್ಷಿಸಿದರೆ, ಅವುಗಳ ವ್ಯಾಪಾರಗಳಲ್ಲಿ ಕಂಡುಬರುವ ಅತಿ ರಿಕ್ತವಾದ ವಿಪರೀತವಾದ ರೂಪಗಳಿಂದ ಹಲವು ಮಾನಸಿಕ ಚಟುವಟಿಕೆಗಳ ಸೂಕ್ಷ್ಮ ಅಂಶಗಳನ್ನು ಅರಿತುಕೊಳ್ಳಲು ಅನುಕೂಲವಾಗುವದು.

ಹೀಗೆ ಡಾರ್ವಿನನ ಉತ್ಕ್ರಾಂತಿವಾದವನ್ನು ಮನೋವಿಜ್ಞಾನಕ್ಕಾಗಿ ಅಳವಡಿಸಿ ಕೊಂಡವರಲ್ಲಿ ಹರಬರ್ಟ ಸ್ಪೆನ್ಸರ ಎಂಬ ತತ್ವಜ್ಞಾನಿಯು ಮೊದಲಿಗನು. ಆದರೆ ಈ ಪದ್ಧತಿಯನ್ನು ಆತನು 'ಕಲ್ಪನಾ ಸಂಗತಿಯ' ವಾದವನ್ನು ಒಪ್ಪಿ, ಕೇವಲ ಅದರ ಪರಿಮಿತಿಯೊಳಗೆ ಉಪಯೋಗಿಸಿದನೆಂಬುದು ಒಂದು ದೋಷವು. ಆದರೂ, ಒಂದು ವ್ಯಕ್ತಿಯ ಬುದ್ಧಿಯ ಸ್ವರೂಪ, ಮಾನಸಿಕ ಕ್ರಿಯೆಗಳ ಪರಿಣಾಮಗಳು, ಮುಂತಾದವುಗಳನ್ನು ವಿಶ್ಲೇಷಿಸಿ, ವಿಮರ್ಶಿಸಿ, ಆತನ ಮನಸ್ಸಿನ ಮಾರ್ಪಾಟಗಳ ಮೇಲೆ ವ್ಯಕ್ತಿಯ ಆನುವಂಶಿಕ ಮತ್ತು ಮಾನವಜಾತಿಯ ಗುಣಸಂಸ್ಕಾರವು–

ಪ್ರಭಾವವು-ಬೀಳುವವೆಂಬುದನ್ನು ಸಿದ್ಧಪಡಿಸಿ, ಆತನು ಒಂದು ಮಹತ್ವದ ಕಾರ್ಯವನ್ನು ಮಾಡಿದನು.

ಈ ನಡುವೆ ೧೯ನೇ ಶತಮಾನದಲ್ಲಿಯೇ-ಸರ್ ಫ್ರಾನ್ಸಿಸ್ ಗಾಲ್ಟಿನ್ ಎಂಬ ಮಾನವವಂಶ ಶಾಸ್ತ್ರಜ್ಞನು ಡಾರ್ವಿನನಿಂದ ಪ್ರೇರಿತನಾಗಿ ಸಾಗಿಸಿದ ಸಂಶೋಧನೆಯ ಫಲವಾಗಿ, 'ಅನುವಂಶಿಕ-ಪ್ರತಿಭೆ' 'ಮಾನವೀ ಮನಃಶಕ್ತಿಯ ಕುರಿತು ವಿಚಾರಣೆ' ಎಂಬ ಗ್ರಂಥಗಳನ್ನು ಪ್ರಕಟಿಸಿದನು. ಗಾಲ್ಟಿನನು ಮನಸ್ಸಿನ ಗುಣಗಳ ಪರಸ್ಪರ ಸಂಬಂಧಗಳ ಕುರಿತು ಸಂಶೋಧನೆ ಮಾಡಿದನು. ಈ ಸಂಬಂಧಗಳ ಪರಿಮಾಣವನ್ನು ಗೊತ್ತು ಮಾಡುವ ಒಂದು ಪದ್ಧತಿಯನ್ನೂ ಕಂಡುಹಿಡಿದನು. ಈ ಪದ್ಧತಿಯು ಆಧುನಿಕ ಮನೋವಿಜ್ಞಾನದ ಅಂಕೆ ಸಂಖ್ಯೆಗಳ ಅಂಗದಲ್ಲಿ ಬಹಳೇ ಉಪಯುಕ್ತವಾಗಿದೆ.

## ಪ್ರಾಯೋಗಿಕ ಮನೋವಿಜ್ಞಾನವೂ, ವಿಲಿಯಮ ಜೇಮ್ಸನ ಪ್ರಭಾವವೂ

ಅದೇ ಶತಮಾನದ ಉತ್ತರಾರ್ಧದಲ್ಲಿ ವಿಲ್ ಹೆಲ್ಮ ವಂಟ ಎಂಬ ಜರ್ಮನ್ ವಿಜ್ಞಾನಿಯು ಲಿಪಝಿಗ್ ಎಂಬ ಪಟ್ಟಣದಲ್ಲಿ ಕೇವಲ ಮನೋವೈಜ್ಞಾನಿಕ ಪ್ರಯೋಗಗಳಿಗಾಗಿಯೇ ಮೀಸಲಿಟ್ಟ ಒಂದು ಪ್ರಯೋಗಶಾಲೆಯನ್ನು ತೆರೆದನು. ಈತನು ಈ ಮೊದಲು 'ಶಾರೀರಿಕ ಮನೋವಿಜ್ಞಾನದ ನೆಲಗಟ್ಟು'ವೆಂಬ ಗ್ರಂಥವನ್ನು ಬರೆದಿದ್ದನು. ಅದರಲ್ಲಿ ಆತನು ಶರೀರ ರಚನಾಶಾಸ್ತ್ರವನ್ನೂ, ಮಜ್ಜಾತಂತುಗಳ ಚಿಕಿತ್ಸಾಶಾಸ್ತ್ರವನ್ನೂ ಮನೋವಿಜ್ಞಾನದೊಂದಿಗೆ ಹೊಂದಿಸಿ ಬೆಳಿಸಲಿಕ್ಕೆ ಯತ್ನಿಸಿದ್ದನು. ಈ ಪುಸ್ತಕವೂ ಆಮೇಲೆ ಆರಂಭಿಸಿದ ಪ್ರಯೋಗಶಾಲೆಯೂ ಈ ವಿಜ್ಞಾನಿಯ ಒಲವು ಯಾವ ಸಿಟ್ಟಿನಲ್ಲಿತ್ತೆಂಬುದನ್ನು ತೋರಿಸುತ್ತವೆ.

ಮನೋವಿಜ್ಞಾನವು ಮಾನವನ ಪ್ರತ್ಯಕ್ಷ ಅನುಭವದ ಮೇಲೆ ನೆಲೆಗೊಂಡಿರುವದರಿಂದ ಈ ಅನುಭವವು ನಿಶ್ಚಿತವಾದ ಪ್ರಾಯೋಗಿಕ ಅಭ್ಯಾಸ ಪದ್ಧತಿಗೆ ತಕ್ಕುದಾದ ವಿಷಯವಾದುದರಿಂದ, ಮನೋವಿಜ್ಞಾನವನ್ನು ಒಂದು ವಸ್ತುನಿಷ್ಠ ಶಾಸ್ತ್ರವನ್ನಾಗಿ ಮಾಡಬಹುದೆಂದು ಈತನು ನಂಬಿದ್ದನು. ಈ ಅಭ್ಯಾಸಪದ್ಧತಿಯಲ್ಲಿ ವಂಟನು ಬಿಚ್ಚುಮನದಿಂದ ಮುಂದುವರಿದನು. ಕೇವಲ ಸಂಶೋಧನೆಯನ್ನೇ ಪ್ರಮಾಣವಾಗಿಟ್ಟುಕೊಂಡನು. ಯಾವದೇ ಅನುಭವದ ಉಗಮವು ಶಾರೀರಿಕವೋ ಮಾನಸಿಕವೋ ಎಂಬುದನ್ನು ಮೊದಲೇ ಅನುಮಾನಿಸುವದು ಅವಶ್ಯವೆಂದು

ಇಟ್ಟುಕೊಂಡು ಆತನು ತನ್ನ ಸಂಶೋಧನೆಗೆ ಕೈ ಇಕ್ಕಿದನು.

ಅದೇ ರೀತಿಯಲ್ಲಿ ವಿಂಟನು ತನ್ನನ್ನು ಯಾವದೊಂದು ವಿಶಿಷ್ಟಪದ್ಧತಿಗೆ ಬಿಗಿದು ಕೊಳ್ಳಲಿಲ್ಲ. ಮನೋವಿಜ್ಞಾನಿಯು ತನ್ನ ಸಂಶೋಧನೆಯಲ್ಲಿ ಎಲ್ಲ ಪದ್ಧತಿಗಳನ್ನು ಪ್ರತಿಯೊಂದು ರೀತಿಯನ್ನು ಉಪಯೋಗಿಸಿ ನೋಡಬೇಕು. ಆತ್ಮನಿರೀಕ್ಷಣೆ ಯೊಂದಿಗೆ ಶಾರೀರಿಕ ಅವಸ್ಥೆಗಳ ಸ್ಥಿತ್ಯಂತರಗಳಿಗೂ ಮನಸ್ಸಿಗೂ ಇರುವ ಸಂಬಂಧಗಳನ್ನು ಕುರಿತು ಕೈಕೊಂಡ ಪ್ರಯೋಗ ಪರೀಕ್ಷೆಗಳನ್ನೂ, ಮನುಷ್ಯನ ವರ್ತನದೊಂದಿಗೆ ಪಶುಗಳ ನಡತೆಯನ್ನೂ, ಹಿಂದೆ ಹೇಳಿದಂತೆ ಸಾಹಿತ್ಯ, ತತ್ವಜ್ಞಾನ, ಧರ್ಮಸಾಂಪ್ರದಾಯ, ಮಾನವ ವಂಶಶಾಸ್ತ್ರ ಮುಂತಾದವು ಗಳೆಲ್ಲವನ್ನೂ–ಸಂಕ್ಷೇಪದಲ್ಲಿ ಮನುಷ್ಯನ ಮನಸ್ಸಿನ ಪ್ರತಿಬಿಂಬ ಪ್ರತಿಕ್ರಿಯೆಗಳು ಕಂಡುಬರುವ ಜೀವನದ ಎಲ್ಲ ಅಂಗೋಪಾಂಗಗಳ ಕುರಿತಿರುವ ಜ್ಞಾನವು ಮನೋವಿಜ್ಞಾನಿಗೆ ಅತ್ಯಗತ್ಯ. ಮತ್ತು ಇಂತಿವೆಲ್ಲ ಬಗೆಯ ಜ್ಞಾನಬಲದಿಂದಲೇ ಮಾನಸಶಾಸ್ತ್ರ ಸಂಶೋಧಕನು ತನ್ನ ಸಿದ್ಧಾಂತಗಳನ್ನು ಪ್ರಸ್ಥಾಪಿಸಬೇಕೆಂದು ವಿಂಟನ ಮತವಿತ್ತು.

ಈ ಸಂಶೋಧನೆಯ ರೀತಿಯು ಮುಂದಿನವರಿಗೆಲ್ಲ ಒಂದು ಮೇಲ್ಪಂಕ್ತಿಯಾಯ್ತು. ಇತರ ಮನೋವಿಜ್ಞಾನಿಗಳೂ ಇವನ ಅನುಕರಣ ಮಾಡಿದರು. ಅವನ ಕಾರ್ಯ ಪದ್ಧತಿಯನ್ನು ಹಲವರು ಅನುಸರಿಸಿದರು. ಹಲವೆಡೆಗಳಲ್ಲಿ ಅವನಂಥವೇ ಪ್ರಯೋಗಶಾಲೆಗಳು ತೆರೆಯಲ್ಪಟ್ಟವು. ಇದರ ಪರಿಣಾಮದಿಂದ ಮನೋವಿಜ್ಞಾನದ ಅಭ್ಯಾಸಕ್ಷೇತ್ರವು ವಿಶಾಲವಾಯಿತು. ಅದರ ಶಾಖೋಪಶಾಖೆಗಳು ಬೆಳೆದು ಎಲ್ಲ ಮಾನಸಶಾಸ್ತ್ರವನ್ನೂ ಇಡಿಯಾಗಿ ನೋಡುವ ದೃಷ್ಟಿಯಿಂದ ಬಿಡಿಯಾಗಿ ಹುಡುಕುವ (ಒಂದೊಂದು ಶಾಖೆಯನ್ನೇ ಕೂಲಂಕಷವಾಗಿ ವಿಮರ್ಶಿಸುವ) ವೃತ್ತಿಬೆಳೆದು ಮನೋವಿಜ್ಞಾನದ ಬೇರೆ ಬೇರೆ ಅಂಗಗಳ ವಿಶೇಷಜ್ಞತೆಯೇ ಹೆಚ್ಚಾಗಿ ಬೆಳೆಯಿತು. ಹೀಗೆ ಮನೋವಿಜ್ಞಾನದಲ್ಲಿ, ಭಿನ್ನ ಭಿನ್ನ ಸಾಂಪ್ರದಾಯಗಳು ನಡೆದುಬಂದವು.

ಇದೇ ಹೊತ್ತಿಗೆ ಮನೋವಿಜ್ಞಾನದ ಅಭಿರುಚಿಯು ಯುರೋಪಖಂಡದಂತೆ ಅಮೇರಿಕೆಯಲ್ಲೂ ತಲೆದೋರಿತು. ಸ್ಟೆನ್ಲೆಹಾಲ ಎಂಬ ತತ್ವವೇತ್ತನು ಅಮೇರಿಕೆ ಯಲ್ಲಿ ಮೊದಲನೇ ಪ್ರಯೋಗಶಾಲೆಯನ್ನು ತೆರೆದನು. ಇವನು ತನ್ನ ಅಭ್ಯಾಸ ಕ್ಷೇತ್ರವೆಂದು ಮನುಷ್ಯನ ಪೌಗಂಡಾವಸ್ಥೆಯನ್ನು ಆರಿಸಿಕೊಂಡನು. ಬಾಲ್ಯ ಮತ್ತು ಯೌವನಗಳ ನಡುವಿನ ಸಂಕ್ರಮಣಾವಸ್ಥೆಯ ಕುರಿತು ಈತನು ಸಂಶೋಧನವನ್ನು ಕೈಕೊಂಡನು. ಹಾಲನ ಒಂದು ಮತವು ಪ್ರಸಿದ್ಧವಿದೆ: ಮನುಷ್ಯನು ಪ್ರಾಥಮಿಕ

ಸ್ಥಿತಿಯಲ್ಲಿ ವಾಸವಾಗಿದ್ದ ಗವಿಯಿಂದ ಆಧುನಿಕ ನಾಗರಿಕತೆಯ ಗೋಪುರದ ತನಕ, ಏರಿಬಂದ ಸಂಸ್ಕೃತಿಯ, ಎಲ್ಲ ಅವಸ್ಥೆಗಳನ್ನು ಪ್ರತಿಯೊಂದು (ಮಾನವ) ಶಿಶುವು ತನ್ನ ಬೆಳವಣಿಗೆಯಲ್ಲಿ ಸಂಕ್ಷಿಪ್ತವಾಗಿ ಮತ್ತೆ ಪ್ರಕಟಿಸುವದು ಅನುಭವಿಸುವದು ಎಂದು ಈತನ ಅಭಿಪ್ರಾಯ.

ಈ ಸಿದ್ಧಾಂತವನ್ನು ಸಂಪೂರ್ಣವಾಗಿ ಈಗ ಯಾರೂ ಒಪ್ಪಿಕೊಳ್ಳುವದಿಲ್ಲ. ಆದರೂ ಇದರಿಂದ ಬಾಲಮನಸ್ಸಿನ ವಿಕಾಸದ ಕುರಿತು, ಬಹಳ ಬೆಳಕು ಸಿಕ್ಕಿತು. ಅಮೇರಿಕೆಯು ತಾನು ಸ್ವತಃ ಪೌಗಂಡಾವಸ್ಥೆಗೆ ಬಂದ ಹೊಸ ರಾಷ್ಟ್ರವಾದುದರಿಂದಲೋ ಏನೋ ಅಲ್ಲಿಯ, ಮನೋವಿಜ್ಞಾನಿಗಳು ಮೊದಲಿನಿಂತೆಯೇ ಬಾಲಮನೋವಿಜ್ಞಾನದ ಕುರಿತು ಹೆಚ್ಚು ಗಮನವನ್ನು ಪೂರೈಸಹತ್ತಿದರು. ಈ ಕ್ಷೇತ್ರದಲ್ಲಿ ಹೆಸರಾದ ಹಲವು ವಿಜ್ಞಾನಿಗಳಲ್ಲಿ ಸ್ಟೆನ್ಲೆ ಹಾಲನು ಒಬ್ಬನು. ಅವರೆಲ್ಲರೂ ಬಾಲಮನೋವಿಜ್ಞಾನದಲ್ಲಿ ಪ್ರತಿಭಾಪೂರ್ಣವಾದ ಕಾರ್ಯವನ್ನು ಮಾಡಿರುವರು– ಮಾಡುತ್ತಲಿರುವರು.

೧೯ನೆಯ ಶತಮಾನದಲ್ಲಿ ಅಮೇರಿಕೆಯಲ್ಲಿ ಆಗಿಹೋದ ತತ್ವಜ್ಞಾನಿಗಳಲ್ಲಿ ಅತ್ಯಂತ ಕ್ರಾಂತಿಕಾರಿಯು ಪ್ರತಿಭಾವಂತನೂ ಪ್ರಮುಖನೂ ಆದವನು ವಿಲಿಯಂ ಜೇಮ್ಸ್. ಈ ಆಚಾರ್ಯನ ಬಳಿಯಲ್ಲಿಯ ಹಾರವರ್ಡ ವಿಶ್ವವಿದ್ಯಾಲಯದಲ್ಲಿ ಸ್ಟೆನ್ಲೆ ಹಾಲನು ವಿದ್ಯಾರ್ಥಿಯಾಗಿದ್ದನು. ಜೇಮ್ಸನು ಬಾಲ್ಯದಿಂದಲೂ ನರಗುಂದು– ಪ್ರಕೃತಿಯವನೂ ಕೋಮಲ ದೇಹಯಷ್ಟಿಯವನೂ ಆಗಿದ್ದನು. ೨೪ನೆಯ ವಯಸ್ಸಿನ ತನಕ ಆತನು ಅರೆರೋಗಿಯಾಗಿಯೇ ಬೆಳೆದನು; ಬಹಳವಾಗಿ ಪ್ರವಾಸ ಮಾಡಿದನು. ಎಣಿಕೆಮೀರಿ ಓದಿದನು; ಬಹಳೇ ಹೆಸರಾದ ಶರೀರ ಶಾಸ್ತ್ರಜ್ಞರ ಬಳಿಯಲ್ಲಿ ಅಭ್ಯಾಸಮಾಡಿ ತಜ್ಞನಾದನು. ಆಮೇಲೆ ವೈದ್ಯಶಾಸ್ತ್ರದ ಸಂಪೂರ್ಣ ಶಿಕ್ಷಣ ಪಡೆದರೂ, ಮಜ್ಜಾತಂತುಗಳ ವಿಕಾರಕ್ಕೆ ಬಲಿಯಾಗಿ ಬಹಳವಾಗಿ ಬಳಲಿದನು. ತನ್ನ ಅಭ್ಯಾಸದಲ್ಲಿ ಆತನು ಚಾರ್ಲಸ ಬರ್ಟಂಡ ರೆನೋವ್ ಎಂಬ ತತ್ವಜ್ಞಾನಿಯ ದಾರ್ಶನಿಕ ಗ್ರಂಥವನ್ನು ಓದಿದ್ದನು. ಆ ತತ್ವವೇತ್ತನ ಸ್ವತಂತ್ರ ಸಂಕಲ್ಪಶಕ್ತಿಯ ತತ್ವವನ್ನು ಜೇಮ್ಸನು ಅರಿತು ಅರಗಿಸಿಕೊಂಡಿದ್ದನು.

ಸ್ವಾತಂತ್ರ್ಯವೇ ಮನುಷ್ಯನ ಮೂಲಭೂತವಾದ ಲಕ್ಷಣವೆಂದು ರೆನೋವ್‌ನು ಸಾರಿದನು. ಸ್ವಾತಂತ್ರ್ಯದಲ್ಲಿಯ ನಮ್ಮ ನಂಬಿಗೆಯು ಬರೇ ಬಯಕೆಯಲ್ಲ. ಕೇವಲ ಹಾರೈಕೆಯಲ್ಲ ಅದು ಜೀವಾಳದ ಹಂಬಲ. ಅತ್ಯಂತಿಕ ಇಚ್ಛೆ–ಇಚ್ಛಾಶಕ್ತಿ. ಈ ಸಿದ್ಧಾಂತವು ವಿಲಿಯಂ ಜೇಮ್ಸನಲ್ಲಿ ಆಶ್ಚರ್ಯಕರವಾದ ಪರಿವರ್ತನೆ

ಯನ್ನುಂಟುಮಾಡಿತು. 'ಇಚ್ಛಾಸ್ವಾತಂತ್ರ್ಯದಲ್ಲಿ ನಂಬಿಗೆಯಿಡುವದೇ ನನ್ನ ಸ್ವತಂತ್ರವಾದ ಇಚ್ಛೆಯ ಮೊದಲನೇ ಕೆಲಸವಾಗುವದು.' ಎಂದೂ ಘೋಷಿಸಿ, ಆತನು ತನ್ನ ತಾರುಣ್ಯದಲ್ಲಿ ಶ್ರದ್ಧೆಯನ್ನಿಟ್ಟಿದ್ದ ನಿಯತವಾದವ ತತ್ವಜ್ಞಾನವನ್ನು ತೊರೆದನು. ನಿಯತವಾದವೆಂದರೆ ಮಾನವೀ ಚಟುವಟಿಕೆಯೆಲ್ಲ ಹೊರಗಿನಶಕ್ತಿಗಳಿಂದ ಗೊತ್ತು ಮಾಡಲ್ಪಡುತ್ತವೆಂಬ ತತ್ವ: ಮನುಷ್ಯ ಜೀವನವು ನಿರುಪಾಧಿಕವಾಗಿ ಸ್ವಯಂಪ್ರೇರಣೆಯಿಂದ ರೂಪಗೊಳ್ಳುವದಿಲ್ಲವೆಂಬ ಮತ. ಈ ವಾದವನ್ನು ಅಲ್ಲಗಳೆದು ಜೇಮ್ಸನು ಇಚ್ಛಾ ಸ್ವಾತಂತ್ರ್ಯದ ಹೊಸ ತತ್ವದಿಂದ ಹುರುಪುಗೊಂಡು ತನ್ನ ಮಜ್ಜಾವಿಕೃತಿಯ ವ್ಯಾಧಿಯನ್ನು ಸಹ ವಾಸಿಮಾಡಿಕೊಂಡು ಉತ್ಕಟವಾದ ಬೌದ್ಧಿಕ ಚಟುವಟಿಕೆಯಿಂದ ತುಂಬಿದ ನವೀನ ದಿವ್ಯ ಜೀವನದಲ್ಲಿ ತನ್ನನ್ನು ತೇಲಿಬಿಟ್ಟನು !

ಈತನು ಹಾರವರ್ಡ ವಿಶ್ವವಿದ್ಯಾಲಯದಲ್ಲಿ ಮೊದಲು ಶರೀರಶಾಸ್ತ್ರವನ್ನು ಕಲಿಸುತ್ತಿದ್ದನು. ಬಳಿಕ ಮನೋವಿಜ್ಞಾನದ ಆಚಾರ್ಯನಾದನು. ಒಂದು ತಪದ (೧೨ ವರುಷಗಳ) ಅಭ್ಯಾಸದಿಂದ ಬರೆದ 'ಮನೋವಿಜ್ಞಾನದ ಮೂಲ ತತ್ವಗಳು' ಎಂಬ ಸುಪ್ರಸಿದ್ಧ ಪುಸ್ತಕವನ್ನು ಆತನು ಪ್ರಕಟಿಸಿದನು. ಅಂದಿನಿಂದ ಮನೋವಿಜ್ಞಾನವು ತುಂಬ ಭರದಿಂದ ಹಬ್ಬಿ, ಕೊಬ್ಬಿ ವಿಸ್ತಾರವನ್ನು ಹೊಂದುತ್ತಲಿದೆ. ಈತನ ಗ್ರಂಥವು ಈಗ ಹಳೆಯದೆನಿಸಿದರೂ ಆ ಗ್ರಂಥಕ್ಕೆ ಐತಿಹಾಸಿಕ ಮಹತ್ವವಿದೆ. ಮನೋವಿಜ್ಞಾನದ ವಿಕಾಸದಲ್ಲಿ ಅದೊಂದು ಹೊಸಯುಗ ಪ್ರವರ್ತಕ ಗ್ರಂಥವಾಗಿದ್ದಿತೆಂಬುದು ಸುಳ್ಳಲ್ಲ. ವಿಭಿನ್ನದಾರಿಗಳಿಂದ ಬೆಳೆದುಬಂದ ಅದುವರೆಗಿನ, ಶಾರೀರಿಕಶಾಸ್ತ್ರ, ಶಾರೀರಿಕ ಮನಃಶಾಸ್ತ್ರ, ವಿಶ್ಲೇಷಕ ಮಾನಸಶಾಸ್ತ್ರ, ವಿಕೃತ ಮನೋವಿಜ್ಞಾನ ಮತ್ತು ತಾತ್ವಿಕ ಮಾನಸಶಾಸ್ತ್ರ ಹೀಗೆ ಬೇರೆ ಬೇರೆ ಮನೋವಿಜ್ಞಾನದ ಬೇರೆ ಬೇರೆ ಶಾಖೆಗಳ ಸಮನ್ವಯಗೊಳಿಸಿ ಒಂದು ವಿಶಾಲ ತತ್ವ ಪ್ರಣಾಲಿಗೆ ಅವನ್ನೆಲ್ಲ ಒಳಪಡಿಸಿ, ಜೇಮ್ಸನು ಮನೋವಿಜ್ಞಾನದ ಹೊಸ ದೃಷ್ಟಿಯನ್ನು ಉಂಟು ಮಾಡಲು ಕಾರಣವಾದ ಎಲ್ಲ ವಿಚಾರ ಧಾರೆಗಳಿಗೆ ಒಂದು ಅಚ್ಚುಕಟ್ಟುತನವನ್ನು ತಂದನು.

ಜೇಮ್ಸನು ಬರೆದ ಮನೋವಿಜ್ಞಾನದಲ್ಲಿ ಎರಡು ಸಂಗತಿಗಳು ತತ್ವತಃ ಹೊಸದಾಗಿವೆ; ಆತನ ಸಂಶೋಧನದ ಶುದ್ಧವಾದ ವೈಜ್ಞಾನಿಕ ಪದ್ಧತಿ ಒಂದು, ಮತ್ತು ದೈನಂದಿನ ಜೀವನದೊಂದಿಗೆ ಹೊಂದಿಸಲು. ವ್ಯವಹಾರಿಕ ವಿನಿಯೋಗಕ್ಕೆ ಮನೋವಿಜ್ಞಾನವನ್ನು ಹಚ್ಚಲು ಆತನು ತೋರಿದ ತತ್ಪರತೆ ಇನ್ನೊಂದು.

ಮನೋವಿಜ್ಞಾನದ ಗುರಿಯು, ಕೇವಲ ಮನಸ್ಸಿನ ರಚನೆಯ ರೂಪವನ್ನರಿತು

ಕೊಳ್ಳುವದೇ ಆಗಿರದೆ ಮನೋವಿಜ್ಞಾನವು ಮನಸ್ಸಿನ ಧರ್ಮಗಳನ್ನೂ ಅವರ ಕಾರ್ಯಗಳನ್ನೂ ವಿವೇಚಿಸಿ ವಿವರಿಸಲು ಹೊರಟ ಶಾಸ್ತ್ರವೆಂದು ಆತನು ಒತ್ತಿ ಒತ್ತಿ ಹೇಳಿದನು. ತಿಳಿನುಡಿಯಲ್ಲನ್ನಬೇಕಾದರೆ ಮನಸು ಏನಿದೆ ಎಂಬುವದಕ್ಕಿಂತ ಅದು ಏನು ಮಾಡುತ್ತದೆಂಬುದೇ ಮಾನಸ ಶಾಸ್ತ್ರದ ಮುಖ್ಯವಿಷಯವೆಂದು ಆತನು ಸಾರಿದನು.

ಆತನ ಸಹಕಾರಿಯಾದ ಹ್ಯೂಗೋ ಮನ್ಸ್ಟರಬರ್ಗ ಎಂಬವನು ಈ ಹೊಸ ದೃಷ್ಟಿಯಿಂದ ಅಭ್ಯಾಸ ನಡಿಸಿದನು. ಈ ಅಭ್ಯಾಸದ ಫಲವಾಗಿ ಆತನು 'ಅಪರಾಧವೂ ಮನೋವಿಜ್ಞಾನವೂ' ಎಂಬ ಗ್ರಂಥವನ್ನೂ, ಅನಂತರ 'ಮನೋ ವಿಜ್ಞಾನವೂ ಔದ್ಯೋಗಿಕ ಕಾರ್ಯಕ್ಷಮತೆಯೂ' ಎಂಬ ಪುಸ್ತಕವನ್ನು ಪ್ರಕಟಿಸಿದನು. ಈ ಪುಸ್ತಕಗಳ ಹೆಸರುಗಳಿಂದಲೇ ಮನೋವಿಜ್ಞಾನವು ವ್ಯವಹಾರಿಕ ಜೀವನಕ್ಕೆ ಎಷ್ಟೊಂದು ಉಪಯುಕ್ತವಿದೆಯೆಂಬುದು ಗೊತ್ತಾಗುವಂತಿದೆ.

ಇಂದಿನ ಎರಡು ಪ್ರಮುಖ ಮನೋವೈಜ್ಞಾನಿಕ ವಿಚಾರ ಸಂಪ್ರದಾಯಗಳು ವಿಲಿಯಂ ಜೇಮ್ಸನಿಗೆ ತುಂಬ ಉಪಕೃತವಾಗಿವೆ. ಇವೆರಡೂ ಉತ್ತರ ಅಮೇರಿಕೆ ಯಲ್ಲಿಯೇ ತಲೆದೋರಿದವು. ಈ ಸಾಂಪ್ರದಾಯಗಳಲ್ಲಿ ಮೊದಲನೆಯದು– 'ಬಿಹೇವಿಯರಿಝಮ್' (ಅಂದರೆ ವರ್ತನವಾದ) ಎರಡನೆಯದು, 'ಹೊರ್ಮಿಕ ಸಾಯಕೊಲೊಜಿ' (ಅಂದರೆ ಹೇತುವಾದಿ ಮನೋವಿಜ್ಞಾನ).

ಮನೋರಚನೆಗಿಂತ ಗುಣಧರ್ಮಕ್ಕೆ ಹೆಚ್ಚಾಗಿ ಗಮನವಿತ್ತುದರ ಪರಿಣಾಮವಾಗಿ, ಮನುಷ್ಯನ ವರ್ತನದ ನಿಶ್ಚಿತವಾದ ಅಭ್ಯಾಸವಾಗುವದು ಅಗತ್ಯವಾಯಿತು. ಮನಸ್ಸಿನ ಗುಣಧರ್ಮಗಳ ಫಲಿತವೇ ಎಂದರೆ ಒಳಗಣ ಮಾನಸಿಕ ಚಟುವಟಿಕೆಯ ಹೊರಗಣ ಪ್ರಕಟರೂಪವೇ ಮನುಷ್ಯನ ವರ್ತನವು. ಆದುದರಿಂದ ಶಾಸ್ತ್ರ ಶುದ್ಧವಾಗಿ ಕೈಕೊಂಡ ಮಾನವೀ ವರ್ತನದ ಯಾವುದೇ ಅಭ್ಯಾಸವು ತನ್ನೊಂದಿಗೆ ಅನಿವಾರ್ಯವಾಗಿ, ಆ ವರ್ತನದ ಉಗಮದ ಪ್ರಶ್ನೆಯನ್ನು ಉಂಟುಮಾಡದೇ ಬಿಡುವದಿಲ್ಲ. ಮನುಷ್ಯಪ್ರಾಣಿಯಾಗಲಿ, ಉಳಿದ ಯಾವದೇ ಪ್ರಾಣಿಯಾಗಲಿ ತನ್ನ ಪ್ರತಿನಿತ್ಯದ ಬಾಳುವೆಗೆ ಬೇಕಾದ ಬಗೆಬಗೆಯ ಚಟುವಟಿಕೆಗಳನ್ನು ಯಾವದಾದರೊಂದು ರೀತಿಯಿಂದ ಕಲಿತುಕೊಳ್ಳಲೇಬೇಕಾಗುವದು. ಈ ಕಲಿಯುವಿಕೆಯ ತಳಹದಿ ಯಾವದು? ಆ ಮೂಲಭೂತವಾದ ಸರಲವಾದ ತಳಹದಿಯ ಮೇಲೆ ಕ್ರಮೇಣ, ಹೆಚ್ಚು ಹೆಚ್ಚು ಜಟಿಲವಾದ ಮಾದರಿಗಳನ್ನೊಳ ಗೊಂಡ ನಡತೆಯು, ಮಾನವೀ ವರ್ತನವು ಹೇಗೆ ಏರ್ಪಡುವದು?

ಈ ಬಗೆಯಾಗಿ ಮನುಷ್ಯನ ನಡೆವಳಿಯ ಅಭ್ಯಾಸವು ಮನೋವಿಜ್ಞಾನಕ್ಕೆ ತೀರ ಹೊಸವಲ್ಲ. ಆದರೆ ಹಿಂದೆ ಉಲ್ಲೇಖಿಸಿದಂತೆ ಡಾರ್ವಿನನು ಉತ್ಕ್ರಾಂತಿವಾದದ ಸಿದ್ಧಾಂತವನ್ನು ಸ್ಥಾಪಿಸುವ ತನಕವೂ, ಮನುಷ್ಯ ಮತ್ತು ಪಶುವಿನ ನಡೆವಳಿಗಳು ಮೂಲತಃ ಭಿನ್ನವಾದವುಗಳೆಂದೂ ಅವುಗಳ ಉಗಮವು ಭಿನ್ನಮನೋವೃತ್ತಿಗಳಲ್ಲಿರುವುದೆಂದೂ ಹಲವರು ಗ್ರಹಿಸಿದ್ದರು. ೨೦ನೇ ಶತಮಾನದ ಆರಂಭದವರೆಗೂ ಮನೋವಿಜ್ಞಾನಿಗಳು, ಮನುಷ್ಯನಿಗೆ ಮಾತ್ರ ಸ್ವಯಂಪ್ರಜ್ಞೆ (ತನ್ನತನದ ಅರಿವು) ಇರುವದೆಂದು ಎಣಿಸಿ ಸಮಾಧಾನಪಟ್ಟುಕೊಂಡಿದ್ದರು. ಮನುಷ್ಯನು ಒಂದು ವಿಶಿಷ್ಟ ರೀತಿಯಾಗಿ ಏಕೆ ವರ್ತಿಸುತ್ತಾನೆ ? ಮಾನವನ ಪ್ರತಿಯೊಂದು ಕೃತಿಗೂ ಆತನ ಯಾವದೊಂದು ವಿಚಾರವೇ ಪ್ರಚೋದಕವಾಗಿರುತ್ತದೆಂಬ ಗ್ರಹಿಕೆಯು ಸರಿಯೆ ? ಹಲವು ವರುಷಗಳಿಂದ ನಡೆದ ಶಾರೀರಶಾಸ್ತ್ರದ ಸಂಶೋಧನೆಗಳು ಈ ವಿಷಯದ ಮೇಲೆ ಅದ್ಭುತವಾದ ಪ್ರಕಾಶವನ್ನು ಕೆಡವಿರುವವು.

### ಪರಾವರ್ತನಕ್ರಿಯೆಯೂ, ವರ್ತನವಾದವೂ :

ಸರ್ ಚಾರ್ಲಸ್ ಬೆಲ್‌ನು ಜ್ಞಾನತಂತುಗಳ ಎರಡು ಪ್ರಕಾರಗಳನ್ನು ಶೋಧಿಸಿ ಪರಾವರ್ತನಕ್ರಿಯೆಯ ತತ್ವವನ್ನು ಪ್ರಸ್ಥಾಪಿಸಿದನೆಂದು ಹಿಂದೆ ಹೇಳಿದೆಯಷ್ಟೇ. ಈ ಪರಾವರ್ತನಕ್ರಿಯೆಯು (ಇಚ್ಛೆಯ ಅಂಕೆಯ ಹೊರಗಿನ ವೇದನಾ) ಮತ್ತು ಪ್ರೇರಣಾತ್ಮಕವಾದ ಪ್ರತಿಕ್ರಿಯೆಯು ಮನುಷ್ಯನಲ್ಲಿ ಕಂಡುಬರುವಂತೆ ಪಶುಗಳಲ್ಲಿಯೂ ಅಷ್ಟೇಕೆ–ಅತ್ಯಂತ ಕೆಳತರಗತಿಯ ಸಾವಯವ ಜಂತುಗಳಲ್ಲಿಯೂ ಕೂಡ ಕಂಡುಬರುತ್ತವೆ. ಆಕಸ್ಮಿಕವಾದ ಬೆಳಕಿನಪೆಟ್ಟಿಗೆ ನಮ್ಮ ಕಣ್ಣುಗಳು ಮುಚ್ಚಿಕೊಳ್ಳುತ್ತವೆ. ಅದೇ ಮೇರೆಗೆ ಧೂಳಿಯೊಳಗಿನ ಹುಳವೂ ಒಮ್ಮೊಮ್ಮೆ ಹಕ್ಕಿಯೊಂದು ನೆಲಕ್ಕೆ ಇಳಿಯುವ ಸಪ್ಪು ಕೇಳಿದೊಡನೆ ಹತ್ತಿರದ ಬಿಲವನ್ನು ಹೋಗುವದು. ಇದು ಪರಾವರ್ತನ ಕ್ರಿಯೆಯು. ಇದು ಕಲಿತು ಬರುವ ಕ್ರಿಯೆಯಲ್ಲ. ಒಂದು ಜಾತಿಯ ಎಲ್ಲ ಪ್ರಾಣಿಗಳಿಗೂ ಈ ತರದ ಕ್ರಿಯೆಯು ಸರ್ವಸಾಮಾನ್ಯವಾಗಿ ವ್ಯತ್ಯಾಸವಿಲ್ಲದೆ ತನಗೆ ತಾನೇ ಬರುತ್ತದೆ. ಇಂಥ ಪರಾವರ್ತನ ಕ್ರಿಯೆಗೆ ಹೆಚ್ಚಾಗಿ ವಿಚಾರದ ಅವಶ್ಯಕತೆಯಿಲ್ಲ; ಸಹಜವಾಗಿ ಜರಗುವದು.

ಪರಾವರ್ತನ ಕ್ರಿಯೆಯ ತತ್ವದ ತಳಹದಿಯ ಮೇಲೆಯೇ ಮನೋವಿಜ್ಞಾನವನ್ನು ಕಟ್ಟಬೇಕೆಂದು ರಶಿಯದ ಮನೋವಿಜ್ಞಾನಿಗಳ ಅಪೇಕ್ಷೆಯಾಗಿತ್ತು. ಮನುಷ್ಯನ ಮತ್ತು ಇತರ ಪಶುಗಳ ನಡೆವಳಿಯಲ್ಲಿ ಮೂಲತಃ ಭೇದವಿಲ್ಲ–ಮೂಲಭೂತವಾದ

ಭಿನ್ನತೆಯಿಲ್ಲ. ಆದುದರಿಂದ ಅವೆರಡನ್ನು ಒಟ್ಟಿಗೆ ಒಂದಕ್ಕೊಂದು ಹೋಲಿಸಿ ಅಭ್ಯಾಸಿಸಬೇಕೆಂದು ಡಾರ್ವಿನನು ಪ್ರತಿಪಾದಿಸಿದುದೂ ಇದೇ ಸುಮಾರಿಗೆ.

ಆತನ ಮುಂದಾಳುತನವನ್ನು ಒಪ್ಪಿ ಕೆಲವು ವಿಜ್ಞಾನಿಗಳು ಪಶುಗಳ ವರ್ತನವಲ್ಲಿ ಸಂಶೋಧನವನ್ನು ಆರಂಭಿಸಿದರು. ಮೊದಲಲ್ಲಿ ಅವರ ಅಭ್ಯಾಸವು ಬರೇ ವರ್ಣನಾತಕ್ಮವಾಗಿತ್ತು. ಪಶುವಿನ ನಡತೆಯನ್ನು ನೀರಿಕ್ಷಿಸಿ ಅದರ ಬಗೆಗಳನ್ನೇ ಸಂಗ್ರಹಿಸಿ ಬರೆದಿಡುತ್ತಿದ್ದರು. ಅನಂತರ ಅವರು ವಿಮರ್ಶೆ ಸಂಶೋಧನದ ಕಡೆಗೆ ಬಂದರು. ಪಶುಗಳು ತಮ್ಮ ವಿಶಿಷ್ಟ ನಡತೆಯನ್ನು ಹೇಗೆ ಕಲಿಯುತ್ತವೆಂಬುದನ್ನು ಅರಿತುಕೊಳ್ಳುವಲ್ಲಿಯೇ ಮನೋವಿಜ್ಞಾನಿಗಳು ವ್ಯಗ್ರರಾದರು.

ಇವರಲ್ಲಿ ಹೆಸರಾದ ಮನೋವಿಜ್ಞಾನಿಗಳ ಗುಂಪಿನಲ್ಲಿ ರಶಿಯದ ಇವ್ಹಾನ್ ಪೆಟ್ರೊವಿಚ್ ಪವಲೊವ್ ಎಂಬಾತನು ಅಗ್ರಗಣ್ಯನು. ವರ್ತನವಾದೀ ಮನೋವಿಜ್ಞಾನಿಗಳು ಪವಲೋವನನ್ನು ಆಧುನಿಕ ವಿಜ್ಞಾನಿಗಳಲ್ಲಿ ಅತ್ಯಂತ ಕ್ರಾಂತಿಕಾರಿಯೆಂದು ಎಲ್ಲರೂ ಒಪ್ಪುವರು. (ಈತನು ೧೯೩೬ರಲ್ಲಿ ತೀರಿಕೊಂಡನು.) ಅವನಿಗೆ ಕ್ರಾಂತಿಕಾರಿಯೆಂದು ಕರೆಯಲು ಅಂತಹ ಕಾರಣವೂ ಉಂಟು. ಅವನು 'ಸಾಂಕೇತಿಕ ಪರಾವರ್ತನ ಕ್ರಿಯೆ' ಎಂಬ ಒಂದು ಮಹತ್ವದ ತತ್ವವನ್ನು ಕಂಡುಹಿಡಿದನು. ಬಾಹ್ಯ ಪರಿಸ್ಥಿತಿಯಲ್ಲಿಯ ಕೆಲವೊಂದು 'ವಿಕಾರ ಹೇತು'ಗಳೊಂದಿಗೆ ಒಂದು ಪ್ರಾಣಿಯ ವಿಶಿಷ್ಟ ವರ್ತನವನ್ನು ಹೊಂದಿಸಿ ನಡೆಸಿದರೆ ಕ್ರಮೇಣ ಆ ವಿಕಾರ ಹೇತುವಿಲ್ಲದಿದ್ದರೂ ಅಂತಹ ಪರಿಸ್ಥಿತಿಯಲ್ಲಿ ಪ್ರಾಣಿಯು ಆ ವಿಶಿಷ್ಟ ವರ್ತನವು ಜರಗುತ್ತದೆ ಎಂಬುವದೇ ಈ ಸಾಂಕೇತಿಕ ಪರಾವರ್ತನ ಕ್ರಿಯೆಯ ತತ್ವ. (ಇದರ ಕುರಿತು ಮುಂದೆ 'ವರ್ತನವಾದ'ದ ವಿವೇಚನೆಯಲ್ಲಿ ಬರೆಯಲಾಗುವದು.) ಪವಲೋವನ ಸಿದ್ಧಾಂತದ ಮಹತ್ವವನ್ನು ಆತನ ಪಕ್ಷಪಾತಿಗಳು ಬಣ್ಣಿಸುವಂತೆ ಏಕಮೇವಾದ್ವಿತೀಯವಾದ ತತ್ವವೆಂದು ಹೇಳುವದು ಅತಿವಾದವಾಗಬಹುದು. ಆದರೂ ಪ್ರಾಣಿಗಳ ಪರಾವರ್ತನ ಕ್ರಿಯೆಯ ಕುರಿತು ಪವಲೋವನೂ ಅವನ ಪಂಥದವರೂ ಕಂಡುಹಿಡಿದ ಸಿದ್ಧಾಂತಗಳ ಮನೋವಿಜ್ಞಾನದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿವೆ! ಪವಲೋವನು ಮುಖ್ಯವಾಗಿ ಶರೀರಶಾಸ್ತ್ರಜ್ಞನು; ಮನಃಶಾಸ್ತ್ರಜ್ಞನಲ್ಲ. ಆತನು ತನ್ನ ಕಾರ್ಯವನ್ನಾರಂಭಿಸಿದಾಗ ಮನೋವಿಜ್ಞಾನದ ಕುರಿತು ಏನೊಂದನ್ನೂ ಅರಿತಿರಲಿಲ್ಲ. ಆದ್ದರಿಂದ ಆತನ ತಿಳುವಳಿಕೆಯು ಇತರ ಮನೋವೈಜ್ಞಾನಿಕ ಸಿದ್ಧಾಂತಗಳಿಂದ ಪೂರ್ವಗ್ರಹಯುಕ್ತವಾಗಿರಲಿಲ್ಲ. ಪಚನಕ್ರಿಯೆಯ ಕ್ರಮದ ಕುರಿತು ಆತನು ಶರೀರಶಾಸ್ತ್ರದ ದೃಷ್ಟಿಯಿಂದ ಕಾರ್ಯಮಾಡುತ್ತಿರುವಾಗ ಲಾಲಾರಸದ ಗ್ರಂಥಿಗಳ ಕ್ರಿಯೆಯು

ಆತನ ಲಕ್ಷ್ಯವನ್ನು ಎಳೆದುಕೊಂಡಿತು.

ಯಾವದೊಂದು ಪ್ರಾಣಿಯು ಆಹಾರವನ್ನು ತೆಗೆದುಕೊಂಡಾಗ ಅದರ ಬಾಯಿ ಯಲ್ಲಿ ಲಾಲಾರಸವು ಉಂಟಾಗುತ್ತದೆ.-ಜೊಲ್ಲು ಸುರಿಯುತ್ತದೆ. ಬಾಯೊಳಗಿಟ್ಟ ಆಹಾರದ ಸ್ವರೂಪಕ್ಕೆ ಸರಿಯಾಗಿ ಈ ಜೊಲ್ಲಿನ ಪ್ರಮಾಣವೂ ಗುಣವೂ ಬೇರೆ ಬೇರೆಯಾಗಿರುತ್ತದೆ. ಹೀಗೆ ಜೊಲ್ಲು ಉಂಟಾಗುವದೂ ಅದರ ಗುಣ ಪರಿಮಾಣ ಗಳಲ್ಲಿ ಹೆಚ್ಚು ಕಡಿಮೆಯಾಗುವದೂ ಪರಾವರ್ತನಕ್ರಿಯೆಯ ಪರಿಣಾಮವು. ಆದರೆ ಪವಲೋವನು ನಿರೀಕ್ಷಿಸಿದನೇನೆಂದರೆ, (ಆಹಾರದ) ತುತ್ತು ಬಾಯಿಯಲ್ಲಿರದಿರು ವಾಗಲೂ, ಬರೇ ಆಹಾರದ ವಾಸನೆ, ದರ್ಶನ ಇಲ್ಲವೆ ಆ ಆಹಾರವನ್ನುಂಟು ಮಾಡುವಾಗ ಆಗುವ ಶಬ್ದ ಇವುಗಳಲ್ಲಿ ಯಾವದಾದರೊಂದು ಕೂಡ ಪ್ರಾಣಿಯ ಬಾಯಿಯಲ್ಲಿ ಜೊಲ್ಲು ಬರಲು ಕಾರಣವಾಗುತ್ತದೆ. ಆದರೆ ಈ ಮೊದಲು ಆ ಪ್ರಾಣಿಯು ಆಹಾರದ ಅಂಥ ವಾಸನೆ, ದರ್ಶನ ಇಲ್ಲವೆ ಶಬ್ದವನ್ನು ಅರಿತಿರಲೇ ಬೇಕು. ಈ ನಿಶ್ಚಿತ ತಳಹದಿಯ ಮೇಲೆ ಪವಲೋವನು ಹೆಚ್ಚಿನ ಪ್ರಯೋಗ ಗಳನ್ನಾರಂಭಿಸಿದನು. ಆತನು ಈ ಮೊದಲು ಪಚನಕ್ರಿಯೆಯ ಅಭ್ಯಾಸದಲ್ಲಿ ನಾಯಿಗಳನ್ನು ಪ್ರಯೋಗಗಳಿಗಾಗಿ ಉಪಯೋಗಿಸಿಕೊಂಡಿದ್ದನು. ಈಗಲೂ ನಾಯಿಗಳ ಮೇಲೆಯೇ ಪರಾವರ್ತನ ಕ್ರಿಯೆಯ ಕುರಿತು ಪ್ರಯೋಗಗಳನ್ನು ಮಾಡತೊಡಗಿದನು. ಆತನ ಪ್ರಯೋಗವು ಮನೋರಂಜಕವಾಗಿದ್ದದರಿಂದ ಇಲ್ಲಿ ಬಣ್ಣಿಸಲಾಗಿದೆ:- ಒಂದು 'ಕರಿಮರಿ' ನಾಯಿಯನ್ನು ಆತನು ಏಕಾಕಿಯಾಗಿ ಸದ್ದಿಲ್ಲದ ಒಂದು ಕೋಣೆಯಲ್ಲಿ ಇಟ್ಟನು. ಸಮೀಪದಲ್ಲಿಯೆ ಒಂದು ಟಿಕ್ ಟಿಕ್ ಅನ್ನುವ 'ಮಿಟ್ರೊನೊಮ' ಎಂಬ ಕಾಲಮಾಪಕ ಯಂತ್ರವನ್ನು ಇಟ್ಟನು. ಆ ನಾಯಿಯು ಆ ಸಪ್ಪಳವನ್ನು ಕೇಳಿದೊಡನೆ, ಆಹಾರ ತುಂಬಿದ ಒಂದು ಹರಿವಾಣ ವನ್ನು ಕೋಣೆಯಲ್ಲಿ ತಟ್ಟನೆ ಬರುವಂತೆ ಮಾಡಿದನು. ಇದೇ ಸಪ್ಪಳ ಮತ್ತು ಹರಿವಾಣದ ಕ್ರಮವನ್ನು ಬಿಡುವು ಸಾಕಷ್ಟು ಬಿಟ್ಟು ಆಗಾಗ ನಡೆಸಿದನು. ಕೆಲವೊಂದು ಬಾರಿಗಳ ನಂತರ, ರೂಢಿಯಾದ ಬಳಿಕ ನಾಯಿಯು ಬರೇ ಟಿಕ್ ಟಿಕ್ ಸಪ್ಪಳವನ್ನು ಕೇಳಿದ ಮಾತ್ರಕ್ಕೆ (ಹರಿವಾಣ ಮುಂದೆ ಬರದಿದ್ದರೂ) ಆಹಾರದ ಅಪೇಕ್ಷೆಯಿಂದ ತಲೆದೋರುವ (ಹಸಿವಿನ) ಎಲ್ಲ ವಾಡಿಕೆಯ ಪ್ರತಿ ಕ್ರಿಯೆಗಳನ್ನು ತೋರಿಸಲಾರಂಭಿಸಿತು; ಬಾಲವಲ್ಲಾಡಿಸಿ ನಾಲಿಗೆ ಚಪ್ಪರಿಸಿ ಜೊಲ್ಲು ಸುರಿಸಿ ತನ್ನ ಆತುರತೆಯನ್ನು ತೋರಹತ್ತಿತು.

ಈ ಪ್ರಯೋಗದಿಂದಲೂ ಇವೇ ಮಾದರಿಯ ಬೇರೆ ಪ್ರಯೋಗಗಳಿಂದಲೂ, ಪಾವಲೋವನು ಒಂದು ನಿಷ್ಕರ್ಷಕ್ಕೆ ತಲ್ಪಿದನು; ಆ ಪ್ರಾಣಿಯು ಟಿಕ್ ಟಿಕ್

ಸಪ್ಪಳವನ್ನು ಆಹಾರದೊಂದಿಗೆ ತಳಕು ಹಾಕಿ ಸಾಹಚರ್ಯದ ಮೂಲಕವಾಗಿ ಹಸಿವನ್ನುಂಟುಮಾಡಿಕೊಳ್ಳಲು 'ಕಲಿಯುತೆಂ'ತಲ್ಲ; ಒಂದು ಪರಾವರ್ತನ ಕ್ರಿಯೆಯು ಕೃತ್ರಿಮವಾದ ಪ್ರೇರಣೆಯಿಂದ, 'ವಿಕಾರಹೇತು'ವಿನಿಂದ ಉಂಟು ಮಾಡಿಸಂತಾಯಿತು; ಅಂದರೆ ಕೆಲವೊಂದು ಹಂಚಿಕೆಯಿಂದ ಸಾಂಕೇತಿಕವಾಗಿ ಪರಾವರ್ತನ ಕ್ರಿಯೆಯನ್ನು ಉತ್ಪನ್ನಮಾಡಲು ಬರುತ್ತದೆಂದು ಸಿದ್ಧವಾಯ್ತು. ಏಕೆಂದರೆ ಆಹಾರವನ್ನು ನೋಡಿ ಇಲ್ಲವೆ ಮೂಸಿ ಐಚ್ಛಿಕ ರೀತಿಯಿಂದ ಆಗುವಂತಹ ಪ್ರತಿಕ್ರಿಯೆಯು ಅಷ್ಟೇ ಅನೈಚ್ಛಿಕವಾಗಿ ಟಿಕ್ ಟಿಕ್ ಸಪ್ಪಳವನ್ನು ಕೇಳಿದುದ ರಿಂದಲೂ ಬಾಯಿಯಲ್ಲಿ ಉಂಟಾಯ್ತು.

ಯಾವದೊಂದು ಪ್ರಾಣಿಯಲ್ಲಿ ಹುಟ್ಟಿನೊಂದಿಗೆಯೇ ಬಂದ ಸಹಜವಾದ ಮೂಲ ಪ್ರವೃತ್ತಿ ಪ್ರತಿಕ್ರಿಯೆಯನ್ನು ಪಾವಲೋವನು 'ಅಸಾಂಕೇತಿಕ ಪರಾವರ್ತನ ಕ್ರಿಯೆ' ಎಂದು ಕರೆದನು. ಕೃತ್ರಿಮ ಸಂಕೇತಗಳ ಮೂಲಕ ಕೆಣಕಿದ ಪ್ರತಿ ಕ್ರಿಯೆಯನ್ನು ಆತನು 'ಸಾಂಕೇತಿಕ ಪರಾವರ್ತನ ಕ್ರಿಯೆ' ಎಂದು ಕರೆದನು. ಈ ಸಾಂಕೇತಿಕ ಪರಾವರ್ತನದ ತತ್ವದ ಮೇಲೆ ಒಂದು ಸಮಗ್ರವಾದ ಮನೋವಿಜ್ಞಾನ ಸಾಂಪ್ರದಾಯವೇ ನಿಂತಿದೆ.

ಮನುಷ್ಯನ ಎಲ್ಲ ವರ್ತನವನ್ನು, ನಡತೆಯ ಎಲ್ಲ ಮಾದರಿಗಳನ್ನು, ಈ ತತ್ವ ದಿಂದಲೇ ವಿವರಿಸಲು ಬರುವದೆಂದು ಪಾವಲೋವನ ನಂಬಿಗೆಯು. ನಾವು ಸಾಮಾನ್ಯವಾಗಿ ಪ್ರವೃತ್ತಿಜನ್ಯಕ್ರಿಯೆಗಳೆಂದು ಕರೆವ–ಸುಡುವಕೆಂಡದಿಂದ ಸರ್‍ರನೆ ಬೆರಳನ್ನು ಹಿಂದಕ್ಕೆ ಸರಿಸುವಂತಹ–ವರ್ತನದಿಂದ ಮೊದಲ್ಗೊಂಡು ಒಂದು ಗಡುಚಾದ ಗಣಿತಪ್ರಮೇಯವನ್ನು ಬಿಡಿಸುವಲ್ಲಿ ಉಪಯೋಗಿಸಬೇಕಾಗುವ ಕ್ಲಿಷ್ಟವಾದ ಕೆಲಸದವರೆಗೆ ಎಲ್ಲ ಮಾನವೀವರ್ತನದ ಮೀಮಾಂಸೆಯನ್ನೂ ಉಪಪತ್ತಿಯನ್ನೂ (ಒದಗಿದ ಪ್ರಚೋದನೆಗೆ ಪ್ರತಿಯಾಗಿ ಜರಗುವ ಮಜ್ಜಾ ತಂತುವಿನ) ಪರಾವರ್ತನ ಕ್ರಿಯೆಯ ಮಾತಿನಿಂದಲೇ ಮಾಡಿಕೊಡಲು ಬರುತ್ತ ದೆಂದು ಪಾವಲೋವನು ಸಾಧಿಸಿದನು.

ಈ ಸಿದ್ಧಾಂತವನ್ನು ಒಪ್ಪಿಕೊಂಡಲ್ಲಿ, ನಮ್ಮ ನಿಮ್ಮ ಕಲ್ಪನೆಯಂತೆ ಇಟ್ಟುಕೊಂಡ ಮನಸ್ಸಿನ ವ್ಯಾಖ್ಯೆಯನ್ನು ಆತ್ಮನಿರೀಕ್ಷಣೆಯಿಂದ ಮನೋವಿಜ್ಞಾನವನ್ನು ಪಡೆಯಲಿಚ್ಛಿಸುವ ಅಂತರ್ಮುಖ ಅಭ್ಯಾಸಿಯು ತಿಳಿದುಕೊಂಡಂಥ ಮನಸ್ಸಿನ ಸ್ವರೂಪವನ್ನು–ಪೂರ್ಣವಾಗಿ ಅಲ್ಲಗಳೆಯಬೇಕಾಗುತ್ತದೆ! ವಾಡಿಕೆಯ ಮಾತಿನ ಮನಸ್ಸೆಂಬ ವಸ್ತುವೇ ಅಳಿದುಹೋಗುತ್ತದೆ.

ಇದೇ ಸಮಯಕ್ಕೆ ಇತರ ಪ್ರಾಣಿಗಳ ಬುದ್ಧಿಶಕ್ತಿಯನ್ನು ಪರೀಕ್ಷಿಸಲು ಹಲವು ಬಗೆಯ ಪ್ರಯೋಗಗಳೂ ನಡೆದವು. ಕಿಳೋಳಗಣಕೀಳು ತರಗತಿಯದಾದ 'ಅಮಿಬಾ' ಎಂಬ ಏಕಪೇಶೀಯ ಜಂತುವಿನಿಂದ ಮೊದಲ್ಗೊಂಡು ಬೆನ್ನು ಸೆಟಿಸಿ ನಡೆವ ಅತ್ಯಂತ ಮೇಲ್ತರಗತಿಯ ಪ್ರಾಣಿಯವರೆಗೆ ಎಲ್ಲ ತರದ ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ಮಾಡಿ ನೋಡಲಾಯಿತು. ಈ ಕಾರ್ಯದಲ್ಲಿ ಇಂಗ್ಲೆಂಡಿನ ಸಿ. ಲೊಯಡ್ ಮೊರ್ಗನ್ ಮತ್ತು ಅಮೇರಿಕೆಯ ಜೇಕ್ಸಲೊಎಬ್, ಈ.ಎಲ್. ಥೋರ್ನೊಡಾಯಿಕ ಎಂಬ ವಿಜ್ಞಾನಿಗಳು ಮೊದಲಿಗರಾಗಿ ಹೆಸರಿಗೆ ಬಂದರು.

ಪಾಶವೀ ಪ್ರತಿಕ್ರಿಯೆಗಳಲ್ಲಿ-ಪ್ರಾಣಿಗಳ ಚಟುವಟಿಕೆಗಳಲ್ಲಿ-ಪ್ರಚೋದನೆಯ ಕೇಂದ್ರದಿಂದ ಉಂಟಾಗುವ ಶಾರೀರಿಕ ಚಲನವಲನಗಳು ಮೊತ್ತ ಮೊದಲಿನ ಕ್ರಿಯೆಗಳು. ಸರಳವಾದ ಈ ಆಗಿಂಕ ಚಲನವಲನಗಳನ್ನು ಲೊಎಬ್‌ನು ಸಂಶೋಧಿಸಿದನು. (ಈ ಚಲನವಲನಗಳಿಗೆ ಆತನು 'ಟ್ರೊಪಿಝಮ' ಎಂಬ ಹೆಸರನ್ನು ಕೊಟ್ಟಿದ್ದನು.) ಲೊಯ್ಡ್ ಮೊರ್ಗನ್ ಮತ್ತು ಥೊರ್ನೈಡಾಯ್ಕ ಇವರೂ ಇನ್ನಿತರರೂ, ಮತ್ತೊಂದು ತತ್ತ್ವವನ್ನು ಸಪ್ರಯೋಗವಾಗಿ ಪರೀಕ್ಷಿಸಿದರು. ಪಶುಗಳು ಯಾವದೊಂದು ಸಮಸ್ಯೆಯನ್ನು ಇಡಿಯಾಗಿ ನೋಡಿಕೊಂಡು ಹಿಡಿತದಲ್ಲಿ ತರುವ ಹೊರದೃಷ್ಟಿಯುಳ್ಳ ಚಟುವಟಿಕೆಗಳನ್ನು ಕಲಿಯುವದಿಲ್ಲ; ಹಲವು ಬಾರಿ ತಪ್ಪಿ ತಲೆಗೆ ಬಡಿದ ಬಳಿಕ ತಿದ್ದಿಕೊಳ್ಳುವ ಪದ್ಧತಿಯಿಂದಲೇ ಪ್ರಾಣಿಗಳು ಹಲವು ಮಾತುಗಳನ್ನು ಕಲಿತು ಜ್ಞಾನ ಪಡೆದಿವೆ. ತಮ್ಮ ನಡತೆಯನ್ನು ಮಾರ್ಪಡಿಸಿಕೊಂಡಿವೆ. ಈ ಪದ್ಧತಿಯಲ್ಲಿ ಅನುಮಾನ ಆಲೋಚನೆಗಳಿಂದ ಸರಿಯಾದ ಚಟುವಟಿಕೆ ಹೊಳೆಯುವುದಿಲ್ಲ. ಪಶುವು ಅಕಸ್ಮಾತ್ತಾಗಿ ತಟ್ಟನೆ ಯಾವದೊಂದು ಪರಿಸ್ಥಿತಿಯಲ್ಲಿ ಅವಕ್ಕೆ ಸರಿಯಾಗಿ ನಡೆದುಕೊಳ್ಳುತ್ತದೆ. ಯೋಗ್ಯವಾದ ಪ್ರತಿಕ್ರಿಯೆಯನ್ನು ಕಂಡುಕೊಳ್ಳುತ್ತದೆ. ಈ ಪ್ರತಿಕ್ರಿಯೆಯು ಹಲವು ಪುನರಾವರ್ತನೆಗಳಿಂದ ಮನಸ್ಸಿನ ಮೇಲೆ ಅಚ್ಚಾಗಿ ಅಚ್ಚಳಿಯದೆ ನಿಂತು ಅದೇ ನಡತೆಯ ಒಂದು ಪದ್ಧತಿಯು ಮಾದರಿಯಾಗುತ್ತದೆ ಎಂಬ ಈ ಸಿದ್ಧಾಂತವನ್ನೇ ಮೊರ್ಗನ್ ಥೊರ್ನಡಾಯ್ಕ ಮೊದಲಾದವರು ಸಮರ್ಥಿಸಿದರು.

## ವರ್ತನವಾದಕ್ಕೆ ಆವ್ಹಾಹನೆ (ಕೊಹಲರನ ಚಿಂಪೆಂಝಿಗಳೂ :-)

ಆದರೆ ಈ ಸಿದ್ಧಾಂತವೂ ಸರ್ವಮಾನ್ಯವಾಗಿಲ್ಲ. ಇದಕ್ಕೂ ಒಬ್ಬ ಪ್ರತಿದ್ವಂದ್ವಿಯ ಆವ್ಹಾಹನೆಯು ಬಂದಿತು. ಕಳೆದ ಮಹಾಯುದ್ಧದ ತುಸು ಮುಂಚೆ ವೊಲ್ಫಗೆಂಗ ಕೋಹಲರ ಎಂಬ ಜರ್ಮನ್ ವಿಜ್ಞಾನಿಯು ಕೆಲವು ಎಳೆ ವಯಸ್ಸಿನ 'ಅಶಿಕ್ಷಿತ'

ಚಿಂಪೆಂಝಿ (ಕೋತಿ)ಗಳ ಗುಂಪಿನ ಮೇಲೆ ಈಗ ಸುಪ್ರಸಿದ್ಧವಾದ ಹಲವು ಪ್ರಯೋಗಗಳನ್ನು ಮಾಡಿದನು. ಆಗ ಆ ಪಶುಗಳಲ್ಲಿ ಮೇಲ್ತರಗತಿಯ ಕೈಚಳಕದ ಕುಶಲತೆಯನ್ನು ಆತನು ಕಂಡನು. ಅಷ್ಟೇ ಅಲ್ಲ, ತನ್ನದೇ ಆದ ಜಾಣ್ಮೆಯನ್ನು-ಮುನ್ನೋಟದ ಅರಿವನ್ನು-ನಿಸ್ಸಂದೇಹವಾಗಿ ವ್ಯಕ್ತಮಾಡುವಂಥ ಮನೋವ್ಯಾಪಾರಗಳು ಆ ಮಂಗಗಳ ನಡತೆಯಲ್ಲಿ ಅಡಕವಾಗಿರುವದನ್ನು ಆತನು ಶೋಧಿಸಿದನು. ಇದಲ್ಲದೆ ಪ್ರೌಢ ಮನುಷ್ಯರು ತೋರಿಸುವಂತಹವೇ ಆದ ಭಾವನೆಗಳ ಲಕ್ಷಣಗಳನ್ನು ಚಿಂಪೆಂಝಿಗಳೂ ವ್ಯಕ್ತಪಡಿಸುವವೆಂದು ಆತನು ಗೊತ್ತು ಹಿಡಿದನು.

ಇದನ್ನು ಕಂಡು ಹಿಡಿಯಬೇಕಾದರೆ ಕೈಕೊಂಡ ಪ್ರಯೋಗಗಳಲ್ಲಿ ಸಂದೇಹ ಸಂದಿಗ್ಧತೆಗಳಿಗೆ ಎಡೆಗೊಡದಂಥ ಪರೀಕ್ಷೆಗಳನ್ನೇ ಆ ಚಿಂಪೆಂಝಿಗಳಿಂದ ಮಾಡಿಸಲಾಯಿತ್ತು. ಈ ಪ್ರಾಣಿಗೆ ಸಹಜ ನಿಲುಕದಂತೆ ಸ್ವಲ್ಪ ಎತ್ತರದಲ್ಲಿ ಆಹಾರವನ್ನಿಟ್ಟು ಅದೇ ಸಮಯಕ್ಕೆ ಆ ಆಹಾರವನ್ನು ಪಡಕೊಳ್ಳಲು ಬೇಕಾದ ಸಾಧನವನ್ನೂ ಆ ಪ್ರಾಣಿಯ ಕಣ್ಣುಮುಂದೆ ಇರಿಸಲಾಯಿತು. ಆ ಸಾಧನವನ್ನು ಉಪಯೋಗಿಸಿ ಆಹಾರವನ್ನು ದೊರಕಿಸಲು ಕೇವಲ ಚಾಣಾಕ್ಷತೆಯ ಅವಶ್ಯಕತೆಯಿತ್ತು. ಪಾರಿಭಾಷಿಕ ಮಾತಿನಲ್ಲಿ ಹೇಳವದಾದರೆ ಸಮಸ್ಯೆಯ ಉತ್ತರಕ್ಕೆ ಸಹಾಯಕವಾಗುವ ಸಂಗತಿ ಮತ್ತು ಸಮಸ್ಯೆಯ ಉತ್ತರ ಇವೆರಡರ ಸಂಬಂಧವನ್ನು ಗ್ರಹಿಸಿಕೊಳ್ಳುವ ಸ್ವಂತ ಬುದ್ಧಿಯು ಮಾತ್ರ ಚಿಂಪೆಂಝಿಗೆ ಅವಶ್ಯವಿತ್ತು. ಇದೇ ಮಾದರಿಯ ಹಲವು ಪ್ರಯೋಗ ಪರೀಕ್ಷೆಗಳನ್ನು ಮಾಡಿ ನೋಡಿ, ಪಶುಗಳಲ್ಲಿ ಕೂಡಾ ಪರಾವರ್ತನ ಕ್ರಿಯೆಯ ಹೊರತಾದ ತನ್ನದೇ ಆದ ಒಂದು ಕಾರ್ಯ ಪ್ರೇರಕವಾದ ಬುದ್ಧಿ ಶಕ್ತಿಯು ಇರುತ್ತದೆಂದು ಕೊಹಲರನು ಸಿದ್ಧಮಾಡಿದನು. (ಮೇಲೆ ಕೊಟ್ಟ ಉದಾಹರಣೆಯಿಂದ ಹಲವು ಶತಮಾನಗಳ ಮೊದಲಿನ ತತ್ವವೇತ್ತನಾದ ಪ್ಲೇಟೋನ ಮಾತು ನೆನಪಿಗೆ ಬರುತ್ತದೆ. ಬುದ್ಧಿಯ ಅತ್ಯಂತ ಶ್ರೇಷ್ಠ ಸ್ವರೂಪವೆಂದರೆ ವಸ್ತುಗಳ ಅನ್ಯೋನ್ಯ ಸಂಬಂಧಗಳನ್ನು ಸರಿಯಾಗಿ ಕಂಡುಕೊಳ್ಳುವ ಸಾಮರ್ಥ್ಯವೇ ಸರಿ ಎಂದು ಆತನು ಅಭಿಪ್ರಾಯ ಪಟ್ಟಿದ್ದನು.)

ಕೊಹಲರನ ಚಿಂಪೆಂಝಿಗಳು ತಮ್ಮ ಪಂಜರದಲ್ಲಿ ಆಹಾರವನ್ನು ಎಳೆದುಕೊಳ್ಳಲಿಕ್ಕೆ ಕೋಲುಗಳನ್ನು ಕೂಡಲೇ ಉಪಯೋಗಿಸಹತ್ತಿದವು; ಒಂದು ಕೋಲು ಸಾಕಷ್ಟು ಉದ್ದವಿಲ್ಲವೆಂದು ಕಂಡುಬಂದೊಡನೆಯೇ ಅದಕ್ಕೆ ಇನ್ನೊಂದು ಕೋಲನ್ನು ಜೋಡಿಸಿ ಕೂಡಿಸಿದವು. (ಹೀಗೆ ಎರಡು ಕೋಲುಗಳನ್ನು ಕೂಡಿಸಿ ಆಹಾರ ಪ್ರಾಪ್ತಿಯ ಸಮಸ್ಯೆಯನ್ನು ಬಗೆಹರಿಸಲು ಸಾಧನವನ್ನು ಕಲ್ಪಿಸಿಕೊಳ್ಳಬೇಕೆಂಬ

ಸಂಗತಿಯು ಚಿಂಪೆಂಝಿಗಳಿಗೆ ಯೋಗಾಯೋಗದಿಂದ ತೋಚಿತು. ಆದರೂ, ಈ ಕಲ್ಪನೆಯ ಶಕ್ಯತೆಗಳನ್ನು ಆ ಪಶುವು ಕೂಡಲೇ ಗ್ರಹಿಸಿಕೊಂಡಿತು.) ಮರದ ಟೊಂಗೆಗಳನ್ನು ಕಿತ್ತು ತೆಗೆದು ಕೋಲುಗಳಂತೆ ಉಪಯೋಗಿಸುವದನ್ನು ಅವು ಮೆಲ್ಲಗೆ ಕಲಿತವು. ತಮಗೆ ನಿಲುಕದಷ್ಟು ದೂರದಲ್ಲಿ ಎತ್ತರದ ಮೇಲೆ ಇಟ್ಟ ಆಹಾರವನ್ನು ಪಡಕೊಳ್ಳಲು ಹತ್ತರದಲ್ಲಿದ್ದ ಪೆಟ್ಟಿಗೆಗಳನ್ನು ಒಂದರ ಮೇಲೊಂದು ಹೇರಿದರೆ, ಅಥವಾ ಹಗ್ಗಗಳ ನೆರವಿನಿಂದ ಮೇಲೇರಲು ಅನುಕೂಲ ವಾಗುವದೆಂದು ಆ ಚಿಂಪೆಂಝಿಗಳು ಅರಿತವು. ಇವೆಲ್ಲ ಚಟುವಟಿಕೆಗಳಲ್ಲಿ ಬರೇ ಮಜ್ಜಾತಂತುಗಳ ತಾತ್ಕಾಲಿಕವಾದ ಅನೈಚ್ಛಿಕವಾದ ಪ್ರತಿಕ್ರಿಯೆಯ ಕುರುಡು ರೀತಿಯಿರದೆ, ಸಹೇತುಕವಾದ ಕ್ರಿಯೆಯನ್ನು ಪ್ರೇರಿಸುವ ವಿಚಕ್ಷಣತೆಯೊಂದು ಒಡಮೂಡುವದೆಂದು ಕೋಹಲರನು ಪ್ರಸ್ಥಾಪಿಸಿದನು.

ಆದರೆ ಇದರೊಂದಿಗೆ, ಮಂಗನಬುದ್ಧಿಯ ವಿಚಕ್ಷಣತೆಯನ್ನು–ಪಶುವಿನ ಮನಸ್ಸಿನ ಶ್ರೇಷ್ಠಾಂಶಗಳನ್ನು–ತೋರಿಸಿವಂತೆ ಅವರ ಪರಿಮಿತಿಯನ್ನೂ ಈ ಪ್ರಯೋಗ ಗಳು ಸ್ಪಷ್ಟಮಾಡಿದವು; ಪಶುಬುದ್ಧಿಯು ಮರ್ಯಾದಿತವಾದ ಶಕ್ತಿಯೆಂಬುದೂ ಆ ಪ್ರಯೋಗಗಳಿಂದ ಸಿದ್ಧವಾಯ್ತು. ಚಿಂಪೆಂಝಿಗಳ ತಿಳುವಳಿಕೆಯ ಮಟ್ಟವು ಮನುಷ್ಯನಿಗಿಂತ ಎಷ್ಟೋ ಕೆಳಗಿರುತ್ತದೆ. ಆದರೂ ಅವುಗಳ ಮನಸ್ಸೂ ಮನುಷ್ಯನ ಮನಸ್ಸಿನಂತೆಯೇ ಹರಿಯುವದೆಂಬ ಮಾತು ತಿಳಿದು ಬಂತು. ಮನುಷ್ಯನ ಬುದ್ಧಿಯು ಹೊರಗಿನ ಸಂಗತಿಗಳಲ್ಲಿಯ ಸಂಬಂಧಗಳನ್ನು ಹೆಚ್ಚು ಹೆಚ್ಚು ಸೂಕ್ಷ್ಮ ವಾಗಿ ವಿವಿಧವಾಗಿ ಅರಿತುಕೊಳ್ಳಬಹುದು. ಆದರೆ ಇದನ್ನು ಅರಿವ ಬುದ್ಧಿಯ ರೀತಿಯು ಮಂಗ ಮತ್ತು ಮನುಷ್ಯರಲ್ಲಿ ಒಂದೇ ಬಗೆಯಾಗಿರುತ್ತದೆ.

ಬೌದ್ಧಿಕ ಅಂಗಕ್ಕಿಂತಲೂ ಭಾವನೆಗಳ ದೃಷ್ಟಿಯಿಂದ ಚಿಂಪೆಂಝಿಗಳು ಮನುಷ್ಯನಿಗೆ ತೀರ ಹತ್ತಿರದವಾಗಿವೆ. ಮನುಷ್ಯನಂತೆಯೇ ಅವು ಅಳುತ್ತವೆ; ನಗುತ್ತವೆ; ಆಟದಲ್ಲಿ ಆನಂದಪಡುತ್ತವೆ. ಒಬ್ಬರಿಗೊಬ್ಬರು ಮುತ್ತಿಟ್ಟು ನಲಿಯುತ್ತವೆ. ದುಃಖಕ್ಕೀಡಾದ ತಮ್ಮ ಸಂಗಡಿಗರ ವಿಷಯಕ್ಕೆ ಸ್ಪಷ್ಟವಾಗಿ ಸಹಾನುಭೂತಿಯನ್ನು ತೋರಿಸುತ್ತವೆ. ತಮ್ಮ ಪ್ರತಿಸ್ಪರ್ಧಿಗಳ ಕುರಿತು ಅಷ್ಟೇ ಸ್ಪಷ್ಟವಾದ ಅಸೂಯೆಯನ್ನೂ, ಅಸಹನೆಯನ್ನೂ, ಸಿಟ್ಟನ್ನೂ ವ್ಯಕ್ತಪಡಿಸುತ್ತವೆ. ಹೀಗೆ ನರ, ವಾನರರಲ್ಲಿಯ ಮಾನಸಿಕ ಸಾಧರ್ಮ್ಯವು ಕೋಹಲರನ ಪ್ರಯೋಗಗಳಿಂದ ವ್ಯಕ್ತವಾಯಿತು ಮತ್ತು ಮಂಗಗಳಿಗೆ ಇರುವ 'ವಾ–ನರ' ಎಂಬ ಹೆಸರಿನ ಸಾರ್ಥಕತೆಯು ಸಿದ್ಧವಾಯ್ತು.

## ಪ್ರತಿಕ್ರಿಯೆಯ ನಾಲ್ಕು ಮಾದರಿಗಳು :

ಇಂಥ ವಿವಿಧವಾದ ಪ್ರಯೋಗ-ಪ್ರಯತ್ನಗಳ ಪರಿಣಾಮವಾಗಿ, ಪರಿಸ್ಥಿತಿಯ ಪ್ರಚೋದನೆಗೆ ಪ್ರಾಣಿಯಿಂದ ಜರಗುವ ಪ್ರತಿಕ್ರಿಯೆಗಳಲ್ಲಿ ನಾಲ್ಕು ಗುಂಪುಗಳು- ನಾಲ್ಕು ಮಾದರಿಗಳು ಇರುತ್ತವೆಂಬುದು ತಿಳಿದುಬರುತ್ತದೆ. ಇವುಗಳಲ್ಲಿ ಯಾವದಾದರೊಂದನ್ನೇ ಮುಖ್ಯವೆಂದು ಗ್ರಹಿಸಿದರೆ ನಮ್ಮ ವೈಜ್ಞಾನಿಕ ದೃಷ್ಟಿಯ ತೂಕ ತಪ್ಪುವದು. ಈ ನಾಲ್ಕು ಮಾದರಿಯ ಪ್ರತಿಕ್ರಿಯೆಗಳು ಈ ಬಗೆಯಾಗಿವೆ :- (೧) ಆಂಗಿಕ ಚಲನವಲನಗಳು (ಟ್ರೊಪಿಝುಮ್) (೨) ಪರಾವರ್ತನಕ್ರಿಯೆ (ರಿಫ್ಲೆಕ್ಸಸ್) (೩) ಮೂಲಪ್ರವೃತ್ತಿಗಳ ಪ್ರತಿಕ್ರಿಯೆಗಳು ಮತ್ತು (೪) ಬುದ್ಧಿ ಪೂರ್ಣವಾದ ವರ್ತನೆ.

ಇವುಗಳಲ್ಲಿ ಬರೇ ಆಂಗಿಕ ಚಲನವಲನಗಳ ರೂಪದ ಪ್ರತಿಕ್ರಿಯೆಗಳು ಎಲ್ಲ ಪ್ರಾಣಿಕೋಟಿಗೂ ಸಾಮಾನ್ಯವಾಗಿರುವದಿಲ್ಲ. ಈ ಬಗೆಯ ನಡೆವಳಿಯು ಕೆಳಗಿನ ಕೀಳುತರಗತಿಯ ಪ್ರಾಣಿಜೀವನದಲ್ಲಿ ಮಾತ್ರ ಕಾಣಿಸಿಕೊಳ್ಳುವದು. ಪರಾವರ್ತನ ಕ್ರಿಯೆಯು ಸರ್ವಸಾಮಾನ್ಯವಾದುದು. ಮೂಲಪ್ರವೃತ್ತಿಗಳಿಂದ ಜರಗುವ ಪ್ರತಿಕ್ರಿಯೆಗಳೆಂದರೆ ಅಂಥ ಪರಾವರ್ತನಕ್ರಿಯೆಗಳ ಮೂಲಗಳೇ ಸರಿ. ಬೌದ್ಧಿಕ ವರ್ತನೆಯು ಕೇವಲ ಮನುಷ್ಯಪ್ರಾಣಿಗೂ ಆತನ ತರಗತಿಯ ಮೇಲಿನ ಪಶು ವರ್ಗಕ್ಕೂ ಸೇರಿದ ಕ್ರಿಯೆಯು.

ಬುದ್ಧಿಶಕ್ತಿಯು ಕೇವಲ ಮನುಷ್ಯವರ್ಗಕ್ಕೇ ಒಪ್ಪಿದ ಸಂಗತಿಯೆಂದು ಮೊದಲು ತಿಳಿದಿದ್ದರು. ಪಶುಗಳೂ ಇತರ ಪ್ರಾಣಿಗಳೂ ಮೂಲಪ್ರವೃತ್ತಿಗಳಿಂದ ನಡೆಯು ವವು, ಮನುಷ್ಯನು ಮಾತ್ರ ಬುದ್ಧಿಯ ಪ್ರೇರಣೆಯಿಂದ ವರ್ತಿಸುವನು, ಎಂದು ಹೇಳಲಾಗುತ್ತಿತ್ತು. ಆದರೆ ಈಗಿನ ತುಲನಾತ್ಮಕ ಮನೋವಿಜ್ಞಾನದಲ್ಲಿ ತಜ್ಞ ರಾದವರ ಮತದಂತೆ, ಏಕಪೇಶೀಯ 'ಅಮೀಬಾ' ಜಂತುವಿನಿಂದ ಮನುಷ್ಯನ ವರೆಗೂ ಇರುವ ಪ್ರಾಣಿಮಾತ್ರಗಳ ನಡೆವಳಿಯು ಸುಸಂಬದ್ಧವಾಗಿ ವಿಕಾಸವಾಗುತ್ತ ಬಂದುದೇ ಅನುಭವಕ್ಕೆ ಬಂದಿದೆ. ಆದುದರಿಂದ ಮನುಷ್ಯನ ಮನಸ್ಸು ಪಶುಗಳ ಮನಸ್ಸುಗಳಿಂದ ತೀರ ಬೇರೆಯೆಂದು ಭಾವಿಸಲು ಎಳ್ಳಷ್ಟೂ ಆಧಾರವಿಲ್ಲ. ಎಲ್ಲವೂ ಮನಸ್ತತ್ವದ ವಿಕಾಸದಲ್ಲಿಯ ಹೆಚ್ಚು ಕಡಿಮೆ ತರಗತಿಗಳು ಗೋಚರವಾಗುವವೇ ಹೊರತು ಅವು ತೀರ ಬೇರೆಬೇರೆಯಾದವುಗಳಲ್ಲ-ಎಂಬೀ ತತ್ವವೇ ಈಗ ಸರ್ವಸಾಮಾ ನ್ಯವಾಗಿದೆ. ಮನಸ್ಸಿನ ಈ ಬೆಳವಣಿಗೆಯು ಕೇವಲ ಶಾರೀರಿಕ ಸ್ವರೂಪದ ಘಟನೆಯೆಂದೂ, ಆದ್ದರಿಂದ ಮನಸ್ಸಿನ ವಿಷಯವನ್ನು ಕೇವಲ ವಸ್ತುನಿಷ್ಠವಾದ

ಸಂಶೋಧನೆಗೆ ಒಳಪಡಿಸಿ ಅಭ್ಯಾಸಿಸಬೇಕೆಂದೂ ವರ್ತನವಾದಿ ವಿಜ್ಞಾನಿಗಳ ಆಗ್ರಹವಿದೆ.

ಇಂದು ಮನೋವಿಜ್ಞಾನದ ಪ್ರತಿಯೊಂದು ಸಾಂಪ್ರದಾಯವೂ ಮನಸ್ಸಿನ ಪ್ರಾಣಿ ಶಾಸ್ತ್ರೀಯವಾದ ತಳಹದಿಯನ್ನು ಒಪ್ಪಿಕೊಳ್ಳುತ್ತದೆ. ಆದರೂ ವರ್ತನವಾದಿಗಳು ವಹಿಸುವ ಕೇವಲ ಶರೀರಪ್ರಧಾನವಾದ ಆತ್ಯಂತಿಕ ಭೂಮಿಕೆಯನ್ನು ಕೆಲವೇ ಮನೋವಿಜ್ಞಾನಿಗಳು ಮಾನ್ಯಮಾಡುವರು. ಮಾನವನ ಆಂತರಿಕ ಸ್ವಯಂ ಪ್ರೇರಣೆಯ ಕುರಿತು ಇನ್ನೂ ಚೆನ್ನಾಗಿ ತಿಳುವಳಿಕೆಯಾಗಿರದಿದ್ದರೂ, ಅಂತಹ ದೊಂದು ಶಕ್ತಿಯುಂಟೆಂದು ಆಧುನಿಕ ಮನೋವಿಜ್ಞಾನಿಗಳು ಹೆಚ್ಚು ಹೆಚ್ಚು ಒಪ್ಪಿ ಕೊಳ್ಳುತ್ತಲಿದ್ದಾರೆ. ಹಿಂದಿನ ಯುಗದ ದೇಹಾತ್ಮವಾದಿ ಪ್ರತ್ಯಗಾತ್ಮವಾದಿಗಳ ಹೋರಾಟವು ಈ ಹೊಸ ಯುಗದಲ್ಲಿ ಹೊಸ ರೂಪದಲ್ಲಿ ನಡೆಯುತ್ತಲಿದೆ !

ಮನೋವಿಜ್ಞಾನದ ವಿಕಾಸದ ದಾರಿಗುಂಟ ನಾವು ಕೆಲವು ಶತಮಾನಗಳನ್ನು ದಾಟಿ ನಡೆದು ಬಂದೆವು. ಆದರೂ ಹಿಂದಿನವಾದಗಳು ಮತ್ತೆ ಮತ್ತೆ ಹೊಸ ರೂಪ ತಾಳಿ ತಲೆದೋರುತ್ತಿದ್ದುದೇ ಗೋಚರವಾಗುತ್ತಿರುವುದೇ ಏಕೆ ? ಪ್ಲೇಟೊ-ಎರಿಸ್ಟೊಟಲ್, ಲಾಕ್-ಡೆಕಾರ್ಡೆ ಡಾರ್ವಿನ್-ವಿಲಿಯಂ ಜೇಮ್ಸ್, ಪವಲೋವ-ಕೋಹಲರ ಹೀಗೆ ದ್ವಂದ್ವಗಳು ಅಡಿಗಡಿಗೆ ಸಿಕ್ಕುವದೇಕೆ ? ತತ್ವಜ್ಞಾನದಲ್ಲಿಯ ಪ್ರವೃತ್ತಿ-ನಿವೃತ್ತಿ ಮಾರ್ಗಗಳಂತೆ ಮನೋವಿಜ್ಞಾನದಲ್ಲಿಯೂ ಎರಡು ವಿಚಾರ ಧಾರೆಗಳು ಹರಿದು ಬಂದುದು ಸ್ಪಷ್ಟವಾಗುತ್ತದೆ. ಆಗಾಗ ಅವೆರಡರಲ್ಲಿ ತಿಕ್ಕಾಟ ನಡೆದುದೂ ಕಣ್ಣಿಗೆ ಬೀಳುತ್ತದೆ. ಆದರೆ ಅಂತಹ ಪ್ರತಿಯೊಂದು ತಿಕ್ಕಾಟವು ವಾದ-ವಿಗ್ರಹವು ಮೊದಲಿಗಿಂತ ಮುಂದುವರಿದ ಪಾತಳಿಯ ಮೇಲೆ ನಡೆಯುತ್ತ ಬಂದಿದೆ. ಮನೋವಿಜ್ಞಾನದ ಪ್ರಗತಿಯು ಒಂದೇ ಸವನೆ ನೇರವಾದ ದಾರಿ ಯಿಂದಲೇ ಆಗಿದೆಯೆಂದು ತಿಳಿಯಕೂಡದು. ಅಡ್ಡತಿಡ್ಡ ಹಾದಿಗಳಿಂದ ಸುತ್ತಿ ತೊಳಲುತ್ತ ಬಳಲುತ್ತಲಾದರೂ ಮುಂದುವರಿಯುತ್ತಲಿದೆ. ●

# ೨ ವರ್ತನವಾದೀ ಮನೋವಿಜ್ಞಾನವೂ ಹೇತುತ್ವವಾದೀ ಸಾಂಪ್ರದಾಯವೂ

## ವಾಟ್ಸನ್‌ನ ವರ್ತನವಾದ :

ಮನೋವಿಜ್ಞಾನದಲ್ಲಿ ವರ್ತನವಾದಿಗಳ ಒಂದು ಶಾಖೆಯಿದೆ. ನಿಜವಾಗಿ ವರ್ತನವಾದೀ ಸಾಂಪ್ರದಾಯದ ಸ್ಥಾಪನೆಯಾದದ್ದು ಕ್ರಿ. ಶ. ೧೯೧೩ರಲ್ಲಿ. ಅಮೇರಿಕೆಯ ಜೊನ್ ಬಿ. ವಾಟ್ಸನ್ ಎಂಬ ಮನೋವಿಜ್ಞಾನಿಯು 'ವರ್ತನವಾದಿಯ ದೃಷ್ಟಿಯಲ್ಲಿ ಮನೋವಿಜ್ಞಾನವು' ಮತ್ತು 'ಮಾನವೀ ವರ್ತನದಲ್ಲಿ ಕಲ್ಪನೆ ಮತ್ತು ಸ್ನೇಹ' ಎಂಬ ಎರಡು ಪ್ರಬಂಧಗಳನ್ನು ಪ್ರಸಿದ್ಧಿಸಿದನು. ಈತನು ಬಾಲ್ಟಿಮೋರ ಎಂಬಲ್ಲಿ ಜೊನ್ಸ ಹೊಪ್ಕಿನ್ಸ ವಿಶ್ವವಿದ್ಯಾಲಯದಲ್ಲಿ ಪ್ರಾಯೋಗಿಕ ಮತ್ತು ತುಲನಾತ್ಮಕ ಮನೋವಿಜ್ಞಾನದ ಆಚಾರ್ಯನಾಗಿದ್ದನು. ಅನಂತರ ೧೯೧೪ರಲ್ಲಿ ತನ್ನ ತತ್ವಪ್ರಣಾಲಿಯನ್ನು ಸವಿಸ್ತಾರವಾಗಿ ಮಂಡಿಸುವ 'ವರ್ತನವಾದ-ತುಲನಾತ್ಮಕ ಮನೋವಿಜ್ಞಾನಕ್ಕೆ ಒಂದು ಉಪೋದ್ಘಾತ' ಎಂಬ ಮಹಾಗ್ರಂಥವನ್ನು ಬರೆದನು.

'ವರ್ತನವಾದ' ಎಂಬ ಶಬ್ದಕ್ಕೆ ಎರಡು ಅರ್ಥ. ಅದು ಮನೋವಿಜ್ಞಾನದ ಒಂದು ಸಿದ್ಧಾಂತವನ್ನೂ ಸೂಚಿಸುವದು. ಅದರಂತೆ ಆ ಸಿದ್ಧಾಂತಕ್ಕೆ ಕಾರಣವಾದ ಕಾರ್ಯ ಪದ್ಧತಿಯನ್ನೂ ಸೂಚಿಸುವದು. ವನಸ್ಪತಿ ಪ್ರಾಣಿವರ್ಗ ಮತ್ತು ಮನುಷ್ಯ ಹೀಗೆ ಮೂರು ಬಗೆಯಾಗಿರುವ ಎಲ್ಲ ಸಜೀವ ವಸ್ತುಗಳ ವರ್ತನವನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿ ಇತರ ಭೌತಿಕ ಶಾಸ್ತ್ರಗಳಂತೆಯೇ ಪ್ರಯೋಗ ಪದ್ಧತಿಗಳನ್ನು ಅನುಸರಿಸಿ ಸಂಶೋಧನೆ ಮಾಡುವದೇ ವರ್ತನವಾದೀ ಮನೋವಿಜ್ಞಾನದ ಕಾರ್ಯರೀತಿಯು.

ವರ್ತನೆಯಲ್ಲಿಯ ಘಟನೆಗಳೇ ವರ್ತನವಾದಿಯ ಮಟ್ಟಿಗೆ ಮಹತ್ವದ ವಿಷಯವು. ಬೇರೆ ಬೇರೆ ನಡತೆಯ ಮಾದರಿಗಳನ್ನೂ ಘಟನೆಗಳನ್ನೂ ಆತನು ಕಲೆಹಾಕಿ ಅವುಗಳನ್ನು ಹೋಲಿಸಿ ವಿಶ್ಲೇಷಿಸಿ ಅಂಕೆ ಸಂಖ್ಯೆಗಳ ಕೋಷ್ಟಕಕ್ಕೆ ಇಳಿಸಿ, ಲೆಕ್ಕ ನಿಜವೆಂದು ನಿಶ್ಚಿತವಾದ ಪ್ರಮಾಣಗಳ ಮೇಲಿಂದಲೇ ಸಿದ್ಧಾಂತಗಳನ್ನು ಅನುಮಾನಿಸುವ ಧೋರಣವನ್ನಿಟ್ಟುಕೊಳ್ಳುವನು. ವರ್ತನವಾದಿಯು ಯಾವದೇ ತರದ ಆತ್ಮ ನಿರೀಕ್ಷಣೆಯ ಅಂತರ್ಮುಖವೃತ್ತಿಯನ್ನು ಸ್ವೀಕರಿಸಲು ಒಪ್ಪುವದಿಲ್ಲ.

ಏಕೆಂದರೆ ಅಂಥ ಪದ್ಧತಿಯಿಂದ ವಾಸ್ತವ ಘಟನೆಗಳು ದೊರಕುವದಿಲ್ಲ, ಬರೇ ತಾತ್ವಿಕ ಕಲ್ಪನೆಗಳು ಹೊರಡುವವು. ಡಾ. ವಾಟ್ಸನ್‌ನ ಅಭಿಪ್ರಾಯದ ಮೇರೆಗೆ 'ಮನೋವಿಜ್ಞಾನವು ಚಿರಕಾಲ ಉಳಿಯಬೇಕಾದರೆ ಆತ್ಮನಿಷ್ಠವಾದ ಚಿಂತನಪರವಾದ ವಿಷಯುಗಳನ್ನೆಲ್ಲ ಹುಗಿದು ಬಿಟ್ಟು ಆತ್ಮನಿರೀಕ್ಷಣೆಯ ರೀತಿಗಳನ್ನೂ ಈಗ ಬಳಿಕೆಯಲ್ಲಿರುವ ಅಂತರ್‌ದೃಷ್ಟಿ, ಆತ್ಮ ವೊದಲಾದ ಪರಿಭಾಷೆಯನ್ನೂ ನಾವು ಮರೆತುಬಿಡಬೇಕು.'

ವರ್ತನವಾದವು ಹೀಗೆ ಸಂಪೂರ್ಣವಾಗಿ ಶರೀರ ಶಾಸ್ತ್ರೀಯವಾದ ಪ್ರಾತ್ಯಕ್ಷಿಕ ಪ್ರಮಾಣಗಳನ್ನೇ ಅಪೇಕ್ಷಿಸುತ್ತದೆ. ನಿರೀಕ್ಷಿಸಲಿಕ್ಕೂ ತಟ್ಟಿ ಮುಟ್ಟಿ ನೋಡಲಿಕ್ಕೂ, ಪ್ರಯೋಗ ಮಾಡಲಿಕ್ಕೂ ಬರುವ ಘಟನೆಗಳನ್ನಷ್ಟೇ ಅದು ಒಪ್ಪಿಕೊಳ್ಳುತ್ತದೆ. ಮನೋವಿಜ್ಞಾನವು ನಡೆನುಬಂದ ದೂರದ ದಾರಿಯಲ್ಲಿ ಎಲ್ಲಿಯಾದರೂ ಆತ್ಮ, ಮನಸ್ಸು ಇಲ್ಲವೆ ಪ್ರಜ್ಞೆಯೆಂಬ ಅಥವಾ ಅಂಥ ಇನ್ನಾವ ಹೆಸರುಳ್ಳ ವಸ್ತುವನ್ನೂ ಯಾರೊಬ್ಬರೂ ಕಂಡಿಲ್ಲ; ಕಾಣಿಸಿ ಕೊಡುವದು ಸಾಧ್ಯವಿಲ್ಲ. ಆದರೂ ಈ ಸಂಶೋಧನೆಯಲ್ಲಿ ವರ್ತನವಾದಿಯಾದರೂ ಮಿಕ್ಕವರಿಗಿಂತ ಹೆಚ್ಚೇನೂ ಯಶಸ್ವಿಯಾಗಿಲ್ಲ. ಮನಸ್ತತ್ವವೆಂಬುದೊಂದು ಉಂಟೆಂಬುದನ್ನು ಆತನು ಅಲ್ಲಗಳೆಯುವನು. ಅಥವಾ ಮನಸ್ಸೆಂಬ ಸಂಗತಿಯನ್ನು ಕೇವಲ ಶಾರೀರಿಕ ಪ್ರತಿಕ್ರಿಯೆಗಳ, (ಶರೀರ ಶಾಸ್ತ್ರದ ದೃಷ್ಟಿಯಿಂದ) ಪರಿಭಾಷೆಯಲ್ಲಿಯೇ ಸಂಪೂರ್ಣವಾಗಿ ವಿವರಿಸಿ ತೋರಿಸಲು ಬರುವದೆಂದು ವರ್ತನವಾದಿಯು ನಂಬುವನು. ಈ ಪ್ರತಿಕ್ರಿಯೆಗಳೆಲ್ಲ ಪ್ರಚೋದನೆ (ಬಾಹ್ಯ ವಿಕಾರ ಹೇತು) ಮತ್ತು ಅದಕ್ಕೆ ಆಗುವ ಪ್ರತಿಕ್ರಿಯೆ ಇವುಗಳ ಮೇಲೆ ಮಾತ್ರ ನೆಲೆಗೊಂಡಿವೆಯೆಂದು ವರ್ತನವಾದಿಯ ಶ್ರದ್ಧೆ.

ಯಾವದೇ ಪ್ರಾಣಿಯಂತೆ ಮನುಷ್ಯನಾದರೂ ಶಾರೀರಿಕ ಯಂತ್ರವಾಗಿದ್ದು ಪರಾವರ್ತನಕ್ರಿಯೆಯ ತತ್ವದಂತೆ ವರ್ತಿಸುತ್ತಾನೆ. ಆತನು (ಆತನ ಹೆಂಡತಿಯೂ) ಕೆಲವೇ ಬಾಹ್ಯ ಪ್ರಚೋದನೆಗಳಿಗೆ ಬೇಕಾಗುವ ಕೆಲವೇ ಮೂಲಭೂತವಾದ ಪ್ರತಿಕ್ರಿಯೆಗಳೊಂದಿಗೆ ಹುಟ್ಟಿ ಬಂದು ತನ್ನ ಬಾಳನ್ನು ಆರಂಭಿಸುತ್ತಾನೆ. (ಈ ಮೂಲಭೂತ ಪ್ರತಿಕ್ರಿಯೆಗಳು ಎಷ್ಟಿವೆಯೆಂಬುದು ಇನ್ನೂ ನಿಶ್ಚಿತವಾಗಿಲ್ಲ.) ಬಾಳಿನ ಪ್ರತಿ ನಿಮಿಷದಲ್ಲಿಯೂ, ತನ್ನ ಆ ಮೂಲ ಪ್ರತಿಕ್ರಿಯೆಗಳ ನೆಲೆಯ ಮೇಲೆ ಹೆಚ್ಚು ಹೆಚ್ಚು ಜಟಿಲವಾದ ನಡತೆಯ ಮಾದರಿಗಳನ್ನೂ, ವರ್ತನೆಯ ರೀತಿ ರೂಪಗಳನ್ನೂ ಹೆಣೆದುಕೊಳ್ಳುವಲ್ಲಿ ಆತನು ತತ್ಪರನಾಗುತ್ತಾನೆ.

ಆದುದರಿಂದ ಮಾನವೀ ವರ್ತನೆಯನ್ನು ಹುಟ್ಟಿನಿಂದ ಸಾವಿನ ತನಕ ಪರಿಶೀಲಿಸಬೇಕಾಗುತ್ತದೆ. ಅವೆರಡು ಘಟನೆಗಳ ನಡುವಿನ ಯಾವದೊಂದು ಕ್ರಿಯೆಯನ್ನೂ

ಅರಿತುಕೊಳ್ಳದೇ ಬಿಡುವಂತಿಲ್ಲ. ಈ ದೃಷ್ಟಿಯಿಂದ ಮನುಷ್ಯ ಪ್ರಾಣಿಯ ಕುರಿತು ನಡೆದ ಸಂಗತಿಗಳ ಪರಿಪೂರ್ಣವಾದ ಸಂಗ್ರಹ ಮಾಡಿಕೊಂಡು, ಆ ಪ್ರಾಣಿಯ ವಯೋಮಾನವು ಯಾವದೇ ಇದ್ದರೂ, ಆ ಪ್ರಾಣಿಯ ಪರಿಸ್ಥಿತಿಯು ಏನೇ ಇದ್ದರೂ, ಯಾವದಾದರೊಂದು ಪ್ರಚೋದನೆಯ ಕಾರಣವು ಮಾತ್ರ ತಿಳಿದಲ್ಲಿ, ಆ ಪ್ರಾಣಿಯು ಅದಕ್ಕೆ ಹೊಂದುವಂತೆ ಯಾವ ಪ್ರತಿಕ್ರಿಯೆಯನ್ನು ಮಾಡ ಬೇಕೆಂಬುದನ್ನು ತಪ್ಪದೇ ತತ್‌ಕ್ಷಣವೇ ಅನುಮಾನಿಸಿ ಹೇಳುವ ಸಾಮರ್ಥ್ಯವು ಮನೋವಿಜ್ಞಾನಿಗೆ ಇರತಕ್ಕದ್ದೆಂಬುದೇ ವರ್ತನವಾದಿಗಳ ವ್ಯಾಸಂಗದ ಹೆಗ್ಗುರಿ. ಅದೇ ಮೇರೆಗೆ ವ್ಯಕ್ತಿಯ ಯಾವದೊಂದು ಪ್ರತಿಕ್ರಿಯೆಯು ತಿಳಿದು ಬಂದರೆ, ಅದನ್ನು ಪ್ರೇರಿಸಿದ ಹೊರಗಿನ ನಿಮಿತ್ತವು–ಪ್ರಚೋದನೆಯು–ಯಾವದಿತ್ತೆಂದು ನಿಶ್ಚಯವಾಗಿ ಹೇಳಲು ಬರುವ ಯೋಗ್ಯತೆಯನ್ನು ಪಡಕೊಳ್ಳುವದೇ ಆತನ ಹಂಬಲ.

### ಪ್ರಚೋದನೆ ಪ್ರತಿಕ್ರಿಯೆಗಳ ಕಟ್ಟಡವೂ, 'ನಿಸ್ಸಂಕೇತೀಕರಣವೂ' :

ವರ್ತನವಾದಿಯಾದ ಮನೋವಿಜ್ಞಾನಿಯ ಮತದಂತೆ, ಮಾನವ ಶಿಶುವು ಹುಟ್ಟು ವಾಗಲೇ, ಕೆಲವು ಬಾಹ್ಯಪ್ರಚೋದನೆಗಳ ಕುರಿತು ಪ್ರತಿಕ್ರಿಯೆಗಳನ್ನು ತೋರಿಸುವ ಶಕ್ತಿಯನ್ನು ಪಡಕೊಂಡೇ ನಮ್ಮ ಪ್ರಪಂಚವನ್ನು ಪ್ರವೇಶಿಸುತ್ತದೆ. ಉದಾರಣೆ ಗಾಗಿ, ದೊಡ್ಡದೊಂದು ಸಪ್ಪಳ ಮಾಡಿದರೆ ಅಥವಾ ಒಮ್ಮೆಲೇ ಆಧಾರವನ್ನು ತಪ್ಪಿಸಿದರೆ ಹೊಸದಾಗಿ ಹುಟ್ಟಿದ ಶಿಶುವಿನಲ್ಲಿ ಕೂಡ ಹೆದರಿಕೆಯು ಕಾಣಿಸಿ ಕೊಳ್ಳುತ್ತದೆ. ಆ ವಯಸ್ಸಿನಲ್ಲಿ ಬೇರೆ ಯಾವ ತರದ ನಿಮಿತ್ತವೂ ಇವರಂತೆ ಭೀತಿಗೆ ಕಾರಣವಾಗಲಾರದು. ಮೇಲಿನವೆರಡೇ ಪ್ರಚೋದನೆಗಳು ಹೆದರಿಕೆಯನ್ನು ಹುಟ್ಟಿಸಬಲ್ಲವು. ಇಂತಹ ಸಂದರ್ಭದಲ್ಲಿ ಮಗುವಿನಲ್ಲಿ ಪ್ರತಿಕ್ರಿಯೆಯೂ (ಭೀತಿಯ ಲಕ್ಷಣಗಳೂ) ಒಮ್ಮೆಲೇ ಕಾಣಿಸಿಕೊಳ್ಳುತ್ತವೆ. ಶಿಶುವು ಚೀರಿಕೊಳ್ಳುತ್ತದೆ. ಇಲ್ಲವೆ ಉಸಿರನ್ನು ಬಿಗಿಹಿಡಿದುಕೊಳ್ಳುತ್ತದೆ. ಇಂತಹ ಭೀತಿಯ ಬಾಹ್ಯ ಲಕ್ಷಣಗಳು ವ್ಯಕ್ತವಾಗುತ್ತವೆ.

ಈ ತಳಹದಿಯ ಮೇಲೆ,–ಇಂಥ ಮೂಲಭೂತವಾದ ಸ್ವತಃಸಿದ್ಧವಾದ (ಅಂದರೆ ಕಲಿಯದೇ ಬರುವ) ಪ್ರಚೋದನೆ ಪ್ರತಿಕ್ರಿಯೆಗಳ ನೆಲಗಟ್ಟಿನ ಮೇಲೆ,–ವರ್ಷ ಗಳು ಗತಿಸಿದಂತೆ ಎಡೆಬಿಡದೆ ಜರಗುವ ಸಾಂಕೇತಿಕ ಪರಾವರ್ತನ ಕ್ರಿಯೆಗಳ ಮೂಲಕವಾಗಿ ಪ್ರೌಢ ಮನುಷ್ಯನ ವರ್ತನಾವ್ಯೂಹಗಳು–ನಡೆವಳಿಯ ರೀತಿಗಳು– ಒಳ್ಳೇ (ಕಲ) ಬೆರಕೆಯಾಗುತ್ತವೆ.

ಪಾವಲೋವನು ಆಹಾರದೊಂದಿಗೆ ಮಿಟ್ರೊನೊಮಯಂತ್ರವನ್ನು ತಳಕುಹಾಕಿ ಸಾಹಚರ್ಯದ ಮೂಲಕವಾಗಿ ಟಿಕ್ ಟಿಕ್ ಸಪ್ಪಳದಿಂದಲೇ ನಾಯಿಬಾಯಿಗೆ ನೀರೂರಿ ಜೊಲ್ಲು ಸುರಿಯುವಂತೆ ಮಾಡಿದನಷ್ಟೇ. ಅದೇ ರೀತಿಯಲ್ಲಿ ಬೆಳೆಯುವ ಶಿಶುವಿನ ಬಾಳಿನಲ್ಲಿಯೂ, ಹೊಸದೊಂದು ಪ್ರಚೋದನೆಯು, ಸಹಜವಾದ ಮೂಲಭೂತವಾದ ಪ್ರಚೋದನೆಯೊಂದಿಗೆ ಹೊಂದಿಕೊಂಡು ಅದರದೇ ಪ್ರತಿಕ್ರಿಯೆಗಳನ್ನು ಹೊಸ ಪರಿಸ್ಥಿತಿಯಲ್ಲಿಯೂ ಪ್ರೇರಿಸುತ್ತದೆ. ಅದೇ ಮೇರೆಗೆ, ಮೂಲ ಪ್ರಚೋದನೆಯ ನಿಮಿತ್ತದ ಕುರಿತು ಪರಿಸ್ಥಿತಿ ಭೇದದಿಂದ ಹೊಸ ಪ್ರತಿಕ್ರಿಯೆಗಳನ್ನು ಶಿಶುವು ಕಲಿಯುತ್ತದೆ. ಆಮೇಲೆ ಈ ಪ್ರತಿಕ್ರಿಯೆಗಳು ಸಾಂಕೇತಿಕ ನಿಮಿತ್ತಗಳೊಂದಿಗೆ (ಅಂದರೆ ಮೂಲ ಪ್ರಚೋದನೆಗಳೊಂದಿಗೆ ಒದಗುವ ಹೊಸ ಪ್ರಚೋದನೆಗಳೊಂದಿಗೆ) ಕೂಡಿಕೊಳ್ಳುತ್ತವೆ. ಹೀಗೆ ವರ್ತನವಾದವೆಂದರೆ ಹಿಂದೆ ಹೇಳಿದ 'ಕಲ್ಪನಾ ಸಂಗತಿ' ವಾದವನ್ನೇ ಹೋಲುವ ಮನೋವಿಜ್ಞಾನ ಪದ್ಧತಿಯಾಗಿದೆ. ಆದರೆ ಈ 'ಸಂಗತಿ'ಯು (ಸಾಹಚರ್ಯದ ಅನ್ಯೋನ್ಯ ಸಂಬಂಧವು) ಕಲ್ಪನೆಗಳಲ್ಲಿ ಕೂಡಿಬರುವದಿಲ್ಲ; ಪ್ರಚೋದನೆ (ಪ್ರತಿಕ್ರಿಯೆಗಳಲ್ಲಿ) ಉಂಟಾಗುತ್ತದೆ.

ವರ್ತನವಾದಿಯು ಅನ್ನುವದೇನಂದರೆ:– ಸಂವೇದನೆಯು ಬಾಹ್ಯಪ್ರಚೋದನೆಗೆ ಉಂಟಾಗುವ ಮಜ್ಜಾತಂತುಗಳ ಪ್ರತಿಕ್ರಿಯೆಯು. ಭಾವನೆಯು ಅಂತಃಸ್ರಾವ ಗ್ರಂಥಿಗಳ ಪ್ರತಿಕ್ರಿಯೆಯು. ಸ್ಮೃತಿಯು ಮಜ್ಜಾತಂತುಗಳಿಗೆ ಉಂಟಾದ ಒಂದು ರೂಢಿ. ವಿಚಾರವೆಂದರೆ ಭಾಷೆಯ ರೂಪದಿಂದ ವ್ಯಕ್ತವಾಗುವ ಪ್ರತಿಕ್ರಿಯೆಯು.

ಸಾಂಕೇತಿಕ ಪರಾವರ್ತನ ಕ್ರಿಯೆಗಳ ಕ್ರಮವು ಅಸಾಮಾನ್ಯವಾಗಿ ವೇಗದಿಂದ ಮುಂದುವರಿಯುತ್ತದೆ. ಈ ತ್ವರೆಯು ಭಾವನೆಗಳ ಕ್ಷೇತ್ರದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಇಂಥ ಕ್ರಿಯೆಗಳು ಹೆಚ್ಚಾಗಿ ಪ್ರಸಂಗ ಬಂದಂತೆ–ಒಮ್ಮೊಮ್ಮೆ ಬರೇ ಯೋಗಾಯೋಗದಿಂದಲೂ–ಒದಗಿಬರುತ್ತವೆ. ಉದಾಹರಣಾರ್ಥಕವಾಗಿ, ಯಾವ ತಂದೆ ತಾಯಿಗಳೂ ಬೇಕೆಂದು ತಮ್ಮ ಮಗುವು ಕತ್ತಲೆಯಲ್ಲಾಗಲಿ ಕುನ್ನಿಯನ್ನು ಕಂಡಾಗಲಿ ಅಂಜಬೇಕೆಂದು ಬಯಸುವದಿಲ್ಲ. ಆದರೂ ಎಷ್ಟೋ ಮಕ್ಕಳು ಅಂಥ ಅಂಜಿಕೆಯನ್ನು ಬೆಳಿಸಿಕೊಂಡು ಬಿಡುತ್ತವೆ. ಹೀಗಾಗುವ ಕಾರಣವೇನು ? ಕತ್ತಲೆಯಾಗಲಿ, ಕುನ್ನಿಯಾಗಲಿ ಮಗುವಿನ ಅನುಭವದಲ್ಲಿ ಅಂಜಿಕೆಯನ್ನು ಕೆಣಕುವಂಥ ಮೂಲಭೂತವಾದ ಪ್ರಚೋದನೆಯೊಂದಿಗೆ ತಳಕುಬಿದ್ದಿವೆ. ಒಮ್ಮೆ ಒದಗಿದ ಆ ನಿಮಿತ್ತಗಳ ಸಾಹಚರ್ಯದ ಪರಿಣಾಮವಾಗಿ, ಮೂಲ ಪ್ರಚೋದನೆಯ ಕುರಿತು ಆಗಬೇಕಾದ ಪ್ರತಿಕ್ರಿಯೆಯು ಆಗಂತುಕ

ಪ್ರಚೋದನೆಗೆ (ಕತ್ತಲೆ ಇಲ್ಲವೆ ಕುನ್ನಿಯ ಕಲ್ಪನೆಗೆ) ಅಂಟಿಕೊಂಡು ಬಿಟ್ಟಿದೆ !

ಹೀಗೆ ಯಾವದೊಂದು ಹೊಸ ಪ್ರಚೋದನೆಯೊಂದಿಗೆ ಪ್ರತಿಕ್ರಿಯೆಯು ಅಂಟಿಕೊಳ್ಳುವಂತೆಯೇ ಅದನ್ನು ಆ ಪ್ರಚೋದನೆಯಿಂದ ಬಿಡಿಸಿ ಬೇರ್ಪಡಿಸುವದೂ ಶಕ್ಯವಿದೆ. ಈ ಕ್ರಿಯೆಗೆ 'ಸಂಕೇತ ನಿರಾಕರಣೆ' ಎಂದು ಹೆಸರು, ಆದರೆ ಈ ಕೆಲಸವು ಸಾಂಕೇತಿಕ ಪ್ರತಿಕ್ರಿಯೆಯಂತೆ ಯೋಗಾಯೋಗದಿಂದ ಸಂಭವಿಸುವದಿಲ್ಲ, ಹೇತುಪೂರ್ವಕವಾಗಿ ಪ್ರಯತ್ನ ಪಡಬೇಕಾಗುತ್ತದೆ. ಹೀಗೆ ಅನಿಷ್ಟ ಪ್ರಚೋದನೆಗಳಿಂದ ಪ್ರತಿಕ್ರಿಯೆಗಳನ್ನು ತಪ್ಪಿಸುವ ಅಥವಾ ಅನಿಷ್ಟ ಪ್ರತಿಕ್ರಿಯೆಗಳಿಂದ ಪ್ರಚೋದನೆಯನ್ನು ಬಿಂಗಡಿಸುವ ಪದ್ಧತಿಯನ್ನು ಶೋಧಿಸಿ ವರ್ತನವಾದಿ ಮನೋವೈಜ್ಞಾನಿಕರು ವ್ಯವಹಾರದಲ್ಲಿ ಮಹತ್ವದ ಉಪಯೋಗವುಳ್ಳ ಸಾಧನೆಯನ್ನು ಒದಗಿಸಿಕೊಟ್ಟಿದ್ದಾರೆ. ಈ ತತ್ವದ ಉಪಯೋಗವು–'ನಿಸ್ಸಂಕೇತೀಕರಣ' ಇಲ್ಲವೇ 'ಸಂಕೇತ ನಿರಾಕರಣ'ದ ವಿನಿಯೋಗವು-ಎಳೆಮಕ್ಕಳ ಶಿಕ್ಷಣ ಕ್ರಮದಲ್ಲಿ ವಿಶೇಷವಾಗಿ ಆಗುತ್ತದೆ.

ಒಂದು ಉದಾಹರಣೆಗಾಗಿ ಕುನ್ನಿಗೆ ಹೆದರುವ ಒಂದು ಕೂಸನ್ನೇ ತೆಗೆದುಕೊಳ್ಳೋಣ. ಅದರ ಆ ಹುಸಿ ಹೆದರಿಕೆಯನ್ನು ಹೋಗಲಾಡಿಸಲು ಏನು ಮಾಡಬೇಕು ? ಆ ಕೂಸನ್ನು ಎತ್ತಿತಂದು ಕುನ್ನಿಯ ಮುಂದೆ ನಿಲ್ಲಿಸಿ, 'ಹೆದರುವದು ಹುಚ್ಚುತನ ! ಅದನ್ನು ಬಿಡು' ಎಂದು ಹೇಳಿ 'ಮುದ್ದಾದ ಈ ಕಾಳಿ ಮರಿಯನ್ನು ನಿನ್ನ ಒಡನಾಡಿಯಾಗಿ ಮಾಡಿಕೋ' ಎಂದು ಸೂಚಿಸುವವರು ಕೆಲವರಿದ್ದಾರೆ. ಆದರೆ ಇದು ಸರಿಯಾದ ರೀತಿಯಲ್ಲ. ಅದರಂತೆಯೆ ಆ ಮಗುವಿನ ಮುಂದೆ ಹಿರಿಯರು ಕುನ್ನಿಯನ್ನು ಎತ್ತಿ ಮುದ್ದಾಡಿ ಈ ಕುನ್ನಿಗೆ ಹೆದರಬೇಡವೆಂದು ಉಪದೇಶಿಸುವವರೂ ಉಂಟು, ಇದೂ ನಿರರ್ಥಕ. 'ನಾಯಿಯು ನಮಗೆ ಈಲಾದ ಪ್ರಾಣಿ. ಅದು ಮನೆ ಮಾರು ಕಾಯಲಿಕ್ಕೆ ಬಹಳ ಉಪಯುಕ್ತವಾದ ಆಳು. ಧರ್ಮರಾಜನು ಒಂದು ನಾಯಿಯನ್ನು ಪ್ರೀತಿಸಿದ್ದನು ; ಅದನ್ನು ತನ್ನೊಡನೆ ಸ್ವರ್ಗಕ್ಕೆ ಒಯ್ಯದೆ ಬಿಡಲಿಲ್ಲ !' ಎಂದು ಮುಂತಾಗಿ ಉಪದೇಶ ಮಾಡಿದರೂ ವ್ಯರ್ಥವು. ನಿಜವಾಗಿಯೂ ಪರಿಣಾಮಕಾರಿಯಾಗುವ ಒಂದೇ ಉಪಾಯವೆಂದರೆ ನಾಯಿಯೊಂದಿಗೆ ಅಂಟಿಕೊಂಡಿರುವ ಮಗುವಿನ ಭೀತಿ-ಪ್ರತಿಕ್ರಿಯೆಯನ್ನು ಬೇರೆ ಮಾಡುವದು. ಇದು ಹೇಗೆ ಸಾಧ್ಯ ?

ಇಲ್ಲಿ ವರ್ತನವಾದಿಯ ನೆರವು ನಮಗೆ ಬೇಕೆಬೇಕು. ಮಗುವಿನ ಹತ್ತರ ಆ ಮಗುವಿಗೆ ಗೊತ್ತಾಗದಂತೆ ಸಹಜ ಸ್ವಾಭಾವಿಕ ರೀತಿಯಲ್ಲಿ (ಆ ಕ್ರಿಯೆಗೆ ಏನೂ ಮಹತ್ವ

ಕೊಡದೇ) ವರ್ತನವಾದಿ ಶಾಸ್ತ್ರಜ್ಞನು ಒಂದು ನಾಯಿಯನ್ನು ತಂದಿಡುವನು. ಮಗುವಿನ ಪ್ರತಿಕ್ರಿಯೆಯನ್ನು (ಅಂಜಿಕೆಯನ್ನು) ಕೆರಳಿಸುವಷ್ಟು ಶಕ್ತಿಯು ನಾಯಿಯ ದರ್ಶನದಲ್ಲಿ ಇಲ್ಲದುದರಿಂದ ಮಗುವು ತನ್ನ ಹತ್ತಿರ ನಾಯಿಯು ಇರುವದನ್ನು ಕಂಡರೂ ಅಂಜುವದಿಲ್ಲ. (ಅಲಕ್ಷ್ಯ ಮಾಡುವದು.) ಹೀಗೆ ನಾಯಿಯು ಹತ್ತರ ಇರುವದನ್ನು ಸಹಿಸುವ ಹೊಸ ಪ್ರತಿಕ್ರಿಯೆಯು ಆ ಮಗು ವಿನ ಮನಸ್ಸಿನ ಮೇಲೆ ಚೆನ್ನಾಗಿ ಮೂಡಿ ನಿಲ್ಲುವಂತೆ, ನಾಯಿಯನ್ನು ಗೌಣ ಭೂಮಿಕೆಯಲ್ಲಿಯೇ ಕೆಲ ಬಾರಿ ಇಟ್ಟು ರೂಢಿ ಮಾಡಬೇಕು. ಮುಂದೆ ಕ್ರಮೇಣ ನಾಯಿಯೊಂದೇ ಎದುರಿಗೆ ಬಂದರೂ ಮೊದಲಿನಂತೆ ಮಗುವಿನಲ್ಲಿ ಭೀತಿಯ ಪ್ರತಿಕ್ರಿಯೆಯುಂಟಾಗುವ ಸಂಭವವೇ ಇಲ್ಲ. ನಾಯಿ ಮತ್ತು ಭೀತಿಗಳ ಪ್ರಚೋದನೆ ಪ್ರತಿಕ್ರಿಯೆಗಳ ಸಂಬಂಧವು ಈಗ ಮಾಯವಾದದ್ದು ಕಂಡುಬರುವದು.

ಹೀಗೆ, ಹುಟ್ಟಿದಾಗ ಶಿಶುವು ಕೆಲವೊಂದು ಪ್ರಚೋದನೆ ಪ್ರತಿಕ್ರಿಯೆಗಳುಳ್ಳದಿರು ತ್ತದೆಂಬ ಮಾತನ್ನು, ಗ್ರಹೀತವಾಗಿ ಇಟ್ಟುಕೊಳ್ಳುವ ವರ್ತನವಾದಿಗಳು, ಮನುಷ್ಯನಲ್ಲಿ ಮೂಲಪ್ರವೃತ್ತಿಗಳು ಜನ್ಮತಃ ಇರುತ್ತವೆಂಬ ತತ್ವವನ್ನು ಬಿಟ್ಟು ಕೊಟ್ಟಿರುವರು ! ಪ್ರವೃತ್ತಿಗಳಿಂದ ಉಂಟಾದುದೆಂದು ಹೇಳಲ್ಪಡುವ ವರ್ತನದ ಬಹುಭಾಗವು ನಿಜವಾಗಿಯೂ ಸಾಂಕೇತಿಕ ಕ್ರಿಯೆಯ ಪರಿಣಾಮವಾಗಿರುತ್ತದೆಂದು ಅವರು ಭಾವಿಸುವರು.

## ವರ್ತನವಾದಿಗಳಿಗೂ ಇತರ ಮನೋವಿಜ್ಞಾನಿಗಳಿಗೂ ಇರುವ ಮುಖ್ಯ ಮತಭೇದ :

ಈ ಮಾತಿನಲ್ಲಿಯೇ ವರ್ತನವಾದಿಗಳು ಉಳಿದ ಮನೋವೈಜ್ಞಾನಿಕರಿಂದ ಮೂಲತಃ ಬೇರೆಯಾಗಿರುವರು. ಮತ್ತು ಒಂದು ತೀವ್ರವಾದ ಮತಭೇದದ ಕಾರಣವಿದೆ; ಮನುಷ್ಯನ ವಿಚಾರ, ಕಲ್ಪನಾಶಕ್ತಿ ಮತ್ತು ಭಾಷೆ ಇವು ಮಿಕ್ಕ ಮಾನಸಿಕ ಪ್ರಕ್ರಿಯೆಗಳಿಂದ ಸ್ವಲ್ಪವೂ ಬೇರೆಯಾಗಿಲ್ಲ. ಸಾಂಕೇತಿಕ ಪ್ರತಿಕ್ರಿಯೆಗಳಿಂದ ಮಾರ್ಪಟ್ಟ ಸಂಗತಿಗಳಾಗಿವೆ. ಇವು ಮನುಷ್ಯನ ವರ್ತನೆಯ ಅಂಗಗಳಾದುದರಿಂದ ವಿಚಾರ, ಭಾಷೆ ಮೊದಲಾದುವೆಲ್ಲವೂ ಪರಾವರ್ತನ ಕ್ರಿಯೆಗಳಿಂದ ದೃಢವಾದ ಜಟಗಳೇ ಸರಿ, ಎಂದು ಮುಂತಾಗಿ ವರ್ತನವಾದಿಗಳು ಅತ್ಯಂತ ಆಗ್ರಹಪೂರ್ವಕ ವಾಗಿ ಪ್ರತಿಪಾದಿಸುತ್ತಾರೆ. ಭಾಷೆಯೆಂದರೆ ಹೊರಗಿನ ಪ್ರಚೋದನೆಗೆ ಶಬ್ದಮಯ ವಾದ (ನಾಲಿಗೆಯ) ಪ್ರತಿಕ್ರಿಯೆಯೆಂದೂ, ವಿಚಾರ, ಕಲ್ಪನಾಶಕ್ತಿಗಳೆಂದರೆ

ಹತ್ತಿಕ್ಕಿದ ಮೂಕ ಭಾಷೆಯೆಂದೂ ಅವರು ವ್ಯಾಖ್ಯೆಮಾಡುವರು. ಈ ಮತವನ್ನು ಒಪ್ಪುವಲ್ಲಿ ಒಂದು ಪ್ರಶ್ನೆ ತಲೆದೋರುತ್ತದೆ. ನಾವು ಯಾವಾಗಲೂ ಮಾತಿನಲ್ಲಿಯೇ ವಿಚಾರ ಮಾಡುವೆವೇ ? ಭಾಷೆಯಿಲ್ಲದೇ ವಿಚಾರವು ಸಾಧ್ಯವಿಲ್ಲವೆ ? ಶಬ್ದದಲ್ಲಿಯೇ ಮೂಲತಃ ಅರ್ಥವು ಅಡಕವಾಗಿಯೇ ? ಎಂಬ ಈ ಪ್ರಶ್ನೆಗೆ ವರ್ತನವಾದಿಯ ನಕಾರಾತ್ಮಕವಾದ ಉತ್ತರವು ನಿಶ್ಚಿತ. ನಾವು ವಸ್ತುಗಳ ಮತ್ತು ಕೃತ್ಯಗಳ ನಿಮಿತ್ತ ದಿಂದ ವಿಚಾರ ಮಾಡುವೆವು: ವಸ್ತು ಕೃತ್ಯಗಳಾಗಿ ಬದಲಾಗಿ ಸಾಂಕೇತಿಕ ಪ್ರತಿಕ್ರಿಯೆ ಗಳಾಗಿ ಶಬ್ದಗಳುಂಟಾಗಿರುವವು. ಕೆಲವು ಮಾದರಿಯ ವಿಚಾರಗಳಲ್ಲಿ ನಾವು ಈ 'ಬದಲು'ಗಳ ಹೊರತಾಗಿ ಮೂಲ ಸಂಗತಿಗಳ ಕುರಿತೇ ವ್ಯವಹರಿಸುತ್ತೇವೆ.

ಇದೆಲ್ಲ ವಿವೇಚನೆ ವ್ಯಕ್ತಿಗೆ ಸಂಬಂಧಪಟ್ಟ ಮನೋವಿಜ್ಞಾನವನ್ನು ಕುರಿತಾಯಿತು. ಆದರೆ ವರ್ತನವಾದಿಯ ಮನೋವಿಜ್ಞಾನವು ವ್ಯಕ್ತಿಯ ಮಟ್ಟಿಗೇ ಮರ್ಯಾದಿತ ವಾಗಿಲ್ಲ. ಆತನು ತನ್ನ ಸಿದ್ಧಾಂತವನ್ನು ಸಮಾಜಕ್ಕೂ ರಾಷ್ಟ್ರಗಳಿಗೂ, ಮಾನವ ವಂಶಗಳಿಗೂ, ಅನ್ವಯಿಸಿ ಬಳಸಿಕೊಳ್ಳುವನು. ಆದರೆ ಹೀಗೆ ವ್ಯಾಪಕವಾಗಿ ಅನ್ವಯಿಸಿದಾಗ ಸರಿಯಾದ ಫಲಿತಗಳನ್ನು ಕಂಡುಹಿಡಿಯಲು ಕಠಿಣವೂ ವಿಲಂಬವೂ ಆಗುತ್ತದೆ. ಏಕೆಂದರೆ ಅಂಥ ಸಮಸ್ಯೆಗಳು ಎಷ್ಟೋ ಜಟಿಲವಾದವೂ ಗೊಂದಲ ಗೊಳಿಸುವಂತಹವೂ ಇರುತ್ತವೆ.

ಒಂದು ನಿಶ್ಚಿತವಾದ ಪ್ರಚೋದನೆಯನ್ನು ಕೊಟ್ಟರೆ-ಉದಾಹರಣಾರ್ಥವಾಗಿ. ಯುದ್ಧದ ಹುಯಿಲೆಬ್ಬಿಸಿದರೆ-ಒಂದು ಸಮಾಜವಾಗಲಿ. ಜನಾಂಗವಾಗಲಿ, ಮಾನವ ಜಾತಿಯಾಗಲಿ ಹೇಗೆ ಪ್ರತಿಕ್ರಿಯೆಯನ್ನು ತೋರಿಸುವವು ? ಇದಕ್ಕೆ ಸಮರ್ಪಕವಾಗಿ ಸಿಗಬೇಕಾದ ಉತ್ತರವನ್ನು ಒಮ್ಮೆಲೆ ಊಹಿಸಲು ಬರುವಂತಿಲ್ಲ. ಬೇರೆ ಬೇರ ಕಾಲಮಾನಗಳಲ್ಲಿ ಅಂಥ ಪ್ರಸಂಗಗಳು ಬಂದಾಗ ವಿಶಿಷ್ಟ ಜನಸಮುದಾಯದಲ್ಲಿ ಹೇಗೆ ಮತ್ತು ಎಂಥ ಪ್ರತಿಕ್ರಿಯೆಗಳು ಕಾಣಿಸಿಕೊಳ್ಳುವವೆಂಬುದರ ಲೆಕ್ಕಗಳನ್ನು ಹಲವು ತಲೆಮಾರುಗಳಿಂದ ಕೂಡಿಸಿ ಕಲೆಹಾಕಿ ಹೋಲಿಸಿ ಸತ್ಯವವರೆಗೆ ಹಚ್ಚಿ ಆ ಮೇಲೆ ನಿಶ್ಚಿತ ಅಭಿಪ್ರಾಯಕ್ಕೆ ತಲುಪಬೇಕಾಗುತ್ತದೆ. ಈ ನಡುವೆ, ಪ್ರಮಾಣ ವೆಂದು ಇಟ್ಟುಕೊಂಡ ಘಟನೆಗಳ ವಿವರವೇ ಬೇರೆ ಕಂಡುಬರಬಹುದು : ಐತಿಹಾಸಿಕ ಸಂಶೋಧನದಿಂದ ನಾವು ಗ್ರಹಿಸಿದ ಆಧಾರವೇ ಸುಳ್ಳೆಂದುದು ! ಆದರೂ ಸರಿಯಾದ ನಿಟ್ಟಿನಿಂದ ಸಂಶೋಧನೆಯನ್ನು ಸಾಗಿಸಿದರೆ, ವ್ಯಕ್ತಿಯ ಮನದಂತೆ ಸಮಷ್ಟಿಯ ಮನಸ್ಸಿನ ಸಮಸ್ಯೆಗಳನ್ನೂ ಕೊನೆಗೆ ಸಮರ್ಪಕವಾಗಿ ಬಿಡಿಸಿ ತೋರಿಸಬಹುದೆಂದು ವರ್ತನವಾದಿಗಳ ಬಲವಾದ ನಂಬುಗೆಯಿದೆ.

ವರ್ತನವಾದಿಗಳು, ಮೂಲಪ್ರವೃತ್ತಿಗಳ ತತ್ವವನ್ನೇ ಮಾನ್ಯಮಾಡುವದಿಲ್ಲ. ಇದಕ್ಕೆ

ವಿರುದ್ಧವಾಗಿ ಹೇತುವಾದಿ ಮನೋವಿಜ್ಞಾನಿಗಳು ('ಹೊರ್ಮಿಕ್' ಮನೋವಿಜ್ಞಾನಿಗಳು ಮೂಲಪ್ರವೃತ್ತಿಗಳನ್ನೇ ತಮ್ಮ ಸಂಪ್ರದಾಯದ ತಳಹದಿಯನ್ನೇ ಮಾಡಿರುವರು 'ಹೊರ್ಮೆ' ಎಂಬ ಗ್ರೀಕ ಶಬ್ದದಿಂದ ಅವರು ತಮ್ಮ ಮನೋವಿಜ್ಞಾನಕ್ಕೆ ಈ ಹೆಸರನ್ನು ಕಲ್ಪಿಸಿಕೊಂಡಿರುವರು 'ಹೊರ್ಮೆ' ಅಂದರೆ ಸ್ಫೂರ್ತಿ, ಹುಮ್ಮಸ, ಪ್ರೇರಣೆಯೆಂಬರ್ಥ. ಹೇತುವಾದಿ ('ಹೊರ್ಮಿಕ್') ಮನೋವಿಜ್ಞಾನಿಯು ಜೀವನದ ಎಲ್ಲ ಚಟುವಟಿಕೆಗಳ ಅಡಿಯಲ್ಲಿ ಒಂದು ಉದ್ದೇಶ, ಹೇತುವನ್ನು ಕಾಣುವನು. ಈ ಹೇತುವು, ಮನುಷ್ಯನಲ್ಲಿಯ ಮೂಲ ಪ್ರವೃತ್ತಿಗಳು ಗತಿಕೊಟ್ಟ ಸ್ಫೂರ್ತಿಯಿಂದಲೂ ಪ್ರೇರಣೆಯಿಂದಲೂ ಉತ್ಪನ್ನವಾಗುವದು. ಈ ಮೂಲ ಪ್ರವೃತಿಗಳು ತಲೆಮಾರಿನಿಂದ ತಲೆಮಾರಿಗೆ ಪರಂಪರೆಯಿಂದ ಪ್ರತಿಯೊಂದು ವ್ಯಕ್ತಿಯಲ್ಲಿ ಇಳಿದು ಬರುವವು.

## ಮೆಕ್‌ಡುಗಲ್ಲನ ಮೂಲ ಪ್ರವೃತ್ತಿಗಳು :

ಮನುಷ್ಯನಲ್ಲಿ ಕಂಡುಬರುವ ಮೂಲ ಪ್ರವೃತ್ತಿಗಳನ್ನು ಬೇರೆಬೇರೆಯಾಗಿ ಎಣಿಸಿ, ಹೆಸರಿಟ್ಟು ವರ್ಗೀಕರಿಸಿರುವರು. ಕೆಲವು ವಿಜ್ಞಾನಿಗಳ ಅಭಿಪ್ರಾಯದಂತೆ ಸುಮಾರು ೪೦ ಮೂಲ ಪ್ರವೃತ್ತಿಗಳುಂಟು. ಆದರೆ ವಿಲಿಯಂ ಮೆಕ್‌ಡುಗಲ್ ಎಂಬ ಸುಪ್ರಸಿದ್ಧ ಮನೋವಿಜ್ಞಾನಿಯ ವರ್ಗೀಕರಣವೂ ಮೂಲ ಪ್ರವೃತ್ತಿಗಳೂ ಸಾಮಾನ್ಯವಾಗಿ ಹೆಚ್ಚು ಮಾನ್ಯತೆಯನ್ನು ಪಡೆದಿವೆ. ಈತನು ಆಂಗ್ಲನಾಗಿದ್ದರೂ ಹಲವು ವರ್ಷಗಳಿಂದ ಅಮೇರಿಯಲ್ಲಿ ನೆಲಸಿ ಅಲ್ಲಿಯ ವಿಶ್ವವಿದ್ಯಾಲಯದ ಪ್ರಾಧ್ಯಾಪಕನಾಗಿದ್ದಾನೆ ಮತ್ತು ಈತನು ಹೇತುವಾದಿ (ಹೊರ್ಮಿಕ್) ಮನೋವಿಜ್ಞಾನದ ಸಾಂಪ್ರದಾಯದ ಆದ್ಯಪ್ರವರ್ತಕನೂ ಮುಖ್ಯ ಪ್ರಚಾರಕನೂ ಎಂದೆಣಿಸಲ್ಪಡುತ್ತಾನೆ. ಈತನು ಮುಖ್ಯ ಹದಿಮೂರು ಮೂಲಪ್ರವೃತ್ತಿಗಳನ್ನು ಹೇಳುವನು. ಇವುಗಳೊಡನೆ ಕೆಲವೊಂದು ಗೌಣಪ್ರವೃತ್ತಿಗಳೂ ಇರುವವು. ಆ ಮೂಲ ಪ್ರವೃತ್ತಿಗಳು ಅವುವೆಂದರೆ :

೧ ಪಿತೃಪ್ರವೃತ್ತಿ–(ತಂದೆತಾಯಿಯಾಗಬೇಕೆಂಬ ಬಯಕೆ)
೨ ಯುಯುತ್ಸು ವೃತ್ತಿ–(ಹೋರಾಡಬೇಕೆಂಬ ಲವಲವಿಕೆ)
೩ ಜಿಜ್ಞಾಸೆ–(ಕುತೂಹಲಪಡುವ ವೃತ್ತಿ)
೪ ಬುಭುಕ್ಷೆ–(ಹಸಿವೆ)
೫ ಜುಗುಪ್ಸೆ–(ಹೇಸಿ ಹಿಂಜರಿಯಬೇಕೆಂಬ ಅನಿಸಿಕೆ)
೬ ಪಲಾಯನ ವೃತ್ತಿ–ಓಡಿಪಾರಾಗಬೇಕೆಂಬ ಆತುರ)

೭ ಯೂಥವೃತ್ತಿ–(ಗುಂಪುಗೂಡಿರಬೇಕೆಂಬ ಹಾರೈಕೆ)
೮ ಆತ್ಮ ಸ್ಥಾಪನೆ–(ತನ್ನ ಪ್ರಭಾವ, ಹಟವನ್ನು ನಡಿಸಬೇಕೆಂಬ ಲವಲವಿಕೆ)
೯ ಶರಣಾಗತಿ–(ತನ್ನನ್ನು ಅಲ್ಲಗಳೆದು ಮಹಾವ್ಯಕ್ತಿಗಳ ಅಡಿಯಲ್ಲಿ ಇಡಬೇಕೆಂಬ ಒಲವು)
೧೦ ಮೈಥುನ–(ಕಾಮ ತೃಪ್ತಿಯ ಲವಲವಿಕೆ)
೧೧ ಅರ್ಜನೆ–(ಗಳಿಸಬೇಕೆಂಬ, ಪಡೆದು ಕೂಡಿಸಿಡಬೇಕೆಂಬ ವೃತ್ತಿ)
೧೨ ಸಿಸೃಕ್ಷೆ (ಏನಾದರೊಂದು ರಚಿಸಬೇಕೆಂಬ ತವಕ)
೧೩ ಆಕರ್ಷಣ–(ಜನರ ಲಕ್ಷವನ್ನು ಸೆಳಕೊಳ್ಳುವ ಲವಲವಿಕೆ)

ಸಾಮಾನ್ಯವಾಗಿ ಈ ಪ್ರವೃತ್ತಿಗಳಿಗೆ 'ಕುರುಡ' ವೃತ್ತಿಗಳೆಂದು ಕರೆಯುತ್ತಾರೆ. ಆದರೆ ಹಾಗೆ ಎಣಿಸುವದು ಸರಿಯಲ್ಲ. ಕುರುಡೆಂಬುದರ ಅರ್ಥವು ಪರಿಣಾಮದ ಕುರಿತು ಪರಿವೆಯಿಲ್ಲದಂಥ ಅಪಾಯಕಾರಿ. ಅತ ತಾಯಿ ಸ್ವರೂಪ ಎಂದಿದ್ದರೆ, ಈ ಮೂಲವೃತ್ತಿಗಳು ಕುರುಡಲ್ಲ. ಅವು ಉಪಯುಕ್ತವೆಂದೇ ಉಂಟಾಗಿವೆ. ಪ್ರಾಣಿಯ ಬಾಳಿಕೆಯ, ಬೆಳವಣಿಗೆಯ ಹೇತುವಿನಿಂದಲೇ ಉಳಿದಿವೆ. ಈ ಮೂಲ ಪ್ರವೃತ್ತಿಗಳು ಜೀವನದ ಉದ್ದೇಶ ಸಫಲತೆಯ ಸೆಲೆಗಳು. ಬುದ್ಧಿಯು ನಿಯಂತ್ರಿಸಿ ನಡೆಯಿಸಿಕೊಳ್ಳಬೇಕಾದ, ನಿಶ್ಚಿತ ಗುರಿಗಳುಳ್ಳ, ಜೀವನದ ಪ್ರೇರಕ ಶಕ್ತಿಗಳು. ಹೀಗೆ ಹೇತುವಾದಿ (ಹೊರ್ಮಿಕ್) ಮನೋವಿಜ್ಞಾನವು ಎಲ್ಲ ಮಾನಸಿಕ ಜೀವನದ ಉದ್ದೇಶವನ್ನು ಕಂಡುಹಿಡಿದು ಆ ತತ್ವದ ಅಡಿಗಲ್ಲ ಮೇಲೆಯೇ ಏರ್ಪಟ್ಟಿರುವ ಮೂಲಕ ಈ ಸಾಂಪ್ರದಾಯದವರಿಗೆ 'ಹೇತುವಾದಿ'ಗಳೆಂದು ಕರೆವ ವಾಡಿಕೆಯಿದೆ. ವರ್ತನವಾದಕ್ಕೂ ಇದಕ್ಕೂ ಎರಡು ಧ್ರುವಗಳ ನಡುವಿರುವಷ್ಟು ಅಂತರ ವಿರುವದರಿಂದ ಇವರಲ್ಲಿ ಒಂದು ಸಂಪ್ರದಾಯದವರು ಇನ್ನೊಂದು ಸಂಪ್ರದಾಯ ದವರೊಡನೆ ಸತ್ಯದ ಗುತ್ತಿಗೆ ತಮಗೇ ಇದ್ದಂತೆ ಹಲವು ಬಾರಿ ವಾದ ಬೆಳೆಸುವದುಂಟು !

ಮೂಲ ಪ್ರವೃತ್ತಿಯೆಂದರೇನು ? ಮೆಕ್‌ಡುಗಲ್‌ನ ಅವರ ವ್ಯಾಖ್ಯೆ ಮತ್ತು ವಿವರಣೆಯ ರೀತಿ ಹೀಗಿದೆ : ಪ್ರಾಣಿಯು, ಯಾವದೊಂದು (ಜಾತಿಯ ಅಥವಾ ವರ್ಗದ) ವಸ್ತುವನ್ನು ಇಲ್ಲವೆ ವಿಷಯವನ್ನು ನೋಡಿಕೊಂಡು ಅದನ್ನು ವಿಚಾರಿಸ ಲಿಕ್ಕೂ ಹಾಗೆ ವಿಚಾರ ವಿಮರ್ಶೆಗಳಿಂದ ಆ ವಿಷಯದ ಮೂಲಕವಾಗಿ ಒಂದು ವಿಶಿಷ್ಟರೂಪದ ಭಾವನೆಯ ಉದ್ರೇಕವನ್ನು ಅನುಭವಿಸಲಿಕ್ಕೂ ಸಮರ್ಥವಾಗುತ್ತದೆ: ಬಳಿಕ ಆ ವಿಷಯದ ಕುರಿತು ಒಂದು ರೀತಿಯಾಗಿ ವರ್ತಿಸಲಿಕ್ಕೂ ಇಲ್ಲವೆ ಹಾಗೆ ವರ್ತಿಸಬೇಕೆಂಬ ಪ್ರೇರಣೆಯನ್ನು ಪಡೆಯಲಿಕ್ಕೂ ಆ ಪ್ರಾಣಿಯನ್ನು ಒತ್ತಾಯ

ಪಡಿಸುವಂಥ, ಅನುವಂಶಿಕವಾಗಿ ಬಂದ ಇಲ್ಲವೆ ಅವರದೇ ಅಂತರಂಗಿಕವಾದ ಶಾರೀರಿಕ ಮಾನಸಿಕ ಸ್ವರೂಪದ ಒಂದು ಒಲವೇ ಮೂಲಪ್ರವೃತ್ತಿಯು.

ವ್ಯಾಖ್ಯೆಯ ವಾಕ್ಯವು ಮಾರುದ್ದವಾಯಿತಲ್ಲವೇ ? ಅದನ್ನು ಸ್ವಲ್ಪಸಿಧಾನವಾಗಿ ಓದಿದರೆ ಲೇಸು. ಈ ವ್ಯಾಖ್ಯೆಯಲ್ಲಿ ಮೂರು ಭಾಗಗಳಾಗುತ್ತವೆ. ಮೊತ್ತ ಮೊದಲು, ಮೂಲ ಪ್ರವೃತ್ತಿಯ ಸ್ವರೂಪದ ಮಾತು:– ಮೂಲಪ್ರವೃತ್ತಿ ಯೆಂದರೆ ವ್ಯಕ್ತಿಯ ಇಲ್ಲವೆ ಪ್ರಾಣಿಯ ವಂಶದಲ್ಲಿ ಹಲವು ಪೀಳಿಗೆಗಳಿಂದ ನಡೆದು ಬಂದುದರಿಂದ ತಲೆದೋರುವ ಅಥವಾ ಆ ಪ್ರಾಣಿಯಲ್ಲಿ ಜನ್ಮತಃ ಸಹಜವಾಗಿ ಇರುವ ಒಂದು ಗುಣಧರ್ಮವು. ಅದರ ನಿಯತವಾದ ಕರ್ಮವೆಂದರೆ ವಿಶಿಷ್ಟ ವಿಷಯಗಳ ಕಡೆಗೆ ನಮ್ಮ ಲಕ್ಷ್ಯವು ಸೆಳೆಯುವಂತೆ ನಮಗೆ ಒತ್ತಾಯ ಪಡಿಸುವದು. ಎರಡನೆಯ ಮಾತು:– ಈ ಸ್ವಾಭಾವಿಕವಾದ ಪ್ರೇರಣೆಯು ಆ ವ್ಯಕ್ತಿ ಅಥವಾ ಪ್ರಾಣಿಯಲ್ಲಿ ಒಂದು ವಿಶಿಷ್ಟ ರೂಪದ ಭಾವನೆಯನ್ನು ಕೆರಳಿಸುತ್ತದೆ. ಈ ಕ್ರಿಯೆಯನ್ನು ಹಿಂಬಾಲಿಸಿ ಮೂರನೇ ಮಾತು ಬರುತ್ತದೆ. ಅದೇನೆಂದರೆ:– ಯಾವದೊಂದು ಮೂಲ ಪ್ರವೃತ್ತಿಯು–ನಮ್ಮ ಹುಟ್ಟಿನೊಂದಿಗೆ ನಮ್ಮ ಬೆಂಬತ್ತಿ ಬಂದ ಮನಸ್ಸಿನಲ್ಲಿಯ ಒಲವು,–ತನಗೆ ಅನುರೂಪವಾದ ಕ್ರಿಯೆಯನ್ನಾಗಲಿ ಕ್ರಿಯೆಯ ಕುರಿತು ಪ್ರೇರಣೆಯನ್ನಾಗಲಿ ಗೊತ್ತುಪಡಿಸುತ್ತದೆ; ಆ ಕ್ರಿಯೆಯೊಂದಿಗೆ ಅದಕ್ಕೆ ಅನುಗುಣವಾದ ಅನುಕೂಲ ಅಥವಾ ಪ್ರತಿ ಕೂಲವೇದನೆಯೂ ಉಂಟಾಗುತ್ತದೆ. ಪ್ರತಿಯೊಂದು ಮೂಲ ಪ್ರವೃತ್ತಿಯು ಈ ಮೂರು ಬಗೆಯ ಸಂಗತಿಗಳನ್ನು ಒಳಗೊಂಡಿರುತ್ತದೆ.

ಇಲ್ಲಿ ಮಹತ್ವದ ಮಾತೇನೆಂದರೆ ಯಾವದೊಂದು ವಿಶಿಷ್ಟ ಭಾವನೆಯು ಇಂತಹ ಒಂದು ವಿಶಿಷ್ಟ ಮೂಲಪ್ರವೃತ್ತಿಯಿಂದಲೇ ಯಾವಾಗಲೂ ತಲೆದೋರುತ್ತ ದೆಂದು ಎದೆತಟ್ಟಿ ಹೇಳಲಿಕ್ಕಾಗುವದಿಲ್ಲ. ಆದುದರಿಂದ ಇಂತಹ ಒಂದು ಮೂಲ ಪ್ರವೃತ್ತಿ ಇಂತಹ ಒಂದು ಭಾವನೆ ಇವೆರಡೂ ಒಂದೇ; ಅದೇ ಇದು, ಇದೇ ಅದು ಎಂದು ಭಾವಿಸಕೂಡದು. ಆದರೆ ನಮ್ಮ ವಾಡಿಕೆಯ ಮಾತು–ಕತೆಯಲ್ಲಿ ನಾವು ಹಾಗೆ ಮಾಡುವದುಂಟು. ಬಲ್ಲವರು ಎಷ್ಟೋಜನ ಹೆಚ್ಚು ತಿಳುವಳಿಕೆಯಿಂದ ನುಡಿಯನ್ನು ಬಳಿಸಿಕೊಳ್ಳಬೇಕಾದವರು ಕೂಡ ಇಂಥ ಗೊಂದಲದಲ್ಲಿ ಬೀಳುವದುಂಟು ! ಹಲವು ಸಾರೆ 'ಭೀತಿಯ ಪ್ರವೃತ್ತಿ' ಎಂದು ನಾವೆನ್ನುವೆವು. ಆದರೆ ಇದು ತಪ್ಪು. ಭೀತಿಯು (ಮೂಲ) ಪ್ರವೃತ್ತಿಯೇ ಅಲ್ಲ. ಅದೊಂದು ಭಾವನೆಯು;– ಒಂದು ಮೂಲ ಪ್ರವೃತ್ತಿಯಿಂದ ಕೆರಳಿಸಲ್ಪಟ್ಟ ಮನೋವಿಕಾರ ಭೀತಿಯ ಭಾವನೆಯು ಇಂತಹ ಒಂದೇ ಮೂಲ ಪ್ರವೃತ್ತಿಯಿಂದ

ಯಾವಾಗಲೂ ಉಂಟಾಗುವದೆಂಬ ನಿಯಮವಿಲ್ಲ. ಒಂದು ಪ್ರಾಣಿಯಲ್ಲಿ ಭೀತಿಯನ್ನು ಕೆರಳಿಸುವ ಮೂಲ ಪ್ರವೃತ್ತಿಯು ಇನ್ನೊಂದು ಪ್ರಾಣಿಯಲ್ಲಿ ಬೇರೆ ಭಾವನೆಗೆ ಕಾರಣವಾಗಬಹುದು. ಅದಕ್ಕೆ ಹಲವು ಮೂಲ ಪ್ರವೃತ್ತಿಗಳೊಂದಿಗೆ ಹೆಚ್ಚಾಗಿ ಹೊಂದಿಕೊಂಡು ಅವುಗಳಿಗೇ ವಿಶಿಷ್ಟವಾದ ಪ್ರಾಥಮಿಕ ಮೂಲ ಕೆಲವು ಭಾವನೆಗಳೂ ಉಂಟು.

ಒಂದು ಭಾವನೆಯನ್ನುಂಟು ಮಾಡಲು ಒಂದೇ ಇಲ್ಲವೆ ಅದೇ ಮೂಲ ಪ್ರವೃತ್ತಿಯೇ ಕಾರಣವಾಗಲೇಬೇಕೆಂದಿಲ್ಲವೆಂಬುದರ ಬಗ್ಗೆ ಮೇಲಿನ ಭೀತಿಯ ಉದಾಹರಣೆಯೇ ಸಾಕು. ಸಾಮಾನ್ಯವಾಗಿ ಪಲಾಯನ ಪ್ರವೃತ್ತಿಯು ತಪ್ಪದೇ ಭೀತಿಯ ಭಾವನೆಯನ್ನು ಕೆರಳಿಸುತ್ತದೆ. ಆದರೂ ಎಷ್ಟೋ ವೇಳೆ ವಾತ್ಸಲ್ಯದಿಂದ (ಮಾತೃ ಪಿತೃ ಪ್ರವೃತ್ತಿಯಿಂದ) ಕೂಡ ಈ ಭಾವನೆಯು ಉಂಟಾಗುವದುಂಟೆಂಬುದು ಹಲವು ಹಿರಿಯರ ಅನುಭವದ ಮಾತು. ಈ ಭೀತಿ ಭಾವನೆಯನ್ನು ಜುಗುಪ್ಸೆ (ತಿರಸ್ಕಾರ), ಶರಣಾಗತಿ, ಬುಭುಕ್ಷೆಗಳೆಂಬ ಮೂಲ ಪ್ರವೃತ್ತಿಗಳೂ ಕೆರಳಿಸಬಹುದು. ವಸ್ತುತಃ ಭೀತಿಯನ್ನು ಹೆಚ್ಚು ಕಡಿಮೆ ಅಂಶವಲ್ಲಿ ಉದ್ರೇಕಗೊಳಿಸಲಾರದಂಥ ಒಂದೂ ಮೂಲ ಪ್ರವೃತ್ತಿಯಿಲ್ಲ.

ಇಂತು ಭಾವನೆಯನ್ನು ಮೂಲ ಪ್ರವೃತ್ತಿಯಿಂದ ಬೇರ್ಪಡಿಸಿ, ವಿಂಗಡಿಸಿ, ಅದು ಮೂಲ ಪ್ರವೃತ್ತಿಯ ಕ್ರಿಯೆಯೆಂದು ನೆನಪಿಡಬೇಕು. ಆದರೂ ಅದು ಮೂಲ ಪ್ರವೃತ್ತಿಗಿಂತ ಗೌಣವೆಂದು ಮಾತ್ರ ಎನಿಸಕೂಡದು. ಭಾವನೆಯ ಮಹತ್ವವು ಮೂಲ ಪ್ರವೃತ್ತಿಗಿಂತ ಕಡಿಮೆಯಿಲ್ಲ. ನಿಜವಾಗಿಯೂ ಅದರ ಮಹತ್ವವು ಅಮೌಲಿಕವಾಗಿದೆ. ಏಕೆಂದರೆ ಯಾವದೊಂದು ಮೂಲ ಪ್ರವೃತ್ತಿಯು ತಾನಾಗಿ ನೆಟ್ಟಗೆ ಕ್ರಿಯೆಯನ್ನು ಪ್ರೇರಿಸಲು ಸಾಕಷ್ಟು ಕಸುವುಳ್ಳದ್ದಿರುವದಿಲ್ಲ. ಅದರಿಂದ ಕೆರಳಿಸಲ್ಪಡುವ ಭಾವನೆಯೇ ಯಾವದೊಂದು ಕ್ರಿಯೆಗೆ ಪ್ರೇರಕಶಕ್ತಿಯಾಗುತ್ತದೆ.

ಈ ಸಂದರ್ಭವಲ್ಲಿ ಒಂದು ಮಾತು ನೆನಪಿಡುವದು ಅಗತ್ಯವಿದೆ. ಮೂಲ ಪ್ರವೃತ್ತಿಗಳ ಚಟುವಟಿಕೆಯ ಕ್ರಮವು ಕೇವಲ ಸ್ಥಿರವಾಗಿಯೂ, ಎಂದೂ ಹೆಚ್ಚು ಕಡಿಮೆಯಾಗಲು ಇಂಬುಗೊಡದಂತಹದೂ ಆಗಿರುವದಿಲ್ಲ. ಮೂಲ ಪ್ರವೃತ್ತಿಗಳ ವ್ಯಾಪಾರ ಕ್ರಮವು ಹಾಗೆ ಅಚಲವಾದುದಾಗಿದ್ದರೆ, ಮನುಷ್ಯನು ಮಿಕ್ಕ ಪಶು ವರ್ಗದಿಂದ ಮೇಲೇರಿಬಂದು ಮೆರೆಯುತ್ತಿದ್ದಿಲ್ಲ; ಮತ್ತು ಪಶುಗಳೂ ಈಗಿರುವಷ್ಟು ತಿಳುವಳಿಕೆಯ ಮಟ್ಟಕ್ಕೆ ಮುಟ್ಟುತ್ತಿದ್ದಿಲ್ಲ. ಆದರೆ ಹಾಗಾಗದಿರಲು ಕಾರಣವೇನೆಂದರೆ, ಮೂಲಪ್ರವೃತ್ತಿಗಳ ವ್ಯಾಪಾರ ಕ್ರಮವು ವ್ಯತ್ಯಾಸಗೊಳ್ಳುತ್ತದೆ,

ಅದರಲ್ಲಿ ಪರಿವರ್ತನೆಯಾಗಬಲ್ಲದು ಎಲ್ಲ ತರದ ಮಾನವೀ ಚಟುವಟಿಕೆಗಳು,- ಅವು ಎಷ್ಟೇ ಜಟಿಲವಾದವಿರಲಿ, ಎಷ್ಟೇ ಮೇಲ್ತರಗತಿಯವಿರಲಿ,- ಮೂಲ ಪ್ರವೃತ್ತಿಗಳು ಪೂರೈಸಿದ ಭಾವನಾರೂಪವಾದ ಪ್ರೇರಣೆಯನ್ನು ಬಗೆಬಗೆಯಾಗಿ ರೂಪಾಂತರಿಸಿಕೊಂಡು ಕಾರ್ಯಕಾರಿಯಾಗಿಮಾಡಿದುದರ ಫಲವೆಂದು ಹೇತು ವಾದಿಗಳು-ಹೊರ್ಮಿಕ್ ಮನೋವಿಜ್ಞಾನಿಗಳು-ಅಭಿಪ್ರಾಯಪಡುತ್ತಾರೆ.

ಮೂಲಪ್ರವೃತ್ತಿಗಳ ಶಾರೀರಿಕ ರಚನೆಯು ಹೀಗಿದೆ: (೧) ಜ್ಞಾನೇಂದ್ರಿಯಗಳೂ ಅವುಗಳನ್ನು ಮಿದುಳಿನೊಂದಿಗೆ ಜೋಡಿಸುವ ಮಜ್ಜಾ ತಂತುಗಳು; (೨) ಮಿದುಳು; (೩) ಮಿದುಳನ್ನು ಶರೀರದ ಒಳಗಿನ ಅವಯವಗಳೊಂದಿಗೂ ಅಂತ ಸ್ರಾವಗ್ರಂಥಿಗಳೊಂದಿಗೂ ಜೋಡಿಸುವ ಮಜ್ಜಾ ತಂತುಗಳು; ಮತ್ತು (೪) ಸ್ನಾಯುಗಳಿಗೆ ಮಿದುಳಿನಿಂದ ಬರುವ ಮಜ್ಜಾ ತಂತುಗಳು. ಈ ಚತುರಂಗ ಬಲದಿಂದ ಮೂಲಪ್ರವೃತ್ತಿಗಳೆಂಬ ದಳಪತಿಗಳು ಪ್ರಾಣಿಯ ತಾಳಿಕೆಬಾಳಿಕೆಗಾಗಿ ಪರಿಸ್ಥಿತಿಯನ್ನು ಗೆಲ್ಲುತ್ತವೆ; ಜೀವನವನ್ನು ಕಾಪಾಡುತ್ತವೆ ಎಂದು ಹೇಳಬಹುದು.

ಮನಸ್ಸಿನ ಪ್ರವಾಹವು ಈ ನಾಲ್ಕು ವಿಧವಾದ ಶಾರೀರಿಕ ವ್ಯಾಪಾರ ಕ್ರಮಗಳಿಗೆ ಹೊಂದಿಕೊಂಡು, ಸಮಾಂತರವಾಗಿ ಹರಿಯುತ್ತದೆ. ಜ್ಞಾನೇಂದ್ರಿಯಗಳನ್ನು ಮಿದುಳಿಗೆ ಜೋಡಿಸುವ ಮಜ್ಜಾತಂತುಗಳ ಮತ್ತು ಆ ಇಂದ್ರಿಯಗಳ ಚಟು ವಟಿಕೆಯು (೧) ಸಂವೇದನೆಯಾಗುತ್ತದೆ. ಮಿದುಳು, ಅಂತಸ್ರಾವ ಗ್ರಂಥಿಗಳೂ- ಇವುಗಳ ನಡುವಿನ ಮಜ್ಜಾತಂತುಗಳ ಕ್ರಿಯೆಯನ್ನೊಳಗೊಂಡು (೨) ಭಾವನೆ ಯಾಗುತ್ತದೆ. ಮಿದುಳಿನಿಂದ ಸ್ನಾಯುಗಳಿಗೆ ಸಂದೇಶಗಳನ್ನು ತರುವ ಮಜ್ಜಾ ತಂತುಗಳ ದ್ವಾರದಿಂದ (೩) ಕ್ರಿಯೆಯು (ಕೆಲಸವು) ಸಂಭವಿಸುತ್ತದೆ. ಇದೇ ನಡವಳಿ ಅಥವಾ ವರ್ತನ. ಈ ತೆರನಾಗಿ ವರ್ತನ ಕ್ರಿಯೆಯು ಘಟಿಸದಿದ್ದರೂ ವರ್ತನದ ಪ್ರೇರಣೆಯಾದರೂ ದೊರೆಯುತ್ತದೆ. (ಈ ಮೂರು ವಿಧವಾದ ಕಾರ್ಯಗಳಿಗೆ ಆಧಾರಕೇಂದ್ರವಾಗಿ ಮಿದುಳು ಕೆಲಸ ಮಾಡುತ್ತಲಿರುತ್ತದೆ.)

## ಮೂಲಪ್ರವೃತ್ತಿಯಿಂದ ವರ್ತನವು ಹೇಗೆ ಮಾರ್ಪಡುವದು ?

ಮೂಲಪ್ರವೃತ್ತಿಯ ಈ ಮೂರು ವಿಧವಾದ ವ್ಯಾಪಾರದಲ್ಲಿ ಭಾವನೆಗಳ ಸ್ವರೂಪವು ಬದಲಾಗುವದಿಲ್ಲ. ಅದು ಉಂಟಾಗುವದು ನಿಶ್ಚಿತ. ಆದರೆ ಸಂವೇದನೆ ಮತ್ತು ವರ್ತನೆಗಳು ಮಾತ್ರ ತಮ್ಮ ರೂಪವನ್ನು ಬದಲಿಸಬಹುದು. ರೂಪಾಂತರ

ಹೊಂದಬಹುದು. ಹೆದರಿ ಹೌಹಾರಿದ ನಾಯಿಯಾಗಲಿ ಮಗುವಾಗಲಿ ಆ ಹೆದರಿಕೆಯನ್ನುಂಟುಮಾಡಿದ ವಸ್ತುವಿನಿಂದ ಗಾಬರಿಗೊಂಡು ಓಡಿಹೋಗಬಹುದು. ಆದರೆ ಪ್ರೌಢ ಮನುಷ್ಯನು ಅಂಥ ಹಲವು ಸಂದರ್ಭಗಳಲ್ಲಿ ಹೆದರಿದರೂ, ತನ್ನ ಸ್ಥಳ ಬಿಟ್ಟು ಕದಲದೆ ಧೈರ್ಯದಿಂದಲೂ ಜಾಣ್ಮೆಯಿಂದಲೂ ಬಂದ ಪ್ರಸಂಗಕ್ಕೆ ಎದೆಗೊಟ್ಟು ನಿಲ್ಲಬಹುದು. ಏಕೆಂದರೆ ಹೆದರಿದ ಪಶುವಿಗಿಂತ, ಹೌಹಾರಿದ ಶಿಶುವಿಗಿಂತ ಆತನು ಪರಿಸ್ಥಿತಿಯನ್ನು ಭಿನ್ನವಾಗಿ ಎದುರಿಸುವನು. ಆತನ ಮಿದುಳು ಸಂವೇದನೆಗಳನ್ನು ರೂಪಾಂತರಿಸಿಕೊಳ್ಳುವದು; ಮತ್ತು ತನ್ನ ಪ್ರಾಥಮಿಕವಾದ ಮೂಲಪ್ರವೃತ್ತಿಯ ಆ ಪ್ರತಿಕ್ರಿಯೆಯನ್ನು ಬೇರೆ ರೀತಿಯಲ್ಲಿ ಮಾರ್ಪಡಿಸಲು ಆತನು ಕಲಿತಿರುವನು. ಆದರೆ ಪ್ರೌಢರಲ್ಲೂ ಚಿಕ್ಕ ಮಗು ಅಥವಾ ಪಶುಗಳಂತೆ ಮೊದಲು ಭಾವನೆಯು ಜಾಗೃತವಾಗುವದು ನಿಶ್ಚಿತ. ಅದನ್ನು ಬದಲಿಸಲು ಸಾಧ್ಯವಿಲ್ಲ.

ಯಾವುದೇ ಮೂಲಪ್ರವೃತ್ತಿಯು ನಿಜವಾಗಿ ಒಳಿತಾಗಲಿ ಕೆಡಕಾಗಲಿ ಇರುವದಿಲ್ಲ. ಅದರಿಂದುಂಟಾಗುವ ಕಾರ್ಯ-ಪ್ರೇರಣೆಯನ್ನು ವಿನಿಯೋಗಿಸಿಕೊಳ್ಳುವ ರೀತಿಯು ನಮ್ಮ ನಡತೆಯಲ್ಲಿಯ ಒಳಿತು ಕೆಡಕುಗಳನ್ನು ಗೊತ್ತುಪಡಿಸುತ್ತದೆ. (ಇಲ್ಲಿ ಒಳಿತು ಕೆಡಕೆಂದರೆ ಲಾಭಕರ ಹಾನಿಕರ ಉಪಯುಕ್ತ ನಿರುಪಯುಕ್ತ ಎಂಬ ಅರ್ಥ) ಅದೇ ಮೇರೆಗೆ ಯಾವದೇ ಭಾವನೆಯೂ ವಸ್ತುತಃ ಒಳಿತಾಗಲಿ ಕೆಡಕಾಗಲಿ ಇರುವದಿಲ್ಲ. ಸಜ್ಜನರ 'ಸಾತ್ವಿಕ ಸಂತಾಪ'ವು ನಮ್ಮೆಲ್ಲರಿಗೆ ಪರಿಚಿತವಷ್ಟೇ! ಇದರಂತೆ ಭೀತಿಯು ಕೂಡ ಕೆಲವೆಡೆಗಳಲ್ಲಿ ಉದಾತ್ತವೆಂದೇ ಎನಿಸುವದು. ಹೀಗೆಯೇ ಇನ್ನುಳಿದ ಭಾವನೆಗಳ ಮಾತು.

ಸರಳವಾದ ಕೆಲವೇ ಮೂಲ ಪ್ರತಿಕ್ರಿಯೆ ಪರಾವರ್ತನ ಕ್ರಿಯೆಗಳಿಂದ ಸಾಂಕೇತಿಕವಾಗಿ ಹೆಚ್ಚು ಹೆಚ್ಚು ಜಟಿಲವಾದ ಅಗಣಿತ ಪ್ರತಿಕ್ರಿಯೆಗಳ ಕಟ್ಟಡವು ನಿರ್ಮಾಣವಾಗುತ್ತದೆಂದು ವರ್ತನವಾದಿಗಳ ಪ್ರತಿಪಾದನೆಯಾಗಿದೆಯೆಂದು ಹಿಂದೆ ಹೇಳಿದೆಯಷ್ಟೇ. ಹೇತು (ಹೊರ್ಮಿಕ) ವಾದಿ ಮನೋವಿಜ್ಞಾನಿಗಳೂ ಇದೇ ತೆರನಾಗಿ ತೊಡಕಿನಿಂದ ವರ್ತನಕ್ರಮವು ಮಾರ್ಪಡುವ ಬಗೆಯನ್ನು ವಿವರಿಸುತ್ತಾರೆ. ಆದರೆ ಈ ಕ್ರಮವು ಶಾರೀರಿಕ ಪರಾವರ್ತನ ಕ್ರಿ ಯೆ ಗ ಳ ಮೇಲೆಯೇ ನಿಂತಿದೆಯೆಂದು ಅವರು ತಿಳಿಯುವದಿಲ್ಲ. ಜನ್ಮದಾರಭ್ಯ ಬಂದ ಕೆಲವು ಮೂಲಪ್ರವೃತ್ತಿಗಳ ಕುರಿತು, ಕಲಿಯದೇ ಆಗುವ ಪ್ರತಿಕ್ರಿಯೆಗಳ ತಳಹದಿಯ ಮೇಲೆಯೇ ಅಂಥ ಪ್ರವೃತ್ತಿಗಳಿಂದ ಉಂಟಾಗುವ ಭಾವನೆ ಕ್ರಿಯಾಪ್ರೇರಣೆಗಳನ್ನೊಳಗೊಂಡ ಸಂಕೀರ್ಣವಾದ ನಡತೆಯ ಮಾದರಿಯು ರೂಪಗೊಳ್ಳುತ್ತ ಬೆಳೆಯುತ್ತದೆಂದು ಹೇತುವಾದಿಗಳು ಸಾಧಿಸುವರು.

ಇವೆರಡೂ ಸಾಂಪ್ರದಾಯದವರು ಮಾನಸಿಕ ಕ್ರಿಯೆಗಳಲ್ಲಿಯ ಸಂಗತಿ, ಸಾಹಚರ್ಯ ತತ್ವವನ್ನು ಒಪ್ಪಿಕೊಳ್ಳುವರು. ಆದರೆ, ಇಲ್ಲಿಯೂ ಒಂದು ಭೇದವಿದೆ. ವರ್ತನ ವಾದಿಗಳು ಬಾಹ್ಯಪ್ರಚೋದನೆ ಮತ್ತು ಅದಕ್ಕೊದಗುವ ಪರಾವರ್ತನ ರೂಪವಾದ ಪ್ರತಿಕ್ರಿಯೆ ಇವೆರಡರಲ್ಲಿ ಸಂಗತಿಯನ್ನು, ಸಂಬಂಧವನ್ನು ಹಚ್ಚುವರು. ಆದರೆ ಈ ಯಾಂತ್ರಿಕ ಕ್ರಿಯೆಯನ್ನಷ್ಟೇ ಮನ್ನಿಸದೇ, ಹೇತುವಾದಿಗಳು ಈ ತರದ ಸಂಗತಿ-ಸಂಬಂಧಗಳನ್ನು ಮೂಲಪ್ರವೃತ್ತಿ ಮತ್ತು ಅದರಿಂದ ಜರಗುವ ಪ್ರತಿಕ್ರಿಯೆ ಇವುಗಳಲ್ಲಿ ಹೊಂದಿಸುತ್ತಾರೆ. ಈ ಸಂಗತಿಯು ಹೊಂದಿಕೆ ಅಥವಾ ಹೋಲಿಕೆಯ ತತ್ವದ ಮೇಲಿಯೇ ಜರಗುತ್ತದೆಂದು ಅವರೂ ನಂಬುವರು.

ಹೊಸ ಹೊಸ ಪ್ರತಿಕ್ರಿಯೆಗಳು ಹೇಗೆ ಉಂಟಾಗುತ್ತವೆ ? ಮೂಲ ಪ್ರವೃತ್ತಿಗೆ ಪ್ರಚೋದನೆ ಕೊಡುವ ಹೇತುವಿನೊಂದಿಗೇ ಬೇರೊಂದು ಹೇತುವು ಸಂಗಡವೇ ಅನುಭವಕ್ಕೆ ಬಂದರೆ, ಎರಡನೆಯದಾಗಿ, ಭಿನ್ನವಾದ ವಿಕಾರ ಹೇತುವು ಮೊದಲನೆಯ ಹೇತುವನ್ನೇ ಹೆಚ್ಚಾಗಿ ಹೋಲುತ್ತಿದ್ದರೆ ಹೊಸ ಪ್ರತಿಕ್ರಿಯೆಯು ಉಂಟಾಗುತ್ತದೆ. ಇದಲ್ಲದೆ, ಹೀಗೆ ಪ್ರತಿಕ್ರಿಯೆಗಳನ್ನು ರೂಪಾಂತರಿಸಿಕೊಳ್ಳು ವಲ್ಲಿಯೂ-ಅದರ ಪರಿಣಾಮವಾಗಿ ವರ್ತನವನ್ನು ಬೇರ್ಪಡಿಸಿ ಮಾರ್ಪಡಿಸಿ ಕೊಳ್ಳುವಲ್ಲಿಯೂ ಮನುಷ್ಯನ ಬುದ್ಧಿಶಕ್ತಿಯು ಮುಖ್ಯವಾದ ಭೂಮಿಕೆಯನ್ನು ವಹಿಸುವದೆಂದು ಹೇತುವಾದಿಗಳು ಪ್ರತಿಪಾದಿಸುತ್ತಾರೆ. ಆದರೆ ವರ್ತನವಾದಿಗಳು ಬುದ್ಧಿ ಎಂಬುದೊಂದು ಸ್ವತಂತ್ರ ಪ್ರೇರಕ ತತ್ವವು ಉಂಟೆಂದು ಒಪ್ಪಿ ಕೊಳ್ಳುವುದಕ್ಕೇ ಸಿದ್ಧರಿಲ್ಲ.

'ಹೊರ್ಮಿಕ್' ಮನೋವಿಜ್ಞಾನಿಗಳು ಹೇಳುವ ಈ ಉಪಪತ್ತಿಯ ಮೂಲಕ, ಮಿಕ್ಕ ಸಾಮಾಜಿಕ ಪ್ರವೃತ್ತಿಯುಳ್ಳ, ಇರಿವೆ ಜೇನ್ನೊಣಗಳಂಥ ಜಂತುಗಳಿಗಿಂತ-ಗುಂಪುಗೂಡಿ ಉಳಿಯುವ ಪ್ರಾಣಿಗಳಿಗಿಂತ-ಮನುಷ್ಯನ ನಡತೆಯು ಅಷ್ಟೊಂದು ಭಿನ್ನವಾದುದೂ, ಶ್ರೇಷ್ಠವಾದುದೂ ಏಕೆ ಆಗಿದೆಯೆಂಬದನ್ನು ಕುರಿತು ಇತ್ಯರ್ಥ ವಾಗುವದು. ಮನುಷ್ಯನು ಹುಟ್ಟಿ ಬರುವಾಗ ಬಹಳೇ ಅಪರಿಪಕ್ವನಾಗಿರುತ್ತಾನೆ; ಅಂದರೆ ಆತನ ಶಾರೀರಿಕ-ಮಾನಸಿಕ ಶಕ್ತಿಗಳಲ್ಲಿ ಏನೂ ಬೆಳವಣಿಗೆಯಾಗಿರುವದಿಲ್ಲ. ಆದರೆ ಒಂದು ಜೇನ್ನೊಣವಾಗಲಿ, ಒಂದು ಇರಿವೆಯಾಗಲಿ ಹಾಗಲ್ಲ; ಅದು ಹುಟ್ಟಿ ಬಂದಾಗಲೇ ಪೂರ್ಣವಾಗಿ ಬೆಳೆದು ಬಂದಿರುತ್ತದೆ. ಅದರ ಚಟುವಟಿಕೆಯ ಚಟಗಳ ರೀತಿಗಳು ಆ ಮೊದಲೇ ನಿಶ್ಚಿತವಾದಂತಿರುತ್ತವೆ. ಹುಟ್ಟಿದಂದಿನಿಂದಲೂ, ಜೇನ್ನೊಣ ಇಲ್ಲವೆ ಇರಿವೆಗಳ ನಡತೆಯ ಮಾದರಿಯು ಬಹುತೇಕವಾಗಿ ಒಂದೇ ಎರಕದಲ್ಲಿ ಹೊಯ್ದು ಅಚ್ಚುಗೊಂಡಂತಿರುತ್ತದೆ.

ಕೆಲವೊಂದು ಜಾತಿಯ ಪ್ರಾಣಿಗಳು ಒಂದುಗೂಡಿಕೊಂಡು ಮನುಷ್ಯನನ್ನು ತಮ್ಮ ಅಂಕೆಯಲ್ಲಿ ತಂದು. ಆಳಾಗಿಸಿಕೊಂಡ ಅದ್ಭುತ ಕತೆಗಳು ಜನಜಂಗುಳಿಯನ್ನು ಬೆರಗುಗೊಳಿಸಲು ಆಗ ಈಗ ಪ್ರಕಟವಾಗುತ್ತಿರುತ್ತವೆ! ಮತ್ತು ಸೋಜಿಗದ ಮಾತೆಂದರೆ ಇಂಥ ಕತೆಗಳನ್ನು ನಂಬುವ ಜನಗಳೂ ಉಂಟು! ಆದರೆ ಪಂಚ ತಂತ್ರದ ಪ್ರಪಂಚದ ಹೊರಗೆ ಇಂಥ ಸಂಗತಿಗಳು ಜರಗುವವೆಂದು ನಂಬುವುದು ಶುದ್ಧ ತಿಳಿಗೇಡಿತನ. ಏಕೆಂದರೆ, ಅಂಥ ಸಾಮಾಜಿಕ ಜಂತುಗಳು ತಮ್ಮ ಜನ್ಮ ಸಿದ್ಧವಾದ ವರ್ತನದ ದಾರಿ ಬಿಟ್ಟು ಮನುಷ್ಯನ ಗೊಡವೆಗೆ ಹೋಗುವವೆಂಬ ಮಾತೇ ನಿಸರ್ಗಕ್ಕೆ ವಿರುದ್ಧ! ಮನುಷ್ಯನ ನಡತೆಯಂತೆ ಬೇಕಾದಾಗ ಮಾರ್ಪಡುವ ನಡೆವಳಿ ಪಶುವರ್ಗಕ್ಕೆ ಸಾಧ್ಯವಿಲ್ಲ. ಪರಿಸ್ಥಿತಿಯಲ್ಲಿ ಹೆಚ್ಚು ಕಡಿಮೆಯಾದಂತೆ ಮನು ಷ್ಯನ ನಡತೆಯೂ ರೂಪಾಂತರಗೊಳ್ಳುವುದು. ಆದರೆ ಇತರ ಸಾಮಾಜಿಕ ಜಂತು ಗಳ ನಡತೆಯು ಹಾಗಲ್ಲ. ಅವುಗಳ ನಡತೆಯ ಪಡಿಯಚ್ಚು ಮೊದಲೇ ಗೊತ್ತಾ ದಂತಿರುತ್ತದೆ. ಆದ್ದರಿಂದ ಹೊಸದೊಂದು ಪರಿಸ್ಥಿತಿಯು ಒಮ್ಮೆಂದೊಮ್ಮೆ ಉಂಟಾದರೆ ಅದಕ್ಕೆ ಕೂಡಲೆ ತಕ್ಕಂತೆ ನಡೆಕೊಳ್ಳಲು ಮನುಷ್ಯೇತರ ಪ್ರಾಣಿಗಳು ಅಸಮರ್ಥವಾಗಿವೆ.

## ಹೇತುವಾದ ಮತ್ತು ವರ್ತನವಾದಗಳ ತುಲನೆ :

ಈವರೆಗಣ ವಿವೇಚನೆಯಿಂದ ಒಂದು ಮಾತು ಸ್ಪಷ್ಟವಾದಂತಿದೆ. ಹೇತುವಾದಿ (ಹೊರ್ಮಿಕ್) ಮನೋವಿಜ್ಞಾನಿಯ ದೃಷ್ಟಿಕೋನವು ವರ್ತನವಾದಿ ಮನೋ ವಿಜ್ಞಾನಿಗಿಂತ ತೀರ ಬೇರೆಯಾಗಿದೆ. ವರ್ತನವಾದಿಗೆ ಮೂಲಪ್ರವೃತ್ತಿಗಳು ಉಂಟು ಎಂಬುದೇ ಮಾನ್ಯವಿಲ್ಲ. ಆದರೆ ಹೇತುವಾದಿಯು ಎಲ್ಲ ಮಾನಸಿಕ ಜೀವನದ ಉಗಮವನ್ನು ಮೂಲಪ್ರವೃತ್ತಿಯಲ್ಲಿಯೇ ಹುಡುಕುವನು! ವರ್ತನವಾದಿಯು ಪ್ರಜ್ಞಾಬೋಧವುಳ್ಳ ತನ್ನತನದ ಅರಿವುಳ್ಳ ಮಾನಸಿಕ ಜೀವನವನ್ನು ಒಪ್ಪಿಕೊಳ್ಳು ವದೇನೋ ನಿಜ. ಆದರೆ ಸ್ವತಂತ್ರವಾದ ಕಾರ್ಯಪ್ರೇರಕವಾದ ಮನಸ್ತತ್ವವಲ್ಲಿ ಆತನಿಗೆ ನಂಬುಗೆಯೇ ಇಲ್ಲ! ಆದರೆ ಹೇತುವಾದಿ ('ಹೊರ್ಮಿಕ'' ಮನೋ ವಿಜ್ಞಾನಿಯು ಎಲ್ಲ ಜೀವನ ವ್ಯಾಪಾರಗಳ ಉಗಮದಲ್ಲಿ (ಮಾನವೀ ಜೀವನವಿರಲಿ, ಪಾಶವೀ ಜೀವನವಿರಲಿ) ಇರುವಿನ ಹೇತು ಪೂರ್ಣತೆಯ ಗೆಯ್ಮೆಯನ್ನೇ ಕಾಣುತ್ತಾನೆ. ಅತ್ಯಂತ ಕೀಳುತರಗತಿಯ ಜಂತುವಿನ ಬಾಳಿನಲ್ಲಿ ಕೂಡ ಒಂದು ಕಾರ್ಯ ಪ್ರೇರಕ ಹೇತುವಿದೆ ಎಂದು ಈತನು ತಿಳಿಯುತ್ತಾನೆ. ಆದರಿಷ್ಟೇ, ಅಂಥ ಬಾಳಿನಲ್ಲಿ ಈ ಹೇತುಮತ್ತ್ವವು ಅನೈಚ್ಛಿಕವಾಗಿ ಕೆಲಸ ಮಾಡುತ್ತದೆ. ತನ್ನ ಪ್ರವೃತ್ತಿಗಳ ಅರಿವು ಸಾಮಾನ್ಯವಾಗಿ ಜೀವಿಗಳಿಗಿಲ್ಲ. ಸೃಷ್ಟಿಯು ಮೂಲ

ಪ್ರವೃತ್ತಿಗಳ ಮೂಲಕವಾಗಿ ಪ್ರಾಣಿಮಾತ್ರಗಳಿಂದ ಒತ್ತಾಯಪಡಿಸಿ ತನ್ನ ಹೇತು ವನ್ನು ಪೂರ್ಣಮಾಡಿಕೊಳ್ಳುತ್ತದೆ. ಆದುದರಿಂದ ಅನೈಚ್ಛಿಕ ಹೇತುಮತ್ವವೆಂಬ ಮಾತು ವಿರೋಧಾಭಾಸವುಳ್ಳದ್ದೆಂದು ತಿಳಿದುಕೊಳ್ಳಬೇಕಾಗಿಲ್ಲ. ಜೀವನದಲ್ಲಿ ಮಾನವೀ ಇಚ್ಛೆಗಳಿಗೆ, ಮೀರಿದುದಾದರೂ ಬಾಳಿನ ಉದ್ದೇಶಕ್ಕೆ ಹೊಂದುವಂಥ ಕ್ರಿಯೆಗಳ ಉದಾಹರಣೆಗಳು ಅಡಿಗಡಿಗೆ ದೊರಕುತ್ತವೆ. ನಮ್ಮ ಪಚನಕ್ರಿಯೆಯ ಮೇಲೆ ನಮ್ಮ ಇಚ್ಛೆಯ ನಿಯಂತ್ರಣವೆಲ್ಲಿದೆ ? ನಮ್ಮ ದೇಹದೊಳಗಿನ ಗ್ರಂಥಿ ಗಳು ತಮ್ಮ ವಿಶಿಷ್ಟ ರಸಗಳನ್ನು ಕಾಲಕಾಲಕ್ಕೆ ತಕ್ಕ ಪ್ರಮಾಣವಲ್ಲಿ ಉಂಟುಮಾಡಿ ಸುರಿಸುವವು. ಅವುಗಳ ಮೇಲೆ ನಮ್ಮ ಇಚ್ಛೆಯ ಅಧಿಕಾರ ನಡೆಯುವದೇ ? ನಿರಂಕುಶ ಕವಿಗಳಂತೆಯೇ ಇಂಥ ಅಂತರಿಂದ್ರಿಯಗಳು ವರ್ತಿಸುವವು ! ಆದರೂ ಕಪಿಗಳು ಒಮ್ಮೊಮ್ಮೆ ಮರೆತು ಬಿಡುವಂತಹ ಉದ್ದೇಶವನ್ನು ಇವು ಯಾವಾ ಗಲೂ ಇಟ್ಟುಕೊಂಡು ನಡೆಯುವವು. ಮಾನವ ಪ್ರಾಣಿಯ ಬಾಳಿಕೆ ತಾಳಿಕೆಯೇ ಇವೆಲ್ಲ ಅನೈಚ್ಛಿಕ ವ್ಯಾಪಾರಗಳ ಹೇತುವು. ಪ್ರತಿಯೊಂದು ಕ್ಷಣಕ್ಕೂ ಮೇಲೆ ಹೇಳಿದ ಅಂತರಿಂದ್ರಿಯಗಳು ಅನ್ನವನ್ನು ಅರಗಿಸುವದೊಂದೇ ಹೇತುವಿ ಗಾಗಿ ದುಡಿಯುತ್ತಿರುವವು. ಇರಲಿ.

ಹೀಗೆ ವರ್ತನವಾದವೂ ಹೇತುವಾದವೂ ತಾತ್ವಿಕ ಭೂಮಿಕೆಯಲ್ಲಿ ಪೂರ್ಣವಾಗಿ ಪರಸ್ಪರ ವಿರುದ್ಧವಿದ್ದರೂ, ಬೇರೆ ತರದಿಂದ ಅವೆರಡರಲ್ಲಿ ತುಂಬ ಹೋಲಿಕೆ ಯುಂಟು. ಮೊದಲನೆಯ ಮಾತೆಂದರೆ, ಅವೆರಡೂ ಸಿದ್ಧಾಂತಗಳು ಪ್ರಾಮುಖ್ಯ ವಾಗಿ ವ್ಯವಹಾರಕ್ಕೆ ಉಪಯೋಗವಾಗುವಂಥವಿವೆ. ೧೯೧೨ನೇ ಇಸ್ವಿಯಲ್ಲಿ ಮೆಕ್ ಡುಗಲನು 'ಮನೋವಿಜ್ಞಾನ ನಡೆವಳಿಯ ಅಭ್ಯಾಸ' ಎಂಬ ಹೆಸರಿನದೊಂದು ಪುಸ್ತಕವನ್ನು ಪ್ರಕಟಿಸಿದನು; ಅದರಲ್ಲಿ ಮನೋವಿಜ್ಞಾನವನ್ನು 'ಸಜೀವ ವಸ್ತು ಗಳ ನಡೆವಳಿಯನ್ನು ಕುರಿತು (ಭೌತಿಕ) ಶಾಸ್ತ್ರ'ವೆಂದು ಹೇಳಿದ್ದಾನೆ. ನಡೆವಳಿ ಯನ್ನು ವಿವರಿಸುತ್ತ ವಿಮರ್ಶಿಸುತ್ತ ಕಟ್ಟಕಡೆಗೆ, ಎಲ್ಲ ವಿಧವಾದ ಸಜೀವ ವರ್ತ ನದ ಮುಖ್ಯ ಲಕ್ಷಣವೆಂದರೆ 'ಉದ್ದೇಶವ ಪ್ರಕಟೀಕರಣ ಇಲ್ಲವೆ ಒಂದು ಹೇತುವನ್ನು ಸಾಧಿಸಲು ಜರಗುವ ಸತತ ಪ್ರಯತ್ನ'ವೆಂದು ಪ್ರತಿಪಾದಿಸಿ, ಆತನು ವರ್ತನ ವಾದಿ ತನ್ನ ಹೇತುವಾದದಿಂದ (ಹೊರ್ಮಿಕ) ಪಂಥವು ಬೇರೆಯಾಗಿರುವದನ್ನು ಸ್ಥಾಪಿಸಿದನು.

ಇವೆರಡು ಸಾಂಪ್ರದಾಯಗಳಲ್ಲಿರುವ ಇನ್ನೊಂದು ಹೋಲಿಕೆಯುಂಟು. ವರ್ತನ ವಾದದಂತೆ ಹೇತುವಾದವೂ ಮೂಲಾನ್ವೇಷಿಯಾಗಿದೆ; ಅಂದರೆ ಇಬ್ಬರೂ ಮನೋ ವಿಜ್ಞಾನಿಗಳು ಮೂಲದಿಂದ ಸಂಶೋಧನವನ್ನು ಆರಂಭಿಸುವರು; ವರ್ತನವ

ಕುರಿತು ಅತ್ಯಂತ ಕೆಳಗಿನ ಅತ್ಯಂತ ಪ್ರಾಥಮಿಕವಾದ ಘಟಕಗಳನ್ನು ಗೊತ್ತು ಹಚ್ಚಿ, ಅಲ್ಲಿಂದ ಮುಂದುವರಿದು ಹೆಜ್ಜು ಹೆಜ್ಜು ಜಟಿಲವಾದ ವ್ಯವಸ್ಥಿತವಾದ ಬಗೆಬಗೆಯ ನಡೆವಳಿಗಳ ತಮ್ಮ ಸಂಶೋಧನವನ್ನು ಸಾಗಿಸಿದ್ದಾರೆ.

ಇವಲ್ಲದೇ ಇವೆರಡೂ ಮನೋವಿಜ್ಞಾನ ಶಾಖೆಗಳಲ್ಲಿ ತುಲನಾತ್ಮಕ ಪದ್ಧತಿಯನ್ನೇ ಸಂಶೋಧನೆಯಲ್ಲಿ ಉಪಯೋಗಿಸುತ್ತಾರೆ. ಮನುಷ್ಯ ಪ್ರಾಣಿಯಲ್ಲಿ ವ್ಯಕ್ತವಾದ ಮನೋವ್ಯಾಪಾರಕ್ರಮಗಳ ಮಾದರಿಗಳೇ ಕೆಳತರಗತಿಯ ಪ್ರಾಣಿಗಳಲ್ಲಿಯೂ ಕಾಣಿಸಿಕೊಳ್ಳುತ್ತವೆಂದು ಇಬ್ಬರೂ ಕಂಡುಹಿಡಿದಿದ್ದಾರೆ.

## ವ್ಯಕ್ತಿಯ ಮನೋವ್ಯಾಪಾರಕ್ಕೆ ಸಾಮಾಜಿಕ ತಡೆಗಳು :

ವ್ಯಕ್ತಿಯು ತನ್ನ ಪರಿಸ್ಥಿತಿಯೊಂದಿಗೆ ಸರಿಹೊಂದಿಸಿಕೊಳ್ಳುವದಕ್ಕಾಗಿ ಮಾಡಿ ಕೊಂಡ ಕೊನೆಯ ಒಪ್ಪಂದ ಒಡಂಬಡಿಕೆಗಳನ್ನು ಎರಡೂ ಸಾಂಪ್ರದಾಯ ದವರೂ ಪ್ರತಿಯೊಬ್ಬ ಮನುಷ್ಯನಲ್ಲೂ ಕಂಡುಕೊಳ್ಳುತ್ತಾರೆ. ಆದರೆ ಈ ಘಟನೆ ಯನ್ನು ಹೇತುವಾದಿಗಳು ಹೇಳುವಷ್ಟು ಜಿಗಿಕಟ್ಟು ನಿಟ್ಟಿನಿಂದ ವರ್ತನವಾದಿ ಗಳು ಸಾರುವದಿಲ್ಲ. ಆದರೂ ಅವರು ಒಪ್ಪಿಕೊಳ್ಳುವ ಸಾಂಕೇತಿಕ ಪ್ರತಿಕ್ರಿಯೆ ಯೆಂದರೆ ಪರ್ಯಾಯವಾಗಿ ಪರಿಸ್ಥಿತಿಯೊಂದಿಗೆ ಆದ ಒಪ್ಪಂದ ಸಮನ್ವಯವೇ ಸರಿ. ಏಕೆಂದರೆ ವ್ಯಕ್ತಿಗೆ ಮೂಲಭೂತವಲ್ಲದ ಜನ್ಮಸಿದ್ಧವಲ್ಲದ ಎಲ್ಲ ಪ್ರಚೋದನೆ-ಪ್ರತಿಕ್ರಿಯೆಗಳನ್ನು ವ್ಯಕ್ತಿಯ ಪರಿಸ್ಥಿತಿಯೇ ಪೂರೈಸುವದು. ಈ ಪರಿಸ್ಥಿತಿಯಲ್ಲಿ ಆ ವ್ಯಕ್ತಿಯು ನಿಂತು ನಡೆಯುವ ಸಮಾಜವೂ ಒಳಪಟ್ಟಿದೆ.

ವರ್ತವಾದಿಯ ದೃಷ್ಟಿಯಿಂದ ವ್ಯಕ್ತಿ–ಪರಿಸ್ಥಿತಿಗಳ ನಡುವಿನ ಈ ಒಡಂಬಡಿಕೆಯು–ಈ ಸಮನ್ವಯವು ಶಾರೀರಿಕ ವ್ಯಾಪಾರಕ್ರಮದ ಫಲವಾಗಿದೆ. ಆದರೆ ಹೊರ್ಮಿಕ್ ಮನೋವಿಜ್ಞಾನಿಯ ದೃಷ್ಟಿಯಿಂದ ಈ ಸಮನ್ವಯವನ್ನು ಮನುಷ್ಯನ ಮೂಲಭೂತ ಪ್ರವೃತ್ತಿಗಳ ಮತ್ತು ಆತನು ಒಳಪಡಬೇಕಾದ ಸಮಾಜದ ಬೇಡಿಕೆಗಳ ನಡುವೆ ಎಂದೆಂದಿಗೂ ಎಡೆಬಿಡದೆ ಹೋರಾಟವು ನಡೆದಿದೆ. ಈ ತಿಕ್ಕಾಟ, ಹೋರಾಟ ಗಳಲ್ಲಿ ಆಗಾಗ್ಗೆ ಒದಗುವ ಒಪ್ಪಂದಗಳೆಂಬ ದೃಷ್ಟಿಯಿಂದ ಮಾನವನ ನಡೆವಳಿ ಯನ್ನು ಇವರು ನಿರೀಕ್ಷಿಸುತ್ತಾರೆ. ಎಲ್ಲ ಸಾಮಾಜಿಕ ಜೀವನವೂ, ಪ್ರತಿಯೊಂದು ನಾಗರಿಕತೆಯೂ, ಸಂಸ್ಕೃತಿಯೂ, ಮನುಷ್ಯನ ಸತತ ಪ್ರಯತ್ನದ ಫಲವಾಗಿದೆ. ವ್ಯಕ್ತಿ ಮತ್ತು ಸಮಾಜದ ಹೋರಾಟವೆಂಬ ಸಮುದ್ರಮಥನದಲ್ಲಿ ಹೊರಟ

ಅಮೃತವೇ ಇಂದಿನ ಮಾನವ ಸಂಸ್ಕೃತಿ. ಮಾನವನ ಒತ್ತರದ ಒತ್ತಾಯದ ಪ್ರೇರಣೆಯನ್ನು ಆತನ ಮೂಲಪ್ರವೃತ್ತಿಗಳೇ ಪೂರೈಸುತ್ತವೆ. ಆದರೂ ವ್ಯಕ್ತಿಯು ತಾನೋರ್ವ ವ್ಯಕ್ತಿಯೆಂಬ ಬಿಡಿನೋಟವನ್ನು ಬಿಟ್ಟು, ಕುಟುಂಬ, ಕುಲಸಮಾಜ, ನಾಡು ಮುಂತಾದ ಯಾವದೇ ರೂಪದ ಸಾಂಘಿಕ–ಸಾಮಾಜಿಕ ವ್ಯಾಪಾರದಲ್ಲಿ ಇತರ ವ್ಯಕ್ತಿಗಳೊಡನೆ ಕೂಡಿಕೊಂಡು ಇರಲು ಆರಂಭಿಸಿದ ಕೂಡಲೇ, ಆತನಿಗೆ, ತನ್ನ ಮೂಲಪ್ರವೃತ್ತಿಗಳ ಪ್ರೇರಣೆಗಳನ್ನು ಬಹಳ ಮಟ್ಟಿಗೆ ಹತ್ತಿಕ್ಕಿ ನಡೆದು ಕೊಳ್ಳಬೇಕಾಗುವದು; ಇಲ್ಲವೆ ಆ ಮೂಲಪ್ರವೃತ್ತಿಗಳನ್ನು ಮಾರ್ಪಡಿಸಿಕೊಳ್ಳ ಬೇಕಾಗುವದು ಅನಿವಾರ್ಯ, ಕಟುಸತ್ಯ, (೧) ಕೆಲವು ಪ್ರವೃತ್ತಿಗಳನ್ನು ಅಂಶತಃ ದಮನ ಮಾಡಿಕೊಳ್ಳಬೇಕಾಗುವದು: (೨) ಉಳಿದ ಕೆಲವುಗಳ ಸಹಜವಾದ ಚಟುವಟಿಕೆಗಳನ್ನು ಬೇರೆ ದಾರಿಗೆ ಹಚ್ಚಬೇಕಾಗುವದು; (೩) ಮಿಕ್ಕ ಕೆಲವು ಪ್ರವೃತ್ತಿಗಳನ್ನು ಮಾತ್ರ ಉತ್ತೇಜನಕೊಟ್ಟು ಬಲಿಸಿ ಬೆಳಿಸಿಕೊಳ್ಳಬೇಕಾಗುವದು.

ಕೆಲವು ಲೇಖಕರು ಮೂಲಪ್ರವೃತ್ತಿಗಳ ಈ ಮೂರು ವಿಧಗಳನ್ನು ಮೂರು ಜಾತಿಗಳಾಗಿ ವಿಭಾಗಿಸುತ್ತಾರೆ. ಸ್ವಾರ್ಥಪರ, ಸಂಭೋಗಪರ, ಮತ್ತು ಸಮಾಜ ಪರವೆಂಬುವೇ ಈ ಮೂರು ವರ್ಗಗಳು. ಈ ದೃಷ್ಟಿಯಿಂದ ನೋಡಿದರೆ ಸಮಾಜದ ಸ್ವಾಸ್ಥ್ಯ ಮತ್ತು ಸ್ಥಿರತೆಯು ಉಳಿಯಬೇಕಾದರೆ ಸ್ವೈರವಾದ–ಅನಿಯಂತ್ರಿತವಾದ ಸಂಭೋಗ ಪ್ರವೃತ್ತಿಗಳನ್ನು ದಮನ ಮಾಡಲೇಬೇಕಾಗುತ್ತದೆ. ಗೀತೆಯ ಮಾತಿನಲ್ಲಿ ಹೇಳುವದಾದರೆ ಕಾಮವನ್ನು ಧರ್ಮಕ್ಕೆ ಅವಿರೋಧವಾಗಿ ಬಳಸಿಕೊಳ್ಳಬೇಕಾಗುತ್ತದೆ. ಅದೇ ಮೇರೆಗೆ ಸ್ವಾರ್ಥಪರವಾದ ಮೂಲಪ್ರವೃತ್ತಿ ಗಳನ್ನು ವಿಚಾರ, ಇಚ್ಛಾಶಕ್ತಿಗಳ ಬಲದಿಂದ ಮಾರ್ಪಡಿಸಿಕೊಳ್ಳಬಹುದು. ಇದಕ್ಕಾಗಿ ಸ್ವಾರ್ಥದ ಸಂಕುಚಿತ ಕ್ಷೇತ್ರವನ್ನು ವಿಸ್ತಾರಗೊಳಿಸಿ, ಪರಾರ್ಥಕ್ಕಾಗಿ ಎಂದರೆ ವಿಶಾಲವಾದ ಸ್ವಾರ್ಥಕ್ಕಾಗಿ ಹೆಣಗಾಡಲು ಕಲಿಯಬೇಕಾಗುತ್ತದೆ. ಮತ್ತು ಇದಕ್ಕೂ ಉಚ್ಚತರಗತಿಯವಾಗಿರುವ ಸಮಾಜಪರ ಪ್ರವೃತ್ತಿಗಳನ್ನು ಜಾಣ್ಮೆಯಿಂದ ಜಾಗೃತಗೊಳಿಸಿ, ಪ್ರೋತ್ಸಾಹಿಸಿ ಪೋಷಿಸಬೇಕಾಗುತ್ತದೆ.

ನಿಜವಾಗಿಯೂ ಅತ್ಯಂತ ಸೂಕ್ಷ್ಮವಾಗಿರುವ ಮತ್ತು ಮಾತಿಗೆ ನಿಲುಕದ ವಿಷಯ ವನ್ನು ಇಲ್ಲಿ ಕೆಲವು ಸ್ಥೂಲವಾದ ವಿಧಾನಗಳಲ್ಲಿ ಹೇಳದೆ ಗತಿಯಿಲ್ಲವಾಗಿವೆ. ಅಲ್ಪ ಸ್ವಲ್ಪ ವಿವರಣ ಸ್ವಾರ್ಥದ, ಸಂಭೋಗದ ಮತ್ತು ಸಮಾಜಪರ ಪ್ರವೃತ್ತಿಗಳ ಕುರಿತು ಹೇಳಿದ ಸಂಗತಿಗಳನ್ನು ವಿಪರೀತವಾಗಿ ತಿಳಕೊಳ್ಳಕೂಡದು. ಸಂಭೋಗ ಪರವೃತ್ತಿಗಳನ್ನು ಪೂರ್ಣವಾಗಿ ಹತ್ತಿಕ್ಕಿ ಒತ್ತಿಡಬೇಕೆಂಬ ಅರ್ಥವಲ್ಲ; ಅದೇ ಮೇರೆಗೆ ಸಂಭೋಗಪ್ರವೃತ್ತಿಗಳಿಂದ–ಕಾಮವಾಸನೆಯಿಂದ ಮೂಡುವ ಭಾವನೆಗಳು

ಸಮಾಜವನ್ನು ಕಟ್ಟುವಲ್ಲಿ ಮಹತ್ವದ ಪಾಲುಗಾರರಾಗುವವೆಂಬ ಮಾತನ್ನು ಅಲ್ಲಗಳೆಯಬೇಕೆಂದಿಲ್ಲ.

ವರ್ತನವಾದವೂ, ಹೇತುವಾದವೂ-ಕೂಡಿಯೇ, ನಮ್ಮ ಪ್ರತಿನಿತ್ಯದ ಜೀವನ ಸಮಸ್ಯೆಗಳನ್ನು ಬಿಡಿಸಲು ಉಪಯುಕ್ತವಾಗಿವೆ. ಇದರಿಂದ ಮನುಷ್ಯನಿಗೆ ಆತನ ಬಾಳಿಗೆ ಎಷ್ಟೋ ಹೊಸ ಬೆಳಕು ಹೊಸ ಸೊಗಸೂ ದೊರೆತುದೂ ಉಂಟು. ಇದು ಯುಕ್ತವೇ ಸರಿ. ಮನುಷ್ಯನ ವರ್ತನದ ವಿದ್ಯಮಾನಗಳನ್ನು ಕುರಿತು ಮಾಡಿದ ಆಳವಾದ ಪರಿಶೀಲನ ಪರಾಮರ್ಶನಗಳು (ಶಾಸ್ತ್ರೀಯ ಪದ್ಧತಿಯಲ್ಲಿ ಸಾಗಿಸಿದ ಅಭ್ಯಾಸ-ಅಧ್ಯಯನಗಳು) ನಮ್ಮ ನಡತೆಯ ಸರಿಯಾದ ಗೊತ್ತುಗುರಿಗಳನ್ನು ಕಂಡುಹಿಡಿಯುವಲ್ಲಿ ಬಹಳ ಉಪಯುಕ್ತವಾದ ಜ್ಞಾನವನ್ನು ನಮಗೆ ಕೊಡುವವೆಂಬುವಲ್ಲಿ ಸೋಜಿಗವಿಲ್ಲ. ಇವೆರಡೂ ಸಂಪ್ರದಾಯಗಳು ವ್ಯಾವಹಾರಿಕ ಮಹತ್ವದ ಅತ್ಯಂತ ಲಾಭದಾಯಕವಾದ ಎಷ್ಟೋ ಜ್ಞಾನವನ್ನು ದಯಪಾಲಿಸಿವೆ. ಆದರೆ, ವರ್ತನವಾದಿ ಮನೋವಿಜ್ಞಾನವು, ಮುಖ್ಯವಾಗಿ ಚಿಕ್ಕ ಮಕ್ಕಳ ಬಾಳಿನ ಒಗಟುಗಳನ್ನು ಬಿಡಿಸುವ ಮಟ್ಟಿಗೆ ಮರ್ಯಾದಿತವಾಗಿವೆ. ಹೇತುವಾದ (ಹೊರ್ಮಿಕ್) ಮನೋವಿಜ್ಞಾನವು ಹೆಚ್ಚಾಗಿ, ಸಾಮಾಜಿಕ ಸಮಸ್ಯೆಗಳನ್ನು ಸ್ಪಷ್ಟವಾಗಿಯೂ ಸರಳವಾಗಿಯೂ ವಿಮರ್ಶಿಸುವದರಲ್ಲಿ ತೊಡಗಿದೆ.

ಆಧುನಿಕ ಮನೋವಿಜ್ಞಾನದ ಈ ಎರಡು ಪ್ರಮುಖವಾದ ವಿಚಾರ ಧಾರೆಗಳ ಪರಿಚಯವನ್ನು ಕೆಲವೊಂದು ಸ್ಥೂಲ ಪರಿಚಯವನ್ನು ವಾಚಕರಿಗೆ ಮಾಡಿ ಕೊಟ್ಟಂತಾಯಿತು. ವಿಲಿಯಮ ಜೇಮ್ಸನ ಕಾಲದಿಂದ ಕವಲೊಡೆದು ಎರಡು ಮಾರ್ಗವಾಗಿ ನಡೆದುಬಂದ ಮನೋವಿಜ್ಞಾನದ ಶಾರೀರಿಕ ಮತ್ತು ಆಂತರಂಗಿಕ ಬದಿಗಳನ್ನು ಪ್ರಧಾನವಾಗಿಟ್ಟುಕೊಂಡ ವಾದಪರಂಪರೆಗಳು, ವ್ಯಾವಹಾರಿಕ ಜೀವನದ ಅಂಗಣದಲ್ಲಿ ಒಂದುಗೂಡುವವೆಂದು ಕಂಡುಕೊಂಡಂತಾಯಿತು. ಆದುದರಿಂದ ಅವೆರಡರ ಕುರಿತು ವಾಚಕರು ಸಮನ್ವಯದೃಷ್ಟಿಯಿಂದಲೇ ನೋಡುವದು ಸಮಂಜಸವೆಂದು ಬೇರೆ ಹೇಳಬೇಕಾಗಿಲ್ಲ. 

# ೩ ಬುದ್ಧಿಯ ಸ್ವರೂಪ

## ಜ್ಞಾನಮೂಲದ ಮೂರು ನಿಯಮಗಳೂ, ಸ್ಪಿಯರಮನ್ನನೂ :

ಮೂಲಪ್ರವೃತ್ತಿಗಳ ಪ್ರಾಥಮಿಕ ಪ್ರತಿಕ್ರಿಯೆಗಳನ್ನು ಮಾರ್ಪಡಿಸುವಲ್ಲಿ ಬುದ್ಧಿಯು ಮಹತ್ವದ ಭಾಗವಹಿಸುತ್ತದೆಂದು 'ಹೊರ್ಮಿಕ್' ಮನೋವಿಜ್ಞಾನಿಗಳು ಪ್ರತಿಪಾದಿಸುವರೆಂದು ಹಿಂದೆ ಬರೆದಿದೆಯಷ್ಟೇ. ಇಲ್ಲಿ ಆ ಬುದ್ಧಿಯ ಸ್ವರೂಪವನ್ನು ಕುರಿತು–ಗುಣಧರ್ಮಗಳ ಕುರಿತು ಆದಷ್ಟು ಸ್ವಲ್ಪದರಲ್ಲಿ ವಿವೇಚಿಸಬೇಕೆಂದಿದ್ದೇವೆ.

ಜಂಗ ಎಂಬ ವಿಖ್ಯಾತ ಮನೋವಿಜ್ಞಾನಿಯು ಮನುಷ್ಯನಲ್ಲಿರುವ ಸಿಸೃಕ್ಷೆಯ ಪ್ರವೃತ್ತಿಗೆ (ರಚನಾಶೀಲ ಮನೋವೃತ್ತಿಗೆ) ಹೆಚ್ಚು ಮಹತ್ವವನ್ನು ಕೊಡುತ್ತಾನೆ. ಈತನು ಮನಸ್ಸಿನ ಮುಖ್ಯ ಧರ್ಮಗಳಲ್ಲಿ–ನಿಯತಕಾರ್ಯಗಳಲ್ಲಿ–ನಾಲ್ಕು ಅಂಗಗಳೆಂದು ಕಲ್ಪಿಸುತ್ತಾನೆ. ವಿಚಾರ, ಭಾವನೆ, ಸಂವೇದನೆ ಮತ್ತು ಅತಃಪ್ರೇರಣೆ ಎಂಬಿವೇ ಈ ನಾಲ್ಕು ಭೇದಗಳು. ಈ ಸಿದ್ಧಾಂತವು ಮನೋವಿಜ್ಞಾನದ ಇನ್ನೊಂದು ಸಾಂಪ್ರದಾಯದತ್ತ ನಮ್ಮನ್ನು ಒಯ್ಯುತ್ತದೆ. ಈ ಸಾಂಪ್ರದಾಯಕ್ಕೆ 'ನಿಯೋಜನೆಟಿಕ್' ಎಂಬ ಒಂದು ಬಿರುಸಾದ ಅಂದಗೇಡಿಯಾದ ಹೆಸರಿದೆ. ಈ ಸಾಂಪ್ರದಾಯದಲ್ಲಿ ಸಂಶೋಧನೆಯ ಮುಖ್ಯ ವಿಷಯವೆಂದರೆ ಬುದ್ಧಿಯ ಸ್ವರೂಪವು.

'ನಿಯೋಜನೆಟಿಕ್' ಎಂಬುದರ ಅರ್ಥವು ಜ್ಞಾನದ ಮೂಲಕ್ಕೆ ಸಂಬಂಧಪಟ್ಟದ್ದೆಂದು. ಲಂಡನ ವಿಶ್ವವಿದ್ಯಾಲಯದಲ್ಲಿ ಮಾನಸ್ತತ್ವಜ್ಞಾನದ ಹಿಂದಿನ ಆಚಾರ್ಯರಾದ ಚಾರ್ಲಸ್ ಎಡ್ವರ್ಡ ಸ್ಪಿಯರಮನ್ ಎಂಬವನು ಜ್ಞಾನದ ಮೂಲವನ್ನು ಕುರಿತು ಇರುವ ಸಿದ್ಧಾಂತಗಳನ್ನು ಅಥವಾ ನಿಯಮಗಳನ್ನು ರೂಪಗೊಳಿಸುತ್ತಾನೆ. ಅವು ಈ ರೀತಿಯಾಗಿವೆ :–

(೧) ಮನುಷ್ಯನ ಬಾಳಿನ ಯಾವದೇ ಅನುಭವವು ಕೂಡಲೇ, ಅದರ ಲಕ್ಷಣಗಳ ಮತ್ತು ಅದನ್ನು ಅನುಭವಿಸುವವನ ವಿಷಯವಾಗಿ ಅದು ಅರಿವನ್ನು (ಜ್ಞಾನವನ್ನು) ಉಂಟು ಮಾಡುತ್ತದೆ.

ಅಂದರೆ, ನಮ್ಮ ಅನುಭವದಲ್ಲಿ ಬರುವ ಯಾವದೇ ಸಂಗತಿಯನ್ನು ಅದರ ಘಟಕಗಳನ್ನೊಳಗೊಂಡ ಇಡಿಯಾದ ರೂಪದಲ್ಲಿ ತಿಳಿದುಕೊಳ್ಳುವದರ ಕಡೆಗೆ ನಮ್ಮ

ಒಲವು ಇರುತ್ತದೆ. ಉದಾಹರಣಾರ್ಥವಾಗಿ, ನಾವು ಶಬ್ದ, ರೂಪ, ರುಚಿ ಮತ್ತು ಗಂಧಗಳನ್ನು ವಿಂಗಡಿಸಿ ಅರಿತುಕೊಳ್ಳುತ್ತೇವೆ ಮತ್ತು ಅದೇ ಸಮಯ, ನಮ್ಮ ಅನುಭವದ ಈ ಘಟಕಗಳ ಅರಿವು ನಮಗೆ ಆಗುತ್ತಿರುವಾಗಲೇ, ಈ ಅರಿವು ಮಾಡಿಕೊಳ್ಳುವ ನಮ್ಮ ಸ್ವಂತ ವ್ಯಕ್ತಿತ್ವದ ತಿಳುವಳಿಕೆಯು ಕೂಡ ನಮಗೆ ಸ್ಪಷ್ಟವಾಗಿ ಆಗುತ್ತದೆ. ಜ್ಞೇಯದೊಂದಿಗೆಯೇ ನಮ್ಮ ಜ್ಞಾತೃತ್ವದ ಜ್ಞಾನವೂ ನಮಗೆ ಆಗುತ್ತದೆ.

೨) ನಮಗೆ ಒದಗುವ ಅನುಭವದ ಎರಡು ಇಲ್ಲವೆ ಹೆಚ್ಚು ಲಕ್ಷಣಗಳು ನಮ್ಮ ಮನಸ್ಸಿಗೆ ಮೂಡಿದರೆ, ಕೂಡಲೆ ಅವುಗಳ ನಡುವಿನ ಸಂಬಂಧಗಳ ಜ್ಞಾನವೂ ತಲೆದೋರುತ್ತದೆ.

ಅಂದರೆ, ನಮ್ಮ ಅನುಭವದ ಘಟಕಗಳ ಅರಿವು ನಮಗೆ ಆಗುತ್ತಿರುವಾಗಲೆ ಅವುಗಳೊಳಗಿನ ಸಾಧರ್ಮ್ಯ-ವೈಧರ್ಮ್ಯ, ಸಾಮ್ಯ-ವಿರೋಧ, ತಾರತಮ್ಯ ಮುಂತಾದ ಸಂಬಂಧಗಳನ್ನು ಲಕ್ಷ್ಯದಲ್ಲಿ ತಂದುಕೊಳ್ಳುವದರ ಕಡೆಗೆ ನಮ್ಮ ಒಲವು ಇರುತ್ತದೆ.

(೩) ಇಂಥ ಅನುಭವದಲ್ಲಿಯ ಯಾವದಾದರೊಂದು ಘಟಕದ ಲಕ್ಷಣವೂ ಅದರ ಸಂಬಂಧವೂ ಮನಸ್ಸಿನೆದುರು ನಿಂತರೆ, ಅದಕ್ಕೆ ಸಂಬಂಧಿಸಿದ ಬೇರೊಂದು ಲಕ್ಷಣವೂ ಘಟಕವೂ ಕೂಡಲೇ ತಿಳಿದುಬರುವವು.

ಅಂದರೆ, ನಮ್ಮ ಅನುಭವದ ಘಟಕಗಳು ಎರಡನೇ ನಿಯಮದಂತೆ ಕೆಲವೊಂದು ವರ್ಗಗಳಾಗಿ ಒಂದಕ್ಕೊಂದು ಸಾಪೇಕ್ಷವಾಗಿ ಹೊಂದಿಕೊಂಡು ಇಲ್ಲವೆ ಹೋಲುವಂತೆ ಮನಸ್ಸಿನಲ್ಲಿ ಮೂಡುವವಾದ್ದರಿಂದ, ಯಾವದಾದರೊಂದು ಘಟಕವನ್ನು ಅದರ ನಿಶ್ಚಿತ ಸಂಬಂಧದೊಡನೆ ನೋಡಿದೆವೆಂದರೆ ಅದಕ್ಕೆ ಹೊಂದಿಕೊಂಡಿರಬೇಕಾದ ಇನ್ನೊಂದು ಘಟಕವೂ ನಮ್ಮ ವಿಚಾರದಲ್ಲಿ ಹೊಳೆಯುತ್ತದೆ. ಉದಾಹರಣಾರ್ಥವಾಗಿ, 'ಅಗಲವು...ನ ವಿರುದ್ಧವಾಗಿದೆ' ಎಂಬ ನಡುವೆ ಸ್ಥಳ ತುಂಬಿ ಪೂರ್ಣ ಮಾಡಬೇಕಾದ ಒಂದು ವಾಕ್ಯವನ್ನು ಕೊಟ್ಟರೆ ಯಾವದೇ ಸಾಧಾರಣ ತಿಳುವಳಿಕೆಯ ವ್ಯಕ್ತಿಯೂ, 'ಇಕ್ಕಟ್ಟಿನ' ಎಂಬ ಶಬ್ದವನ್ನು ಪೂರೈಸದಿರಲಾರನು. ಇದು ಬರೇ ಪ್ರಾಥಮಿಕ ರೂಪದ ಉದಾಹರಣೆಯು. ಈ ಗುಣಧರ್ಮವೇ ಮಾನಸಿಕ ವ್ಯಾಪಾರದ ಉನ್ನತ ಪಾತಳಿಯ ಮೇಲೆ ಎಲ್ಲ ತರದ ಹೊಸ ಶೋಧಗಳಿಗೆ ಕಾರಣವಾಗಿದೆ.

ಜ್ಞಾನವು ಹೇಗೆ ಮಾರ್ಪಡುವದೆಂಬುದರ ವ್ಯಾಖ್ಯೆಯನ್ನು ಈ ಮೂರು

ಮಹತ್ವದ ನಿಯಮಗಳು ಮಾಡುತ್ತವೆ. ಈ ಮೂರು ಮಾನಸಿಕ ವ್ಯಾಪಾರ ಕ್ರಮಗಳು ಆಚಾರದಲ್ಲಿ ಬಂದವೆಂದರೆ ಆಗುವ ಪರಿಣಾಮವೇ ಜ್ಞಾನವು. ಅಂಥ ಜ್ಞಾನವು ಅವಶ್ಯವಾಗಿಯೂ ಕೇವಲ ಸರಿಯಾದುದಿರಬೇಕು.

ಆದರೆ ನಮ್ಮ ತಿಳುವಳಿಕೆಯ ಮೇರೆಗೆ ಮನುಷ್ಯನ ಜ್ಞಾನವು 'ಕೇವಲ ಸರಿ' ಯಾಗುವಿಕೆಯಿಂದ ಹಲವು ಸಲ ಎಷ್ಟೋ ಹರದಾರಿ ದೂರವಿರುತ್ತದೆ! ಸಾಮಾನ್ಯವಾಗಿ ಅದು ಕುಂದುಕೊರತೆಗಳಿಂದಲೂ, ದೋಷಗಳಿಂದಲೂ ತುಂಬಿ ರುತ್ತದೆ. ಇಂಥ ಅವಸ್ಥೆಗೆ ಯಾರು ಹೊಣೆಗಾರರು? ಸಮರ್ಪಕ ಜ್ಞಾನವನ್ನು ನಿಶ್ಚಿತಮಾಡುವ ನಿಯಮಗಳಿದ್ದರೂ ಹೀಗೆ ಸಾಮಾನ್ಯವಾಗಿ ಸದೋಷವಾದ ಜ್ಞಾನವೇ ಉಂಟಾಗಲು ಕಾರಣವೇನು?

ಆ ನಿಯಮಗಳನ್ನು ತಿರುಗೊಮ್ಮೆ ಓದಿನೋಡಿದರೆ ಅವುಗಳಲ್ಲಿಯ ಒಂದು ಮಾತು ನೆನಪಿನಲ್ಲಿ ಬರುವದು. 'ಜ್ಞಾನವನ್ನು ಪ್ರೇರಿಸು'ತ್ತದೆ. ಇಲ್ಲವೇ 'ತಿಳಿದುಕೊಳ್ಳುವದರ ಕಡೆ ಒಲವು' ಇರುತ್ತದೆ ಎಂಬ ಶಬ್ದಗಳು ಪ್ರತಿ ನಿಯಮ ದಲ್ಲಿಯೂ ಉಪಯೋಗಿಲ್ಪಟ್ಟಿವೆ. ಈ 'ಪ್ರೇರಣೆ'ಯು 'ಈ ಒಲವು' ಯಾವ ಪ್ರಮಾಣದಲ್ಲಿ ಕೆಲಸ ಮಾಡುವದೆಂಬುವದು ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾ ಗುವದೆಂಬುವದು ನಮಗಿರುವ ಬುದ್ಧಿಯ ಪರಿಮಾಣದ ಮೇಲೂ ಆ ಬುದ್ಧಿಯು ಒಳಪಡುವ ಸಂಕೇತ ಅವಸ್ಥೆಗಳ ಮೇಲೂ ಅವಲಂಬಿಸಿದೆ. ಈ ಎಲ್ಲ ಬೌದ್ಧಿಕ ವ್ಯಾಪಾರ ಕ್ರಮಕ್ಕೆ-ಕಾರ್ಯ ಕ್ಷೇತ್ರಕ್ಕೆ ಅನ್ವಯಿಸುವಂತೆ ಸ್ಪಿಯರಮನ್ನನು ಇನ್ನೂ ಐದು ನಿಯಮಗಳನ್ನು ರೂಪಗೊಳಿಸಿರುತ್ತಾನೆ. ಮೇಲೆ ಕೊಟ್ಟ ಮೂರು ನಿಯಮಗಳು ಬುದ್ಧಿಯ ಕಾರ್ಯದ ಗುಣವನ್ನೇ ಕುರಿತು ಇದ್ದುದ ರಿಂದ ಈ ಹೊಸ ಐದು ನಿಯಮಗಳಿಗೆ ಆತನು ಪಾರಿಮಾಣಿಕ ತತ್ವಗಳೆಂದು ಹೆಸರು ಕೊಟ್ಟಿದ್ದಾನೆ.

## ಬುದ್ಧಿಯ ಐದು ಪಾರಿಮಾಣಿಕ ತತ್ವಗಳು:

ಮೊದಲನೇ ತತ್ವವು ಮಾನಸಿಕ ಚೈತನ್ಯಶಕ್ತಿಯದು, ಪ್ರತಿಯೊಬ್ಬನಿಗೂ ಕೆಲವೊಂದು ಪ್ರಮಾಣದಲ್ಲಿ ಮಾನಸಿಕ ಕಾರ್ಯಶಕ್ತಿಯು ಇರುತ್ತದೆ. ಕೆಲವರು ಇತರರಿಗಿಂತ ಹೆಚ್ಚು ಶಕ್ತಿಯನ್ನು ಹೊಂದಿರಬಹುದು. ಯಾವದೆ ಈರ್ವರು ವ್ಯಕ್ತಿಗಳು ಒಂದೇ ಪ್ರಮಾಣದಲ್ಲಿ ಮಾನಸಿಕ ಶಕ್ತ್ರಯನ್ನು ಪಡೆಯಲಾರರು. ಆದರೆ ಸೋಜಿಗದ ಸಂಗತಿಯೇನಂದರೆ ಓರ್ವ ವ್ಯಕ್ತಿಯಲ್ಲಿದ್ದ ಮಾನಸಿಕ ಚೈತನ್ಯ ಶಕ್ತಿಯು ಹೆಚ್ಚಿರಲಿ,

ಕಡಿಮೆ ಇರಲಿ, ಕೊನೆಯು ತನಕ ಇದಷ್ಟೇ ಇರುತ್ತದೆ. ಅದರ ಪರಿಮಾಣವು ಹೆಚ್ಚು ಇಲ್ಲವೇ ಕಡಿಮೆಯಾಗುವದಿಲ್ಲ. ಅದರ ಗುಣದಲ್ಲಿ ವ್ಯತ್ಯಾಸವಾಗಬಹುದು. ಯಾವದೊಂದು ಕಾಲದಲ್ಲಿ, ಮತ್ತೊಂದು ಕ್ಷಣಕ್ಕಿಂತ ಆ ಶಕ್ತಿಯು ಹೆಚ್ಚಿನ ಸುಸ್ಥಿತಿಯಲ್ಲಿ, ಸುಧಾರಿಸಿದ ತರಗತಿಯಲ್ಲಿ ಇರಬಹುದು. ಆದರೆ, ಆ ಶಕ್ತಿಯು ಒಮ್ಮೆ ಆದ ಪೂರೈಕೆಯು ಒಂದೇ ಸಮನಾಗಿರುವದು.

ಎರಡನೆಯ ತತ್ವವು ಗ್ರಹಣಶಕ್ತಿ; ಸ್ಮರಣಶೀಲತೆಯುದು. ಸರಳ ಮಾತಿನಲ್ಲಿ ಹೇಳುವದಾದರೆ, ಯಾವದೇ ಮಾನಸಿಕ ವ್ಯಾಪಾರ ಕ್ರಮವು ಹೆಚ್ಚು ಹೆಚ್ಚು ಬಾರಿ ಜರುಗಿದಂತೆ ಹೆಚ್ಚು ಹೆಚ್ಚು ಸುಲಭವಾಗಿ ಸಹಜವಾಗಿ ಒದಗುತ್ತದೆ. ಪುನರಾವೃತ್ತಿಯ ಪ್ರಮಾಣದಲ್ಲಿ ಯಾವದೊಂದು ಮಾನಸಿಕ ಕ್ರಿಯೆಯ ನಿರಾಯಾಸತೆಯು ಬೆಳೆಯುವದು.

ಮೂರನೆಯ ತತ್ವವು ಇದಕ್ಕೆ ವಿರುದ್ಧವಾದುದು. ಅದು ಬಳಲಿಕೆ–ಶ್ರಮಖೇದದ ತತ್ವವು. ಇದಕ್ಕೆ ಅನುಸರಿಸಿ, ಕೆಲವೊಂದು ಮಾನಸಿಕ ವ್ಯಾಪಾರ ಕ್ರಮಗಳು ಪುನರಾವೃತ್ತಿಯಾಗಲಾರವು–ಮತ್ತೆ ಮತ್ತೆ ಒದಗುವ ಕಡೆಗೆ ಅವುಗಳ ಒಲವು ಇರುವದಿಲ್ಲ.

ನಾಲ್ಕನೆಯ ತತ್ವವೆಂದರೆ, ಬುದ್ಧಿಯು, ಕ್ರಿಯಾವ್ಯಾಪಾರಗಳ ಮೇಲೆ ಇಚ್ಛಾ ಶಕ್ತಿಯು ಇಡುವ ನಿಯಂತ್ರಣವು. ಇದರ ಪರಿಚಯವು ನಮಗೆ ಬಹಳ ಹಳೆಯದು. ಯಾವದೊಂದು ವಿಷಯದಲ್ಲಿ ನಮ್ಮ ಆಸಕ್ತಿಯು–ಅಭಿರುಚಿಯು ಆಳವಾಗಿದಷ್ಟು, ಅದರ ಜ್ಞಾನವು ನಮಗೆ ಹೆಚ್ಚು ಸುಲಭವಾಗಿಯೂ ಗಾಢ ವಾಗಿಯೂ ಆಗುತ್ತದೆ. ನಮ್ಮ ಅಪೇಕ್ಷೆ ಅಥವಾ ಉಪೇಕ್ಷೆಯ ಪ್ರಮಾಣದಲ್ಲಿ ನಮ್ಮ 'ಗ್ರಹಣಶಕ್ತಿ' ಯ ತೀವ್ರತೆಯು ಮಂದತ್ವವು ಕಂಡುಬರುತ್ತದೆ. ಇದರ ಉದಾಹರಣೆಯನ್ನು ನಮ್ಮ ಶಾಲೆಗಳಲ್ಲಿ ನೋಡಬಹುದು. ಹಾದಿಯಂಚಿಗೆ ಮೋಟರಿನ ಕೆಳಗೆ ಮಾಸಿದ ಅಂಗಿ ಚಣ್ಣಗಳಲ್ಲಿ ಅಂಗಾತ ಮಲಗಿ ಕೆಲಸ ಮಾಡುವ ಡ್ರಾಯವ್ಹರನನ್ನೂ ದಿಟ್ಟಿಸಿ ನೋಡುವಷ್ಟು ಆಸಕ್ತಿಯಿಂದ, ಯಾವ ವಿದ್ಯಾರ್ಥಿಯೂ ಹೊಸ ಉಡುಪು ತೊಟ್ಟಿದರೂ ಆ ಶಿಕ್ಷಕನ ಕ್ಲಾಸಿನ ರಗಳೆ ಯನ್ನಾಗಲಿ ಆತನ ಮುಂದಿನ ಹಿಂದುಸ್ಥಾನದ ಹರಕು ನಕಾಶವನ್ನಾಗಲೀ, ಗಮನಿಸುವದಿಲ್ಲ ! ಅತ್ಯಂತ ಜಟಿಲವಾದ ಮೋಟರಿನ ಯಂತ್ರ ಇಲ್ಲವೇ ವಿಮಾನದ ಇಂಜನಿನ ರಚನೆ ಕಾರ್ಯಗಳನ್ನು ಸರಿಯಾಗಿ ತಿಳಿಯಾಗಿ ಬಣ್ಣಿಸುವ ಜಾಣ ಹುಡುಗನಿಗೇ ಸಂಸ್ಕೃತದ ಎರಡನೇ ಗಣದ ಧಾತುಗಳನ್ನು ನಡಿಸುವ ಕ್ರಮವಾಗಲೀ.

ಬೀಜಗಣಿತದ ಕಾರಿಕೆಗಳಾಗಲೀ-ಅವು ಎಷ್ಟೋ ಪಟ್ಟು ಸರಳವೂ ಸುಲಭವೂ ಆಗಿದ್ದರೂ ಕೂಡ–ಜೀವ ಹೋದರೂ ಮನದಟ್ಟಾಗದಿರುವ ದೃಶ್ಯವನ್ನು ನಾವು ಒಮ್ಮೊಮ್ಮೆ ನೋಡುತ್ತೇವೆ ! ಇದಕ್ಕೆ ವಿರುದ್ಧವಾದ ಉದಾಹರಣೆಗಳೂ ಆಗುತ್ತವೆ. ಬರೇ ಇಚ್ಛಾ ಶಕ್ತಿಯ ಬಲದ ಮೇಲೆ, ಹಟದ ಆಗ್ರಹದ ಮೇಲೆ ಯಾವದೊಂದು ಅಪ್ರಿಯವೆನಿಸುವ ವಿಷಯದಲ್ಲಿ ಏಕಾಗ್ರತೆಯನ್ನು ಸಾಧಿಸಿ ಆ ವಿಷಯದ ಪ್ರಭುತ್ವವನ್ನು ನಾವು ಪಡೆಯಲು ಬರುವದುಂಟು. ಈ ರೀತಿಯಾಗಿ ಕೇವಲ ಸಂಕಲ್ಪ ಬಲದಿಂದ ಸಾಧನೆಯ ಛಲದಿಂದ ಯಶದ ಶಿಖರವನ್ನೇರಿದ ವ್ಯಕ್ತಿಗಳ ಚರಿತ್ರಗಳು ಇತಿಹಾಸಕ್ಕೆ ಕಳೆ ಕೊಟ್ಟಿವೆ.

ಐದನೆಯ ಮತ್ತು ಕೊನೆಯ ತತ್ವವು ವ್ಯಕ್ತಿಯ ಶಾರೀರಿಕ ಮತ್ತು ಮಾನಸಿಕ ಸ್ಥಿತಿಗತಿಯಲ್ಲಿ ಆಗುವ ಹೆಚ್ಚು ಕಡಿಮೆಯದು. ಚಿತ್ತಶುದ್ಧಿಗಾಗಿ ಸತ್ವಶುದ್ಧಿ, ಶರೀರ ಸ್ವಾಸ್ಥ್ಯದ ಅವಶ್ಯಕತೆಯಿರುವದೆಂಬ ಮಾತು ಪ್ರಾಚೀನ ಕಾಲದಿಂದಲೂ ಎಲ್ಲರಿಗೆ ಗೊತ್ತಿದೆ. ನಾವು ದಣಿದಿರುವಾಗ, ಇಲ್ಲವೆ ಚಳಿ, ಹಸಿವೆ, ನಿದ್ದೆ ಅಥವಾ ದುಃಖದಿಂದ ಬಳಲುತ್ತಿರುವಾಗ, ನಮ್ಮ ಕೆಲಸವು ಹೆಚ್ಚು ಆಯಾಸದಿಂದಲೂ, ಕಡಿಮೆ ಹುಮ್ಮಸದಿಂದಲೂ ಆಗತೊಡಗುವದೆಂಬುದು ನಮಗೆಲ್ಲ ಗೊತ್ತಿದ್ದ ಸಂಗತಿ. ಅದೇ ಮೇರೆಗೆ, ನಮ್ಮ ಬುದ್ಧಿಯ ಸಾಮರ್ಥ್ಯವನ್ನು ನಿಶ್ಚಿತಗೊಳಿಸುವಲ್ಲಿ ಆನುವಂಶಿಕ ಸಂಸ್ಕಾರಗಳೂ ನಮ್ಮ ಸುತ್ತಲಿನ ಪರಿಸ್ಥಿತಿಯೂ ಮಹತ್ವದ ಭಾಗವನ್ನು ವಹಿಸುತ್ತವೆಂಬ ಮಾತನ್ನು ಮರೆಯಲಿಕ್ಕಾಗದು.

### ಬುದ್ಧಿಯೆಂದರೇನು ? 'ಜಿ' ಮತ್ತು 'ಎಸ್' ತತ್ವಗಳು :–

ಹಿಂದೆ ಹೇಳಿದ ಜ್ಞಾನ ಮೂಲದ ನಿಯಮಗಳು, ಬುದ್ಧಿಯ ಕೆಲಸದ ಬಗೆಯನ್ನು ಮಾತ್ರ ವಿವರಿಸುವವೇ ವಿನಹ, ಬುದ್ಧಿಯೆಂದರೇನೆಂಬುವನ್ನು ಬಿಡಿಸಿ ಹೇಳುವದಿಲ್ಲ. ಆ ಕುರಿತು ಸ್ಪಿಯರಮನ್ನನು ಇನ್ನೊಂದು ಸಿದ್ಧಾಂತವನ್ನು ಪ್ರತಿಪಾದಿಸಿರುವನು. ಆ ಸಿದ್ಧಾಂತವು ಎಲ್ಲೆಡೆಯಲ್ಲಿಯೂ ಇಂದು ಹೆಚ್ಚಾಗಿ ಮಾನ್ಯವಾಗಿದೆ.

ಅವನ ಅಭಿಪ್ರಾಯದಂತೆ ಬುದ್ಧಿಯುಕ್ತ ಪ್ರತಿಯೊಂದು ವರ್ತನದಲ್ಲಿ ಎರಡು ಸಂಗತಿಗಳು ಅಡಕವಾಗಿವೆ. ಮೊದಲನೆಯದು ವ್ಯಕ್ತಿಯ ಸಾಮಾನ್ಯವಾದ ಮಾನಸಿಕ ಶಕ್ತಿಯು (ಬೌದ್ಧಿಕ ಚೈತನ್ಯವು.) ಈ ಶಕ್ತಿಗೆ 'ಜಿ' ಎಂಬ ಸಂಜ್ಞೆ ಕೊಟ್ಟಿರುವನು. ಅವನ್ನು ನಮ್ಮ ಪಾರಿಭಾಷೆಯಲ್ಲಿ 'ಧೀ' ಎಂದು ಕರೆಯುವೆವು. ಧೀ

ಶಕ್ತಿಯು, ಹೆಚ್ಚು ಕಡಿಮೆ ಪ್ರಮಾಣದಲ್ಲಿ, ಪ್ರತಿಯೊಂದು ಮಾನಸಿಕ ಕ್ರಿಯೆಯಲ್ಲಿಯೂ ಅಡಕವಾಗಿರುತ್ತದೆ. ಈ ಸಾಧಾರಣವಾದ ಮಾನಸಿಕ ಕ್ರಿಯಾಶಕ್ತಿಯು ವ್ಯಕ್ತಿಯಿಂದ ವ್ಯಕ್ತಿಗೆ ಹೆಚ್ಚು ಕಡಿಮೆಯಾಗಿರಬಹುದು. ಆದರೆ ಅದು ಯಾವದೇ ಒಂದು ವ್ಯಕ್ತಿಯಲ್ಲಿ ಇದ್ದಷ್ಟೇ ಇರುತ್ತದೆ. ಈ ಶಕ್ತಿಯು ಮಕ್ಕಳಲ್ಲಿ ಚಿಕ್ಕಂದಿನಿಂದ ಬೆಳೆಯುತ್ತ ಬಂದು ಅವನ ೧೫ನೆಯ ಇಲ್ಲವೇ ೧೬ನೆಯ ವಯಸ್ಸಿಗೆ ಕೆಲವೊಂದು ಪರಿಮಾಣಕ್ಕೆ ಮುಟ್ಟಿ ಅನಂತರ ಆ ವ್ಯಕ್ತಿಯ ಜೀವಮಾನದಲ್ಲೆಲ್ಲ ಅದೇ ಪರಿಮಾಣದಲ್ಲಿ ಸ್ಥಿರವಾಗಿರುತ್ತದೆ. ೧೬ನೆಯ ವರ್ಷದ ನಂತರ, ವಯಸ್ಸು ಬೆಳೆದಂತೆ ಬುದ್ಧಿಯೂ ಬೆಳೆಯುತ್ತ ಹೋಗುವದಿಲ್ಲ. ಆದುದರಿಂದ ಈ ಸಿದ್ಧಾಂತದಂತೆ ಪ್ರತಿಯೊಬ್ಬ ಪ್ರೌಢ ಮನುಷ್ಯನೂ ೧೬ ವರ್ಷ ವಯಸ್ಸಿನ ಬುದ್ಧಿಯುಳ್ಳವನಿರುತ್ತಾನೆ.

ಬುದ್ಧಿಪೂರ್ವಕ ವರ್ತನವನ್ನೊಳಗೊಂಡ ಎರಡನೆಯ ಸಂಗತಿಯೇನೆಂದರೆ,- ವ್ಯಕ್ತಿ ವ್ಯಕ್ತಿಗೂ ವಿಶಿಷ್ಟವಾದ ಅವರವರ ಮಾನಸಿಕ ಕ್ರಿಯೆಯ ಶಕ್ತಿಯು ಭಿನ್ನವಾಗಿದೆ. ಇದಕ್ಕೆ ಸ್ಪಿಯರಮನ್ನನು 'ಎಸ್' ಎಂಬ ಸಂಜ್ಞೆ ಕೊಟ್ಟಿರುವನು. ಈ ಗುಣವು ವ್ಯಕ್ತಿಯ ವಿಶೇಷವಾದ ತಜ್ಞತೆಯನ್ನು ಕಾಣಿಸುವದಾದ್ದರಿಂದ ಇದಕ್ಕೆ ನಾವು 'ಜ್ಞಾ' ಎಂತ ಕರೆಯಬಹುದು. ನಮ್ಮ ನಮ್ಮ ಕೆಲವೊಂದು ಮಾನಸಿಕ ಚಟುವಟಿಕೆಗಳಲ್ಲಿ 'ಧಿ' ('ಜಿ') ಯ ಅಂಶವು ಹೆಚ್ಚಾಗಿ ಒಳಗೊಂಡಿರುತ್ತದೆ. 'ಜ್ಞಾ' (ಎಸ್) ದ ಅಂಶವು ಸ್ವಲ್ಪವೇ ಸೇರಿರುತ್ತದೆ. ಇನ್ನು ಹಲವು ಚಟುವಟಿಕೆಗಳಲ್ಲಿ ಈ 'ಜ್ಞಾ' (ಎಸ್) ಶಕ್ತಿಯೇ ಹೆಚ್ಚು ಅಂಶದಲ್ಲಿದ್ದು 'ಧೀ' ('ಜಿ') ತತ್ವವು ಕಡಿಮೆಯಾಗಿರಬಹುದು.

ಮಾನಸಿಕ ಕ್ರಿಯಾಶಕ್ತಿಯ 'ಧೀ' ('ಜಿ') ತತ್ವವೇ ಪ್ರತಿಯೊಂದು ಮನೋವ್ಯಾಪಾರದಲ್ಲಿ ಸಾಮಾನ್ಯವಾಗಿರುತ್ತದೆ. ಅದನ್ನೇ ಬುದ್ಧಿಯೆಂದು ಕರೆಯುತ್ತಾರೆ ಮತ್ತು ಸಾಕಷ್ಟು ಪ್ರಮಾಣದಲ್ಲಿ 'ಧೀ' ('ಜಿ') ಶಕ್ತಿಯಿರುವ ಮನುಷ್ಯನನ್ನು ಶ್ರೇಷ್ಠ ಬುದ್ಧಿಯುಳ್ಳವನೆಂದು ಕರೆಯುತ್ತಾರೆ. ಸ್ಪಿಯರಮನ್ನನ ಸುಪ್ರಸಿದ್ಧವಾದ ವಾಕ್ಯದಲ್ಲಿ ಹೇಳುವುದಾದರೆ, 'ಪ್ರತಿಯೊಬ್ಬ ಸಾಧಾರಣ ಆರೋಗ್ಯವುಳ್ಳ ಮನುಷ್ಯಪ್ರಾಣಿಯು- ಗಂಡಸಿರಲಿ, ಹೆಂಗಸಿರಲಿ, ಮಗುವಿರಲಿ, ಯಾವದೊಂದು ವಿಷಯದಲ್ಲಿ ಅತ್ಯಂತ ಮೇಧಾವಿಯೂ, ಇನ್ನೊಂದು ಯಾವದೇ ವಿಷಯದಲ್ಲಿ ಅಷ್ಟೇ ಮಂದಮತಿಯೂ ತಿಳಿಗೇಡಿಯೂ ಆಗಿರುತ್ತಾನೆ !' ಒಬ್ಬ ಮನುಷ್ಯನಿಗೆ ಶ್ರೇಷ್ಠವಾದ ಬುದ್ಧಿಯಿರುವದೆಂದು ಅನ್ನುವಾಗ, ಆತನ ಇಲ್ಲವೇ ಆಕೆಯ ಹಲವಷ್ಟು ಮನೋವ್ಯಾಪಾರಗಳಲ್ಲಿ ಮೇಲ್ತರಗತಿಯ ಮಾನಸಿಕ ಕ್ರಿಯಾಶಕ್ತಿಯೇ ವ್ಯಕ್ತ

ಆಗುತ್ತದೆಂಬುದೇ ಅಭಿಪ್ರಾಯವಿರುತ್ತದೆ. ಪ್ರತಿಭಾಶಾಲಿಯು ಪ್ರತಿಯೊಂದು ವಿಷಯದಲ್ಲಿಯೂ ಪ್ರತಿಭೆಯುಳ್ಳವನಿರುತ್ತಾನೆಂದು ತಿಳಿಯುವದು ಮಾತ್ರ ತಪ್ಪು; ಪ್ರತಿಭಾಶಾಲಿಯೇ ತನ್ನ ಕುರಿತು ಹಾಗೆ ತಿಳಿದುಕೊಳ್ಳುವದೆಂದರೆ ಒಂದು ದೊಡ್ಡ ತೊಂದರೆಯೇ !

ಪ್ರತಿಭಾವಂತನ ಪ್ರತಿಭೆಗೆ ಆತನಲ್ಲಿರುವ 'ಜ್ಞಾ' (ಎಸ್) ಶಕ್ತಿಯೇ ಮುಖ್ಯಕಾರಣ. ಯಾವದೊಂದು ವಿಷಯದಲ್ಲಿರುವ ವಿಶೇಷ ಶಕ್ತಿಯ ರೂಪದಿಂದ-ಹೆಚ್ಚಿನ ತಜ್ಞತೆಯ ರೂಪದಿಂದ-ಯಾವದೊಂದು ವ್ಯಕ್ತಿಯಲ್ಲಿರುವ 'ಜ್ಞಾ' (ಎಸ್) ತತ್ವದ ಪ್ರಮಾಣವು ವ್ಯಕ್ತವಾಗುತ್ತದೆ. ಇಂಥ ವಿಶೇಷಜ್ಞತೆಯ ಸಂಗಡ ಸಾಮಾನ್ಯ ಶಕ್ತಿಯು ಎಂದರೆ 'ಧೀ' (ಜಿ) ತತ್ವವು ಹೆಚ್ಚಾಗಿ ಇಲ್ಲದೆಯೂ ಇರಬಹುದು. ಉದಾಹರಣಾರ್ಥವಾಗಿ. ಓರ್ವ ಪ್ರಭಾವಶಾಲಿಯಾದ ವೈಣಿಕ ಶಿಖಾಮಣಿಯು ಇಲ್ಲವೇ ಹಾರ್ಮೋನಿಯಮ ಬಾರಿಸುವವನು, ತೀರ ಕಡಿಮೆ 'ಧೀ' ಶಕ್ತಿಯವನಾಗಿರುವದುಂಟು; ಚಲಚ್ಚಿತ್ರಪಟಗಳ ಪ್ರಪಂಚದಲ್ಲಿ ನಟಿಗಳ ಅರಸಿಯೆಂದು ಮೆರೆವವಳೂ, ಜಾಗತಿಕ ಖ್ಯಾತಿಯನ್ನು ಪಡೆದ ಕ್ರಿಕೆಟ್ ಕ್ರೀಡಾಪಟುವೂ ಸಾಮಾನ್ಯ ಜೀವನದಲ್ಲಿ ಹೆಳವರಿಗಿಂತಲೂ ಹೆಳವರಾಗಿದುದನ್ನು ಕಾಣಬಹುದು. ಇತರ ದೃಷ್ಟಿಯಿಂದ, ತಿಳಗೇಡಿ ಅಪ್ರಬುದ್ಧರಾಗಿಯೆ ಉಳಿದ ಎಷ್ಟೋ ವ್ಯಕ್ತಿಗಳು ಅಸಾಮಾನ್ಯ ಸ್ಮರಣಶಕ್ತಿಯನ್ನಾಗಲಿ, ಇನ್ನಾವುದೇ ತರದ ಕೈಗಾರಿಕೆಯಲ್ಲಿ ಕುಶಲತೆಯನ್ನಾಗಲೀ ತೋರುವ ಉದಾಹರಣೆಗಳು ಅನೇಕವಿರುವವು.

## ಬುದ್ಧಿಪರೀಕ್ಷೆಯ ಪದ್ಧತಿಗಳು

ಆದರೆ ಪ್ರತ್ಯಕ್ಷ ಬುದ್ಧಿಶಕ್ತಿಯನ್ನು ಅಳೆಯಲು-ಬರುವದಿಲ್ಲ. ಏಕೆಂದರೆ ಆ ಶಕ್ತಿಯ ಯಥಾರ್ಥ ಪರಿಚಯವು, ಸ್ವರೂಪದ ಜ್ಞಾನವು ಇನ್ನೂ ಆಗಿಲ್ಲ. ಬುದ್ಧಿಶಕ್ತಿಯೆಂದರೇನೆಂಬುದು ಇನ್ನೂ ಗೊತ್ತಾಗಿಲ್ಲವಾದರೂ ಅದರ ಪರಿಣಾಮವನ್ನು, ಅದರ ಕಾರ್ಯದ ಪ್ರಮಾಣವನ್ನು ಅಳೆಯಬಹುದಾಗಿದೆ. ಪಾರಜದಲ್ಲಿ ಒದಗುವ ಪ್ರಸರಣ ಕಾರ್ಯದಿಂದ ಅದಕ್ಕೆ ಕಾರಣವಾದ ಉಷ್ಣತೆಯ ಅಂಶವನ್ನು ತಿಳಿದುಕೊಳ್ಳುವಂತೆ, ಬುದ್ಧಿಯನ್ನು ಅಳೆವ ರೀತಿಯನ್ನೂ ಕಂಡುಹಿಡಿಯಬಹುದು. ಯಾವುದೇ ವ್ಯಕ್ತಿಯಲ್ಲಿ ಇರುವ ಸಾಧಾರಣ 'ಧಿ' ಶಕ್ತಿಯು ('ಜಿ') ಸಾಮಾನ್ಯವಾಗಿ ಸ್ಥಿರವಾಗಿರುವದರಿಂದ, ಅದರ ಇಂಥ ಅಳತೆಯು ಆ ವ್ಯಕ್ತಿಯ ಯೋಗ್ಯತೆಯ ಬಗ್ಗೆ ನಂಬಲರ್ಹವಾದ ನಿದಾನವನ್ನು ನಮಗೆ ಕೊಡಬಹುದು. ಆದರೆ

ಹೀಗೆ ಧೀಯನ್ನು ತೂಗುವಾಗ ಮನುಷ್ಯನ ಬುದ್ಧಿಯ ಸಹಜವಾದ ಪರಿಣಾಮಗಳನ್ನಷ್ಟೇ ಅಳೆಯಬೇಕೇ ಹೊರತು ಆತನು ಪಡೆದ ಶಿಕ್ಷಣ ಸಂಸ್ಕಾರದ ಫಲವನ್ನಲ್ಲ; ಕಲಿತುಬಂದ ಚಟುವಟಿಕೆಗಳ ಮಾದರಿಗಳನ್ನಲ್ಲ. ಇಂಥ ಅಳತೆಯ ಯಂತ್ರವೇ ಬುದ್ಧಿಪರೀಕ್ಷಾ ಪದ್ಧತಿ.

ಇಂಥ ಬುದ್ಧಿಪರೀಕ್ಷಾ ಪದ್ಧತಿಗಳನ್ನು ಹಲವರು ಸಂದೇಹದಿಂದ ನೋಡುತ್ತಾರೆ. ಈ ಪರೀಕ್ಷೆಗಳು ಇನ್ನೂ ಪೂರ್ಣಾವಸ್ಥೆಗೆ ಮುಟ್ಟಿಲ್ಲವೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಗಿದೆ. ಆದರೂ ಇವು ಏನೂ ಹುರುಳಿಲ್ಲದುವೆಂದು ಭಾವಿಸುವುದು ಮಾತ್ರ ಸರಿಯಲ್ಲ, ಇವು ಅತ್ಯಂತ ಮಹತ್ವದವೂ ಅದಷ್ಟು ಫಲಕಾರಿಗಳೂ ಆಗಿವೆಯೆಂಬುದು ಅಲ್ಲಗಳೆಯಲಾಗುವದಿಲ್ಲ. ಮನುಷ್ಯನ ಆಚಾರ ವಿಚಾರಗಳನ್ನು ಅಭ್ಯಸಿಸುವವರ ಸಲುವಾಗಿ ಉಂಟಾದ ಸಾಧನ ಸೌಕರ್ಯಗಳಲ್ಲಿ ಈ ಬುದ್ಧಿಯ ಪರೀಕ್ಷಾ ಪದ್ಧತಿಗಳೂ ಅತ್ಯಂತ ಸೂಕ್ಷ್ಮವಾದ ಮತ್ತು ಸಂವೇದನಾಕ್ಷಮವಾದ ಸಲಕರಣೆಗಳಲ್ಲಿ ಎಣಿಸಲ್ಪಡುತ್ತವೆ.

ಆಲಫ್ರೆಡ್ ಬಿನೆಟ್ ಎಂಬ ಫ್ರೆಂಚ ಮನೋವಿಜ್ಞಾನಿಯು ಈ ಬುದ್ಧಿ ಪರೀಕ್ಷೆಗಳನ್ನು ಮೊದಲು ಕಂಡುಹಿಡಿದನು. ಆತನು ೧೯೦೫ ರಲ್ಲಿ ಸಾಮಾನ್ಯ 'ಧಿ' ಶಕ್ತಿಯನ್ನು ಪರೀಕ್ಷಿಸುವ ಕೆಲವು ಪ್ರಶ್ನೆ ಪದ್ಧತಿಗಳನ್ನೆ ಏರ್ಪಡಿಸಿದನು. ಅವು ಈಗ ಜಗತ್ಪ್ರಸಿದ್ಧವಾಗಿವೆ. ಆದರೂ ಮನೋವ್ಯಾಪಾರಗಳನ್ನು ಪರೀಕ್ಷಿಸುವ ಪದ್ಧತಿಗಳ ಪರಂಪರೆಯು ಬಿನೆಟ್‌ನಿಗಿಂತ ಮೊದಲಿನಿಂದಲೂ ನಡೆದುಬಂದಿದೆ. ಇಂದ್ರಿಯ ಸಂವೇದನೆಗಳ ಕುರಿತು ಪರೀಕ್ಷಾಕ್ರಮಗಳು ೭೫ ವರುಷಗಳ ಮೊದಲಿನಿಂದಲೂ ಉಪಯೋಗಿಸಲ್ಪಡುತ್ತವೆ. ಆದ್ದರಿಂದ ಬಿನೆಟ್ಟನು ಮಾಡಿದ ಕೆಲಸವು ಸ್ವತಂತ್ರವಾದ ಸಂಶೋಧನವೆಂದೆಣಿಸುವದಕ್ಕಿಂತ, ದೀರ್ಘಕಾಲದಿಂದ ಮಾಡಿದ ಬೇರೆ ಬೇರೆ ಸಂಶೋಧನ, ಪ್ರಯೋಗಗಳ ಪರಂಪರೆಯನ್ನು ಆತನು ಪೂರ್ಣಗೊಳಿಸಿದನೆನ್ನುವದು ಹೆಚ್ಚು ಸಮಂಜಸ. ಆದರೆ ಇದರಿಂದ ಆತನ ಕಾರ್ಯದ ಮಹತ್ವವು ಕಡಿಮೆಯಾಗುವದಿಲ್ಲ. ಶಾಲೆಗಳಲ್ಲಿ ಕೆಲವು ಮಕ್ಕಳು ಬುದ್ಧಿವಂತರೂ ಕೆಲರು ಮಂದರೂ ಹಿಂದುಳಿದವರೂ ಇರುವದನ್ನು ನೋಡಿ ಹೀಗಿರುವುವರ ಕಾರಣವೇನೆಂದು ಕಂಡುಹಿಡಿಯಲು, ಪ್ಯಾರೀಸನಗರ ಸಭೆಯವರು ಅಲಫ್ರೆಡ್ ಬಿನೆಟ್‌ನಿಗೆ ಕೇಳಿಕೊಂಡರು. ಬಿನೆಟ್‌ನು ಒಂದೇ ಮಾದರಿಯ ಒಂದು ಪ್ರಶ್ನೆಪತ್ರಿಕೆಯನ್ನು ಏರ್ಪಡಿಸಿದನು. ಬಾಲಕರ ಎಲ್ಲ ಬಗೆಯ ಬುದ್ಧಿಶಕ್ತಿಯನ್ನು ತೂಗಿ ನೋಡುವದಕ್ಕಾಗಿ ವರ್ಗೀಕರಿಸಿದ ೨೦ ಪ್ರಶ್ನೆ ಮತ್ತು ಕಾರ್ಯಗಳ ಒಂದು ಕ್ರಮವನ್ನು ರಚಿಸಿದನು.

ಈ ಪರೀಕ್ಷೆಗಳನ್ನು ಕೈಕೊಳ್ಳುವಾಗ ಬಿನೆಟ್‌ನ ಹೇತುವು ಒಂದು ತಾತ್ವಿಕ ರೂಪದ ಬುದ್ಧಿಶಕ್ತಿಯನ್ನು ನಿಶ್ಚಿತಗೊಳಿಸುವದಿದ್ದಿಲ್ಲ. ಮನಸ್ಸಿನಲ್ಲಿ ಹಲವು ಬಗೆಯ ಶಕ್ತಿಗಳಿವೆ–ಸ್ಮರಣೆ, ಕಲ್ಪನೆ, ನಿರ್ಣಯ ಮುಂತಾದ ಬೇರೆ ಬೇರೆ ಶಕ್ತಿಗಳಿವೆ ಯೆಂದು ಆತನು ನಂಬಿದ್ದನು. ಇವೆಲ್ಲ ಶಕ್ತಿಗಳ ಚಟುವಟಿಕೆಗಳಿಗೆ ಸಂಬಂಧಪಟ್ಟ ವಿವಿಧವಾದ ಪರೀಕ್ಷಾ ಪ್ರಶ್ನೆಗಳನ್ನು ವರ್ಗೀಕರಿಸಿ ರಚಿಸಿದರೆ ಮಕ್ಕಳ ಬುದ್ಧಿಯ ಮಟ್ಟದ ಸರ್ವಸಾಧಾರಣವಾದ ಕಲ್ಪನೆಯಾದರೂ ಬರಬಹುದೆಂದು ಆತನು ಗ್ರಹಿಸಿದ್ದನು. ಶಾಲೆಯಲ್ಲಿ ಪ್ರತಿಯೊಂದು ಇಯತ್ತೆಗಾಗಿಯೂ ಒಂದೊಂದು ಪ್ರಶ್ನಾವಲಿಯಿತ್ತು. ಆ ಆ ವರ್ಷದ ಪರೀಕ್ಷೆಯಲ್ಲಿ ಬಾಲಕನು ತೇರ್ಗಡೆಯಾಗುತ್ತ ಹೋದರೆ ಆ ಬಾಲಕನ ಮಾನಸಿಕ ವಯಸ್ಸು ಆತನ ಆಯುರ್ಮಾನದ ವಯಸ್ಸಿಗೆ ಸರಿಯಾಗಿರುತ್ತದೆಂದೆಣಿಸಲ್ಪಡುತ್ತಿತ್ತು. ಯಾವದೊಂದು ಪ್ರಶ್ನಾವಲಿಯಲ್ಲಿ ತೇರ್ಗಡೆ-ಹೊಂದಲು ತಪ್ಪಿದಲ್ಲಿ ಕೆಲವೊಂದು ತಿಂಗಳುಗಳನ್ನು ಆತನ ಮಾನಸಿಕ ವಯಸ್ಸಿನಲ್ಲಿ ಕಳೆಯಲಾಗುತ್ತಿತ್ತು; ತೇರ್ಗಡೆಯಾದರೆ ಕೆಲವೊಂದು ತಿಂಗಳು ಗಳನ್ನು ಕೂಡಿಸಲಾಗುತ್ತಿತ್ತು.

ಬಿನೆಟ್‌ನ ಈ ಪ್ರಶ್ನೆ ಪದ್ಧತಿಯು ವೈಯಕ್ತಿಕವಾಗಿತ್ತು, ಅಂದರೆ ಪ್ರಶ್ನೆಗಳನ್ನು ಒಬ್ಬನಿಗೆ ಒಮ್ಮೆಯೇ ಕೇಳಬಹುದಾಗಿತ್ತು. ಬಿನೆಟ್‌ನ ಈ ವೈಯಕ್ತಿಕ ಪರೀಕ್ಷಾ ಪದ್ಧತಿಯು ಇತ್ತ ಪ್ರಚಾರವಾಗುತ್ತಿರುವ ಸಮಯದಲ್ಲಿಯೆ, ಅತ್ತ ಅಮೇರಿಕೆಯಲ್ಲಿ, ಬುದ್ಧಿಪರೀಕ್ಷೆಯ ಸಾಮುದಾಯಿಕ ಪದ್ಧತಿಯು ಮಾರ್ಪಡುತ್ತಿತ್ತು. ಈ ಪದ್ಧತಿಯಲ್ಲಿ ಹಲವುಮಕ್ಕಳ ಪರೀಕ್ಷೆಯು ಒಮ್ಮೆಲೇ ನಡೆವುದುಂಟು. ಕೆಲವು ಪ್ರಶ್ನೆಗಳನ್ನೂ ಹಲವು ಅಭ್ಯಸನಗಳನ್ನೂ ಅಚ್ಚು ಹಾಕಿಸಿ ಇವರೆಲ್ಲರಿಗೂ ಒಮ್ಮೆಲೆ ಕೊಡುವರು.

೧೯೧೭ರಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಇಂಥ ಸಾಮುದಾಯಕ ಬುದ್ಧಿ ಪರೀಕ್ಷೆಗಳು ನಡೆದುವು. ಕಳೆದ ಮಹಾಯುದ್ಧದಲ್ಲಿ ಭಾಗವಹಿಸುವದಕ್ಕಾಗಿ ಅಮೇರಿಕೆಯ ಸೈನ್ಯದಲ್ಲಿ ಸೇರಲು ಬಂದ ಪ್ರತಿಯೊಬ್ಬ ಯುವಕನ ಬುದ್ಧಿಯನ್ನು ಸಾಮುದಾಯಕ ಪ್ರಶ್ನೆ ಪದ್ಧತಿಯಿಂದ ತೂಗಿ ನೋಡಲಾಯಿತು. ಸುಮಾರು ೨೦ ಲಕ್ಷ ಜನರು ಹೀಗೆ ಪರೀಕ್ಷಿಸಲ್ಪಟ್ಟರು. ಆಗ ಅಮೇರಿಕೆಯನ್ನೆಲ್ಲ ದಂಗು ಬಡಿಸುವ ಆಘಾತವನ್ನು ಕೊಡುವಂಥ ಒಂದು ಸೋಜಿಗದ ಸಂಗತಿಯು ಬೆಳಕಿಗೆ ಬಂತು. ಅಮೇರಿಕೆಯ ನವ ತರುಣ ವರ್ಗದ ಸರ್ವಸಾಧಾರಣ ಬುದ್ಧಿಮತ್ತೆಯ ಮಟ್ಟವು ಹದಿಮೂರು ವರ್ಷ ವಯಸ್ಸಿನವರಿಗಿಂತ ಕೊಂಚ ಹೆಚ್ಚೆಂದು ಸಿದ್ಧವಾಯಿತು.

ಈ ನಿರ್ಣಯವು ಅಷ್ಟೊಂದು ಕಠೋರವಾಯಿತೆಂದು ತಿಳಕೊಳ್ಳಬೇಕಾಗಿಲ್ಲ.

ಏಕೆಂದರೆ ಹಿಂದೆ ಹೇಳಿದಂತೆ ಪ್ರೌಢ, ಪ್ರಬುದ್ಧನಾದ ಒಬ್ಬ ಮನುಷ್ಯನ ಬೌದ್ಧಿಕ ವಯಸ್ಸೇ ೧೫ ಇಲ್ಲವೇ ೧೬ ವರ್ಷದ್ದಾಗಿರುವಾಗ ಜನ ಸಾಮಾನ್ಯರ ಸರಾಸರಿ ಬೌದ್ಧಿಕ ವಯೋಮಾನವು ಇವಕ್ಕೂ ಕಡಿಮೆಯಾಗಿದ್ದರೆ ಸೋಜಿಗವೇನು ? ಆದರೆ ಬುದ್ಧಿಶಕ್ತಿಯ ಇಯತ್ತೆಯನ್ನು ನಿಶ್ಚಿತವಾಗಿ ನಿರ್ಣಯಿಸುವಂಥ ನಿರ್ದೋಷವಾದ ಯಾವದೇ ಒಂದು ಅಳತೆಗೋಲು ಇನ್ನೂ ದೊರೆತಿಲ್ಲವೆಂಬುದೂ ನಿಜ. ಇಂದಿಗೆ, ನೂರರ ಪ್ರಮಾಣದಲ್ಲಿ ಮಂಡಿಸಿದ ಬೌದ್ಧಿಕ ವಯಸ್ಸಿಗೆ ಮತ್ತು ಶಾರೀರಿಕ ವಯಸ್ಸಿಗೆ ಇದ್ದ ಪ್ರಮಾಣವೇ ಬುದ್ಧಿಯ ಇಯತ್ತೆಯನ್ನು ತೋರಿಸುವ ಚಿಸ್ಹ ವಾಗಿದೆ. ಇದಕ್ಕೆ 'ಇ. ಕ್ಯೂ' ಎಂತ ಪಾರಿಭಾಷಿಕ ಹೆಸರು. ('ಬೌದ್ಧಿಕ ಗುಣೋತ್ತರ'ವೆಂಬರ್ಥವ ಇಂಗ್ಲಿಷ ಶಬ್ದದ ಮೊದಲಕ್ಕರಗಳಿವು.)

**ಶಿಕ್ಷಣ ಮತ್ತು ಉದ್ಯೋಗ ಕ್ಷೇತ್ರಗಳಲ್ಲಿ ಬುದ್ಧಿ ಪರೀಕ್ಷೆಗಳ ಉಪಯೋಗ :-**

ಇಂದಿಗೆ ಅಮೇರಿಕೆಯ ಶಾಲೆಗಳಲ್ಲಿ ಬುದ್ಧಿ ಪರೀಕ್ಷೆಗಳ ಉಪಯೋಗವನ್ನು ವಿಶೇಷವಾಗಿ ಮಾಡಲಾಗುತ್ತದೆ; ಇಂಗ್ಲಂಡದಲ್ಲಿಯೂ ಯುರೋಪದಲ್ಲಿಯೂ ಈ ಪದ್ಧತಿಯು ಇತ್ತಲಾಗಿ ಹೆಚ್ಚಾಗಿ ಬಳಿಕೆಯಲ್ಲಿ ಬರುತ್ತಲಿದೆ. ಮಾನಸಿಕ ನ್ಯೂನತೆ ಗಳಿದ್ದ ಮಕ್ಕಳು ಯಾವವು ಎಂದು ನಿರ್ಧರಿಸಿ ವಿಂಗಡಿಸಲು ಈ ಪರೀಕ್ಷೆಗಳು ಬಹಳ ಉಪಯುಕ್ತವಾಗಿವೆ. ಬೇನೆ, ಶಾಲೆ ತಪ್ಪಿಸುವಿಕೆ, ಆರ್ಥಿಕ ಮತ್ತು ಸಾಮಾಜಿಕ ಅನಾನುಕೂಲತೆ ಮುಂತಾದ ಆಗಂತುಕ ಪ್ರತಿಕೂಲತೆಗಳ ಮೂಲಕ ಅಭ್ಯಾಸದಲ್ಲಿ ಕುಂದಿದಗತಿಯ ಮಂದಮತಿಗಳಾಗಿ ವರ್ಗದಲ್ಲಿ ಹಿಂದುಳಿಯುವ ಮಕ್ಕಳನ್ನು ಮಿಗಿಲಾದ ಬುದ್ಧಿಶಕ್ತಿಯುಳ್ಳವರಿಂದ ಬೇರ್ಪಡಿಸಲಿಕ್ಕೂ, ಒಂದಿಲ್ಲೊಂದು ಕಾರಣದಿಂದ ತಮ್ಮ ಶಕ್ತಿಗೆ ಹೋಲುವಷ್ಟು ಬೌದ್ಧಿಕ ಚಟುವಟಿಕೆ ಯನ್ನು ವ್ಯಕ್ತಪಡಿಸಲಾರದಂಥವರನ್ನು ವರ್ಗೀಕರಿಸಿ ಅಂಥವರಿಗೆಲ್ಲ ಹೆಚ್ಚು ಲಕ್ಷ್ಯ ಪೂರೈಸಲಿಕ್ಕೂ ಈ ಬುದ್ಧಿ ಪರೀಕ್ಷಾ ಪದ್ಧತಿಯು ತೋರಿಸಿಕೊಡುತ್ತದೆ.

ಇಂಥ ಹಿಂದುಳಿದ ಹುಂಬ ಮಕ್ಕಳಿಗೆ ವಿಶೇಷವಾದ ಲಕ್ಷ್ಯ ಪೂರೈಸಿ ಕಲಿಸುವ ಏರ್ಪಾಟ ಮಾಡದಿದ್ದರೆ, ಅವರು ತಮ್ಮಲ್ಲಿ ಇದ್ದಷ್ಟು ಬುದ್ಧಿಮತ್ತೆಗೆ ಒಪ್ಪುವಷ್ಟು ಚಟುವಟಿಕೆಗಳನ್ನು ಮಾಡಲಾರದಾಗಿ ಮುಂದೆ ಕೀಳು ಬಾಳಿಗೆ ಈಡಾಗುತ್ತಾರೆ. ಅದೇ ರೀತಿಯಲ್ಲಿ ಜಾಣರಾದ–ಹೆಚ್ಚಿನ ಬುದ್ಧಿಮತ್ತೆಯ–ಮಕ್ಕಳನ್ನು ಅಂಥವರ ಜೊತೆಯಲ್ಲಿ ಇಟ್ಟು ಕಲಿಸಿದರೆ ಶಿಕ್ಷಣದ ಮಟ್ಟವನ್ನು ಆ ಇಯತ್ತೆಯ ಎಲ್ಲವರ ಗ್ರಹಿಕೆಯ ಸಾಧಾರಣ ಛೇದಕ್ಕೆ ಇಳಿಸಬೇಕಾದುದರಿಂದ, ತಮ್ಮ ಬುದ್ಧಿಯ ತೀವ್ರತೆಗೆ ತಕ್ಕಂತಹ ಪ್ರಗತಿಯ ಅರ್ಧದಷ್ಟು ಮಾತ್ರ ಬೆಳವಣಿಗೆಯಾಗುತ್ತದೆ.

ಈ ಸಂಗತಿಯು ಈಗ ಸಪ್ರಯೋಗವಾಗಿ ಸಿದ್ಧವಾಗಿದೆ. ಆದುದರಿಂದಲೇ ಶಿಕ್ಷಣ ಪ್ರಪಂಚದಲ್ಲಿ ಬುದ್ಧಿ ಪರೀಕ್ಷೆಯ ಮಹತ್ವವನ್ನು ಸ್ವಲ್ಪವೂ ದುರ್ಲಕ್ಷಿಸಲಿಕ್ಕೆ ಆಗುವದಿಲ್ಲೆಂದು ಬಲ್ಲವರು ಮನಗಂಡಿರುವರು.

ಬರೇ ಶಿಕ್ಷಣ ಪ್ರಪಂಚದಲ್ಲಿಯಷ್ಟೇ ಅಲ್ಲ. ಔದ್ಯೋಗಿಕ ಕ್ಷೇತ್ರದಲ್ಲಿಯೂ ಈ ಬುದ್ಧಿ ಪರೀಕ್ಷೆಗಳು ಮಾನವನಿಗೆ ಅಮೂಲ್ಯವಾದ ಸಹಾಯವನ್ನಿತ್ತಿರುವವು. ಬುದ್ಧಿ ಪರೀಕ್ಷೆಗಳೊಂದಿಗೆ ವ್ಯಕ್ತಿತ್ವವನ್ನೂ ಶೀಲವನ್ನೂ ನಿದಾನಿಸುವ ಪರೀಕ್ಷೆಗಳೂ ಈಗ ತಲೆದೋರಿವೆ. ಈ ಪದ್ಧತಿಯು ವಿಶೇಷ ಮಹತ್ವದ ಇಲ್ಲವೇ ವಿಶೇಷ ಕೌಶಲ್ಯವು ಬೇಕಾಗುವ ವ್ಯವಸಾಯುಗಳಿಗಾಗಿ ಕೆಲಸಗಾರರನ್ನು ಆರಿಸುವವರಲ್ಲಿ ಒಳ್ಳೇ ಮಾರ್ಗ ದರ್ಶಕವಾಗಿದೆ. ಇಂಗ್ಲಂಡದಲ್ಲಿ 'ಔದ್ಯೋಗಿಕ ಮನೋವಿಜ್ಞಾನದ ರಾಷ್ಟ್ರೀಯ ಸಂಸ್ಥೆ'ಯೆಂಬ ಸಂಶೋಧನ ಸಂಸ್ಥೆಯು ಇಂಗ್ಲಂಡಿನ ಕೆಲಸಗಾರರ ಆಯ್ಕೆಯ ಕೆಲಸವನ್ನು ಬಹು ಸಮರ್ಪಕವಾಗಿ ನಡಿಸಿದೆ.

ತಮ್ಮ ಶಿಕ್ಷಣವನ್ನು ಮುಗಿಸಿ ಶಾಲೆಗಳಿಂದ ಹೊರಬೀಳುವದರಲ್ಲಿರುವ ತರುಣ ತರುಣಿಯರು ಈ ಸಂಸ್ಥೆಯ ಪರೀಕ್ಷೆಗಳಿಗೆ ಕೊಡ್ರುತ್ತಾರೆ. ಅವರವರ ಪರೀಕ್ಷೆಗಳ ಪರಿಣಾಮಗಳನ್ನು ಪರಿಶೀಲಿಸಿ, ಪರೀಕ್ಷಕರು ಪ್ರತಿಯೊಬ್ಬ ಪರೀಕ್ಷಾರ್ಥಿಯು ಯಾವ ಉದ್ಯೋಗ ವ್ಯವಸಾಯುವನ್ನು ಸೇರಿದರೆ ಯಶಸ್ವಿಯಾಗುವನೆಂಬುದರ ಕುರಿತು, ಉಚಿತವಾದ ಸಲಹೆಗಳನ್ನು ಕೊಡುತ್ತಾರೆ. ಇಂಥ ಮಾರ್ಗದರ್ಶಕ ಅಭಿಪ್ರಾಯದ ಉಪಯುಕ್ತತೆಯು ಎಷ್ಟಿರುವದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೀಗೆ ತಮ್ಮನ್ನು ಪರೀಕ್ಷಿಸಿಕೊಂಡು ಅಭಿಪ್ರಾಯ ಪಡೆದು ಆ ಮೇರೆಗೆ ತಮಗೆ ಅನುರೂಪವಾದ ಉದ್ಯೋಗವನ್ನು ಆರಿಸಿಕೊಂಡವರಲ್ಲಿ ಬಹುಸಂಖ್ಯಾಕರು ತಮ್ಮ ಬಾಳಿನಲ್ಲಿ ಒಳಿತು ಕಂಡಿದ್ದಾರೆ; ಮೇಲ್ಮೆಯನ್ನು ಪಡೆದಿದ್ದಾರೆ. ಇದಕ್ಕೆ ವಿರುದ್ಧವಾಗಿ ಔದ್ಯೋಗಿಕ ಮನೋವಿಜ್ಞಾನದ ರಾಷ್ಟ್ರೀಯ ಸಂಸ್ಥೆಯು ಕೊಟ್ಟ ಸಮರ್ಪಕ ಸಲಹೆಯನ್ನು ಮೀರಿ, ತಮಗೆ ತಕ್ಕವಲ್ಲದ ಸಿಕ್ಕ ಸಿಕ್ಕ ಹೋರೆಯನ್ನು ಕೈಕೊಂಡವರಲ್ಲಿ ಎಷ್ಟೋ ಮಂದಿ ಅಪಯಶಕ್ಕೀಡಾಗಿದ್ದಾರೆ. 'ಗುಣಕರ್ಮ ವಿಭಾಗಶಃ ವರ್ಣಗಳನ್ನುಂಟು ಮಾಡುವ ಹೊಣೆಯನ್ನು ಭಗವಂತನ ಹೆಗಲ ಮೇಲಿಂದ ಇಂಗ್ಲಂಡದ ಮಟ್ಟಿಗೆ ಈ ಸಂಸ್ಥೆಯು ಇಂದು ತನ್ನ ತಲೆಯ ಮೇಲೆ ತೆಗೆದುಕೊಂಡಿದೆ. (ಹೀಗೆ ಶಾಸ್ತ್ರೀಯ ರೀತಿಯಲ್ಲಿ ಯಶಸ್ಸಿನ ದಾರಿಯನ್ನು ಹಿಡಿಯ ಬಯಸುವ ಇಂಗ್ಲಂಡದ ಸುಶಿಕ್ಷಿತರೆಲ್ಲಿ, ಮತ್ತು ಮತ್ತು ರಾಶಿಯ ಪಾರ ಭವಿಷ್ಯವನ್ನೇ ದೇವರಾಜ್ಞೆಯೆಂದು ನೆರೆನಂಬಿ ಕಾರಕೂನಿ ನೌಕರಿಗಾಗಿ ಅರ್ಜಿ

ಗೀಚುವ ನಮ್ಮಲ್ಲಿಯ ಸುಶಿಕ್ಷಿತರೆನಿಸುವ ಪದಪೀಥರ ಪಂಡಿತರೆಲ್ಲಿ ?)

ಈ ಬುದ್ಧಿ ಪರೀಕ್ಷಾ ಪದ್ಧತಿಗಳ ಪ್ರಭಾವವು ಶಾಲೆಗಳಲ್ಲಿ ನಡೆಯುವ ಪರೀಕ್ಷೆಗಳ ರೀತಿಗಳ ಮೇಲೆ ತುಂಬ ಒಡೆದು ಕಾಣುತ್ತದೆ. ಈ ಮೊದಲು ಪರೀಕ್ಷೆಗಳಲ್ಲಿ ಆದ ಸಂಗತಿಗಳನ್ನು ನೆನಪಿಟ್ಟು ಹೇಳುವದಕ್ಕೇ ಮಹತ್ವವಿತ್ತು. ಇತಿಹಾಸ, ಭೂಗೋಲ ಮುಂತಾದ ವಿಷಯಗಳಲ್ಲಿ ಹಲವು ಸಂಗತಿಗಳ ವರದಿ ಒಪ್ಪಿಸುವದೇ ಉತ್ತರ ಪತ್ರಿಕೆಗಳನ್ನು ಬರೆವ ಆದರ್ಶ ಪದ್ಧತಿಯಾಗಿತ್ತು. ಇದರಿಂದ ಮಿದುಳಿನ-ಇಲ್ಲವೇ ಮನಸ್ಸಿನ-ಉಳಿದ ಚಟುವಟಿಕೆಗಳಿಗಿಂತ ಬರೇ ಸ್ಮರಣ ಶಕ್ತಿಯ ಕೆಲಸಕ್ಕೇ-ವಿಷಯವನ್ನುರು ಹಾಕಿ 'ಗಟ್ಟಿ' ಮಾಡುವ ಶಿಸ್ತಿಗೇ-ಮಿತಿಮೀರಿದ ಪ್ರಾಧಾನ್ಯ ಕೊಟ್ಟಂತಾಯಿತು. ಹೀಗೆ ಮನಸ್ಸಿನ ವಿಕಾಸವು ಸರ್ವಾಂಗೀಣವಾಗಿ ಆಗುವ ಬದಲು, ಏಕಾಂಗಿಕವಾದ ಬೆಳವಣಿಗೆಯಿಂದ ತೂಕ ತಪ್ಪಿದ ತಿಳಿಗೇಡಿ ತನದ ಪುಸ್ತಕೀ ವಿದ್ಯೆಯೇ ನಮ್ಮ ತರುಣರ ಗುರಿಯಾಯಿತು. ಆದರೆ ಬುದ್ಧಿ ಪರೀಕ್ಷೆಯ ತತ್ವಗಳ ಮೇಲೆ ಏರ್ಪಟ್ಟ ಶಾಲೆಯ ಪರೀಕ್ಷೆಗಳ ಆಧುನಿಕ ಶಿಕ್ಷಣದ ಸಂಸ್ಕಾರ ಗಳ ಪರಿಣಾಮವಾಗಿ ಮಾನಸಿಕ ಕ್ರಿಯಾಶಕ್ತಿಯ ವಿಕಾಸವು ಎಷ್ಟರ ಮಟ್ಟಿಗೆ ಪ್ರಮಾಣಬದ್ಧವಾಗಿ ಸಾಧಿಸಲಾಗಿದೆಯೆಂಬುದನ್ನೇ ತಿಳಿದುಕೊಳ್ಳುವದು ಮುಖ್ಯ ಗುರಿಯಾಗಿದೆ. ಆದುದರಿಂದ, ಪರೀಕ್ಷಾರ್ಥಿಯ ವಿಧಾಯಕ ವಿಚಾರ ಶಕ್ತಿಯೂ, ನಿರ್ಣಯದ ಸಮತೂಕವೂ, ಕಲಿತ ಘಟನೆಗಳನ್ನು ಸಂಘಟಿತವಾಗಿ ಯಾವದೊಂದು ಸಂದರ್ಭಕ್ಕೆ ಸಮರ್ಪಕವಾಗಿ ಮಂಡಿಸುವ ಕುಶಲತೆಯೂ, ಕಲ್ಪನಾಶಕ್ತಿಯೂ ಭಾವನೆಗಳ ಪರಿಪೋಷವೂ ಎಷ್ಟರ ಮಟ್ಟಿಗೆ ಸಾಧ್ಯವಾಗಿವೆಯೆಂಬುದನ್ನೇ ಗೊತ್ತು ಪಡಿಸಲು ಬರುವಂತೆಯೇ ಎಲ್ಲ ಪ್ರಶ್ನೆಗಳ ರಚನೆಯಿರುತ್ತದೆ.

ಇದಲ್ಲದೆ, ನಮ್ಮ ಶಾಲೆಗಳಲ್ಲಿ ಸಾಮಾನ್ಯವಾಗಿ ಸಾಗುವ ಪರೀಕ್ಷೆಗಳು ವಿದ್ಯಾರ್ಥಿಯ ಗಿಳಿಪಾಠಿನ 'ಪಾರಂಗತ'ತ್ವವನ್ನೇ (ಪಠ್ಯಪುಸ್ತಕಗಳಲ್ಲಿ ಬರೆದಿಟ್ಟ ವಿಷಯಗಳ ವಿವರವನ್ನು ಆದಷ್ಟು ಹೆಚ್ಚು ತಲೆಯಲ್ಲಿ ತುಂಬಿಕೊಂಡು ಶಿಕ್ಷಕರ ಕೈಯೊಳಗಿಂದ ಪಾರಾಗಿ ಹೋಗಲು ಅವನು ಎಷ್ಟು ಯೋಗ್ಯನಾಗಿರುವನೆಂಬುದನ್ನೇ) ಗೊತ್ತು ಪಡಿಸುವವು ! ಇದೆಲ್ಲ ಸಾಮಾನ್ಯವಾಗಿ ಸ್ಮರಣಶಕ್ತಿಯ ಪರೀಕ್ಷೆಯೇ ಹೊರತು, ವಿದ್ಯಾರ್ಥಿಯ ಬುದ್ಧಿಶಕ್ತಿಯ ಪರಿಪಕ್ವತೆಯಲ್ಲ. ಆದ್ದರಿಂದ ಇಂದಿನ ಶಿಕ್ಷಣ ಪ್ರಪಂಚದಲ್ಲಿಯ ಎಷ್ಟೋ ಅಧಿಕಾರಿಗಳು ವಿದ್ಯಾರ್ಥಿಗಳು ಶಿಷ್ಯವೃತ್ತಿಗಳಿಗೆ ಯೋಗ್ಯ ರಿರುವರೋ, ವಿಶೇಷ ಯೋಗ್ಯತೆಯುಳ್ಳವರಿರುವರೋ-ಎಂದು ಮುಂತಾದಾಗಿ ನಿರ್ಣಯಿಸಲು, ಬರೇ ಪುಸ್ತಕಿ-ಪರೀಕ್ಷೆಗಳೊಂದಿಗೆ ಬುದ್ಧಿ ಮಾಪನದ ಪರೀಕ್ಷೆ ಗಳನ್ನೂ ನಡೆಸುತ್ತಾರೆ.

## ಡಾ. ಬರ್ಟರ ಅಪರಾಧ ಮೀಮಾಂಸೆ-

ಈ ಬಗೆಯಾಗಿ ಬುದ್ಧಿಪರೀಕ್ಷೆಗಳ ವಿನಿಯೋಗವನ್ನು ಶಿಷ್ಟಜೀವನದಲ್ಲಿ ಮಾಡಿ ಕೊಂಡಂತೆ ದುಷ್ಟ ಜೀವನದ ಕುರಿತು ಮಾಡಿಕೊಂಡಿದ್ದಾರೆ. ಅಪರಾಧಶಾಸ್ತ್ರದಲ್ಲಿ–ವಿಶೇಷವಾಗಿತರಳರೂ ತರುಣರೂ ಅಪರಾಧಿಗಳಾದ ಪ್ರಸಂಗಗಳಲ್ಲಿ-ಬುದ್ಧಿ ಪರೀಕ್ಷಾ ಪದ್ಧತಿಯನ್ನು ಇತ್ತಲಾಗಿ ಹೆಚ್ಚು ಹೆಚ್ಚಾಗಿ, ಉಪಯೋಗಿಸುವದುಂಟು. ಏಕೆಂದರೆ ಯಾವದೊಂದೇ ಅಪರಾಧವು ಬೇರೆ ಬೇರೆ ಕಾರಣಗಳಿಂದ ಘಟಿಸಬಹುದು. ಅದು ನಿಜವಾಗಿಯೂ ಹಲವು ಬಾರಿ ಅಪರಾಧ ಪ್ರಿಯವಾದ ಮನಃಪ್ರವೃತ್ತಿಯ–ವಿಪರೀತವಾಗಿ ಬಲಿತ ಅಸಾಮಾಜಿಕ ಪ್ರವೃತ್ತಿಗಳ–ಪರಿಣಾಮವಾಗಿರಬಹುದು; ಅದೇ ಮೇರೆಗೆ ಕೆಲಸಾರೆ, ಪರಿಸ್ಥಿತಿಯ ಕೆಲವೊಂದು ಪ್ರೇರಣೆಗಳ ಫಲವಾಗಿರ ಬಹುದು; ಇಲ್ಲವೇ ಅಪರಾಧವನ್ನು ಮಾಡಿದ ವ್ಯಕ್ತಿಯ ಮನೋವ್ಯಾಪಾರಗಳು ಸರಿಯಾಗಿ ನಡೆಯದಂತಾಗಿ, ಮಾನಸಿಕ ಚಟುವಟಿಕೆಗಳಲ್ಲಿಯೇ ಲೋಪದೋಷ ಗಳುಂಟಾಗಿಬಂದು ಅಪರಾಧವು ಸಂಭವಿಸಬಹುದು. ಉದಾಹರಣಾರ್ಥವಾಗಿ, ಒಮ್ಮೊಮ್ಮೆ ಕಳವು ಮಾಡುವ ಪ್ರವೃತ್ತಿಯು ಹತ್ತಿಕ್ಕಿದ ಪ್ರತ್ಯೇಕ ಪೂಜೆಯ ವಿಕೃತ ಪರಿಣಾಮವೆಂದು–ಕಂಡು ಬಂದದ್ದುಂಟು. ಇದು ಸೋಜಿಗವಲ್ಲವೇ ?

ಈ ಕುರಿತು ತಿಳಿದುಕೊಳ್ಳಬಯಸುವವರು,–ಅಪರಾಧಶಾಸ್ತ್ರದ ಅತ್ಯಂತ ಉಪ ಯುಕ್ತವೂ ಮನೋರಂಜಕವೂ ಆದ ಅಂಗವೆನಿಸಿದ ತರುಣ ಅಪರಾಧಿಗಳ ಬಗ್ಗೆ ಓದಬಯಸುವವರು,–ಡಾ. ಸಿರಿಲ್ ಬರ್ಟ ಇವನ 'ತರುಣ ಅಪರಾಧಿ' ಎಂಬ ಗ್ರಂಥವನ್ನು ಅವಶ್ಯವಾಗಿ ಪರಿಶೀಲಿಸಬೇಕು. ಡಾ. ಬರ್ಟನು 'ಲಂಡನ್ ಕೌಂಟಿ ಕೌನಸಿಲ್ಲಿ'ಗೆ ಮನೋವಿಜ್ಞಾನದ ಸಲಹೆಗಾರನಾಗಿ ೨೦ ವರ್ಷ ಕೆಲಸಮಾಡಿದನು. ಆ ಮೇಲೆ ಲಂಡನ್ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಮತ್ತು ಮನೋವಿಜ್ಞಾನದ ಆಚಾರ್ಯನಾದನು.

ಡಾ. ಬರ್ಟನು ತನ್ನ ಪುಸ್ತಕದಲ್ಲಿ ವಿವರಿಸುವುದೇನೆಂದರೆ, ತಾನು ಪರೀಕ್ಷಿಸಿದ ಅಪರಾಧಿ ತರಳ ತರಳೆಯರಲ್ಲಿ ನೂರಕ್ಕೆ, ೫೨.೮ ರಷ್ಟು ಮಂದಿ (೧) ಬಡತನ ದಿಂದ ಬಳಲುವಂಥವರೂ, ೫೭.೯ ರಷ್ಟು ಸಂಖ್ಯೆ (೨) ಗೃಹಸೌಖ್ಯವಿಲ್ಲದವರೂ, ಕೌಟುಂಬಿಕ ಸಂಬಂಧಗಳು ಕೆಟ್ಟು–ಕಡಿದು ಹೋದುದರಿಂದ ಗೋಳಿಗೀಡಾದವರೂ, ೨೫.೯ ರಷ್ಟು ಜನ (೩) ನೀತಿಭ್ರಷ್ಟ ಮನೆಗಳಿಂದ ಬಂದವರೂ, ೬೦.೯ ರಷ್ಟು (೪) ಮನೆಯಲ್ಲಿ ಸರಿಯಾದ ಶಿಸ್ತಿನ ಕೊರತೆಯುಳ್ಳವರೂ, ಮತ್ತು ೪೫.೨ ರಷ್ಟು (೫) ಮಕ್ಕಳು ಶೀಲಕೆಡಿಸುವ ನೆರೆಹೊರೆಯ ಕೀಳುಸಹವಾಸದ ಸಂಸ್ಕಾರಗಳಿಗೆ

ಬಲಿಯಾದವರೂ ಇದ್ದರು ! ಹೀಗೆ ಯಾವದೊಂದು ಅಪರಾಧಕ್ಕೆ ಇಂಥ ಐದು ಕಾರಣಗಳಲ್ಲಿ ಒಂದಾದರೂ ಮುಖ್ಯವಾಗಬಹುದು, ಇಲ್ಲವೇ ಅಂಶತಃ ಐದೂ ಕೂಡಿ ಕಾರಣವಾಗಬಹುದು. ಆದುದರಿಂದ ಇವುಗಳಲ್ಲಿಯ ಒಂದಿಲ್ಲೊಂದು ಕಾರಣವುಳ್ಳ ಜನರು ಶಿಷ್ಟ ಸಮಾಜವಲ್ಲಿ ಸಿಕ್ಕುವುದು ಅಸಂಭವವಲ್ಲ. ಕಾರಣವನ್ನು ಬಲಪಡಿಸುವಷ್ಟು ಅವರ ಪರಿಸ್ಥಿತಿಯು ಸುದೈವದಿಂದ ಕೆಟ್ಟವಿರಲಿಕ್ಕಿಲ್ಲ ! ಆದುದರಿಂದ ಇಂಥವರು ಬಹಿರಂಗದಲ್ಲಿ ಸಭ್ಯರೆಂದೇ ಎಣಿಸಲ್ಪಡುವದು ಸಹಜ. ಅಪರಾಧಿಯನ್ನು ಜುಗುಪ್ಸೆಯಿಂದ ನೋಡುವದದೆಷ್ಟು ಸುಲಭ ! ಆದರೆ ಅಪರಾಧದಲ್ಲಿ ಜಾರಿಬೀಳದೆ ಉಳಿಯುವದು ಅದೆಷ್ಟು ಕಷ್ಟ !

ಇರಲಿ, ಇದುವರೆಗೆ ಬುದ್ಧಿಯ ಸ್ವರೂಪವೇನು, ಅದರ ಜ್ಞಾನ-ಮೂಲದ ನಿಯಮಗಳೇನು ? ಅದರ ಎರಡು ಘಟಕಗಳಾದ ಸಾಮಾನ್ಯ ಮತ್ತು ವಿಶೇಷ ಶಕ್ತಿಗಳ ಲಕ್ಷಣಗಳೇನು ? ಬುದ್ಧಿಯನ್ನು ಅಳೆದು ನೋಡುವ ಬಗೆ ಹೇಗೆ ? ಈ ಬುದ್ಧಿಶಕ್ತಿ ನಿದಾನದ ಪದ್ಧತಿಗಳಿಂದ ನಮ್ಮ ಶಿಕ್ಷಣ, ಉದ್ಯೋಗ, ಮುಂತಾದ ಜೀವನದ ಅತ್ಯಂತ ಮಹತ್ವದ ಕ್ಷೇತ್ರಗಳಲ್ಲಿ ಅಮೂಲ್ಯವಾದ ಉಪಯೋಗವು ಹೇಗೆ ಮತ್ತು ಎಷ್ಟು ಆಗಿದೆ ? ಎಂಬಿವೇ ಮೊದಲಾದ ವಿಷಯಗಳನ್ನೊಳಗೊಂಡ ಬುದ್ಧಿಶಕ್ತಿಯ ಮೀಮಾಂಸೆಯನ್ನು ಓಡು-ನೋಟದಿಂದ ಮಾಡಿದಂತಾಯಿತು.

ಈ ವರೆಗೆ ಮನೋವಿಜ್ಞಾನ ಮಂದಿರದ * ಚತುಃಶಾಲೆಯಲ್ಲಿಯ ಇನ್ನೂ ಒಂದು ಶಾಲೆಯನ್ನು ನೊಡವದು ಳಿದಿದೆ. ಅದೋ ಅಲ್ಲಿ ಈ ಕಟ್ಟಡದ ಹೆಸರು ದೊಡ್ಡಕ್ಕರಗಳಲ್ಲಿ ಬರೆದಿದೆ:–'ರೂಪಕ ಮನೋವಿಜ್ಞಾನ, ಅಂದರೆ ಗೆಸ್ಟಾಲ್ಟ ಸಾಯಕೊಲೊಜಿ' ನಡೆಯಿರಿ. ಒಳಹೊಕ್ಕು ಇದರ ಅಂತರಂಗವನ್ನು ಅರಿತುಕೊಳ್ಳುವ. ●

---

* ಮನೋವಿಜ್ಞಾನ ಮಂದಿರದಲ್ಲಿ ಈ ಚತುಃಶಾಲೆಯ ಹೊರತು ಇನ್ನೊಂದು ಕಟ್ಟಡವೂ ಏರ್ಪಟ್ಟಿದೆ. ನಿಜವಾಗಿಯೂ ಅದು ಹೊಮಿಕ್ ಸಾಂಪ್ರದಾಯದ ಒಂದು ಪ್ರವೃತ್ತಿಯ ವಿಕೃತಿ ವಿಶೇಷದ ಕುರಿತು ಹೊರಟ ಸಂಶೋಧನೆಯಾಗಿ ಬೆಳೆದರೂ ಮನಃತತ್ವದ ಕುರಿತು ಕ್ರಾಂತಿಕಾರಿಯಾದ ಹೊಸ ದೃಷ್ಟಿಯನ್ನು ಕೊಡುವಂಥ, ಜ್ಞಾನಪ್ರಪಂಚದಲ್ಲಿ ಒಂದು ಪ್ರಕ್ಷೋಭವನ್ನೇ ಉಂಟುಮಾಡಿದ ಹೊಸದೊಂದು ಮನೋವಿಜ್ಞಾನ ಸಾಂಪ್ರದಾಯವಾಗಿ ಅದು ಬಲಿತು ನಿಂತಿತು. ಈ ಸಾಂಪ್ರದಾಯದ ಅಭಿಮಾನಿಗಳ ಅಭಿಪ್ರಾಯದಂತೆ ಅದು ಬರೇ ಹೊಸದೊಂದು ಚಂದ್ರುಶಾಲೆಯಲ್ಲ; ಮನೋವಿಜ್ಞಾನ ಮಂದಿರದ ಗರ್ಭಗುಡಿಯೇ ಸರಿ! ಈ ಸಾಂಪ್ರದಾಯವು 'ಮನೋವಿಶ್ಲೇಷಣ ಸಿದ್ಧಾಂತವು' ಆದರೆ ವಿಸ್ತಾರ ಭಯದಿಂದಲೂ, ಅದರ ವಿವರಣೆಯನ್ನು ಇಲ್ಲಿ ಮಾಡಿಲ್ಲ. ಇನ್ನೊಮ್ಮೆಗೆ ಬಿಟ್ಟಿದೆ.

# ೪ 'ಗೆಸ್ಟಾಲ್ಟ' (ರೂಪಕ) ಮನೋವಿಜ್ಞಾನ

ಮನೋವಿಜ್ಞಾನವ ರೂಪರೇಖೆಯು ಪೂರ್ಣವಾಗಬೇಕಾದರೆ ಇನ್ನೆರಡು ಸಾಂಪ್ರದಾಯಗಳ ವರ್ಣನೆಯನ್ನು ಸ್ವಲ್ಪದರಲ್ಲಿ ಕೊಡುವದು ಅವಶ್ಯ. ಇವೆರಡೂ ವಾದಗಳು ಒಂದಕ್ಕೊಂದು ಬಹಳೇ ಹೊಂದಿಕೊಂಡಿರುವಂಥವಾಪುದರಿಂದ ಅವುಗಳ ನಿರ್ದೇಶವನ್ನು ಇದರಡಿಯಲ್ಲಿಯೇ ಮಾಡಬಹುದು. ಈ ಮನೋವಿಜ್ಞಾನ ಸಾಂಪ್ರದಾಯವನ್ನು ಬಳಕೆಯಲ್ಲಿ ತಂದವನು ಕ್ರಿಶ್ಚನ್ ಎರೆನ್‌ಫೆಲ್ಸ ಎಂಬ ಆಸ್ಟ್ರಿಯನ್ ತತ್ವಜ್ಞಾನಿಯು. ಇದನ್ನು ಬೆಳಿಸಿಕೊಂಡು ಬಂದವರಲ್ಲಿ ಈ ಮೊದಲೇ ಉಲ್ಲೇಖಿಸಿದ ವೊಲ್ಪಗೆಂಗ ಕೊಹಲರ, ಮ್ಯಾಕ್ಸವರ್ದೀಮರ, ಕರ್ಟ ಕೊಫ್‌ಕಾ ಎಂಬವರು ಪ್ರಮುಖರು. ಈ ಸಾಂಪ್ರದಾಯಕ್ಕೆ ಹೊಂದಿಕೊಂಡಿರುವ ಇನ್ನೊಂದು ಸಾಂಪ್ರದಾಯವು ಓರ್ಗೆ ನಿಸ್ಮತ್ ಮನೋವಿಜ್ಞಾನವೆಂಬುದು.

## ಗೆಸ್ಟಾಲ್ಟ ಸಾಂಪ್ರದಾಯದ ತಿರುಳು :

'ಗೆಸ್ಟಾಲ್ಟ' ಎಂದರೇನು ? ಇದೊಂದು ಜರ್ಮನ್‌ಭಾಷೆಯ ಶಬ್ದ. ಅದರ ಅರ್ಥ ಆಕೃತಿ, ರೂ ಪ ವೆ ಂ ದು ಹೇಳಬಹುದು. (ಒಂದು ನುಡಿಯೊಳಗಿನ ಮಾತಿನ ಹುರುಳು ಇನ್ನೊಂದು ನುಡಿಯಲ್ಲಿ ಸರಿಯಾಗಿ ತಿಳಿಯಾಗಿ ಇಳಿಸಲು ಬರುವದು ಬಿಗಿಯೆಂದ ಬಳಿಕ, ವಿಚಾರಕ್ರಿಯೆಯು ಬಾಷಾನಿಷ್ಟವೇ ಸರಿ ಎಂಬ ಮಾತು ಏಕೆ ನಿಜವಿರಲಾರದು. ? ವರಕವಿಗಳ ಮಾತೇಕೆ, ಸಾಮಾನ್ಯ ಜನರ ಭಾಷೆಗೂ 'ವಾಚಮರ್ಥೋಽನು ಧಾವತಿ' ಎಂಬ ಭವಭೂತಿಯ ವಚನವು ಶಾಸ್ತ್ರೀಯ ದೃಷ್ಟಿಯಿಂದ ಅನ್ವಯಿಸುವದು ! ಗೆಸ್ಟಾಲ್ಟ ಅಂದರೆ ರೂಪ; ಅಂತೆಯೇ ಈ ಸಾಂಪ್ರದಾಯಕ್ಕೆ ರೂ ಪ ಕ ಮನೋವಿಜ್ಞಾನವೆಂದು ಇಲ್ಲಿ ಮರು ಮಾತು ಬಳಿಸಿಕೊಂಡಿದ್ದಾಗಿದೆ. ರೂಪಕವೆಂದರೆ ಒಂದು ಕಾವ್ಯಾಲಂಕಾರವೆಂಬ ತಪ್ಪು ತಿಳುವಳಿಕೆಯನ್ನು ಮಾತ್ರ ಯಾರೂ ಮಾಡಿಕೊಳ್ಳಬಾರದಾಗಿ ಬಿನ್ನಹ.

ಗೆಸ್ಟಾಲ್ಟ (ರೂಪಕ) ಮನೋವಿಜ್ಞಾನದ ತಿರುಳಿನ ತತ್ವವೇನಂದರೆ ನಾವು ಯಾವದೊಂದು ವಸ್ತು–ವಿಷಯವನ್ನು ಮನಗಾಣುವಾಗ–ಅರಿತು ಕೊಳ್ಳುವಾಗ–ಅದರ ಬೇರೆ ಬೇರೆ ಅವಯವಗಳ ಗುಂಪನ್ನಷ್ಟೇ ನೋಡಿ ಕೊಳ್ಳುವದಿಲ್ಲ; ಅದರ ಅಂಗೋಪಾಂಗಗಳ–ಘಟಕಾಂಶಗಳ ಸಾಂಘಿಕ ಚಿತ್ರವಷ್ಟೇ ಮನಸ್ಸಿನಲ್ಲಿ ಮೂಡುವದಿಲ್ಲ; ಆ ವಸ್ತು ವಿಷಯವನ್ನು ಸಾಕಲ್ಯವಾಗಿ, ಸಮಗ್ರವಾಗಿ ಅದರ ಏಕ

ರೂಪತಿಯಲ್ಲಿ ಮನಗಾಣುತ್ತೇವೆ. ಜ್ಞೇಯ ವಸ್ತುವಿನ ವ್ಯತಿರೇಕ ರೀತಿಯ ಬೋಧಕ್ಕಿಂತ ಅನ್ವಯ ರೀತಿಯ ಜ್ಞಾನವೇ ನಮ್ಮ ಮನಸ್ಸಿನಲ್ಲಿ ಮೊದಲು ಬಿಂಬಿಸುತ್ತದೆ. ಆದ್ದರಿಂದ ಮನೋವಿಜ್ಞಾನದ ದೃಷ್ಟಿಯಿಂದ ವಸ್ತು ಬೋಧ ದಲ್ಲಿಯ ಯಾವುದೇ ರೂಪಗೊಂಡ ಪೂರ್ಣತೆಯು ಅದರ ಅಂಶ–ಅಂಗಗಳ ಸಮುದಾಯಕ್ಕಿಂತ ಏನೋ ಮಿಗಿಲಾದದ್ದಿರುತ್ತದೆ.

ಈ ಸಿದ್ಧಾಂತವು ಅನೇಕ ಪ್ರಯೋಗಗಳ ಮೇಲೆ ನೆಲೆಗೊಂಡಿದೆ; ವಿಶೇಷವಾಗಿ, ಕಣ್ಣು ಮತ್ತು ಕಿವಿಗಳ ನಾಡಿನಲ್ಲಿ, ಹಲವುಬಗೆಯ ಪ್ರಯೋಗಗಳನ್ನು ಮಾಡಿ ನೋಡಿ, ಸ್ಥಾಪಿಸಿದ ಪರಿಣಾಮಗಳ ಮೇಲೆ ನಿಂತಿದೆ. ಆದ್ದರಿಂದ ಕೆಲವೊಂದು ಉದಾಹರಣೆಗಳಿಂದ ಈ ಸಿದ್ಧಾಂತವನ್ನು ಮನದಟ್ಟಾಗಿ ಮಾಡಬಹುದಾಗಿದೆ.

### ಕೆಲವು ಉದಾಹರಣೆಗಳು :

ನಾವು ಸಿನೇಮಾ ನೋಡಲು ಹೋಗಿರುವೆವೆಂದು ತಿಳಿಯೋಣ. ಕತ್ತಲೆಯೊಳಗೆ ನಮ್ಮೆದುರು ಬೆಳ್ದೆರೆಯ ಮೇಲೆ ನಿಜವಾಗಿಯೂ ಸ್ಥಿರವಾದ ಬಿಡಿಬಿಡಿಯಾದ ಚಿತ್ರಗಳು ಹೇರಳವಾಗಿ ಮೂಡುತ್ತ ಹೋಗುತ್ತವೆ. ಆದರೂ ನಾವು ಹಾಗೆಯೇ ಬಿಡಿಯಾಗಿ ಬೇರೆಯಾಗಿ ಅವುಗಳನ್ನು ನೋಡುವದೇ ಇಲ್ಲ. ಎಡಬಿಡದೆ ಸಾಗಿದ ಚಟುವಟಿಕೆಗಳ ಇಡಿಯಾದ ಕಥಾಪ್ರಸಂಗವು ನಮ್ಮೆದುರು ಕಾಣುತ್ತದೆ. ಗತಿಮಯವಾದ ಒಂದು ಅಖಂಡ ಚಿತ್ರವನ್ನೇ ನಾವು ನೋಡುತ್ತೇವೆ. ಆದುದರಿಂದ ಗೆಸ್ಟಾಲ್ಟ ಮನೋವಿಜ್ಞಾನಿಯು ಇದರ ಉಪಪತ್ತಿಯನ್ನು ಹೀಗೆ ಕಂಡು ಹಿಡಿದಿರುವನು.

ಬಿಡಿಯಾದ ಚಿತ್ರಗಳು ಭರದಿಂದ ನಮ್ಮ ಕಣ್ಣೆದುರು ಸರಿದು ಹೋಗುತ್ತಿರುವಾಗ, ಅವುಗಳ ಅನುಕ್ರಮವಾದ ಬೋಧವನ್ನು (ಸಂವೇದನೆಯನ್ನು) ನಾವು ಪಡೆಯು ತ್ತಿರುವಾಗಲೇ, ಒಂದರ ಹಿಂದೊಂದು ಮೂಡಿ, ಮಾಯವಾಗುತ್ತಿರುವ ಆ ಚಿತ್ರ ಗಳ ಅರಿವು, ನಮ್ಮ ಮನಸ್ಸಿನಲ್ಲಿ ಇನ್ನೂ ಒಂದು ವ್ಯಾಪಾರಕ್ರಮವನ್ನು ಚಾಲನೆ ಗೊಳಿಸುತ್ತದೆ. ಈ ಮನೋವ್ಯಾಪಾರವೇ ರೂಪಕ ಕ್ರಿಯೆಯು–ರೂಪೀಕರಣವು. ಈ ಕ್ರಿಯೆಯು ಪರಿಣಾಮವಾಗಿ ಗತಿಮಯವಾಗಿ ತೋರುವ ಸತತ ಚಿತ್ರದ ಪಡಿಯಚ್ಚು ಮೂಡುತ್ತದೆ. ಬಿಡಿಯಾದ ಭಾಸಗಳನ್ನು ಹೊಂದಿಸಿಕೊಂಡು ಒಂದು ಇಡಿಯಾದ ಆಭಾಸ ಮನಸ್ಸು ಪಡೆಯುತ್ತದೆ.

ಸ್ಥಿರ ಚಿತ್ರಗಳ ಅನ್ಯೋನ್ಯ ಸಂಬಂಧಗಳ ಅಭಿಜ್ಞಾನದಿಂದ (ಬೋಧದಿಂದ) ಪ್ರೇರಿತ ವಾಗುವ ರೂಪೀಕರಣದ ವ್ಯಾಪಕ ಕ್ರಮವು, ಭರದಿಂದ ಸಾಗುವ ಚಿತ್ರಪಟದ ಹರಿದಾಟದ ಬರೇ ಹೊರಗಿನ ಅರಿವನ್ನು ಅಂಟಿಕೊಂಡಿರುವದಿಲ್ಲ; ಅದು ಮನಸ್ಸಿನದೇ ರಚನಾತ್ಮಕವಾದ ವಿಧಾಯಕವಾದ ಒಂದು ಚಟುವಟಿಕೆಯ ಫಲವಾಗಿದೆ.

ಇನ್ನೊಂದು ಉದಾಹರಣೆಯನ್ನು ನೋಡೋಣ. ಒಂದು ಕೊಳಲು ಇಲ್ಲವೇ ವೀಣೆಯಂಥ ವಾದನ ಸಾಧನದ ಮೇಲೆ ವಿವಿಧ ಸ್ವರಗಳ ಮಾಲಿಕೆಯನ್ನು ಸಂಗೀತಗಾರನು ನುಡಿಸುತ್ತಾನೆ. ಆದರೆ ನಾವು ಕೇಳುವದು (ಅಂದರೆ ನಮಗೆ ಅನಿಸುವದು) ಬರೇ ಸ್ವರಗಳ ವಿವಿಧತೆಯಲ್ಲ; ಅವುಗಳೊಳಗಿಂದ ಅನುಸ್ಯೂತವಾದ, ಅವುಗಳನ್ನೆಲ್ಲ ಒಳಗೊಂಡು ನಿಂತ ರಾಗ ವಿಸ್ತಾರದ-ಸಂಗೀತ ವಿಲಾಸದ-ರಮ್ಯ ರೂಪ, ಸ್ವರ ರಚನೆಯ ಹಂದರದಲ್ಲಿ ಹಾಸು ಹೊಕ್ಕಾಗಿ ಹಬ್ಬಿದ ರಾಗದ ರೂಪವು ಕೇವಲ ಸ್ವರಗಳ ಸಮುದಾಯವಲ್ಲ. ಏಕೆಂದರೆ ಒಂದು ಶ್ರುತಿಯಿಂದ ಇನ್ನೊಂದು ಶ್ರುತಿಗೆ ಏರಿಸಿ ಇಲ್ಲವೇ ಇಳಿಸಿ ನಾವು ಆ ಆ ಬಿಡಿಸ್ವರಗಳನ್ನು ಬದಲಾಯಿಸಿಕೊಳ್ಳಬಹುದು. ಆದರೂ ಅದೇ ರಾಗವನ್ನು ರೂಪಗೊಳಿಸಿ ಕೊಳ್ಳುತ್ತೇವೆ. ಇದೇ ಲಕ್ಷಣವು ಪ್ರತಿಯೊಂದು ಶ್ರುತಿಯಲ್ಲಿಯೂ ಕಂಡುಬರುವದು. ಯಾವದೊಂದು ಶ್ರುತಿಯನ್ನು ಅದರ ಮುಖ್ಯ ಮತ್ತು ಗೌಣ ಸ್ಪಂದನಗಳಲ್ಲಿ ವಿಂಗಡಿಸಿ ಕೊಳ್ಳಬಹುದು. (ಗೌಣ ಸ್ಪಂದನಗಳೆಂದರೆ ಒಂದು ಶ್ರುತಿಯಿಂದ ಇನ್ನೊಂದಕ್ಕೆ ತಲ್ಪಿಸುವ ನಡುವಿನ ಏರಿಕೆಯ ಇಲ್ಲವೆ ಇಳಿಕೆಯ ಮುಂದ ಸ್ಪಂದನಗಳು) ಆದರೆ ಅವೆಲ್ಲ ಸ್ಪಂದನಗಳನ್ನು ಬಿಡಿಯಾಗಿ ಉಂಟು ಮಾಡಿ ವಿಚಾರದಿಂದ ಬರೇ ಒಟ್ಟು ಗೂಡಿಸಿಕೊಂಡರೆ ಆ ಅಖಂಡವಾದ ಮಾಧುರ್ಯದ ಶ್ರುತಿಯ ಭಾಸವಾಗುವದಿಲ್ಲ.

### ಪರಿಪೂರ್ಣಬೋಧದ ಏಕರೂಪತೆಯ ತತ್ವ :

ಏಕರೂಪವಾದ ಪೂರ್ಣ ಬೋಧದ ಈತತ್ವವು ಪಶು ಮನೋವಿಜ್ಞಾನದಲ್ಲಿಯೂ ಶಿಶು ಮನೋವಿಜ್ಞಾನದಲ್ಲಿಯೂ ಬಹಳೇ ಮಹತ್ವದ ಶೋಧವಾಗಿದೆ ಎಂದು ಎಲ್ಲರೂ ಒಪ್ಪುತ್ತಾರೆ. ಆದರೆ ಬೇರೆ ಬೇರೆ ತರಗತಿಯ ಬುದ್ಧಿ ಶಕ್ತಿಯ ಜನಗಳು ಗ್ರಹಿಸಿಕೊಳ್ಳುವ ಬಾಹ್ಯ ಪ್ರಪಂಚದಲ್ಲಿಯ ವಸ್ತು ವಿಷಯಗಳ ಅಖಂಡ ಏಕ ರೂಪವಾದ ಪೂರ್ಣ ಚಿತ್ರವು, ಎಲ್ಲರಲ್ಲೂ ಒಂದೇ ತೆರನಾಗಿರುವದಿಲ್ಲವೆಂಬುದು ಪ್ರಯೋಗಗಳಿಂದ ಕಂಡುಬಂದಿದೆ.

ಈ ಮೊದಲು ಕೊಹಲರನು ಮಾಡಿದ ಚಿಂಪೆಂಝಿ ಎಂಬ ಕೋಡಗಗಳ ಪ್ರಯೋಗಗಳನ್ನು ಬಣ್ಣಿಸಲಾಗಿದೆ. ಆ ಚಿಂಪೆಂಝಿಗಳು ಕೆಲವೊಂದು ಸನ್ನಿವೇಶಗಳನ್ನು ತಮ್ಮ ಹಿಡಿತದಲ್ಲಿ ತರಲಾರವೆಂದು ಹೇಳಿದ್ದಾಗಿದೆ. ಕೆಲವೊಂದು ಸಮಸ್ಯೆಯ ಸಂದರ್ಭಗಳನ್ನು ತಿಳಿದುಕೊಳ್ಳಲು ಆ ಪ್ರಾಣಿಗಳಿಗೆ ಬಿಗಿಯಾಗುತ್ತದೆ. ಏಕೆಂದರೆ ಯಾವದೊಂದು ವಸ್ತುವಿನ ಭಾಗಗಳನ್ನೆಲ್ಲ ಇಡಿಯಾಗಿ ನೋಡಿ ಸಮ್ಯಕ್ ದೃಷ್ಟಿಯಿಂದ ವಿಚಾರಿಸಿ ತಿಳಿದುಕೊಳ್ಳಲು ಅವು ಅಸಮರ್ಥವಾಗಿವೆ. ಈ ಶಕ್ತಿಯು ಒಳನೋಟದ ವಿಷಯವು, ಅಂಶಗಳ ಅನ್ಯೋನ್ಯ ಸಂಬಂಧಗಳನ್ನು ಸರಿಯಾಗಿ ಮನಗಾಣುವ ಸ್ವತಃಸಿದ್ಧವಾದ ಶಕ್ತಿಯು. ಈ ಶಕ್ತಿಯು ಪ್ರತಿಯೊಂದು ವ್ಯಕ್ತಿಯಲ್ಲಿಯೂ ಒಂದೇ ಪ್ರಮಾಣದಲ್ಲಿ ಇರುವದಿಲ್ಲ; ಮತ್ತು ಪಶುಗಳಿಗಿಂತ ಮನುಷ್ಯರಲ್ಲಿ ಅದು ಬಹಳೇ ಮಿಗಿಲಾದ ಪ್ರಮಾಣದಲ್ಲಿರುತ್ತದೆ. ಇಂಗ್ಲಂಡಿಗೆ ಬಂದಕ್ಷಣಾರ್ಧದಲ್ಲಿಯೇ ಸೀಝರನು ಆಂಗ್ಲಭೂಮಿಯನ್ನೆಲ್ಲ ಗೆದ್ದಂತೆ, ದೃಷ್ಟಿಮಾತ್ರದಿಂದಲೇ ಮನುಷ್ಯನು ಹಲವು ಸಮಸ್ಯೆಗಳನ್ನು ಗ್ರಹಿಸಿಕೊಳ್ಳಬಲ್ಲನು. ಆದರೆ ಇಂತಹ ತೀರ ಸಾಮಾನ್ಯ ಸಮಸ್ಯೆಯನ್ನು ಕೂಡ ಸಮಗ್ರವಾಗಿ ಅರಿತುಕೊಳ್ಳಲು ಚಿಂಪೆಂಝಿಗೆ ಬಹಳ ಬಿಗಿಯಾಗುವದು. ಇದಕ್ಕೆ ಕಾರಣವೇನು ? ಮಾನವನಿಗೆ ಇರುವ ರೂಪೀಕರಣದ ಎಂದರೆ ಈ ಇಡಿ ನೋಟದ ಅರಿವಿನ ಕೊರತೆಯು.

ಆಧುನಿಕ 'ಗೆಸ್ಟಾಲ್ಟ್' ಮನೋವಿಜ್ಞಾನಿಗಳು ಬುದ್ಧಿಶಕ್ತಿಯೆಂದರೆ ಮಜ್ಜಾತಂತು ಸಂಸ್ಥೆಯಲ್ಲಿ ನಡೆವ ಜಟಿಲವಾದ ಚಟುವಟಿಕೆಗಳ ಕ್ರಮವೆಂದು ತಿಳಿಯುವರು. ಈ ಕ್ರಮವಾಗಲೀ ಶಕ್ತಿಯಾಗಲೀ ಜ್ಞಾನೇಂದ್ರಿಯಗಳಿಂದ ಸಿಗುವ ಮೂಲಭೂತ ಸಂವೇದನೆಗಳ ಆಧಾರದ ಮೇಲೆ ಕೆಲಸ ಮಾಡುತ್ತದೆ.

ವರ್ತನವಾದಿಗಳಂತೆಯೇ ಈ ರೂಪಕವಾದಿಗಳು ('ಗೆಸ್ಟಾಲ್ಟ' ಮನೋವಿಜ್ಞಾನಿಗಳು) ಎಲ್ಲ ಮನೋವ್ಯಾಪಾರಕ್ರಮಗಳಿಗೆ ಶಾರೀರಿಕ ಅಧಿಷ್ಠಾನವನ್ನು ಒಪ್ಪಿಕೊಳ್ಳುವರು. ಬಾಹ್ಯ ಪರಿಸ್ಥಿತಿಯಲ್ಲಿರುವ ಪೂರ್ಣತೆಗಳಿಗೆ ಪ್ರತಿಯಾಗಿ ಕೆಲಸ ಮಾಡುವ–ಅವುಗಳನ್ನು ಪ್ರತಿಬಿಂಬಿಸುವ,–ವ್ಯವಸ್ಥೆಯಂತಿರುವ ರೂಪಕ ರೀತಿಗಳು,–ರೂಪೀಕರಣದ ಮಾದರಿಗಳು ಮನುಷ್ಯನ ಮಜ್ಜಾತಂತು ಸಂಸ್ಥೆಯಲ್ಲಿ ಇರುತ್ತವೆಂದೂ ಈ ವ್ಯವಸ್ಥೆಯು ನಮಗೆ ಅನಿಸುವ ಮಾನಸಿಕ ಚಿತ್ರಗಳ ಪೂರ್ಣತೆಗೆ ಹೊಂದಿಕೊಂಡು ನಡೆಯುವದೆಂದೂ ಈ ರೂಪಕವಾದಿಗಳು ಸಾಧಿಸುತ್ತಾರೆ.

ಆದರೆ ವರ್ತನವಾದಿಗಳಿಗೂ ಇವರಿಗೂ ಮುಖ್ಯವಾದ ಭೇಧವಿದೆ. ಎಲ್ಲ ಸಂಕೀರ್ಣ

ವರ್ತನ ಪದ್ಧತಿಗಳು ಪ್ರಾಥಮಿಕವಾದ ಕೆಲವೇ ಪ್ರತಿಕ್ರಿಯೆಗಳೊಳಗಿಂದ ಕಟ್ಟಲ್ಪಡುವವೆಂದು ವರ್ತನವಾದಿಗಳು ಪ್ರತಿಪಾದಿಸುವರಷ್ಟೇ. ಆದರೆ ಈ ಗೆಸ್ಟಾಲ್ಟ ಮನೋವಿಜ್ಞಾನಿಗಳು ಇದನ್ನು ಆಗ್ರಹದಿಂದ ಅಲ್ಲಗಳೆಯುವರು. ಇವರ ಮತವೇನಂದರೆ, ಪಶುವಾಗಲೀ, ಶಿಶುವಾಗಲೀ, ತನ್ನ ಬುದ್ಧಿಶಕ್ತಿಗೆ ನಿಲುಕುವಷ್ಟು ಮಟ್ಟಿಗೆ, ಮೊದಲಿನಿಂದಲೇ ಯಾವದೊಂದು ಸನ್ನಿವೇಶವನ್ನಾಗಲೀ, ಸಂಗತಿಯನ್ನಾಗಲೀ, ಸಮಗ್ರವಾಗಿಯೇ ಗ್ರಹಿಸುತ್ತದೆ. ವಸ್ತು ವಿಷಯಗಳ ಕುರಿತು ಬರುವ ಇಡಿನೋಟವೂ ವರ್ತನವಲ್ಲಿಯ ಇಡಿಯಾದ ಮಾದರಿಗಳೂ ಮೆಲ್ಲಮೆಲ್ಲಗೆ ಮಾರ್ಪಟ್ಟು ಬೆಳೆಯುವದಿಲ್ಲ. ಈ ಮಾದರಿಗಳು–ಪೂರ್ಣವಾದ ರೂಪರೇಖೆಗಳು ಮೊತ್ತದಲ್ಲಿ ಸ್ಥೂಲವಾಗಿ, (ಪ್ರಾಥಮಿಕ ತರದವಾಗಿ) ರಬಹುದು, ಅವುಗಳನ್ನೊಳಗೊಂಡ ಬಗೆಬಗೆಗಳೆಲ್ಲ ಮುಂದೆ ಕ್ರಮೇಣ ಮೂಡುತ್ತ ಬಂದು ಮನಸ್ಸಿನೊಳಗಿನ ಪಡಿಯಚ್ಚುಗಳು ಜಟಿಲವಾಗುತ್ತ ಹೋಗಬಹುದು. ಈ ರೀತಿಯಾಗಿ ರೂಪಗೊಳ್ಳುವ ಜಟಿಲ ಚಿತ್ರವು 'ಯಥಾರ್ಥತೆಯ ತತ್ವ'ದಂತೆ ಸರಿಯಾಗಿ ಮೂಡಿನಿಲ್ಲುವದು. ಈ 'ಯಥಾರ್ಥತೆಯ ತತ್ವ'ಕ್ಕೆ ಅನುಸಾರವಾಗಿ ನಾವು 'ಮನಗಂಡ' ರೂಪರೇಖೆಗಳು 'ಪ್ರಚಲಿತ ಪರಿಸ್ಥಿತಿಯಲ್ಲಿ ಶಕ್ಯವಿದ್ದಷ್ಟು ಪೂರ್ಣವಾಗಹತ್ತುತ್ತವೆ.'

ಈ ತತ್ವದ ಕುರಿತು ಮನೋರಂಜಕವಾದ ಉದಾಹರಣೆಗಳನ್ನು ಕಾಣಿಸಬಹುದು. ಹಿಂದೆ ಹೇಳಿದ ಕೊಹಲರನ ಚಿಂಪೆಂಝಿಗಳಿಗೆ ಮೊದಲು ಮರದ ಕೊಂಬೆಯೊಂದನ್ನು ಮುರಿದು ತೆಗೆದು ಅದರಿಂದ ಆಹಾರವನ್ನು ತಮ್ಮ ಕೈಯೊಳಗೆ ಎಳಕೊಳ್ಳಬೇಕೆಂಬ ಕಲ್ಪನೆಯನ್ನು ಗ್ರಹಿಸುವದಕ್ಕೆ ಬಲುಬಿಗಿಯಾಯಿತು.

### ಶಿಶುಗಳೂ ಪಶುಗಳೂ–

ಇಂಥ ಮಂಗಗಳಂತೆ ಮಕ್ಕಳಿಗೂ ಕೆಲವೊಂದು ಸನ್ನಿವೇಶಗಳನ್ನು ಸಮಗ್ರವಾಗಿ ಆಕಲನ ಮಾಡಿಕೊಳ್ಳಲು ಬರುವದಿಲ್ಲ. ಹೀಗೆ ಇದುರಬಂದ ಪ್ರಸಂಗದಲ್ಲಿ ತಮ್ಮ ವಿಚಾರಶಕ್ತಿಯು ಕೆಲಸ ಮಾಡದಿರುವವರಿಂದಲೇ, ಚಿಕ್ಕ ಮಕ್ಕಳಿಗೆ ಬೀದಿಗಳಲ್ಲಿ ಹಲವು ಅಪಘಾತಗಳಿಗೆ ಈಡಾಗಬೇಕಾಗುತ್ತದೆ. ಅಂಥ ಒಂದು ಪ್ರಸಂಗವನ್ನೇ ಕಲ್ಪಿಸೋಣ. ಬೀದಿಯ ಇದುರು ಬದಿಯಲ್ಲಿ ದೂರದಲ್ಲಿರುವ ಒಂದು ಮನೆಯಿಂದ ವೃತ್ತಪತ್ರಿಕೆಯನ್ನು ಇಸಕೊಂಡು ಬರಲು ತಂದೆಯು ಮಗುವನ್ನು ಅಟ್ಟುವನು. ಮಗುವು ತನ್ನ ವಿರುದ್ಧ ನಿಟ್ಟಿನಲ್ಲಿರುವ ಮನೆಯನ್ನು ನೋಡುವದು. ಮಗುವಿನ ದೃಷ್ಟಿಯಿಂದ ಈ ಸನ್ನಿವೇಶದಲ್ಲಿ ಮೂರೆ ಸಂಗತಿಗಳು ಒಳಗೊಂಡಿವೆ: ತನಗೆ

ಹೇಳಿದ 'ಬಿಟ್ಟಿ' ಇದುರಿಗಿದ್ದ ಮನೆ. ಅಲ್ಲಿಗೆ ತಲ್ಪಲಿಕ್ಕೆ ಬೀದಿಯನ್ನು ದಾಟಿ ಹೋಗಬೇಕಾದ ಕೆಲಸ. ಬೀದಿಗುಂಟ ಬರಹೋಗುವ ಮಂದಿ–ಮೋಟರುಗಳ ಕಲ್ಪನೆಯು ಅವನು ಮನಗಂಡ ಸನ್ನಿವೇಶದ ರೂಪರೇಷೆಯಲ್ಲಿ ಇರುವದಿಲ್ಲ! ಚಿಕ್ಕಮಕ್ಕಳಿಗೆ ಒಂದು ಮೋರೆಯ ಚಿತ್ರವನ್ನು ತೋರಿಸಿದರೆ, ಅದರಲ್ಲಿ ಒಂದು ಮುಖ್ಯವಾದ ಅವಯವವು ಕಾಣಲಿಲ್ಲವಾದರೂ ಅದನ್ನು ಅವರು ಏನೂ ಗ್ರಹಿಸದೇ ಹೋಗಬಹುದು! ಅಂಥ ಚಿತ್ರವನ್ನು ನಾಲ್ಕು ವರ್ಷ ವಯಸ್ಸಿನ ಬಾಲಕನ ಮುಂದೆ ಹಿಡಿದು, ಅದರಲ್ಲಿ ಯಾವ ಕುಂದಿದೆಯಂತ ಕೇಳಿದರೆ ಆತನು ಏನೂ ಹೇಳಲಾರನು: ಐದು ವರ್ಷದ ಬಾಲಕರಲ್ಲಿ ಮೂವರಿಗೊರ್ವನಂತೆ ತಕ್ಕ ಉತ್ತರವನ್ನು ಕೊಡಬಲ್ಲ! ಆದರೆ ಹತ್ತುವರ್ಷದವರೆಗಿನ ವಯಸ್ಸಿನ ಬೇರೆ ಬೇರೆ ವರ್ಷದ ಮಕ್ಕಳ ಗುಂಪಿನಲ್ಲಿ ಆ ಅಪೂರ್ಣವಾದ–ಒಂದವಯವ ವಿಲ್ಲದ ಮೋರೆಯ–ಚಿತ್ರದಿಂದಲೇ ಸಂತುಷ್ಟರಾಗುವವರ ಸಂಖ್ಯೆಯು ಸಾಕಷ್ಟು ಇರುವದು ಕಂಡುಬರುತ್ತದೆ!

ಹೀಗೆ ಏಕಾಗುವದು? ಗೆಸ್ಟಾಲ್ಟ ಮನೋವಿಜ್ಞಾನಿಯ ಅಭಿಪ್ರಾಯವೇನೆಂದರೆ ಮೇಲಿನ ಉದಾಹರಣೆಗಳಲ್ಲಿ ಹೇಳಿದಂತಹ ಮಕ್ಕಳ ಮನಸ್ಸಿನಲ್ಲಿ ಪ್ರತಿಬಿಂಬಿತ ವಾಗುವ ರೂಪರೇಷೆಯು ಮತ್ತೆ ತಿದ್ದುಪಡೆ ಹೊಂದುವದಕ್ಕೆ ಎಡೆಯಿರುವದಿಲ್ಲ. ಮನಸ್ಸಿನಲ್ಲಿ ಒಮ್ಮೆ ಮೂಡಿದ ಸನ್ನಿವೇಶ ಇಲ್ಲವೇ ಸಮಸ್ಯೆಯ ಚಿತ್ರವು ಸ್ವಯಂ ಪೂರ್ಣವಾಗಿಯೇ ಇರುತ್ತದೆ. ಅಂದರೆ ಆ ಪಶುವಾಗಲೀ ಶಿಶುವಾಗಲೀ ಒಂದು ಪ್ರಸಂಗದ ಸ್ಥೂಲ ರೂಪವನ್ನು ಒಮ್ಮೆ ಮನಗಂಡ ಪೂರ್ಣತೆಯಲ್ಲಿಯೇ ನೋಡಿಕೊಳ್ಳುವ ವಾಡಿಕೆಯಿರುವದರಿಂದ, ಆ ಸ್ಥೂಲ ಚಿತ್ರವನ್ನು ಯಥಾರ್ಥ ವಾಗಿಸುವಂಥ ಬೇರೆ ಹೊರಗಿನ ಹೊಸ ವಿವರಗಳು ಸೇರಿ ಅದು ಇನ್ನೂ ಹೆಚ್ಚಾಗಿ ಬೆಳೆಯಲು ಕಠಿಣವಾಗಿ ಬಿಡುತ್ತದೆ.

ಈ ತರದ 'ಅಬದ್ಧ' ರೂಪದ ಸನ್ನಿವೇಶವನ್ನು ಚನ್ನಾಗಿ ಮನವರಿಕೆ ಮಾಡಿ ಕೊಡುವಂಥ ಪ್ರಯೋಗವು ಒಂದು ಪಶುವಿನ ಉದಾಹರಣದಲ್ಲಿ ಸಿಗುವದು. ಬೆಳಕಿನಿಂದ ತುಂಬಿದ ಎರಡು ಆಹಾರದ ಪೆಟ್ಟಿಗೆಗಳನ್ನು ಆ ಪಶುವಿನ ಪಂಜರದಲ್ಲಿ ಇಡುತ್ತಾರೆ. ಆದರೆ ಆಹಾರವನ್ನು ಎರಡೂ ಪೆಟ್ಟಿಗೆಗಳಲ್ಲಿರಿಸದೆ, ಹೆಚ್ಚು ಬೆಳ ಕುಳ್ಳ ಪೆಟ್ಟಿಗೆಯಲ್ಲಿಡುತ್ತಾರೆ. ಆ ಪಶುವಿಗೆ ಹೆಚ್ಚು ಬೆಳಕಿನ ಪೆಟ್ಟಿಗೆಯ ಕಡೆಗೆ ಆಗಾಗ್ಗೆ ಹೋಗುವ ವಾಡಿಕೆಯು ಚೆನ್ನಾಗಿ ಆದಮೇಲೆ, ಎರಡೂ ಪೆಟ್ಟಿಗೆಗಳಲ್ಲಿಯ ಬೆಳಕಿನ ಪ್ರಮಾಣವನ್ನು ಬದಲಿಸುವರು. ಈಗ ಹಿಂದಿನ ಹೆಚ್ಚು ಬೆಳಕಿನ ಪೆಟ್ಟಿಗೆಯಲ್ಲಿ ಬೆಳಕು ಮಂದವಾಗಿ ಇನ್ನೊಂದರೊಳಗೆ ಅದು ಹೆಚ್ಚಾಗುವದು.

ಆದರೆ ಪಶುವು ಬೆಳಕನ್ನು ನಂಬಿ ನಡೆವ ವಾಡಿಕೆ ಮಾಡಿಕೊಂಡಿದ್ದ ಮೂಲಕ– ಈಗ ಹೆಚ್ಚು ಬೆಳಕುಳ್ಳ ಎರಡನೇ ಪೆಟ್ಟಿಗೆಯ ಕಡೆಗೇ ಹೋಗುವದು. ಆದರೆ ಆ ಪೆಟ್ಟಿಗೆಯಲ್ಲಿ ಆಹಾರವಿಲ್ಲವೆಂಬುದು ಅದಕ್ಕೆ ಗೊತ್ತಾಗುವದಿಲ್ಲ. ಏಕೆಂದರೆ ಅದರ ಮನಸ್ಸಿನಲ್ಲಿ 'ಅಬದ್ಧವಾಗಿ' ರೂಪಗೊಂಡ ಸನ್ನಿವೇಶದಲ್ಲಿ ಈ ಆಹಾರದ ಅರಿವಿನ ಅಂಶವು ಸೇರಲಾರದು.

ಆ ಬಡ ಪಶುವಿನ ಮಾತೇಕೆ ? ನಾವೇ ನಮ್ಮನ್ನು ತುಸು ನಿರೀಕ್ಷಿಸಿಕೊಂಡರೆ, ನಮ್ಮ ನಡತೆಗಳೊಳಗಿನ ಇಂಥ ಹಲವು 'ಅಬದ್ಧ' ಸನ್ನಿವೇಶಗಳು ನೆನಪಿಗೆ ಬರುತ್ತವೆ. ಇಂಥ ಸನ್ನಿವೇಶಗಳ ಮೂಲಕವೇ ನಮ್ಮಿಂದ ತಪ್ಪುಗಳಾಗುತ್ತವೆ. ನಾವು ದಿನಾಲು ಓದುವ ವೃತ್ತಪತ್ರಿಕೆಯನ್ನು ಒಂದು ದಿನ ಬದಲಿಸಿ ಹೊಸ ವೃತ್ತಪತ್ರವನ್ನು ಕೈಯಲ್ಲಿ ಎತ್ತಿಕೊಂಡರೆ ದಿನದಂತೆ ಆ ಬಂಗಾರದ ಧಾರಣೆ ನೋಡಲು ಅದರ ನಾಲ್ಕನೆಯ ಪುಟವನ್ನೇ ನಾವು ತಿರುವಿಹಾಕುವೆವು. ಏಕೆಂದರೆ ನಮ್ಮ ದಿನ ಪತ್ರಿಕೆಯಲ್ಲಿ ಆ ಸುದ್ದಿಯನ್ನು ಆ ಪುಟದಲ್ಲಿಯೇ ಓದಿಕೊಂಡು ಬಂದ ವಾಡಿಕೆಯಾಗಿ ಬಿಟ್ಟಿದೆ ನಮಗೆ. ಆದರೆ ನಮ್ಮ ಹೊಸ ಪತ್ರಿಕೆಯಲ್ಲಿ ಆ ಸಂಗತಿಯು ಎಂಟನೇ ಪುಟದಲ್ಲಿ ಇದ್ದಿರಬಹುದು. ಅದರ ಅರಿವು ಒಮ್ಮೆಲೆ ಮೊದಲು ನಮಗೆ ಆಗುವದಿಲ್ಲ ! ಅದೇ ಮೇರೆಗೆ ನಾವು ಮೊದಲಿನ ಮನೆಯನ್ನು ಬದಲಿಸಿದಾಗ ಇದೇ ಅನುಭವ ಬರುತ್ತದೆ. ಹೊಸ ಮನೆಯಲ್ಲಿ, ನಾವು ಬಲಗಡೆಗೆ ಹೊರಳಬೇಕಾದರೂ ಹಳೆಮನೆಯಲ್ಲಿಯಂತೆ ಎಡಗಡೆಗೆ ಹೊರಳಿ ಗೋಡೆಯನ್ನು ಇದುರಿಸುವೆವು ! ನಮ್ಮ ಕಚೇರಿಗಾಗಲೀ ಶಾಲೆಗಾಗಲೀ ಹೋಗುವ ಯಾವದೊಂದು ದಾರಿಯನ್ನು ಬಹುಕಾಲ ಹಿಡಿದನಂತರ, ಒಮ್ಮೆ ಹೊಸದಾರಿಯಿಂದ ಹೋಗ ಲಾರಂಭಿಸಿದರೂ, ಅನ್ಯಮನಸ್ಕರಾಗಿ ನಡೆಯುವಾಗ ನಮ್ಮ ಕಾಲುಗಳು ಹಿಂದಿನ ಹಾದಿಗೇ ಹೊರಳುವದುಂಟು. ಇವಕ್ಕೆಲ್ಲ ನಾವು ರೂಢಿಯ ಬಲವೆನ್ನುವೆವು. ಆದರೆ ಗೆಸ್ಟಾಲ್ಟ ಮನೋವಿಜ್ಞಾನಿಗಳು ಶಾಸ್ತ್ರೀಯ ಪರಿಭಾಷೆಯಲ್ಲಿ ಇಂಥ ಚಟಗಳನ್ನು 'ಅಬದ್ಧ' ಸನ್ನಿವೇಶಗಳೆಂದು ಕರೆಯುವರು.

ಇಂಥ ತಪ್ಪುಗಳನ್ನು ನಾವು ಬೇಗನೆ ತಿದ್ದಿಕೊಳ್ಳುವೆವು. ಮಾನವ ಸಹಜವಾದ ಮೇಲ್ತರಗತಿಯ ಗ್ರಹಿಕೆಯೂ ಇಚ್ಛಾಶಕ್ತಿಯೂ, ನಿರ್ಣಯ ಬುದ್ಧಿಯೂ (ವಿವೇಕವೂ) ಇಂಥ ಅಬದ್ಧ ಸನ್ನಿವೇಶಗಳನ್ನು ಮಾರ್ಪಡಿಸಿ ರೂಪಗೊಳಿಸುತ್ತವೆ. ಹೊಸದೊಂದು ಪರಿಸ್ಥಿತಿಗೆ–ಸನ್ನಿವೇಶಕ್ಕೆ–ತನ್ನನ್ನು ಹೊಂದಿಸಿಕೊಳ್ಳುವ ಸಾಮರ್ಥ್ಯವೂ, ಆ ಹೊಸ ಸನ್ನಿವೇಶದ ಅವಶ್ಯಕತೆಗಳನ್ನೆಲ್ಲ ಬೇಗನೆ ಆಕಲನೆಯಲ್ಲಿ ತಂದುಕೊಳ್ಳುವ ಶಕ್ತಿಯೂ, ಮನುಷ್ಯನನ್ನು ಆತನ ಸಮೀಪದ ಪ್ರಾಣಿಗಳಾದ

ನರರಂಥ ವಾಸರರಿಂದಲೂ ಕೂಡ, ಬೇರ್ಪಡಿಸಿ ಮೇಲ್ತರಗತಿಗೆ ಒಯ್ಯಲು ಕಾರಣಗಳಾಗಿವೆ.

## ಗೆಸ್ಟಾಲ್ಟ ಸಾಂಪ್ರದಾಯದಲ್ಲಿ ವಿದ್ಯೆಯೂ, ವಿದ್ಯುಚ್ಛಕ್ತಿಯೂ :–

ಗೆಸ್ಟಾಲ್ಟ ಮನೋವಿಜ್ಞಾನದ ವ್ಯಾಖ್ಯೆಯಂತೆ ವಿದ್ಯೆ (ಕಲಿಯುವಿಕೆ) ಎಂದರೆ, ಯಾವದೊಂದು ಸೇಂದ್ರಿಯ ವಸ್ತುವು ಪರಿಸ್ಥಿತಿಯಿಂದ ಬರುವ ಪ್ರಚೋದನೆಗೆ ತೋರುವ ಪ್ರತಿಕ್ರಿಯೆಯನ್ನು ತಿದ್ದಿ, ಪೂರ್ಣಗೊಳಿಸುವಿಕೆಯೇ ಸರಿ. ಈ ಪ್ರತಿ ಕ್ರಿಯೆಯನ್ನು ಪೂರ್ಣಗೊಳಿಸುವ ಕ್ರಮವು ಬೆಳವಣಿಗೆಯೊಂದಿಗೆ ನೇರವಾಗಿ ಹೊಂದಿಕೊಂಡಿದೆ. ಬೆಳವಣಿಗೆಯೆಂದರೆ, ಸೇಂದ್ರಿಯ ಪ್ರಾಣಿಯ ವಿವಿಧ ನಿಯತ ಕರ್ಮಗಳು-ಇಂದ್ರಿಯ ವ್ಯಾಪಾರಗಳು–ಬೇರೆ ಬೇರೆಯಾಗಿ ನಿಶ್ಚಿತವಾದ ತಮ್ಮ ತಮ್ಮ ವಿಶಿಷ್ಟತೆಯನ್ನು ಹೆಚ್ಚು ಹೆಚ್ಚಾಗಿ ರೂಪಗೊಳಿಸಿಕೊಳ್ಳುವ ಕ್ರಮವೇ ಸರಿ. ಅದರಂತೆ ಗೆಸ್ಟಾಲ್ಟ ಸಂಪ್ರದಾಯದವರು ವರ್ತನವನ್ನೂ ಒಂದು ಗತಿಮಯವಾದ ರೀತಿಯಲ್ಲಿ ಆಗುವ ಬೆಳವಣಿಗೆಯ ರೂಪದಲ್ಲಿ ಕಾಣುತ್ತಾರೆ.

ಗೆಸ್ಟಾಲ್ಟ ಮನೋವಿಜ್ಞಾನದ ಮತ್ತೊಂದು ವಿಶೇಷವಿದೆ. ಅದು ಓದುಗರಿಗೆ ಬಲು ಸೋಜಿಗವಾಗಿ ತೋರಬಹುದು. ಮನೋವಿಜ್ಞಾನದ ತಳಹದಿಯಾದ ಶಾರೀರಿಕ ವ್ಯಾಪಾರಗಳನ್ನು ಈ ಸಾಂಪ್ರದಾಯದಲ್ಲಿ ವಿದ್ಯುತ್‌ಶಕ್ತಿಯ ಪರಿಭಾಷೆ ಯಲ್ಲಿ ವಿವರಿಸಲಾಗುತ್ತದೆ ! ಇಂದ್ರಿಯ ಸಂವೇದನೆಯು ಮಜ್ಜಾತಂತು ವ್ಯವಸ್ಥೆಯಲ್ಲಿ ಇರುವ ವಿದ್ಯುಚ್ಛಕ್ತಿಯು ಪಾತಳಿಗಳಲ್ಲಿಯ ಅಭ್ಯಂತರದ ಪರಿಣಾಮ ವೆಂದು ತಿಳಿಯಲ್ಪಡುತ್ತದೆ ! ಈ ಅಭ್ಯಂತರ ಮೂಲಕ ಸಮಸ್ಥಿತಿಯಲ್ಲಿ ಉಂಟಾಗುವ ಕ್ಷೋಭವು ವಿಚಾರಕ್ಕೆ ಕಾರಣವಾಗುತ್ತದೆ. ಆ ವಿಚಾರವು ವರ್ತನದಲ್ಲಿ ವ್ಯಕ್ತವಾಗಿ ಮನಸ್ಸಿನ ಸಮಸ್ಥಿತಿಯನ್ನು ತಿರುಗಿ ಸ್ಥಾಪಿಸುತ್ತದೆ. ಹೀಗೆ ಸೇಂದ್ರಿಯ ಪ್ರಾಣಿಯೆಂದರೆ ವಿದ್ಯುಚ್ಛಕ್ತಿಗಳ ಕ್ಷೇತ್ರವೆಂದು ಎಣಿಸಲ್ಪಡುತ್ತದೆ. ಈ ವಿದ್ಯುತ್ ಕ್ಷೇತ್ರವು ತನಗಿಂತಲೂ ಹೆಚ್ಚು ವಿಶಾಲವಾದ ವಿದ್ಯುಚ್ಛಕ್ತಿಯ ಕ್ಷೇತ್ರದಲ್ಲಿ ಇದ್ದು ಅದಕ್ಕೆ ಪ್ರತಿಕ್ರಿಯಾರೂಪವಾಗಿ ವರ್ತಿಸುತ್ತದೆ.

ಇಂತಿದು ಗೆಸ್ಟಾಲ್ಟ ಮನೋವಿಜ್ಞಾನದ ಸಂಕ್ಷಿಪ್ತ ಸ್ವರೂಪ.

ಇನ್ನು ಮನೋವಿಜ್ಞಾನದ ಇತಿಹಾಸವನ್ನೂ ವಿವಿಧವಾಗಿ ವಿಕಾಸಗೊಂಡ ಒಂದೊಂದು ಸಾಂಪ್ರದಾಯಿಕ ವಿಚಾರ ಧಾರೆಗಳನ್ನೂ ಹಕ್ಕಿ ನೋಟದಿಂದ ಈ

ವರೆಗೆ ಸ್ವಲ್ಪವಿವರಿಸಿದ್ದಾಯ್ತು. ಇದೆಲ್ಲವನ್ನೂ ಕಾದಂಬರಿಯಂತೆ ಮೈಮರೆತು ಕೇಳಿದರೆ ತಿಳಿವ ವಿಷಯವಲ್ಲ. ಪೂರ್ಣ ಎಚ್ಚರದಿಂದ ಪ್ರತಿಯೊಂದು ಮಾತನ್ನೂ ನೆನೆನೆನೆದು ವಿಚಾರಿಸಿದರೆ ಮಾತ್ರ ತಲೆಯಲ್ಲಿ ಸೇರುವ ವಿಷಯವಿದು. ಆದುದರಿಂದ ಈ ವರೆಗೆ ಎಂತೂ ಓದುವ ತಾಳ್ಮೆಯನ್ನು ತೋರಿದ ಓದುಗನು (ಇಷ್ಟರಲ್ಲಿಯೇ ಬೇಸರದಿಂದ ನಿದ್ದೆ ಹೋಗಿಲ್ಲವಾದರೆ!) ನಮಗೆ ಒಂದು ಪ್ರಶ್ನೆಯನ್ನು ಕೇಳಬಹುದು. 'ಅಲ್ರಿ, ಇದೆಲ್ಲ ಸರಿ ಆದರೆ ಈ ಮನೋವಿಜ್ಞಾನದಿಂದ ನನಗೇನು ಪ್ರಯೋಜನ ? ನಾನೊಬ್ಬ ಜಿಡಿ ವ್ಯಕ್ತಿ; ಇಷ್ಟೆಲ್ಲ ದೊಡ್ಡ ಶಾಸ್ತ್ರದಿಂದ ನನಗಾಗೋ ಉಪಯೋಗವೇನು ? ಇದನ್ನು ಇಷ್ಟು ಹೊತ್ತು ಓದಿಸಿ ನನ್ನ ವೇಳೆ ಏಕೆ ಹಾಳು ಮಾಡಿದಿರಿ ?' ಈ ಪ್ರಶ್ನೆಯು ತುಂಬ ಸಮಂಜಸವಾಗಿದೆ. ಆದ್ದರಿಂದ ಇದು ಅಷ್ಟೇ ಸಮಂಜಸವಾದ ಉತ್ತರವನ್ನು ಅಪೇಕ್ಷಿಸುತ್ತದೆ.

## ನೆನಪಿನಲ್ಲಿಡುವ ಮಾತು

ಇದುವರೆಗೆ ಹಿಂದಿನ ಮತ್ತು ಇಂದಿನ ಶತಮಾನಗಳಲ್ಲಿ ಬೆಳೆದುನಿಂತ ಮನೋ ವಿಜ್ಞಾನದ ವಿವೇಚನೆಯನ್ನು ಇಲ್ಲಿ ಬಹಳೇ ಸಂಕ್ಷಿಪ್ತವಾಗಿ ಮಾಡಲಾಗಿದೆ. ಆದ್ದರಿಂದ ಮನೋವಿಜ್ಞಾನದಿಂದ ಅಳವಡಿಸಿಕೊಂಡ ವ್ಯವಹಾರಿಕ ಜೀವನದಲ್ಲಿ ಉಪಯುಕ್ತವಾದ ಹಲವು ಬಗೆಯ ವಿನಿಯೋಗಗಳನ್ನು ಕುರಿತು ವರ್ಣಿಸಲು ಇಲ್ಲಿ ಅಶಕ್ಯವಾಯ್ತು. ಈವರೆಗಣ ವಿವರಣೆಯಲ್ಲಿ ಮುಖ್ಯವಾಗಿ ಕೇವಲ ಸಿದ್ಧಾಂತಗಳ ವಿವೇಚನೆಯನ್ನೂ ತತ್ವಗಳ ಪ್ರತಿಪಾದನೆಯನ್ನೂ ಮಾಡದೆ ಬೇರೆ ಗತಿಯಿರಲಿಲ್ಲ. ಪ್ರತಿಯೊಂದು ಸಿದ್ಧಾಂತದ ವಿಶೇಷ ವಿಸ್ತಾರಕ್ಕೆ ಎಡೆಯೆ ಇದ್ದಿಲ್ಲ. ವೈದ್ಯಶಾಸ್ತ್ರ–ಶಿಲ್ಪವಿದ್ಯೆಗಳ ಕುರಿತು ಬರೆದ ಕ್ರಮಿಕ ಪುಸ್ತಕದಲ್ಲಿ ಸಿಗುವ ಪ್ರಾಥಮಿಕ ಸ್ವರೂಪದ ಸಂಕ್ಷಿಪ್ತ ವಿವೇಚನೆಯಲ್ಲಿ 'ವಿಷಮಜ್ವರ' 'ಮಾರಿಬೇನೆ'ಗಳಂಥ ರೋಗಗಳ ನಿದಾನ, ಚಿಕಿತ್ಸೆಗಳ ಕುರಿತು ವಿವರವಾಗಿ ಕೊಟ್ಟ ಸೂಚನೆಗಳು ಎಲ್ಲಿಂದ ದೊರೆಯಬೇಕು ?

ಆದರೂ, ಇದರಲ್ಲಿ ಸಾಮಾನ್ಯ ಮನುಷ್ಯನಿಗೂ (ಆತನ ಹೆಂಡತಿಗೂ) ಮನೋ ವಿಜ್ಞಾನವು ಎಷ್ಟರ ಮಟ್ಟಿಗೆ ಮತ್ತು ಹೇಗೆ ಸಹಾಯಕಾರಿಯಾಗಬಹುದೆಂಬುದರ ಸಾಧಾರಣ ದಿಶೆಯನ್ನು ಅರಿತುಕೊಳ್ಳಲಿಕ್ಕೆ ಸಾಕಾಗುವಷ್ಟು ವಿವೇಚನೆಯನ್ನು ನಾವು ಮಾಡಿರುತ್ತೇವೆಂದು ನಂಬಿದ್ದೇವೆ. ಈ ಸ್ಥೂಲವಾದ ವಿವರಣೆಯಿಂದ ಮನೋವಿಜ್ಞಾನದಲ್ಲಿ ಆಸಕ್ತಿಯುಂಟಾಗಿ ಇನ್ನೂ ಹೆಚ್ಚು ಹೆಚ್ಚಾಗಿ ಇದನ್ನು ಆಳವಾಗಿ ಅರಿತುಕೊಳ್ಳಬೇಕೆಂಬ ಕುತೂಹಲವು ಓದುಗರಲ್ಲಿ ತಲೆದೋರಿದರೂ ಇದನ್ನು ಬರೆದುದು ಸಾರ್ಥಕವಾದಂತಾಯ್ತು.

ಮನೋವಿಜ್ಞಾನದ ಸಂಶೋಧನೆಯು ಗುರಿಯು ಕೇವಲ ಮನಸ್ಸಿನ ತಾತ್ವಿಕ ಸ್ವರೂಪವನ್ನು ಕಂಡುಹಿಡಿಯುವ ಆಧ್ಯಾತ್ಮಿಕ ಲೋಕವನ್ನು ಬಿಟ್ಟು ಮನುಷ್ಯನ ಮತ್ತು ಪ್ರಾಣಿಗಳ ವರ್ತನದ ಹುಟ್ಟು ಗುಟ್ಟುಗಳನ್ನೂ ನಿಟ್ಟು ಕಟ್ಟುಗಳನ್ನೂ ಪರಿಶೀಲಿಸುವ ಅತ್ಯಂತ ಲಾಭಕರವಾದ ವ್ಯಾವಹಾರಿಕ ಭೂಮಿಕೆಗೆ ಇಂದು ಇಳಿದು ಬಂದಿದೆ. ಇದರ ಪರಿಣಾಮವಾಗಿ ಆಧುನಿಕ ಮನೋವಿಜ್ಞಾನವು ಇಂದು ಮಾನವನ ವೈಯಕ್ತಿಕ-ಸಾಮಾಜಿಕ ವರ್ತನದ ಕುರಿತು ಹೆಚ್ಚು ಹೆಚ್ಚು ಜ್ಞಾನವನ್ನೂ ಆಳವಾದ ತಿಳುವಳಿಕೆಯನ್ನೂ ಸಪ್ರಯೋಗವಾಗಿ ಒದಗಿಸಿಕೊಡುವ ಮಹತ್ವದ ಸೇವೆಯನ್ನು ನಮಗೆ ಸಲ್ಲಿಸಿದೆ. ಈ ಮಾತು ನಮ್ಮ ಚಿಕ್ಕ ಹೊತ್ತಿಗೆಯಲ್ಲಿ ಕೂಡ ಸಾಕಷ್ಟು ಸ್ಪಷ್ಟವಾಗಿದೆ.

ಆದರೆ ಒಂದು ಮಾತು ನಿಜವು. ಇನ್ನೂ ಮನೋವಿಜ್ಞಾನಿಗಳು ಮನುಷ್ಯನ ಪರಿಪೂರ್ಣ ವ್ಯಕ್ತಿತ್ವದ ಸಮ್ಯಕ್ ಜ್ಞಾನವನ್ನು ಮಾಡಿಕೊಂಡಿರುವರೆಂದು ಹೇಳುವದು ಕಷ್ಟ. ಏಕೆಂದರೆ ಈ ವರೆಗೆ ಮನೋವಿಜ್ಞಾನಿಗಳು ಮಾನವೀ-ವ್ಯಕ್ತಿತ್ವದ ಬೌದ್ಧಿಕ ಅಂಗವನ್ನು ಕುರಿತೇ ಈ ವರೆಗೆ ಹೆಚ್ಚಾಗಿ ಸಂಶೋಧನವನ್ನು ಕೈಕೊಂಡಿದ್ದಾರೆ. ಅದರ ಉಳಿದ ಎರಡು ಅಂಗಗಳಾದ ಕಾರ್ಯ ಪ್ರೇರಣೆ (ಭಾವನೆ) ಮತ್ತು ಕ್ರಿಯಾಶಕ್ತಿಗಳ ಕುರಿತು ಅಷ್ಟೊಂದು ಪರಿಶೀಲನವು ಇನ್ನೂ ಆಗಿಲ್ಲ.

ಆದರೂ, ಕಳೆದ ಅರ್ಧಶತಮಾನದಲ್ಲಿ ಜ್ಞಾನಶಕ್ತಿಯ ಕುರಿತು (ಬೌದ್ಧಿಕ ಅಂಗದ ಅಭ್ಯಾಸದಲ್ಲಿ) ಆದ ಪ್ರಗತಿಯನ್ನು ಗಮನಿಸಿದರೆ, ಮತ್ತು ಜ್ಞಾನಶಕ್ತಿಯ ಕಾರ್ಯ ಕಾರಣಗಳ ಸಂಶೋಧನೆಯಲ್ಲಿ ತೊಡಗಿದಷ್ಟೇ ಭರದಿಂದ ಭಕ್ತಿಯಿಂದ ಇಚ್ಛಾಶಕ್ತಿ ಭಾವನಾಶಕ್ತಿಗಳ ಸಮಸ್ಯೆಗಳ ಕುರಿತು ಇಂದು ನಡೆಯುತ್ತಿರುವ ಪ್ರಯೋಗ ಪ್ರಯತ್ನಗಳನ್ನು ಗಣನೆಗೆ ತಂದರೆ ಭವಿಷ್ಯದ ವಿಷಯವಾಗಿ ಒಳ್ಳೇ ಆಶೆ ಮಾಡಬಹುದಾಗಿದೆ. ಬರುವ ತಲೆಮಾರಿನೊಳಗಾಗಿ, ಮನುಷ್ಯನ ಪೂರ್ಣ ಮನದ ತತ್ವದ ಕುರಿತು-ಪರಿಪೂರ್ಣ ವ್ಯಕ್ತಿತ್ವದ ಕುರಿತು ಅಭೂತಪೂರ್ವವಾದ ಹಿಂದೆ ಇತಿಹಾಸದಲ್ಲಿ ಎಂದೂ ತಿಳಿದುಬರದಂತಹ ಜ್ಞಾನರಾಶಿಯು ನಮ್ಮ ಮಕ್ಕಳ ಜೀವನವನ್ನು ಯಶಸ್ವಿಯಾಗಿ ಮಾಡುವುದಕ್ಕಾಗಿ ಮಾರ್ಪಡಿಸಲಿಕ್ಕೆ ಸಿದ್ಧವಾಗುವ ದೆಂದು ನಂಬಲು ಅಡ್ಡಿಯಿಲ್ಲ.

ಈ ನಡುವೆ, ಇದುವರೆಗೆ ಮನೋವಿಜ್ಞಾನವು ಮಾಡಿದ ಪ್ರಗತಿಯನ್ನು ಸ್ವಲ್ಪ ದರಲ್ಲಿ ಪರ್ಯಾಲೋಚಿಸಬಹುದು. ಈಗಾಗಲೇ ನಮ್ಮ ವಿವೇಚನೆಯಲ್ಲಿ, ಮನೋ ವಿಜ್ಞಾನದ ವ್ಯಾವಹಾರಿಕ ವಿನಿಯೋಗವನ್ನು ಶಿಕ್ಷಣ, ಉದ್ಯೋಗ, ವೈದ್ಯಕ

ಮತ್ತು, ಅಪರಾಧಶಾಸ್ತ್ರಗಳ ಕ್ಷೇತ್ರದಲ್ಲಿ ಹೇಗೆ ಮಾಡಿಕೊಂಡಿರುವರೆಂಬುದರ ಸ್ವಲ್ಪ ಉಲ್ಲೇಖವು ಹಿಂದೆ ಬಂದಿದೆ.

## ಶಿಕ್ಷಣ ಕ್ಷೇತ್ರದಲ್ಲಿ :

ಈ ೨೦ ನೆಯ ಶತಮಾನದಲ್ಲಿ ಮಕ್ಕಳ ಸಂವರ್ಧನ ಮತ್ತು ಶಿಕ್ಷಣ ಸಂಸ್ಥೆಗಳ ಪದ್ಧತಿಗಳಲ್ಲಿ, ಮನೋವಿಜ್ಞಾನದ ಶೋಧ ಬೋಧಗಳಿಂದ ಕ್ರಾಂತಿಯಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಇಂದಿನ ಮನೋವಿಜ್ಞಾನಿಗಳು ಮುಖ್ಯವಾಗಿ ಚಿಕ್ಕ ಮಕ್ಕಳ ಪೂರ್ವ ವಯಸ್ಸನ್ನು ಕುರಿತು (ಬಾಲ್ಯಾವಸ್ಥೆಯ ಆರಂಭದ ಭಾಗದ ಕುರಿತೇ) ತುಂಬ ಆಳವಾಗಿ ಅಭ್ಯಾಸ ಮಾಡುತ್ತಿದ್ದಾರೆ. ಏಕೆಂದರೆ ಎಳೆ ವಯಸ್ಸಿನ ಕಾಲವು ಅತ್ಯಂತ ಮಹತ್ವದ್ದಾಗಿದೆ. ಆದರೂ, ಶಿಕ್ಷಣದ ಉಳಿದ ವಿಭಾಗದಲ್ಲಿಯೂ ಹೆಚ್ಚಿನ ಸಂಶೋಧನ ಕಾರ್ಯವು ನಡೆಯದೆ ಇಲ್ಲ. ಓದು, ಬರಹ, ಅಂಕಿ, ಸಂಖ್ಯೆ ಇವುಗಳನ್ನು ಕಲಿಸುವ ಪದ್ಧತಿಗಳಲ್ಲಿ ಬಹಳ ಸುಧಾರಿಸಿದ ಹೊಸ ಶಿಕ್ಷಣ ಪದ್ಧತಿಗಳು ಈಗ ರೂಢಿಯಲ್ಲಿ ಬಂದುದಕ್ಕೆ ಕಾರಣವು ಇಂಥ ಮನೋವಿಜ್ಞಾನಿಗಳ ಸತತ ಪರಿಶ್ರಮದ ಸಂಶೋಧನಗಳೇ ಸರಿ. ಇಂದಿನ ಶಾಲೆಗಳಲ್ಲಿ ಕಲೆ-ಕೈಗಾರಿಕೆಗಳ ಕೆಲಸಗಳಿಗೆ ಮಹತ್ವ ಕೊಟ್ಟು ಶಿಕ್ಷಣ ಕ್ರಮದಲ್ಲಿ ಅವುಗಳಿಗೆ ಸ್ಥಾನವನ್ನು ಕಲ್ಪಿಸಿಕೊಡುವದಕ್ಕೆ ಕಾರಣರು ಯಾರು ? ಅದರಂತೆ ಸುಸಂಘಟಿತವಾದ ಆಟ ಪಾಟಗಳ ಪ್ರಚಾರವೂ, ಹಿಂದಿನ ತಲೆಮಾರಿನವರು ಕೇವಲ ಕಿವಿಯಿಂದಲೇ ಕಲಿಯುತ್ತಿದ್ದ ಪದ್ಧತಿಯನ್ನು ಬದಲಿಸಿ, ಪ್ರತ್ಯಕ್ಷ ಕೈಯಿಂದ ಮಾಡಿ ನೋಡಿ-ಆಡಿ ಕಲಿಯುವ ರೀತಿಯನ್ನು ಅನುಸರಿಸ ಹಚ್ಚಿದವರು ಯಾರು ? ಇವೆಲ್ಲ ಸ್ಥಿತ್ಯಂತರಗಳೂ ಆಧುನಿಕ ಮನೋವಿಜ್ಞಾನದ ಪ್ರಭಾವವೇ ಮುಖ್ಯವಾದಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಇಂಗ್ಲಂಡದ ಶಾಲೆಗಳಲ್ಲಿ ಆದ ಪ್ರಾಥಮಿಕ ಮತ್ತು ಮಾಧ್ಯಮಿಕವೆಂಬ ವರ್ಗಗಳೂ ಮಾಧ್ಯಮಿಕ ದಲ್ಲಿ ಮತ್ತೆ ಕನಿಷ್ಟ ಮಧ್ಯಮ ಮತ್ತು ವರಿಷ್ಟವೆಂಬ ಭೇದಗಳೂ-ಈ ರೀತಿಯಾದ ಶಿಕ್ಷಣ ಸಂಸ್ಥೆಗಳ ಪುನರ್ಘಟನೆಯೂ ಕೇವಲ ಮನೋವೈಜ್ಞಾನಿಕ ನೆಲೆಯ ಮೇಲೆ ನಿಂತಿದೆ.

## ಔದ್ಯೋಗಿಕ ಕ್ಷೇತ್ರದಲ್ಲಿ :

ಔದ್ಯೋಗಿಕ ಕ್ಷೇತ್ರದಲ್ಲಿಯೂ ಇಷ್ಟೇ ಕಲ್ಯಾಣಕಾರಿಯಾದ ಫಲಗಳು ಬಂದಿವೆ.

ಆದರೆ ಇವು ಅಷ್ಟೊಂದು ಕಣ್ಣು ಕುಕ್ಕುವಂಥವೂ ಪ್ರಚಾರ ಹೊಂದಿದಂಥವೂ
ಆಗಿರಲಿಕ್ಕಿಲ್ಲ. ಇದಕ್ಕೆ ಒಂದು ಕಾರಣವೂ ಉಂಟು. ಶಿಕ್ಷಣ ಖಾತೆಯ ಸೂತ್ರ
ಗಳೆಲ್ಲ ಒಂದು ಸರಕಾರದ ಕೈಯಲ್ಲಿರುತ್ತವೆ. ಸರಕಾರದ ಹೊಣೆಯನ್ನು ಹೊತ್ತ
ಧೀರರಾದ ಧೀಮಂತರಾದ ಮುಂದಾಳುಗಳು ಮನೋವಿಜ್ಞಾನದ ಹೊಸ ಹೊಸ
ಸಂಶೋಧನಗಳ ಸಂಪೂರ್ಣ ಲಾಭವನ್ನು ಪಡೆದು, ಶಿಕ್ಷಣ ಪದ್ಧತಿಗಳಲ್ಲಿ ತಕ್ಕ
ಮಾರ್ಪಾಟಗಳನ್ನು ಮಾಡುತ್ತಾರೆ. ಆದರೆ ಔದ್ಯೋಗಿಕ ಕ್ಷೇತ್ರದ ಮಾತು ಹಾಗಲ್ಲ.
ಧನಾಢ್ಯರಾದ ನವಕೋಟಿ ನಾರಾಯಣರು ಬದಲಾವಣೆಗಳಿಗೆ ಒಮ್ಮೆಲೆ ಸಿದ್ಧ
ರಿರುವದಿಲ್ಲ. ಆದರೂ, ಈ ಕ್ಷೇತ್ರದಲ್ಲಿಯೂ ಮನೋವಿಜ್ಞಾನವು ಸಾಕಷ್ಟು
ಪ್ರಭಾವವನ್ನು ಬೀರಿದೆ. ಹಲವಾರು ಔದ್ಯೋಗಿಕ ಸಂಸ್ಥೆಗಳು-ಕಾರಖಾನೆ ಗಿರಣಿಗಳು
ಈಗಿತ್ತಲಾಗಿ, ತಮ್ಮ ಕೆಲಸಗಾರರ ದುಡಿತಕ್ಕಾಗಿ ಐದು ದಿನಗಳ ವಾರವನ್ನು
ಕಲ್ಪಿಸಿಕೊಂಡಿರುವವು. ಏಕೆಂದರೆ ಶ್ರಮದ ವೇಳೆಯನ್ನು ಹೀಗೆ ಕಡಿಮೆ ಮಾಡಿ,
ಬಿಡುವಿನ ಅವಧಿಯನ್ನು ಹೆಚ್ಚಿಸಿದಲ್ಲಿ ಉತ್ಪಾದನೆಯು ಹೆಚ್ಚಾಗುವದಲ್ಲದೆ, ಕೆಲಸ
ಗಾರರ ಸ್ವಾಸ್ಥ್ಯ ಸುಖಗಳ ಪ್ರಮಾಣವೂ ಬೆಳೆದು ಔದ್ಯೋಗಿಕ ಸಂಸ್ಥೆಗಳಿಗೆ
ಸ್ಥೈರ್ಯ ಉಂಟಾಗುವದು ಎಂಬ ಸಂಗತಿಯನ್ನು ಮನೋವಿಜ್ಞಾನಿಗಳು
ಪ್ರತ್ಯಕ್ಷವಾಗಿ ಚಾಲಕರಿಗೆ ಮನಗಾಣಿಸಿದ್ದಾರೆ. ಔದ್ಯೋಗಿಕ ಉತ್ಪಾದನೆಯಲ್ಲಿಯೂ
ಮನೋವಿಜ್ಞಾನದ ಉಪಯೋಗವು ಇದಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ಆಗಿದೆ.
ಹಲವು ಗಿರಣಿ, ಕಾರಖಾನೆ, ಕರ್ಮಶಾಲೆಗಳಲ್ಲಿ ಯಾವದೊಂದು ಉದ್ಯೋಗದ
ಬೇರೆ ಬೇರೆ ಕ್ರಿಯೆಗಳ ಕ್ರಮಗಳು ನಡೆಯುತ್ತಿರುವಾಗ ಜರಗುವ ಕೆಲಸಗಾರರ
ಚಲನವಲನಗಳ ನಿರೀಕ್ಷಣೆ ಅಭ್ಯಾಸ ಮಾಡಿ, ಕೆಲಸಗಾರರ ದಣಿವನ್ನು ಆದಷ್ಟು
ಹೋಗಲಾಡಿಸುವಂತೆ, ವಿವಿಧ ಯೋಜನೆಗಳನ್ನು ಕೈಗೊಳ್ಳಲಾಗುತ್ತದೆ. ಕೆಲಸಕ್ಕೆ
ಹೆಚ್ಚು ಅನುಕೂಲವಾಗುವಂತೆ, ಸುಖಾವಹವಾಗಿ ನಿಲ್ಲುವಂತೆ ಇಲ್ಲವೇ ಕೂಡ್ರುವಂತೆ
ವ್ಯವಸ್ಥೆಯೂ, ಕಣ್ಣಿಗೆ ದಣಿವಾಗದಂತೆ ಹೆಚ್ಚಿನ ಪ್ರಕಾಶದ ಸೌಕರ್ಯವೂ,
ಉತ್ಸಾಹ ಕುಗ್ಗದಂತೆ ಸಾಕಷ್ಟು ಹರಿದಾಡುವ ಸ್ವಚ್ಛ ಹವೆಯೂ,-ಇವೇ
ಮೊದಲಾದ ಏರ್ಪಾಟುಗಳನ್ನು ಮಾಡಿ ಹಲವು ಸುಧಾರಣೆಗಳನ್ನು ಪ್ರಚಾರದಲ್ಲಿ
ತರಲಾಗಿದೆ. ಹೀಗೆ ಮನೋವೈಜ್ಞಾನದ ಪ್ರಭಾವದಿಂದ-ಮನುಷ್ಯನ ಕಾರ್ಯ
ಕ್ಷಮತೆಯು ಬಹಳ ಹೆಚ್ಚಾಗಿದೆ. ಈ ದೃಷ್ಟಿಯಿಂದ-ಇದುವರೆಗೆ ಪೂರೈಸದಷ್ಟು
ಲಕ್ಷವನ್ನು ತೋರಿಸದಷ್ಟು ಆಸ್ಥೆಯನ್ನು ಇಂದು ಔದ್ಯೋಗಿಕ ಸಂಸ್ಥೆಗಳ ಮನುಷ್ಯ-
ವಿಭಾಗಕ್ಕೆ ತೋರಿಸುತ್ತಿದ್ದಾರೆ.

ಇದೇ ಮೇರೆಗೆ, ಕೆಲಸಗಾರರಿಗಾಗಿ, ವಿಶ್ರಾಂತಿಗೃಹಗಳೂ, ಉಪಹಾರಗೃಹಗಳೂ,
ಆಟಗಳ ಸಂಘಗಳೂ, ಮನೋರಂಜನದ ವಿವಿಧ ಸೌಕರ್ಯಗಳೂ, ಸಾಮಾನ್ಯ

ಮತ್ತು ತಾಂತ್ರಿಕ ಶಿಕ್ಷಣದ ಅನುಕೂಲತೆಗಳೂ ಮನೋವಿಜ್ಞಾನದ ದೃಷ್ಟಿಯಿಂದಲೇ ಏರ್ಪಟ್ಟಿವೆ. ಇದಕ್ಕೆಲ್ಲ ಮನೋವಿಜ್ಞಾನವು ಮನುಷ್ಯನ ಕಾರ್ಯಕ್ಷಮತೆಯ ಕುರಿತು ಕೊಟ್ಟ ಹೊಸ ದೃಷ್ಟಿಯೇ ಕಾರಣ.

ಕೆಲಸಗಾರನ ಇಡೀ ದಿನದ ಕೆಲಸವನ್ನು-ಸಂಶೋಧಕರು ಏಕಾಗ್ರತೆಯಿಂದ ಅಭ್ಯಾಸಿಸಿದ್ದಾರೆ. ಪ್ರತಿಯೊಂದು ತಾಸಿನ ಕಾರ್ಯ ಮತ್ತು ಉತ್ಪಾದನೆಯ ಗುಣಗಳನ್ನು ವಿವರವಾಗಿ ಪರಾಮರ್ಶಿಸಿದ್ದಾರೆ. ಇದರ ಪರಿಣಾಮವಾಗಿ, ಔದ್ಯೋಗಿಕ ಸಂಸ್ಥೆಗಳು-ದಿನದ ಕೆಲಸದಲ್ಲಿ ಕೂಡ ನಡುವೆ ಬಿಡುವಿನ ಅವಧಿಗಳನ್ನು ಕೆಲಸ ಗಾರರಿಗೆ ಹೆಚ್ಚು ಹೆಚ್ಚಾಗಿ ಕೊಡುತ್ತಿರುವರು.

ಎಷ್ಟೋ ಉದ್ಯೋಗ, ವ್ಯವಸಾಯಗಳ ಊರ್ಜಿತಸ್ಥಿತಿಗೆ ಸಂಸ್ಥೆಗಳಲ್ಲಿ ಒದಗಿಸಿದ ಮನೋವಿಜ್ಞಾನ ಶಾಸ್ತ್ರಾನುಸಾರಿಯಾದ ಹಲವು ಸೌಕರ್ಯ, ಸಲಕರಣೆಗಳೇ ಮುಖ್ಯ ಕಾರಣವೆಂಬುದು, ಈಗ ಕಾರಖಾನೆಗಳ ಒಡೆಯರಿಗೂ ಮನವರಿಕೆಯಾಗಿದೆ. ಆದರೆ ಇಂಥಲ್ಲಿ ಒಡೆಯರ ದೃಷ್ಟಿಯಲ್ಲಿಯೂ ಮನೋವಿಜ್ಞಾನಿಯ ದೃಷ್ಟಿಯಲ್ಲಿಯೂ ಮಹತ್ವದ ಭೇದವಿದೆ. ಮನೋವಿಜ್ಞಾನಿಗಳ ಸೂಚನೆ ಸಲಹೆಗಳನ್ನು ಇಂಥ ಉದ್ಯೋಗ ಸಂಚಾಲಕರು ಸ್ವೀಕರಿಸುವಾಗ ಅವರ ದೃಷ್ಟಿಯು ಬರೇ ಲಾಭದ ಕಡೆಗೆ ಮಾತ್ರ ಇರುತ್ತದೆ. ಆದರೂ ಇವರು, ಚಿನ್ನದ ತತ್ತಿಗಳನ್ನಿಕ್ಕುವ ಹೇಂಟೆಯ ಎಲ್ಲ ತತ್ತಿಗಳನ್ನು ಒಮ್ಮೆಲೆ ದೊರಕಿಸಬೇಕೆಂದು ಅದರ ಹೊಟ್ಟೆಯನ್ನು ಕೊಯ್ಯು ವವನಷ್ಟು ಮೂರ್ಖರಾಗಿರುವದಿಲ್ಲ. ಆದುದರಿಂದ ಕಾರಖಾನೆದಾರರು ಕೂಲಿ ಕಾರರಿಗೆ ಕೆಲವೊಂದು ಸೌಕರ್ಯಗಳನ್ನು ಒದಗಿಸಿಕೊಡುವದೇನೋ ನಿಜ. ಆದರೆ ತಮ್ಮ ಉದ್ಯೋಗದಲ್ಲಿಯ ಉತ್ಪಾದನೆಯು ಮಿಗಿಲಾಗಬೇಕು, ಮೇಲ್ತರಗತಿಯ ದಾಗಬೇಕು, ಆ ಮೂಲಕ ತಮ್ಮ ಪಾಲುಗಾರರಿಗೆ ಸಿಗುವ ಲಾಭದ ಪ್ರಮಾಣವು ಬೆಳೆಯಬೇಕು-ಎಂಬ ಸ್ವಾರ್ಥ ದೃಷ್ಟಿಯಿಂದಲೇ ಇವರು ತಮ್ಮ ಕೆಲಸಗಾರರಿಗೆ ಹಲಕೆಲವು ಅನುಕೂಲತೆಗಳನ್ನು ಒದಗಿಸಿಕೊಡುವರು. ಆದರೆ ಮನೋವಿಜ್ಞಾನಿಯು ಔದ್ಯೋಗಿಕ ಕ್ಷೇತ್ರದಲ್ಲಳಿದಾಗ ಆತನ ದೃಷ್ಟಿಯು ಬಂಡುವಾಲಗಾರನ ಬೊಕ್ಕಸದ ಮೇಲಿರುವದಿಲ್ಲ. ಕೆಲಸಗಾರರು ಹೆಚ್ಚು ಸಮರ್ಥರು ಹೆಚ್ಚು ಕಾರ್ಯಕ್ಷಮರು ಆಗುವಂತೆ ಉಪಯೋಜನೆಗಳನ್ನು ಮಾಡುವದೇ ಆತನ ಉದ್ದೇಶವಿರುತ್ತದೆ. ಮತ್ತು ಈ ಉದ್ದೇಶದಲ್ಲಿ ಕೇವಲ ಕೆಲಸಗಾರನ ಕಲ್ಯಾಣದ ದೃಷ್ಟಿಯೇ ಮುಖ್ಯ ವಾಗಿರುತ್ತದೆ. ನಿಜವಾದ ಎಲ್ಲ ಕಾರ್ಯಕ್ಷಮತೆಯು (ಪರಿಶ್ರಮದ ಸಫಲತೆಯು) ಕೆಲಸಗಾರನ ಸುಖಸೌಕರ್ಯಗಳ ಮೇಲೂ ಸುಸ್ಥಿತಿಯಮೇಲೂ ಅವಲಂಬಿಸಿದೆ ಎಂಬ ತತ್ವವು ಔದ್ಯೋಗಿಕ ಮನೋವಿಜ್ಞಾನದ ಅಡಿಗಲ್ಲಾಗಿದೆ. ಮನೋ

ವಿಜ್ಞಾನಿಯ ಔದ್ಯೋಗಿಕ ಕ್ಷೇತ್ರದೊಳಗಿನ ಎಲ್ಲ ಸಂಶೋಧನವೂ ಈ ದೃಷ್ಟಿಯಿಂದಲೇ ಸಾಗಿರುವದು. ಔದ್ಯೋಗಿಕ ಕ್ಷೇತ್ರದಲ್ಲಿ ಮನೋವಿಜ್ಞಾನವು ಸಲ್ಲಿಸಬೇಕಾದ ಸೇವೆಯು ಇನ್ನೂ ಬಹಳವಿದೆ. ಇನ್ನೂ ಹಲವೆಡೆಗಳಲ್ಲಿ ಹೋರೆಗಾರ (ಶ್ರಮಜೀವಿ) ವರ್ಗದ ಕೆಲಸವು ಅಂದಗೇಡಿಯಾಗಿಯೂ ಅಸಡ್ಡಾಳವಾಗಿಯೂ, ಅಳತೆಗೆಟ್ಟ ಅವಧಿಯುವರೆಗೆ ಸಾಗುವಂತಹದಾಗಿಯೂ, ಆ ಮೂಲಕ ಅನವಶ್ಯಕವಾದ ದಣಿವಿಗೀಡುಮಾಡುವಂತಹದೂ ಆಗಿದೆ. ಅದರಲ್ಲೆಲ್ಲ ಚೆನ್ನಾದ ಚೊಕ್ಕಟವಾದ ಹದವನ್ನು ತಂದು ನಿರರ್ಥಕ ಕಷ್ಟ ತೊಂದರೆಗಳಿಂದ ಕೆಲಸಗಾರನನ್ನು ಸ್ವತಂತ್ರನನ್ನಾಗಿ ಮಾಡುವತನಕ ಔದ್ಯೋಗಿಕ ಮನೋವಿಜ್ಞಾನಿಯ ಕರ್ತವ್ಯ ಮುಗಿಯುವದಿಲ್ಲ.

### ವೈದ್ಯಕೀಯ ಕ್ಷೇತ್ರದಲ್ಲಿ :

ವೈದ್ಯಕೀಯ ಕ್ಷೇತ್ರದಲ್ಲಿಯೂ ಮನೋವಿಜ್ಞಾನವು ಬಹಳೇ ಉಪಯೋಗಿಯಾಗಿದೆ. ಮಜ್ಜಾತಂತುಗಳ ವಿಕಾರ ವ್ಯಾಧಿಗಳನ್ನು ಉಪಚರಿಸಲು ಮನೋವಿಜ್ಞಾನ ಪದ್ಧತಿಯು ಒಂದು ದಿವ್ಯವಾದ ಉಪಾಯವಾಗಿದೆ. ಸಿಗ್ಮಂಡ ಫ್ರಾಡನು ಸಂಶೋಧಿಸಿದ ಮನೋವಿಶ್ಲೇಷಣಪದ್ಧತಿಯು ಈ ವಿಷಯದಲ್ಲಿ ಲೋಕಕ್ಕೆಲ್ಲ ಮಹೋಪಕಾರವನ್ನು ಮಾಡಿದೆ. ಹೀಗೆ ಮನಸ್ಸಿನ ಸ್ವಾರ್ಥಕ್ಕಾಗಿಯೂ ಶರೀರದ ಬೇರೆ ಬೇರೆ ಇಂದ್ರಿಯ ವ್ಯಾಪಾರಗಳ ಅವ್ಯಸ್ಥೆಗಳನ್ನು ಸರಿಪಡಿಸುವದಕ್ಕಾಗಿಯೂ ಮನೋವಿಜ್ಞಾನದ ಸಹಾಯವನ್ನು ಪಡೆವ ವಾಡಿಕೆಯು ಕಳೆದ ಮಹಾಯುದ್ಧದ ಕಾಲದಿಂದ ತುಂಬ ಪ್ರಚಾರದಲ್ಲಿ ಬಂದಿತು. ಯುದ್ಧದ ಕ್ಷೋಭದಿಂದಲೂ, ಆ ಸಿಡಿಗುಂಡು ಮದ್ದುಗಳ ಸ್ಫೋಟದಿಂದಲೂ ಉಂಟಾದ ಮಜ್ಜಾತಂತುಗಳ ಬಧಿರತೆ ಮೊದಲಾದ ಬೇನೆಗಳನ್ನು, ಮೂಕತನ, ವಿಸ್ಮರಣೆ, ಕಿವುಡತನ, ತಲೆತಿರುಕತನ (ಹಿಸ್ಟೀರಿಯಾ), ಹುಚ್ಚು ಮುಂತಾದ ವಿಕಾರಗಳನ್ನು ಹೋಗಲಾಡಿಸುವ ಅವಶ್ಯಕತೆಯು ಹೆಚ್ಚಾಯ್ತು. ಯಾವುದೊಂದರ ಕೊರತೆ ಅಥವಾ ಕೋರಿಕೆಯೇ ಜಗತ್ತಿನಲ್ಲಿ ಹೊಸ ಸಂಗತಿಯ ಹುಟ್ಟಿಗೆ ಕಾರಣವಾಗುತ್ತದೆ. ಈ ಹೊಸ ಅವಶ್ಯಕತೆಯಿಂದ ಮನೋವಿಜ್ಞಾನವು ವೈದ್ಯಶಾಲೆಗಳಲ್ಲಿ ಇಂದು ರೋಗಿಗಳನ್ನು ತಾಯಿಯಂತೆ ಉಪಚರಿಸಲು ಪರಿಚಾರಿಕೆಯ ಉಡುಪು ತೊಟ್ಟು, ವಿಶಾಲ ಅಂತಃಕರಣದ ದಾದಿಯಾಗಿದೆ.

### ಅಪರಾಧಗಳನ್ನು ತಿದ್ದುವ ಕ್ಷೇತ್ರದಲ್ಲಿ :

ಅಪರಾಧ ಶಾಸ್ತ್ರದಲ್ಲಿಯಂತೂ ಮನೋವಿಜ್ಞಾನವು ಹೊಸ ದೃಷ್ಟಿಯನ್ನೇ ದಯ

ಪಾಲಿಸಿತು; ಬರೇ ಕುರುಡು ಕಾಯಿದೆಗಳಿಗೆ ಅನುಸರಿಸಿ ಅಪರಾಧಿಗಳನ್ನು ದಂಡಿಸುವ ಮೊದಲು, ಅಪರಾಧಗಳನ್ನು ಮಾಡಲು ಮನುಷ್ಯನು ಏಕೆ ಪ್ರವೃತ್ತನಾಗುವನೆಂಬುದರ ಕಾರಣಗಳ ಕುರಿತು ಸಾಂಗವಾಗಿ ವ್ಯಾಸಂಗಮಾಡುವ ಅವಶ್ಯಕತೆಯು ಮೊತ್ತಮೊದಲು ತಲೆದೋರಿತು. ಸಾಮಾಜಿಕ ಪರಿಸ್ಥಿತಿಯು ಕೆಟ್ಟುದರಿಂದ ಅನೇಕರಿಗೆ ಅಪರಾಧಮಾಡಲು ಸಾಕಷ್ಟು ಅವಕಾಶವು ಸಿಕ್ಕುವುದು. ದುರ್ಬಲ ಮನಸ್ಸಿನವರು ಮೋಹಗಳ ಸೆಳೆತವಲ್ಲಿ ಸಿಲುಕಿ ಅಡ್ಡದಾರಿಗೆ ಬೀಳುತ್ತಾರೆ. ಏಕೆಂದರೆ ಸಾಮಾಜಿಕ ಪರಿಸ್ಥಿತಿಯೇ ಹಾಗೆ ನಿರ್ಮಾಣವಾಗಿರುತ್ತದೆ. ಆದುದರಿಂದ ಇಂಥ ಅಪರಾಧಿ ಬಡಜೀವಿಗಳನ್ನು ಶಿಕ್ಷೆಗೆಗುರಿಮಾಡುವದು ಸರಿಯಾದ ಉಪಾಯವಲ್ಲವೆಂಬುದು ತಜ್ಞರ ಗಮನಕ್ಕೆ ಬಂದಿತು. ತಪ್ಪುಗಾರನಿಗೆ ಕೇವಲ ತಪ್ಪು ಮಾಡುವುದರಲ್ಲಿಯೇ ಎಂದೂ ಆನಂದವೆನಿಸುವದಿಲ್ಲ. ಏನೊಂದು ವಿಶಿಷ್ಟ ಪರಿಸ್ಥಿತಿಯು ಮೂಲಕ ಆ ಬಗೆಯು ತಪ್ಪುಮಾಡಿ ಅಪರಾಧಿ ಎನಿಸಿಕೊಳ್ಳುವ ಹೊತ್ತು ಬಂದಿರುತ್ತದೆ. ಆದ್ದರಿಂದ ಅಪರಾಧಿಗಳಿಗೆ ಸುಮ್ಮನೆ ಶಿಕ್ಷೆ ವಿಧಿಸಿ ತಮ್ಮ ತಮ್ಮ ಡಾಂಭಿಕ ಶಿಷ್ಟತೆಯ ಡಂಗುರ ಸಾರುವ ಸಮಾಜಧುರೀಣರ ದೃಷ್ಟಿಯು, ಮನೋವಿಜ್ಞಾನಿಗಳು ಹಾಕಿದ ಅಂಜನದ ಪರಿಣಾಮದಿಂದ ಈಗ ಮೆಲ್ಲಗೆ ಬದಲಿಸತೊಡಗಿದೆ. ಮುಯ್ಯಕ್ಕೆ ಮುಯ್ಯ ತೀರಿಸುವ ಆವೇಶದಿಂದ ಅಪರಾಧಕ್ಕೆ ತಕ್ಕ ದಂಡ ವಿಧಿಸಿ (ಎಂದರೆ ಪ್ರತಿ ಅಪರಾಧಮಾಡಿ) ತಮ್ಮ ಕರ್ತವ್ಯ ಮುಗಿಯಿತೆಂದು ತೃಪ್ತವಾಗುವ–ಸನಾತನ ವೃತ್ತಿಯು, ಅಧಿಕಾರ ವರ್ಗದಿಂದ ಇಂದು ದೂರವಾಗತೊಡಗಿದೆ. ಈಗ ಅಪರಾಧವನ್ನು ಒಂದು ಸಾಮಾಜಿಕ ಸಾಂಸರ್ಗಿಕ ವ್ಯಾಧಿಯೆಂದು ಎಣಿಸಿ, ಅಪರಾಧದ ಕಡೆಗೆ ಒಲಿಯುವ ಮನಃಪ್ರವೃತ್ತಿಯನ್ನೇ ಹೋಗಲಾಡಿಸುವಂತೆ ಉಪಚಾರಗಳನ್ನು ಕೈಕೊಳ್ಳಬೇಕೆಂಬ ದೃಷ್ಟಿಯು ಇಂದು ಹೊಸತಾಗಿ ಉದಯವಾಗುತ್ತಲಿದೆ. ಇದಕ್ಕೆ ಕಾರಣವೂ ಆಧುನಿಕ ಮನೋವಿಜ್ಞಾನಿಯೇ.

ಇನಿತೆಲ್ಲ ಸೇವೆಯನ್ನು ಮಾನವನಿಗೆ ಸಲ್ಲಿಸಿದ, ಸಲ್ಲಿಸುತ್ತಿರುವ ಮನೋವಿಜ್ಞಾನದ ಅಭ್ಯಾಸದ ಮಹತ್ವವನ್ನು ಎಷ್ಟೆಂದು ಹೇಳಬೇಕು ? ವ್ಯಕ್ತಿಯು ಸಮಾಜದ ಘಟಕನೆಂಬ ದೃಷ್ಟಿಯಿಂದ ಮನೋವಿಜ್ಞಾನವು ಮಾನವ ಜನಾಂಗಕ್ಕೆ ಮಾಡಿದ ಮಹೋಪಕಾರಗಳನ್ನು ಸ್ಥೂಲವಾಗಿ ಸೂಚಿಸಿದ್ದಾಯ್ತು. ಇನ್ನು ವ್ಯಕ್ತಿಯ ಸ್ವಂತ 'ಖಾಸಗೀ' ದೃಷ್ಟಿಯಿಂದಲೂ ಮನೋವಿಜ್ಞಾನದ ಉಪಯೋಗವೆಷ್ಟಿದೆಯೆಂಬುದನ್ನು ವಿವರಿಸುವದು ಉಳಿದಿದೆ.

## ವ್ಯಕ್ತಿಗೇನು ಉಪಯೋಗ ?

ಶರೀರಸ್ವಾಸ್ಥ್ಯ, ಶರೀರಸಾಮರ್ಥ್ಯ ಇವುಗಳ ಸಮಸ್ಯೆಯು ಇಂದಿನ ರಾಷ್ಟ್ರಗಳಲ್ಲಿ

ಮೊದಲಿನ ಮಹತ್ವದ ಸಂಗತಿಯಾಗಿದೆ. ಸಂಘಟಿತ ಹಿಂಸೆಯ ಮೇಲೆ ನಿಂತ ಆಕ್ರಮಿತ ರಾಷ್ಟ್ರಗಳಿರಲಿ, ಸಂಕ್ರಮಣ ಸ್ಥಿತಿಯಲ್ಲಿರುವ ತುಳಿತಕ್ಕೆ ಒಳಗಾದ ರಾಷ್ಟ್ರಗಳಿರಲಿ, ತಮ್ಮ ರಾಷ್ಟ್ರೀಯ ಜೀವನದ ಪುನರ್ಘಟನೆಯಲ್ಲಿ ಶರೀರ ಸಂವರ್ಧನವನ್ನು ಒಂದು ಮುಖ್ಯ ಕಾರ್ಯಕ್ರಮವನ್ನಾಗಿ ಮಾಡಿವೆ. ಆದರೆ ಈ ಶರೀರಸಂವರ್ಧನೆಯು ಆಗುವದೆಂತು ? ಬರೀ ಬಾಯಿಮಾತಿನಿಂದ ಇಲ್ಲವೆ ಬಯಕೆಯಿಂದ ಮನುಷ್ಯನು ಗಟ್ಟಿಗನೂ ಎಸೆಗಾರನೂ ಆಗಲಾರನೆಂಬುದನ್ನು ಓದುಗರು ಮರೆಯಬಾರದು. ಬಲವು ನಿತ್ಯಸಾಧನೆಯಿಂದಲೇ ಒಲಿವ ದೇವತೆ. ನಿತ್ಯಸಾಧನೆ, ಉಪಾಸನೆಯೆಂದರೆ ಧ್ಯೇಯವಾದಿಯಾದ ಧೀರೋದಾತ್ತ ಕಾರ್ಯಕ್ರಮ. ವ್ಯಾಯಾಮದ ಅವಶ್ಯಕತೆಗಳನ್ನು ಚೆನ್ನಾಗಿ ಅರಿತುಕೊಳ್ಳಬೇಕಾದರೆ, ಮನುಷ್ಯನು ತನ್ನ ಶರೀರರಚನೆಯನ್ನೂ ಮನೋಧರ್ಮ–ಕರ್ಮಗಳನ್ನೂ ಸಾಕಷ್ಟು ತಿಳಿದಿರಬೇಕು; ಹಾಗೆಯೇ ಆ ಅವಶ್ಯಕತೆಗಳನ್ನು ಪೂರೈಸುವ ಅಂಗಸಾಧನೆಗಳ ಕ್ರಮವನ್ನೂ ಕಲಿತುಕೊಳ್ಳಬೇಕು.

ಈ ಸಾಧನೆಯಲ್ಲಿ, ಶರೀರದಂತೆ ಶರೀರವನ್ನು ಆಳುವ ಮನಸ್ಸನ್ನೂ ದುರ್ಲಕ್ಷಿಸಿ ನಡೆಯದು. ಮನಸ್ಸಿನ ಸ್ವಾಸ್ಥ್ಯಕ್ಕೆ ಶರೀರದ ಸುಸ್ಥಿತಿ ಸಾಮರ್ಥ್ಯಗಳ ಅವಶ್ಯಕತೆಯಿದೆ. ಮೈಯಂತೆ, ಮನಸ್ಸಿಗೂ ವ್ಯಾಯಾಮದ ಅನುಶಾಸನಗಳು ಬೇಕೆ ಬೇಕು. ಅಂಥ ಸಾಧನೆಯ ಮೇಲೆಯೇ ಮನಸ್ಸಿನ ಕ್ಷೇಮಕುಶಲಗಳು ನೆಲೆಗೊಂಡಿವೆ. ಇನ್ನು ಈ ಸಾಧನೆಯು ಯಥಾಸಾಂಗವಾಗಿ ನಡೆಯಬೇಕಾಗಿದ್ದರೆ ನಮಗೆ ಮನಸ್ಸಿನ ಸ್ಥಿತಿಗತಿಗಳ ಜ್ಞಾನವು ಮೊದಲು ಬೇಕು. ಮನಸ್ಸೆಂದರೇನು ? ಅದರ ಪರಿಮಿತಗಳಾವವು ? ಅದರ ಕುಂದುಕೊರತೆಗಳೇನು ? ಅದರ ಕ್ಷೇಮ ಎಂದರೇನು ? ಎಂಬ ಸಂಗತಿಗಳನ್ನು ಚೆನ್ನಾಗಿ ತಿಳಿದುಕೊಂಡ ಹೊರತು ಮನಸ್ಸಿನ ಅನುಶಾಸನದ ಕ್ರಮವನ್ನು ಅನುಸರಿಸಲು ಸಾಧ್ಯವಿಲ್ಲ. ಅಜ್ಞಾನದಿಂದ ಕೈಕೊಂಡ ಎಂತೆಂತಹವೂ ಆದಯಮ – ನಿಯಮನ – ಧ್ಯಾನ – ಧಾರಣೆಗಳ ಯಾಂತ್ರಿಕ ಅನುಷ್ಠಾನದಿಂದ ಮನಸ್ಸಿನ ಸ್ವಾಸ್ಥ್ಯವನ್ನು ಸಂಪಾದಿಸುವುದರ ಬದಲು ಅದನ್ನು ಪೂರ್ಣ ಕೆಡಿಸಿಕೊಂಡವರುಂಟು. ಅಂದ ಮೇಲೆ ಈ ವಿಷಯದ ಸರಿಯಾದ ಜ್ಞಾನವು ಎಷ್ಟೊಂದು ಅವಶ್ಯವೆಂಬುದನ್ನು ಬೇರೆ ಹೇಳಬೇಕೆ ?

ಇಂಥ ಜ್ಞಾನವನ್ನು ಕೊಡಲು ಮನೋವಿಜ್ಞಾನವು ಅಣಿಯಾಗಿ ನಿಂತಿದೆ. ಜಿಜ್ಞಾಸುಗಳಾಗಿ ತಿಳಿದುಕೊಳ್ಳಬೇಕೆಂಬ ಹಂಬಲಿಗರು ಬೇಕಾಗಿದ್ದಾರೆ. ಮನಸ್ಸಿನ ಎಲ್ಲ ಸಮಸ್ಯೆಗಳಿಗೆ–ಸಂಪೂರ್ಣವಾದ ಉತ್ತರಗಳು ಇಂದಿನ ಮಟ್ಟಿಗೂ ಇನ್ನೂ

ಶಕ್ಯವಾಗಿರಲಿಕ್ಕಿಲ್ಲ. ಆದರೆ ಇಷ್ಟು ಮಾತ್ರ ನಿಜ, ಅದು ಇಂದು ಕಂಡುಹಿಡಿದಷ್ಟು ಸಂಗತಿಗಳೂ ಮಾನವನಿಗೆ ಉಪಕಾರಿಯಾಗಿವೆ. ಸರಿಯಾದ ದಾರಿಯಲ್ಲಿ ಒಯ್ಯಲು ಸಮರ್ಥವಾಗಿವೆ. ಮನುಷ್ಯನು ರಸಾಯನ ಶಾಸ್ತ್ರಾದಿ ಭೌತಶಾಸ್ತ್ರಗಳ ಬಲದಿಂದ ಪ್ರಕೃತಿಯನ್ನು, ಪರಿಸ್ಥಿತಿಯನ್ನು ಅಂಕೆಯಲ್ಲಿಟ್ಟುಕೊಂಡು ಸುಖದ ಸಲುವಾಗಿ ಜೀವನದ ಸೌಕರ್ಯಗಳನ್ನು ಅಳವಡಿಸಿಕೊಳ್ಳುವಷ್ಟು ಸಮರ್ಥನಾಗಿದ್ದಾನೆ. ಆದರೆ ಮನಸ್ಸಿನ ಸ್ವಾಸ್ಥ್ಯತತ್ವಗಳನ್ನು ಗಳಿಸಿಕೊಳ್ಳದೆ ಜೀವನದಲ್ಲಿ ನಿಜವಾದ ಶಾಂತಿ-ಸೌಖ್ಯಗಳು ಎಂದೂ ದೊರೆಯಲಾರವು. ಮನೋವಿಜ್ಞಾನದ ವ್ಯಾಸಂಗವು ಆ ಗಳಿಕೆಯ ಶ್ರೇಷ್ಠವಾದ ಸಾಧನವಾಗಿದೆ. ಆ ಸಾಧನವು ಇನ್ನೂ ಅಪೂರ್ಣವಾಗಿರಬಹುದು; ಆದರೆ ಈಗಲೆ ವರಹ ಸಿಕ್ಕುವುದಿಲ್ಲವೆಂದು ಕೈಗೆ ಬಂದಿರುವ ರೂಪಾಯಿಯನ್ನು ಆರಾದರೂ ಬಿಸುಟುವುದುಂಟೆ ? ಬಿಸುಟುವುದು ಬುದ್ಧಿವಂತಿಕೆಯೆ ?

ಸಮಾಜ ಸಂಘಟನೆಯಲ್ಲಿಯೂ–ಒಂದು ವ್ಯಕ್ತಿಯ ದಿನದ ಜೀವನದಲ್ಲಿಯೂ ತುಂಬಾ ಕ್ರಾಂತಿಯನ್ನುಂಟುಮಾಡಿದ ಮನೋವಿಜ್ಞಾನದ ಇನ್ನೊಂದು ಅಂಗವಾದ ಮನೋವಿಶ್ಲೇಷಣವು ಇನ್ನೂ ಪರಿಪೂರ್ಣಾವಸ್ಥೆಯನ್ನು ಪಡೆಯದೆ ಇದ್ದರೂ ಇಂದು ಇದರ ಪರಿಚಯವನ್ನು ಮಾಡಿಕೊಳ್ಳದೆ ನಡೆಯುವಂತಿಲ್ಲ. ಆದುದರಿಂದ ಇದನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿಹಂಗಮ ದೃಷ್ಟಿಯಿಂದ ವಿವರಿಸಲಾಗಿದೆ. ●

## ೫ ಮನೋವಿಶ್ಲೇಷಣಶಾಸ್ತ್ರ :

ಮನುಷ್ಯನ ಪ್ರಾಥಮಿಕವಾದ ಮೂಲಪ್ರವೃತ್ತಿಗಳ ಪ್ರೇರಣೆಗಳು ಮತ್ತು ಸಾಮಾಜಿಕ ಸಂಘಟನೆಯ ನಿಯಮ, ನಿರ್ಬಂಧಗಳು–ಇವೆರಡರೊಳಗಿನ ಒಂದು ವ್ಯಾವಹಾರಿಕ ಒಪ್ಪಂದದ ಮೇಲೆ ನಾಗರಿಕ ಇಲ್ಲವೆ ಸುಸಂಸ್ಕೃತ ಸಮಾಜವು ನಿಂತಿದೆಯೆಂಬ ಕಲ್ಪನೆಯನ್ನು ಹೇತುವಾದಿ ಮನೋವಿಜ್ಞಾನವು ನಮ್ಮ ಕಣ್ಣೆದುರು ಚಿತ್ರಿಸುತ್ತದೆ. ಇಂತಹ ಒಪ್ಪಂದದ ಸಲುವಾಗಿ ಮನುಷ್ಯನು ಎಷ್ಟೊಂದು ಬೆಲೆ ತೆರಬೇಕಾಗಿದೆಯೆಂಬುದನ್ನೇ ಮನೋವಿಶ್ಲೇಷಣ ಶಾಸ್ತ್ರವು ವಿಶದಪಡಿಸುತ್ತದೆ.

ಮನೋವಿಜ್ಞಾನದಲ್ಲಿ ಹಲವೊಂದು ಸಾಂಪ್ರದಾಯಗಳೂ, ಪಂಥ–ಪ್ರಣಾಲಿಗಳೂ ಉಂಟಾಗಿವೆಯಷ್ಟೇ. ಆದರೆ ಮನೋವಿಶ್ಲೇಷಣೆಯ ಈ ಸಾಂಪ್ರದಾಯದ ಕುರಿತು ಸೆಳೆದಷ್ಟು ಲಕ್ಷ ಉಳಿದ ಇನ್ನಾವುದರ ಪಾಲಿಗೂ ಬರಲಿಲ್ಲ. ಯಾವ ಮತ–ಸಾಂಪ್ರದಾಯಕ್ಕೂ ಇದಕ್ಕೆ ಸಿಕ್ಕಿದಷ್ಟು ಉತ್ಕಟ ಪುರಸ್ಕಾರವಾಗಲಿ, ಅಷ್ಟೇ ವಿಕಟ ತಿರಸ್ಕಾರವಾಗಲಿ ಉಳಿದವುಗಳಿಗೆ ಲಭಿಸಿಲ್ಲ ! ಮೂರ್ತಿಪೂಜೆಯಷ್ಟು ಆವೇಶದಿಂದಲೂ, ಶ್ರುತಿಪ್ರಾಮಾಣ್ಯದಷ್ಟು ಆಗ್ರಹದಿಂದಲೂ ಮನೋವಿಶ್ಲೇಷಣವನ್ನು ಎತ್ತಿ ಹಿಡಿವವರಿದ್ದಾರೆ. ಅದೇ ಮೇರೆಗೆ, ಮಾನವೀ ಮಿದುಳಿನಿಂದ ಹೊರಟ ಅತ್ಯಂತ ದುಷ್ಟ ಸಿದ್ಧಾಂತಗಳಲ್ಲಿಯೂ ತೀರ ನಿಕೃಷ್ಟ ವಿಷಯವೆಂದು ಮನೋವಿಶ್ಲೇಷಣ ಸಿದ್ಧಾಂತವನ್ನು ಹಟದಿಂದ ಮೆಟ್ಟಿ ತುಳಿವವರೂ ಕಡಿಮೆಯಿಲ್ಲ. ಇದರ ಒಂದು ಮಾದರಿಯೆಂದರೆ, ಇಡೀ ಒಂದು ದೇಶದಲ್ಲಿಯೆ ಹಲವು ವರ್ಷಗಳವರೆಗೆ ಈ ಸಿದ್ಧಾಂತವು ಎಲ್ಲ ವೈದ್ಯಕ ತಜ್ಞರಿಂದಲೂ ಶಾಸ್ತ್ರಜ್ಞರಿಂದಲೂ ಕೂಡಿಯೇ ಬಹಿಷ್ಕರಿಸಲ್ಪಟ್ಟಿತ್ತು ! ಈಗ ಆ ಬಹಿಷ್ಕಾರ ಉಳಿದಿಲ್ಲ. ಆದರೂ ಮೋಜಿನ ಮಾತೇನೆಂದರೆ, ಈ ಸಿದ್ಧಾಂತದ ಶತ್ರು–ಮಿತ್ರರೀರ್ವರಲ್ಲಿ ಬಹುಸಂಖ್ಯಾಕರಿಗೆ ಇದರ ಜ್ಞಾನವು ಈಗಲೂ ಸಾಕಷ್ಟು ಇರುವದಿಲ್ಲ.

### ಮನೋವಿಶ್ಲೇಷಣವೆಂದರೇನು ?

ಇಂತಹ ಸ್ಥಿತಿಯಲ್ಲಿ ನಾವು ಒಳ್ಳೇ ಸಾವಧರಾಗಿ ಅಡಿಯಿಡಬೇಕಲ್ಲವೆ ? ಆದುದರಿಂದ ಶಬ್ದಾರ್ಥದಿಂದಲೇ ಪ್ರಾರಂಭಿಸೋಣ. ಮನೋವಿಶ್ಲೇಷಣವೆಂಬ ಮಾತು ಏನನ್ನು ಹೇಳುತ್ತಿದೆ ? ಈ ಪ್ರಶ್ನೆಗೆ ಬರುವ ಉತ್ತರದಿಂದಲೇ ಈ ವಿಷಯಕ್ಕೆ ತವಕದಿಂದ

ತೀರ್ಪು ಕೊಡುವ ಮೊದಲು ತುಸು ತಡವರಿಸಬೇಕಾಗುವುದೆಂಬುದು ತಿಳಿದು ಬರುವದು. ಏಕೆಂದರೆ, ಮನೋವಿಶ್ಲೇಷಣವೆಂಬ ಶಬ್ದವನ್ನು ಕಡಿಮೆಯೆಂದರೆ, ಮೂರು ವಿಧವಾಗಿ ನಿರ್ವಚನಗೊಳಿಸಬಹುದು. ಮೊದಲು, ಮನೋವಿಶ್ಲೇಷಣ ವೆಂದರೆ ವಿಶಿಷ್ಟ ಮಜ್ಜಾತಂತು–ವಿಕಾರಗಳಿಂದುಂಟಾಗುವ ವ್ಯಾಧಿಗಳ ಒಂದು ಗುಂಪಿಗಾಗಿ ಇರುವ ಒಂದು ಚಿಕಿತ್ಸಾಕ್ರಮ–ಉಪಚಾರಪದ್ಧತಿ. ಇವುಗಳಿಗೆ ವೈದ್ಯಕೀಯ ಪರಿಭಾಷೆಯಲ್ಲಿ ಚಲಮನೋವಿಕೃತಿ (Transference Neuroses) ಗಳೆಂಬ ಹೆಸರು. ಈ ಮನೋವಿಕೃತಿಗಳು ಮೂರು ಬಗೆಯಾಗಿವೆ. ಅವು ಅನು ಕ್ರಮವಾಗಿ, ಚಿಂತಾಕ್ರಾಂತಿ ಉನ್ಮಾದ, ರೂಪಾಂತರಿತ ಉನ್ಮಾದ ಮತ್ತು ಸ್ಮೃತಿಬಾಧಾವಿಕೃತಿ (Anxiety-hysteria, Conversion hysteria ಮತ್ತು Obsessional Neuroses) ಎಂತ ಕರೆಯಬಹುದು. ಇದು ಮನೋ ವಿಶ್ಲೇಷಣದ ಮೂಲದ ಮತ್ತು ಪರಿಮಿತವಾದ ಅರ್ಥವಾಯಿತು.

ಎರಡನೆಯ ಅರ್ಥದಲ್ಲಿ, ಮನೋವಿಶ್ಲೇಷಣವೆಂದರೆ ಮನಸ್ಸಿನ ಸ್ವರೂಪ–ಸ್ವಭಾವಗಳನ್ನು ಪರಿಶೀಲಿಸಲೋಸುಗ ವಿನಿಯೋಗಿಸಲ್ಪಡುವ ಒಂದು ವಿಚಾರಣಾ ಪದ್ಧತಿ. ವಿಶೇಷವಾಗಿ, ಮನಸ್ಸಿನ ಕೆಳಥರಗಳನ್ನು–ತಾಯ್ಮಳಲನ್ನು ಆಳದ ಅಂತ ತರ್ತಮರ್ಮವನ್ನು ಅರಿತುಕೊಳ್ಳುವ ಒಂದು ವಿಧಾನ. ಇನ್ನು, ಮೂರನೆಯ ಅರ್ಥ ದಿಂದ, ಮನೋವಿಶ್ಲೇಷಣವು ಒಂದು ಸ್ವತಂತ್ರ ವೈಜ್ಞಾನಿಕ ಸಿದ್ಧಾಂತ. ಮನಸ್ಸಿನ ಸ್ವರೂಪ-ಸ್ವಭಾವಗಳ ಕುರಿತು ಡಾ. ಸಿಗ್ಮಂಡ್ ಫ್ರ್ಯಾಡ್ ಇವನು ವಿಕಾಸ ಗೊಳಿಸಿದ ಶಾಸ್ತ್ರೀಯ ತತ್ವಪ್ರಣಾಲಿ ಮನೋರೋಗಗಳ ಚಿಕಿತ್ಸಾಕ್ರಮವೆಂಬ ರೀತಿಗಳಲ್ಲಿ, ದೀರ್ಘಕಾಲದ ವೈದ್ಯಕೀಯ ಅಭ್ಯಾಸ ಅಧ್ಯವಸಾಯಗಳ ಫಲವಾಗಿ, ಆತನು ನಿರೀಕ್ಷಿಸಿದ ಮಾನಸಿಕ ಸಮಸ್ಯೆಗಳ ಮತ್ತು ನಿರ್ಣಯಿಸಿದ ಸಿದ್ಧಾಂತಗಳ ವಿಶದವಾದ ವ್ಯಾಖ್ಯಾನವೆಂದರೆ ಮನೋವಿಶ್ಲೇಷಣ ಶಾಸ್ತ್ರವು. ಈ ಅರ್ಥದಲ್ಲಿ ಮನೋವಿಶ್ಲೇಷಣವೆಂದರೆ 'ಅಜಾಗೃತ ಮನೋವಿಜ್ಞಾನ' ಇಲ್ಲವೆ 'ಅಂತರ್ಮನೋವಿಜ್ಞಾನ'ವೆಂಬ ಶಬ್ದಕ್ಕೆ ಪರ್ಯಾಯವಾಚಿಯೇ ಆಗುತ್ತದೆ. ಏಕೆಂದರೆ, 'ಮಾನಸಿಕ ಜೀವನದಲ್ಲಿಯ ಅಜಾಗೃತ ಅಂಶ ಅವಸ್ಥೆಗಳ ಸಂಶೋಧನ ವಲ್ಲದೆ, ಮನೋವಿಶ್ಲೇಷಣವು ಮತ್ತೇನನ್ನೂ ಸಾಧ್ಯವಾಗಿಟ್ಟುಕೊಂಡಿಲ್ಲ, ಸಾಧಿಸುತ್ತ ಬಂದಿಲ್ಲ'–ಹೀಗೆಂದು ಡಾ. ಫ್ರ್ಯಾಡನೇ ಬರೆದಿದ್ದಾನೆ.

ಈ ವಿಷಯದಲ್ಲಿಯ ಇತ್ತೀಚಿಯ ಸಂಶೋಧನವನ್ನು ಅವಲೋಕಿಸಿದಲ್ಲಿ, ಮೇಲೆ ಕೊಟ್ಟ ಮೂರು ಅರ್ಥಗಳೊಡನೆ ನಾಲ್ಕನೆಯ ವ್ಯಾಖ್ಯೆಯೊಂದನ್ನು ಕೂಡಿಸ ಬೇಕಾಗುವದು. ಏಕೆಂದರೆ ಮನೋವಿಶ್ಲೇಷಣದ ಸಿದ್ಧಾಂತ ಮತ್ತು ತಂತ್ರ

ಗಳನ್ವಯ ಸಾಮಾಜಿಕ ಕಾರ್ಯಕ್ಷೇತ್ರ ಮತ್ತು ಐತಿಹಾಸಿಕ ಕಾಲಖಂಡಗಳಲ್ಲಿಯ ವಿವಕ್ಷಿತ ಮಾನವೀ ವರ್ತನೆಯನ್ನು ವಿವರವಾಗಿ ವಿಶದಮಾಡುವ ಕಾರ್ಯವು ಇತ್ತಲಾಗಿ ಕೆಲವು ವರ್ಷಗಳಲ್ಲಿ ನಡೆದಿದೆ. ವಿಶೇಷವಾಗಿ, ಎಷ್ಟೋ ಸಾಮಾಜಿಕ ಆಚಾರ-ರೂಢಿಗಳ ಮೂಲವನ್ನು ಮನೋವಿಶ್ಲೇಷಣೆಯ ರೀತಿಯಿಂದ ಪರಿಶೋಧಿಸಲಾಗಿದೆ. ಹಿಂದುಳಿದ ಜನಾಂಗಗಳಲ್ಲಿ ಕಂಡುಬರುವ ಪ್ರಾಣಿಪಕ್ಷಿಗಳ ಪ್ರತೀಕಗಳನ್ನೂ,-ಕುಲದೈವತದಂತೆ ಬಣಕ್ಕೊಂದು ಇರುವ ಚಿನ್ಹಗಳನ್ನೂ,-ಆ ಆ ಸಮಾಜದಲ್ಲಿ ನಡೆದುಬಂದ ನಿಷೇಧ-ನಿರ್ಬಂಧಗಳನ್ನೂ ಡಾ. ಫ್ರ್ಯಾಡನೇ ಅಭ್ಯಾಸಿಸಿ ಬರೆದಿದ್ದಾನೆ. ಆತನ ಅನುಯಾಯಿಗಳು ಜಾನಪದ ಸಾಹಿತ್ಯ, ಪುರಾಣ ಗಳ ಆಖ್ಯಾಯಿಕೆ, ಸ್ಥಲಮಹಾತ್ಮ್ಯ-ವ್ಯಕ್ತಿಮಹಾತ್ಮ್ಯದ ಗಾದೆಗಳು ಮತ್ತು ವಾಙ್ಮಯ-ಇವೆಲ್ಲ ಕ್ಷೇತ್ರಗಳಲ್ಲಿ ವಿಸ್ತೃತವಾದ ಪರಿಶೋಧನೆಯನ್ನು ಮಾಡಿರುತ್ತಾರೆ.

ಇಷ್ಟೊಂದು ನಿಜ. ಬಹುತರ ಜನರು ಮನೋವಿಶ್ಲೇಷಣವನ್ನು ಒಂದು ಸಿದ್ಧಾಂತ ವೆಂತಲೇ ಮನ್ನಿಸುವರು. ಅದು ಒಂದೂ ತಂತ್ರ-ಕಾರ್ಯಪದ್ಧತಿ-ಯೆಂಬುವದೂ ಅವರಿಗೆ ಅರಿಕೆಯಾಗದೇ ಇಲ್ಲ. ಆದರೆ ಫ್ರ್ಯಾಡನ ಮತದಲ್ಲಿ, ಇವೆರಡರಲ್ಲಿ ಎರಡನೆಯ ಅಂಗವೇ ಹೆಚ್ಚಿನ ಮಹತ್ವದ್ದಾಗಿದೆ. 'ವಿಜ್ಞಾನದೃಷ್ಟಿಯಿಂದ ಮನೋ ವಿಶ್ಲೇಷಣದ ವೈಶಿಷ್ಟ್ಯವು ಅದರ ಕಾರ್ಯಪದ್ಧತಿಯಲ್ಲಿದೆಯೇ ವಿನಹ, ಅದನ್ನೊಳ ಗೊಂಡ ವಿಷಯದ ಸ್ವರೂಪದಲ್ಲಿಲ್ಲ'ವೆಂದು ಆತನ ಅಂಬೋಣ. ಆದರೂ ಜನತೆಯು ಮನೋವಿಶ್ಲೇಷಣದ ವಿಚಾರವನ್ನು ಒಂದು ಕ್ರಾಂತಿಕಾರಿಯಾದ ಸಿದ್ಧಾಂತವೆಂತಲೇ ಭಯಚಕಿತವಾಗಿ ನೋಡುತ್ತದೆ; ಮನೋವಿಶ್ಲೇಷಣದ ಸಿದ್ಧಾಂತದ ವಿರುದ್ಧವೇ-ಹೆಚ್ಚಾಗಿ ಅದರ ಕೆಲವೊಂದು ಭಾಗಗಳ ವಿರುದ್ಧವೇ- ಜನತೆಯು ಸ್ಥಿತಿಸ್ಥಾಪಕ ಮನೋವೃತ್ತಿಯು ತೀವ್ರವಾದ ಪ್ರತಿಭಟನೆಯು ಗುರಿ ಯಿಟ್ಟಿದೆ. ಡಾ. ಫ್ರ್ಯಾಡನು ಅನ್ನುವಂತೆ ಅದೊಂದು ಕಾರ್ಯಪದ್ಧತಿ ಮಾತ್ರ ವಾಗಿದ್ದರೆ, ವೈದ್ಯಕೀಯ ಚಿಕಿತ್ಸಾಕ್ರಮವಷ್ಟೇ ಇದ್ದುದಾದರೆ, ಮಜ್ಜಾತಂತು ವಿಕಾರಗಳನ್ನಷ್ಟೇ ಅನ್ವಯಿಸುವ ಉಪಚಾರತಂತ್ರವಾಗಿದ್ದರೆ, ಅದಕ್ಕೆ ಇಷ್ಟೊಂದು ಪ್ರಸಿದ್ಧಿ ಬರುತ್ತಿದ್ದಿಲ್ಲ. ಕೇವಲ ತಜ್ಞರ ಪ್ರಪಂಚದಲ್ಲಿ ಮಾತ್ರ ಪ್ರಶಸ್ತಿ-ಪ್ರಚಾರ ಗಳನ್ನು ಪಡೆಯುತ್ತಿತ್ತು.

ಅಂದಮೇಲೆ ಇಷ್ಟೊಂದು ಕ್ಷುಬ್ಧ ವಾತಾವರಣಕ್ಕೆ ಮುಳುವಾದ ಈ ಸಿದ್ಧಾಂತ ವಾದರೂ ಯಾವುದು ?

## ಮನಸ್ಸಿನ ರಚನೆ

ಡಾ· ಫ್ರ್ಯಾಡಸು ಮಾನಸಿಕ ಚಟುವಟಿಕೆಗಳ-ಮನೋವ್ಯಾಪಾರಗಳ-ಮೂರು ಗುಂಪುಗಳನ್ನು ಪ್ರತಿಪಾದಿಸುತ್ತಾನೆ. ಜಾಗ್ರತ, ಉಪಜಾಗ್ರತ ಮತ್ತು ಅಜಾಗ್ರತ ವೆಂಬ ಮೂರು ಮನೋಜೀವನವನ್ನು ವಿಂಗಡಿಸುತ್ತಾನೆ. ಜಾಗ್ರತವೆಂದರೆ ಯಾವುದೇ ಒಂದು ಕ್ಷಣದಲ್ಲಿ ವ್ಯಕ್ತಿಗೆ ಸ್ವಂತ ಗಮನಕ್ಕೆ ಬರುವ ಮನೋ ವ್ಯಾಪಾರಗಳು. ಉಪಜಾಗ್ರತವೆಂದರೆ ಇಂತಹ ಅರಿವಿನ ವಲಯಕ್ಕೆ ಒಳಪಡದಿದ್ದರೂ ಅದರ ಅಂಚಿನಲ್ಲಿಯೇ ಅಡಗಿರುವ ಮನೋವ್ಯಾಪಾರಗಳು; ಇಂಥವು ಯಾವುದೇ ಕ್ಷಣಕ್ಕೆ ಅರಿವಿನ ನಿಲುಕಿನಲ್ಲಿ ಬರಬಹುದು, ಜಾಗ್ರತವಾಗಬಹುದು. ಇನ್ನು ಅಜಾಗ್ರತವೆಂದರೆ ಇವನ್ನೂ ಮೀರಿ, ಆಳದಲ್ಲಿ ಹುದುಗಿರುವ ಮನೋವ್ಯಾಪಾರ ಗಳು. ಇವುಗಳ ಅರಿವು ವ್ಯಕ್ತಿಗೆ ಇರುವುದೇ ಇಲ್ಲ. ಸಾಮಾನ್ಯ ಪರಿಸ್ಥಿತಿಯಲ್ಲಿ ಇವು ಜಾಗ್ರತವಾಗುವುದೇ ಇಲ್ಲ. ಈ ಜಾಗ್ರತ, ಉಪಜಾಗ್ರತ ಮತ್ತು ಅಜಾಗ್ರತ ಮನೋಭಾಗಗಳನ್ನು ಒಂದರ ಕೆಳಗೊಂದಿರುವ ಮೂರು ಥರಗಳ ಚಿತ್ರದಿಂದ ಬಿಂಬಿಸಬಹುದು. ಅಜಾಗ್ರತವು ತೀರ ಕೆಳಗಿನದೂ ಬಹಳೇ ಆಳ ವಾದುದೂ ಆದ ಸ್ಥರವು. ಆದರೆ ಈ ಚಿತ್ರಕಲ್ಪನೆಯು ಬರೇ ಉಪಮೆ. ಮನೋ ವ್ಯಾಪಾರಗಳ ಕ್ರಮಗಳು ದೇಶ ಕಾಲಗಳ ತೆಕ್ಕೆಯನ್ನು ಮೀರಿದವು. ಸ್ಥಲ ಪರಿಮಾಣಗಳ ಪರಿಮಿತಿಗೆ ಅವು ಒಳಪಡುವದಿಲ್ಲ. ಇಷ್ಟೇ ಅಲ್ಲ, ವಿದುಳಿನ ಘನಫಲ ಕ್ಷೇತ್ರಫಲಗಳ ವ್ಯಾಪ್ತಿಯೊಂದಿಗೆ ಕೂಡ ಮನೋಜೀವನದ ಸಂಬಂಧವಿಲ್ಲ.

ಮನಸ್ಸಿನ ಮೇಲೆ, ಹೊರಗಿನಿಂದಾಗಲಿ, ಒಳಗಿನಿಂದಾಗಲಿ ಕೆಲಸ ಮಾಡ ಲಿಕ್ಕಾಗುತ್ತದೆ. ಜ್ಞಾನೇಂದ್ರಿಯಗಳ ಮಾರ್ಗವಾಗಿ ಬಂದ ಬಾಹ್ಯ ಪ್ರಚೋದನೆ ಯಾಗಲಿ, ಅಂತರಂಗಿಕ ಪ್ರವೃತ್ತಿಗಳ ಪ್ರೇರಣೆಯಾಗಲಿ, ಮನಸ್ಸನ್ನು ಕಾರ್ಯ ಕಾರಿಯನ್ನಾಗಿ ಮಾಡುತ್ತದೆ. ಎಲ್ಲ ಮಾನಸಿಕ ಕ್ರಿಯೆಗಳು ಅಜಾಗ್ರತ ಭಾಗದಲ್ಲಿ ಆರಂಭವಾಗುತ್ತವೆ; ಇವುಗಳಲ್ಲಿ ಕೆಲವು ಬೆಳೆಯುತ್ತ ಜಾಗ್ರತ ಭಾಗದ ತನಕ ನೆಗೆದೇಳುವವು; ಉಳಿದವು ಉಪಜಾಗ್ರತ ಭಾಗದ ಗಡಿಯನ್ನು ದಾಟುವದಿಲ್ಲ. ಮಾನಸಿಕ ಚಟುವಟಿಕೆಗಳ ಮೂರನೆಯ ಗುಂಪು ಅಜಾಗ್ರತ ಭಾಗದಲ್ಲಿಯೇ ಹುದುಗಿಕೊಂಡಿರುವದು. ಯಾವುದೇ ಒಂದು ವಿಚಾರವಾಗಲಿ ವಿಕಾರವಾಗಲಿ ಎಲ್ಲಿಯ ತನಕ ಮುಂದರಿಯಬಹುದೆಂಬುದು ಅದರ ಬೆಳವಣಿಗೆಯಲ್ಲಿ ಅದಕ್ಕೆ ಅಡ್ಡಬರುವ ಪ್ರತೀಕಾರವು ಎಷ್ಟಿರುವುದೆಂಬುದರ ಮೇಲೆ ಅವಲಂಬಿಸಿರುತ್ತದೆ.

ತನ್ನಲ್ಲಿ ಆಗುವ ವಿಚಾರ-ವಿಕಾರಗಳ ಪ್ರವೇಶ-ಉನ್ಮೇಶಗಳನ್ನು ಮನಸ್ಸು ತಡೆ

ಹಿಡಿಯಲಾರದು. ಆದರೆ ಅವುಗಳನ್ನು ಜಾಗ್ರತ ಇಲ್ಲವೆ ಪ್ರತಿಜಾಗ್ರತ ಸ್ಥರಗಳಲ್ಲಿ ಒಳಬಿಡುವ ಕುರಿತು ಮನಸ್ಸು ನಿಷ್ಠುರವಾದ ನಿಯಂತ್ರಣವನ್ನು ಇಡುತ್ತದೆ. ಹೀಗೆ ವಿಚಾರ-ವಿಕಾರಗಳ ಆಯ್ಕೆ ಮಾಡುವ ಮನಸ್ಸಿನ ಕಾರ್ಯತಂತ್ರಕ್ಕೆ ಫ್ರ್ಯಾಡನು ಅಂತರ್ಮನೋವಿಮರ್ಶಕ (Endopsychic censor)ವೆಂತ ಹೆಸರಿಟ್ಟಿರುವನು. ಈ 'ವಿಮರ್ಶಕ ವೈದ್ಯ'ನ ಮುಖ್ಯ ಕೆಲಸವೆಂದರೆ, ಅನಿಷ್ಟ ವಿಚಾರ-ವಿಕಾರಗಳನ್ನು, ಅಜಾಗ್ರತದಿಂದ ಉಪಜಾಗ್ರತ ಸ್ಥರದಲ್ಲಿ ಬಾರದಂತೆ ನಿವಾರಿಸುವದು. ಇಂಥ ವಿಚಾರ-ವಿಕಾರಗಳು ದಮಿತ (Repressed) ವಾಗುವವು. ಏಕೆಂದರೆ ಇಂಥವು ಜಾಗ್ರತಸ್ಥರದಲ್ಲಿ ತಲೆದೋರಿದರೆ ತೀವ್ರವಾದ ವಿರೋಧ ಪ್ರತಿಬಾಧೆಗಳಿಗೆ ಇದಿರಾಗುವವು.

ದಮನದಲ್ಲಿ ಇನ್ನೊಂದು ಬಗೆಯೂ ಇದೆ. ಬಾಳಿನ ಮೊದಲಿನ ವರ್ಷಗಳಲ್ಲಿ ಶಿಶುವಿನ ಮೂಲಪ್ರವೃತ್ತಿಗಳು ಸಂಘಟಿತ ಸಮಾಜದ ನಿಯಮ ನಿರ್ಬಂಧಗಳೊಂದಿಗೆ ತೀವ್ರವಾದ ಹೋರಾಟದಲ್ಲಿ ಸಿಲುಕುವವು. ಆಗ ಶಿಶು ಮನಸ್ಸು ನಿಯಮ-ನಿರ್ಬಂಧಗಳನ್ನು ಮನ್ನಿಸಿ ಸಮಾಜಕ್ಕೆ ಮಣಿಯುವಾಗ ತನ್ನ ಉಚ್ಛೃಂಖಲ ಪ್ರೇರಣೆಗಳನ್ನು ಅಜಾಗ್ರತ ಸ್ಥರದಲ್ಲಿ ಕೆಳನೂಡಿ ಒತ್ತಿ ಇಡುವುದು.

ಇಲ್ಲಿ 'ಉಚ್ಛೃಂಖಲ ಪ್ರೇರಣೆ'ಗಳೆಂದರೆ, ಇಲ್ಲವೆ 'ಅನಿಷ್ಟ ವಿಚಾರಗಳೆಂದರೆ, ಕೇವಲ ಅಪ್ರಿಯ ಇಲ್ಲವೆ ಅಶ್ಲೀಲ (ಅನೈತಿಕ) ಸಂಗತಿಗಳೇ ಎಂತಭಾವಿಸಕೂಡದು. ಜಾಗ್ರತ ಸ್ಥರದಲ್ಲಿ ತಲೆದೋರಿದರೆ ಅಲ್ಲಿ ಆ ಮೊದಲೇ ಇರುವ ವಿಚಾರ-ವಿಕಾರಗಳೊಂದಿಗೆ ಸಂಘರ್ಷ (ತಿಕ್ಕಾಟ) ವಾಗಬಹುದಾದ ಹೊಸ ವಿಚಾರ-ವಿಕಾರಗಳೆಂದಿಷ್ಟೇ ಅದರ ಅರ್ಥ. ಇದನ್ನು ಒತ್ತಿ ಹೇಳುವ ಕಾರಣವೇನೆಂದರೆ, ಸಾಮಾನ್ಯವಾಗಿ, ಅಜಾಗ್ರತ ಸ್ಥರದಲ್ಲಿ ಹತ್ತಿಕ್ಕಲಾಗುವ ವಿಚಾರ-ವಿಕಾರಗಳು ನಿಸ್ಸಂದೇಹವಾಗಿಯೂ, ಅಪ್ರಿಯ ಇಲ್ಲವೆ ಅನೈತಿಕವಿರುತ್ತವೆ. ಏಕೆಂದರೆ ಸಮಾಜವು ಹಾಗೆ ಭಾವಿಸುತ್ತದೆ.

### ಮನಃಸ್ವರೂಪ : 'ಇಡ್' 'ಇಗೊ', ಮತ್ತು ಸುಪರ್-ಇಗೊ :

ಇದುವರೆಗೆ ಮನಸ್ಸಿನ ರಚನೆಯ ಕುರಿತು ಹೇಳಿದ್ದಾಯಿತು. ಇನ್ನು ಅದರ ಸ್ವರೂಪ-ಸ್ವಭಾವಗಳ ಪರಿಶೀಲನೆಯು ಅವಶ್ಯವಿದೆ. ಡಾ. ಫ್ರ್ಯಾಡನ ಮತದಂತೆ ಮನಸ್ಸಿನ ನೆಲೆಯು ಪ್ರಾಥಮಿಕ ಮೂಲಪ್ರವೃತ್ತಿಗಳ ಸ್ಫೂರ್ತಿಯ ಆಳವಾದ ಸಂಚಯ. ಇದು ಅಜಾಗ್ರತವೇ ಇರುತ್ತದೆ. ಹಾಗೆಯೇ 'ಅಪೌರುಷೇಯ' (Impersonal) ಅಂದರೆ ವ್ಯಕ್ತಿವ್ಯಕ್ತಿಗಳಿಗೆ ಸರ್ವಸಾಮಾನ್ಯವಾಗಿ ವ್ಯಕ್ತಿತ್ವವನ್ನು

ಮೀರಿ 'ನಿತ್ಯ ಸರ್ವಗತ ಅಚಂಸನಾತನ'ವಾದ 'ಸ್ಥಾಣು'ವಾಗಿರುತ್ತದೆ. ಈ ಮನೋಮೂಲಕ್ಕೆ ಆತನು 'ತತ್' ಎಂತ (Id) ಹೆಸರು ಕೊಟ್ಟಿರುವನು.

ಜೀವನದ ಪೂರ್ವ ಭಾಗದಲ್ಲಿಯೇ-ಎಳೆವಯಸ್ಸಿನಲ್ಲಿಯೇ-ಮನಸ್ಸಿನ ಮೂರೂ ಸ್ಥರಗಳಿಂದ ಅಳವಡಿಸಿಕೊಂಡ ಈ 'ತತ್ವ'ದ ಅಂಶವು ಬಾಹ್ಯವಿಶ್ವ ವಸ್ತುಗಳೊಡನೆ ಆ ವ್ಯಕ್ತಿಯು ಇಟ್ಟುಕೊಳ್ಳಬೇಕಾದ ಸಂಬಂಧಗಳನ್ನು ಸ್ಥಾಪಿಸುವುದಕ್ಕಾಗಿ, ಏಕಮುಖವಾಗುತ್ತದೆ. ಹೀಗೆ ಏಕಮುಖವಾಗಿ ಸಮನ್ವಯಗೊಂಡ ಮನಃಶಕ್ತಿಯ ಅಂಶದಲ್ಲಿ ತನ್ನತನದ ಅರಿವು ವ್ಯಕ್ತಿತ್ವದ ಭಾವನೆಯು-ವ್ಯಾಪ್ತವಾಗುತ್ತದೆ. ಈ ಅಂಶಕ್ಕೆ 'ಅಸ್ಮಿತೆ' ಇಲ್ಲವೆ 'ಅಹಂತೆ' (Ego) ಎಂಬ ಹೆಸರು. ಇದು ಸ್ವಯಂಪ್ರಜ್ಞೆಯ ಮೂರ್ತರೂಪವು.

ಆದರೆ ವ್ಯಕ್ತಿತ್ವವು ಒಂದು ಸೋಪಾಧಿಕ ಸತ್ತೆ. ಅಂದರೆ ಅದು ವಿಶ್ವದೊಂದಿಗೂ ಇತರ ವ್ಯಕ್ತಿತ್ವಗಳೊಂದಿಗೂ ಇಟ್ಟುಕೊಂಡ ಸಂಬಂಧ, ಕಟ್ಟಿಕೊಂಡ ಒಪ್ಪಂದಗಳ ಮೇಲೆ ನೆಲೆಗೊಳ್ಳಬೇಕಾಗುತ್ತದೆ. ಆದುದರಿಂದ ಮೇಲೆ ನಿವೇದಿಸಿದ ಮನಸ್ಸಿನ ಅಹಂತೆಯ ಭಾಗವು ಕೂಡಲೇ ಒಂದು ಪಾಠವನ್ನು ಕಲಿಯುತ್ತದೆ. ತನ್ನ ಬಾಳು ಬಳಕೆಯ ಬಾಹ್ಯಪ್ರಪಂಚದಲ್ಲಿ ಕೆಲವೊಂದು ಸಂಗತಿಗಳನ್ನು ಮಾಡಲೇಬೇಕು, ಬೇರೆ ಕೆಲವನ್ನು ಬಿಡಲೇಬೇಕು, ಅರ್ಥಾತ್ ತಾನು ಒಳಪಟ್ಟ ಸಮಾಜವು ತನ್ನ ಮೇಲೆ ಕಟ್ಟು-ಕಟ್ಟಳೆಗಳನ್ನು ಹೇರುತ್ತದೆ-ಎಂಬೀ ತಿಳುವಳಿಕೆಯನ್ನು ಅಹಂತೆಯು ಪಡೆಯುತ್ತದೆ. ಆ ಕಟ್ಟು-ಕಟ್ಟಳೆಗಳನ್ನು ಅಹಂತೆಯು ಒಪ್ಪಿಕೊಂಡು, ತತ್-ತ್ವದ ತೀರ ಪ್ರಾಥಮಿಕವಾದ ಪ್ರವೃತ್ತಿಗಳನ್ನು ತಾನೂ ತಿರಸ್ಕರಿಸತೊಡಗುತ್ತದೆ.

ವಯಸ್ಸಿನೊಂದಿಗೆ ಮನಸ್ಸಿನ ಬೆಳವಣಿಗೆ ಬಲಿತಂತೆ, 'ತತ್'-ಪ್ರೇರಣೆಗಳನ್ನು ಭದ್ರವಾಗಿ ನಿಯಂತ್ರಣದಡಿಗೆ ಇಡಬೇಕೆಂಬುದು ಅಹಂತೆಗೆ ಹೆಚ್ಚು ಹೆಚ್ಚು ಸ್ಪಷ್ಟವಾದಂತೆ, ಈ ನಿಯಂತ್ರಣದ ಕೆಲಸಕ್ಕಾಗಿ ಒಂದು ಪ್ರತ್ಯೇಕ ವ್ಯವಸ್ಥೆ ಮಾರ್ಪಡುತ್ತದೆ. ಮಗುವಿನ ಕಾಟ ಬೆಳೆದಂತೆ ಅದರ ಕೆಲಸ ಕಾವುಲಿನ ಬಗ್ಗೆ ಒಂದು ತೊತ್ತು ಇಟ್ಟುಕೊಂಡು ಮನೆಯ ಮಿಕ್ಕ ಕೆಲಸ ಬೊಗಸೆಗಳಿಗಾಗಿ ತಾಯಿಯು ಬಿಡುವು ಮಾಡಿಕೊಳ್ಳುವುದಿಲ್ಲವೇ ? ಹಾಗೆಯೇ 'ತತ್' ಪ್ರೇರಣೆಗಳ ಮೇಲೆ ಪರ್ಯವೇಕ್ಷಣೆ (Supervision) ಇಡಲಿಕ್ಕೂ, ಅವುಗಳಿಂದ ಜಾಗ್ರತ ಮನಸ್ಥರದಲ್ಲಿ ಏನಾದರೊಂದು ಅನಿಷ್ಟ ವಿಚಾರ-ವಿಕಾರಗಳು ತಲೆಯೆತ್ತುವ ಭೀತಿಯಿದ್ದರೆ, ಅದರ ಮುಂದರಿವು ತಿಳಿದುಕೊಳ್ಳಲಿಕ್ಕೂ ಅಹಂತೆಯು ತನ್ನ ಜ್ಞಪ್ತಿತ್ವದ ಒಂದು ಅಂಶವನ್ನು ಮೀಸಲಾಗಿಡುತ್ತದೆ. ಇದೇ ಹಿಂದೆ ಹೇಳಿದ

ಅಂತರ್ಮನೋವಿಮರ್ಶಕ. ಇದಕ್ಕೆ ವರಿಷ್ಟ-ಅಹಂತೆ Super-Ego) ಎಂತ ಹೆಸರಿಡಬಹುದು. ಅಜಾಗ್ರತ ಸ್ತರದಿಂದ ಜಾಗ್ರತದಲ್ಲಿ ಆಗಬಹುದಾದ ವಿಚಾರ-ವಿಕಾರಗಳ ಪ್ರವೇಶದ ಮೇಲೆ ಅಹಂತೆಯು ಪ್ರೇರಣೆಯಿಂದ, ಪ್ರತಿಬಂಧವಿಡುವ ತಂತ್ರವಿದು.

ಈ ವರಿಷ್ಟ ಅಹಂತೆಯೇ ಸಾಮಾನ್ಯ ಜನರು ತಿಳಿಯುವ ಸದಸದ್ವಿವೇಕ ಬುದ್ಧಿಯಾಗಿದೆ. ನಮ್ಮಲ್ಲಿಯ ಪಾಪಭಾವನೆಗೆ ಇದೇ ಹೊಣೆಯಾಗಿರುತ್ತದೆ. ಸರ್ವಸಮ್ಮತವಾದ ಧಾರ್ಮಿಕ, ನೈತಿಕ, ನೈಷ್ಠಿಕ ಮತ್ತು ಸಾಮಾಜಿಕ ನಿಯಮ-ನಿರ್ಬಂಧಗಳಿಗೆ ವಿರುದ್ಧವಾಗಿ ಜರುಗುವ ವಿಚಾರ, ಕ್ರಿಯೆಗಳ ಕುರಿತು ಮನಸ್ಸಿನಲ್ಲಿಯೇ ಅನುಭವಕ್ಕೆ ಬರುವ ಅಪರಾಧಿತನದ ಅನಿಸಿಕೆಯೂ ಆತ್ಮಗ್ಲಾನಿಯೂ ಇದರಿಂದಲೇ ಉಂಟಾಗುತ್ತವೆ. ಪ್ರಾಣಿ ವರ್ಗಗಳಲ್ಲಿ ಹೀಗೆ ವರಿಷ್ಠ ಅಹಂತೆಯನ್ನು ಬೆಳೆಸಿಕೊಳ್ಳುವದರಲ್ಲಿ ಮನುಷ್ಯನು ಅದ್ವಿತೀಯನಾಗಿರುತ್ತಾನೆ. 'ಧರ್ಮೋಹಿ ತೇಷಾಂ ಅಧಿಕೋ ವಿಶೇಷಃ' ಎಂತ ಪೂರ್ವ ಸೂರಿಗಳು ಹೇಳಿಲ್ಲವೇ ? ಇಷ್ಟೇ, ಈ ಧರ್ಮವು ದೇವರ ಉಸಿರಿನಿಂದ, ಸಮಾಜದ ಬಸರಿನಿಂದ ಬಂದದ್ದಾಗಿದೆ, ಇರಲಿ.

## ಅಜಾಗೃತ ಮನಸ್ತರದ ವಿಚಾರ

ಇಲ್ಲಿ ಒಂದು ಪ್ರಶ್ನೆ ತಲೆದೋರುತ್ತದೆ. ಅಜಾಗ್ರತಸ್ತರದೊಳಗಿನ ವಿಚಾರ-ದ್ರವ್ಯದ ವಿರುದ್ಧ ಇಷ್ಟೊಂದು ಭದ್ರವಾದ ದಮನ ಇಷ್ಟೊಂದು ನಿಷ್ಠುರವಾದ ನಿಯಂತ್ರಣವು ಏಕಿರಬೇಕು ? ಅಜ್ಞಾತವನ್ನು ಅಪರಾಧವೆಂತ ಕಲ್ಪಿಸುವದು ಕೇವಲ ಅನ್ಯಾಯವಲ್ಲವೇ ? ಅಜಾಗ್ರತರಸ್ತರದಲ್ಲಿ ಏನಿರುವದೆಂಬುವರ ಅರಿವು ನಮಗಾಗದೆ ಇರುವಾಗ, ಅಜಾಗ್ರತ ಭಾಗದಿಂದ ಅಲ್ಲಿಯ ಸಂಗತಿಗಳು ಜಾಗ್ರತಸ್ತರಕ್ಕೆ ಸಾಮಾನ್ಯವಾಗಿ ಏರದೆ ಇರುವಾಗ ಅವುಗಳ ವಿರುದ್ಧ ಇಷ್ಟೊಂದು ಎಡಬಿಡದ ಬಿಗಿಯಾದ ಕಾವಲೇಕೆ ಅಗತ್ಯ ?

ಕಾವಲು ಅಗತ್ಯವೇಕೆಂದರೆ, ಅಜಾಗ್ರತಸ್ತರದಲ್ಲಿಯ ವಿಚಾರ ವಿಕಾರಗಳೂ, ವ್ಯಾಪಾರ-ಕ್ರಿಯೆಗಳೂ ಆಳವಾಗಿದ್ದರೂ ಒಳ ಒಳಗಿನವಾಗಿದ್ದರೂ, ಚಟುವಟಿಕೆಯುಳ್ಳವಾಗಿದ್ದು ಜಾಗ್ರತಸ್ತರದಲ್ಲಿ ನೆಗೆದು ನುಗ್ಗಿ ಬರಲಿಕ್ಕೆ ಒತ್ತಾಯದಿಂದ ದಾರಿಮಾಡಿಕೊಳ್ಳಲಿಕ್ಕೆ ಎಡಬಿಡದೆ ಹೆಣಗುತ್ತಿರುತ್ತವೆ. ಅಹಂತೆಯೂ ಅದೆಷ್ಟೇ ನಿರೀಕ್ಷಣೆ-ನಿಯಂತ್ರಣೆಯಿಟ್ಟರೂ, ಅದರ ಕಣ್ಣು ತಪ್ಪಿಸಿ (ಅರ್ಥಾತ್ ಇದು

ಲಾಕ್ಷಣಿಕವಾದ ಮಾತು) ಅದರ ಮುಂಜಾಗ್ರತೆಯನ್ನು ಮೀರಿ, ಅಜಾಗ್ರತ ಮನೋವ್ಯಾಪಾರಗಳು ವಿವಿಧವಾದ ರೀತಿಗಳಿಂದ ತಿಳುವಳಿಕೆಯ ಸೀಮೆಯಲ್ಲಿ ಸುಳಿದಾಡುವವರಲ್ಲಿ ಯಶಸ್ವಿಯಾಗುತ್ತವೆ. ವಿಶೇಷವಾಗಿ, ಹೀಗೆ ಅಜಾಗ್ರತ ಮನೋಭಾಗದ ವಿಚಾರ–ವಿಕಾರಗಳು ಜಾಗ್ರತಸ್ಥರದಲ್ಲಿ ಸುಸುಳಿ ಬರುವ ರೀತಿಯು ಕನಸುಗಳಲ್ಲಿ (ಅವು ಹಗಲಿರಲಿ ಇರುಳಿರಲಿ) ಮಾತಿನ ತಪ್ಪುಗಳಲ್ಲಿ, ಚಿಕ್ಕವಾದರೂ ಅಕಾರಣವೆಂತೆನಿಸುವ ಕಿರುಕೊಳು ಮರವುಗಳಲ್ಲಿ ಹಾಗೆಯೇ ಬರಹದ ಮತ್ತು ನಡತೆಯ ಲೋಪದೋಷಗಳಲ್ಲಿ ಕಂಡುಹಿಡಿಯಲಾಗುತ್ತದೆ. ದಿನನಿತ್ಯದ ಜೀವನದಲ್ಲಿ ಸತತವಾಗಿ ಒದಗುವ ಇಂತಹ ವಿಪರೀತ ಅನುಭವಗಳಲ್ಲಿ ಅಜಾಗ್ರತ ಮನಸ್ಥರದ ಪ್ರಭಾವಿಯಾದ ಚಟುವಟಿಕೆ ಕಂಡುಬರುತ್ತದೆ.

ಅಜಾಗೃತ ಮನಸ್ಥರದ ಈ ಪ್ರಭಾವಿಯಾದ ಕ್ರಿಯಾಶೀಲತೆಯ ಶಕ್ತಿಮಯ ಸ್ವರೂಪವು ಮನುಷ್ಯನ ಮೂಲಪ್ರವೃತ್ತಿಗಳಲ್ಲಿ ಬೇರುಗೊಂಡಿದೆ. ಈ ಸಂದರ್ಭ ದಲ್ಲಿ ಡಾ. ಫ್ರ್ಯುಡನ ವಿಚಾರವು ಹೇತುವಾದಿ ಮನೋವಿಜ್ಞಾನಿಗಳ ವಿಚಾರಗಳಿಗೆ ಹೋಲುತ್ತದೆ. ಪ್ರವೃತ್ತಿಜನ್ಯ ಅಜಾಗೃತ ಮನಃಸ್ಫೂರ್ತಿಯ ಭೂಮಿಕೆಯಲ್ಲಿ, ಈತನು ವರ್ತನವಾದಿಗಳಿಗೆ ವಿರುದ್ಧನಾಗಿರುವನು. ಪ್ರಚೋದನೆಗಳಲ್ಲಿ ಫ್ರ್ಯುಡನು ಶಾರೀರಿಕ, ಮಾನಸಿಕ ಮತ್ತು ಪ್ರವೃತ್ತಿಮೂಲಕವೆಂಬ ಮೂರು ಭೇದಗಳನ್ನು ಕಲ್ಪಿಸುವನು. ಪ್ರವೃತ್ತಿ ಮೂಲಕವಾದ ಪ್ರಚೋದನೆಯು ಬಾಹ್ಯಪ್ರಪಂಚದಿಂದ ಬರುವದಿಲ್ಲ, ವ್ಯಕ್ತಿಯ ಒಳಗಿನಿಂದಲೇ ಉಂಟಾಗುತ್ತದೆ. ಬಾಹ್ಯಪ್ರಚೋದನೆಯು ಒಂದೇ ಒಂದು ಬಿಡಿಯಾದ ಆಘಾತದಂತೆ ಬರುತ್ತದೆ. ಅದನ್ನು ಸಮರ್ಪಕವಾದ ಒಂದು ಕ್ರಿಯೆಯಿಂದ ವ್ಯಕ್ತಮಾಡಲು ಬರುತ್ತದೆ. ಆದರೆ ಮೂಲಪ್ರವೃತ್ತಿಯು ಒಂದೇ ಬಿಡಿಯಾದ ಕ್ಷಣಿಕ ಆಘಾತದಂತೆ ಎಂದಿಗೂ ಕೆಲಸ ಮಾಡುವದಿಲ್ಲ; ಅದು ಸ್ಥಿರವಾದ ನಿರಂತರವಾದ ಶಕ್ತಿಯಂತೆ ನಡೆಯುತ್ತದೆ. ಅದರ ಕ್ರಿಯೆಯು ವ್ಯಕ್ತಿಯ ಒಳಗಿನಿಂದಲೇ ಆಗುತ್ತಿದ್ದುದರಿಂದ, ಅದರ ಆಘಾತದಿಂದ ದೂರ ಓಡಿ ತನ್ನನ್ನು ಉಳಿಸಿಕೊಳ್ಳಲು ಬರುವಂತಿಲ್ಲ.

ಹೀಗೆ ಮೂಲಪ್ರವೃತ್ತಿಗಳೊಳಗಿಂದ ಪ್ರಚಂಡವಾಗಿ ಪ್ರಬಲವಾದ ಒತ್ತಾಯದಿಂದ ಮೇಲಕ್ಕೆ ಪುಟಿದೇಳುವ ಒತ್ತಡವು ಅಜಾಗ್ರತ ಸ್ಥರದಲ್ಲಿ ಕೆಲಸಮಾಡುತ್ತಿದ್ದು, ಅಷ್ಟೇ ಒತ್ತರದಿಂದ ಅದಕ್ಕೆ ಪ್ರತಿಯಾಗಿ ಕೆಳಗೊತ್ತುವ ಪ್ರತೀಕಾರವು ವರಿಷ್ಠ ಅಹಂತೆಯಿಂದ ಬರುತ್ತಿರುತ್ತದೆ. ನಮ್ಮ ಸ್ವಭಾವದ ಅತ್ಯಂತ ನೈತಿಕ ಭಾಗ ವೆಂದರೆ ಈ ಪರಿಷ್ಠ–ಅಹಂತೆಯು. ಈ ತರದ ಒತ್ತಡ ಒತ್ತಾಯಗಳ ತಿಕ್ಕಾಟ ದಿಂದ ಮನಸ್ಸಿನಲ್ಲಿ ಒಂದು ತೀವ್ರವಾದ ಬಿಗುವೂ ಸವಕಳಿಯ ಖೇದವೂ

ಸ್ವಾಭಾವಿಕವಾಗಿ ಉಂಟಾಗುತ್ತವೆ. ಸಮಾಜವು ಹಾಕಿಕೊಟ್ಟ ಕಟ್ಟಳೆಗಳ ಚೌಕಟ್ಟಿನೊಳಗೆಯೇ ಇದ್ದು ಕೆಲವೊಂದು ಮೂಲಪ್ರವೃತ್ತಿಗಳ ಬೇಕು-ಬೇಡಿಕೆಗಳನ್ನು ಸಾಕಷ್ಟು ಪೂರೈಸಿ ಸಂತೈಸಿಕೊಳ್ಳಲು ಅಶಕ್ಯವಾದಾಗೆಲ್ಲ ಇಂತಹ ಮನೋವೇದನೆಗೆ ವ್ಯಕ್ತಿಯು ತುತ್ತಾಗಬೇಕಾಗುತ್ತದೆ.

ಈ ಸಂದರ್ಭದಲ್ಲಿಯೇ ಮನೋವಿಶ್ಲೇಷಣೆಯು ತತ್ವ ತಂತ್ರಗಳು ತಲೆದೋರಿ ಬಾಳಿಗೆ ಒಳಿತು ತಂದಿರುವವು. ಮನೋವಿಶ್ಲೇಷಣವು ಮಾನವ ಕೋಟಿಗೆ ಸಲ್ಲಿಸುವ ಸೇವೆಯೆಂದರೆ, ವ್ಯಕ್ತಿಯ ಮನಸ್ಸಿನ ತಳವನ್ನು ತಲ್ಪಿ, ಅಜಾಗ್ರತ ಸ್ಥರಗಳಲ್ಲಿ ಸೇರಿ ಒಳಗೆ ನಡೆಯುತ್ತಲಿದ್ದ ಒತ್ತಡ-ಒತ್ತಾಯಗಳ ತಿಕ್ಕಾಟವನ್ನು ತಕ್ಕಮಟ್ಟಿಗೆ ಕಡಿಮೆಮಾಡಿ, ಮನೋವೇದನೆಯ ಬಿಗುವನ್ನು ಇಳಿಸಲಿಕ್ಕೆ ಒಂದು ಉಪಚಾರ ತಂತ್ರವನ್ನು ಅದು (ಮನೋವಿಶ್ಲೇಷಣ ಸಾಂಪ್ರದಾಯವು) ಕಂಡುಹಿಡಿದಿದೆ. ಮನೋವಿಜ್ಞಾನದ ಹೊಸ ಹರೆಯ ಈ ಸಾಂಪ್ರದಾಯವನ್ನು ಮಿಕ್ಕವುಗಳಿಂದ ವಿಂಗಡಿಸುವ ವೈಶಿಷ್ಟ್ಯವು ಇದೇ ಸರಿ. ಈ ಸಾಂಪ್ರದಾಯವು ಮನೋವೇದನೆಯ ಮಾನಸಿಕ ಯಾತನೆಯ ಕಾರಣ ಪರಿಣಾಮಗಳನ್ನು ಗಮನಿಸುವ ಉಪಯುಕ್ತ ಕೆಲಸವನ್ನು ಮಾಡುತ್ತದೆ.

ಮನಸ್ಸಿನ ಅಜಾಗ್ರತ ಕ್ಷೇತ್ರವನ್ನು ಫ್ರ್ಯಾಡನೇ ಮೊತ್ತಮೊದಲು ಕಂಡುಹಿಡಿದ ನೆಂತಲ್ಲ. ಆತನಿಗಿಂತ ಒಂದು ಶತಮಾನದ ಮೊದಲೇ ಅದರ ಅಸ್ತಿತ್ವವನ್ನು ಸೂಚಿಸಲಾಗಿತ್ತು. ಆದರೆ ಅಜಾಗ್ರತ ಮನಸ್ಥರವನ್ನು ವ್ಯವಸ್ಥಿತವಾಗಿ ವೈಜ್ಞಾನಿಕ ಪದ್ಧತಿಯಿಂದ ಪರಿಶೋಧಿಸಿ ಅದರ ಉಪಪತ್ತಿಯನ್ನು ಹಚ್ಚಿದವನು ಇವನೇ ಮೊದಲು.

ಅಜಾಗ್ರತ ಮನಸ್ಥರದ ಮೂಲದ್ರವ್ಯವನ್ನು ಮನುಷ್ಯನ ಮೂಲಪ್ರವೃತ್ತಿಗಳು ಒದಗಿಸಿಕೊಡುತ್ತವೆ. ಅದರಲ್ಲಿ ದಮನಪಟ್ಟ (ಹತ್ತಿಕ್ಕಿದ) ವಿಚಾರ-ವಿಕಾರಗಳಷ್ಟೇ ಇರುವದಿಲ್ಲ. ಆನುವಂಶಿಕವಾಗಿ ಬಂದ ಪ್ರೇರಣೆಗಳೂ, ವಿಶಿಷ್ಟ ಒಲವುಗಳೂ ಎಳೆಯಿಲ್ಲದ ಕಾಲಾವಧಿಯಿಂದ ಇಳಿದು ಬಂದು ಅದರ ತಳದಲ್ಲಿ ಉಳಿದಿರುತ್ತವೆ. ಫ್ರ್ಯಾಡನು ಪ್ರವೃತ್ತಿಗಳು ಇಂತಿಷ್ಟು ಇವೆಯೆಂತ ಎಣಿಸಿ ಹೇಳುವದಿಲ್ಲ. ಆತನು ಪ್ರಾಥಮಿಕ ಪ್ರವೃತ್ತಿಗಳನ್ನು ಸಾಮಾನ್ಯವಾಗಿ ಎರಡು ಗುಂಪುಗಳಾಗಿ ವಿಂಗಡಿಸ ಬಹುದೆಂತ ಸೂಚಿಸುವನು. ಆದರೆ ಈ ವಿಂಗಡಿಸುವಿಕೆಯು ಕೂಡ ಯಥಾರ್ಥ ವಲ್ಲ. ಕೇವಲ ಅನುಕೂಲತೆಯ ವ್ಯವಸ್ಥೆಯೆಂತ ಆತನು ಎಣಿಸಿದ್ದಾನೆ. ಈ ಎರಡು ಗುಂಪುಗಳೆಂದರೆ ಆತ್ಮಸಂರಕ್ಷಕ ಪ್ರವೃತ್ತಿಗಳ ಅಂದರೆ ಅಹಂತಾ

ಪ್ರವೃತ್ತಿಗಳ ಗುಂಪು ಮತ್ತು ಕಾಮ ಪ್ರವೃತ್ತಿಗಳ ಗುಂಪು. ಮನೋವಿಶ್ಲೇಷಣ ಶಾಸ್ತ್ರವು ಹೆಚ್ಚಾಗಿ ಎರಡನೇ ಗುಂಪಿನ ಕುರಿತೇ ಎಲ್ಲ ಲಕ್ಷ ಪೂರೈಸಿರುತ್ತದೆ. ಏಕಂದರೆ, ಮನೋ-ಯಾತನೆ, ಬಳಲಿಕೆ, ನರಗಳ ವಿಕೃತಿ ಇವೆಲ್ಲವುಗಳು ವಿಶೇಷ ವಾಗಿ ಕಾಮಪ್ರವೃತ್ತಿಗಳ ದಮನದ ಪರಿಣಾಮವಾಗಿರುತ್ತವೆಂಬುದು 'ಆಶ್ಚರ್ಯ ಕಾರಿಯಾದ ಸಾತತ್ಯದಿಂದ' ಕಂಡುಬಂದಿದೆ.

## ಶೈಶವ ಲೈಂಗಿಕತೆ :

ವಿರೋಧಕರ ತಿರಸ್ಕಾರ ತಾತ್ಸಾರವೆಲ್ಲ ಇಲ್ಲಿಯೇ ಹುರಿಗೊಂಡು ನಿಂತಿದೆ. ಡಾ. ಫ್ರ್ಯಾಡನು ಮನುಷ್ಯನ ಕಾಮಜೀವನದ-ಯೌವನಭಾವನೆಯ ಸ್ವರೂಪದ ಕುರಿತು ಬೆಳಕಿಗೆ ತಂದ ಶೋಧ-ಬೋಧಗಳ ವಿಷಯವಾಗಿಯೇ ಮನೋವಿಶ್ಲೇಷಣ-ಸಾಂಪ್ರದಾಯವು ಅಷ್ಟೊಂದು ತೀವ್ರವಾದ ವಿರೋಧಕ್ಕೆ ಆಸ್ಪದವಾಗಿದೆ. ತಮ್ಮನ್ನು ಸಾರ್ವಜನಿಕವಾಗಿ ಬತ್ತಲೆ ಮಾಡಿ ನಿಲ್ಲಿಸಲು ಫ್ರ್ಯಾಡನು ಹವಣಿಸಿ ರುವನೆಂಬ ಗ್ರಹಿಕೆಯಿಂದ, ಬಹುತರ ಎಲ್ಲ ವಿರೋಧ-ವಿಮರ್ಶಕರ ದನಿಯಲ್ಲಿ ಒಂದು ರೊಚ್ಚು-ಒಂದು ರೇಗು, ಕೂಡಿರುತ್ತದೆ. ಡಾ. ಫ್ರ್ಯಾಡನು ಬೆಳೆಸಿಕೊಂಡ ಲೈಂಗಿಕತೆಯ ಸಿದ್ಧಾಂತದ ಸ್ವರೂಪವೇ ಈ ಸಾರ್ವತ್ರಿಕವಾದ ರೇಗು-ರೊಚ್ಚಿಗೆ ಕಾರ ಣವಾಗಿದೆ. ಅದರಲ್ಲಿಯೂ ಶೈಶವಲೈಂಗಿಕತೆಯ ಕುರಿತು-ಶಿಶುಗಳ ಕಾಮಪ್ರವೃತ್ತಿಯ ಕುರಿತು-ಆತನು ಪ್ರಕಟಿಸಿದ ಅಭಿಪ್ರಾಯಗಳು ಮತ್ತಿಷ್ಟು ಕೆರಳಿಕೆಗೆ ಕಾರಣವಾಗಿವೆ.

ಯೌವನದ ಪ್ರಾರಂಭದಲ್ಲಿಯೇ-ಋತುಪ್ರಾಪ್ತಿಯ ಸಂದರ್ಭದಲ್ಲಿಯೇ-ಕಾಮ ಪ್ರವೃತ್ತಿಯು, ಬೆಳೆದ ಶಿಶುವಿನಲ್ಲಿ ಬಂದು ಒಳಸೇರುವದೆಂಬುದು ಸ್ವಲ್ಪವೂ ದಿಟ ವಲ್ಲವೆಂತ ಫ್ರ್ಯಾಡನು ಸಾಧಿಸುತ್ತಾನೆ. ನಲರಾಜನಲ್ಲಿ ಕಲಿಯು ಬಂದು ಸೇರಿದ ಕತೆಯಂತೆಯೇ ಇದು ಅಸಂಗತ ಅಸತ್ಯವು. ಬಾಳಿನ ಸುರುವಿನಿಂದಲೂ, ಶಿಶು ವಿನಲ್ಲಿ ಲೈಂಗಿಕ ಪ್ರವೃತ್ತಿಗಳೂ ಚಟುವಟಿಕೆಗಳೂ ಇರುತ್ತವೆ. ಅವುಗಳನ್ನು ಅದು ಹುಟ್ಟಿ ಬರುವಾಗಲೇ ಸಂಗಡ ತರುತ್ತದೆ. ಇದಕ್ಕೆ 'ಪುಟ್ಟಿಸಿದ ಸ್ವಾಮಿ ತಾನೇ ಹೊಣೆಗಾರ !' ಈ ಶೈಶವ ಲೈಂಗಿಕತೆಯಿಂದಲೇ, ಪ್ರೌಢಮನುಷ್ಯನ ಕಾಮ ವಿಕಾಸವು ಮಹತ್ವದ ಬೆಳವಣಿಗೆಯ ಕ್ರಮದಲ್ಲಿ ಹಲವು ಬಗೆಯ ಅವಸ್ಥೆಗಳೊ ಗಿಂದ ಬಲಿತು ಬರುತ್ತದೆ.

ನಿಜವಾಗಿಯೂ ಈ ತತ್ವದಲ್ಲಿ ರೊಚ್ಚಿಗೇಳುವ ಮಾತೇನೂ ಇಲ್ಲ. ರೊಚ್ಚಿಗೆ ಕಾರಣವೇನೆಂದರೆ, ವಿರೋಧಕರು ಶಿಶುವಿನೊಳಗಿನ ಲೈಂಗಿಕತೆಯ ಕಲ್ಪನೆಯನ್ನೇ

ಕಣ್ಣೆದುರು ಇಟ್ಟುಕೊಂಡಿರುತ್ತಾರೆ. ಆದರೆ ಇದು ತೀರ ತಪ್ಪಾಗಿದೆ. ಶೈಶವ ಲೈಂಗಿಕತೆಯು ಮೇಲಿನ ವಿಧಾನದಿಂದ ಸ್ಪಷ್ಟವಾಗುವದೇನೆಂದರೆ, ಡಾ. ಫ್ರ್ಯಾಡನ ಪರಿಭಾಷೆಯಲ್ಲಿಯ ಲೈಂಗಿಕತೆಯು ಇಲ್ಲವೆ ಕಾಮವಾಸನೆಯು ಕಲ್ಪನೆಯು ಸಾಮಾನ್ಯ ಸಜ್ಜನನು ಗ್ರಹಿಸಿಕೊಂಡ ಅರ್ಥದಿಂದ ತೀರ ಭಿನ್ನವಾಗಿದೆ. ಇಷ್ಟೇ ಅಲ್ಲ, ಹಲವು ವಿಜ್ಞಾನಿಗಳು ತಿಳಿದುಕೊಂಡ ಅಭಿಪ್ರಾಯದಿಂದಲೂ ಅಷ್ಟೇ ಬೇರೆಯಾಗಿದೆ. ಫ್ರ್ಯಾಡನು ಬಲ್ಲವರ ಆತ್ಮಸಂಭಾವನೆಗೆ ಇಷ್ಟೊಂದು ಆಘಾತಕೊಡುವ ಮೊದಲು, ಎಳೆ ಮಗುವು ಲೈಂಗಿಕಪ್ರವೃತ್ತಿಯಿಂದ ತೀರ ರಹಿತವಾಗಿರುತ್ತದೆಂತ ಸಾಮಾನ್ಯವಾಗಿ ಒಪ್ಪಲಾಗಿತ್ತು. ಋತುಪ್ರಾಪ್ತಿಯಿಂದಲೆ ಕಾಮವಾಸನೆಯು ಆರಂಭಿಸುತ್ತದೆಂದು ನಂಬಲಾಗುತ್ತಿತ್ತು. ಫ್ರ್ಯಾಡನು ಇದನ್ನು ಪೂರ್ಣವಾಗಿ ಅಲ್ಲಗಳೆದುದರಿಂದ, 'ಮುಗ್ಧ', 'ನಿರಾಗಸ'ವೆಂತ ಬಣ್ಣಿಸಲಾಗುವ ಶೈಶವದಲ್ಲಿ ಪವಿತ್ರ ಚಾರಿತ್ರ್ಯವಿರುತ್ತದೆಂಬ ಪ್ರಾಚೀನ ತತ್ವವನ್ನು ದೂಷಿಸಿದನೆಂಬ ಅಕ್ಷಮ್ಯ ದೋಷಕ್ಕೆ-ಸನಾತನಾಭಿಮಾನಿಗಳ ಕೈಯಲ್ಲಿ-ಗುರಿಯಾಗಿದ್ದಾನೆ. ಆದರೆ ಈ ದೋಷಾರೋಪಣೆಯು ತೀರ ಅನ್ಯಾಯದ್ದಾಗಿದಿಯೆಂಬುದು ಬೇರೆ ಹೇಳಬೇಕಾಗಿಲ್ಲ.

ಫ್ರ್ಯಾಡನ ಹೇಳಿಕೆಯಂತೆ, ಸರ್ವಸಾಧಾರಣ ಪ್ರೌಢವ್ಯಕ್ತಿಯ ಕಾಮಪ್ರವೃತ್ತಿಯು ಅತ್ಯಂತ ಜಟಿಲ–ಸಂಕೀರ್ಣವಾಗಿರುತ್ತದೆ. ಹಲವು ಘಟಕಗಳಿಂದ ಕೂಡಿ ಕ್ಲಿಷ್ಟವಾಗಿ ಅದು ಕಟ್ಟಲ್ಪಟ್ಟಿರುತ್ತದೆ. ಈ ಘಟಕಗಳು ಸರಿಯಾಗಿ ಕಲೆತು ಕೂಡಿ ಅರಗಿ ಸಂವಾದಿಯಾಗಿ ಸಂಘಟನೆಯಾಗದಿದ್ದರೆ,–ಇಂಥ ವಿಸಂವಾದ ವಿಸಂಗತಿಗಳು ಹಲವು ಬಾರಿ ಆಗುತ್ತವೆ,–ಅವುಗಳ ವಿಷಮಸ್ಥಿತಿಯ ಪರಿಣಾಮವಾಗಿ ಮಾನಸಿಕ ಯಾತನೆಯು ಬಿಗುವು–ಬಳಲಿಕೆಗಳು ಹುರಿಗೊಳ್ಳುತ್ತವೆ. ಇವುಗಳು ವಿಕೋಪಕ್ಕೆ ಮುಟ್ಟಿದ ಉದಾಹರಣೆಗಳಲ್ಲಿ, ಮನೋವಿಕೃತಿಗಳ ಬೇನೆಗಳು ಅವಶ್ಯವಾಗಿ ಸಂಭವಿಸುತ್ತವೆ.

ಶಿಶುವು ಲೈಂಗಿಕಪ್ರವೃತ್ತಿಗಳೊಡನೆಯೆ ಹುಟ್ಟಿ ಬರುತ್ತದೆ. ಆದರೆ ಶೈಶವದ ಈ ಲೈಂಗಿಕತೆಯು,–ಪ್ರೌಢವ್ಯಕ್ತಿಗಳಲ್ಲಿಯಂತೆ–ಜನನೇಂದ್ರಿಯ ಮತ್ತು ಮೈಥುನ ಕ್ರಿಯೆಯ ಸುತ್ತಲೂ ಕೇಂದ್ರೀಕೃತವಾಗಿರುವದಿಲ್ಲ. ಅವು ಮೊತ್ತದಲ್ಲಿ ಮೌಖಿಕ ಕ್ರಿಯೆಗಳಿಂದ ವ್ಯಕ್ತವಾಗುತ್ತವೆ–ಬಾಯಿಯ ಚಟುವಟಿಕೆಗಳಲ್ಲಿ ತೋರಿಬರುತ್ತವೆ, ತೃಪ್ತಿಗೊಳ್ಳುತ್ತವೆ. ಸೀಪುವಿಕೆ, ನುಂಗುವಿಕೆ, ಕಚ್ಚುವಿಕೆ ಇವೇ ಶೈಶವದಲ್ಲಿಯ ಮುಖ್ಯ ಮೌಖಿಕ ಕ್ರಿಯೆಗಳಿದ್ದು ಅವುಗಳೊಡನೆ ಲೈಂಗಿಕತೆಯು ಹೊಂದಿಕೊಂಡಿರುತ್ತದೆ. ಮೊಲೆಯುಣಿಸದಿರುವಾಗಲೂ, ರಬ್ಬರಿನ ತೊಟ್ಟು ಬಾಯೊಳಗಿಡುವದರಿಂದ ಚಿಕ್ಕಮಕ್ಕಳು ತಪ್ಪದೆ ತೃಪ್ತರಾಗುವುದರ ಕಾರಣವಾದರೂ

ಏನು ? ಹಸಿವೆಯಿಂಗಿಸುವ ಹಾಲು ಇಲ್ಲವಾದರೂ, ತೊಟ್ಟನ್ನು ಸೀಪುತ್ತಿರುವ ಕ್ರಿಯೆಯಲ್ಲಿಯೇ ಮಗುವಿಗೆ ಸುಖಕರವೆನಿಸುತ್ತದೆ. ಆಹಾರಕ್ಕೆ–ಕ್ಷುಧಾಶಾಂತಿಗೆ–ಸಂಬಂಧವಿರದೇ ಕೇವಲ ಚೋಷಣದ ಮೌಖಿಕ ಕ್ರಿಯೆಯೇ ಮಗುವಿನ ಮೂಲಭೂತ ಲೈಂಗಿಕತೆಯನ್ನು ತೃಪ್ತಿಪಡಿಸುತ್ತದೆ. ಎಷ್ಟೋ ಮಕ್ಕಳು ಹಲವು ವರ್ಷಗಳ ತನಕ ತಮ್ಮ ಹೆಬ್ಬೆರಳು ಸೀಪುವುದುಂಟು. ಈ ಚಟವನ್ನು ತಪ್ಪಿಸುವದು ಬಿಗಿಯಾಗುವದೂ ಉಂಟು. ಇದೇಕೆ ? ಮೌಖಿಕ ಲೈಂಗಿಕತೆಯೇ ಇದಕ್ಕೆ ಕಾರಣ. ಇದೇ ಮೇರೆಗೆ, ಎಲ್ಲ ಮಕ್ಕಳೂ ಕಚ್ಚುವ ಕ್ರಿಯೆಯು ಒಂದು ಚಟದ ಅವಸ್ಥೆಯೊಳಗಿಂಡ–ತಮ್ಮ ಆಟಿಗೆಗಳನ್ನೂ ಸಿಕ್ಕ ಸಿಕ್ಕವರನ್ನೂ ಕಚ್ಚುವುದರಲ್ಲಿ ಆನಂದಪಡುವ ಅವಸ್ಥೆಯೊಳಗಿಂದ ಸಾಗಿಬರುವದುಂಟು. ಇದಲ್ಲದೆ, ಅಖಿಲ ವಿಶ್ವವನ್ನೇ ಉದರದಲ್ಲಿ ಇಟ್ಟುಕೊಳ್ಳುವ 'ಔದಾರ್ಯ'ದಿಂದ ಕಂಡಿದ್ದಕ್ಕೆಲ್ಲ ಕೈಚಾಚಿ ಎಲ್ಲವನ್ನೂ ತಮ್ಮ ಸರ್ವಭಕ್ಷಕ ಬಾಯಿಯಲ್ಲಿ ಹಾಕಿ ನುಂಗುವ ಪ್ರತಿಯೊಂದು ಕಂದನೂ ತನ್ನ ತಾಯಿಯ ಪಾಲಿಗೆ ವಿರಾಟ್‌ದರ್ಶನವನ್ನು ದಯಪಾಲಿಸುವ ಯಶೋದಾನಂದನನೇ ಆಗುತ್ತಾನೆಂಬುದು ಯಾರಿಗೆ ಗೊತ್ತಿಲ್ಲ !

## ಚಟಗಳನ್ನು ಹೇಗೆ ಬಿಡಿಸಬೇಕು ?

ಇಂತಹ ಚಟಗಳನ್ನು ತಪ್ಪಿಸುವದು ಬಹಳೇ ಬಿಗಿಯಾಗುತ್ತದೆಂಬುದನ್ನು ಮೇಲೆ ಹೇಳಿದೆಯಷ್ಟೇ. ಈ ಚಟಗಳನ್ನು ಬಿಡಿಸುವ ಪ್ರಶ್ನೆ ತುಂಬಾ ಜೀವಾಳದ್ದಾಗಿದೆ. ಯಾವುದೇ ಒಂದು ಕಾಮನೆಯ ಅವರೋಧವು ಪ್ರವೃತ್ತಿ ಮೂಲಕವಾದ ಪ್ರೇರಣೆಯ ಪ್ರತಿಬಂಧನವು, ಆ ಕಾಮನೆ ಇಲ್ಲವೆ ಪ್ರೇರಣೆಗೆ ತೃಪ್ತಿಯ ಬೇರೊಂದು ದಾರಿಯನ್ನು ಕಲ್ಪಿಸಿಕೊಡದಿದ್ದರೆ, ನಿರ್ವೇದ–ಖೇದಗಳ ಹತಾಶವೃತ್ತಿಯನ್ನುಂಟು ಮಾಡುತ್ತದೆ. ಇಂಥ ನಿರ್ವೇದ ಹತಾಶೆಗಳ ಅವಸ್ಥೆಯು ದ್ವೇಷತ್ವೇಷಗಳ ಭಾವನೆಯನ್ನು ಉದ್ರೇಕಿಸುತ್ತದೆ. ಆದುದರಿಂದ ಒಂದು ಚಟವನ್ನು ಮುರಿಯುವ ಉಪಾಯವೆಂದರೆ ಅದಕ್ಕೆ ಪರ್ಯಾಯವಾದ ಇನ್ನೊಂದು ನಿರುಪದ್ರವಿಯಾದ ಚಟವನ್ನು ಹಚ್ಚುವುದೇ ಸರಿ. ಚಿಕ್ಕ ಮಕ್ಕಳ ನಡತೆಯನ್ನು ನಿರೀಕ್ಷಿಸಿದವರಿಗೆ ಒಂದು ಸಂಗತಿ ಹೊಳೆಯದಿರಲಾರದು. ಅದೇನೆಂದರೆ, ಅವರ ಭಾವನೆಗಳ ಅನುಭವಗಳು ತೀರ ಪ್ರಕ್ಷುಬ್ಧವಾಗಿರುತ್ತವೆ. ತೀರ ತಾಳ್ಮೆಗೆಟ್ಟ ಉದ್ರೇಕದವಾಗಿರುತ್ತವೆ. ಕೆಣಕಿದ ಕೂಸಿನ ಕೆರಳಿದ ಕೋಪವನ್ನು ಹೋಲುವ ಸಿಟ್ಟು ಸಾಮಾನ್ಯವಾಗಿ ಪ್ರೌಢರ ಪ್ರಪಂಚಕ್ಕೆ ಹೊರಗಿನ ಮಾತು. ಕೆರಳಿದ ಕೂಸು ಕೂಗುವದು ಕಿರುಚುವುದು; ಗುದ್ದಾಡಿ ಒದ್ದಾಡಿ ಕ್ಷೋಭವೆಬ್ಬಿಸುವುದು; ಸಿಕ್ಕದ್ದು

ಹರಿದು ಕಂಡವರಿಗೆ ಒರಗಿ ಮನೆತುಂಬ ಹಾವಳಿ ಹಬ್ಬಿಸುವದು ! ಆ ಪ್ರಚಂಡ ತಾಂಡವವನ್ನು ತಡೆಯುವ ಉಪಾಯ ಒಂದೇ-ಅದರ ಲಕ್ಷವನ್ನು ಆಕಸ್ಮಿಕವಾಗಿ ಬೇರೊಂದು ನಿಟ್ಟಿನಲ್ಲಿ ಆಕರ್ಷಿಸುವುದು. ಇಲ್ಲವಾದರೆ ಉದ್ರೇಕಗೊಂಡ ಉದ್ದಾಮ ಭಾವನೆಗಳೆಲ್ಲ ಉಕ್ಕಿ ಹರಿದು ಹಗುರವಾಗಿ, ದಣಿದು, ತಣಿದು ಕೂಸು ನಿದ್ದೆ ಹೋಗುವ ತನಕ ಅವರ ಅಬ್ಬರ ಸಾಗುವುದು !

ಬಾರಿಬಾರಿಗೆ ಹೀಗೆ ಕ್ಷೋಭವನ್ನುಂಟುಮಾಡುವ ನಿರ್ವೇದ-ಹತಾಶ ವೃತ್ತಿಯು (Frustration) ಅನುಭವಕ್ಕೆ ಬಂದರೆ, ಅದರಿಂದ ಶಿಶುವಿನ ಮನಸ್ಸು ವಿಷಮಯ ವಾಗಿ ಹೋಗುತ್ತದೆ. ಇದರ ಮೂಲಕ ಶಿಶುವಿನ ಕೋಪ ಭಾವನೆಯು–ವಸ್ತುತಃ ಒಳಿತಾಗಲಿ ಕೆಡುಕಾಗಲಿ ಇರದಿದ್ದರೂ, ನಿರುಪಯೋಗಿಯಾದ ದಿಶೆಯಲ್ಲಿ, ಆತಏವ ಶಕ್ತಿಹ್ರಾಸದ ಮತ್ತು ಅಪಾಯಕರವಾದ ರೀತಿಗಳಲ್ಲಿ ಹೆಚ್ಚು ಹೆಚ್ಚಾಗಿ ವಿನಿಯೋಗಿಸಲ್ಪಡುತ್ತದೆ. ಹೀಗೆ ಶಿಶುವಿನ ಮನಸ್ಸಿನಲ್ಲಿ ಕೆರಳುವ ಭಾವನೆಗಳ ಕಾರ್ಯಶಕ್ತಿಯು ಹಾನಿಗೀಡಾಗಿ ಹಾಳಾಗಿ ಹೋಗಕೂಡದೆಂತಲೇ, ಶೈಶವದಲ್ಲಿ ಯೋಗ್ಯ ಮಾನಸಿಕ ಶಿಕ್ಷಣದ ಅವಶ್ಯಕತೆಯು ಅಷ್ಟೊಂದು ಇರುತ್ತದೆ.

ಹತಾಶವೃತ್ತಿಯು ಇನ್ನೊಂದು ಪರಿಣಾಮವನ್ನೂ ಕುರಿತು ನಮ್ಮನ್ನು ಒಯ್ಯ ಬಹುದು. ಈ ಪರಿಣಾಮಕ್ಕೆ ಸ್ಥಾಯೀಭವನ (Fixation) ವೆಂಬ ಹೆಸರು. ಸ್ಥಾಯೀಭವನವೆಂದರೆ, ಪರಿಪೂರ್ಣ ಬೆಳವಣಿಗೆಯಾಗುವ ಪೂರ್ವದಲ್ಲಿಯೇ ಸಾಧಾರಣವಾಗಿ ಸಾಗಿದ ಬೆಳವಣಿಗೆಯು ನಡುವೆಯೇ ಕೆಲವೊಂದು ಅವಸ್ಥೆಯಲ್ಲಿ ತಡೆದು ನಿಂತುಬಿಡುವ ವಿಕೃತಿಯು. ಈ ತರದ ಹದಗೆಟ್ಟ ಬೆಳವಣಿಗೆಯ ತಡೆ-ನೆಲೆಯು ಯಾವ ಅವಸ್ಥೆಯಲ್ಲಿಯೂ ಉಂಟಾಗಬಹುದು. ಆದರೆ ವಿಶೇಷವಾಗಿ ಮಕ್ಕಳ ಮನಸ್ಸಿನ ಬೆಳವಣಿಗೆಯು ಮುಂದಿನ ಕಾಲಖಂಡದಲ್ಲಿ-ತುಸು ವಯಸ್ಸಾದ ಮಕ್ಕಳಲ್ಲಿ–ಈ ಸ್ಥಾಯೀಭವನದ ಒಂದು ಅಚ್ಚು ಕಂಡುಬರುತ್ತದೆ. ಅದಕ್ಕೆ ಆತ್ಮ ಸಮ್ಮೋಹನೆ (Narcissism) ಎಂಬ ಹೆಸರಿಡಬಹುದು. ಇದರ ಉಲ್ಲೇಖವು ಮುಂದೆ ಬರಲಿದೆ.

## ಆತ್ಮಕಾಮಾವಸ್ಥೆ

ಲೈಂಗಿಕ ವಿಕಾಸದ ಮೊದಲನೆಯ ಮಟ್ಟವೆಂದರೆ, ಆತ್ಮಕಾಮನೆ ಇಲ್ಲವೇ ಸ್ವ-ರತಿ (Auto-erotism). ಈ ಅವಸ್ಥೆಯಲ್ಲಿ ಶಿಶುವು ತನ್ನ ಅಂಗಾಂಗಗಳ ನಿರೀಕ್ಷಣ-ಪರೀಕ್ಷಣಗಳಲ್ಲಿಯೇ-ತನ್ನ ಶರೀರದಲ್ಲಿಯೇ ಲೈಂಗಿಕ ಪ್ರವೃತ್ತಿಯ ತೃಪ್ತಿಯನ್ನು

ಪಡಕೊಳ್ಳುವುದು. ಶಿಶುವಿಗೆ ಶರೀರದಲ್ಲಿ ಇಂತಹ ತೃಪ್ತಿಕೊಡುವ ಅಂಗಾಂಗ ಗಳನ್ನು ಉದ್ದೀಪನಾಕ್ಷೇತ್ರ (Erotogeniczones) ಗಳೆಂದು ಕರೆಯಲಾಗುತ್ತದೆ. ಶರೀರದ ಈ ಭಾಗಗಳು ಶಿಶುವಿನ ಲೈಂಗಿಕ ಪ್ರವೃತ್ತಿಗೆ ವಿಶೇಷವಾದ ತೃಪ್ತಿ ಯನ್ನು ನೀಡುವವು. ಇಂಥ ಕ್ಷೇತ್ರಗಳಲ್ಲಿ ಜನನೇಂದ್ರಿಯಗಳು ಎಣಿಸಲ್ಪಡುತ್ತವೆ. ಆದರ ಲೈಂಗಿಕತೆಯ ಪ್ರಥಮ ಅವಸ್ಥೆಯಲ್ಲಿ ಜನನೇಂದ್ರಿಯಗಳು ಅಂಶತಃ ತೀರ ಗೌಣಭೂಮಿಕೆಯನ್ನು ವಹಿಸುತ್ತವೆ.

ಲೈಂಗಿಕತೆಯಿಂದ ಆಕ್ರಮಿಸಲ್ಪಡುವ ಮೊದಲನೆಯ ಉದ್ದೀಪನಾ ಕ್ಷೇತ್ರವು ಮುಖವು-ಅದರಲ್ಲಿಯೂ ವಿಶೇಷವಾಗಿ ತುಟಿಗಳು. ಇದಕ್ಕೆ ಕಾರಣವೆಂದರೆ, ಮಗುವಿನಲ್ಲಿ ಪೋಷಣ ಮತ್ತು ಚೋಷಣಗಳೆರಡೂ ಅತ್ಯಂತ ಹೊಂದಿಕೊಂಡಿರು ತ್ತವೆ. ಇದರ ಮೂಲಕ, ತಂದೆತಾಯಿಗಳು ಈ ಕ್ಷೇತ್ರದಿಂದ ವ್ಯಕ್ತವಾಗುವ ಲೈಂಗಿಕತೆಯ ಕಡೆಗೆ ಸ್ವಲ್ಪವೇ ಲಕ್ಷಕೊಡುವರು. ಹೆಚ್ಚೇನು? ತಂದೆತಾಯಿಗಳು ತಾವೇ ಇಂಥ ಉದ್ದೀಪನೆಯ ತೃಪ್ತಿಯನ್ನು ಮೀರಿದವರಿರುವುದಿಲ್ಲ! ಕೆಲವೊಂದು ವಿರಲವಾದ ಅಪವಾದಗಳನ್ನು ಬಿಟ್ಟರೆ ಎಲ್ಲ ಜನರು ಜೀವನದಲ್ಲಿ ಯಾವಾಗಲೂ ಚುಂಬನದಿಂದ ಲೈಂಗಿಕ ತೃಪ್ತಿಯನ್ನೇ ಪಡೆಯುತ್ತಾರೆ.

ಸ್ವ-ರತಿಯ ನಂತರದ ಅವಸ್ಥೆಯೆಂದರೆ,-ಲೈಂಗಿಕತೆಯ ವಿಕಾಸದಲ್ಲಿ ಎರಡನೆಯ ಮೆಟ್ಟವೆಂದರೆ-ಆತ್ಮಸಮ್ಮೋಹನೆಯೇ ಸರಿ. ಈ ಅವಸ್ಥೆಯು ಪ್ರೌಢ ಮನಸ್ಸಿಗೆ ಹೆಚ್ಚು ಅಪ್ರಿಯವೆನಿಸುತ್ತದೆ. ಆತ್ಮಕಾಮದ ಅವಸ್ಥೆಯಲ್ಲಿ ಶಿಶುವು ತನ್ನ ಶರೀರ ದಿಂದ ಸಂತೃಪ್ತಿಯನ್ನು ಪಡೆಯುತ್ತಿದ್ದರೂ, ಆ ಶರೀರವು ತನ್ನದೆಂಬುದರ ಅರಿವು ಅದಕ್ಕೆ ಇರುವದಿಲ್ಲ. ಏಕೆಂದರೆ ಆಗ ವ್ಯಕ್ತಿತ್ವದ ಭಾವನೆಯು ಇನ್ನೂ ಮೂಡಿರುವದಿಲ್ಲ. ಇದು ಹೊಸದಾಗಿ ಮಾತು ಕಲಿಯುವ ಮಗುವಿನ ನುಡಿಯಲ್ಲಿ ಚನ್ನಾಗಿ ವ್ಯಕ್ತವಾಗುತ್ತದೆ. ಆಗ ಮಗುವು ತನ್ನ ಕುರಿತು 'ನಾನು' ಎಂದೆಂದಿಗೂ ಅನ್ನುವದಿಲ್ಲ. ತನ್ನ ಉಲ್ಲೇಖವನ್ನು ತೃತೀಯ ಪುರುಷದಲ್ಲಿಯೇ ಮಾಡಿ ಮಗುವು ಮಾತಾಡುತ್ತದೆ. ಮಗುವಿಗೆ 'ಪೂಣಿ'ಯೆಂತ ಕರೆಯಲಾಗುತ್ತಿದ್ದರೆ, 'ಪೂಣಿಗೆ ಹಾಲು ಬೇಕು', 'ಪೂಣಿ ಹೀಗೆ ಮಾಡುತ್ತಾನೆ' ಎಂದು ಮುಂತಾದಾಗಿ ಅದು ತನ್ನ ಕುರಿತು ನಿರ್ದೇಶಮಾಡಿ ಮಾತಾಡುತ್ತದೆ.

ಆದರೆ ಈ ಅವಸ್ಥೆ ಬೇಗ ಕಳೆಯುತ್ತದೆ. ಮಗುವಿಗೆ 'ಆತ್ಮ-ಜ್ಞಾನ'ವಾಗುವ ಅವಸ್ಥೆಯು ಬರುತ್ತದೆ. ತನ್ನ ಶರೀರವನ್ನು ಹೊರಗಿನ ಇತರ ವಸ್ತು ವ್ಯಕ್ತಿಗಳಿಂದ ವಿಂಗಡವಾಗಿ, ವಿವಿಕ್ತಿತವಾಗಿ ನೋಡಿಕೊಳ್ಳಲು ಶಿಶುವು ಕಲಿಯುತ್ತದೆ. ಆಗಲೇ

ಮೊದಲಿನ 'ಆತ್ಮ-ಕಾಮ'ವು 'ಆತ್ಮ ಸಮ್ಮೋಹನೆ' (Narcissism) ಯಾಗಿ ಪರಿಣಮಿಸುತ್ತದೆ. ತನ್ನನ್ನೇ ತಾನು ಬೇರೆಯಾಗಿ ಪ್ರೀತಿಸಲು ಶಿಶುವು ಸುರು ಮಾಡುತ್ತದೆ. ಈಗಿನ ಆತ್ಮ-ರತಿಯು ತಿಳುವಳಿಕೆಯಿಂದ ಬಂದುದಾಗಿರುತ್ತದೆ. ಈ ಆತ್ಮ-ಸಮ್ಮೋಹನೆಯ ಇಂಗ್ಲಿಷ ಪರಿಭಾಷೆಯು 'ನಾರ್ಸಿಸಿಸ್ಮ' ಎಂತ. ಈ ಶಬ್ದದಲ್ಲಿ ಒಂದು ಸ್ವಾರಸ್ಯದ ಕತೆ ಹುದುಗಿಕೊಂಡಿದೆ. ಓರ್ವ ಪೌರಾಣಿಕ ಕಥಾನಾಯಕನ ಹೆಸರಿನಿಂದ ಈ ಪಾರಿಭಾಷಿಕ ಶಬ್ದವನ್ನು ಮಾಡಲಾಗಿದೆ. ಗ್ರೀಕ ಪುರಾಣಗಳಲ್ಲಿ ನಾರ್ಸಿಸಸ್ ಎಂಬ ಯುವಕನ ಕತೆಯಿದೆ. ಇವನೋರ್ವ ಸುಂದರ ತರುಣ. ತನ್ನ ರೂಪ ಸೌಂದರ್ಯಕ್ಕೆ ತಾನೇ ಮನಸೋತು ಮರುಳಾಗಿ, ಈತನು ಒಂದು ಕೊಳದ ತಡಿಯಲ್ಲಿಯೇ ಕೂತು ತನ್ನ ಚಲುವಿನ ಪಡಿನೆಳಲನ್ನೇ ನೋಡುತ್ತ, ಅದನ್ನು ಪ್ರೀತಿಸುತ್ತ, ವಿರಹವ್ಯಥೆಯಲ್ಲಿ ಕೊರಗಿ ಸೊರಗಿ ಅಲ್ಲಿಯೇ ಪ್ರಾಣ ಬಿಟ್ಟನು ! ದೇವತೆಗಳು ಆತನನ್ನು ಒಂದು ಚೆಂದವಾದ ಹೂವನ್ನಾಗಿ ಮಾಡಿ ಬಿಟ್ಟರು !

## ಗೌದ-ಪೀಡಾಭೋಗಿ ಅವಸ್ಥೆ

ಪ್ರೀತಿಯ ವಸ್ತುವೆಂಬ ದೃಷ್ಟಿಯಿಂದ ತನ್ನ ಶರೀರವನ್ನು ಕಂಡುಕೊಂಡ ನಂತರ ಶಿಶುವು ಸಹಜವಾಗಿ ಅದರ ಪರಿಶೀಲನೆ ಪರಿಶೋಧನೆಯನ್ನು ಆರಂಭಿಸುತ್ತದೆ. ಆದ್ದರಿಂದ ಅಷ್ಟೇ ಸಹಜವಾಗಿ ಅದು ಶರೀರದಲ್ಲಿಯ ಇತರ ಉದ್ದೀಪನಾ ಕೇಂದ್ರಗಳನ್ನು ಹುಡುಕಿಕೊಳ್ಳುವ ಹಾದಿಗೇ ಹತ್ತುತ್ತದೆ. ಈ ಅವಸ್ಥೆಗೆ 'ಗೌದ-ಪೀಡಾಭೋಗಿ' (Anal-sadistic) ಎಂಬ ವಿಕ್ಷಿಪ್ತವಾದ ಹೆಸರಿಡಲಾಗಿದೆ.

ಈ ಪ್ರಚಂಡ ಹೆಸರಿನ ಅರ್ಥವೇನು ?–ಎಂತ ವಾಚಕರು ನಗು ತಡೆದು ಕೇಳಬಹುದು. ಅದರ ಅರ್ಥವಿಷ್ಟೇ. ಈ ಅವಸ್ಥೆಯಲ್ಲಿ ಮೌಖಿಕ ಕ್ಷೇತ್ರವನ್ನು ಮೀರಿ ಶಿಶುವಿನ ಲೈಂಗಿಕ ಕುತೂಹಲವು ಮಲಮೂತ್ರ ವಿಸರ್ಜನೆಯ-ರೇಚನೇಂದ್ರಿಯಗಳ ಕುರಿತು (ವಿಶೇಷವಾಗಿ ಗುದದ್ವಾರದ ಕುರಿತು) ಹೊರಳುತ್ತದೆ. ಈ ಕಾಲಖಂಡದಲ್ಲಿ ಶಿಶುವು ರೇಚನಕ್ರಿಯೆಯಲ್ಲಿ ಬಹಳೇ ಸ್ವಾರಸ್ಯವನ್ನು ಕಾಣುತ್ತದೆ; ಮಲವನ್ನುಂಟುಮಾಡುವದರಿಂದ–ಮಲವಿಸರ್ಜನೆಯಲ್ಲಿ ಸುಖವನ್ನು ಪಡೆಯುತ್ತದೆ. ಇದೇ ಅವಸ್ಥೆಯೊಂದಿಗೆ ಹೊಂದಿಕೊಂಡು ಕೋಲಾಹಲ ಖಟಾಟೋಪಗಳನ್ನು ಮಾಡುವದರಲ್ಲಿ, ಹೊಡೆದು ಬಡಿದು ಹುಯಿಲೆಬ್ಬಿಸುವದರಲ್ಲಿ ಮತ್ತು ಇತರರಿಗೆ ಪೀಡಿಸುವದರಲ್ಲಿ ಆನಂದಪಡುವ ಅಭಿರುಚಿಯೊಂದು

ಶಿಶುವಿನಲ್ಲಿ ವ್ಯಕ್ತವಾಗುತ್ತದೆ. ಇದೇ ಪೀಡಾಭೋಗಿ (Sadistic) ವೃತ್ತಿಯು; ಅಂದರೆ ಚಿತ್ರಹಿಂಸೆ ಕೊಡುವವದರಲ್ಲಿ ಇಲ್ಲವೆ ಕ್ರೂರತನದಲ್ಲಿ ಸುಖಪಡುವ ಮನೋವೃತ್ತಿಯು.

ಈ 'ಗೌದ–ಪೀಡಾಭೋಗ' ಅವಸ್ಥೆಯಲ್ಲಿಯೆ ಶಿಶುವಿನ ಪ್ರವೃತ್ತಿ ಮೂಲಕವಾದ ಇಚ್ಛೆ ಮತ್ತು ಶಿಕ್ಷಣದ ಶಿಸ್ತು ಇವುಗಳಲ್ಲಿ ತೀವ್ರವಾದ ತಿಕ್ಕಾಟವಾಗುವದು ತೀರ ಸಂಭವವಿರುತ್ತದೆ. ಏಕೆಂದರೆ ಇಲ್ಲಿ ಶಿಶು ಮತ್ತು ಪ್ರೌಢರಲ್ಲಿ ಉಗ್ರವಾದ ಮತಭೇದಕ್ಕೆ ಎಡೆಯಿರುತ್ತದೆ. ಪ್ರೌಢರ ದೃಷ್ಟಿಯಿಂದ ಮಲಮೂತ್ರಗಳ ಉತ್ಸರ್ಗವು ಜಿಗುಪ್ಸೆಯ ವಿಷಯವು. ರೇಚನ ಕ್ರಿಯೆಯೋ ತೀರ ಗುಪ್ತವಾಗಿ ಮಾಡಿ ಮುಗಿಸಬೇಕಾದ ವಿಧಿಯು. ಸಭ್ಯ ಸಂಭಾಷಣೆಯಲ್ಲಿ ಅದರ ಉಲ್ಲೇಖ ಸಹ ಬಾರದಂತೆ ನೋಡಿಕೊಳ್ಳುವದು ಅವರ ಶಿಷ್ಟಾಚಾರ. ಆದರೆ ಪ್ರೌಢರ, ಮಕ್ಕಳ ದೃಷ್ಟಿಕೋನವು ಇದಕ್ಕೆ ವಿಪರೀತವಾಗಿರುತ್ತದೆ. ತಮ್ಮ ಪಾಲಕರು ತೋರಿಸುವ ಈ ಜಿಗುಪ್ಸೆ ಮಕ್ಕಳಿಗೆ ತೀರ ಅಗಮ್ಯ ಮತ್ತು ಅಕ್ಷಮ್ಯವೆನಿಸುವದು. ಏಕೆಂದರೆ ಅವರಿಗೆ ಮಲೋತ್ಸರ್ಗವೂ ರೇಚನಕ್ರಿಯೆಯೂ ಅತ್ಯಂತ ಜಿಜ್ಞಾಸೆಯ ವಿಷಯ! (ತನ್ನ ಅದ್ವಿತೀಯವಾದ ಶರೀರದಿಂದ ಹೊರಬಿದ್ದ ಅದೊಂದು ಸೋಜಿಗದ ವಸ್ತುವಲ್ಲವೇ?) ರೇಚನಕ್ರಿಯೆಯು ಶಿಶುವಿಗೆ ತೃಪ್ತಿಕರವೂ ಉತ್ತೇಜಕವೂ ಅನಿಸುತ್ತದೆ. ಆದುದರಿಂದ ಮಲ–ಮೂತ್ರ ವಿಸರ್ಜನೆಯಲ್ಲಿ ಅದು ಆದಷ್ಟು ವೇಳೆಗಳೆಯುತ್ತದೆ. ಅವುಗಳ ವಿಷಯವಾಗಿ ಬಾಯಿತುಂಬ ಮಾತಾಡುತ್ತದೆ. 'ಮೇಷ್ಟ್ರ'ಗಳು 'ಕ್ಯಾಟಲಾಗ' ಬರೆಯುತ್ತಿರುವಾಗ ಅವರ ಮುಂಡಾಸಕ್ಕೆ ಕಿರಿಬೆರಳು ತೋರಿಸಿ ಓಡುವದೆಂದರೆ ಮಕ್ಕಳಿಗೆ ಬಹಳೇ ಮಹತ್ವದ ಪರ್ವಣಿ. ಆದರೆ ಈ ಮಹತ್ಕಾರ್ಯದಲ್ಲಿ ಆನಂದ ವ್ಯಕ್ತಮಾಡುವ ಭಾಗ್ಯ ಮಗುವಿಗೆ ಬಹಳ ಅನುಭವಿಸಲು ಸಿಗುವದಿಲ್ಲ. ತಂದೆ–ತಾಯಿ, ಗುರು–ಹಿರಿಯರ ರೂಪದಿಂದ ಶಿಸ್ತಿಗಾಗಿ ನೆಲೆಗೊಂಡ ಸಮಾಜವು ತಮಗೆ ತೀರ ಹೇಯವೆಂದೆನಿಸುವ ಇಂಥ ಅಭದ್ರ ಸಂಗತಿಗಳಲ್ಲಿ ಮಕ್ಕಳು ಮನಸ್ಸು ಹಾಕುವದನ್ನು ಸಹಿಸುವದಿಲ್ಲ. ಇದರ ಪರಿಣಾಮವಾಗಿ ಬಾಲಕರಲ್ಲಿ ಮಾನಸಿಕ ಸಂಘರ್ಷವು ಸುರುವಾಗುತ್ತದೆ. ಈ ಸಂಘರ್ಷದ ಕಾಲಾವಧಿ ಮತ್ತು ಸ್ವರೂಪಗಳ ಮೇಲೆಯೆ ಬಾಲಕನ ಮುಂದಿನ ಬಾಳಿನಲ್ಲಿಯ ಶೀಲ–ಚಾರಿತ್ರ್ಯಗಳು ಅವಲಂಬಿಸಿ ನಿಶ್ಚಿತವಾಗುತ್ತವೆಂತ ಡಾ. ಫ್ರಾಯ್ಡನ ಅಭಿಪ್ರಾಯ.

## ಚಾರಿತ್ರ್ಯದ ಸಂಘಟನೆ

ಪಾಲಕರ ಪ್ರೌಢ ವಿಚಾರಸರಣಿಯನ್ನು ಬಾಲಕನು ಕೂಡಲೆ ಒಪ್ಪಿಕೊಂಡರೆ, ಈ

ಮಾನಸಿಕ ಸಂಘರ್ಷವು ಚಿಕ್ಕದಾಗುತ್ತದೆ. ಆದರೆ ಬಹಳೇ ದಂಡಿಸಿ, ಗದ್ದರಿಸಿ, ಕಠೋರ ಶಿಸ್ತಿಗೆ ದೀರ್ಘಕಾಲ ಗುರಿಮಾಡಿ ತಿದ್ದಿದ್ದರಿಂದ ಮಗುವು ರೇಚನ ಕ್ರಿಯೆಯಲ್ಲಿಯ ಆಸಕ್ತಿಯನ್ನು ಬಿಟ್ಟದ್ದಾದರೆ ಅದರಿಂದ ಗಂಭೀರ ಪರಿಣಾಮ ಗಳಾಗಬಹುದು. ಏಕೆಂದರೆ ಇಂಥ ಸಂದರ್ಭದಲ್ಲಿ ಮಗುವಿನ ಅವಸ್ಥಾ ಸಹಜವಾದ ಪ್ರೇರಣೆಗಳ ತೃಪ್ತಿಯು ಆಗುವದಿಲ್ಲ. ಅವು ಬರೇ ಹಿರಿಯರ ಗದ್ದರಿಕೆಯಿಂದ (ಸಮಾಜದ ಶಾಸನದಿಂದ) ಹತ್ತಿಕ್ಕಲ್ಪಡುವವು. ಆದರೆ ಇಂಥ ದಮಿತ ಪ್ರವೃತ್ತಿ ಗಳು ಭಾವೀ ಸಂಕಟದ ಬೀಜಗಳಾಗುತ್ತವೆ.

ಈ ಗಂಭೀರ ಪರಿಣಾಮಗಳು ಕೂಡಲೇ ಕಂಡುಬರಬೇಕೆಂತಿಲ್ಲ. ಸಾಮಾನ್ಯ ನಿಯಮವೆಂದರೆ ಹಾಗೆ ಅವು ತಕ್ಷಣ ತೋರಿಬರುವದೇ ಇಲ್ಲ. ಆದರೆ ಮನೋ ವಿಜ್ಞಾನಿಯ ತಜ್ಞದೃಷ್ಟಿಗೆ ಇಂಥ ದಮಿತ ಪ್ರವೃತ್ತಿಗಳ ಅಸ್ತಿತ್ವದ ಸುಳುವು ಹತ್ತದೆ ಇರುವದಿಲ್ಲ, ಈ ದಮಿತ ಪ್ರೇರಣೆಗಳು ಅಜಾಗ್ರತ ಮನಸ್ಥರದಲ್ಲಿ ಹದುಗಿ ನಿಲ್ಲುತ್ತವೆ. ಅವು ಶಕ್ತಿಮಯವಾಗಿ ಉಳಿಯುತ್ತವೆ. ಮತ್ತು ಒಮ್ಮೊಮ್ಮೆ ಋತುಪ್ರಾಪ್ತಿಯ ವಯಸ್ಸಿನಲ್ಲಿ ಭಯಾನಕ ರೂಪದಲ್ಲಿ ಪ್ರಕಟವಾಗುತ್ತವೆ ! ಈ ಸಂಘರ್ಷದ ಕಾಲಖಂಡದಲ್ಲಿಯೆ ಹಿಂದೆ ಹೇಳಿದ ವರಿಷ್ಠ-ಅಹಂತೆಯು ತನ್ನ ಪೂರ್ಣ ನಿಲುವಿಕೆಯನ್ನು ಪಡೆಯುತ್ತದೆ. ಏಕೆಂದರೆ ಈ ಕಾಲದಲ್ಲಿ, ಪ್ರವೃತ್ತಿ ಮೂಲಕವಾದ ಪ್ರೇರಣೆಗಳಿಗೆ ಪರಿತುಷ್ಟಿಯನ್ನು ಕೊಡುವ ಚಟಗಳನ್ನು ಮಗುವು ಬಿಟ್ಟುಬಿಡಬೇಕಾಗುತ್ತದಲ್ಲದೆ, ಅವುಗಳ ಕುರಿತು ತನ್ನ ಮತವನ್ನೂ ತೀರ ಬೇರ್ಪಡಿಸಿಕೊಳ್ಳಬೇಕಾಗುತ್ತದೆ. ಜಿಜ್ಞಾಸೆಯಿದ್ದಲ್ಲಿ ಜುಗುಪ್ಸೆ, ತತ್ಪರತೆಯಿದ್ದಲ್ಲಿ ತಾತ್ಸಾರವನ್ನು ತೋರಿಸಲು ಕಲಿಯಬೇಕಾಗುತ್ತದೆ. ಆದುದರಿಂದ ಅಂಥ ಪ್ರವೃತ್ತಿ-ಪ್ರೇರಣೆಗಳನ್ನು ಅಜಾಗ್ರತ ಮನಸ್ಥರದ ಆಳದಲ್ಲಿ, ಅಂತರ್ತಮ ತಳದಲ್ಲಿ, ನೂಕಿ ಅವುಗಳನ್ನು ಭದ್ರವಾಗಿ ಒತ್ತಿಡಬೇಕಾಗುತ್ತದೆ. ಈ ವ್ಯವಸಾಯಕ್ಕೆ ತಕ್ಕಂತೆ ವರಿಷ್ಠ ಅಹಂತೆಯು ಬಲಿತು ಬರುವದು.

ಆತ್ಮ-ಕಾಮಾವಸ್ಥೆ ಮತ್ತು ಗೌದ-ಪೀಡಾಭೋಗಿ ಅವಸ್ಥೆ ಇವೆರಡೂ ಮೊದಲಿನ ಐದು ವರ್ಷಗಳಲ್ಲಿ ಮುಗಿಯುತ್ತವೆ. ಮನೋವಿಜ್ಞಾನದ ಇತರ ಸಾಂಪ್ರ ದಾಯಿಕರು ಮನ್ನಿಸುವಂತೆ ಫ್ರ್ಯಾಡನ ಅನುಯಾಯಿಗಳೂ ಈ ವಯೋಮಾನ ವನ್ನು ಅತ್ಯಂತ ಮಹತ್ವದ್ದೆಂತ ಎಣಿಸುವರು. ಈ ಐದು ವರ್ಷಗಳಲ್ಲಿಯೇ ವ್ಯಕ್ತಿಯ ಚಾರಿತ್ರ್ಯದ ಮುಖ್ಯ ರೇಖೆಗಳು ಬರೆಯಲ್ಪಡುತ್ತವೆ. ಈ ಅವಧಿಯಲ್ಲಿ ಆದ ಲೋಪ ದೋಷಗಳನ್ನು-ಚಿಕ್ಕಂದಿನಲ್ಲಿ ಆದ ಮನಸ್ಸಿನ ಬೆಳವಣಿಗೆಯಲ್ಲಿಯ ತಪ್ಪುಗಳನ್ನು-ಮುಂದಿನ ಆಯುಷ್ಯದಲ್ಲಿ ತಿದ್ದಲು ಮನೋವಿಜ್ಞಾನದ ವಿಶೇಷಜ್ಞರ

ಉಪಚಾರ ತಂತ್ರಗಳಿಗೇ ಶರಣು ಹೋಗಬೇಕಾಗುವದು.

ಈ ವಿಧಾನವು ಭೀಕರವಾಗಿ ಕಾಣುವದಲ್ಲವೆ ? ಆದರೆ ಅದರ ಸತ್ಯತೆಯು ಸಿದ್ಧವಾಗಿದೆ. ಇದರಿಂದ ಬುದ್ಧಿ ಕಲಿಯಬೇಕಾದುದಿಷ್ಟೆ: ತಾಯಿ ತಂದೆಗಳಾಗಲ-ಪೇಕ್ಷಿಸುವವರೆಲ್ಲರೂ ಪಿತೃತ್ವದ ಶಾಸ್ತ್ರದಲ್ಲಿ ಆಳವಾದ ಪರಿಜ್ಞಾನವನ್ನು ಪಡೆವ ಹೊರತು ವಿವಾಹವಾಗಲು ಅಣಿಯಾಗದಿರುವದು ಸಮಾಜಕ್ಕೆ ಹಿತಕರವು.

ಆದರೆ ಲೋಕಮತವು ಇಂಥ ಶಿಕ್ಷಣಕ್ಕೆ ಒತ್ತಾಯ ಪಡಿಸುವಷ್ಟು ಆಸಕ್ತಿಯನ್ನು ಈ ವಿಷಯದಲ್ಲಿ ಬೆಳೆಸಿಕೊಂಡಿಲ್ಲ. ಆದಾಗ್ಯೂ ಇಂದಿನ ತಂದೆತಾಯಿಗಳಲ್ಲಿ ಶಿಶು ಮನೋವಿಜ್ಞಾನದ ಈ ಅತ್ಯಂತ ತೊಡಕಿನ ಸಮಸ್ಯೆಯ ಕುರಿತು,–ಚಾರಿತ್ರ್ಯ ವನ್ನು ಎಂದಿನಿಂದ ಮತ್ತು ಎಂತು ರೂಪಗೊಳಿಸಬೇಕೆಂಬುದರ ವಿಷಯವಾಗಿ-ತಾವು ಜ್ಞಾನವನ್ನು ಸಾಕಷ್ಟು ಪಡಕೊಳ್ಳಬೇಕೆಂಬ ಲವಲವಿಕೆಯು ಬೇರೂರಿ ಬೆಳೆಯುತ್ತಿರುವುದು ಕಂಡುಬರುತ್ತದೆ. ಮಕ್ಕಳ ವರ್ತನ ಸಮಸ್ಯೆಗಳನ್ನು ಚರ್ಚಿಸುವ ಪುಸ್ತಕ ಸ್ಫುಟಲೇಖನಗಳು ಬೆಳೆಯುವ ಜನಪ್ರಿಯತೆಯೇ ಈ ವಿಷಯದ ಸರ್ವಸಾಮಾನ್ಯವಾದ ಸಾಮಾಜಿಕ ಮಹತ್ವದ ಸಾಕ್ಷಿಯಾಗಿದೆ. ಆದರೆ ಇಂಥ ಪುಸ್ತಕ ಲೇಖನಗಳ ವಾಚನವು ಕೇವಲ ಮಾರ್ಗದರ್ಶಕವಾಗಬಹುದು ; ಮಕ್ಕಳ ನಡತೆಯ ಮತ್ತು ಅವರೊಂದಿಗೆ ನಡಕೊಳ್ಳುವಿಕೆಯ ಕೆಲವೊಂದು ಸ್ಥೂಲ ತಪ್ಪುಗಳನ್ನು ತಿದ್ದಲು ಸಹಾಯಕವಾಗಬಹುದು. ಆದರೆ ವ್ಯವಸ್ಥಿತವಾದ ಶಿಕ್ಷಣದ ಸ್ಥಲವನ್ನು ಈ ಆಗಂತುಕ ಜ್ಞಾನವು ಎಂದೂ ಪಡೆಯಲಿಕ್ಕಿಲ್ಲ. ಮಾತೃತ್ವ-ಪಿತೃತ್ವಗಳ ಉತ್ತರದಾಯಿತ್ವದ ಸರಿಯಾದ ಸಮಗ್ರವಾದ ಇತ್ಯರ್ಥವನ್ನು ಅವೆಂದೂ ಮಾಡಲಿಕ್ಕಿಲ್ಲ. ಏಕೆಂದರೆ ಇಂಥ ವಾಙ್ಮಯದ ಲಕ್ಷಣವೇನೆಂದರೆ ಇವುಗಳಲ್ಲಿ ಮನೋವಿಕೃತಿಗಳು ಉಂಟಾಗದಿರುವಂತೆ ಮಾಡುವ ನಿವಾರಣೋಪಾಯಗಳಿಗಿಂತ ಉಂಟಾದವುಗಳನ್ನು ಹೋಗಲಾಡಿಸುವ ಚಿಕಿತ್ಸೋಪಚಾರಗಳ ಕಡೆಗೇ ವಿಶೇಷ ಲಕ್ಷ್ಯ ಪೂರೈಸಲಾಗುತ್ತದೆ. ಆದರೆ ಮನೋವಿಜ್ಞಾನಿಗಳ ಸರ್ವಾನುಮತದಂತೆ ಯಾವದೊಂದು ವರ್ತನೆಯ ಸಮಸ್ಯೆಯು ನಮ್ಮ ಸಂಚಿತ ಲಕ್ಷ್ಯವನ್ನೆಳೆದು ಕೊಳ್ಳುವಷ್ಟು ಗಂಭೀರ ಸ್ವರೂಪವನ್ನು ತಾಳಿ ಬೆಳೆದಾಗ, ಯಾವದೇ ಚಿಕಿತ್ಸೋಪಚಾರದಿಂದ ಅದನ್ನು ಪೂರ್ಣವಾಗಿ ಗುಣಪಡಿಸುವದು ವಸ್ತುತಃ ಅಶಕ್ಯವೇ ಇರುತ್ತದೆ. ಕೇವಲ ತೀರ ಮೇಲ್ತರಗತಿಯ ಕುಶಲತೆಯ ತಂತ್ರ–ತಜ್ಞತೆಯಿಂದಲೆ ಅದು ಶಕ್ಯವಿರುತ್ತದೆ. ಈ ತಂತ್ರವು ಲೋಕಪ್ರಿಯ ಮನೋವೈಜ್ಞಾನಿಕ ವಾಙ್ಮಯವಲ್ಲಿ ಸಿಗುವದೆಂತು ? ಆದುದರಿಂದ ಅಂಥ ಮೂಲಗಾಮಿಯಾಗದ ಜ್ಞಾನದಿಂದ ಕೈಗೊಂಡ ಉಪಚಾರವು ಮನೋವ್ಯಾಧಿಯ ಎಲ್ಲೆಗೆ ಮಾತ್ರ

ತಾಗುತ್ತದೆ. ಮುಖ್ಯ ಸಮಸ್ಯೆಯು ಬಗೆಹರಿಯದೆ ಉಳಿಯುತ್ತದೆ.

## ಋತುಪ್ರಾಪ್ತಿ: ಪೌಗಂಡ-ವರ್ತನ

ಇಂಥ ಒಗಟಿನ ಕಾಲವು ಋತುಪ್ರಾಪ್ತಿಯ ಸಮಯವಾಗಿದೆ. ಆಗಲೆ ಲೈಂಗಿಕತೆಯ ಹಲವು ಘಟಕಗಳ ಸಂಯೋಗವಲ್ಲಿಯ ಮಾರ್ಮಿಕವಾದ ಪಾಕಬಿಂದುವು-ವಿಕಾಸದ ಕೊನೆಯ ಮಟ್ಟವು-ಒದಗುತ್ತದೆ. ಹಲವು ವಿಚಾರಿಗಳಾದ ಬಹುಶ್ರುತರಾದ ಪಾಲಕರು ತಮ್ಮ ಮಕ್ಕಳ ಋತುಪ್ರಾಪ್ತಿಯ ವಿಕಾಸ-ಸಂಧಿಯನ್ನು ಭೀತಿಯಿಂದ ನೋಡುತ್ತಾರೆ. ವಯಸ್ಸಿನ ೧೨-೧೬ ವರ್ಷಗಳ ನಡುವಿನ ಅವಸ್ಥೆಯಲ್ಲಿ ಗಂಭೀರ ವಾದ ಶಾರೀರಿಕ-ಮಾನಸಿಕ ಸ್ಥಿತ್ಯಂತರಗಳು ಒದಗಿಬರುವವೆಂಬುದೂ, ಇಂಥ ಸ್ಥಿತ್ಯಂತರಗಳೊಂದಿಗೇ ಭಾವನಾಪ್ರಕ್ಷೋಭಗಳೂ ಆಗಾಗ್ಗೆ ಆಗುತ್ತ, ತೀವ್ರ-ತಾಪ ದಾಯಕ ರೂಪದ ವರ್ತನದ ಸಮಸ್ಯೆಗಳು ತಲೆದೋರುವವೆಂಬುದೂ, ವಿಸ್ತೃತ ವಾಚಸದಿಂದ ಪಾಲಕರಿಗೆ ಗೊತ್ತಾಗಿರುತ್ತದೆ. ಇಂಥ ಪ್ರಕ್ಷೋಭ ಸಮಸ್ಯೆಗಳ ಸ್ವರೂಪವು ಪ್ರತಿಯೊಂದು ಮಗುವಿನಲ್ಲಿಯೂ ಬೇರೆ ಬಗೆಯಾಗಿರಬಹುದು. ಇಷ್ಟೇ ಅಲ್ಲ, ಅವುಗಳ ವಿಷಯವಾಗಿ ಮೊದಲೆ ಏನೊಂದು ಊಹೆ-ಅನುಮಾನವನ್ನು ಯಥಾರ್ಥವಾಗಿ ಕಟ್ಟಲು ಬರುವಂತಿಲ್ಲ. ಆದ್ದರಿಂದ ಬೆಳೆಯುವ ಮಗುವು ವಿಕಾರ ದಿಂದ ವಿಕಾರಕ್ಕೆ ಮನಃಕ್ಷೋಭದ ಪೆಟ್ಟಿಗೆ ತೂಗುತ್ತಿರುವಾಗ ಅದರ ಚಂಚಲ ವೃತ್ತಿ, ವರ್ತನಗಳು ಎಷ್ಟು ದುರ್ದಮ್ಯವೆನಿಸುವವೋ ಅಷ್ಟೇ ದುರ್ಗಮ್ಯ ವಾಗುವವು. ಪೂರ್ವ ಸೂಚನೆಯಿಲ್ಲದುದರಿಂದ, ಇಂಥ ವಿಷಯ ಅವಸ್ಥೆಗೆ ಯೋಗ್ಯ ಉಪಚಾರ ಕ್ರಮವನ್ನು ತಪ್ಪದೆ ಆರಿಸಿ ಕೊಳ್ಳುವದಾಗಲಿ, ತಡೆಯದೆ ಅನು ಸರಿಸುವದಾಗಲಿ ಬಿಗಿಯಾಗುತ್ತದೆ.

ಋತುಪ್ರಾಪ್ತಿಯ ಕಾಲದ ಮಾನಸಿಕ ಸಮಸ್ಯೆಗಳನ್ನು ಸರಿಯಾಗಿ ಅರಿತು ಕೊಳ್ಳಲು, ಆ ಮೊದಲಿನ ಲೈಂಗಿಕ ವಿಕಾಸದ ಅವಸ್ಥೆಗಳನ್ನು ಪರಿಶೀಲಿಸ ಬೇಕಾಗುತ್ತದೆ. ಶಿಶುವಿನ ಹದಿನಾಲ್ಕನೇ ವರ್ಷದ ವಿಪರೀತ ವಿಕೃತವೆನಿಸುವ ವರ್ತನದ ಉಪಪತ್ತಿಯನ್ನು ಹಚ್ಚಲಿಕ್ಕೆ ೧೦ ವರ್ಷ ಹಿಂದೆ ಸರಿದು ಅದರ ನಾಲ್ಕನೇ ವರ್ಷವಯಸ್ಸಿನ ಅವಸ್ಥೆಯನ್ನು ವಿಶ್ಲೇಷಿಸಬೇಕಾಗುತ್ತದೆ. ಈ ವಿಶ್ಲೇಷಣೆ ಸಾಮಾನ್ಯ ತಂದೆ-ತಾಯಿಗಳ ತಲೆಯ ತೆಕ್ಕೆಗೆ ಮೀರಿದ ಕೆಲಸ.

ಆತ್ಮಕಾಮ-ಆತ್ಮ-ಸಂಮೋಹನೆಗಳ ಅವಸ್ಥೆಗಳು ಮುಗಿದ ಮೇಲೆ ಋತುಪ್ರಾಪ್ತಿಯ ಅವಧಿಯ ವರೆಗೆ ತೋರಿಕೆಗೆ ಬರುವಷ್ಟು ಲೈಂಗಿಕ ವಿಕಾಸವಾಗುವದಿಲ್ಲ.

ಅದು ಅಧ್ಯಾಹೃತಿ (Latency)ಯ ಅವಧಿ ಋತು ಪ್ರಾಪ್ತಿಯ ನಂತರ ತಿರುಗೊಮ್ಮೆ ಮೊದಲಿನ ಮೂರು ಅವಸ್ಥೆಗಳ ಆವೃತ್ತಿಯು ಒದಗುತ್ತದೆ. ಈ ಪುನರಾವೃತ್ತಿಯ ಕಾರಣಗಳು ಇನ್ನೂ ಅಸ್ಪಷ್ಟವಾಗಿವೆ. ಈ ಪುನರಾವರ್ತನೆಯ ಕ್ರಮವು ಮೂಲದಿಂದ ಬೇರೆಯಾದ ಒಂದು ಪಾತಳಿಯ ಮೇಲೆ ಜರುಗುತ್ತದೆ. ಆದರೆ ಅದು ಮೂಲದ (ಶೈಶವದ) ಅವಸ್ಥೆಯನ್ನು ನಿಕಟವಾಗಿ ಹೋಲುತ್ತದೆ. ಆದುದರಿಂದ ಶೈಶವದಲ್ಲಿ ಒಮ್ಮೆ ಹೂಡಲ್ಪಟ್ಟ ಸ್ವಭಾವ-ವಿಕಾಸದ ರೇಖೆಗಳಲ್ಲಿಯೇ ಈ ಹೊಸ ಸ್ಥಿತ್ಯಂತರವು ಒದಗಿಬರುತ್ತದೆ. ಒಮ್ಮೆ ಹಳಿಗಳು ಹಾಕಿದ ಮೇಲೆ, ಹೊರೆ ಹೇರಿದ ಡಬ್ಬಿಗಳಿರಲಿ, ಮೇಲ್ತರಗತಿಯ ಸುಖಾಸೀನತೆಯ ಬಂಡಿಯಿರಲಿ ಅದೇ ದಾರಿ ಗುಂಟ ಓಡಬೇಕಾಗುತ್ತದೆ.

ಈ ಸಿದ್ಧಾಂತವು ಪೌಗಂಡಾವಸ್ಥೆಯಲ್ಲಿಯ ತರಳರ ನಡತೆಯೊಳಗಿನ ಇದುವರೆಗಿನ ಹಲವು ಕೂಟಪ್ರಶ್ನೆಗಳ ಮೇಲೆ ಬೆಳಕು ಬೀರುತ್ತದೆ. ಎಳೆ ವಯಸ್ಸಿನಲ್ಲಿ ಹಲವು ವರ್ಷಗಳ ತನಕ ವಿಚಕ್ಷಣತೆ, ಜಾಣ್ಮೆ, ಮುಂದಾಳುತನ, ಎದೆಗಾರಿಕೆ, ಆತ್ಮ ವಿಶ್ವಾಸಗಳನ್ನು ತೋರಿಸಿ ನಡೆದುಬಂದ ಒಂದು ಶಿಶುವು ಒಮ್ಮೆಲೆ ತೀರ ಚಿಕ್ಕಂದಿನ, ಉಪದ್ರವಕಾರಿಯಾದ, ಹಿಂಜರಿಕೆ, ಪರಾವಲಂಬಿತನ, ಅಸಹನೆ, ಸ್ವಾರ್ಥಪರತೆ ಮತ್ತು ವಿಕಾರವಶತೆಯ ಕ್ಷೋಭ-ವೃತ್ತಿಗಳನ್ನು ಪ್ರಕಟ ಮಾಡುವದನ್ನು ನಾವು ಕೆಲವು ಬಾರಿ ನೋಡುತ್ತೇವೆ. ಈ ಆಕಸ್ಮಿಕ ಭಾವ ಪರಿವರ್ತನದ ಕಾರಣವು ಮೇಲಿನ ಸಿದ್ಧಾಂತದಿಂದ ಸ್ಪಷ್ಟವಾಗುತ್ತದೆ. ಬುದ್ಧಿ ವಂತಿಕೆಯ ಅಭಿರುಚಿಯ ವಿಷಯಗಳನ್ನು ಬಿಟ್ಟು ನಿರುಪಯೋಗಿಯಾದ ಸಂಗತಿ ಗಳ ಕಡೆಗೆ ಬೆಳೆದ ಮಕ್ಕಳು ಹೊರಳುವುದರ ಒಗಟು ಇದರಿಂದ ಬಗೆಹರಿಯು ತ್ತದೆ. ಎಷ್ಟೋ ಮಕ್ಕಳು ಹದಿನಾಲ್ಕನೆಯ ವರ್ಷ ವಯಸ್ಸಿನಲ್ಲಿ 'ಮಲ-ಬುದ್ಧಿ' (Lavatory mind) ವ್ಯಕ್ತಮಾಡುವರು, ಹೊಲಸುಮಾತು, ಅಶ್ಲೀಲವರ್ತನ ಗಳಲ್ಲಿ ಆನಂದಪಡುವರು-ಇದರ ರಹಸ್ಯವೂ ತಿಳಿದು ಬರುವದು.

ಆದರೆ, ಋತುಪ್ರಾಪ್ತಿಯು ಹೀಗೆ ಬರೇ ಶೈಶವ ಲೈಂಗಿಕ ಅವಸ್ಥೆಗಳ ಪುನರಾ ವೃತ್ತಿಯಲ್ಲ. ಪ್ರೌಢ ಲೈಂಗಿಕತೆಯ ಕುರಿತು ಒಯ್ಯುವ ಕೊನೆಯ ಮತ್ತು ಮಾರ್ಮಿಕ ಮಹತ್ವದ ಅವಸ್ಥೆಯು ಈಗ ವ್ಯಕ್ತವಾಗುತ್ತದೆ. ಇದೀಗ, ಲೈಂಗಿಕ-ಪ್ರವೃತ್ತಿಯು ಜನನೇಂದ್ರಿಯಗಳ ಉದ್ದೀಪನಾಕ್ಷೇತ್ರದಲ್ಲಿ ಕೇಂದ್ರೀಕೃತವಾಗುತ್ತದೆ; ಪ್ರಜೋತ್ಪಾದನೆಯ ಪ್ರಾಣಿಶಾಸ್ತ್ರೀಯ ಘಟನೆಯೊಂದಿಗೆ ಜೋಡಿಸಲ್ಪಡುತ್ತದೆ. ಇದುವರೆಗೆ ಶಿಶುವು ತನ್ನ ಲೈಂಗಿಕ ಪ್ರವೃತ್ತಿಗಳ ತೃಪ್ತಿಗಾಗಿ ತನ್ನಲ್ಲಿಯೇ ತನ್ಮಯ ವಾಗಿತ್ತು. ಈಗ ತನ್ನಿಂದ ಹೊರಗೆ ಹೊರಳಿ ತನ್ನ ಕಾಮ ಕಾಮನೆಗಳಿಗಾಗಿ,

ಬೇರೆ ವಿಷಯವನ್ನು ನಿಲುಕಲಿಕ್ಕೆ ಅದು ಒತ್ತಾಯಪಡುತ್ತದೆ.

## "ಯುಡಿಪಸ್" ಮನೋಗಂಡ

ಹೀಗೆ ಬಹಿರ್ಮುಖವಾಗಿ ಕಾಮನೆಯ-ವಿಷಯವನ್ನು ಹುಡುಕುವಾಗ, ಶಿಶುವಿನ ಮನಸ್ಸು ತನ್ನ ತೀರ ಹತ್ತಿರದ ವಸ್ತುಗಳ ಮೇಲೆ ಸ್ಥಿರವಾಗುತ್ತದೆ. ಸಾಮಾನ್ಯವಾಗಿ ಅದು ತನ್ನ ಬಳಗದ ವ್ಯಕ್ತಿಗಳ ಮೇಲೆ ನಿಲ್ಲುತ್ತದೆ. ಈ ವ್ಯಕ್ತಿಗಳು ತಂದೆ ತಾಯಿಗಳೇ ಇರುವದು ಸಾಧಾರಣ ನಿಯಮವು. ಈ ಸ್ಥಾಯೀ ಭವನದಿಂದ ಪಿತೃಗಾಮಿ ಮನೋಗಂಡ (Edipus complex) ವೆಂಬ ಸು (ಕು ?) ಪ್ರಸಿದ್ಧ ಮನೋವೃತ್ತಿಯು ಉದ್ಭವಿಸುವದು. 'ಯುಡಿಪಸ್ ಕೊಂಪ್ಲೆಕ್ಸ' ಎಂಬುದೊಂದು ಗುಪ್ತಕಾಮನೆ. ಈ ಅವಸ್ಥೆಯಲ್ಲಿ ಅದು ಅಜ್ಞಾತವಾಗಿ ಶಿಶುವಿನಲ್ಲಿ ಉಂಟಾಗುತ್ತದೆ. ತನ್ನ ತಂದೆತಾಯಿಗಳಲ್ಲಿ ತನ್ನ ಲಿಂಗದವರನ್ನು-ಮಗಳು ತಾಯಿಯನ್ನೂ, ಮಗನು ತಂದೆಯನ್ನೂ-ಹೋಗಲಾಡಿಸಿ ವಿರುದ್ಧ ಲಿಂಗದ ಪಾಲಕರನ್ನು ತನಗಾಗಿ ತನ್ನವರಾಗಿ ಮಾಡಿಟ್ಟುಕೊಳ್ಳುವ ಅಂತರ್ತಮವಾದ ಕಾಮನೆ ಇದು.

ಈ ಮನೋಗಂಡಕ್ಕೆ 'ಯುಡಿಪಸ್' ಗಂಡವೆಂತ ಹೆಸರಿಡಲಾಗಿದೆ. ಏಕೆಂದರೆ 'ಯು ಡಿ ಪ ಸ್' ಎಂಬ ಪೌರಾಣಿಕ ನಾಯಕನ ಕತೆಯನ್ನು ಮನೋಗಂಡದ ಪ್ರತೀಕವಾಗಿ ಮಾಡಲಾಗಿದೆ. ಯುಡಿಪಸ್‌ನು ಗ್ರೀಸದಲ್ಲಿಯ ಥೀಬ್ಸ ಎಂಬ ರಾಜ್ಯದ ಲೇಯಸ್ ಎಂಬ ಅರಸನ ಮಗನು. 'ನೀನು ತಂದೆಯನ್ನು ಕೊಂದು ತಾಯಿಯನ್ನು ಮದುವೆಯಾಗುವಿ' ಯೆಂತ–ಆತನಿಗೆ ಭವಿಷ್ಯವಾಣಿಯು ಅರುಹಿತು. ಈ ಉಭಯ ಸಂಕಟವನ್ನು ತಪ್ಪಿಸಿಕೊಳ್ಳಲು ಆರಸನು ಯುಡಿಪಸ್‌ನನ್ನು ಸಾಯಲು ಬೆಟ್ಟದಲ್ಲಿ ಬಿಟ್ಟನು. (ಬೇಡಾದ ಕೇಡಾದ ಮಕ್ಕಳನ್ನು ಹೀಗೆ ಬಿಡುವದು ಅವರದೊಂದು ರೂಢಿಯಾಗಿತ್ತು.) ನಿಜವಾಗಿಯೂ ಸಾಯಬೇಕೆಂತ ಆ ಶಿಶುವಿನ ಪಾದದಲ್ಲಿ ಶೂಲವನ್ನು ಜಡಿದು ಹಾಕಲಾಯಿತು. (ಯುಡಿಪಸ್ ಎಂದರೆ ಬಾತಕಾಲಿನವನೆಂತ.) ಆದರೆ ಯುಡಿಪಸನು ಸಾವಿನಿಂದ ಪಾರಾದನು. ನೆರೆಯ ಅರಸನು ಆತನನ್ನು ಸಲಹಿ ಬೆಳೆಸಿದನು. ಎಷ್ಟೋ ವರ್ಷಗಳ ತನಕ ತನ್ನ ಕುರಿತು ಸಾರಿದ ಭವಿಷ್ಯವಾಣಿಯು ಆತನಿಗೆ ಗೊತ್ತೇ ಇದ್ದಿಲ್ಲ, ಅದು ಗೊತ್ತಾಗಿದ್ದು ಕೂಡ ಎರಡನೆಯ ಭವಿಷ್ಯವಾಣಿಯ ಮೂಲಕವೇ. ಆ ಅತ್ಯಂತ ಅಭದ್ರ ಮತ್ತು ಅನಿಷ್ಟವಾದ ಭವಿಷ್ಯವನ್ನು ಕೇಳಿ ಭೀತಿಯಿಂದ ಕಂಗೆಟ್ಟು ಸಾಕು ತಂದೆತಾಯಿಗಳನ್ನು ಬಿಟ್ಟು ಯುಡಿಪಸನು ಒಂದು ದಿನ ದೇಶಾಂತರದಲ್ಲಿ ತನ್ನ ಭಾಗ್ಯ ಪರೀಕ್ಷೆ

ಮಾಡಲಿಕ್ಕೆ ಹೊರಟು ಹೋದನು. ಆದರೆ ಆತನ ನಿಷ್ಠುರನಿಯತಿಯು ಆತನನ್ನು ಹಿಂಬಾಲಿಸಿತು. ತಂದೆಯೊಂದಿಗೆ ಕಲಹ ಮಾಡಿ, ಯಾರೆಂದರಿಯದೇ ಆತನನ್ನು ಕೊಂದೇ ಬಿಟ್ಟನು.

ದೇಶಪರ್ಯಟನ ಮಾಡುತ್ತ ರಾಜಕುಮಾರನು ಥೀಬ್ಸದಲ್ಲಿ ಬಂದು ತಲ್ಪಿದನು. ಆ ನಗರ ರಾಜ್ಯವು ಒಂದು ಭೀಕರ ಸಂಕರೋಗದಿಂದ ಗ್ರಸ್ತವಾಗಿತ್ತು. ಅಲ್ಲಿ ತನ್ನ ದಿವ್ಯ ದೃಷ್ಟಿಯಿಂದ ಒಂದು ಭವಿಷ್ಯವಾಣಿಯ ಬರಹವನ್ನು ಓದಿ ಅರ್ಥ ಹೇಳಿ ಯುಡಿಪಸನು ಪ್ರಜೆಗಳನ್ನು ಸಂಕಟದಿಂದ ಮುಕ್ತಮಾಡಿದನು. ಕೃತಜ್ಞರಾದ ಪ್ರಜೆಗಳು ಆತನನ್ನೇ ತಮ್ಮ ಅರಸನೆಂತ ಆರಿಸಿಕೊಂಡು ಪಟ್ಟಗಟ್ಟಿದರು; ತಮ್ಮ ವಿಧವೆಯಾದ ಪ್ರೌಢರಾಣಿಯನ್ನೇ ಆತನಿಗೆ ಕೊಟ್ಟು ಮದುವೆಮಾಡಿದರು. ತನ್ನ ಹೆಂಡತಿಯಾದವಳು ತನ್ನನ್ನು ಹೆತ್ತಾಕೆಯೆಂಬುದು ಯುಡಿಪಸನಿಗೆ ಹೊಳೆಯಲೇ ಇಲ್ಲ! ಹಲವು ವರ್ಷ ಅವರೀರ್ವರು ಹರುಷದಿಂದ ಕೂಡಿಬಾಳಿದರು. ಅವರಿಗೆ ನಾಲ್ಕು ಮಕ್ಕಳಾದರು. ಆಮೇಲೆ ಯುಡಿಪಸನಿಗೆ ತನ್ನ ರುದ್ರರಹಸ್ಯವು ತಿಳಿದು ಬಂತು. ಮುಂದಿನ ದುರಂತವು ಅತಿದಾರುಣವಾಯಿತು. ಜೋಕಾಸ್ಟಾಳು (ದುರ್ದೈವಿಯಾದ ರಾಣಿಯು) ಉರುಲು ಹಾಕಿಕೊಂಡು ಸತ್ತಳು. ಯುಡಿಪಸನು ಕೃತಕರ್ಮದ ಪ್ರಾಯಶ್ಚಿತ್ತವೆಂತ ತನ್ನ ಕಣ್ಣು ಕಿತ್ತು ಕೊಂಡು ಕ್ರೂರ ಕೊರಗಿನ ಕಗ್ಗತ್ತಲೆಯಲ್ಲಿ ಕಂಗೆಟ್ಟು ಬಾಳನ್ನು ಕಳೆದನು. ಈ ರುದ್ರ ದುರಂತದ ವಸ್ತುವನ್ನು ಸೊಫೊಕ್ಲಿಸ್ ಎಂಬ ಗ್ರೀಕ ಕವಿಯು ತನ್ನ ಅಮರ ನಾಟ್ಯಪ್ರತಿಭೆಯಲ್ಲಿ ಚಿತ್ರಿಸಿದ್ದಾನೆ.

ಡಾ. ಫ್ರಾಯ್ಡನು ತನ್ನ ಮನೋವಿಶ್ಲೇಷಣ ಸಿದ್ಧಾಂತದಲ್ಲಿ ಈ ಪಿತೃಗಾಮಿ–ಮನೊಗಂಡವು ಮೂಲಭೂತವೆಂತಲೂ, ಮಧ್ಯಬಿಂದುವೆಂತಲೂ ಸಾರುತ್ತಾನೆ. 'ಮನೋವಿಶ್ಲೇಷಣದ ಎಲ್ಲ ಶೋಧ–ಸತ್ಯಗಳಲ್ಲಿ ಇದು ಅತ್ಯಂತ ವಿಶೇಷ ವಾಗಿದೆ. ಆ ಸಿದ್ಧಾಂತದ ಎಲ್ಲ ಅನುಮಾನ ನಿರ್ಣಯಗಳು ಈ ಮನೋಗಂಡದ ಸುತ್ತಲೂ ಗುಂಪುಗೂಡುತ್ತವೆ. ಅಷ್ಟೇಕೆ ಈ ಮನೋಗಂಡದ ಶೋಧದ ಸತ್ಯಾಸತ್ಯತೆಯ ಮೇಲೆಯೇ ಮನೋವಿಶ್ಲೇಷಣ ಸಿದ್ಧಾಂತದ ಉಳಿವು–ಅಳಿವು ನಿಂತಿದೆ!' ಫ್ರಾಯ್ಡನ ಬ್ರಿಟಿಶ್ ಅನುಯಾಯಿಗಳಲ್ಲಿ ಮೊದಲನೇ ಮನೋವಿಜ್ಞಾನಿಯೂ, ಆತನ ಸಿದ್ಧಾಂತವನ್ನು ಲೋಕಪ್ರಿಯ ಮಾಡಲು ಬಹಳವಾಗಿ ದುಡಿದ ಲೇಖಕನೂ ಆದ ಡಾ. ಅರ್ನೆಸ್ಟ ಜೋನ್ಸ ಎಂಬ ತಜ್ಞನು ಈ ಅಭಿಪ್ರಾಯವನ್ನು ಪಟ್ಟಿದ್ದಾನೆ.

ತನ್ನಲ್ಲಿ ತಲೆದೋರಿದ ಈ 'ಯುಡಿಪಸ್' ಮನೋಗಂಡವನ್ನು ಶಿಶುವು ಹೇಗೆ

ಬಗೆಹರಿಸಿಕೊಳ್ಳುವದೆಂಬುದರ ಮೇಲೆ, ಅವರ ಶೀಲ-ಚಾರಿತ್ರ್ಯವೂ ಮನಸ್ಥಿತಿಯೂ ಅವಲಂಬಿಸಿರುತ್ತದೆ. ಸಜಾತೀಯ ಪಾಲಕರನ್ನೆ ತನ್ನ ಆರಾಧ್ಯ ಆದರ್ಶವೆಂತ ತಿಳಿದರೆ,-ಮಗನು ತಂದೆಯನ್ನೂ, ಮಗಳು ತಾಯಿಯನ್ನೂ ತಮ್ಮ ಮಮತೆಯ ಮಾದರಿಗಳೆಂತ ಇಟ್ಟುಕೊಂಡರೆ,-ಮುಂದಿನ ಮಾರ್ಗ ಸುರಕ್ಷಿತವಾಗುತ್ತದೆ. ಶಿಶುವಿನಲ್ಲಿ ಬಲಿಯುತ್ತ ಹೋಗುವ ವೈರಭಾವನೆಯು ಕಡಿಮೆಯಾಗುತ್ತ ಹೋಗುತ್ತದೆ. ಅದೇ ಮೇರೆಗೆ ವಿಜಾತೀಯ (ವಿರುದ್ಧಲಿಂಗದ) ಪಾಲಕರ ಕುರಿತು (ಮಗನು ತಾಯಿಯಲ್ಲಿ, ಮಗಳು ತಂದೆಯಲ್ಲಿ) ತಾಳಿದ ಭಾವನೆಯು, ಲೈಂಗಿಕ ಕಾಮನೆಯ ಬದಲು ಸಾಧಾರಣವಾದ ಸ್ನೇಹವಾಗಿ ಪರಿಣಮಿಸುತ್ತದೆ.

ಇನ್ನು ಈ ಪಿತೃಗಾಮಿ–ಮನೋಗಂಡವು.(ಅದು ಪಿತೃಘಾತಕ ಗಂಡವೂ ಅಹುದು) ಏಕೆ ತಲೆದೋರುತ್ತದೆ ? ಏಕೆಂದರೆ ತಂದೆತಾಯಿಗಳು ಕೆಲವೊಂದು ಜೀವಾಳದ ವಿಷಯವನ್ನು ಬಾಳಿನ ಗುಟ್ಟಿನಂತಿದ್ದ ಯಾವದೊ ಜ್ಞಾನವನ್ನು ಅನುಭವನ್ನು, ತಮ್ಮೊಳಗೆ ಹಂಚಿಕೊಂಡಿದ್ದು, ಆ ರಹಸ್ಯವು ತನಗೆ ಗೊತ್ತಿಲ್ಲ, ಇಷ್ಟೇ ಅಲ್ಲ ಅವರ ತಿಳುವಳಿಕೆಯಿಂದ ತನ್ನನ್ನು ಬೇಕೆಂತ ದೂರವಿಡಲಾಗಿದೆ-ಎಂಬೀ ಭಾವನೆಯು ಮಗುವಿನಲ್ಲಿ ಮೊಳೆಯುವದು. ಆದ್ದರಿಂದ ತಂದೆತಾಯಿಗಳ ಈ ಪಾಲುಗಾರಿಕೆಯನ್ನು ತಪ್ಪಿಸಿ ತನ್ನ ಅರಿವಿಗೆ ಅಡ್ಡಬರುವ ಅವರಲ್ಲಿಯೋರ್ವರನ್ನು ಇಲ್ಲವಂತೆ ಮಾಡಿ,-ಪ್ರತಿಸ್ಪರ್ಧಿಯನ್ನು ಹೋಗಲಾಡಿಸಿ, ವಿರುದ್ಧಲಿಂಗದ ಹಿರಿಯ ರೊಂದಿಗೆ ಕೂಡಿ ಆ ರಹಸ್ಯದಲ್ಲಿ ಭಾಗಿಯಾಗಬೇಕೆಂಬ ಕಾಮನೆಯು ಮಗುವಿನಲ್ಲಿ ಮೂಡುತ್ತದೆ. ತಾನು ತಂದೆತಾಯಿಗಳ ಕುರಿತು ಕಲ್ಪಿಸಿದ ವೈರ-ವೃತ್ತಿಯನ್ನು ಅವರೂ ತನ್ನ ಕುರಿತು ಕಾಣಿಸುವರೆಂದು ಶಿಶುವು ಭಾವಿಸುವದು. ತಾನು ಅವರಿಗೆ ಅಹಿತ ಬಗೆದಂತೆ ಅವರೂ ತನಗೆ ಅಹಿತವೆಣಿಸುವರೆಂತ ಅದು ತಿಳಿಯುವದು. ಇದರ ಮೂಲಕ ಭೀಕರ ಭ್ರಮಾಭಾಸಗಳು (Fantasies) ಉಂಟಾಗುವವು. ತಂದೆ ತಾಯಿಗಳ ಕುರಿತಿರುವ ಮಗುವಿನ ಕಾಮನೆಗಳು ಅವಶ್ಯವಾಗಿ ದಮನ ಹೊಂದುವವು. ಆದುದರಿಂದ ಅವುಗಳ ಅಭಿವ್ಯಕ್ತಿಯು (ಪ್ರಕಟೀಕರಣವು) ಸರಲವಾಗಿ, ಪ್ರತ್ಯಕ್ಷವಾಗಿ ಆಗದೇ ಹಗಲುಗನಸು, ಹುಸಿನೆನಸುಗಳ ಹಾದಿ ಹಿಡಿಯುವದು. ಈ ಚಟವು ಮುಂದಿನ ಬಾಳಿನಲ್ಲಿಯೂ ಮುಂದರಿದರೆ, ಮನೋ ವಿಕೃತಿ ಮೂಲಕವಾದ ವ್ಯಾಧಿಗುಳುಂಟಾಗುವವು.

## ವಿರೋಧಕರ ಭೂಮಿಕೆ

ಮನೋವಿಶ್ಲೇಷಣ ಸಿದ್ಧಾಂತದ ವಿವೇಚನೆಯಲ್ಲಿ ಯುಡಿಪಸ್ ಮನೋಗಂಡಕ್ಕೂ,

ಮನೋವಿಜ್ಞಾನದ ವಿವೇಚನೆಯಲ್ಲಿ ಮನೋವಿಶ್ಲೇಷಣಕ್ಕೂ ಮಿತಿಮೀರಿದ ಅವಕಾಶ ಕೊಟ್ಟಂತೆ ಕಾಣಬಹುದಲ್ಲವೇ ? ಆದರೆ ಕೆಲವೊಂದು ಕಾರಣಗಳಿಂದ ಹೀಗೆ ಹೇತು ಪೂರ್ವಕವಾಗಿ ಮಾಡಲಾಗಿದೆ.

ಮೊದಲನೇ ಕಾರಣವೇನೆಂದರೆ, ಪ್ರತಿಯೊಂದು ನಾಗರಿಕ ರಾಷ್ಟ್ರದಲ್ಲಿ ಈ ಸಿದ್ಧಾಂತವು ಅಸಾಮಾನ್ಯವಾದ ಕುತೂಹಲವನ್ನು ಕೆರಳಿಸಿದೆ. ಜಗತ್ತಿನ ಆಸಕ್ತಿಯುವಾದ ವಿಷಯ ಗಳಲ್ಲಿ ಇದು ಮೇಲಿನ ಸ್ಥಾನವನ್ನು ಪಡೆದಿದೆ. ಎರಡನೇದೇನೆಂದರೆ, ಈ ಸಿದ್ಧಾಂತದ ಕುರಿತು ಬಹಳೇ ತಪ್ಪು ತಿಳುವಳಿಕೆಗಳು, ವಿಪರೀತ ವಿಪರ್ಯಸ್ತ ವಿಚಾರಗಳು ರೂಢವಾಗಿವೆ. ಮೂರನೇದೇನೆಂದರೆ, 'ಅರ್ಧಶ್ಲೋಕೇನ ವಕ್ಷ್ಯಾಮಿ । ಯದುಕ್ತಂ ಗ್ರಂಥಕೋಟಿಭಿಃ' ಎಂಬ ಕೈಚಳಕದ ಹುಂಬಜಂಘದಲ್ಲಿ ಒಂದೆರಡು ವಾಕ್ಯಗಳಲ್ಲಿಯೇ ಈ ಸಿದ್ಧಾಂತವನ್ನು ಮಂಡಿಸಿ (ಇಲ್ಲವೆ ಖಂಡಿಸಿ) ತಮ್ಮ ಕೆಲಸ ತೀರಿತೆಂಬ, ಜಗನ್ಮಿಥ್ಯಾವಾದದ ಬ್ರಹ್ಮಸತ್ಯವನ್ನು ಸಾರುವ ಅಟ್ಟಹಾಸದಲ್ಲಿ ಮಾತು ಮುಗಿಸಲು ಬರುವದೆಂಬ ಭ್ರಮೆಯು ಸರ್ವತ್ರ ಕಂಡುಬರುತ್ತದೆ. ಆದರೆ ಇದು ಭ್ರಮೆಯೆಂಬುದು ತೀರ ಸತ್ಯವು. ಮನೋವಿಶ್ಲೇಷಣ ಸಿದ್ಧಾಂತವು ಬಹಳೇ ಕ್ಲಿಷ್ಟವೂ ಜಟಿಲವೂ ಸೂಕ್ಷ್ಮವೂ ಆದ ವಿಷಯವು. ಮೇಲೆ ನಿವೇದಿಸಿದ ರೂಪರೇಷೆಯು ಅದರ ತೀರ ಸ್ಥೂಲವಾದ ಶಬ್ದ ಚಿತ್ರವು. ಇದರಿಂದ ಆ ಸಿದ್ಧಾಂತದ ಅನಂತವಾಗಿ ಬೆಳೆದ ಶಾಖೋಪಶಾಖೆಗಳ ಸಂಕೀರ್ಣತೆಯ ಯಥಾರ್ಥ ಕಲ್ಪನೆಯು ನಿಜವಾಗಿಯೂ ಬರಲಿಕ್ಕಿಲ್ಲ. ಮನೋವಿಶ್ಲೇಷಣ ಸಿದ್ಧಾಂತದ ವಿಷಯವೇ ಗಡುಚಾದುದರಿಂದ ಅದನ್ನು ನೇರವಾಗಿ ಬರೆಯುವ ಭರದಲ್ಲಿ ಅರ್ಥ ಹಾನಿಯಾಗು ವದು ಅನಿವಾರ್ಯವು. ಆದ್ದರಿಂದ ಹೇರಳ ವಿಪರ್ಯಸ್ತ ಕಲ್ಪನೆಗಳು ಈ ಕುರಿತು ರೂಢವಾಗಿರುವಲ್ಲಿ ಆಶ್ಚರ್ಯವಿಲ್ಲ. ಆದರೆ ಇಂಥಹ ವಿಪರ್ಯಸ್ತ ಕಲ್ಪನೆಗಳಿಗೆ ಇನ್ನೂ ಒಂದು ಬಲವಾದ ಕಾರಣವಿರುತ್ತದೆ. ಅದೇನೆಂದರೆ, ಈ ಸಿದ್ಧಾಂತದ ಕುರಿತು ಇರುವ ಗಾಢವಾದ ವೈರವೃತ್ತಿಯು. ಈ ಸಿದ್ಧಾಂತದ ವಿಷಯವೇ ಅಷ್ಟೊಂದು ಜೀವಾಳದ್ದಾಗಿರುವದರಿಂದ ಅದರ ಚರ್ಚೆಯೂ ಅಷ್ಟೇ ಅಪ್ರಿಯ ರೀತಿಯಲ್ಲಿ ನಡೆಯುವದರಿಂದ ಈ ಇದರ ಕುರಿತು ನಿರ್ಲಿಪ್ತ ವೃತ್ತಿಯಿಂದ ನೈಯಾಯಿಕ ದೃಷ್ಟಿಯಿಂದ ಬರೆಯುವದು ಎಷ್ಟೋ ಸಲ ಬಿಗಿಯಾಗುತ್ತದೆ. ಪೂರ್ಣ ಪುರಸ್ಕಾರ ಇಲ್ಲವೇ ತೀವ್ರ ತಿರಸ್ಕಾರ ಇವೆರಡರ ನಡುವಿನ ವೃತ್ತಿ ಯನ್ನಿಟ್ಟುಕೊಳ್ಳಲು ಬೇಕಾದ ತೂಕವು ತಪ್ಪಿ ವಿಪರ್ಯಸ್ತ ವಿವೇಚನೆಯು ಜರುಗುತ್ತದೆ. ತಿದ್ದಿದ ತಿಳುವಳಿಕೆಯಾಗಲಾರದಲ್ಲಿ ತಪ್ಪು ತಿಳುವಳಿಕೆಮಾಡಿ ಕೊಳ್ಳುವದು ಅದೆಷ್ಟು ಸುಲಭ ? ಆದ್ದರಿಂದ ಕೆಲವರಿಗೆ ಅದು ಮಾನವೀ ವರ್ತನ ಮತ್ತು ವ್ಯವಹಾರಗಳ ಕೂಟ ಪ್ರಶ್ನೆಗಳನ್ನು ಮೂಲಗ್ರಾಹಿಯಾಗಿ ಬಿಡಿಸಲು

ಬೆಳಕು ಬೀರುವ ಶೋಧ-ಜ್ಯೋತಿ (search-light)ಯು ಸಾಕ್ಷಾತ್ಕಾರವಂತಾದರೆ, ಇನ್ನೂ ಕೆಲವರಿಗೆ, ಮಾನವೀ ಸ್ವಭಾವದ ತೀರ ದೂಷಿತವಾದ ಕಲ್ಪನೆಯನ್ನು ಮಾಡಿಕೊಡುವ ಬುದ್ಧಿ-ಭೇದಕ ಮಿಥ್ಯಾಚಾರ-ಅತ್ಯಾಚಾರವೆನಿಸುತ್ತದೆ.

ಡಾ. ಫ್ರ್ಯುಡನ ಸಿದ್ಧಾಂತದ ವಿರುದ್ಧ ತೀರ ಸಾಮಾನ್ಯವಾದ ಆಕ್ಷೇಪ ಅಧಿಕ್ಷೇಪ ವೆಂದರೆ, ಅದು ಕೇವಲ ಕಾಮುಕರ್ಮದಿಂದ ತುಂಬಿದೆಯೆಂಬುದು, ಈ ವಿರೋಧ ತೀರತೀಕ್ಷ್ಣವಾದ ಪ್ರಹಾರವು 'ಯುಡಿಪಸ್' ಮನೋಗಂಡದ ಮೇಲೆಂಬುದು ಬೇರೆ ಹೇಳಬೇಕಾಗಿಲ್ಲ. ಅವಾಚ್ಯವೆನಿಸುವಷ್ಟು ಹೇಯವಾದ ವಿಚಾರ-ವಿಕಾರಗಳನ್ನು ಮಾನವನಲ್ಲಿ ಆರೋಪಿಸುವ ಅಪರಾಧವು ಫ್ರ್ಯುಡನಿಂದಾಗಿದೆಯಂತ ವಿರೋಧಕರ ಮತ. ಆದರೆ ತನ್ನ ಮತ-ಪಂಥಕ್ಕೆ ಇಂಥ ವಿರೋಧ-ವೈರಿಗಳ ಅಗ್ನಿಪರೀಕ್ಷೆ ಯೊಳಗಿಂದ ಪಾರಾಗಬೇಕಾಗುವದೆಂಬುದು ಆ ವಿಜ್ಞಾನಿಗೆ ಗೊತ್ತಿತ್ತು. ಈ ವಿರೋಧವು ಇನ್ನೂ ಮುಗಿದಿಲ್ಲ. ಇನ್ನೆಷ್ಟೋ ವರ್ಷಗಳತನಕ ಮನೋವಿಶ್ಲೇಷಣ ಸಿದ್ಧಾಂತವು ವಿವಾದ-ಪ್ರತಿವಾದಗಳ ಝಂಝಾಕೇಂದ್ರವಾಗಿಯೇ ಉಳಿಯುವದು. ಏಕೆಂದರೆ, ಈ ಸಿದ್ಧಾಂತದಲ್ಲಿಯ ಹಲವು ಅಂಶಗಳು ಇನ್ನೂ ಸಂದಿಗ್ಧವಾಗಿವೆ. ಅಸ್ಪಷ್ಟವಾಗಿವೆಯೆಂತ ಎಲ್ಲರಿಗಿಂತ ಮೊದಲು ಫ್ರ್ಯುಡನೆ ಒಪ್ಪಿಕೊಳ್ಳುತಾನೆ, ಒತ್ತಿಹೇಳುತ್ತಾನೆ. ವಿಜ್ಞಾನವೆಂಬ ಅರ್ಥದಲ್ಲಿ ಮನೋವಿಶ್ಲೇಷಣವು ಇನ್ನೂ ಎಳೆವಯಸ್ಸಿನಲ್ಲಿದೆ. ಫ್ರ್ಯುಡನೇ ಸ್ವತಃ ತನ್ನ ಸಿದ್ಧಾಂತದ ಮಹತ್ವದ ಅಂಶಗಳ ಕುರಿತು ತನ್ನ ಅಭಿಪ್ರಾಯಗಳನ್ನು ತಿದ್ದಿರುವದುಂಟು. ಆದರೆ ಇದರಲ್ಲಿ ಆಶ್ಚರ್ಯ ವೇನೂ ಇಲ್ಲ. ತಾವು ತಿಳಿದ ತತ್ವಗಳ ತಳಹದಿಯನ್ನು ಆಗಾಗ್ಗೆ ತೋಡಿ ನೋಡಿ ಹೊಸ ತಥ್ಯಗಳನ್ನು ತಿರುತಿರುಗಿ ತೂಗಿ ತಿದ್ದಿ ಸತ್ಯದ ಹೆಚ್ಚು ಹೆಚ್ಚು ಸಮೀಪ ಹೋಗುವ ವೃತ್ತಿಯು ನಿಜವಾದ ವೈಜ್ಞಾನಿಕ ದೃಷ್ಟಿಯು. ಆದರೆ ಮೋಜಿನ ಮಾತೆಂದರೆ ಹೀಗೆ ತಿದ್ದುಪಡಿಗೆ ಎಡೆಯಿರುವದೆಂಬುದೇ ಮನೋವಿಶ್ಲೇಷಣದ ಸಿದ್ಧಾಂತದ ವೈಜ್ಞಾನಿಕತೆಯ ವಿರುದ್ಧ ಪ್ರಮಾಣವೆಂತ ತಿಳಿದು ಫ್ರ್ಯುಡನನ್ನೇ ಫ್ರ್ಯುಡನ ವಿರುದ್ಧ ಹೋರಾಡಲು ಹೂಡುವ ಪ್ರತಿಪಕ್ಷದ ಹುದ್ದರಿಗಳೂ ಹಲವರಿದ್ದಾರೆ !

## ಮನೋವಿಶ್ಲೇಷಣತಂತ್ರದ ಪೂರ್ವಕತೆ :

ಇರಲಿ. ಇನ್ನು ನಾವು ಮನೋವಿಶ್ಲೇಷಣದ ಕಾರ್ಯಪದ್ಧತಿಯ ಕುರಿತು ತುಸು ಹೊರಳುವಾ. ಈ ಕುರಿತು ವಿವೇಚಿಸುವಾಗ ಮೂರು ಅಂಶಗಳನ್ನು ಸಂಕ್ಷೇಪವಾಗಿ ಉಲ್ಲೇಖಿಸಬೇಕಾಗಿದೆ; ಅವೆಂದರೆ, ಮನೋವಿಕೃತಿಯ ಚಿಕಿತ್ಸೆ, ಕನಸುಗಳ

ಮೀಮಾಂಸೆ, ಮತ್ತು ಮಾತಿನ ತಪ್ಪುಗಳೂ, ದಿನನಿತ್ಯದ ಚಿಕ್ಕ ದೊಡ್ಡ ಮರವುಗಳೂ ಆಗಿವೆ.

ಡಾ. ಸಿಗ್ಮಂಡ ಫ್ರ್ಯಾಡನು ಜೆಕೊಸ್ಲೊವ್ಹೇಕಿಯಾದಲ್ಲಿ ಹುಟ್ಟಿದವನು. ಆದರೂ ವಯಸ್ಸಿನ ನಾಲ್ಕನೇ ವರ್ಷದಿಂದ ವಿಯೆನ್ನಾ ಪಟ್ಟಣದಲ್ಲಿಯೇ ಆತನ ಎಲ್ಲ ಬಾಳು ಕಳೆಯಿತು. (ಮುಪ್ಪಿನಲ್ಲಿ, ಯಹೂದಿಯೆಂಬ ಮಹದಪರಾಧಕ್ಕಾಗಿ ಹಿಟ್ಲರನ ಕೃಪೆಯಿಂದ ಆತನಿಗೆ ಆಸ್ಟ್ರಿಯಾ ದೇಶವನ್ನು ಬಿಟ್ಟು ಇಂಗ್ಲಂಡದ ಆಶ್ರಯ ಪಡೆಯಬೇಕಾಯಿತು.) ಆತನ ವೈದ್ಯಕೀಯ ವ್ಯವಸಾಯವು ವಿಶೇಷವಾಗಿ ಮಜ್ಜಾತಂತು ವಿಕಾರ ವ್ಯಾಧಿಗಳ ತಜ್ಞನೆಂತ ಸಲಹ ಕೊಡುವದರಲ್ಲಿಯೇ ಕಳೆಯಿತು. ಈ ಸಂದರ್ಭದಲ್ಲಿ ಒಂದು ಜಾತಿಯ ಮಜ್ಜಾವಿಕಾರಗಳ ಉಪಚಾರ ತಂತ್ರವೆಂತ ಮನೋವಿಶ್ಲೇಷಣವು ಉಂಟಾಯಿತು.

ಈಮೊದಲು ಫ್ರ್ಯಾಡನು ಯುರೋಪದ ಅತ್ಯಂತ ಪ್ರಸಿದ್ಧರೆಂತಾದ ಅಂದಿನ ಅಧಿಕಾರಿ ತಜ್ಞರ ಬಳಿಯಲ್ಲಿ ವ್ಯಾಸಂಗ ಮಾಡಿದ್ದನು. ಮಜ್ಜಾವಿಜ್ಞಾನಿಯೆಂತ ಹೆಸರಾದ ಫ್ರೆಂಚ ವೈದ್ಯನಾದ ಜೀನ ಮಾರ್ಟಿನ್ ಶಾರಕೊ ಎಂಬಾತನಿಂದ 'ಹಿಸ್ಟೇರಿಯಾ' (ಉನ್ಮಾದವ್ಯಾಧಿ) ದ ವಿಷಯವಾಗಿ ಫ್ರ್ಯಾಡನು ಬಹಳ ಅಭ್ಯಾಸ ಮಾಡಿದ್ದನು. ಈ ವ್ಯಾಧಿಯು ಕೇವಲ ಹೆಂಗಸರಿಗೇ ಆಗುವದೆಂತ ಅಂದಿನ ಕಲ್ಪನೆಯಿತ್ತು. ಹಿಸ್ಟೇರಿಯಾ ರೋಗವನ್ನು ಸಂಮೋಹನತಂತ್ರ, ಹಿಪ್ನೊಟಿಸಮ, (Hypnotism) ದಿಂದ ಗುಣಪಡಿಸಲಾಗುವದೆಂತ ಆತನು ನೋಡಿದನು. ವಿಯೆನ್ನಾಕ್ಕೆ ಮರಳಿದ ಮೇಲೆ ತನ್ನ ವೈದ್ಯಕೀಯ ವ್ಯವಸಾಯದಲ್ಲಿ, ಕಿಕ್ಕಿರಿದು ನೆರೆಯುವ ಇಂಥ ರೋಗಿಗಳನ್ನು ಸಂಮೋಹನೆಯ (ಹಿಪ್ನೊಟಿಕ್) ಪ್ರೇರಣೆಗಳಿಂದಲೇ ಮುಖ್ಯವಾಗಿ ಉಪಚರಿಸಲಾರಂಭಿಸಿದನು. ಆದರೆ ಈ ತಂತ್ರದಿಂದ ಆತನು ವ್ಯವಸಾಯದಲ್ಲಿ ಯಶಸ್ವಿಯಾಗಿ ಲೋಕಪ್ರಿಯತೆಯನ್ನು ಬೆಳೆಸಿಕೊಂಡರೂ, ಕ್ರಮೇಣ ಈ ತಂತ್ರದ ಕುರಿತೇ,-ಹಿಪ್ನೊಟಿಕ್ ಪ್ರೇರಣೆಯ ಕುರಿತೇ,–ಆತನಲ್ಲಿ ಅಸಮಾಧಾನವುಂಟಾ ಯಿತು. ಏಕೆಂದರೆ ಪ್ರತಿಯೊರ್ವ ರೋಗಿಯೂ ಸಂಮೋಹನೆಯ ಪ್ರೇರಣೆಗೆ ಒಳಪಡಲಾರನೆಂದೂ, ಒಳಪಟ್ಟವರಲ್ಲಿ ಕೂಡ ಹಲವರು ಅದರಿಂದ ಸಾಕಷ್ಟು ಆಳವಾಗಿ ಪ್ರಭಾವಿತರಾಗುವದಿಲ್ಲವೆಂದೂ ಆತನು ಮನಗಂಡನು. ಆಗ ೧೮೮೯ ರಲ್ಲಿ ಫ್ರ್ಯಾಡನು ಲೊರೆನ್ ಪ್ರಾಂತದಲ್ಲಿ ನಾನ್ಸೀ ಎಂಬಲ್ಲಿ ಹೋಗಿ ಅಲ್ಲಿಯ ಪ್ರೊ. ಬರ್ನ್ಹಿಮ ಎಂಬ ವೈದ್ಯನ ಕಾರ್ಯಪದ್ಧತಿಯನ್ನು ನೋಡಿ ಕೊಂಡನು. ಆಗ ಬರ್ನ್ಹಿಮನು ಸಂಮೋಹನಾ ವಿದ್ಯೆಯಲ್ಲಿಯ ಪ್ರಯೋಗಗಳ ಮೂಲಕ ತಜ್ಞರ ಕುತೂಹಲಕ್ಕೆ ಪಾತ್ರನಾಗಿದ್ದನು. ಅಲ್ಲಿಯ ನಿರೀಕ್ಷಣವಲ್ಲಿ

ಡಾ. ಫ್ರ್ಯಾಡನ ಮೇಲೆ ಒಂದು ಘಟನೆಯ ಪ್ರಭಾವವು ಬಹಳವಾಗಿ ಆಯಿತು.

ಸಂಮೋಹನಾ ನಿದ್ರೆಯಿಂದ ಎಚ್ಚತ್ತು ಎದ್ದ ಒಬ್ಬ ರೋಗಿಗೆ ನಿದ್ರೆಯಲ್ಲಿದ್ದಾಗ ಅಂದದ್ದನ್ನೆಲ್ಲ ತಿರುಗಿ ಹೇಳೆಂತ ಬರ್ನ್ಹೀಮನು ಸೂಚಿಸಿದನು. ತನಗೆ ಏನೂ ನೆನಪಿಲ್ಲವೆಂತ ರೋಗಿಯು ಮೊದಲು ಕಡ್ಡಾಯವಾಗಿ ಅಂದನು. ಆದರೆ ಹೇಳೇ ತೀರಬೇಕೆಂತ ವೈದ್ಯನು ಒತ್ತಾಯಮಾಡಿದನು. ಆಗ ಆಗ್ರಹಕ್ಕಾಗಿ ರೋಗಿಯು ನೆನಪಿನಿಂದ ತನ್ನ ಹಿಂದಿನ ಮಾತುಗಳನ್ನೆಲ್ಲ, ಮೊದಮೊದಲು ಮಸುಮಸು ಕಾಗಿಯೂ ಮುಂದೆ ಮುಂದೆ ತೀರ ತಿಳಿಯಾಗಿಯೂ ತಪ್ಪದೆ ಹೇಳಿದನು.

ಈ ಘಟನೆಯಿಂದ ಫ್ರ್ಯಾಡನ ವಿಚಾರ ಚಕ್ರಕ್ಕೆ ಚಾಲನೆ ಸಿಕ್ಕಿತು. ಆ ರೋಗಿಯು ಸಂಮೋಹನೆಯ ಪ್ರಭಾವದಿಂದ ನಿದ್ರೆ ಹೋದಾಗ ನುಡಿದ ಮಾತುಗಳ ಅರಿವನ್ನು ಪೂರ್ಣವಾಗಿಟ್ಟುಕೊಂಡಿದ್ದನು. ಆದರೆ ಈ ಅರಿವು ಪೂರ್ಣವಾಗಿ ಅಜಾಗ್ರತ ವಾಗಿತ್ತು. ಅದು ಹಾಗೆಯೇ ಅಜಾಗ್ರತವೇ ಉಳಿಯುತ್ತಿತ್ತು. ವೈದ್ಯನು ವಿಶಿಷ್ಟ ಪ್ರಶ್ನೆ ಕ್ರಮದಿಂದ ಆಳದಲ್ಲಿ ಹುದುಗಿಕೊಂಡ ಅರಿವನ್ನು ಜಾಗ್ರತೆಯಲ್ಲಿ ತಂದನು. ಇದರ ಮೇಲಿಂದಲೇ ಮನುಷ್ಯರ ತಿಳುವಳಿಕೆಗೆ,–ಜಾಗ್ರತ ಪ್ರಜ್ಞೆಗೆ–ನಿಲುಕ ದಿದ್ದರೂ, ಗುಪ್ತವಾಗಿ ಮನಸ್ಸಿನಲ್ಲಿ ಪ್ರಬಲವಾದ ವ್ಯಾಪಾರ ಕ್ರಮಗಳು ಜರಗುತ್ತಿರಲು ಶಕ್ಯವಿದೆಯೆಂಬ ಸಂಗತಿಯ ಕುರಿತು ಫ್ರ್ಯಾಡನು ವಿಚಾರ ಮಾಡತೊಡಗಿದನು.

ಕೆಲವು ವರ್ಷ ಮುಂಚೆಯೇ, ವಿಯೆನ್ನಾದ ಡಾ. ಜೊಸೆಫ್ ಬ್ರೂಅರ ಎಂಬ ಸಂಶೋಧನಾಭಿರುಚಿಯುಳ್ಳ ಒಬ್ಬ ಕುಟುಂಬ ವೈದ್ಯನೊಂದಿಗೆ ಫ್ರ್ಯಾಡನು ಪರಿಚಯ ಬೆಳೆಸಿದ್ದನು. ಇವರೀರ್ವರಲ್ಲಿ ೧೪ ವರ್ಷಗಳ ಅಂತರವಿದ್ದರೂ (ಬ್ರೂಅರನು ಹಿರಿಯನಾಗಿದ್ದನು) ಘನಿಷ್ಟ ಮಿತ್ರತ್ವವು ಕೂಡಿತು. ಪರಸ್ಪರರ ವೈಜ್ಞಾನಿಕ ಆಸಕ್ತಿಯ ವಿಷಯಗಳಲ್ಲಿ ಪರಸ್ಪರರು ಪಾಲುಗಾರರಾದರು. ಈ ಪಾಲುಗಾರಿಕೆಯ ಶಾಸ್ತ್ರವಿನೋದದ ಸಂಭಾಷಣೆಗಳಲ್ಲಿ ತಾನು ತೀರ ಹೊಸದೊಂದು ಪದ್ಧತಿಯಿಂದ ಹಿಸ್ಟೀರಿಯಾ ವ್ಯಾಧಿಯನ್ನು ಗುಣಪಡಿಸುತ್ತಿದ್ದೇನೆಂಬುದರ ಕತೆಯನ್ನು ವಯೋವೃದ್ಧ ಜ್ಞಾನವೃದ್ಧ ಬ್ರೂಅರನು ತನ್ನ ಪ್ರತಿಭಾಸಂಪನ್ನನಾದ ಎಳೆ ಗೆಳೆಯನಿಗೆ ಹೇಳಿದನು. ಓರ್ವ ರೋಗಿಣಿಯು ಹಿಸ್ಟೀರಿಯಾ ವಿಕಾರದ ವಿಕೋಪ ದಿಂದ ಬಳಲುತ್ತಿರುವಾಗ ಆ ವಿಕೋಪದಲ್ಲಿ ಅವಳ ಮನಸ್ಸಿನಲ್ಲಿ ಹೆಚ್ಚು ಒತ್ತಾಯ ದಿಂದ ಬರುವ ಯಾವದೊಂದು ಭ್ರಮಾಭಾಸದ ವಿಷಯವಾಗಿ, ಮಾತನಾಡಲು ಅವಳಿಗೆ ಅಣಿಗೊಳಿಸಿದಾಗ ಅವಳ ಉನ್ಮಾದದ ಬಾಧೆಯು ಕುಗ್ಗಿದ್ದು ಆತನಿಗೆ

ಕಂಡು ಬಂದಿತ್ತು. ಅಂದಿನಿಂದ ಆಕೆಯನ್ನು ಮೊದಲು ಸಂಮೋಹನೆಯ ಪ್ರೇರಣೆಯಿಂದ ನಿದ್ದೆ ಹಚ್ಚಿ, ನಿದ್ದೆಯಲ್ಲಿ ಆಕೆಯ ಮನೋಗತವಾದ ವಿಶಿಷ್ಟ ಭ್ರಮಾಭಾಸವನ್ನು ಗೊತ್ತುಹಚ್ಚಿ, ಆಮೇಲೆ ಆಕೆಯು ಎಚ್ಚತ್ತಾಗ ನಿದ್ದೆಯಲ್ಲಿಯ ಮಾತುಕತೆಗಳನ್ನು ನೆನಪು ಮಾಡಿ ಬಣ್ಣಿಸಲು ಆಕೆಗೆ ಕೇಳಿಕೊಳ್ಳುವ ಪರಿಪಾಠವಿಟ್ಟನು. ಇದರಿಂದ ಅವಳ ಉನ್ಮಾದವ್ಯಾಧಿಯು ವಾಸಿಯಾಯಿತು. ಹೀಗೆ ಕೆಲವೊಂದು ಸ್ಮೃತಿಯ ಲೋಪದಿಂದ ಉನ್ಮಾದ ಲಕ್ಷಣಗಳು ತಲೆದೋರಿದ್ದು, ಆ ನಷ್ಟವಾದ ಸ್ಮೃತಿಯನ್ನು ತಿರುಗಿ ಪಡೆದೊಡನೆಯೇ ಆ ಲಕ್ಷಣಗಳು ತನ್ನಾರೆ ಇಲ್ಲವಾಗುವವೆಂತ ಬ್ರ್ಯೂಅರನು ಸಿದ್ಧಮಾಡಿದನು.

ಬ್ರ್ಯೂಅರನ ಈ ಪದ್ಧತಿಯನ್ನು ಸ್ವೀಕರಿಸಿ ವ್ಯವಹರಿಸಲು, ಅದು ಅತ್ಯಂತ ಯಶಸ್ವಿಯೆಂತ ಫ್ರ್ಯೂಡನು ಮನಗಂಡನು. ಈ ಹೊಸ ಕ್ಷೇತ್ರದಲ್ಲಿಯ ತಮ್ಮ ಕಾರ್ಯದ ಕುರಿತು ಈರ್ವರೂ ಒಂದು ಪುಸ್ತಕವನ್ನು ಪ್ರಕಟಿಸಿದರು (೧೮೯೩). ಎರಡು ವರ್ಷಗಳ ನಂತರ 'ಉನ್ಮಾದ ರೋಗದ ವ್ಯಾಸಂಗಗಳು' ಎಂಬ ದೊಡ್ಡ ಗ್ರಂಥವನ್ನೊಂದು ಪ್ರಸಿದ್ಧಿಸಿದರು. ಮನೋವಿಶ್ಲೇಷಣದ ಪ್ರಾಯೋಗಿಕ ಪ್ರಯತ್ನಗಳ ನಿರ್ದೇಶವು ಈ ಗ್ರಂಥದಲ್ಲಿಯೇ ಕಂಡುಬರುತ್ತದೆ. ಉನ್ಮಾದ ರೋಗದ ಉಗಮ, ಲಕ್ಷಣಗಳನ್ನು ವಿವೇಚಿಸುವಾಗ, ಯಾವದೊಂದು ಭಾವನೆಯನ್ನು ಒಡ್ಡುಹಾಕಿ ಅಡ್ಡಗಟ್ಟಿದಾಗ ಉನ್ಮಾದ ಲಕ್ಷಣವು ಹಿಸ್ಟೇರಿಯಾದ ಲಕ್ಷಣವು ಉಂಟಾಗುತ್ತದೆಂತ ಅದರಲ್ಲಿ ಸೂಚಿಸಲಾಗಿತ್ತು. ಹೀಗೆ ತಡೆದ ಭಾವನೆಯು ತನ್ನ ಶಕ್ತಿಯನ್ನು ವ್ಯಯಮಾಡಲು ಸಾಮಾನ್ಯ ಸಂತೃಪ್ತಿಯ ಮಾರ್ಗವಿಲ್ಲದ ಮೂಲಕ ವಿಕೃತ ದ್ವಾರವನ್ನು ಕಲ್ಪಿಸಿಕೊಳ್ಳುವದರಿಂದ ಹೀಗೆ ಉನ್ಮಾದ ಲಕ್ಷಣವು ಪರಿಣಮಿಸುತ್ತದೆಂತ ಪ್ರತಿಪಾದಿಸಲಾಗಿತ್ತು.

ಇದರ ಪರಿಣಾಮವಾಗಿ ಸಂಶೋಧಕರು ಎರಡು ನಿರ್ಣಯಗಳಿಗೆ ತಲ್ಪಿದರು. ಮೊದಲನೆಯದು, ಭಾವನಾಜೀವನದ ಆತ್ಯಂತಿಕ ಮಹತ್ವ. ಮತ್ತು ಎರಡನೆಯದು, ಜಾಗ್ರುತ ಮತ್ತು ಅಜಾಗ್ರುತವೆಂತ ಮಾನಸಿಕ ಕ್ರಿಯೆಗಳಲ್ಲಿ ಮಾಡಬೇಕಾದ ಭೇದದ ಅಗತ್ಯ. ಏಕೆಂದರೆ, ಯಾವುದೇ ವ್ಯಕ್ತಿಯು ಜಾಗ್ರುತವಾಗಿ–ಅರ್ಥಾತ್ ತಿಳುವಳಿಕೆಯಿಂದ–ತನ್ನಲ್ಲಿ ಉನ್ಮಾದಲಕ್ಷಣಗಳನ್ನು ಮೂಡಿಸಿಕೊಳ್ಳಲು ಯತ್ನಿಸಲಾರನು. ಆದ್ದರಿಂದ ಇಂಥ ಚಟುವಟಿಕೆಯು ತಿಳುವಳಿಕೆಗೂ ನಿಲುಕದ ಆಳವಾದ ಮನಸ್ಥರದಲ್ಲಿ ನಡೆಯುವುದೆಂತ ಒಪ್ಪಬೇಕಾಯಿತು.

### 'ಸ್ವೈರಸಾಹಚರ್ಯ'ದ ಶೋಧ :

ಇದುವರೆಗೆ ಬ್ರ್ಯೂಅರ ಮತ್ತು ಫ್ರ್ಯೂಡ ಇವರೀರ್ವರೂ ಕೈಯಲ್ಲಿ ಕೈಯಿಕ್ಕಿ

ಕೆಲಸಮಾಡುತ್ತಿದ್ದರು. ಕೆಲಸವಲ್ಲಿ ಬ್ರ್ಯೂಅರನದು ಹಿರಿಯ ಭೂಮಿಕೆಯಾಗಿತ್ತು. ಸಿದ್ಧಾಂತದ ವಿವಿಧ ಅಂಶಗಳ ಮೇಲೆ ಈರ್ವರಲ್ಲಿಯೂ ಮತಭೇದಗಳಿದ್ದವು; ಆದರೂ ಅನ್ಯೋನ್ಯ ಒಪ್ಪಂದವನ್ನು ಕೆಡಿಸುವಂಥ ಗಂಭೀರ ಪ್ರಮಾಣದಲ್ಲಿದ್ದಿಲ್ಲ. ಆದರೆ ಅವರ ಬೃಹದ್ಗ್ರಂಥವು ಪ್ರಕಟವಾದ ಸ್ವಲ್ಪೇ ಅವಧಿಯ ನಂತರ, ಫ್ರ್ಯಾಡನು ಒಂದು ಅತೀ ಮಹತ್ವದ ಶೋಧವನ್ನು ಮಾಡಿದನು. ಅದೇ ಆತನ ಜೀವನದ ಪರಿವರ್ತನದ ಬಿಂದುವಾಯಿತು. ಇಷ್ಟೇ ಅಲ್ಲ, ಡಾ. ಬ್ರ್ಯೂಅರನ ಸಾಹಕಾರ್ಯ–ಸಾಹಚರ್ಯದಿಂದ ದೂರ ಹೋಗುವ ಸೀಳುದಾರಿಯ ಆರಂಭವೂ ಆಯಿತು. ತಾನು ಮಾಡಿದ ಶೋಧದಿಂದ ಇತರ ವಿಜ್ಞಾನಿಗಳಿಗೂ ವಿರೋಧಕರಿಗೂ ಆದ ಆಶ್ಚರ್ಯದಷ್ಟೇ ಆಶ್ಚರ್ಯದ ಆಘಾತವು ಸ್ವತಃ ಫ್ರ್ಯಾಡನಿಗೇ ಅನಿಸಿತು. 'ಉನ್ಮಾದ ಮುಂತಾದ ಮಜ್ಜಾವಿಕೃತಿಯ ಹಿಂದೆ ಕಾರ್ಯಕಾರಿಯಾಗುವ ಉದ್ರೇಕವು ಯಾವುದಾದರೂ ಒಂದು ಭಾವನೆಯದಿರದೆ, ವಾಡಿಕೆಯಾಗಿ, ಲೈಂಗಿಕ ಸ್ವರೂಪದ್ದೇ ಇರುತ್ತದೆಂತ ನಾನು ಮನಗಂಡೆನು. ಇಂಥ ಭಾವೋದ್ರೇಕವು ವರ್ತಮಾನ ಲೈಂಗಿಕ ಸಂಘರ್ಷದ್ದಾಗಿರುತ್ತದೆ ಇಲ್ಲವೆ ಪೂರ್ವದ ಲೈಂಗಿಕ ಅನುಭವಗಳ ಪರಿಣಾಮವಾಗಿರುತ್ತದೆ'–ಹೀಗೆಂತ ತನ್ನ ಶೋಧದ ಕುರಿತು ಫ್ರ್ಯಾಡನು ಬರೆದಿದ್ದಾನೆ.

ಈ ಶೋಧನ ಬೆಲೆಯು ಫ್ರ್ಯಾಡನಿಗೆ ಬಹಳೇ ಹೆಚ್ಚಿನದಾಯಿತು. ಆತನು ಲೋಕಪ್ರಿಯತೆಗೆ ಎರವಾಗಬೇಕಾಯಿತು. ತನ್ನ ಶೋಧದ ಅನುಸಾರವಾಗಿ, ಬಂದ ಬೇನಿಗರಿಗೆಲ್ಲ ಅವರ ಕಾಮಜೀವನದ ಕುರಿತು, ಲೈಂಗಿಕ ಪೂರ್ವೇತಿಹಾಸದ ಕುರಿತು ಆತನು ಕೇಳತೊಡಗಿದನು. ಸಹಜವಾಗಿಯೇ ಅನೇಕರು ಇದನ್ನು ನಿಷೇಧಿಸಿದರು. ಇದರಿಂದ ಆತನ ವೈದ್ಯಕೀಯ ವ್ಯವಸಾಯಕ್ಕೆ ಬಹಳ ಹಾನಿಯಾಯಿತು. ಆದರೂ, ತನ್ನ ಶೋಧವನ್ನು ಸಮರ್ಥಿಸಲಿಕ್ಕೆ ಸಾಕಾಗುವಷ್ಟು ಆಧಾರಗಳು ಆತನಿಗೆ ಮಜ್ಜಾವಿಕೃತಿಯಿಂದ ನರಳುವ ಬೇನಿಗರಿಂದ ದೊರಕಿದವು.

ಭೌತಿಕಸೃಷ್ಟಿಯಲ್ಲಿರುವಂತೆ ಮಾನಸಿಕಸೃಷ್ಟಿಯಲ್ಲಿಯೂ ಕಾರ್ಯ-ಕಾರಣ ಸಂಬಂಧದ ನಿಯಮವು ಅಷ್ಟೇ ನಿಷ್ಠುರವಾಗಿ ಅನ್ವಯಿಸುವದೆಂತ ನಂಬಿ ಫ್ರ್ಯಾಡನು ತನ್ನ ಸಂಶೋಧನದಲ್ಲಿ ಮುಂದರಿದನು. ಪ್ರತಿಯೊಂದು ಮನೋವ್ಯಾಪಾರಕ್ಕೆ ಒಂದು ನಿಶ್ಚಿತವಾದ ಯೋಗ್ಯ ಕಾರಣವಿರಲಿಕ್ಕೆಬೇಕು ಎಂತ ಆತನ ದೃಢಭಾವನೆಯಾಯಿತು. ಆತನ ವೈದ್ಯಕೀಯ ವ್ಯವಸಾಯದಲ್ಲಿಯ ಅನುಭವವು ಆಳವಾದಂತೆ ಅಗಲವಾದಂತೆ, ಈ ಮಾತು ಮತ್ತಿಷ್ಟು ಬದ್ಧಮೂಲವಾಯಿತು. ವರ್ತಮಾನ, ಮನಃಶಾಂತಿ, ಮನೋವ್ಯಥೆಗಳ ಕಾರಣಗಳು ರೋಗಿಗಳ ಜೀವನದಲ್ಲಿ ಪೂರ್ವ

ದಲ್ಲಿಯೇ ಒದಗಿದ ಘಟನೆಗಳಲ್ಲಿರುವವೆಂತ ಆತನು ಹೆಚ್ಚು ಹೆಚ್ಚು ಮನಗಂಡನು; ಆಯುಷ್ಯದ ಆರಂಭದಲ್ಲಿ ಘಟಿಸಿದ ಕೆಲವೊಂದು ಸಂಗತಿಗಳ ಸ್ಮೃತಿಗಳು ಜಾಗ್ರತ ಮನಸ್ಥರದಿಂದ ಅಳಸಿ ಮಾಯವಾಗಿ ಹೋದರೂ, ಅಜಾಗ್ರತಸ್ಥರದಲ್ಲಿ ಅವು ಆಳವಾಗಿ ಹುದುಗಿ ನಿಂತ ಮೂಲಕ ಮುಂದಿನ ವಿಕೃತಿಗಳಿಗೆ ಮುಳುವಾಗುತ್ತ ವೆಂಬುದು ಹೆಚ್ಚು ಹೆಚ್ಚು ಮನದಟ್ಟಾಯಿತು. ಆದ್ದರಿಂದ ಎಲ್ಲರ ಮನಸ್ಸಿಗೂ ಅನ್ವಯಿಸಿದರೆ ಯಶಸ್ವಿಯಾಗಬೇಕಾದ ವಿಸ್ಮೃತಿಯ ಆಳದಿಂದ ಅನುಭವಗಳನ್ನು ಜಾಗ್ರತಸ್ಥರದಲ್ಲಿ ಎಳೆದು ತರುವ ಸಾಮಾನ್ಯ ಉಪಚಾರ ತಂತ್ರವನ್ನೊಂದು ಆತನು ಕಂಡುಹಿಡಿಯಬೇಕಾಯಿತು. ಏಕೆಂದರೆ ಅಂಥ ಸ್ಮೃತಿಗಳು ಅಜಾಗ್ರತ ಮನೋಭಾಗದಲ್ಲಿಯೇ, ಅಡಗಿ ಉಳಿದು ತಮ್ಮ ಚಟುವಟಿಕೆ ನಡೆಸುತ್ತಿರುವನಕ ಬೇರಿಗೆ ತಾಗಿದ ಹುಳದಂತೆ 'ಬಹುಶಾಖಾನಂತ'ವಾದ ಈ ಮನೋವೃಕ್ಷದ ತಿಳಿಲು-ರಸವನ್ನೇ ಹಾಳುಗೆಡಹಿ ಗತಿಗೇಡಾಗುವ ಆಪತ್ತಿಯು ತಪ್ಪಿದ್ದಲ್ಲ.

ಆತನು ಕೊನೆಗೆ ಪರಿಶೋಧಿಸಿ ಪ್ರಯೋಗದಲ್ಲಿ ತಂದ ತಂತ್ರಕ್ಕೆ ಕಾರ್ಯಪದ್ಧತಿಗೆ- 'ಸ್ವೈರ್ ಸಾಹಚರ್ಯ' (free association) ವೆಂಬ ಹೆಸರು. ಇದು ಒಂದು ಬಗೆಯ ಕಲ್ಪನಾಸಂಗತಿಯ ತತ್ವವೇ ಸರಿ. ಈ ತಂತ್ರವನ್ನು ಸಿದ್ಧಪಡಿಸುವಾಗ ಫ್ರ್ಯೂಡನು ಮೊದಲು ತನ್ನೆದುರಿನ ರೋಗಿಗೆ, ಅವನ ಇಲ್ಲವೆ ಅವಳ ವಿಕೃತಿಯ ಲಕ್ಷಣಗಳಿಗೆ ಕಾರಣವಾಗಿರಬಹುದೆಂತೆನಿಸಿದ ಹಿಂದಿನ ಘಟನೆಗಳನ್ನು ಶಕ್ಯವಿದ್ದಷ್ಟು ಯತ್ನದಿಂದ ಏಕಾಗ್ರಚಿಂತನದಿಂದ ನೆನಪುಮಾಡಿ ಬಣ್ಣಿಸಲು ಹೇಳುತ್ತಿದ್ದನು. ಆದರೆ ಹೀಗೆ ಯತ್ನದಿಂದ ಚಿಂತಿಸಿ ಸ್ಮರಣಮಾಡುವ ತಂತ್ರವು ಕೆಲವೊಂದು ಮಟ್ಟದ ತನಕ ಉಪಯೋಗಿಯಾಗುತ್ತಿತ್ತು. ರೋಗಿಯ ಬಾಳಿನಲ್ಲಿಯ ಅತ್ಯಂತ ಜೀವಾಳದ, ತೀರ ವ್ಯಕ್ತಿಗತವೆಂತೆನಿಸಬಹುದಾದ ಘಟನೆಯೊಂದಿಗೆ ಸ್ಮೃತಿಯು ಸುತ್ತಿಕೊಂಡಿದ್ದಾಗ, ಇಲ್ಲವೆ ರೋಗಿಯ ದೃಷ್ಟಿಯಿಂದ ನಿರರ್ಥಕವೆಂತ ಅನಿಸುವ ಸಂಗತಿಗಳನ್ನು ನೆನಪುಮಾಡಿಸುವ ಪ್ರಸಂಗ ಬಂದಾಗ ರೋಗಿಯು ಮುಂದರಿಯುತಿದ್ದಿಲ್ಲ; ಆ ಯತ್ನಕ್ಕಾಗಿ ಬೇಕಾಗುವ ಏಕಾಗ್ರತೆಯು ತಪ್ಪಿ ಹೋಗುತ್ತಿತ್ತು. ರೋಗಿಯ ಮಾನಸಿಕ ವಿರೋಧ ಒತ್ತಾಯಗಳ ವಿರುದ್ಧ ಆತನಿಂದ (ಆಕೆಯಿಂದ) ಸ್ಮರಣಮಾಡಿಸುವದು ಅಸಫಲವಾಗುವಂತೆ ಅಸಹ್ಯ ದಣುವಿನದೂ ಆಗುತ್ತಿತ್ತು. ಸಫಲವಾದರೂ ನೆನಪಿಗೆ ಬಂದು ಸಂಗತಿಯು ಯಥಾರ್ಥವಿರುತಿದ್ದಿಲ್ಲ; ಅರ್ಧ ಸತ್ಯವಾಗುತಿತ್ತು.

ಈ ತೊಡಕು ಮುಂದೆ ಬಂದೊಡನೆಯೇ, ಫ್ರ್ಯೂಡನು ಪ್ರತಿಭಾಮಯವಾದ ಮತ್ತು ಎದೆಗಾರಿಕೆಯ ಒಂದು ಅನುಮಾನವನ್ನು ಮಾಡಿದನು. ಆತನಿಗೆ ಕಾರ್ಯಕಾರಣ

ವಿಪಾಕ ಕ್ರಮದಲ್ಲಿ ಅಚಲವಾದ ನಿಷ್ಠೆಯಿತ್ತೆಂತ ಹಿಂದೆ ಹೇಳಿದೆಯಷ್ಟೇ. ಭೌತಿಕ ಪ್ರಪಂಚದಂತೆ ಮಾನಸಿಕ ಪ್ರಪಂಚದಲ್ಲಿಯೂ 'ಯದೃಚ್ಛೆ' 'ಯೋಗಾಯೋಗ' ಗಳಿಗೆ ಎಡೆಯಿಲ್ಲವೆಂತ ಆತನ ನಂಬುಗೆ. ಆದ್ದರಿಂದ ಸ್ಮರಣ ಮಾಡಿಸುವ ತಂತ್ರದಲ್ಲಿ ತಾನು ಹೇತುಪೂರ್ವಕವಾದ ಯತ್ನ ಚಿಂತನಗಳನ್ನು, ಮನಸ್ಸನ್ನು ದಣಿಸುವ ಏಕಾಗ್ರತೆಯ ಸಾಧನೆಯನ್ನು ತೆಗೆದುಹಾಕಿದರೂ ಪರಿಣಾಮದಲ್ಲಿ ಹಾನಿಯಾಗಲಿ ಕ್ಕಿಲ್ಲವೆಂತ ಆತನು ತಿಳಿದನು. ಮನಸ್ಸು ಏಕಾಗ್ರವಿಲ್ಲದಿರುವಾಗ ಸ್ವೈರವಾಗಿ ಹಾಯ್ದು ಹೋಗುವ ವಿಚಾರಮಾಲಿಕೆಗಳು ಕೂಡ ಬರೇ ಯೋಗಾಯೋಗದಿಂದ ಹೊಳೆಯುವಂಥವಲ್ಲ. ಅವುಗಳ ಅಸಂಗತವೆನಿಸುವ ಪ್ರಮಾಣದಲ್ಲಿಯೂ ಒಂದು ಸುಸಂಗತ ಕ್ರಮವಿರಲಿಕ್ಕೆಬೇಕು. ಅವುಗಳ ಗತಿಯು ಕೂಡ ಏನಾದರೊಂದು ಕಾರಣದಿಂದ ನಿಶ್ಚಿತವಾಗಿರಲೇಬೇಕು. ಮತ್ತು ಈ ಏನಾದರೊಂದು ಕಾರಣವು (ಮನಸ್ಸಿನ ಏಕಾಗ್ರತೆಯಿಲ್ಲವಾದುದರಿಂದ) ಅಜಾಗ್ರತ ಮನೋಭಾವವೇ ಆಗಿರ ಬೇಕು-ಎಂತ ಫ್ರ್ಯೂಡನು ಅನುಮಾನ ಮಾಡಿದನು.

ಈ ಅನುಮಾನದಿಂದ ಆತನು ತನ್ನ ಕಾರ್ಯಪದ್ಧತಿಯನ್ನು ಬದಲು ಮಾಡಿದನು: ಏಕಾಗ್ರಮಾಡಿ ಹುರಿಗೊಳಿಸುವ ಬದಲು ಮನಸ್ಸನ್ನು ಸಡಿಲು ಬಿಡಲು ರೋಗಿಗಳಿಗೆ ಹೇಳಹತ್ತಿದನು. ಏನೂ ಆಯಾಸ ಪಡದೆ, ಮನಸ್ಸನ್ನು ತೀರ ತೆರವು ಮಾಡಿ ಅಲ್ಲಿ ತನ್ನಾರೆ ಸುಳಿಯುವ ವಿಚಾರಗಳನ್ನೆಲ್ಲ ನಿವೇದಿಸುತ್ತ ನಡೆಯಲು ತಿಳಿಸಿದನು. ಹೀಗೆ ನಿವೇದಿಸುವಾಗ ಯಾವ ವಿಚಾರವನ್ನೂ,-ಅದು ಎಷ್ಟೇ ಹಾಸ್ಯಾಸ್ಪದವೆನಿಸಲಿ, ಅಸಂಗತವೆನಿಸಲಿ,-ತಿದ್ದದೇ ತಿರುಗಿಸದೇ, ನಿಯಂತ್ರಿಸದೇ, ತಲೆಯಲ್ಲಿ ತೋಚಿದ್ದೆಲ್ಲ ವಿವರಿಸುತ್ತ ಹೋಗಲು ಭಿನ್ನವಿಸಿದನು. ಹೀಗೆ ವಿವರಿಸುತ್ತ ಹೋಗುವಾಗ ವಿವಿಧ ವಾದ ವಿಚಾರಗಳ ಆ ವಿಸ್ತಾರವಾದ ಜಾಳಿಗೆಯು-ಕ್ರಮೇಣ ರೋಗಿಯ ಮನೋ ವಿಕೃತಿ ವ್ಯಾಧಿಯ ಬೇರನ್ನು ತನ್ನ ಸುತ್ತಿನಲ್ಲಿ ಸಿಲುಕಿಸಿಕೊಂಡು ಬೆಳಕಿಗೆ ಎಳೆಯುತ್ತದೆ. ಈ ಕ್ರಮವು ಬಹಳೇ ಉದ್ದವೂ, ತೊಡಕಿನದೂ ಇರುತ್ತದೆ. ಏಕೆಂದರೆ ತನ್ನ ಮನಸ್ಸನ್ನು ತೀರ ತೆರವಾಗಿಡುವದು ಯಾರಿಗೂ ಸುಲಭವಲ್ಲ; ವಿಚಾರಗಳನ್ನು ಕ್ರಮೇಣ ನಿಯಂತ್ರಿಸದೇ ಇರುವದಕ್ಕೆ ತೀರ ಬಿಗಿಯಾಗಿರುತ್ತದೆ. ವಿಚಾರಗಳ ಸುಳುವು ಹೊಳವುಗಳಲ್ಲಿ ಅನಿವಾರ್ಯವಾಗಿ ಲಕ್ಷವು ಸೆಳೆಯಲ್ಪಟ್ಟು, ಕೆಲವು ತಿದ್ದಲ್ಪಡುತ್ತವೆ; ಕೆಲವು ನಿರರ್ಥಕವೆಂತ ಹತ್ತಿಕ್ಕಲ್ಪಡುತ್ತವೆ. ಕೆಲವು ವಿಚಾರಗಳು ಅತಿರಂಜಿತವಾಗಿ, ಇಲ್ಲವೇ ಇದ್ದಕ್ಕಿಂತ ಕಡಿಮೆ ರೂಪದಲ್ಲಿ ವ್ಯಕ್ತ ವಾಗತೊಡಗುತ್ತವೆ. ಆದರೂ, ಕುಶಲವಾದ, ಎಡಬಿಡದ, ಧೋರಣೆಯಾದ ನಿಯಂತ್ರಣದಲ್ಲಿ, ರೋಗಿಯು ನಿವೇದಿಸಿದ ಸ್ವೈರ ವಿಚಾರಸಂಗತಿಯ ವಿಪುಲ ದ್ರವ್ಯದಲ್ಲಿ ತನ್ನ ವಿಶ್ಲೇಷಣಕ್ಕೆ ಬೇಕಾದ ಎಲ್ಲ ಸಾಮುಗ್ರಿಯನ್ನು ಮನೋವಿಜ್ಞಾನ

ತಜ್ಞನು ಅಳವಡಿಸಿಕೊಳ್ಳುತ್ತಾನೆ. ಇಲ್ಲಿ ಒಂದು ಮಾತು ಲಕ್ಷಿಸಬೇಕು. ಸ್ವೈರ ವಿಚಾರ ಸಾಹಚರ್ಯವೆಂದರೇ ಮನೋವಿಶ್ಲೇಷಣವಲ್ಲ. ರೋಗಿಯ ಮನಸ್ಸಿನ ಒಳಗಿಂದ ವಿಶ್ಲೇಷಣ ತಜ್ಞನಿಗಾಗಿ ಅದು ಮೂಲದ್ರವ್ಯವನ್ನು ಒದಗಿಸಿ ಕೊಡುತ್ತದೆ. ಈ ವಿಚಾರ ದ್ರವ್ಯದಿಂದ ತಜ್ಞನು ವಿಶ್ಲೇಷಣ ಕಾರ್ಯವನ್ನು ಮಾಡುತ್ತಾನೆ. ವಿಶ್ಲೇಷಣವೆಂದರೇನು ? ರೋಗಿಯ ಮನೋಗತವಾದ ಎಲ್ಲ ಸಹಜ ವಿಚಾರ ಗಳನ್ನು ಸ್ವೈರ ಸಾಹಚರ್ಯದಿಂದ ತಿಳಿದುಕೊಂಡ ನಂತರ ಅವುಗಳ ಅನ್ವಯಾರ್ಥವನ್ನು ಸರಿಯಾಗಿ ಹಚ್ಚಿ ಉಪಪತ್ತಿಯನ್ನು ಸ್ಥಾಪಿಸುವದೇ ವಿಶ್ಲೇಷ ಣವು. ಈಕಾರ್ಯವು ಉದ್ದವೂ ಕ್ಲಿಷ್ಟವೂ, ಕೇವಲ ಉಚ್ಚ ಶಿಕ್ಷಿತನಾದ ವಿಶ್ಲೇ ಷಕನೇ ಕೈಗೊಳ್ಳತಕ್ಕಂತಹದೂ ಇರುತ್ತದೆ. ರೋಗಿಗಳ ದೃಷ್ಟಿಯಿಂದಲೂ ವಿಶ್ಲೇಷಣವು ಬಹಳ ವೆಚ್ಚ ಬೀಳುವಂತಹದೂ, ಬಹಳ ಸಮಯ ತಾಗು ವಂತಹದೂ ಮೇಲಾಗಿ ಬಹಳೇ ಮನೋಯಾತನೆಯುಳ್ಳಂತಹದೂ ಆಗಿದೆ. ವೈದ್ಯಕದಲ್ಲಿ ಶಸ್ತ್ರಕ್ರಿಯೆಯು ಹೇಗೋ ಹಾಗೆಯೇ ಮನೋವಿಶ್ಲೇಷಣದ ಚಿಕಿತ್ಸೆಯನ್ನು ಅನಿವಾರ್ಯ ಅವಶ್ಯಕತೆಯಿದ್ದರೆ ಮಾತ್ರ ಪಡೆಯಬೇಕು. ಶಕ್ಯವಿದ್ದರೆ ಅದನ್ನು ತಪ್ಪಿಸಿಕೊಳ್ಳುವದುಚಿತ.

ಅಜಾಗ್ರತ ಮನಸ್ತರವು ಜಾಗ್ರತದಂತೆ ಕಾರ್ಯಮಾಡುವದಿಲ್ಲ. ಅದಕ್ಕೆ ಕಾಲದ ಕಲ್ಪನೆಯೆ ಇರುವದಿಲ್ಲ. ಅದಕ್ಕೆ ಅಹುದು-ಅಲ್ಲಗಳಲ್ಲಿಯ ಭೇದವೇ ಮಾನ್ಯವಿರು ವದಿಲ್ಲ ! ಅದರ ವಿಚಾರ ವಿಕಾರಗಳು ವ್ಯಕ್ತವಾಗುವ ಬಗೆಯು ವಾಚಿಕವಲ್ಲ. (ಮಾತಿನಲ್ಲಿ) ಶಾಬ್ದಿಕವಲ್ಲದ ಅರ್ಥ ಚಿತ್ರಗಳಲ್ಲಿ ಅಜಾಗ್ರತ ಮನೋಭಾವಗಳು ಮೂಡುತ್ತವೆ. ಈ ಅರ್ಥ ಚಿತ್ರಗಳು-ರೂಪಕಗಳು-ಬಹುಶಃ ಪ್ರತಿಕಾತ್ಮಕ ವಾಗಿರುತ್ತವೆ. ಅಜಾಗ್ರತ ಮನೋಭಾಗಕ್ಕೆ ನಿರ್ಣಯ ಶಕ್ತಿಯಿರುವದೇ ಇಲ್ಲ. ಅದೊಂದು ವಿಶಾಲವಾದ ಕಾಮನಾ ಸಮೂಹವಾಗಿರುತ್ತದೆ. ಶಕ್ಯಾಶಕ್ಯತೆಯ ಕಲ್ಪನೆಯು ಅದನ್ನಾಳುವದಿಲ್ಲ. ಅದನ್ನು ಆಳುವ ತತ್ವವು ಒಂದೇ; ವಿಶ್ಲೇಷಣ ತಜ್ಞರು ಅವನ್ನು ಸುಖ-ದುಃಖ ತತ್ವವೆಂತ ಕರೆಯುವರು. ಆಜಾಗ್ರತ ಮನೋ ಕಾಮನೆಗಳ ಒಂದೇ ಒಂದು ಗುರಿಯು ಸುಖವನ್ನು ಹುಡುಕುವುದು ಮತ್ತು ದುಃಖವನ್ನು ತಪ್ಪಿಸಿಕೊಳ್ಳುವದಾಗಿರುತ್ತದೆ. ವಾಸ್ತವತೆಯ ತತ್ವವು ಕೂಡ ಅಜಾಗ್ರತವು ಒಪ್ಪುವದಿಲ್ಲ. ವಾಸ್ತವ ಸತ್ಯದ ಪ್ರಭಾವವು ಜಾಗ್ರತ ಮನಸ್ಥರದ ಮೇಲೆ ಮಾತ್ರ ಆಗುತ್ತದೆ.

### ಸ್ವಪ್ನಮೀಮಾಂಸೆ, ಕನಸಿನ ಕಟ್ಟು

ಅಜಾಗ್ರತ ಮನೋಭಾಗದ ವಿಚಾರಕ್ರಮಗಳನ್ನು ಕನಸುಗಳ ಮೀಮಾಂಸೆಯಲ್ಲಿ

ಪೂರ್ಣವಾಗಿ ಅಭ್ಯಸಿಸಲಾಗಿದೆ. ಸ್ವೈರಸಾಹಚರ್ಯ ಪದ್ಧತಿಯಿಂದ ಪ್ರಾಪ್ತವಾದ ವಿಚಾರದ್ರವ್ಯದಲ್ಲಿ ಕನಸುಗಳು ಬಹಳ ಭಾಗವನ್ನಾಕ್ರಮಿಸಿರುವುದು ಫ್ರ್ಯೂಡನಿಗೆ ಕಂಡುಬಂತು. ಆದ್ದರಿಂದ ಕನಸುಗಳ ಹುಟ್ಟು–ಹುರುಳುಗಳ ಗುಟ್ಟನ್ನು ಹುಡುಕಿ ಹಿಡಿಯಲಿಕ್ಕೆ ಆತನು ಹವಣಿಸಿದನು. ಇದರ ಪರಿಣಾಮವಾಗಿ ಸ್ವಪ್ನಮೀಮಾಂಸೆಯು ಮನೋವಿಶ್ಲೇಷಣದ ತಂತ್ರದಲ್ಲಿ ಮಧ್ಯಸ್ಥಾನವನ್ನು ಪಡೆಕೊಂಡಿತು. ಇದಕ್ಕೆ ಕಾರಣವೇನೆಂದರೆ, ಕೆಲವರೇ ಮನೋವಿಕೃತಿಗಳಿಂದ ಬಳಲುವ ರೋಗಿಗಳಾಗುತ್ತಾರೆ. ಆದರೆ ಎಲ್ಲರೂ ನಿದ್ದೆಯಲ್ಲಿ ಕನಸು ಕಾಣುವವರೇ ಇರುತ್ತಾರೆ. ಆದುದರಿಂದ ಕನಸುಗಳಿಗೆ ಕೆಲವೊಂದು ಹುರುಳಿದ್ದು, ಅಜಾಗ್ರತ ಮನೋಭಾಗದ ಚಟುವಟಿಕೆಯಿಂದ ಉಂಟಾಗುತ್ತವೆಂತ ತೋರಿಸಿದಲ್ಲಿ ಮನೋವಿಶ್ಲೇಷಣವು ಪ್ರತಿಯೊಬ್ಬರಿಗೂ ಅನ್ವಯಿಸುವ, ಆಸಕ್ತಿಯೆನಿಸುವ ವಿಷಯವಾಗುವದು ; ವಿಶಿಷ್ಟ ವಿಕೃತಿಗಳಿಗೆ ಸಂಬಂಧಿಸಿದ ವೈದ್ಯಕವೆಂತ ಮಾತ್ರ ಉಳಿಯುವದಿಲ್ಲ.

ಕನಸುಗಳಲ್ಲಿ ಪರಿಣಮಿಸುವ ವಿಚಾರ ಕ್ರಮಗಳು ಮನೋವಿಕೃತಿಯನ್ನುಂಟು ಮಾಡುವ ವಿಚಾರ–ವಿಕಾರಗಳ ಕ್ರಮಗಳಿಗೆ ಹೋಲುತ್ತವೆಂತ ಸಿದ್ಧವಾದರೆ, ಕನಸು ಕಾಣುವ ಸಾಮಾನ್ಯ ಮನಸ್ಥಿತಿಯ ಮನುಷ್ಯನಿಗೂ, ಮನೋವಿಕೃತಿಯುಳ್ಳ ರೋಗಿಗೂ ಕೇವಲ ಅಂಶತಃ ಭೇದವಿದೆಯಂತಾಗುತ್ತದೆ, ಆತನಿಗೀತ ಈತನಲ್ಲಿ ಮನಸ್ಸಿನ ಬಿಗುವಿನಾಯಾಸವೂ ಅಜಾಗ್ರತ ಮನೋಭಾವಗಳಿಗೆ ಜಾಗ್ರತ ಮನೋಭಾಗವು ಮಾಡುವ ವಿರೋಧದ ಪ್ರಬಲತೆಯೂ ಎಷ್ಟೋ ಪಟ್ಟು ಹೆಚ್ಚಿದೆಯೆಂತ ಸಿದ್ಧವಾಗುತ್ತದೆ. ಸಾಮಾನ್ಯ ಮನಸ್ಥಿತಿ ಮತ್ತು ವಿಕೃತ ಮನೋವೃತ್ತಿ ಇವುಗಳಲ್ಲಿಯ ಈ ಹೋಲಿಕೆಯ ಅಂಶದ ಸಿದ್ಧಾಂತವು ಹಲವು ಮನೋವೈಜ್ಞಾನಿಕರು ಒಪ್ಪುವದಿಲ್ಲ. ಇದನ್ನು ಪೂರ್ಣ ಒಪ್ಪುವವರು ಮನೋವಿಶ್ಲೇಷಕರೇ ಸರಿ. ಆದರೆ ಈ ಸಿದ್ಧಾಂತವು ಸತ್ಯವೆಂತ ಸಿದ್ಧವಾದಲ್ಲಿ, ಅದೊಂದು ಮನೋವಿಜ್ಞಾನ ಕ್ಷೇತ್ರದಲ್ಲಿಯ ಅತ್ಯಂತ ಮಹತ್ವದ ಮತ್ತು ಪ್ರಭಾವಶಾಲಿಯಾದ ಶೋಧವೆನ್ನಲು ಅಡ್ಡಿಯಿಲ್ಲ. ಏಕೆಂದರೆ, ಭಾಸಕವಿಯು 'ಸ್ವಪ್ನವಾಸವದತ್ತ'ದಲ್ಲಿ ಕನಸಿನ ಉಪಯೋಗ ಮಾಡಿಕೊಂಡಂತೆ, ಮನುಷ್ಯನ ಮಾನಸಿಕ ಶಕ್ತಿಯ ಬಗ್ಗೆಯನ್ನೇ ನಿಯಂತ್ರಿಸಲು, ನಿರ್ದೇಶಿಸಲು ಕನಸಿನ ಉಪಯೋಗ ಮಾಡಿಕೊಳ್ಳಬಹುದು; ಏಕೆಂದರೆ, ಮಾನವೀ ವರ್ತನದ ಹಿಂದಿನ ಗುಪ್ತಗಾಮಿನಿಯಾದ ಶಕ್ತಿಸ್ರೋತ್ರವನ್ನು ವ್ಯಕ್ತಪಡಿಸುವ ಸಾಧನವೆ ಕನಸೆಂತ ಸಿದ್ಧವಾಗುವದು.

ಯಾವುದೊಂದು ಕನಸಿನ ಕುರಿತು ಯಾವನೊಬ್ಬನಿಗೆ ತೋಚುವ ಮೊದಲನೆಯ ಸಂಗತಿಯೆಂದರೆ, ಅನುಭವಕ್ಕೆ ಬಂದ ಕನಸಿನಲ್ಲಿ ಸಾಮಾನ್ಯ ಮತ್ತು ಭ್ರಾಮಕ

ಅಭ್ಯಾಸ ಇವುಗಳ ವಿಚಿತ್ರ ಮಿಶ್ರಣವಿರುತ್ತದೆಂಬುದು. ಎರಡನೆಯ ಸಂಗತಿಯೆಂದರೆ, ಕನಸುಗಳು ನಮ್ಮ ನೆನಪಿನಿಂದ ಅಳಿಸಿ ಮಾಯವಾಗುವ ವೇಗ. ಕೆಲವು ವರ್ಷಗಳ ತನಕ ಅಚ್ಚಳಿಯದೆ ನೆನಪಿನಲ್ಲುಳಿಯುವ ಕನಸಿನ ಚಿತ್ರಗಳೂ ಇವೆ. ಆದರೂ ಸಾಮಾನ್ಯವಾಗಿ, ನಾವು ಪೂರ್ಣ ಎಚ್ಚರಾಗುವಷ್ಟರಲ್ಲಿಯೇ ಕನಸು ಕರಗಿ ಹೋಗಹತ್ತುತ್ತದೆ. ಹಲವು ವೇಳೆ ನಿದ್ದೆ ಹರಿದೆದ್ದಾಗ ಕನಸಿನ ಯಾವುದೇ ಕುರುಹು ನೆನಪಿನಲ್ಲಿ ಉಳಿದಿರುವದಿಲ್ಲ. ಕನಸು ಬಿದ್ದಿತ್ತು-ಎಂತಿಷ್ಟೇ ಅರಿವು ಉಳಿದಿರುತ್ತದೆ. ಫ್ರಾಯ್ಡನಿಗೆ ಇವೆಲ್ಲ ಲಕ್ಷಣಗಳು ಬಹಳೇ ಅರ್ಥಪೂರ್ಣವಾಗಿ ತೋರಿದವು. ಅದುವರೆಗೆ ಹೊರಗಿನ ಪ್ರಚೋದನೆಗಳಿಂದ ನಿದ್ದೆಯಲ್ಲಿ ತೊಂದರೆಗಳುಂಟಾಗಿ ಕನಸುಗಳಾಗುವವೆಂತ ವಿಜ್ಞಾನಿಗಳು ತಿಳಿಯುತ್ತಿದ್ದರು. ಇದಕ್ಕೆ ತೀರ ವಿರುದ್ಧವಾದ ಭೂಮಿಕೆಯನ್ನು ಫ್ರಾಯ್ಡನು ಪ್ರತಿಪಾದಿಸಿದನು. ಕನಸುಗಳ ಹೇತುವೇ ನಿದ್ದೆಯನ್ನು ಕಾದಿಡುವುದಾಗಿದೆ-ಅವು ನಿದ್ದೆಗೆಡಿಸುವ ತೊಂದರೆಗಳಲ್ಲವೆಂತ ಆತನು ಸಾಧಿಸಿದನು. ಕನಸಿನ ಆರಂಭವು ಒಂದು ಪ್ರಚೋದನೆಯಿಂದ ಇರಬಹುದು. ಈ ಪ್ರಚೋದನೆ ಶಾರೀರಿಕವಿರಬಹುದು, ಮಾನಸಿಕವಿರಬಹುದು, ಬಹಿರಂಗವಿರಬಹುದು, ಅಂತರಂಗದ್ದಿರಬಹುದು. ಈ ಪ್ರಚೋದನೆಗೆ ತಕ್ಕ ಪಾರುಪತ್ಯವಾಗದಿದ್ದರೆ ಅದು ನಿದ್ದೆಯನ್ನು ಕೆಡಿಸುತ್ತದೆ. ಇಂಥಲ್ಲಿ ಕನಸು ಆ ಪ್ರಚೋದನೆಯೊಂದಿಗೆ ಯಾವದಾದರೊಂದು ಅಜಾಗ್ರತವಾದ ದಮಿತವಾದ ಕಾಮನೆಯನ್ನು ಹೊಂದಿಕೆ ಹಾಕುತ್ತದೆ; ಮತ್ತು ಅವೆರಡರ ಹೊಂದಿಕೆಯಲ್ಲಿ ಒಂದು ಅನುಭವವನ್ನು ಹೆಣೆದು ಕಾಮನಾತೃಪ್ತಿಯನ್ನು ತೋರಿಸಿ ಮಲಗಿದವನಿಗೆ ಸುಖವಾಗಿಸಿ, ನಿದ್ದೆಯನ್ನು ಸುರಕ್ಷಿತವಾಗಿ ಸಾಗಿಸುತ್ತದೆ.

ತೀರ ಚಿಕ್ಕಮಕ್ಕಳ ಕನಸುಗಳಲ್ಲಿ ಈ ಕಾಮನಾಪೂರ್ತಿಯಕ್ರಮವು ಬಹಳ ಸಳರತೆಯಿಂದ ತೋರಿಬರುತ್ತದೆ. ಚಿಕ್ಕ ಹುಡುಗನಿಗೆ ಊಟದ ವೇಳೆಗೆ ಆತನ ಮೆಚ್ಚುಗೆಯ ಕಡಬು ಬಡಿಸಿತ್ತು. ಆದರೆ ಅದು ಆತನಿಗೆ ಸಾಕಷ್ಟು ಅನಿಸಲಿಲ್ಲ. ಈ ಅನಿಸಿಕೆಯು ಹಾಗೆಯೇ ಮನಸ್ಸಿನಲ್ಲಿಯೇ ತಿಳಿದು ನಿದ್ದೆಯಲ್ಲಿಯೂ ಒತ್ತಾಯದಿಂದ ತೋರಿಬರುತ್ತದೆ. ಒಂದು ಪ್ರಚಂಡವಾದ ಕಡಬು ಗುಡ್ಡದಂತೆ ತನ್ನ ಮುಂದಿದೆ, ಅದನ್ನು ಯಥೇಷ್ಟವಾಗಿ ಕಚ್ಚಿ ತಿನ್ನುತ್ತಿರುವೆನೆಂತ ಕನಸು ಕಾಣುತ್ತಾನೆ. ಪ್ರೌಢರ ಕನಸುಗಳೂ ಬಹಳೇ ಹೆಚ್ಚು ಜಟಿಲವಾಗಿರುತ್ತದೆ. ಆದರೆ ಪ್ರತಿಯೊಂದು ಕನಸು ಒಂದು ಕಾಮನಾಪೂರ್ತಿಯಾಗಿರುತ್ತವೆ. ಎಲ್ಲ ಕನಸುಗಳೂ ಲೈಂಗಿಕ ಕಾಮನೆಯ ತೃಪ್ತಿಯುಳ್ಳವುಗಳಲ್ಲ, ಇರಲಿ. ಕನಸನ್ನು ಕಟ್ಟುವ ಘಟಕಗಳೆಂದರೆ– ಯಾವದಾದರೊಂದು ಒಗೆಯ ಪ್ರಚೋದನೆ ಮತ್ತು ಒಂದು ಅಜಾಗ್ರತ ಮನೋಕಾಮನೆ. ಇವೆರಡು ಕೂಡಿ, ಕನಸಿನ ಒಳಗಿನ ದೃಶ್ಯವಾಗುವವು. ಆದರೆ ಈ

ದ್ರವ್ಯವು ಕನಸು ಕಾಣುವವನ ಜಾಗ್ರತ ಮನೋ ಭಾಗದಲ್ಲಿ ಪ್ರವೇಶಿಸಲಾರದು. ಅಲ್ಲಿ ಪ್ರವೇಶಿಸಬೇಕಾದರೆ ಅವುಗಳಿಗೆ ಅಜಾಗ್ರತ ಮನೋಕಾಮನೆಗಳಿಗೆ–ದರ್ಶನೀಯವಾದ ಒಂದು ರೂಪ ಕೊಡಬೇಕಾಗುತ್ತದೆ. ಈ ರೂಪಾಂತರವೇ ಕನಸಿನ ಕಟ್ಟಡ. ಇದರ ಫಲಿತವೇ ಕನಸಿನ ಕನಸು–ತೋರಿಬರುವ ಸ್ವಪ್ನಾನುಭವ.

ಪ್ರಚೋದನೆ-ಕಾಮನೆಗಳ ಸಂಮಿಶ್ರ ದ್ರವ್ಯದ ಈ ರೂಪಾಂತರವು ಮೂರು ಪ್ರಕ್ರಿಯೆಗಳಿಂದೊಡಗೂಡಿದೆ. ಸಂಕ್ಷೇಪನ, ಆದೇಶೀಭವನ, ಮತ್ತು ಪ್ರತೀಕಾತ್ಮಕತೆ ಎಂಬಿವೇ ಮೂರು ಪ್ರಕ್ರಿಯೆಗಳು. ಸಂಕ್ಷೇಪನವೆಂದರೆ, ಎರಡು ಇಲ್ಲವೆ ಹಲವು ವ್ಯಕ್ತಿ ಸ್ಥಲಗಳನ್ನು ಕೂಡಿಸಿ ಒಂದೇ ಚಿತ್ರವಾಗುವಂತೆ ಮಾಡುವದು; ಅಥವಾ ಪಲವು ವ್ಯಕ್ತಿ ಇಲ್ಲವೆ ಸ್ಥಲಗಳ ಅಂಶಗಳನ್ನು ಆಯ್ದುಕೊಂಡು ಒಂದೇ ಕಣಸು ಕಟ್ಟುವದು. ಆದೇಶಿಭವನವೆಂದರೆ, ಮಹತ್ವದ ವ್ಯಕ್ತಿಗಳನ್ನೂ, ಸ್ಥಲಗಳನ್ನೂ, ಘಟನೆಗಳನ್ನೂ ಕನಸಿನಲ್ಲಿ ತೀರ ಗೌಣಸ್ಥಾನದಲ್ಲಿರಿಸಿ, ಗೌಣ ಸಂಗತಿಗಳಿಗೆ ಮಿಗಿಲಾದ ಮಹತ್ವಕ್ಕೇರಿಸಿ ಕಾಣಿಸುವ ಬಗೆ. ಪ್ರತೀಕಾತ್ಮತೆಯ ಕುರಿತು ವಿಸ್ತಾರವಾಗಿ ಬರೆಯಬಹುದು. ಹಲವು ಪ್ರತೀಕಗಳು ಲೈಂಗಿಕವಾಗಿರುತ್ತವೆ; ಕೆಲವು ಸರ್ವಸಾಮಾನ್ಯವಾಗಿರುತ್ತವೆ. ಸ್ವಪ್ನ-ಪ್ರತೀಕಗಳ ವಿಷಯವಾಗಿ ಬಹಳ ವಾಙ್ಮಯವು ಪ್ರಕಟವಾಗಿದೆ. ವಿಶ್ಲೇಷಣದಲ್ಲಿ ಸವಿಯಿದ್ದವರಿಗೆ ಈ ವಿಷಯ ಅತ್ಯಂತ ವೇಧಕವೂ ಬೋಧಕವೂ ಎನಿಸಬಹುದು. ಆದರೆ ವಿರೋಧಕರಿಗೆ ಅಷ್ಟೇ ಬೇಸರದ್ದಾಗಬಹುದು.

ಈ ಮೂರು ಬಗೆಯ ರೂಪಾಂತರದ ನಂತರವೂ ನಿದ್ದೆಹರಿಯುವ ಕ್ಷಣಕ್ಕೆ ಕನಸಿನ ಇನ್ನೊಂದು ರೂಪಾಂತರವಾಗುತ್ತದೆ. ಇದಕ್ಕೆ ಗೌಣವಿಶದೀಕರಣ (secondary elaboration) ವೆನ್ನುವರು. ಅಸಂಗತವೆನಿಸುವ ಕನಸಿನಲ್ಲಿ ಅದನ್ನು ನಿವೇದಿಸುವಾಗ ಒಂದು ಸುಸಂಗತಿ, ಸಂಬಂಧವನ್ನು ತರುವ ಕ್ರಮವಿದು.

ಕನಸುಗಳ ಮೀಮಾಂಸೆಯಿಂದ, ಅಜಾಗ್ರತ ಮನೋಭಾಗದಲ್ಲಿ ಯಾವ ಪ್ರಚಲಿತ ವಿಚಾರಗಳು ತೊಂದರೆ ಕೊಡುವವೆಂಬುದೂ, ಅಂತಹ ವಿಚಾರಗಳೊಡನೆ ಶೈಶವದ ಯಾವ ಘಟನೆಗಳು ಭಾವನಾಮಯವಾಗಿ ಅಂಟಿಕೊಂಡಿರುವವೆಂಬುದೂ ಪ್ರಕಟವಾಗುತ್ತದೆ. ಅದುದರಿಂದ ಕನಸುಗಳಿಗೆ ಅಷ್ಟೊಂದು ಶಾಸ್ತ್ರೀಯ ಮಹತ್ವವಿರುತ್ತದೆ. ಕನಸುಗಳ ವಿಶ್ಲೇಷಣ ಮೀಮಾಂಸೆಯು ಅಜಾಗ್ರತ ಮನೋಭಾಗಕ್ಕೆ ಒಯ್ಯುವ ರಾಜಮಾರ್ಗವೇ ಸರಿ.

### ವಿಸ್ಮೃತಿ ಮೀಮಾಂಸೆ, ಮರವಿನ ಗುಟ್ಟು

ಹಿಸ್ಟೇರಿಯಾದ ಉತ್ಪತ್ತಿಯ ಕುರಿತು ಪ್ರತಿಪಾದಿಸುವಾಗ ಭಾವನೆಗಳಿಗೆ ಒಡ್ಡು

ಕಟ್ಟಿದಂತೆ ತಡೆಯುಂಟಾದರೆ ಅದರಿಂದ ಕೆಲವೊಂದು ಸ್ಮೃತಿ ನಾಶವಾಗುವದೆಂತ ಹಿಂದೆ ಬಂದಿದೆ. ಇನ್ನು ಫ್ರ್ಯುಡನ ಮತದಂತೆ ಸಾಮಾನ್ಯ ಮನುಷ್ಯನಿಗೂ ಮನೋವಿಕೃತಿಯ ರೋಗಿಗೂ ಕೇವಲ ಅಂಶತಃ ಭೇದವಿರುತ್ತದೆ. ನಾವೆಲ್ಲರೂ ಹೆಚ್ಚು ಕಡಿಮೆ ಪ್ರಮಾಣದಲ್ಲಿ ವಿಕೃತಿಯುಳ್ಳವರೇ ಸರಿ. ಇದಕ್ಕೆ ಸಮರ್ಥನೀಯ ವಾಗುವ ಆಧಾರ ಪ್ರಮಾಣಗಳು ನಮ್ಮ ಮನೋವ್ಯಾಪಾರಗಳ ಚಿಕ್ಕ ದೊಡ್ಡ ತಪ್ಪುಗಳಿಂದ ಸಿಗುತ್ತವೆಂತ ಆತನು ಕಾಣಿಸಿಕೊಂಡಿದ್ದಾನೆ.

ಕೆಲವೊಂದು ಹೆಸರು 'ನಾಲಿಗೆಯ ತುದಿಯ ಮೇಲಿದ್ದರೂ' ಜೀವ ಹೋಗುವ ಪ್ರಸಂಗ ಬಂದಾಗ್ಯೂ ಮಾತಿಗೆ ನಿಲುಕದೇ ಪೇಚಾಡುವ ಅನುಭವ ಪ್ರತಿ ಯೊಬ್ಬರಿಗಿದೆ. ಅತ್ಯಂತ ಮಹತ್ವದ ಪತ್ರವನ್ನು ಹತ್ತಿರದ ಅಂಚೆಪೆಟ್ಟಿಗೆಯಲ್ಲಿ ಹಾಕಲೆಂತ ಜೇಬಿನಲ್ಲಿಟ್ಟುಕೊಂಡು ಹೊರಟು, ಊರೆಲ್ಲ ಸುತ್ತಿ ಹಲವು ಕೆಲಸಗಳನ್ನು ತೀರಿಸಿಕೊಂಡು ಮನೆಗೆ ಬಂದಾಗ ಮೋರೆ ಒರಿಸಿಕೊಳ್ಳಲು ಕೈರುಮಾಲವೆಂತ ಕಿಸೆಯಲ್ಲಿಯ ಕಾಗದವನ್ನು ಎಳೆದು ನೋಡಿ ಆಶ್ಚರ್ಯದಿಂದ ಬಾಯಿ ಕಳೆದು ನಿಲ್ಲುವ ಅನುಭವ ಯಾರಿಗಿಲ್ಲ ? ಒಂದು ಕೆಲಸವನ್ನು ಮಾಡಲು ಮಿತ್ರರು ಒತ್ತಾಯದಿಂದ ತಿರುತಿರುಗಿ ಹೇಳಿದರೂ 'ಅಯ್ಯೋ ! ಮರೆತೆ !' ಎಂತ ಅವರನ್ನು ನಿರಾಶೆಗೊಳಿಸುವ ಪ್ರಸಂಗ ಯಾರಿಗೆ ಬಂದಿಲ್ಲ ! ಇದೇ ಮೇರೆಗೆ ದೈನಂದಿನದ ಮಾತುಕತೆಯಲ್ಲಿ ನಾವು ಚಿಲ್ಲರೆ ತಪ್ಪುಗಳನ್ನು ಮಾಡುವೆವು; ಹಾಗೆಯೇ ಬರಹ ದಲ್ಲಿಯೂ ಜಾರಿಬೀಳುವೆವು. 'ಅಹುದೆ'ಂತ ಉತ್ತರ ಕೊಡುವ ಇಚ್ಛೆಯಿದ್ದಾಗ್ಯೂ 'ಇಲ್ಲ'ವೆಂತ ಹೇಳಿ ನಾವು ನಾಚುವದುಂಟು. ಮಂಗಳವಾರ ಭೆಟ್ಟಿಯಾಗುವ ಮಾತಾಗಿದ್ದರೂ ಬುಧವಾರ ಸಿಗುವೆವೆಂತ ಹೇಳುವ ತಪ್ಪು ನಾವು ಮಾಡಿದ್ದುಂಟು. ಅಭಾವಿತವಾಗಿ ಎರಡು ಶಬ್ದಗಳನ್ನು ಕೂಡಿಸಿ ಹೊಸ ಶಬ್ದ ಬರೆದದ್ದುಂಟು. ಬರೆಯಬೇಕೆಂದಿದ್ದ ಶಬ್ದಕ್ಕೆ ತೀರ ವಿರುದ್ಧವಿರುವ ಶಬ್ದವನ್ನು ಹಾಕಿದ್ದುಂಟು. ಇವೆಲ್ಲ ಲೋಪದೋಷಗಳನ್ನು ನಾವು ಆಕಸ್ಮಿಕವೆಂತ ಯದೃಚ್ಛೆಯವೆಂತ ತೂರಿ ಬಿಡುತ್ತೇವೆ–ಆದರೆ ತಪ್ಪು ಮಾಡುವವರ ಮತ ಹೀಗಿದ್ದರೂ, ಇತರರು ಇವುಗಳನ್ನು ಕ್ಷಮ್ಯವೆಂದಾಗಲಿ, ಕ್ಷೇಮವೆಂದಾಗಲಿ ತಿಳಿಯುವದಿಲ್ಲ. ಕಚೇರಿಯಿಂದ ಬರುವಾಗ ಕುಪ್ಪಸದ ಅರಿವೆಯನ್ನು ತರುವೆನೆಂತ ಹೇಳಿ ಮರೆತು ಬರಿಗೈಯಿಂದ ಮನೆ ಸೇರುವ ಗಂಡನು ಬರೆ 'ಮರೆತೆ'ನೆಂಬ ಮಾತಿನಿಂದ ಹೆಂಡತಿಯನ್ನಿದಿರಿಸಲು ಧೈರ್ಯಪಡುವದಿಲ್ಲ. ಅವನು ಹಾಗೆ ಮರೆಯುವನೆಂತ ಆಕೆಗೆ ಮೊದಲೇ ಗೊತ್ತು ! ಮನೆಯಲ್ಲಿ ಮಾಡಲು ಕೊಟ್ಟ ಅಭ್ಯಸನವನ್ನು ಮರೆತ ಮಕ್ಕಳಿಗೆ ಅದೆಷ್ಟು ಗುರು ಹಿರಿಯರು ಕ್ಷಮಿಸಿದ್ದು ಉಂಟು ? ಸಂಕೇತವಂತೆ ಗೊತ್ತುಪಡಿಸಿದ ಸ್ಥಳದಲ್ಲಿ ಮುಂಚಿತವಾಗಿಯೇ ಬಂದು ಭೆಟ್ಟಿಗೆ ಬರುವವನನ್ನು ಹಾರೈಸುತ್ತ ನಿಲ್ಲುವ ಗೃಹಸ್ಥನು

ಇನ್ನೊಬ್ಬನು ತನ್ನ ಅಪಮಾನ ಮಾಡಿದನೆಂತಲೇ ರೇಗುತ್ತಾನೆ.

ಇವಕ್ಕೆಲ್ಲ ಕಾರಣವಿದೆ. ನಮ್ಮ ಇವೆಲ್ಲ ಮರೆವುಗಳ ಲೋಪದೋಷಗಳ, ಜಾಗ್ರತ ಅಹೇತುಕತೆಯೆಡೆಗೆ ಅಜಾಗ್ರತ ಹೇತುವು ಹುದುಗಿಕೊಂಡಿರುತ್ತದೆ. ಅಜಾಗ್ರತ ಮನಸ್ಥರದ ವಿಚಾರಗಳ ಪ್ರಭಾವವು ಇವುಗಳಿಗೆ ಕಾರಣವಾಗಿದೆ. ವ್ಯಕ್ತಿಯ ಭಾವನೆಯ ನಿಜವಾದ ನಿಟ್ಟು ನಡೆಗಳನ್ನು ಇಂಥ ದಮಿತ ವಿಚಾರಗಳ ಜಟುವಟಿಕೆಗಳು ತೋರಿಸುತ್ತವೆ.

ಏನಾದರೊಂದನ್ನು ಮರೆಯುವಾಗ, ಅದನ್ನು ನೆನಪಿಡಬಾರದೆಂಬ ನಮ್ಮ ಕಾಮನೆಯೆಡೆಗೆ ಒಂದು ಹೇತುವಿರುತ್ತದೆಂತ ಫ್ರ್ಯಾಡನ ಮತ. ಈ ಹೇತುವು ಅಜಾಗ್ರತವಾಗಿದೆಯೆಂಬುವದರಲ್ಲಿ ಸಂದೇಹವಿಲ್ಲ. ಏಕೆಂದರೆ, ಪರಿಶ್ರಮದಿಂದ ನೆನಪಿಡಬೇಕೆಂತ ಹಂಬಲಿಸಿಕೊಂಡ ಸಂಗತಿಯನ್ನೇ ನಾವು ಬಹುಶಃ ಮರೆತುಬಿಡುವದುಂಟು. ಇದೇ ಮಾತು ಅನೈಚ್ಛಿಕವಾಗಿ ಸಂಭವಿಸುವ ಮಾತಿನ ತಪ್ಪುಗಳಿಗೂ ಅನ್ವಯಿಸುವದು. ನೆರಮನೆಯಿಂದ ಓದಲು ತಂದ ಪತ್ರಿಕೆ-ಪುಸ್ತಕಗಳನ್ನು, ಪೆರವರಿಂದ ಎರವಾಗಿ ತಂದ ಒಡವೆಗಳನ್ನು ಹಲವುಬಾರಿ ತಿರುಗಿ ಒಯ್ದು ಕೊಡಲು ಹಲವರು ಮರೆಯುತ್ತಾರೆ. ಈ ಮರೆವಿನ ಮೀಮಾಂಸೆಯನ್ನು ಕೇಳಿದರೆ ಆ ಹಲವರಿಗೆ ಮೋಜು (ಮುನಿಸು) ಎನಿಸಬಹುದು. ಇಂಥ ಮರೆವಿನ ಜಟಡಡಿಗೆ ವ್ಯಕ್ತಿಯ ಅರ್ಜನೆಯ ಪ್ರವೃತ್ತಿಯಿರುತ್ತದೆ. ಕಡ ತಂದ ವಸ್ತುವನ್ನು ತಿರುಗಿಕೊಡುವ ಕಲ್ಪನೆ ಅವರ ಮನದಾಳದಲ್ಲಿ ಇರುವದಿಲ್ಲ; ಶಕ್ಯವಿದ್ದರೆ ಅದನ್ನು ತನ್ನ ಸರಕುಗಳೊಂದಿಗೆ ಸೇರಿಸಬೇಕೆಂದೇ ಇಚ್ಛೆ ಇರುತ್ತದೆ. ಆದರೆ ಈ ಪರಸ್ವಾಪಹಾರದ ವಿಚಾರ ಅಜಾಗ್ರತವಾಗಿ ಕೆಲಸ ಮಾಡುತ್ತಿರುತ್ತದೆ. ಅದೇ ಮೇರೆಗೆ ಹೆದ್ದಾರಿಗಳಲ್ಲಿ ಹೆಚ್ಚು ಹೆಚ್ಚು ಒದಗುವ ಅಪಘಾತ–ಮರಣಗಳ ಹಿಂದೆ ದಮಿತವಾಗಿ ಹಿಂಸ್ರಪ್ರವೃತ್ತಿಯಾಗಲೀ, ಆತ್ಮಹತ್ಯಾವೃತ್ತಿಯಾಗಲೀ ಇರುತ್ತದೆಂಬ ಮಾತು ವಿಶ್ಲೇಷಣ ತಜ್ಞರು ತಿಳಿಯಾಗಿ ತೋರಿಸಿರುತ್ತಾರೆ. ಮನೆಯ ಒಡತಿಯಿಂದ ಥಳಿಸಲ್ಪಟ್ಟ ಮೇಲೆ ಮನೆಕೆಲಸದ ಆಳು ಕೈತಪ್ಪಿ ಒಡೆದು ಹಾಕುವ ಕಪ್ಪು ಬಸಿಗಳು ಇದೇ ಮೇರೆಗೆ ಅಜಾಗ್ರತ ಕಾಮನೆಗೆ ಆಹುತಿಯಾಗುತ್ತವೆ !

ಮನೋವಿಶ್ಲೇಷಣ ಸಿದ್ಧಾಂತದ ಈ ವಿಸ್ಮೃತಿ ಮೀಮಾಂಸೆಯ ಭಾಗವು ಸಾಮಾನ್ಯವಾಗಿ ಅಷ್ಟೊಂದು ಪ್ರಖರವಾಗಿ ವಿರೋಧಿಸಲ್ಪಡುವದಿಲ್ಲ.

## ಮನೋವಿಶ್ಲೇಷಣದ ವಿರೋಧಿ ಸಾಂಪ್ರದಾಯಗಳು:

### ಎಡ್ಲರನ ತತ್ವಗಳು :

ಮನೋವಿಶ್ಲೇಷಣ ಸಿದ್ಧಾಂತವನ್ನು ಸಮಗ್ರವಾಗಿ ಒಪ್ಪದಂಥವರಲ್ಲಿ ಮೊದಲು ಅತ್ಯಂತ ಉತ್ಸಾಹದಿಂದ ಆತನ ಅನುಯಾಯಿಗಳಾದ ಕೆಲವರೂ ಇರುತ್ತಾರೆ. ಹೀಗೆ ತಮ್ಮ ಗುರುವಿನಿಂದ ಸಿಡಿದು ಹೋಗಿ ಸ್ವತಂತ್ರರಾದ ಮುಖ್ಯ ಮನೋ ವಿಜ್ಞಾನಿಗಳೆಂದರೆ ವಿಯನ್ನಾದ ಡಾ. ಆಲ್‌ಫ್ರೆಡ್ ಎಡ್ಲರ ಮತ್ತು ಜ್ಯೂರಿಚ್‌ದ ಡಾ. ಕಾರ್ಲ ಗುಸ್ಟವ್ಹ ಯುಂಗ ಇವರಿಬ್ಬರು. ಮಾನಸಿಕ ಜೀವನದಲ್ಲಿಯ ಲೈಂಗಿ ಕತೆಯ ಪ್ರಾಧಾನ್ಯದ ಮುಖ್ಯ ಮಹತ್ವದ ಪ್ರಶ್ನೆಯ ಮೇಲೆಯೇ ಇವರೀರ್ವರು ಫ್ರ್ಯುಡನಿಂದ ಭಿನ್ನಾಭಿಪ್ರಾಯಪಟ್ಟು ಬೇರೆಯಾದರು. ಅವರ ಅಗಲಿಕೆಯನ್ನೂ ಅಭಿಪ್ರಾಯ ಭೇದವನ್ನೂ ಫ್ರ್ಯುಡನು ಸಮಾಧಾನದಿಂದ ಸಹಿಸಿದನು. ಇಷ್ಟೇ, ತಮ್ಮ ಮನೋವಿಜ್ಞಾನ ಸಿದ್ಧಾಂತಗಳಿಗೆ ಇನ್ನು ಮುಂದೆ ಮನೋವಿಶ್ಲೇಷಣ ಸಿದ್ಧಾಂತವೆಂದು ಹೆಸರಿಟ್ಟುಕೊಳ್ಳಬೇಡಿರಿ ಎಂತ ಆತನು ಎಡ್ಲರ, ಯುಂಗರಿಗೆ ಭಿನ್ನವಿಸಿಕೊಂಡನು. ಆದುದರಿಂದ, ಎಡ್ಲರನು ತನ್ನ ಪಂಥದ ತತ್ವ ಪ್ರಣಾಲಿಗೆ ವ್ಯಕ್ತಿ ಮನೋವಿಜ್ಞಾನವೆಂತ ಹೆಸರಿಟ್ಟನು. ಯುಂಗನು ತನ್ನ ಸಾಂಪ್ರದಾಯದ ಸಿದ್ಧಾಂತಕ್ಕೆ ವಿಶ್ಲೇಷಣ ಮನೋವಿಜ್ಞಾನವೆಂತ ನಾಮಕರಣ ಮಾಡಿದನು.

ಎಡ್ಲರನು 'ನ್ಯೂನಗಂಡ'ದ ತತ್ವ ಪ್ರತಿಪಾದನೆಯ ಮೂಲಕ ಪ್ರಸಿದ್ಧನಾಗಿದ್ದಾನೆ. ಪ್ರತಿಯೊಂದು ವ್ಯಕ್ತಿಗೂ, ನೆನಹುಗಳ ಕಟ್ಟಡವನ್ನೇರ್ಪಡಿಸುವ ನೆಲೆಯು ಬೇರೆ ಬೇರೆಯಾಗಿದೆ. ಕೆಲವೊಂದು ಭಾವನಾಮಯ ಹೇತುಗಳ ಗುಂಪಿನ ಸುತ್ತಲೂ ಈ ಸ್ಮೃತಿಮಂದಿರವು ರಚಿತವಾಗುತ್ತದೆ. ಇಂಥ ಹೇತುಗಳ ಗುಂಪು ವ್ಯಕ್ತಿ ವ್ಯಕ್ತಿಗೂ ಬೇರೆಯಾಗಿರುತ್ತದೆ. ಕೆಲವರಲ್ಲಿ ಅದರ ಸ್ವರೂಪ ಲೈಂಗಿಕವಾಗಿರಬಹುದು. ಆದರೆ ಆ ಎಲ್ಲರೊಳಗೂ ಹಾಗೆಯಾಗಬೇಕೆಂತಿಲ್ಲ. ಇನ್ನು ಈ ಭಾವನಾಮಯ ಹೇತು ಗಳನ್ನು ಗುಂಪುಗೂಡಿಸಿ ವ್ಯಕ್ತಿತ್ವದ ಬೀಜವನ್ನಾಗಿಸುವ ತತ್ವವು ಯಾವುದು ? ಈ ತತ್ವವು ಯಾವದೊಂದು ಅವಶ್ಯಕತೆಯ ತಿಳುವಳಿಕೆಯು–ಕೊರತೆಯ ಅರಿವು ಅನಿಸಿಕೆಯು. ತನ್ನಲ್ಲಿ ಕೆಲವೊಂದು ಬಗೆಯ ಕೊರತೆಯಿದೆ ಎಂದು ವ್ಯಕ್ತಿಗೆ ಅನಿಸುತ್ತದೆ. ಈ ಅನಿಸಿಕೆಯಿಂದ ನ್ಯೂನತೆಯ–ಹೀನತೆಯ ಭಾವನೆಯು ಮೈವೆತ್ತುತ್ತದೆ. ಆಗ ಆ ನ್ಯೂನತೆಯನ್ನು ಬೇರೊಂದು ನಿಟ್ಟಿನಲ್ಲಿ ಪೂರೈಸಿಕೊಳ್ಳ ಲಿಕ್ಕೆ ಶರೀರದ ಪ್ರತಿಯೊಂದು ನರವೂ ಆ ಕುರಿತು ಮಣಿದು ದಣಿಯ ತೊಡಗುತ್ತದೆ.

ಈ ನ್ಯೂನತೆಯು ವಾಸ್ತವವಿರಬಹುದು. ಕಾಲ್ಪನಿಕವೂ ಇರಬಹುದು. ಹೇಗೂ

ಇದ್ದರೂ, ಒಂದು ಮನೋಗಂಡವನ್ನು ಉಂಟು ಮಾಡದೇ ಬಿಡುವದಿಲ್ಲ. ಅತಿರಿಕ್ತವಾದ, ವಿಷಮಟ್ಟದ ನ್ಯೂನತಾ ಭಾವನೆಯೇ ನ್ಯೂನ ಗಂಡವೆನಿಸುವದು. ಈ ನ್ಯೂನತಾ ಭಾವನೆಯು ಇಡೀ ವ್ಯಕ್ತಿತ್ವವನ್ನೇ ವ್ಯಾಪಿಸುತ್ತದೆ. ಆದ್ದರಿಂದ ಅದು ಬರೇ ಗಂಡವಲ್ಲ, ಗಂಡಾಂತರಕ್ಕೆ ಗುರಿ ಮಾಡುವ ವ್ಯಾಧಿಯೇ ಸರಿ.

ಎಡ್ಲರನ ಅಭಿಪ್ರಾಯದಂತೆ, ವ್ಯಕ್ತಿಗಳು ಯಾವಾಗಲೂ, ತಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಲು ಅನುಕೂಲವಾಗುವ, ತಮ್ಮ ವರ್ಚಸ್ವಿತೆಯನ್ನು ಸಾಧಿಸಲು ಅಸುಗೊಡುವ, ಸನ್ನಿವೇಶವನ್ನೇ ಹುಡಿಕಿಕೊಳ್ಳುವದಕ್ಕಾಗಿ ಹೆಣಗುತ್ತಿರುತ್ತಾರೆ. ಈ ಹೆಣಗಾಟದಲ್ಲಿಯೇ ಸಾಮಾಜಿಕ ಪ್ರಕ್ರಿಯೆಗಳ ರಹಸ್ಯವಿರುತ್ತದೆ. ಒಂದು ಮಾತಿನಲ್ಲಿ ಹೇಳುವದಾದರೆ, ಸಾಮರ್ಥ್ಯದ ಕುರಿತು ಇಚ್ಛೆಯೇ ಮಾನವೀಜೀವನವನ್ನಾಳುವ ಶಕ್ತಿಯಾಗಿರುತ್ತದೆ. ಆದುದರಿಂದ ಎಲ್ಲ ಮನೋವಿಕೃತಿಗಳು ಫ್ರ್ಯಾಡನು ಅನ್ನುವಂತೆ ದಮಿತಕಾಮ ಪ್ರೇರಣೆಗಳಿಂದಲ್ಲ, ನ್ಯೂನತಾ ಭಾವನೆಯನ್ನು ಪೂರೈಸಿಕೊಳ್ಳುವದರಲ್ಲಿ ಒದಗುವ ಅಪಯಶದ ಮೂಲಕ ಉಂಟಾಗುತ್ತವೆ.

ನ್ಯೂನಗಂಡದಂತೆಯೇ 'ಅಹಂಗಂಡ'ವೂ ಒಂದಿದೆ. ಒಂದೇ ವ್ಯಕ್ತಿಯಲ್ಲಿ ಇವೆರಡೂ ಮನೋಗಂಡಗಳು ಇರಬಹುದು. ಆತನ ವ್ಯಕ್ತಿತ್ವದ ನಾಣ್ಯದ ಅವೆರಡೂ ಇಬ್ಬದಿಯ ಮೈಗಳು. ಅಪರಾಧಪ್ರವೃತ್ತಿಯು ಅಹಂಗಂಡದ ಲಕ್ಷಣವಿರುತ್ತದೆ. ಕಾಲ್ಪನಿಕ ಅಧಿಕಾರ ಸಾಮರ್ಥ್ಯದ ಭ್ರಮೆಯೂ ಅದರಡಿಗಿರುತ್ತದೆ. ಅಪರಾಧಿಗಳಲ್ಲಿ ಮಿತಿಮೀರಿದ ಅಹಂಕಾರವು ಕಂಡುಬರುವದು ಇದರ ಮೂಲಕವೇ. ಚಿಕ್ಕ ಮಕ್ಕಳು ಕೂಡ ತುಡುಗು ಮಾಡುವಾಗ ಮಂದಿಗೆ ಗೊತ್ತಾಗದ ಕೆಲಸವೊಂದನ್ನು ತಾವು ಮಾಡಿ ಪರ್ಯಾಯವಾಗಿ ಮಂದಿಗೂ ಮಿಗಿಲೆನಿಸುವೆವೆಂಬ ಭಾವನೆಯಿಂದ ಹಿಗ್ಗುತ್ತಾರೆ, ಹೆಮ್ಮೆ ಪಡುತ್ತಾರೆ.

ಫ್ರ್ಯಾಡನಂತೆ ಎಡ್ಲರನೂ ಬಾಳಿನ ಮಾರ್ಪಾಟದಲ್ಲಿ ಚಿಕ್ಕಂದಿನ ಮಹತ್ವವನ್ನು ಅತ್ಯಂತವಾಗಿ ಒತ್ತಿ ಹೇಳುತ್ತಾನೆ. ವ್ಯಕ್ತಿಯ ಬಾಳಿನ ಗುರಿಯು, ಭಾವೀ ಅನುಭವವನ್ನು ಪಡೆಯುವ ಕ್ರಮವನ್ನು ಗೊತ್ತುಪಡಿಸುವ ಒಂದು ಅಚ್ಚು ಎಳೆವಯಸ್ಸಿನಲ್ಲಿಯೇ ಉಂಟಾಗಲಿಕ್ಕೆ ಬೇಕು. ಮುಂದಿನ ಪ್ರೌಢ ಪರಿಪಕ್ವ ವ್ಯಕ್ತಿತ್ವದ ಮಾದರಿಯೊಂದು ಚಿಕ್ಕಂದಿನಲ್ಲಿಯೇ ಬೆಳೆಯಲಾರಂಭಿಸುವದೆಂದು ಎಡ್ಲರನು ಪ್ರತಿಪಾದಿಸುತ್ತಾನೆ.

ಫ್ರ್ಯಾಡನ ಸ್ವಪ್ನಮೀಮಾಂಸೆಯ ಸಿದ್ಧಾಂತವನ್ನು ಎಡ್ಲರನುಮೊದಲೇ ಅಲ್ಲಗಳೆದನು. ಕನಸುಗಳ ಉಪಪತ್ತಿಯನ್ನು ಹಚ್ಚುವ ಒಂದೇ ಒಂದು ನಿರ್ದಿಷ್ಟ

ಸೂತ್ರವಿಲ್ಲವೆಂತ ಆತನ ಹೇಳಿಕೆ. ಕನಸುಗಳು ಭಾವನಾಮಯವಾಗಿ ಅಮಲೇರಿ ಸುವವೆಂಬ ಸಂಗತಿಯೇ ಅವುಗಳನ್ನು ನಿವಾರಿಸಲಿಕ್ಕೆ ಸಾಧನವನ್ನೊದಗಿಸಿ ಕೊಡುತ್ತದೆ. ಇದು ಒಂದು ಸೋಜಿಗ. ತಾನು ಯಾತರ ಕುರಿತು ಕನಸು ಅನುಭವಿಸುತ್ತಿರುವೆನೆಂಬುದನ್ನು ಅರಿತುಕೊಂಡರೆ, ಮತ್ತು ಆ ವಿಷಯದ ಕನಸಿನಿಂದ ತಾನೊಂದು ಕಾಮನಾಪೂರ್ತಿಯು, ಭಾವನಾತೃಪ್ತಿಯು, ಅಮಲಿನ ಸವಿಯುಣ್ಣುತ್ತೇನೆಂಬುದನ್ನೂ ತಿಳಿದರೆ, ವ್ಯಕ್ತಿಯು ಮುಂದೆ, ಕನಸು ಕಾಣಲಾರನು–ಎಂತ ಎಡ್ಲರನ ಅಭಿಪ್ರಾಯ. ಇದಕ್ಕೆ ಆತನು ತನ್ನದೇ ಸಾಕ್ಷಿ ಯನ್ನು ಕೊಡುವನು. ಇಂಥ ತಿಳುವಳಿಕೆಯಾದಂದಿನಿಂದ ಆತನು ಕನಸು ಕಾಣುವದು ಇಲ್ಲವಾಯಿತಂತೆ !

ಫ್ರ್ಯುಡನ ಅಜಾಗೃತ ಮನೋಭಾಗದ ಸಿದ್ಧಾಂತವನ್ನೂ ಎಡ್ಲರನು ಪ್ರತಿಪಾದಿ ಸುತ್ತಾನೆ. ಜಾಗ್ರುತ ಅಜಾಗ್ರುತಗಳು ಪರಸ್ಪರ ವಿರುದ್ಧವಲ್ಲವೆಂದೂ, ಅವೆರಡೂ ಒಂದೇ ನಿಟ್ಟಿನಲ್ಲಿ ಮುಂದರಿಯುವವೆಂದೂ, ಹಾಗೆ ನೋಡಿದರೆ, ಜಾಗ್ರುತವನ್ನು ಅಜಾಗ್ರುತದಿಂದ ವಿಂಗಡಿಸುವ ಒಂದು ಸೀಮಾರೇಖೆಯೇ ಇಲ್ಲವೆನ್ನಬಹುದೆಂದೂ, ಎಡ್ಲರನು ಸಾಧಿಸುತ್ತಾನೆ !

## ಯುಂಗನ ತತ್ವಗಳು

ಈ ತತ್ವದ ಕುರಿತು ಯುಂಗನೂ ಫ್ರ್ಯುಡನಿಂದ ಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಮಾಡುತ್ತಾನೆ. ಈತನ ಮತಭೇದವು ತೀರ ಸೂಕ್ಷ್ಮವಾಗಿರುತ್ತದೆ. ಅಜಾಗ್ರುತ ಮನಸ್ಥರವೆಂದರೆ ಇನ್ನೂ ಬೆಳವಣಿಗೆ ಪಡೆಯದ ವಿಕಾಸವಾಗದ ಜಾಗ್ರುತಸ್ಥರದ ಅಂಶವಾಗಿದ್ದು, ವಾಂಶಿಕವಾದ–ಪೂರ್ವಜರಿಂದ ತಂದ ಸ್ಮೃತಿ–ಸಂಸ್ಕಾರಗಳೂ ಪ್ರವೃತ್ತಿ–ಪ್ರೇರಣೆಗಳೂ, ಮಾನವ ಕೋಟಿಯ ತೀರ ಪ್ರಾಥಮಿಕ ಕಾಲದಿಂದಲೂ ನಡೆದು ಬಂದ ಪ್ರತಿಕ್ರಿಯೆಯ ಪಡಿಯಚ್ಚುಗಳೂ ವ್ಯಕ್ತಿಯ ಮನೋಜೀವನದಲ್ಲಿ ಪ್ರಧಾನವಾದ ಪ್ರಭಾವಿಯಾದ ಭೂಮಿಕೆಯನ್ನು ವಹಿಸುತ್ತವೆಂದು ಯುಂಗನು ಪ್ರತಿಪಾದಿಸಿದನು. ಲೈಂಗಿಕ ಪ್ರವೃತ್ತಿ–ಪ್ರೇರಣೆಗಳಷ್ಟೇ ಪ್ರಭಾವಿಯಾಗಿ ಈ ಸ್ಮೃತಿಸಂಸ್ಕಾರಗಳು ವ್ಯಕ್ತಿಯ ಚಾರಿತ್ರ್ಯವನ್ನೂ ಮನಸ್ಥಿತಿಯನ್ನೂ ಗೊತ್ತು ಪಡಿಸುತ್ತವೆಂದು ಆತನ ಹೇಳಿಕೆ.

ಎರಡು ಪಾರಿಭಾಷಿಕ ಶಬ್ದಗಳನ್ನು ಪ್ರಚಾರದಲ್ಲಿ ತಂದ ಮೂಲಕ ಯುಂಗನು ಸಾಮಾನ್ಯ ಜನತೆಯಲ್ಲಿ ಹೆಸರುಗೊಂಡಿದ್ದಾನೆ. ಆ ಶಬ್ದಗಳೆಂದರೆ ಬಹಿರ್ಮುಖ

(Extravert) ಮತ್ತು ಅಂತರ್ಮುಖ (Introvert) ಎಂಬವು. ಬಹಿರ್ಮುಖ ವ್ಯಕ್ತಿಯು, ಬಳಕೆಯ ಮಾತಿನಲ್ಲಿ ಹೇಳುವದಾದರೆ 'ಒಳ್ಳೇ ಒಡನಾಡಿ' ಜೀವಿಯು. ಆತನು ಸಮಾಜಪ್ರಿಯನಾಗಿರುತ್ತಾನೆ. ಮಂದಿಯೊಳಗೆ ಆತನಿಗೆ ನೆಮ್ಮದಿ ಯೆನಿಸುತ್ತದೆ. ಅವನು ಏಕಾಕಿಯಾಗಿ ಇರಲಾರನು. ಇದಕ್ಕೆ ವಿರುದ್ಧವಾಗಿ ಅಂತರ್ಮುಖ ವ್ಯಕ್ತಿಯು ತನ್ನಲ್ಲಿ ತಾನೇ ತನ್ಮಯನಾಗಬಯಸುತ್ತಾನೆ. ಸಮಾಜದ ಕುರಿತು ಆತನಿಗೆ ವಿಶೇಷವಾದ ಆಸಕ್ತಿ ಇರುವದಿಲ್ಲ. ಮಂದಿಯನ್ನಿದಿರಿಸುವು ದೆಂದರೆ ಆತನಿಗೆ ತುಸು ಬೆದರಿಕೆಯೇ ಸರಿ. ಇತರರ ಮತಾಭಿಪ್ರಾಯಗಳೊಡನೆ ಆತನು ಅಷ್ಟೊಂದು ಹೊಂದಿ ಹೋಗಲಾರನು.

ಬಹಿರ್ಮುಖವೃತ್ತಿಯ ಮಾದರಿಯ ವ್ಯಕ್ತಿಯೆಂದರೆ ಎಡಬಿಡದೇ ಕೆಲಸಬೊಗಸೆ ಗಳಲ್ಲಿ ತೊಡಗಿರುವ ವ್ಯಾವಹಾರಿಕ ವ್ಯಕ್ತಿ. ಆತನಿಗೆ ಯಾವದೇ ಬಗೆಯ ತಾತ್ವಿಕ ವಿಚಾರವನ್ನು ತಿಳಿಯುವ ತವಕವಿಲ್ಲ. ತಾಳ್ಮೆಯೂ ಇಲ್ಲ. ನಿತ್ಯದ ವ್ಯವಹಾರಗಳು, ಮೂರ್ತ, ಪಾರ್ಥಿವ (concrete) ವಸ್ತುಗಳು ಇವುಗಳೊಂದಿಗೇ ಆತನ ಒಡ ನಾಟ ಹೆಚ್ಚು. ಇದೇ ಮೇರೆಗೆ ಅಂತರ್ಮುಖತೆಯ ಮಾದರಿಗಳಲ್ಲಿ, ಕವಿಗಳೂ, ತತ್ವಜ್ಞಾನಿಗಳೂ, ಅನುಭಾವಿ ಸಾಧಕರೂ, ಕಲ್ಪಿಕ ಶಿಲ್ಪಿಗಳಾದ ಕಲಾಕೋವಿದರೂ, ಸಂಗೀತಗಾರರೂ ಸೇರುತ್ತಾರೆ. ದೈನಂದಿನ ದೈನದ, ಜಡಜಗತ್ತಿನ ಪಾಡಿಕೆಯ ವಾಸ್ತವತೆಗಿಂತ ಇಂಥವರಿಗೆ ಪ್ರತಿಭೆಯ ಪ್ರಾತಿಭಾಸಿಕ ಸತ್ತೆಯೂ, ಆಧ್ಯಾತ್ಮಿಕ ಸತ್ಯವೂ ಮಿಗಿಲೆನಿಸುತ್ತ ಇರುತ್ತದೆ.

ಇಷ್ಟೊಂದು ಸ್ಥೂಲ ವಿವರಣೆಯಿಂದ ವಿಶ್ಲೇಷಣ–ಸಿದ್ಧಾಂತದ ಈ ಮೂರು ಸಾಂಪ್ರದಾಯಗಳೂ ಕೆಲವೊಂದು ಅಂಶಗಳಲ್ಲಿ ತಕ್ಕಮಟ್ಟಿಗೆ ಪರಸ್ಪರ ಸಮ್ಮತ ವಿದ್ದು, ಸಮಾಂತರವಾಗಿಯೇ ಸಂಗಡವೇ ಸಾಗಿವೆಯೆಂಬುದು ಕಂಡುಬರದೇ ಇರ ಲಾರದು. ಎಡ್ಲರನ ಮತ್ತು ಯುಂಗನ ಪ್ರತಿಪಾದನೆಗಳಲ್ಲಿಯೂ ಚಿತ್ತವೇಧಕವಾದ ಮತ್ತು ನಿರ್ವಿವಾದವಾದ ಸಂಗತಿಗಳು ಎಷ್ಟೋ ಇವೆ. ಎಡ್ಲರನ 'ನ್ಯೂನಗಂಡ' ವನ್ನು ಅಲ್ಲಗಳೆಯುವ ವಿಚಾರಿಗಳು ತೀರ ವಿರಳ. ವ್ಯಾವಹಾರಿಕ ಜೀವನದಲ್ಲಿ ಅವರ ಅವತಾರಗಳು ಆಗಾಗ್ಗೆ ಕಣ್ಣಿಗೆ ಬೀಳುತ್ತವೆ. ಹಾಗೆಯೇ, ಅಂತರ್ಮುಖ ಬಹಿರ್ಮುಖ ವೃತ್ತಿಯ ಮಾದರಿಗಳೂ ನಮ್ಮ ಸುತ್ತಲು ಸಾಕಷ್ಟು ಸಿಗುತ್ತವೆ. ಅದೇಕೆ ? ನಮ್ಮ ಸ್ವಂತ ವ್ಯಕ್ತಿತ್ವದಲ್ಲಿಯೇ ಇವೆರಡು ವೃತ್ತಿಗಳಲ್ಲಿ ಯಾವು ದಾದರೊಂದು ಪ್ರಬಲವಾಗುವ ಅನುಭವ ನಮಗಿದೆ.

ಇವೆರಡೂ ಸಿದ್ಧಾಂತಗಳು ಡಾ. ಫ್ರ್ಯುಡನ ತತ್ವಪ್ರಣಾಲಿಯ ಮುಖ್ಯಾಂಶಗಳಿಗೆ

ವಿರುದ್ಧವಿರಲೇಬೇಕೆಂತ ತಿಳಿಯಲು ಕಾರಣವಿಲ್ಲ. ಸಾಮಾನ್ಯ ವಾಚಕನು ತನ್ನ ತಿಳುವಳಿಕೆಯ ಮಟ್ಟಿಗೆ ಈ ಮೂರೂ ಮತವಾದಗಳ ಮುಖ್ಯ ತತ್ವಗಳನ್ನು ಸರಿಯಾಗಿಯೇ ಒಪ್ಪಿಕೊಂಡು ಅವುಗಳ ಸಮನ್ವಯದಿಂದಲೇ ಮನಸ್ತತ್ವದ ಭಾವ ಚಿತ್ರವನ್ನು ರೂಪಗೊಳಿಸುವದು ಪ್ರಶಸ್ತವಾದ ಮಾರ್ಗವಾಗಿದೆ.

ಸತ್ಯವು ಒಂದು ಕೊಹಿನೂರು ರತ್ನ. ಅದಕ್ಕೆ ಎಷ್ಟೆಷ್ಟು ಮಗ್ಗಲುಗಳು ಒಡೆಯುವವೋ ಅಷ್ಟಷ್ಟು ಅದರ ದೀಪ್ತಿಕಾಂತಿಗಳ ತೇಜೋಜಾಲವು ವೈಭವದಿಂದ ಕಂಗೊಳಿಸುತ್ತದೆ. ಮನೋವಿಶ್ಲೇಷಣದ ಸತ್ಯಕ್ಕೆ ಮೂರು ಮಗ್ಗಲುಗಳಿದ್ದರೆ ಅದರಿಂದ ಹಾನಿಯೇನು ? ●

# ಗ್ರೀಕ ದಾರ್ಶನಿಕರು

'ಪಾಶ್ಚಾತ್ಯ ದರ್ಶನ ವಿಚಾರ' ಎಂಬ ಶಿರೋನಾಮೆಯಿಂದ 'ಆರಾಧನೆ' ಮಾಸಿಕದಲ್ಲಿ (೧೯೬೮) ಪ್ರಕಟವಾದ ಲೇಖನಗಳ ಸಂಕಲನ.

# ‘ ಅಥಾತೋ ತತ್ವ ಜಿಜ್ಞಾಸಾ ’

ವಿಶ್ವದಲ್ಲಿ ಮಾನವನಂಥ ಶ್ರೇಷ್ಠ ಸಂಗತಿ ಬೇರೊಂದು ಇಲ್ಲ. ಇದನ್ನು ಹೀಗೆ ನಿರ್ಣಯಿಸಿದವನೂ ಮಾನವನೇ ಸರಿ. ಆದರೆ ಹಾಗೆಂದ ಮಾತ್ರಕ್ಕೆ ಇದು ಬರೆ ಅವನ ಅಹಂಕಾರದ ಜಲ್ಪನೆಯೆಂದು ಭಾವಿಸಬೇಕಾಗಿಲ್ಲ. ಏಕೆಂದರೆ ಆ ಅಹಂ-ಕಾರವೆಂಬುದು ಕೇವಲ ಮಾನವನದೇ ಗುಣವಿಶೇಷ. ಆ ಅಹಂ-ಭಾವನೆ ಆತ್ಮ ಪ್ರಜ್ಞೆ, ತನ್ನತನದ ತಿಳುವಳಿಕೆ ಇತರ ಪ್ರಾಣಿಪ್ರಪಂಚದ ಸಾಮಾನ್ಯ ಮನೋ ಧರ್ಮವಲ್ಲ. ಅದ್ದರಿಂದ ಮಿಕ್ಕ ಪಶು-ಪಕ್ಷಿ-ಪ್ರಾಣಿಕೋಟಿಗಿಂತ ಮಾನವನೆಂಬ ಈ ಪಕ್ಕರೆಕ್ಕೆ ಇಲ್ಲದ ದ್ವಿಪಾದಪಶುವು ಶ್ರೇಷ್ಠವೆಂದು ತೀರ್ಮಾನಿಸುವ ಆ ಅಹಂಕಾರವೇ ಈ ತೀರ್ಮಾನಕ್ಕೆ ಒಂದು ಮುಖ್ಯವಾದ ಖಚಿತವಾದ ಪ್ರಮಾಣ.

ಏಕೆಂದರೆ ಜೀವದ ಉತ್ಕ್ರಾಂತಿ ಅಥವಾ ವಿಕಾಸದ ಸೋಪಾನ ಮಾರ್ಗದಲ್ಲಿ ಅಸ್ತಿತ್ವದಿಂದ ಜ್ಞಪ್ತಿತ್ವವು ಮೂಡಿಬಂದಂತೆ, ಜ್ಞಪ್ತಿತ್ವದಿಂದ ವ್ಯಕ್ತಿತ್ವವು ರೂಪ ಗೊಂಡಿತು. ಆ ವ್ಯಕ್ತಿತ್ವದ ಆಕಾರವೇ ಮನುಷ್ಯತ್ವ. ಅದರ ಆಧಾರವೇ ಮನಸ್ತತ್ವ. ವಿಶ್ವದಲ್ಲಿ ಮಾನವನಂಥ ಶ್ರೇಷ್ಠ ಸಂಗತಿಯು ಬೇರೊಂದಿಲ್ಲ, ಎಂಬುವದು ನಿತ್ಯದ ಒಂದು ಭಾಗ. ಆದರೆ ಇನ್ನೊಂದು ಭಾಗವೆಂದರೆ ಮಾನವನಲ್ಲಿ ಮನಸ್ತತ್ವದಂಥ ಶ್ರೇಷ್ಠ ಸಂಗತಿ ಬೇರೊಂದು ಇಲ್ಲ-ಎಂಬುವದು. ಮಾನವನಲ್ಲಿ ಮನೋಮಯ ಕೋಶವು ವಿಜ್ಞಾನಮಯವಾಗಿದೆ. ಆನಂದಮಯವಾಗಬಲ್ಲದ್ದಾಗಿದೆ. ಅನ್ನಮಯ ದಿಂದ ಆನಂದಮಯದವರೆಗಿನ ಐದು ಹಂತಗಳಲ್ಲಿ ಮಾನವನದೊಂದೇ ಮನಸ್ಸು, ಸ್ವಚ್ಛಂದವಾಗಿ ಅನಿರ್ಬಂಧವಾಗಿ ಸಂಚರಿಸಬಲ್ಲದು, ವ್ಯವಹರಿಸಬಲ್ಲದು.

ಅಂತೆಯೇ ಈ ಮನಃಶಕ್ತಿ ಈ ಮನಸ್ತತ್ವ ವಿಶ್ವ-ಸೃಷ್ಟಿಯಲ್ಲಿಯೇ ಅತ್ಯದ್ಭುತ ಸಂಗತಿ. ಮನುಷ್ಯತ್ವದಗುರಿ ಮಾನವಕ್ಷೇತ್ರ. ಮನಸ್ಸೇ ಮನುಷ್ಯನ ಎಲ್ಲ ಬಂಧಕ್ಕೂ ಮೋಕ್ಷಕ್ಕೂ ಕಾರಣವೆಂದು ಗೀತೆಯೇ ಸಾರುತ್ತಿದೆ. ಈ ಶಕ್ತಿಯಿಂದಲೇ ಮನುಷ್ಯ ತನಗೆತಾನೇ ಬಂಧು, ತನಗೆತಾನೇ ಶತ್ರು, ತನ್ನ ಉದ್ಧಾರಕ್ಕೆ ತಾನೇ ಹೊಣೆ. ತನ್ನ ಭಾಗ್ಯಕ್ಕೆ ತಾನೇ ದೈವ. ಆದಿಮಾನವನೇ ಇರಲಿ ಇಂದು ಹುಟ್ಟಿದ ಹಸುಳೆಯೇ ಇರಲಿ ಜಗತ್ತಿನಲ್ಲಿ ಕಣ್ಣುತೆರೆದಾಗ, ಉಸಿರು ಎಳೆದಾಗಿನಿಂದ, ಬದ್ಧನಾಗಿರುತ್ತಾನೆ. ಪರಿಸ್ಥಿತಿಗೆ, ಅವಶ್ಯಕತೆಗೆ, ಶಾರೀರಿಕ ಸ್ಥಿತಿಗತಿಗೆ, ಆಯುಷ್ಯದ ಇತಿಮಿತಿಗೆ ಆವರಣದ ಪರಿಮಿತಿಗೆ, ಅಸಹಾಯತೆಗೆ, ಅನ್ನದ ಅಗತ್ಯಕ್ಕೆ, ಭಾವದ ಒತ್ತಾಯಕ್ಕೆ, ಜೀವದ ಬಯಕೆ-ಬೇಡಿಕೆಗೆ ನೂರಾರು ಎಳೆತ ಸೆಳೆತ ಕೊರತೆ ಕೊರಗು ಗಳಿಂದ ಮಾನವನು ವೈಯಕ್ತಿಕವಾಗಿ ಸಾಮಾಜಿಕವಾಗಿ ಬದ್ಧನಾಗಿರುತ್ತಾನೆ.ಆ ಬಂಧನ

ದಿಂದ ಬಿಡುಗಡೆ, ಅಂಥ ಬಿಡುಗಡೆಯ ಲವಲವಿಕೆ ಅದಕ್ಕೆ ತಕ್ಕ ಚಟುವಟಿಕೆ ಇದುವೆ ಮಾನವನ ಅಭ್ಯುದಯದ ನಾಗರಿಕತೆಯ ವಿಕಾಸದ ಹಾಗೂ ಸಂಸ್ಕೃತಿಯ ಸಂವರ್ಧನೆಯ ಇತಿಹಾಸ.

ಹೆಗೆಲ್ ಹೇಳಿದ್ದು ಈ ರೀತಿ ನಿಜವೇ, 'ಪ್ರಪಂಚದ ಇತಿಹಾಸವು ತತ್ವಜ್ಞಾನದ ಇತಿಹಾಸವು.' ಆದರೆ ಕಾರ್ಲಮಾರ್ಕ್ಸನು ಇದನ್ನು ತಿದ್ದಿ ಹೇಳಿದನು. ಪ್ರಪಂಚದ ಇತಿಹಾಸವು ಸಮಾಜದಲ್ಲಿಯ ವರ್ಗಕಲಹದ ಇತಿಹಾಸವೆಂದು. ಆದರೆ ಈ ವರ್ಗ ಗಳಿಗೆ ಕಲಹಮಾಡಿಕೊಳ್ಳಬೇಕೆಂಬ ಕಲ್ಪನೆ ವಿಚಾರ, ಯೋಚನೆ-ಯೋಜನೆಗಳು ಹೊಳೆದದ್ದು ಹೇಗೆ ? ಅದೆಲ್ಲ ಆಯಾ ವರ್ಗಗಳ ಕೆಲವಾದರೂ ಮುಂದಾಳುಗಳ ಮನಸ್ಸಿನಲ್ಲಿ ಮೂಡಿಬಂದ ಸಂಗತಿಗಳೇ ತಾನೆ ? ಅಂದರೆ ವರ್ಗಕಲಹದ ಹಿಂದೆ ವಿಚಾರಕಲಹ ವೈಚಾರಿಕ ಘರ್ಷಣೆ ಮೊದಲು ಇರಬೇಕು. ಯಾವ ಕ್ರಾಂತಿಯ ಮೂಲಕ್ಕೂ ಮೊದಲು ಒದಗುವದು ವಿಚಾರಕ್ರಾಂತಿ· ಯುದ್ಧದಂತೆ ಕ್ರಾಂತಿಯೂ, ಇತಿಹಾಸವೂ ಮಾನವನ ಮನಸ್ಸಿನಲ್ಲಿ ಅವನ ವಿಚಾರತರಂಗದಲ್ಲಿ ಮೊದಲಿಗೆ ಮೊಳೆಯುತ್ತದೆ. ಅನಂತರ ಅದು ಹೊರಗೆ ಚಟುವವಟಿಕೆ ಆಗಿ, ಚಳುವಳಿಯಾಗಿ, ದೊಡ್ಡ ವಿಪ್ಲವವಾಗಿ ಬೆಳೆದು ನಿಲ್ಲುತ್ತದೆ.

ಪ್ರಪಂಚದೊಂದಿಗೇ ಈ ಯುದ್ಧವು ಆರಂಭವಾಯಿತು. ಅದು ಪ್ರಪಂಚದೊಂದಿಗೇ ಕೊನೆಗಾಣುವದು. ಆ ಯುದ್ಧವು ಮಾನವನು ನಿಸರ್ಗದೊಂದಿಗೆ, ಚೈತನ್ಯಶಕ್ತಿಯು ಜಡವಸ್ತುವಿನೊಂದಿಗೆ, ಸ್ವಾತಂತ್ರ್ಯವು ನಿಯತಿಯೊಂದಿಗೆ ನಡೆಯಿಸುವ ಸಂಘರ್ಷವು. ಇತಿಹಾಸವೆಂಬುವದು ಬರೆ ವರ್ಗಕಲಹದ್ದಲ್ಲ. ಈ ನಿರಂತರವಾಗಿ ಸಾಗಿದ ಎಂದೂ ಮುಗಿಯದ ಯುದ್ಧದ ಕಥೆ.

ಈ ದೃಷ್ಟಿಯಿಂದ ನೋಡಿದಲ್ಲಿ ಎಲ್ಲ ಜ್ಞಾನವೂ ಒಂದೇ ವಸ್ತು. 'ಏಕಂ ವಿಜ್ಞಾತೇನ ಸರ್ವಂ ವಿಜ್ಞಾತಂ ಭವತಿ' ಎಂಬ ಉಪನಿಷದ್ವಾಕ್ಯದ ಮರ್ಮವೂ ಇದೇ ಸರಿ. ಭಾಷೆ, ಸಾಹಿತ್ಯ, ಇತಿಹಾಸ', ಭೌತಶಾಸ್ತ್ರ, ಗಣಿತ, ತತ್ವಜ್ಞಾನ ಹೀಗೆ ತೀರ ಭಿನ್ನ ತೀರ ದೂರವೆಂದು ತೋರುವ ಜ್ಞಾನಪ್ರಪಂಚವೆಲ್ಲ ತತ್ವತಃ ಅನ್ಯೋನ್ಯವಾಗಿ ಸಂಬಂಧವಿಟ್ಟುಕೊಂಡಿರುತ್ತದೆ. ಅಲ್ಲಿ ಅವೆಲ್ಲವೂ ಒಂದೇ ವಿಚಾರಪದ್ಧತಿಯ ಅಥವಾ ಸಂಘಟನೆಯ ಬೇರೆಬೇರೆ ರೂಪಗಳಾಗಿರುತ್ತವೆ.

ಆದ್ದರಿಂದ ಮಾನವನ ಈ ವಿಚಾರಧಾರೆಯ ಇತಿಹಾಸವೇ ನಾಗರಿಕತೆಯ ಇತಿ ಹಾಸವನ್ನು ತೆರೆದುತೋರಿಸುವ ಕೀಲಿ. ಇತಿಹಾಸವೆಂದರೇನು ? ತತ್ವಜ್ಞಾನವೇ

ಉದಾಹರಣೆಯೊಂದಿಗೆ ಕಲಿಸುವ ಪಾಠ. ಮಾನವನ ಮೂಲ ಅಧಃಪತನದ ವಿರುದ್ಧ ಹಿಂದೆ ಹೇಳಿದ ನೈಸರ್ಗಿಕ ದಾಸ್ಯದಿಗ್ಬಂಧನಗಳನ್ನು ಪ್ರತಿಭಟಿಸಿ ಹೂಡಿದ ಹೋರಾಟ ಅಥವಾ ಬಂಡಾಯವೇ ತತ್ವಜ್ಞಾನವು.

ಪದಾರ್ಥವು ವಸ್ತುದ್ರವ್ಯವು, ಶಾಶ್ವತ ನಾಶಮಾಡಲು ಬರುವಂತಹದಲ್ಲವೆನ್ನುತ್ತದೆ ವಿಜ್ಞಾನ. ಅದೇ ರೀತಿ ವಿಚಾರವೂ ಅವಿನಾಶಿಯಾದ ತತ್ವ ಮಾನವನ ವಿಚಾರ ಧಾರೆ ಆಗೊಮ್ಮೆ ಈಗೊಮ್ಮೆ ಗುಪ್ತವಾದಂತೆ ಲುಪ್ತವಾದಂತೆ ಕಂಡರೂ ಇತಿ ಹಾಸದ ಈ ಆದಿಕಾಲದಿಂದ ಆಧುನಿಕ ಯುಗದವರೆಗೂ ಅವಿರಾಮವಾಗಿ, ಅವಿಚ್ಛಿನ್ನವಾಗಿ ಉಳಿದು–ಬೆಳೆದು ಬಂದಿದೆ. ಇಂದಿನ ಅನುಭವಕ್ಕೆ ನಾಳಿನ ಅನು ಮಾನಕ್ಕೆ ನಿನ್ನೆಯೇ ಆನುಪೂರ್ವಿ. ವ್ಯಕ್ತಿಯ ಜೀವನದಲ್ಲಿಯೂ ಸಮಾಜದ, ವಂಶದ, ಸಾಮಾನ್ಯನಾಗರಿಕತೆಯ ಪ್ರತೀತಿಯು ಪ್ರತಿಫಲಿತವಾಗುತ್ತ ಬಂದಿದೆ. ಸಹಸ್ರಾರು ಶತಮಾನಗಳ ಗಾಢಾಂಧಕಾರವೂ ಈ 'ಜ್ಞಾನಮಯ ಪ್ರದೀಪ'ವನ್ನೂ ಅದನ್ನು ಹೊತ್ತು ಹೊತ್ತಿಗೆ ಹೊತ್ತಿಸುವ ವಿಚಾರ ವಿಚಿಕಿತ್ಸೆಯ ಕಿಡಿಯನ್ನೂ ಜಿಜ್ಞಾಸೆಯ ಜೀವನವನ್ನೂ ಆರಿಸಲು ಸಾಧ್ಯವಾಗಲಿಲ್ಲ.

ಆದ್ದರಿಂದ ಯಾವ ಜನಾಂಗದ್ದೇ ಇರಲಿ ಇತಿಹಾಸವು, ಸಾಂಸ್ಕೃತಿಕ ಇತಿಹಾಸವು ಈ ವಿಚಾರ ಪರಂಪರೆಯಿಂದ ನಿರ್ಬಂಧಿತವಾಗಿದೆ. ಒಮ್ಮೆ ವಿಚಾರಗಳು ರೂಪು ಗೊಂಡವೆಂದರೆ ಅವು ತಮ್ಮದೇ ಆದ ಗತಿಶಕ್ತಿಯಿಂದ ವಿಕಾಸಕ್ರಮವನ್ನು ಅನುಸರಿಸಿ ಬದುಕಿಬರುತ್ತವೆ; ತಮ್ಮ ದೇಶದ ಅಸ್ತಿತ್ವ ಮತ್ತು ವ್ಯಕ್ತಿತ್ವ ತಾಳಿ ನಿಲ್ಲುತ್ತವೆ. ಸಾಮಾಜಿಕ ವಿಕಾಸದ ಭೌತಿಕ ವ್ಯಾಪಾರಕ್ಕೆ ಸಮಾಂತರವಾಗಿ ಅದರ ಜತೆಗೇ ಈ ವೈಚಾರಿಕ ವಿಕಾಸವು ತನ್ನ ಗತಿಧರ್ಮವನ್ನು ಹೊಂದಿಕೊಂಡು ನಡೆದು ಬರುತ್ತದೆ. ಎಂಥ ರಾಜಕೀಯ, ಸಾಮಾಜಿಕ ಅಥವಾ ಭೌತಿಕ ವಿಪ್ಲವ, ಉತ್ಪಾತ, ಆ ಸಂಕಟಗಳ ಹಾವಳಿ ಎದ್ದು ರಾಜ್ಯಗಳೂ ನಾಗರಿಕತೆಗಳೂ ಹಾಳಾಗಿ ಹೂಳಿಬಿದ್ದರೂ ಮಾನವನ ಈ ವಿಚಾರಧಾರೆಯು ಅಂತರ್ಗಂಗೆಯಂತೆ ಅವ್ಯಾ ಹತವಾಗಿ ಹರಿದುಬಂದು ಮತ್ತೆ ಮತ್ತೆ ಪುಟಿದೆದ್ದು ಚಿಮ್ಮಿ ಲೋಕದ ಜೀವನಕ್ಕೆ ಸತ್ವವನ್ನು ಪುಷ್ಟಿಯನ್ನು ಕೊಡುವದು.

ಇಜಿಪ್ತ, ಗ್ರೀಸ್, ರೋಮು, ಪ್ರಾಚೀನ ಚೀನ, ಆರ್ಯರ ಭಾರತ, ಇವುಗಳ ಪ್ರಾಚೀನ ನಾಗರಿಕತೆ ಉಳಿದಿಲ್ಲ. ಆದರೆ ಅಂದಿನ ಸಂಸ್ಕೃತಿ ಅದರ ಹಿಂದಿನ ತತ್ವ ಪ್ರಣಾಲಿ ವಿಚಾರಧಾರೆ ಇಂದಿಗೂ ನಮ್ಮ ನಾಗರಿಕತೆಯ ಅಂತಃಸತ್ವವಾಗಿದೆ.

ಹೊಸ ಮಾದರಿಯ ನಾಗರಿಕತೆಗೆ ಒಮ್ಮೆಲೇ ಹಾಯುವದು ಹೇಗೆ ಸಾಧ್ಯವಾಗುತ್ತದೆ ?

ಇತಿಹಾಸದ ಒಂದು ಸಂದರ್ಭದಲ್ಲಿ ವಿಚಾರವು ಆಚಾರಕ್ಕಿಂತ, ಸಂಕಲ್ಪವು ಸಿದ್ಧಿಗಿಂತ ಒಮ್ಮೆಲೇ ಮುಂದೆ ಓಡಿದಾಗ! ಆಗ ಈ ಮುನ್ನೋಟದ ಮುನ್ನೋಟವನ್ನು ಆ ಜನಾಂಗದ ಹೆಚ್ಚು ಮುನ್ನುಗ್ಗಿ ಬೆನ್ನಟ್ಟುತ್ತದೆ. ಹೊಸ ವಿಚಾರದ ದಿಗ್ದರ್ಶನವನ್ನು ಆದರ್ಶ ಸಾಧನೆಯ ಸಾಹಸ ಕಾರ್ಯವಾಗಿ ಕಾಣುತ್ತದೆ. ಕೆಲವರು ಕಂಡ ಕನಸು ಹಲವರ ಎಲ್ಲವರ ಭಾಗ್ಯೋದಯಕ್ಕೆ ಕಾಲದ ಕರೆಯೆನಿಸುತ್ತದೆ. ಆ ಹೊಸಕ್ಷಿತಿಜಕ್ಕೆ ಈ ಜನಾಂಗವು ಆ ಸಮಾಜವು ಪುಟಿಯುತ್ತದೆ ಮತ್ತು ಸಕಾಲಕ್ಕೆ ಆ ಸಾಧನೆಯು ಸಿದ್ಧಿಯಾಗಿ ಇತಿಹಾಸದ ಹೊಸಪರ್ವ, ನಾಗರಿಕತೆಯ ಹೊಸಯುಗ, ಸಂಸ್ಕೃತಿಯ ಹೊಸಹಂತ ಸಿದ್ಧವಾಗುತ್ತದೆ.

ಹೀಗೆ ಮಾನವನ ಮೈಯ ಕಸುವಿಗಿಂತ ಮಿದುಳಕೆಚ್ಚೇ ಇತಿಹಾಸವನ್ನು ನಿರ್ಮಿಸುತ್ತದೆ. ಅಂದರೆ ಅವನ ಭೌತಿಕ ಪರಿಸರ, ಪರಿಸರಗಳ ಪರಿಣಾಮ ಆಗುವದೇ ಇಲ್ಲವೆಂದಲ್ಲ ಅವುಗಳ ಎಲ್ಲೆ ಮೀರುವದೇ ಇತಿಹಾಸ. ಹೊಳೆಯಗತಿಗೆ ದಂಡೆಗಳು ಕಟ್ಟುನಿಟ್ಟು ಒದಗಿಸುವದು ನಿಜ. ಆದರೆ ಅವುಗಳಲ್ಲಿ ಮುನ್ನುಗ್ಗುವ ನೀರಿನ ಸೆಲೆಸೆಳೆವು ಅವುಗಳಿಂದಲ್ಲವಷ್ಟೇ? ಮಾನವಸಂಸ್ಕೃತಿಯ ಚರಿತ್ರದ ಗತಿಯೂ ಹಾಗೆಯೇ.

ಆದ್ದರಿಂದ ಈ ವಿಚಾರಧಾರೆಗಳ ಪ್ರವಾಹ ಪ್ರಭಾವಕ್ಕೆ ದೇಶಕಾಲಗಳ ಪ್ರತಿಬಂಧವಿಲ್ಲ. ಪಾಶ್ಚಾತ್ಯ ಪೌರ್ವಾತ್ಯವೆಂಬ ಪರಿಭೇದವಿಲ್ಲ. ಯುಕ್ಲಿಡ್ ಏನು, ಭಾಸ್ಕರಾಚಾರ್ಯನೇನು, ಡೇಮಾಕ್ರಿಟಿಸ್ ಏನು, ಕಣಾದನೇನು, ಕ್ಯಾಂಟನೇನು ಶಂಕರಾಚಾರ್ಯನೇನು–ತತ್ವದರ್ಶನದ ತಿರುಳೆಲ್ಲ ಒಂದೇ. ವರಾಹಮಿಹಿರನು ಯವನ ಜ್ಯೋತಿಷ್ಕರ ಬಗೆಗೆ ಅಂದಂತೆ 'ಋಷಿವತ್ ತೇಪಿ ಪೂಜ್ಯಂತೆ'. ನಮ್ಮ ದಾರ್ಶನಿಕರ ತತ್ವವೇತ್ತರ, ಮತಾಚಾರ್ಯರ ಹೆಚ್ಚು ಕಡಿಮೆ ಪರಿಚಯ ನಮಗೆ ಇದ್ದೇ ಇದೆ. ಈಗ ನಾವು ಒಟ್ಟಾಗಿ ಕುಳಿತು ಪಾಶ್ಚಾತ್ಯತತ್ವವೇತ್ತರ ವಿಚಾರಧಾರೆಯ ಪರಿಚಯವನ್ನು ಮಾಡಿಕೊಳ್ಳೋಣವೇ?

ಈ ವಿಚಾರಧಾರೆ ಕೆಲಮಟ್ಟಿಗೆ ನಮಗೆ ಹೊಸತಲ್ಲ. ನಮ್ಮ ರಾಜಾರಾಮ ಮೋಹನರಾಯರಿಂದ ಡಾ. ರಾಧಾಕೃಷ್ಣನ್‌ರವರೆಗೂ ಈ ಪಾಶ್ಚಾತ್ಯ ತತ್ವತೀರ್ಥಗಳನ್ನು ಮಿಂದೆದ್ದು ಮಡಿಯಾಗಿಬಂದವರೇ. ನಮ್ಮ ಆಧುನಿಕ ಆದರ್ಶಗಳಾದ ಸಮಾಜವಾದ, ಪ್ರಜಾಪ್ರಭುತ್ವ, ಯೋಜನಾಬದ್ಧ ವಿಕಾಸ, ವ್ಯಕ್ತಿಸ್ವಾತಂತ್ರ್ಯ ಮುಂತಾದ ಮೂಲ್ಯಗಳ ಮೂಲ ಪಾಶ್ಚಾತ್ಯ ವಿಚಾರಧಾರೆಯಲ್ಲಿಯೇ ಇದೆ. ಇತಿಹಾಸದ ಒಂದು ವ್ಯತಿಕ್ರಮಕ್ಕೆ ಬಲಿಯಾಗಿ ನಮ್ಮ ದುರ್ದೈವವು ಬ್ರಿಟಿಶರ ರಾಜಕೀಯ ದಾಸ್ಯದೊಂದಿಗೆ ಈ ಪಾಶ್ಚಾತ್ಯತತ್ವ–ವಿಚಾರಸಂಸ್ಕಾರವನ್ನು ನಮಲ್ಲಿ

ತಂದಿತು. ಆದರೆ ಈ ಮಾತ್ರಕ್ಕೆ ಆ ದಾಸ್ಯದೊಂದಿಗೆ ಈ ದರ್ಶನವನ್ನು ನಾವು ತಳ್ಳಬೇಕೆಂದಿಲ್ಲ.

ನಮ್ಮ ರಾಷ್ಟ್ರಪುರುಷರಿಗೆ, ಸ್ವಾತಂತ್ರ್ಯ ವೀರರಿಗೆ ಕ್ರಾಂತಿಕಾರಿಗಳಿಗೆ ಸ್ಫೂರ್ತಿ ಪ್ರೇರಣೆ ಮಾರ್ಗದರ್ಶನ ಸಂಘಟನಾ ಸಂಸ್ಕಾರವಿತ್ತದ್ದೇ ಈ ಪಾಶ್ಚಾತ್ಯವಿಚಾರ ಧಾರೆಯು. ಇದನ್ನೆ ದಿ. ಅಗರಕರ ಗೋಖಲೆ ಪ್ರಭೃತಿ ಸಮಾಜಸುಧಾರಕರು ವಿಚಾರಜಾಗೃತಿಯ ಉಪಾಸಕರು 'ಹುಲಿಯಹಾಲು' ಎಂದು ಕರೆದರು. ಒಂದು ಸ್ವರಾಜ್ಯದ ಈ ಹೊಸಪರ್ವವನ್ನು ಸ್ವರ್ಣಮಯವಾಗಿ ಮಾರ್ಪಡಿಸಲಿಕ್ಕೆ ನಮ್ಮ ವಿಚಾರವಂತರಿಗೆ ಇದೇ ಹಾಲಿನ ಅನುಪಾನ ಮತ್ತೆ ಬೇಕು.

ಇಂದಿನ ಸಂದರ್ಭದಲ್ಲಿ ಜ್ಞಾನದ ಮಹತ್ವ, ಜ್ಞಾನಿಗಳ ವಿಚಾರವಂತರ ಅಗತ್ಯ ಅಷ್ಟಿಷ್ಟಲ್ಲ. ನೆಲದಲ್ಲಿ ನೀರಿನ ಪಾತಳಿ ಹೆಚ್ಚಾಗುವಂತೆ ನಮ್ಮ ಜನರಲ್ಲಿ ಒಟ್ಟು ತಿಳುವಳಿಕೆಯ ವಿಚಾರವಂತಿಕೆಯು, ಹಾಗೂ ತಾತ್ವಿಕತೆಯು ಪಾತಳಿ ಹೆಚ್ಚಬೇಕು. ಅಂದರೇನೇ ನಮ್ಮ ಈ ಯೋಜನಾಬದ್ಧ ಅಭಿವೃದ್ಧಿವಿಕಾಸದ ಮಹಾಯಾತ್ರೆ ಸಫಲವಾಗುತ್ತದೆ. ಇಂದು ವಿಶೇಷಜ್ಞತೆ ವಿವಿಧ ತಜ್ಞತೆಯೇ ಶಾಖೋಪಶಾಖೆ ಯಾಗಿ ಬೆಳೆಯುತ್ತಲಿದೆ. ಇವರಿಂದ ಸುಶಿಕ್ಷಿತ ಅಥವಾ ಬುದ್ಧಿವಂತ ನಾಗರಿಕನಿಗೆ ಗೊಂಡಾರಣ್ಯವನ್ನೇ ಹೊಕ್ಕಂತೆ ಅನಿಸುತ್ತದೆ. ವಿಜ್ಞಾನವು ಹೀಗೆ ಬಹುಮುಖ ದಿಗ್ಭ್ರಮೆಗೊಳಿಸುವ ಜ್ಞಾನದ ಬುಡಕಟ್ಟು. ಏಕಾತ್ಮತೆಯನ್ನು ನಾವು ಯತ್ನವಿಟ್ಟು ಕಾಪಾಡಿಕೊಳ್ಳಬೇಕು. ಅದಕ್ಕೆ ತತ್ವಜ್ಞಾನದ ಪರಿಚಯ ಆಸ್ವಾದನೆ ಅಗತ್ಯವಾಗುತ್ತದೆ.

ಇಂದು ಜೀವನ ಮತ್ತು ಜ್ಞಾನ ಇವುಗಳ ನಡುವೆ ಅಂತರವು ಅಗಲವಾಗುತ್ತ ಹೋಗಿದೆ. ಅದಕ್ಕೆ ಸೇತುವೆಯನ್ನು ಕಟ್ಟಲು ಇದೊಂದು ಯತ್ನ. ಅತ್ಯಂತ ಸಿರಿವಂತಿಕೆಯ ನಡುವೆ ಘೋರಬಡತನ ನಮ್ಮಲ್ಲಿ ಹಬ್ಬಿದೆ. ಅದೇ ರೀತಿ ಅಭೂತ ಪೂರ್ವ ವಿದ್ಯಾ–ವ್ಯಾಸಂಗಗಳ ವೃದ್ಧಿಯ ನಡುವೆ ನಮ್ಮ ಜನತೆಯಲ್ಲಿ ಶಾಲೆ ಕಾಲೇಜು ಕಲಿತವರೆಂಬ ಜನರಲ್ಲಿಯೂ ಅವರ ಅಜ್ಞಾನ ಹುತ್ತಕಟಿ ಹಬ್ಬಿನಿಂತಿದ್ದು ಕಂಡುಬರುತ್ತದೆ. ರಾಜ್ಯಕರ್ತರಿಗೆ ಪ್ರಜೆಗಳ ಮನಸ್ಸೂ ತಿಳಿಯುವುದಿಲ್ಲ. ಸಾಮಾನ್ಯ ಜನಕ್ಕೆ ಕಲಿತವರ ಮರ್ಮ ಅರ್ಥವಾಗುವದಿಲ್ಲ. ಬುದ್ಧಿಯಿದ್ದವರೆಲ್ಲರೂ ಬುದ್ಧಿ ವಂತರಲ್ಲ. ಬುದ್ಧಿವಂತರಲ್ಲಿಯೂ ವಿಚಾರವಂತರು ಕಡಿಮೆ ! ಹಿಂದಿನ ಕಾಲದಲ್ಲಿ ಇಂದಿಗೂ ಹಳ್ಳಿಗಾಡಿನಲ್ಲಿ ಅಜ್ಞ ಅಲ್ಪಜ್ಞ ಜನರು ಮತ ಧರ್ಮ ಸಂಸ್ಥೆಗಳ ಪುರೋಹಿತ ಪಂಡಿತರೆಂಬ ವಿಶಿಷ್ಟ ಪಟ್ಟಭದ್ರ ಸ್ವಾರ್ಥದ ಪ್ರತಿಷ್ಠಿತ ವರ್ಗದ

ಮೋರೆನೋಡಿ ಬದುಕುತ್ತಿದ್ದರೆ ಇಂದು ಆ ವರ್ಗದ ವರ್ಚಸ್ಸೂ ಪೂರ್ತಿ ಕಡಿಮೆ ಆಗುವ ಮೊದಲೇ ತಜ್ಞವಿಜ್ಞಾನಿಗಳ ವಿಶೇಷಜ್ಞ ಅಧಿಕಾರಿ ಆಡಳಿತಗಾರರ ಹಾಗೂ ತಂತ್ರಜ್ಞ ಸಲಹೆಗಾರರ ಅಡಿಯಲ್ಲಿ ತಮ್ಮ ಇದ್ದಬದ್ದ ಬುದ್ಧಿಯನ್ನು ಹಳ್ಳಿಗರಂತೆ ಪೇಟೆಪಟ್ಟಣಗಳಲ್ಲಿಯು ಅಜ್ಞರೂ ಅಲ್ಪಜ್ಞರೂ ಕೂಡಿಯೇ ಅಡವಿಡಬೇಕಾಗಿದೆ !

ಈ ಮನೋದಾಸ್ಯ ಹೊಸರಾಷ್ಟ್ರಕ್ಕೆ ಹೊಸಬದುಕು ಬಾಳಲು ಹೆಣಗುವ ಹಳೆಯ ಜನಾಂಗಕ್ಕೆ ಕ್ಷೇಮವಲ್ಲ. ಇದಕ್ಕೆ ಪರಿಹಾರ ಒಂದೇ. ವಿಚಾರಸಾಹಿತ್ಯವನ್ನು ಆದಷ್ಟು ಜನಪ್ರಿಯಗೊಳಿಸುವದು. ಸುಶಿಕ್ಷಿತರ ವೈಚಾರಿಕ ಪಾತಾಳಿಯು ಹೆಚ್ಚು ವಂತೆ, ಅಶಿಕ್ಷಿತರಿಗೂ ವೈಚಾರಿಕ ಸಂಸ್ಕಾರ ಸಾಗುವಂತೆ ಆದಷ್ಟು ಯತ್ನಿಸುವದು. ಇದಕ್ಕಾಗಿ ತತ್ವಜ್ಞಾನವನ್ನು, ತತ್ವದ ಜ್ಞಾನವನ್ನೂ ಜ್ಞಾನದ ತತ್ವವನ್ನೂ ತಿಳಿಯಾಗಿ ರುಚಿಯಾಗುವಂತೆ ಪ್ರಚಾರಗೊಳಿಸುವದು. ಹಿಂದೆ ಪುರಾಣಿಕರೂ ಹರಿಕಥೆಗಾರರೂ ನಮ್ಮಲ್ಲಿಯ ವೇದಾಂತವಿಚಾರವನ್ನು ಹಳ್ಳಿಹಳ್ಳಿಗೂ ಮನೆ ಮನೆಗೂ ಅಬಾಲವೃದ್ಧರಿಗೂ ರಕ್ತಗತವಾಗುವಂತೆ ಮಾಡಿದರು. ಅಂಥ ಕೆಲಸ ಇಂದು ಅಧ್ಯಾಪಕ ಪ್ರಾಧ್ಯಾಪಕ ವರ್ಗದವರು (ಇಂದಿನ ಬ್ರಾಹ್ಮಣವರ್ಗವಿದು !) ಪಂಥತೊಟ್ಟು ಪ್ರೀತಿಯಿಂದ ಪ್ರಯತ್ನದಿಂದ ಕೈಗೊಳ್ಳಬೇಕು. ಆಧುನಿಕ ಸಂಸ್ಕೃತ ಹಾಗೂ ನಾಗರಿಕತೆಯ ವಿಚಾರಸೌಧದ ಇಟ್ಟಿಗೆಗಳಂತೆ ಇದ್ದ ಪಾಶ್ಚಾತ್ಯದಾರ್ಶನಿಕರ ತತ್ವತಥ್ಯಗಳ ತಿಳುವಳಿಕೆಯನ್ನು ಜನಪ್ರಿಯಗೊಳಿಸಿ, ಈ ಜ್ಞಾನವನ್ನು ಸಾಮಾಜಿಕ ಗೊಳಿಸಬೇಕು. ಪ್ರಾಜ್ಞರ ಮತ್ತು ಪ್ರಜೆಗಳ ನಡುವೆ ನಿಂತು ಪಂಡಿತರ ಹಾಗೂ ಪಾಮರರ ನಡುವೆ ವಿಚಾರವಿನಿಮಯದ ದಲ್ಲಾಳಿತನ ವಹಿಸಬೇಕು.

ಅಂಥ ಒಂದು ಅಲ್ಪಪ್ರಯತ್ನವು ಇಲ್ಲಿದೆ. ಮುಂಬರುವ ಲೇಖಗಳಲ್ಲಿ ನಾವು ಪಾಶ್ಚಾತ್ಯ ವಿಚಾರಧಾರೆಯ ಸಮಗ್ರ ಸಮ್ಯಗ್ ಜ್ಞಾನವನ್ನು ಮಾಡಿಕೊಡುವ ಅಟ್ಟಹಾಸ ತೊಟ್ಟಿಲ್ಲ. ಅದು ಶಕ್ಯವೇ ಇಲ್ಲ. ಎಲ್ಲಿಯೂ ಯಾವಾಗಲೂ ಜ್ಞಾನಕ್ಕೆ ಅಡ್ಡದಾರಿ ಹತ್ತಿರದ ಹಾದಿ ಇಲ್ಲ. ಇಲ್ಲಿ ನಮ್ಮ ಉದ್ದೇಶ ಅಥವಾ ಹೆದ್ದಾಸೆ ನಮ್ಮ ಓದುಗರಲ್ಲಿ ಅವರು ಓದುವ ಮನಸ್ಸುಮಾಡಿದರೆ ಮತ್ತು ಮನಸ್ಸುಕೊಟ್ಟು ಓದಿದರೆ ತತ್ವಜ್ಞಾನದ ಕುರಿತು ಪಾಶ್ಚಾತ್ಯ–ದಾರ್ಶನಿಕರ ವಿಚಾರವಾಹಿನಿಯ ಬಗೆಗೆ ಒಟ್ಟೂ ಜ್ಞಾನಪ್ರಪಂಚದ ಮುಖ್ಯ ಮೂಲ್ಯಗಳ ವಿಷಯವಾಗಿ ಕುತೂಹಲ, ಅಭಿರುಚಿ ಮತ್ತು ಈ ಶಕ್ತಿಯನ್ನು ಹುಟ್ಟಿಸುವದೆಂದು ಹಾರೈಸಲಾಗಿದೆ.

ಪ್ಲೇಟೋನಿಂದ ಆರಂಭವಾಗಿ ಆಧುನಿಕ ಅಮೇರಿಕನ್ ತತ್ವಜ್ಞಾನಿ ಡ್ಯೂವಿಯ ವರೆಗಿನ ಎಲ್ಲ ಪ್ರಮುಖ ಮತ್ತು ಪ್ರಭಾವಿಯಾದ ದಾರ್ಶನಿಕರ ವಿಚಾರ

ಪ್ರಣಾಲಿಯ ಸಾರವನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ. ಇಂಥ ಪ್ರಯತ್ನ ಅಪರಿಹಾರ್ಯವಾಗಿಯೂ ಪರಪುಷ್ಟ. ವಿಶೇಷತಃ ವಿಲ್ ಡ್ಯುರಾಂರಂಥ ಜಗತ್ಪ್ರಸಿದ್ಧ ಜಗತ್ಪ್ರಿಯ ಪ್ರಾಜ್ಞ ಗ್ರಂಥಕಾರರ ಆಧಾರವನ್ನು ಈ ಲೇಖಮಾಲೆಗೆ ಅಡಿಗಡಿಗೂ ತೆಗೆದುಕೊಳ್ಳಲಾಗಿದೆ. ಇದು ಋಷಿ ಋಣ. ಇವನ್ನು ಮನ್ನಿಸುವದು ಇವರ ವಿನಿಯೋಗವನ್ನು ಹೀಗೆ ಜ್ಞಾನದ ಪ್ರಚಾರಕ್ಕಾಗಿ ಮಾಡಿಕೊಳ್ಳುವದರಿಂದಲೇ ಸರಿ.

ಇಲ್ಲಿ ಬರುವ ದಾರ್ಶನಿಕರ ವಿಚಾರಪ್ರಣಾಲಿಯನ್ನು ಅವರ ವ್ಯಕ್ತಿತ್ವದ ಬೆಳಕಿನಲ್ಲಿಯೇ ಬಣ್ಣಿಸಲಾಗಿದೆ. ಇದೊಂದು ಬೌದ್ಧಿಕ ಸಂತರ್ಪಕಕೂಟ. ಜ್ಞಾನಾಮೃತದ ಭೋಜನ-ದೌತಣ. ವಿಶ್ವಸಂಸ್ಕೃತಿಯ ಅಂತಃಸತ್ವವಾಗಿ ನಿಂತ ಅತ್ಯುತ್ತಮ ತತ್ವವಿಚಾರಗಳನ್ನು ನೀಡಿದ ಮಹಾನುಭಾವರ ಅಡಿಯಲ್ಲಿ ಕೂತು ನಾವು ಈ ಸತ್ಸಂಗವನ್ನು ಇನ್ನುಮುಂದೆ ಮಾಡೋಣ. ಈ ಜ್ಞಾನವು ಒಂದು ಆನಂದಭಾಗ್ಯ. ಇದು ನಮ್ಮನ್ನು ಸಿರಿವಂತರನ್ನಾಗಿ ಮಾಡಲಿಕ್ಕಿಲ್ಲ. ಆದರೆ ಸ್ವಸ್ಥಚಿತ್ತರಾಗಿ ಮುಕ್ತಜೀವಿಗಳಾಗಿ ಮಾಡುವದಕ್ಕೆ ಸಂದೇಹವೇ ಇಲ್ಲ. 'ಜ್ಞಾನದೇವತು ಕೈವಲ್ಯಂ' ಎಂಬ ಮಾತು ಎಂದಿಗೂ ಸತ್ಯ. ಈ ನಮ್ಮ ಸ್ವಾಧ್ಯಾಯವು ನಮ್ಮನ್ನು ತೇಜಸ್ವಿಯಾಗಿ ಮಾಡಲಿ. ●

# ಸಾಕ್ರೆಟಿಸ್ ಮತ್ತು ಅವನ ಸಂದರ್ಭ

ಭೂಮಧ್ಯ ಸಮುದ್ರದ ಪೂರ್ವಭಾಗದಲ್ಲಿ ಯುರೋಪವು ಒಂದು ಎಲುಬಿನ ಹಂದರದಂಥ ಕೈಯನ್ನು ಚಾಚಿದೆ. ಕೈಯೇ ಗ್ರೀಸ್. ಇದರ ದಕ್ಷಿಣಕ್ಕೆ ಕ್ರೀಟ್ ಎಂಬ ಪುಟ್ಟ ನಡುಗಡ್ಡೆ. ಕ್ರಿಸ್ತನು ಹುಟ್ಟುವ ೨೦೦೦ ವರ್ಷಗಳ ಮುಂಚೆಯೇ ಈ ನಡುಗಡ್ಡೆಯು ನವನಾಗರಿಕತೆಯ ತೊಟ್ಟಿಲಾಗಿತ್ತು. ಅಲ್ಲಿಂದ ಗ್ರೀಸದ ಬೆರಳುಮೂಳೆಗಳು ಸಂಸ್ಕೃತಿಯನ್ನು ಕಸಿದುಕೊಂಡವು. ಗ್ರೀಸದ ಪೂರ್ವಕ್ಕೆ ಏಜಿಯನ್ ಸಮುದ್ರ. ಅದರಾಚೆಗೆ ಏಶಿಯಾಖಂಡ ಮತ್ತು ಅದರ ಪ್ರಚಂಡ ಪ್ರಾಚೀನ ನಾಗರಿಕತೆ-ಸಂಸ್ಕೃತಿ. ಅಂದು ಈ ಏಶಿಯಾದ ಕರಿದಂಡೆ (ಏಶಿಯಾ ಮೈನರ್) ವಾಣಿಜ್ಯ ಉದ್ದಿಮೆ ಉತ್ಕರ್ಷಗಳಿಂದ ತುಳುಕಾಡುತ್ತಿತ್ತು. ಅದು ಪೂರ್ವಪಶ್ಚಿಮಗಳ ಸಂಯೋಗಭೂಮಿ ಆಗಿತ್ತು. ಗ್ರೀಸದ ಪಶ್ಚಿಮಕ್ಕೆ ಭೂಮಧ್ಯ ಸಮುದ್ರದ ನೀಲಗನ್ನಡಿಯಲ್ಲಿ ನಿಲುಕಿನೋಡುತ್ತ ಅಡ್ಡ ಗೋಪುರವಂತೆ ನಿಂತಿದೆ ಇಟಲಿ. ಅದರ ಕೆಳಗೆ ಸಿಸಿಲಿ ಆಚೆಗೆ ಸ್ಪೇನ ಅದರ ತುದಿಗೆ ಅಂದಿನ 'ಹರ್ಕ್ಯುಲಸ್‌ನ ಸ್ತಂಭಗಳು' ಇಂದಿನ ಜಿಬ್ರಾಲ್ಟರಬಂಡೆ. ಉತ್ತರದಲ್ಲಿ ಅರೆಬರ್ಬರ ಅರೆಬೆಟ್ಟ ಬೇಟೆಯ ಬಣಗಳು. ಥೆಸಾಲೇ, ಇಪೆರಸ್ ಮತ್ತು ಮೆಸಿಡೋನಿಯ ಈ ಕಾಡುಬಣಗಳ ಕೆಚ್ಚಿನ ನೆತ್ತರವೇ ಮುಂದೆ ಗ್ರೀಸದ ವೀರಗಾಥಾ ಯುಗದ ಮಹಾ ಪ್ರತಿಭೆಗೆ ಸತ್ವವೆರೆಯಿತು.

ಗ್ರೀಸ್ ದ್ವೀಪಸಮೂಹದಂತೆ ಛಿನ್ನವಿಚ್ಛಿನ್ನ ಕರಾವಳಿ ಅಲ್ಲಲ್ಲಿ ನೀರು-ನೆಲ ಒಂದನ್ನೊಂದು ತಿವಿದು ತಳ್ಳಿ ಆ ಪ್ರದೇಶವನ್ನು ತುಂಡುತುಂಡು ನಾಡಾಗಿ ಮಾರ್ಪಡಿಸಿತು. ಅಂದು ಈ ನಾಡುಗಳಲ್ಲಿ ಸಾರಿಗೆಸಂಪರ್ಕ ತುಂಬ ಬಿಗಿಯಾಗಿತ್ತು. ಅದರಿಂದ ಪ್ರತಿಯೊಂದು ಕೊಳ್ಳವೂ ತನ್ನದೇ ಆದ ನಗರ ರಾಜ್ಯವನ್ನು ನಗರ ಸಂಸ್ಕೃತಿಯನ್ನು ಅರಳಿಸಿಕೊಂಡಿತು. ಒಂದೆರಡು ನಗರ ರಾಜ್ಯಗಳು ಸುತ್ತಲೆಲ್ಲ ಬೇಸಾಯದ ಬಯಲು ಬೆಟ್ಟದ ಇಳುಕಲುಗಳು, ಯೂಬಿಯ, ಲಾಕ್ರಿಸ್, ಇಟೋಲಿಯ, ಫೋರಿಸ್, ಬೂತಿಯಾ ಅಶವಾ, ಆರ್ಗೋಲಿಸ್, ಎಲಿಸ್, ಆರ್ಕೆಡಿಯ, ಮೆಸೇನಿಯ, ಲಕೋನಿಯ ಮತ್ತು ಅದರ ರಾಜಧಾನಿ ಸ್ಪಾರ್ಟಾ, ಎಟ್ಟಿಕಾ ಮತ್ತು ಅದರ ರಾಜಧಾನಿ ಅಥೆನ್ಸ.

ಈ ಅಥೆನ್ಸ ಗ್ರೀಸದ ಎಲ್ಲ ಹಿರಿ-ಕಿರಿನಗರಗಳಲ್ಲಿ ತೀರ ಮೂಡಣಕ್ಕೆ ಇದೆ. ಅದು ಗ್ರೀಸದ ದ್ವಾರಕೆ. ಏಶಿಯಾ ಮೈನರಿಗೆ ಅದುವೆ ಅಗಸೆ. ಏಶಿಯಾದ ಭೋಗವಿಲಾಸದ ಸಾಮಗ್ರಿ ಮತ್ತು ಸಂಸ್ಕೃತಿಯು ಅಥೆನ್ಸದೊಳಗಿನಿಂದಲೇ

ಗ್ರೀಸಿಗೆ ಅಲ್ಲಿಂದ ಪಶ್ಚಿಮಕ್ಕೆ ಹರಿದುಬಂದದ್ದು. ಅಥೆನ್ಸಕ್ಕೆ ಉತ್ತಮ ಬಂದರವಿತ್ತು. 'ಪಿರೇಯುಸ್' ಅದರ ವ್ಯಾಪಾರೀ ಹಡಗುಪಡೆ ಬಲಿಷ್ಠವಾಗಿತ್ತು.

ಕ್ರಿಸ್ತಪೂರ್ವ ೪೯೦-೪೭೦ರ ಸುಮಾರಿಗೆ ಪರ್ಷಿಯದ ಪುಂಡದೊರೆ ಡೇರಿಯುಸ್ ಮತ್ತು ರೋರೆಕ್ಲಸ್ ಗ್ರೀಸದಮೇಲೆ ದಾಳಿ ಇಟ್ಟರು. ಈ ಸ್ವತಂತ್ರ ಸ್ವಚ್ಛಂದ ನಡುಗಡ್ಡೆಗಳನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವ ಹೆದ್ದಾಸೆಯಿಂದ. ಆದರೆ ಕಡಲರಾಣಿ ಅಥೆನ್ಸ ಮತ್ತು ಬೆಟ್ಟದರಸ ಸ್ಪಾರ್ಟಾ ಎರಡೂ ನಗರ ರಾಜ್ಯಗಳು ಒಟ್ಟಾಗಿ ದಂಡುಕಟ್ಟಿ ಈ ದಾಳಿಯನ್ನು ಬಡಿದು ಹಿಮ್ಮೆಟ್ಟಿದವು. ಯುವಕ ಯುರೋಪ ಮತ್ತು ಅಜ್ಜ ಏಶಿಯಗಳ ನಡುವೆ ಆದ ಮೊದಲನೆಯ ಹೋರಾಟವಿದು ! ಈ ಹೋರಾಟದಲ್ಲಿ ಸ್ಪಾರ್ಟಾ ದಂಡನ್ನೂ ಅಥೆನ್ಸ ಹಡಗು ಪಡೆಯನ್ನೂ ಒದಗಿಸಿತು. ಯುದ್ಧ ಮುಗಿದಮೇಲೆ ಸ್ಪಾರ್ಟಾದ ದಂಡು ಬೆದರಿತು. ಅಲ್ಲಿ ಯುದ್ಧೋತ್ತರ ಕಾಲದ ನಿರುದ್ಯೋಗ, ದೊಂಬಿ, ಗೊಂದಲಗಳ ಸುಳಿದಾಟ ಪೆದ್ದಿತು. ಆದರೆ ಜಾಣರ ಬೀಡಾದ ಅಥೆನ್ಸ ತನ್ನ ಹಡಗುಪಡೆಯನ್ನು ವ್ಯಾಪಾರೀ ಪಡೆಯಾಗಿ ಮಾರ್ಪಡಿಸಿ ಪ್ರಾಚೀನ ಜಗತ್ತಿನ ಅತಿಶ್ರೇಷ್ಠ ವಣಿಕ್ ನಗರಗಳಲ್ಲಿ ಒಂದಾಗಿ ಮೆರೆಯಿತು. ಸ್ಪಾರ್ಟಾ ಹಿಂದೆಬಿತ್ತು. ಮರಳು ಮಣ್ಣುಪಾಲಾಗಿ ನೇಗಿಲಿಗೆ ಹೂಡಿಬಿದ್ದು ಅದರ ಬದುಕು ಮಲೆತು ನಿಂತಿತು. ಆದರೆ ಅಥೆನ್ಸ ಬಂದರ ಪೇಟೆಯಾಯಿತು. ನಾಲ್ಕೂ ದಿಕ್ಕಿನ ಜನರು, ವಿಚಾರಧಾರೆಗಳು, ರೀತಿನೀತಿಗಳು, ಬಾಳಿನ ಪ್ರವಾಹಗಳು ಬಂದು ಬೆರೆಯುವ ಸಂಸ್ಕೃತಿಸಂಗಮವಾಯಿತು. ಅಲ್ಲಿ ಮಿದುಳಿಗೆ ಆವ್ಹಾನ, ವಿಚಾರಕ್ಕೆ ಚಾಲನೆ, ದೃಷ್ಟಿಗೆ ತಾರತಮ್ಯ, ಜ್ಞಾನಕ್ಕೆ ವಿಶ್ಲೇಷಣೆ ಮತ್ತು ಹೃದಯಕ್ಕೆ ಸಂಸ್ಕಾರ ಒದಗಿಸುವ ಕೇಂದ್ರ ಸಿದ್ಧವಾಯಿತು.

ಜ್ಞಾನ-ವಿಜ್ಞಾನಗಳ ಸಿದ್ಧಿಗೆ ಸಂಸ್ಕೃತಿಯ ಸಾಧನೆಗೆ ಮೊದಲುಬೇಕು ವಿರಾಮ ಮತ್ತು ಕ್ಷೇಮ. ಅದಕ್ಕೆ ಬೇಕು ಸಾಂಪತ್ತಿಕ ಸ್ವಾಸ್ಥ್ಯ. ಕಡಲಲ್ಲಿ ದಿಕ್ಕು-ದಾರಿ ತೋರಿಸುವ ಗ್ರಹತಾರೆಗಳಿಂದ ಗ್ರೀಕ್ ಮೇಧಾವಿಗಳು ಬಾಳಿನ ಒಗಟುಗಳಿಗೆ ಬಗೆಹರಿಕೆಯನ್ನೂ ವಿಶ್ವದ ರಹಸ್ಯಕ್ಕೆ ಆ ಉತ್ತರವನ್ನೂ ಕೇಳಹತ್ತಿದರು. ಗ್ರೀಸದ ಆರಂಭದ ದಾರ್ಶನಿಕರು ಜ್ಯೋತಿಷ್ಕರೇ ಆಗಿದ್ದರು. ಪರ್ಷಿಯಾದೊಂದಿಗೆ ಕದನದಲ್ಲಿ ಕಾಣಿಸಿದ ಸಾಹಸವನ್ನು ಪಟುತ್ವವನ್ನು ಗ್ರೀಕರು ಈಗ ವಿಧಾಯಕ ವೈಜ್ಞಾನಿಕ ರಂಗದ ವಿಸ್ತರಣೆಯಲ್ಲಿ ತೋರಿಸತೊಡಗಿದರು. ಎಲ್ಲ ಜ್ಞಾನವು ಅದರ ದೃಷ್ಟಿಯ ಪ್ರಾಂತವಾಯಿತು.

ಆರಂಭದಲ್ಲಿ ಈ ತತ್ವದರ್ಶನವು ಭೌತಿಕವೇ ಆಗಿತ್ತು. ಜಡದ ಜಾಡನ್ನು

ಬಿಟ್ಟಿದ್ದಿಲ್ಲ. ಭೌತಿಕ ಪ್ರಪಂಚದ ಅಂತಿಮ ತತ್ವವು ಕೊನೆಯ ಅವಿಭಾಜ್ಯ ಘಟಕಗಳು ಯಾವವು ? ಇದುವೆ ಅವರ ಜಿಜ್ಞಾಸೆಯ ವಿಷಯವಾಯಿತು. ನಮ್ಮಲ್ಲಿಯ ವೈಶೇಷಿಕರ ವಿಷಯದಂತೆ ಈ ಜಿಜ್ಞಾಸೆಯ ಪರಿಣತಿ ಡೆಮೋಕ್ರಿಟಸ್ (ಕ್ರಿ. ಪೂ. ೪೬೦-೩೬೦) ನ ಜಡವಾದದಲ್ಲಿ ಆಯಿತು. ವಾಸ್ತವವಾಗಿಯೂ ಪರಮಾಣು ಮತ್ತು ಅವಕಾಶ ಇವೆರಡಲ್ಲದೇ ಇನ್ನೊಂದಿಲ್ಲ ಎಂದು ಆತ ಸಾರಿದನು. ಗ್ರೀಕ್ ತತ್ವಜ್ಞಾನದ ಒಂದು ವಿಚಾರಧಾರೆಯ ಮೂಲವಿದು. ಇದೇ ಮುಂದೆ ಎಪಿಕ್ಯೂರಸ್ (ಕ್ರಿ. ಪೂ. ೩೪೨-೨೭೦) ನಲ್ಲಿ ಹೊಸವಿಕಾಸವನ್ನು ಕಂಡಿತು. ಆದರೆ ಗ್ರೀಕ್ ದರ್ಶನದ ವಿಶೇಷ ಅವಿಷ್ಕಾರವು ಸೋಫಿಸ್ಟ ಸಂಪ್ರದಾಯವಾಗಿ ವ್ಯಕ್ತವಾಯಿತು. ಈ ಸೋಫಿಸ್ಟರು ಜಂಗಮರು. ಇವರದು ಚರಪೀಠ. ಇವರ ದೃಷ್ಟಿ ಅಂತರ್ಮುಖಿ. ನಿವೃತ್ತಿಪರ. ಊರಿಂದ ಊರಿಗೆ ಅಲೆಯುತ್ತ ತತ್ವವಿಚಾರದ ಪ್ರಚಾರಮಾಡುವ ಜ್ಞಾನಿಗಳು ಇವರು. ಹೊರ ಜಗತ್ತಿಗಿಂತ ಅಂತರಂಗದ ವಿಚಾರ ಮತ್ತು ಸ್ವಭಾವ ಪ್ರಕೃತಿಯನ್ನೇ ಧ್ಯಾನಿಸಿ ಚಿಂತಿಸಿ ಆತ್ಮಜ್ಞಾನವನ್ನು ಪಡೆಯುವ ಪಂಥ ಇವರೇ ಹಾಕಿಕೊಟ್ಟವರು. ಈ ಸೋಫಿಸ್ಟರೆಲ್ಲ ಒಳ್ಳೇ ಚತುರರು. ಇವರಲ್ಲಿ ಗೋರ್ಗಿಯಸ್ ಹಿಪ್ಪಾಯಸ್ ರಂಥವರು ಒಳ್ಳೇಯ ವಾದಪಟುಗಳು. ಪ್ರೊತಾಗೋರಸ್ ಪ್ರೊಡಿಕಸ್‌ರಂಥ ಸೋಫಿಸ್ಟರು ಘನ ವಿದ್ವಾಂಸರಾಗಿದ್ದರು. ಇಂದಿನ ನಮ್ಮ ಮನಸ್ಸು ಮತ್ತು ವರ್ತನೆಗೆ ಸಂಬಂಧಪಟ್ಟ ಯಾವ ಸಮಸ್ಯೆಯೂ ಅಂದಿನ ಈ ಸೋಫಿಸ್ಟರಿಗೆ ಹೊಸದಿದ್ದಿಲ್ಲ. ನಮ್ಮ ಪ್ರಚಲಿತ ತತ್ವಜ್ಞಾನ ಮಾರ್ಗಗಳಲ್ಲಿ ಬರುವ ಅನೇಕ ಪ್ರಮೇಯಗಳಿಗೆ ಅವರು ತಮ್ಮಮಟ್ಟಿಗೆ ಉತ್ತರವನ್ನು ಕಂಡುಕೊಂಡಿದ್ದರು. ಈ ಸೋಫಿಸ್ಟರು ಯಾವ ವಿಷಯದಲ್ಲಿಯೂ ಪ್ರಶ್ನೆ ಎಬ್ಬಿಸುತ್ತಿದ್ದರು. ಇವರಿಗೆ ಬುದ್ಧಿ ಒಂದೇ ಪ್ರಮಾಣ ಅದರ ನ್ಯಾಯತೀರ್ಪಿಗಾಗಿ ಯಾವ ಮತ ಪಂಥದ ಧರ್ಮ, ನಿಷ್ಠೆ, ಸಂಪ್ರದಾಯ, ನೀತಿ ನಿಯಮವನ್ನು ಅವರು ಆಪಾದನೆಗಾಗಿಯೋ ಸಮರ್ಥನೆಗಾಗಿಯೋ ಸಾಕ್ಷಿಗಾಗಿಯೋ ಆವ್ಹಾನಿಸುತ್ತಿದ್ದರು.

ನೀತಿಯಲ್ಲಿ ರಾಜನೀತಿಯಲ್ಲಿ ಸೋಫಿಸ್ಟರದು ಎರಡು ವಿಚಾರಧಾರೆಗಳು. ಒಂದು ನಿಸರ್ಗವೆಲ್ಲ ಒಳಿತು. ನಾಗರೀಕತೆಯೇ ಕೆಡಕು ಎಂಬ ವಿಚಾರಧಾರೆ. ಇದರ ಮೇರೆಗೆ ನೈಸರ್ಗಿಕವಾಗಿ ಸಹಜ ಧರ್ಮದಿಂದ ಮಾನವರೆಲ್ಲ ಸರಿಸಮಾನರು. ಕಾಯಿದೆ ಎಂಬುದು ಮುಂದೆ ಬಲಿಷ್ಠರು ದುರ್ಬಲರನ್ನು ಆಳಲು ಮಾಡಿಕೊಂಡ ಸಂಕೋಲೆ. ಇನ್ನೊಂದು ಧಾರೆಯಂತೆ, ನಿಸರ್ಗವು ನೀತಿಗೆ ಒಳಿತು ಕೆಡಕಿಗೆ ಅತೀತ. ನೈಸರ್ಗಿಕವಾಗಿಯೇ ವಿಷಮತೆ ತಾರತಮ್ಯ ನೆಲೆಗೊಂಡಿದೆ. ಮಾನವರಲ್ಲಿ ಸಮಾನತೆ ಇಲ್ಲ. ನೀತಿಯೆಂಬುದು ದುರ್ಬಲರು ಬಲಿಷ್ಠರನ್ನು ನಿಯಂತ್ರಿಸಲು ತಡೆಹಿಡಿಯಲು

ಹೂಡಿದ ಹಂಚಿಕೆ. ಶ್ರೇಷ್ಠ ಸತ್ತೆಯೇ ಎಲ್ಲ ಆಡಳಿತಗಳಲ್ಲಿ ಉತ್ತಮ.

ಸೋಫಿಸ್ಟರ ಈ ಎರಡನೆಯ ವಿಚಾರಧಾರೆಯ ಬೆನ್ನಿಗೆ ಅಥೆನ್ಸದ ಸಾಮಾಜಿಕ ಸಂದರ್ಭದ ಒಂದು ಪ್ರೇರಣೆಯೂ ಇತ್ತು. ಅಥೆನ್ಸದಲ್ಲಿ ಸಿರಿವಂತರ ಶ್ರೇಷ್ಠ ಸತ್ತೆಯನ್ನು ಸ್ಥಾಪಿಸಬೇಕೆಂದು ಪ್ರತಿಪಾದಿಸುವ ಒಂದು ಬಲಿಷ್ಠ ಅಲ್ಪಸಂಖ್ಯಾತರ ಪಕ್ಷವು ತಲೆಯೆತ್ತಿತ್ತು. ಅದು ಪ್ರಜಾಪ್ರಭುತ್ವವನ್ನು ಧಿಃಕರಿಸುತ್ತಿತ್ತು. ಪ್ರಜಾ ಪ್ರಭುತ್ವವೆಂಬುದು ಬರೇ ಡಂಭಾಚಾರ. ಅಸಮರ್ಥರು ಹೂಡಿದ ಸಾಮರ್ಥ್ಯದ ವಿಡಂಬನೆ ಎಂದು ಈ ಶ್ರೇಷ್ಠ ಸತ್ತಾ (ಓಲಿಗಾರ್ಕಿ) ಪಕ್ಷವು ಪ್ರಚಾರ ನಡೆಯಿಸಿತ್ತು. ಅದು ಬಹುವಂಶ ನಿಜವೂ ಆಗಿತ್ತು.

ಅಂದು ಅಥೆನ್ಸದ ೪೦೦೦೦೦ ಪ್ರಜೆಗಳಲ್ಲಿ ೨೫೦೦೦೦ ಬರೆ ಗುಲಾಮರಾಗಿದ್ದರು. ಇವರಿಗೆ ಯಾವ ರಾಜಕೀಯ ಹಕ್ಕೂ ಇದ್ದಿಲ್ಲ. ಮತಾಧಿಕಾರವೆಲ್ಲಿಂದ ಬಂತು ? ಉಳಿದ ೧೫೦೦೦೦ ನಾಗರಿಕರೆಂಬವರಲ್ಲಿ ಸರಕಾರವನ್ನು ನಡೆಯಿಸುವ ಮಹಾಸಭೆ (ಎಕ್ಲೇಶಿಯ)ಗೆ ಕೆಲವೇ ಜನರು ಬರುತ್ತಿದ್ದರು. ಆದಾಗ್ಯೂ ಬಂದವರೆಲ್ಲ ಪ್ರಜಾ ಪ್ರಭುತ್ವವನ್ನು ಪೂರ್ತಿ ಆಚರಣೆಯಲ್ಲಿ ತರುತ್ತಿದ್ದರು. ಈ ಮಹಾಸಭೆಗೇ ಸಾರ್ವ ಭೌಮ ಸತ್ತೆಯಿತ್ತು. ಇವರೊಳಗಿಂದ ವರಿಷ್ಠ ಶಾಸಕಮಂಡಳವು (ದಿರಾಸ್ತೇರಿಯ) ಚುನಾಯಿತವಾಗುತಿತ್ತು. ಅದರ ಸದಸ್ಯರು ನಾವಿಕ ಜನ. ಆ ಮಟ್ಟಿಗೆ ಇವರನ್ನು ಲಂಚದಿಂದ ಲೋಭಿಸುವದು ಕಷ್ಟ ಸಾಧ್ಯವಾಗಿತ್ತು ! ಈ ಸಂಸ್ಥೆಯಷ್ಟು ಪ್ರಜಾಪ್ರಭುತ್ವವಾದಿಯೂ ಅಷ್ಟೇ ಹಾಸ್ಯಸ್ಪದವೂ ಆದ ಸಂಘಟನೆ ಬೇರೊಂದು ಆಗಿರಲಾರದು !

ಕ್ರಿ. ಪೂ. ೪೩೦-೪೦೦ರಲ್ಲಿ ಗ್ರೀಸದಲ್ಲಿ ಪೆಲೋ ಪೊನ್ನೇಶಿಯನ್ ಯುದ್ಧ ನಡೆಯಿತು. ಒಂದು ತಲೆಮಾರಿನುದ್ದಕ್ಕೂ ಈ ಯುದ್ಧ ಚಾಚಿತ್ತು. ಅದರಲ್ಲಿ ಸ್ಪಾರ್ಟಾ ಮತ್ತು ಅಥೆನ್ಸ ಇದಿರಾಳಿ ವೈರಿಗಳು. ಸ್ಪಾರ್ಟಾದ ಭೂಮಿಬಲ ಅಥೆನ್ಸದ ಸಮುದ್ರ ಬಲವನ್ನೂ ಸೋಲಿಸಿತು. ಈ ತುರ್ತು ಪರಿಸ್ಥಿತಿಯನ್ನು ರಾಷ್ಟ್ರದ ಗಂಡಾಂತರ ವನ್ನೂ ಎದುರಿಸಲಿಕ್ಕೆ ಶ್ರೇಷ್ಠ ಸತ್ತಾಪಕ್ಷ ಕ್ರಿಟಿಯಸ್‌ನ ಹಿರಿತನದಲ್ಲಿ ಪ್ರಜಾ ಪ್ರಭುತ್ವಪದ್ಧತಿಯು ಯುದ್ಧಕಾಲದಲ್ಲಿ ಅಸಮರ್ಪಕವೂ ಅಸಮರ್ಥವೂ ಎಂದು ಪ್ರತಿವಾದಿಸಿತು. ಒಳ-ಒಳಗೆ ಈ ಪಕ್ಷವು ಸ್ಪಾರ್ಟಾದ ಶಾಸನ ಸತ್ತೆಯನ್ನು ಪ್ರಶಂಸಿತು. ಆದರೆ ಅಥೆನ್ಸ ಸರಕಾರ ಈ ಶ್ರೇಷ್ಠ ಸತ್ತಾಪಕ್ಷಪಾತಿ ಮುಂದಾಳು ಗಳನ್ನು ರಾಜ್ಯದಹೊರಗೆ ಅಟ್ಟಿತು. ಆದರೆ ಅಥೆನ್ಸ ಸೋತು ಬಿದ್ದಾಗ ಅದನ್ನು ಮೆಟ್ಟಿನಿಂತ ಸ್ಪಾರ್ಟಾ ಈ ಮುಂದಾಳುಗಳನ್ನು ತಿರುಗಿಕರೆಯಿಸಿಕೊಳ್ಳಬೇಕೆಂದು

ಒಂದು ಶರ್ತನ್ನೂ ಒಪ್ಪಂದದ ಕರಾರುಗಳಲ್ಲಿ ಹಾಕಿತು. ಕ್ರಿಟಿಯಸ್‌ನ ಹಿರಿತನದಲ್ಲಿ ಈ ಶ್ರೇಷ್ಠ ಸತ್ತಾವಾದಿಗಳು ತಿರುಗಿಬಂದರು. ಪ್ರಜಾಪ್ರಭುತ್ವದ ವಿರುದ್ಧ ಸಿರಿವಂತವರ್ಗದ ಕ್ರಾಂತಿಯನ್ನು ಸಾರಿದರು. ಪ್ರಜಾಪ್ರಭುಗಳೇ ಅಥೆನ್ಸಿಗೆ ಸೋಲುತಂದವರೆಂದು ಆಯಿತು ! ಆದರೆ ಈ ಕ್ರಾಂತಿ ಯಶಸ್ವಿ ಆಗಲಿಲ್ಲ. ಒಂದು ಕಾಳಗದಲ್ಲಿ ಕ್ರಿಟಿಯಸ್‌ನೇ ಹೋರಾಡಿ ಮಡಿದನು.

ಈ ಕ್ರಿಟಿಯಸ್ ಸಾಕ್ರೆಟಿಸನ ಒಬ್ಬ ಶಿಷ್ಯನಾಗಿದ್ದನು. ದಾರ್ಶನಿಕ ಪ್ಲೇಟೋನ ಕಕ್ಕನಾಗಿದ್ದನು.

## ಸಾಕ್ರೆಟಿಸ್

ಶತಮಾನಗಳ ಆಚೆಯಿಂದಲೂ ಇಂದಿಗೂ ಜಗತ್ತಿನ ಮೇಧಾವಿಗಳನ್ನು ಮರಳುಗೊಳಿಸುತ್ತಿರುವ ಸಾಕ್ರೆಟಿಸ್ ತೀರ ಅಂದಗೇಡಿಯಾದ ವ್ಯಕ್ತಿ. ಅವನದೊಂದು ಅರ್ಧ (ಪಕ್ಷ) ಪ್ರತಿಮೆ ಇನ್ನೂ ಉಳಿದಿದೆ. ಅದರಿಂದ ತೋರಿಬರುವದೇನು ? ಬೋಳು-ಬೊಕ್ಕುತಲೆ. ದೊಡ್ಡದೊಂದು ಮೊಗ. ಆಳವಾದ ದಿಟ್ಟಿಸುವ ಕಣ್ಣು. ಅಗಲವಾದ ಚಪ್ಪಟೆ ಮೂಗು. ಈ ಮುಖ ದಾರ್ಶನಿಕನಿಗಿಂತ, ಮಹಾತತ್ತ್ವವೇತ್ತನಿಗಿಂತ, ಹೊರೆಯೆತ್ತುವ ಕೂಲಿಗೇ ಹೆಚ್ಚು ಒಪ್ಪುವಂತಹದು.

ಆದರೂ ಈ ಮೊಗದಲ್ಲಿ ಮುಗ್ಧ ಸರಳತನ. ಮಾನವತೆಯ ಮರುಕವಿದೆ. ಈ ಸರಳತನ ಈ ಮರುಕಗಳಿಂದಲೇ ಸಾಕ್ರೆಟಿಸ್, ಅಂದು ಅಥೆನ್ಸಿನ ನವಯುವಕರಲ್ಲಿಯ ಅತ್ಯುತ್ತಮ ಭಾವಜೀವಿಗಳಿಗೆ ಮೇಧಾವಿಗಳಿಗೆ ಅತೀವ ಪ್ರೀತಿಯ ಆಚಾರ್ಯನಾದನು. ಇವನ ಆಕರ್ಷಣೆಯ ಮರ್ಮವೇ ಇಲ್ಲಿದೆ. ಶ್ರೀಮಂತ ವೃತ್ತಿಯ ಪ್ಲೇಟೋ, ಪಾಂಡಿತ್ಯ ಪ್ರೌಢಿಮೆಯ ಅರಿಸ್ಟಾಟಲ ಇವರಿಗಿಂತಲೂ ಸಾಕ್ರೆಟಿಸನ ಬಗೆಗೆ ನಮಗೆ ತಿಳಿದುಬಂದ ಚರಿತ್ರಾಂಶಗಳು ಕಡಿಮೆ. ಆದರೂ ೨೩೦೦ ವರ್ಷಗಳ ಆಚೆಯಿಂದಲೂ ಸಾಕ್ರೆಟಿಸನ ಆ ಅಸಡ್ಡಾಳ ಆಕೃತಿ ನಮಗೆ ಆತ್ಮೀಯವಾಗಿ ಕಾಣುತ್ತದೆ. ಹುಡುಡಿದ ಮಾಸಿದ ನಿಲುವಂಗಿ, ಅಂದಗೇಡಿಯಾದ ಚಲನವಲನ, ಸುತ್ತಲೂ ಗುಲ್ಲೆಬ್ಬಿಸುವ ರಾಜಕೀಯದ ಗೊಂಡಾರಣ್ಯದಲ್ಲಿಯೂ ಹಾಯಾಗಿ ಹಗುರಾಗಿ ನಡೆಯುವ ರೀತಿ. ತರುಣರನ್ನೂ ಪಂಡಿತರನ್ನೂ ಮನ ಒಲಿಸಿ ದೇಗುಲದ ಪಡಸಾಲೆಗೆ ಒಯ್ದು ಅಲ್ಲಿ ಸಂಭಾಷಣೆಗಳಲ್ಲಿ ಅವರನ್ನು ತೊಡಗಿಸಿ ಅವರು ಆಡುವ ಮಾತುಗಳ ಪ್ರಶ್ನೆಗಳನ್ನು ಕೇಳಿ ತಿದ್ದಿ ಖಚಿತಗೊಳಿಸುವ ಅವನ ನಿಜವಾದ ಉಪನಿಷತ್ ಪದ್ಧತಿ ಇವೆಲ್ಲವೂ ಒಂದಾಗಿ ನಮ್ಮ ಕಣ್ಣಮುಂದೆ ಕಟ್ಟಿನಿಂತಂತೆ ಅನಿಸುತ್ತದೆ.

ಸಾಕ್ರೆಟಿಸನ ಸುತ್ತು ಮುತ್ತುವ ಜನ ಒಂದು ವಿಚಿತ್ರ ಕಲಬೆರೆಕೆಯ ನೆರವಿ. ಅವನ ಉಪರೋಧಕ್ಕೆ ಮರುಳಾದವರು ಕೆಲವರು ಪ್ಲೇಟೋನಂಥವರು, ಅವನ ಪರಿವೆ ಇಲ್ಲದ ಒಡತನಕ್ಕೆ ಮೆಚ್ಚಿದವರು ಕೆಲವರು, ಅಂಟಾಸ್ಥಿನಿಸನಂಥವರು, ಅವನ ಅರಾಜಕತೆಯ ಅಭಿಪ್ರಾಯಗಳಿಗೆ ಮನಸೋತವರು ಕೆಲವರು. ಅರಿಸ್ಟೆಪ್ಪಸ್ ನಂಥವರು. ಇಂದು ಮಾನವಕೋಟಿಯನ್ನೂ ಮಂಕುಬಡಿಸುವ ಎಲ್ಲ ಸಮಸ್ಯೆಗಳೂ ಪ್ರಮೇಯಗಳೂ ಅಂದು 'ಅನುಭವಮಂಟಪ'ದ ಅನುಯಾಯಿಗಳ ಚಿತ್ತಗಳನ್ನು ಕವಡಿದ್ದವು, ಬುದ್ಧಿಯನ್ನು ಕೆದಕಿದ್ದವು.

ಸಾಕ್ರೆಟಿಸ್ ಹೇಗೆ ಬದುಕುತಿದ್ದ ಯಾರಿಗೂ ಗೊತ್ತಿಲ್ಲ. ಆತ–ಸ್ಥಿತ–ಪ್ರಜ್ಞ, ಅವನ ಭಾಷೆ ನಮಗೆಗೊತ್ತು. ಆದರೆ ಈತ ಉಣ್ಣುವದೇನು. ಬಿಡುವದೇನು ಗೊತ್ತಿಲ್ಲ. ಅವನ ಶಿಷ್ಯರು ತಮ್ಮ ಮನೆಗೆ ಅವನಿಗೆ ಔತಣ ಕೊಟ್ಟಾಗ ಆತ ಹೋಗುತ್ತಿದ್ದನು. ಶಿಷ್ಯರಿಗೆ ಸಾಕ್ರೆಟಿಸ್ ತುಂಬ ಮೆಚ್ಚಿಗೆ ತನ್ನ ಮನೆಯಲ್ಲಿ ಅವನಿಗೆ ಅಷ್ಟು ಸ್ವಾಗತ ವಿದ್ದಿಲ್ಲ. ಏಕೆಂದರೆ ಈತ ಮನೆಗೇ ಮಾರಿಯಾಗಿದ್ದ ಪರೋಪಕಾರಿ. ಅವನ ಹೆಂಡತಿ ರಝಾಂತೀಪಿ ಹೊಯ್ಕಾಲಿ. ಗಂಡನು ಮನೆಗೆ ತರುವದು ಕೆಟ್ಟ ಹೆಸರೇ ಹೊರತು ಅನ್ನ ರೊಟ್ಟಿಯಲ್ಲವೆಂದು ಅವಳ ಅಪಾದನೆ. ಸಾಕ್ರೆಟಿಸ್ ಹೆಂಡತಿ–ಮಕ್ಕಳನ್ನು ಅಲಕ್ಷಿಸು ತ್ತಿದ್ದನೆಂದು ಲೋಕಪ್ರಸಿದ್ಧಿ, ರಝಾಂತೀಪಿ ಸಾಕ್ರೆಟಿಸನಷ್ಟೇ ವಾಚಾಳಿ, ಮಾತು ಗೂಳಿ. ಆದರೆ ಈ ದಂಪತಿಗಳ ಸಂವಾದ–ವಿವಾದಗಳನ್ನೂ ಪ್ಲೇಟೋ ಬರೆದಿಟ್ಟಿಲ್ಲ ! ಉರಿವೋರೆಯ ಬೀರು ನುಡಿಯ ರಝಾಂತೀಪಿ ಸದಾಕಾಲವೂ ಸಾಕ್ರೆಟಿಸನಿಗೆ ಮನೆಯೊಳಗಿನ ಮಾರಿಯಂತೆ ಕಾಡುತ್ತಿದ್ದರೂ, ಅವಳಿಗೂ ಅವನಲ್ಲಿ ಅವಳದೇ ಬಗೆಯಲ್ಲಿ ಆಳವಾದ ಪ್ರೀತಿ ಇತ್ತು. ಆತ ೭೦ ವರ್ಷ ವಯಸ್ಸಿಗೆ ವಿಷವಬಟ್ಟಲು ಬರಿದು ಮಾಡಿ ಸಾವನ್ನು ಒಪ್ಪಿ–ಅಪ್ಪಿಕೊಂಡಾಗ ರಝಾಂತೀಪಿಗೆ ಈ ಕೆಲಸಗೇಡಿ ಮೈಗಳ್ಳ ಮಾತುಗುಳಿ ನಿರುಪಯೋಗಿ ಗಂಡನ ಅಗಲಿಕೆ ಅಸಹ್ಯವೆನಿಸಿತು.

ಸಾಕ್ರೆಟಿಸ್ ಜಡವೇದಾಂತಿ ಆಗಿದ್ದಿಲ್ಲ. ಅವನಲ್ಲಿಯೂ ಪುರುಷಾರ್ಥವಿತ್ತು. ಒಂದು ಕಾಳಗದಲ್ಲಿ ಆತ ತನ್ನ ಶಿಷ್ಯ ಅಲ್ಕಿಬಿಯಡಿಸ್‌ನ ಪ್ರಾಣ ಉಳಿಸಿದ್ದನು. ಸಂಗಾಡಿಗಳ ಜತೆಯಲ್ಲಿ ಕೂತು ಆತ ಅತಿರೇಕವಿಲ್ಲದೆ ಯಾರ ಹೆದರಿಕೆಯೂ ಇಲ್ಲದೆ ಮದ್ಯದ ಬಟ್ಟಲುಗಳನ್ನು ಬರಿದುಮಾಡಬಲ್ಲವನಾದ್ದನು. ಆದರೆ ಅವನ ನಡನುಡಿಯ ಆಕರ್ಷಣೆ ಮತ್ತು ಮೋಹಕತೆ ಇದ್ದದ್ದು ಅವನ ವಿನಯ ಮರ್ಯಾದೆಯಲ್ಲಿ. ತಾನು ಜ್ಞಾನಿಯೆಂದು ಆತ ಎಂದಿಗೂ ಅಂದುಕೊಳ್ಳಲಿಲ್ಲ. ಒಪ್ಪಿಕೊಳ್ಳಲಿಲ್ಲ. ಅಥೆನ್ಸದ ಪ್ರಸಿದ್ಧ ಭವಿಷ್ಯವಾಣಿಯ ದೈವತ ಡೆಲ್ಪಿಯಾ ಸಾಕ್ರೆಟಿಸನನ್ನು ಗ್ರೀಸದ ಅತಿಜಾಣ ಮನುಷ್ಯನೆಂದೂ ಸಾರಿತ್ತು. ಆದರೆ ಸಾಕ್ರೆಟಿಸನು ಅದು ತನ್ನ ಅಜ್ಞೀಯ

ವಾದಕ್ಕೆ ದೇವರೇ ಕೊಟ್ಟ ಪ್ರಶಸ್ತಿ ಎಂದು ಭಾವಿಸಿದನು. 'ಈ ಒಂದೇ ಸಂಗತಿ ನನಗೆ ಗೊತ್ತಿದೆ. ಅದೇನೆಂದರೆ, ನನಗೆ ಏನೂ ಗೊತ್ತಿಲ್ಲವೆಂಬುದು !' ಎನ್ನುತ್ತಿದ್ದ ಸಾಕ್ರೆಟಿಸ್.

ಜಿಜ್ಞಾಸೆ, ಶಂಕೆಯಿಂದ ತತ್ವಜ್ಞಾನ ಹುಟ್ಟುತ್ತದೆ. 'ತದ್ವಿದ್ಧಿ ಪರಿಪ್ರಶ್ನೇನ' ನಮ್ಮ ನೆಚ್ಚಿನ ನಂಬಿಗೆಗಳ ಬಗೆಗೆ ಕರ್ಮಠ ತತ್ವತಥ್ಯಗಳ ಕುರಿತು ಶಂಕೆತಾಳಿ ಪ್ರಶ್ನೆಕೇಳಿ ವಿಚಿಕಿತ್ಸೆ ಮಾಡುವದರಲ್ಲಿ ವೇದಾಂತದ ಆರಂಭ. ಮನಸ್ಸು ಒಳಗಡೆಗೆ ಹೊರಳಿ ತನ್ನನ್ನೇ ಪರೀಕ್ಷಿಸಿ ಪ್ರಶ್ನಿಸಿದ ಹೊರತು ಯಾವ ದರ್ಶನವೂ ಇಲ್ಲ. 'Gnothi Seanton' ಅಂದ ಸಾಕ್ರೆಟಿಸ್. 'ಆತ್ಮಾನಂ ವಿದ್ಧಿ' 'ತನ್ನನ್ನೇ ತಾನು ತಿಳಿ'

ಸಾಕ್ರೆಟಿಸನಿಗೂ ಮುಂಚೆ ಹಿಂದೆ ಥೇಲ್ಸ, ಹಿರಾಕ್ಲಿಟಸ್, ಪರ್ಮೆನೈಡ್ಸ, ರೋನೊ, ಪೈಥಾಗೋರಸ, ಎಂಪಿಡಾಕ್ಲಿಸ್ ಪ್ರಭೃತಿ ತತ್ವಜ್ಞಾನಿಗಳೂ ದ್ರಷ್ಟಾರರೂ ಆಗಿ ಹೋಗಿದ್ದರು. ಆದರೆ ಅವರು ಪ್ರಕೃತಿಯ ಭೌತಿಕ ಪ್ರಪಂಚದ ತತ್ವಗಳನ್ನು ತಿಳಿಯಲು ಅಳೆಯಲು ಹೊರಟವರು. ಸಾಕ್ರೆಟಿಸ್ ಅಲ್ಲಿಂದ ಹಿಂದಿರುಗಿದನು. ಕಲ್ಲು, ಮರ, ತಾರೆಗಳಿಗಿಂತ ಸೋಜಿಗದ ಸ್ವಾರಸ್ಯ ಒಂದಿದೆ :- ಅದು ಮನುಷ್ಯನ ಮನಸ್ಸು. ಮನುಷ್ಯ ಏನು ? ಅವನು ಏನು ಆಗಬಲ್ಲ ? ಕೇಳಿದನು ಸಾಕ್ರೆಟಿಸ್. ●

# ಪ್ಲೇಟೋ ದರ್ಶನ

## ನೈತಿಕ ಸಮಸ್ಯೆ-ನ್ಯಾಯ

ಪ್ಲೇಟೋ ಸಾಕ್ರೆಟಿಸನನ್ನು ಭೆಟ್ಟಿಯಾದ ದಿನ ಅವನ ಬಾಳಿನಲ್ಲಿಯೇ ಒಂದು ಮಹಾಪರ್ವಕಾಲ. ಆತ-ಅಂದರೆ ಪ್ಲೇಟೋ-ಸಿರಿವಂತ ಯುವಕನಾಗಿದ್ದ ; ಚೆಲುವ ಕಸುವುಳ್ಳ ಮೈಕಟ್ಟಿನವ. ಅಗಲವಾದ ಹೆಗಲುಗಳಿಂದಾಗಿ ಅವನಿಗೆ 'ಪ್ಲೇಟೋ' ಎಂಬ ಹೆಸರು ಇಡಲಾಗಿತ್ತಂತೆ. ಆತ ಸೈನಿಕ ತರಬೇತಿ ಪಡೆದು ಕಾಳಗದಲ್ಲಿಯೂ ಕಲಿ ಎನಿಸಿಕೊಂಡಿದ್ದ. ಇಸ್ತಮಿಯನ್ ಪಂದ್ಯಾಟಗಳಲ್ಲಿ ಎರಡು ಸಲ ಪಾರಿತೋಷ ಕಗಳನ್ನು ಗೆದ್ದಿದ್ದ. ಇಂಥ ಹಿನ್ನೆಲೆಯಿಂದ ತತ್ವಜ್ಞಾನಿಗಳು ಹುಟ್ಟಿಬರುವದು ವಿರಳವೇ ಸರಿ.

ಆವರೆ ಪ್ಲೇಟೋನಿಗೆ ಸಾಕ್ರೆಟಿಸನ ವಾದಪದ್ಧತಿಯ ಮೋಹ ಅಂಟಿಕೊಂಡಿತು. ತತ್ವಜಿಜ್ಞಾಸೆಯ ಹುಚ್ಚು ಹಿಡಿಯಿತು. ಸಾಕ್ರೆಟಿಸ ಒಂದು ಜೇಡಿನಂತೆ ತನ್ನ ಸೂಕ್ಷ್ಮ ಪ್ರಶ್ನೆ ಪರಿಪ್ರಶ್ನೆಗಳ ಬಲೆಕಟ್ಟಿ ಕೂತು ಈ ತರುಣರ ಚಿತ್ತಗಳನ್ನು ಚಿಕ್ಕ ಹುಳಗಳಂತೆ ಅದರಲ್ಲಿ ಸೆಳೆದುಕೊಳ್ಳುತ್ತಿದ್ದನು. ತನ್ನ ಹರಿತವಾದ ಪ್ರಶ್ನೆಗಳ ಮೊನೆ ಯಿಂದ ಕರ್ಮಠ-ವಾದಗಳ ಬುರುಡೆಗಳಿಗೆ ತೂತು ಮಾಡುತ್ತಿದ್ದನು. ಹಸಿಹುಸಿ ಗ್ರಹಿಕೆಗಳ ಗುಳ್ಳೆಗಳನ್ನು ಒಡೆಯುತ್ತಿದ್ದನು. ಈ ಆಟಕ್ಕೆ ಪ್ಲೇಟೋ ಮನಸೋತನು.

'ದೇವರ ಉಪಕಾರ ದೊಡ್ಡದು-ನಾನು ಗೊಡ್ಡು ಗುಡ್ಡಗಾಡಿಯಾಗದೇ ಗ್ರೀಕನಾಗಿ ಹುಟ್ಟಿದ್ದು; ಅದರಲ್ಲಿಯೂ ಗುಲಾಮನಾಗದೇ ಸ್ವತಂತ್ರ ನಾಗರಿಕನಾದದ್ದು; ಅಲ್ಲಿಯೂ ಎಲ್ಲಕ್ಕೂ ಹೆಚ್ಚೆಂದರೆ ಸಾಕ್ರೆಟಸನ ಕಾಲದಲ್ಲಿ ಜೀವಿಸಿದ್ದು' ಎಂದು ಹರ್ಷದಿಂದ ಉದ್ಗರಿಸಿದ್ದಾನೆ ಪ್ಲೇಟೋ.

ಈ ಯವನ ಋಷಿಯು ಅವನ ಗುರುವು ಸಾಯುವಾಗ ಪ್ಲೇಟೋನಿಗೆ ಇಪ್ಪತ್ತೆರಡು ವರ್ಷದ ಪ್ರಾಯ. ತನ್ನ ಗುರುವಿನ ಬಲಿಯನ್ನು ಅಥೇನ್ಸಿನ ಗಣರಾಜ್ಯ ತೆಗೆದುಕೊಂಡದ್ದು ಕಣ್ಣಾರೆ ಕಂಡು ಅವನ ಭಾವನಾಮಯವಾದ ಎಳೆಯ ಮನಸ್ಸಿನಲ್ಲಿ ಪ್ರಜಾಪ್ರಭುತ್ವದ ಬಗೆಗೇ ಅಸಹ್ಯ ಅಸಹನೆ ಹುಟ್ಟಿತು. ಜನ ಜಂಗುಳಿಯ ಆಳಿಕೆ ಪಶುಸತ್ತೆಯೆಂದು ಆತನ ಮನವರಿಕೆ ಆಯಿತು. ಇಂಥ ಅಜಾ ಪುತ್ರರ ಪ್ರಜಾಸತ್ತೆಯನ್ನು ನಾಶಮಾಡಿ ಉತ್ತಮರ ಜ್ಞಾನಿಗಳ ಶಾಸನವನ್ನು ಸ್ಥಾಪಿಸು ವಂತೆ ಆಗಬೇಕೆಂದು ಆತ ಕನಸು ಕಂಡನು. ಜೀವಮಾನದುದ್ದಕ್ಕೂ ಪ್ಲೇಟೋನಿಗೆ

ಇದೇ ಗೀಳು ಹಿಡಿಯಿತು.–ಅತ್ಯಂತ ಜ್ಞಾನಿಗಳನ್ನು ಉತ್ತಮರನ್ನು ಕಂಡು ಹಿಡಿದು ಅವರು ರಾಜ್ಯಸತ್ತೆ ಕೈಗೊಳ್ಳುವಂತೆ ಮಾಡುವ ಪದ್ಧತಿಯನ್ನು ಹೇಗೆ ಹುಡುಕಿಕೊಳ್ಳಬೇಕು ?

ಅವನ 'ಸಂವಾದಗಳಲ್ಲಿ ಪ್ಲೇಟೋ ತನ್ನ ಗುರುಮುಖವನ್ನೇ ತನ್ನ ಮುಖಪತ್ರವನ್ನಾಗಿ ಮಾಡಿಕೊಂಡಿದ್ದಾನೆ. ಸಾಕ್ರೆಟಿಸನ ಮುಖದಿಂದ ಪ್ಲೇಟೋ ಮಾತಾಡುತ್ತಾನೆ. ಅಂದರೆ ಸಾಕ್ರೆಟಿಸ ಹೇಳಿದ್ದೇನು ಅದರಲ್ಲಿ ಪ್ಲೇಟೋ ಆಡಿದ್ದು ಎಷ್ಟು–ಇದನ್ನು ತೀರ್ಮಾನಿಸುವದು ಸುಲಭವಲ್ಲ. ಈ ತೀರ್ಮಾನದಲ್ಲಿ ಲಾಭವೂ ಇಲ್ಲ. ಭಗವದ್ಗೀತೆ ಯಲ್ಲಿ ಶ್ರೀ ಕೃಷ್ಣ ಆಡಿದ್ದು ಎಷ್ಟು, ವ್ಯಾಸಮಹರ್ಷಿಯು ಅರುಹಿದ್ದು ಎಷ್ಟು ಎಂದು ವಿಂಗಡಣೆಗೆ ಹೊರಟಂತೆಯೇ ಈ ಚರ್ಚೆ.

ಮಾದರಿಗಾಗಿ ಅಂಥ ಒಂದು ಚರ್ಚೆ. ಧನಿಕ ಶ್ರೇಷ್ಠ ಸಿಫ್ಯಾಲಿಸ್‌ನ ಮನೆಯಲ್ಲಿ ಪ್ಲೇಟೋನ ಜತೆಗೆ ಅವನ ಸೋದರರಿಬ್ಬರು ಗ್ಲೋಕೊನ್ ಮತ್ತು ಅದಿಮಿಂತಸ್ ಇದ್ದಾರೆ. ಅಲ್ಲದೆ ಸಿಡಿದೇಳುವ ಒರಟ ಸೊಫಿಸ್ಟ ಥ್ರಾಸಿಮ್ಯಾಕಸ್ ಕೂಡ ಇದ್ದಾನೆ. ಸಾಕ್ರೆಟಿಸ ಸಿಫ್ಯಾಲಿಸ್‌ನಿಗೆ ಪ್ರಶ್ನೆ ಹಾಕುತ್ತಾನೆ:– 'ನಿನ್ನ ಸಂಪತ್ತಿನಿಂದ ನೀನು ಪಡೆದ ಅತ್ಯಂತ ಹಿರಿದಾದ ಲಾಭ ಯಾವದೆಂದು ನೀನು ಭಾವಿಸುವಿ ?'

ಇದಕ್ಕೆ ಸಿಫ್ಯಾಲಿಸ್ ಉತ್ತರಿಸುತ್ತಾನೆ–'ಸಂಪತ್ತು ದಯಪಾಲಿಸಿದ ಹಿರಿಯ ವರದಾನವೆಂದರೆ, ಸಂಪತ್ತಿನ ಮೂಲಕ ಅವನು ಉದಾರಿ, ಪ್ರಾಮಾಣಿಕ ಮತ್ತು ನ್ಯಾಯಶೀಲನಾಗುವದು ಸಾಧ್ಯ.

ಇಲ್ಲಿ ಜೇಡಿನ ಬಲೆಗೆ ಸಿಫ್ಯಾಲಿಸ್ ಬಿದ್ದನು. ಸಾಕ್ರೆಟಿಸ್ ನ್ಯಾಯವೆಂದರೇನು ? ಎಂದು ಪ್ರಶ್ನಿಸಿದನು. ಆ ಪ್ರಶ್ನೆಯ ಬೆನ್ನಿಗೆ ತಾತ್ವಿಕ ಬೇಟೆಯ ನಾಯಿಗಳನ್ನೇ ಛೂಬಿಟ್ಟಂತೆ ಆಯಿತು. ಏಕೆಂದರೆ, ನ್ಯಾಯ್ಯದಷ್ಟು ಜಿಗಿಯಾದ ಸಂಗತಿ ಬೇರೊಂದಿಲ್ಲ. ಅದು ಮನಸ್ಸಿನ ಪರಿಸ್ಫುಟತೆಯ ವಿಚಾರದ ಸೂಕ್ಷ್ಮ ಕೌಶಲ್ಯದ ಸತ್ವಪರೀಕ್ಷೆ. ಆಗ ತಾಳ್ಮೆಗೆಟ್ಟು ಉರಿದೋರೆಯ ಸೊಫಿಸ್ಟ ಥ್ಯರಾಸಿಮ್ಯಾಚಸ್ ಕೂಗಿದನು. 'ಹಾಗಾದರೆ ಕೇಳು. ಬಲವೇ ಬಾಧ್ಯತೆಯು. ಜುಲುಮೆಯೇ ಹಕ್ಕು. ನ್ಯಾಯವೆಂಬುವದು ಬಲಿಷ್ಠನ ಹಿತ. ಬೇರೆ-ಬೇರೆ ಪ್ರಕಾರದ ಸರಕಾರಗಳು ತಮ್ಮ-ತಮ್ಮ ಹಿತಾಸಕ್ತಿಗಳಿಗೆ ಅನುಗುಣವಾಗಿ ಕಾನೂನುಗಳನ್ನು ಮಾಡು ತ್ತಾರೆ. ಮತ್ತು ಅವನ್ನೇ 'ನ್ಯಾಯ' ವೆಂದು ಪ್ರಜೆಗಳಿಗೆ ನೀಡುತ್ತಾರೆ. ಅವುಗಳಿಗೆ ವಿರೋಧವಿದ್ದಲ್ಲಿ ಅವನ್ನು ಅತಿಕ್ರಮಿಸಿದಲ್ಲಿ 'ಅನ್ಯಾಯ'ವಾಯಿತೆಂದು ದಂಡ ವನ್ನು ವಿಧಿಸುತ್ತಾರೆ. ಅನ್ಯಾಯವನ್ನು ನಿಂದಿಸುವದು ಏಕೆ ? ಆ ನಿಂದಕರು

ತಮಗೆ ಆಗಬಹುದಾದ ಕಷ್ಟಕ್ಕೆ ಹೆದರುತ್ತಾರೆ, ಹೊರತು ತಾವೇ ಅನ್ಯಾಯ ಮಾಡಲಾರದೆಂಬ ಒಂದು ನೈತಿಕ ಭಾವನೆಗಾಗಿ ಅಲ್ಲ.

ಇದೇ ತತ್ವವು ಮುಂದೆ ಅನೇಕ ಶತಮಾನಗಳ ನಂತರ ಜರ್ಮನ್ ತತ್ವವೇತ್ತ ನೀಟ್ಸೆ ಪ್ರತಿಪಾದಿಸಿದನು. ಅದು ಶುದ್ಧ ಬಲೋಪಾಸನೆಯ ತತ್ವ. ಉಪನಿಷತ್ತು ಇದನ್ನು ಹೇಳಿದ್ದುಂಟು 'ಬಲೇನ ಲೋಕಃ ತಿಷ್ಠತಿ। ಬಲಂ ಉಪಾಸಸ್ವ॥' ಬಲವೇ ನ್ಯಾಯ ; ಶಕ್ತಿಯೇ ಸತ್ಯ ; ಸತ್ತೆಯೇ ಸ್ವತ್ವ. ಇದು ಸರ್ವಾಧಿಕಾರಿಯ, ಒಬ್ಬಾಳಿಕೆಯ, ದಬ್ಬಾಳಿಕೆಯ ಗದ್ದುಗೆಯ ಆಧಾರ. 'ದುರ್ಬಲರು ತಮ್ಮ ನಖಿ ಪಂಜರಗಳು ಮೊಂಡವೆಂದು, ಮುರಿದವೆಂದು, ತಾವು ಸಜ್ಜನರೆಂದು ತಿಳಿ ಯುತ್ತಾರೆ. ಇಂಥವರನ್ನು ಕಂಡಾಗೆಲ್ಲ ನಾನು ಆಗಾಗ್ಗೆ ನಗುತ್ತೇನೆ'-ಅಂದನು ನೀಟ್ಸೆ. ಇದೇ ಬಲತತ್ವ ಮೀಮಾಂಸೆಯನ್ನು ತತ್ವಜ್ಞಾನದ ಇತಿಹಾಸದಲ್ಲಿಯೇ ಪ್ಲೇಟೋನಿಗಿಂತ ಹೆಚ್ಚು ಪ್ರಭಾವಿಯಾಗಿ ಬೇರೆ ಯಾರೂ ಪ್ರತಿಪಾದಿಸಿದ್ದಿಲ್ಲ. ಈ ಪ್ರತಿಪಾದನೆ ಅವನ 'ಗೊರ್ಜಿಯಸ್'ದೊಳಗಿನ ಸಂಭಾಷಣಗಳಲ್ಲಿ ಬರುತ್ತದೆ.

'ಅವರು ಅಪ್ರಾಮಾಣಿಕತೆಯ ಲಜ್ಜಾಸ್ಪದ ಅನ್ಯಾಯವೆನ್ನುತ್ತಾರೆ. ಅಪ್ರಾಮಾಣಿ ಕತೆಯೆಂದರೆ, ಅವರ ಅರ್ಥ ಅವರ ನೆರೆಹೊರೆಯವರಿಗಿಂತ ಹೆಚ್ಚು ಪಡೆಯ ಬೇಕೆಂಬ ಹವ್ಯಾಸ. ಇವರಿಗೆ ನೆರೆಹೊರೆಯವರೊಂದಿಗೆ ಸಮಾನತೆ ಬೇಕು. ಏಕೆಂದರೆ ಇವರಿಗೆ ಅವರ ಇದುರು ತಮ್ಮೀನ್ಯೂನತೆ ಸ್ವಹೀನತೆ ಗೊತ್ತು! ಆದರೆ ಸಾಕಷ್ಟು ಸಾಮರ್ಥ್ಯಶಾಲಿಯಾದ ಒಬ್ಬ ಪುರುಷನಿದ್ದರೆ (ಅವನೇ ಪುರು ಷೋತ್ತಮ ಅಥವಾ ಪರಮಪುರುಷ-ನೀಟ್ಸೆಯ ಅಭಿಪ್ರಾಯದಲ್ಲಿ!) ಆತ ಇದೆಲ್ಲ ಕಟ್ಟುಪಾಡುಗಳನ್ನು ತುಳಿದು, ಮುರಿದು, ಕಿತ್ತು ಮುನ್ನುಗ್ಗಬಲ್ಲನು. ನಿಸರ್ಗದ ವಿರುದ್ಧ ಘಾತಕವೆನಿಸುವ ಆ ಕಾಯಿದೆ ಕಾನೂನುಗಳನ್ನು ಕಾರ್ಯಪದ್ಧತಿ ರೂಢಿ ಕ್ರಮಗಳನ್ನು ಮೆಟ್ಟಿ ಮೀರಿನಿಲ್ಲಬಲ್ಲನು. ನಿಜವಾಗಿಯೂ ಬದುಕಬಯಸುವವನು ತನ್ನ ಅಭಿಲಾಷೆಗಳನ್ನು ಅತ್ಯುಚ್ಚ ಮಟ್ಟಕ್ಕೆ ಬೆಳೆಯಿಸಿಕೊಳ್ಳಬೇಕು; ಅವು ಹಾಗೆ ಅತಿಯಾದ ನಂತರ ಅವುಗಳನ್ನು ಪೂರ್ತಿಯಾಗಿ ಯಥೇಷ್ಟವಾಗಿ ಪೂರೈಸಿಕೊಳ್ಳಲಿಕ್ಕೆ ಯೋಗ್ಯ ಧೈರ್ಯ ಮತ್ತು ಬುದ್ಧಿಮತ್ತೆಯನ್ನು ಅವನು ಪಡೆದಿರಬೇಕು. ಇದು ನಿಜವಾದ ನಿಸರ್ಗಸಿದ್ಧವಾದ ನ್ಯಾಯ ಮತ್ತು ಉದಾತ್ತತೆ. ಆದರೆ ಕೈಸಾಗದವರು ಕಸುವು ಸಾಲದವರು ತಮ್ಮ ಅಸಮರ್ಥತೆಯ ಬಗೆ ನಾಚಿಕೆಪಟ್ಟು ಅದನ್ನು ಮುಚ್ಚಿಕೊಳ್ಳಲಿಕ್ಕೆ ಇಂಥ ಅತಿಸಮರ್ಥರನ್ನು ಹಳಿಯುತ್ತಾರೆ. ತಾವು ಹೇಡಿಗಳಾದ ಮೂಲಕ ಧೀರೋದಾತ್ತ ಶ್ರೇಷ್ಠಗಳ ಉನ್ನತ ಸ್ವಭಾವವನ್ನು ಹೆಡೆಮುರಿಗೆ ಕಟ್ಟಿ ನ್ಯಾಯವನ್ನು ಕೊಂಡಾಡುತ್ತಾರೆ...'

ಈ ನ್ಯಾಯವು ಮಾನವರಿಗಲ್ಲ, ಆಳಿಗೆ ಒಪ್ಪುವ ನೀತಿ–ಇದು ದಾಸ-ನೀತಿ; ನಾಯಕ-ನೀತಿಯಲ್ಲ. ಹಾಗಾದರೆ ಮಾನವನ ನಿಜವಾದ ಸದ್ಗುಣಗಳು ಯಾವವು ? ಇದಕ್ಕೆ ಪ್ಲೇಟೋನ ಉತ್ತರ,–ಧರ್ಮ ಮತ್ತು ಬುದ್ಧಿಮತ್ತೆ. ಇಲ್ಲಿ ಒಂದು ಮಾತು ಈ ಉತ್ತರ ಆ ಸಂಭಾಷಣದಲ್ಲಿ ಹೊರಡುವದು ಕ್ಯಾಲಿಕ್ಲಸ್ ಎಂಬ ಸೊಫಿಷ್ಟ ಬುದ್ಧಿವಂತನ ಬಾಯಿಯಿಂದ.

ಇದು ನೀತಿಶಾಸ್ತ್ರದ ಮೂಲಭೂತ ಸಮಸ್ಯೆ.-ಸದಾಚರಣೆಯು ನೈತಿಕ ಚಾರಿತ್ರ್ಯದ ತಿರುಳಿನ ಕಂದ. ನ್ಯಾಯವೆಂದರೇನು ? ಋತವೋ ? ಬಲವೋ ? ನಾವು ಸದಾಚಾರವನ್ನು ಸಾಧುತ್ವವನ್ನು ಅರಸಬೇಕೋ, ಸತ್ತೆಯನ್ನು ಬಲಾಧಿಕಾರವನ್ನು ಅರಸಬೇಕೋ ? ಯಾವದು ಚೆನ್ನ–ಒಳ್ಳೆಯವನಾಗುವದೋ ಬಲವುಳ್ಳವನಾಗುವದೋ ? ಗ್ರೀಕ ಇತಿಹಾಸಜ್ಞ ಪೆರಿಕ್ಲಿಸ್ ಬರೆದಿಟ್ಟಿದ್ದಾನೆ. 'ಪ್ರಪಂಚವು ಸಾಗುವಂತೆ, ನ್ಯಾಯವೆಂಬುವದು ಬಲದಲ್ಲಿ ಅಧಿಕಾರದಲ್ಲಿ ಸಮಾನರಿದ್ದವರ ನಡುವೆ ಏಳುವ ಪ್ರಶ್ನೆ. ಬಲಿಷ್ಠರು ಮಾಡಬಲ್ಲದ್ದನ್ನು ಮಾಡುವರು; ದುರ್ಬಲರು ಭೋಗಿಸಬೇಕಾದ ದುಃಖ ಕಷ್ಟಗಳನ್ನು ಭೋಗಿಸುವರು.

ಈ ನ್ಯಾಯ ಮತ್ತು ಬಲ ಇವುಗಳ ಆವ್ಹಾನಕ್ಕೆ ಸಾಕ್ರೆಟಿಸ್ ಅಥವಾ ಅವನ ಬಾಯಿಯಿಂದ ಪ್ಲೇಟೋ ಕೊಡುವ ಉತ್ತರವೇನು ? ಮೊದಲಿಗೆ ಪ್ಲೇಟೋ ಈ ಆವ್ಹಾನವನ್ನು ನೇರವಾಗಿ ಎದುರಿಸುವದೇ ಇಲ್ಲ. ನ್ಯಾಯವೆಂಬುದು ವ್ಯಕ್ತಿಗಳ ನಡುವಿನ ಒಂದು ಸಂಬಂಧ. ಅದು ಆ ವ್ಯಕ್ತಿಗಳು ಒಳಪಟ್ಟ ಒಡಗೂಡಿದ ಸಾಮಾಜಿಕ ಸಂಘಟನೆಯನ್ನು ಅವಲಂಬಿಸಿ ಇರುತ್ತದೆ. ಆದ್ದರಿಂದ ನ್ಯಾಯದ ಸ್ವರೂಪವನ್ನು ವ್ಯಕ್ತಿಯ ನಡತೆಗಿಂತ ಆಯಾ ಸಮಾಜದ ರಚನೆ, ಸ್ವರೂಪಗಳ ಅಂಗವಾಗಿ ಕಂಡು ತಿಳಿದುಕೊಂಡರೆ ಹೆಚ್ಚು ಚೆನ್ನ. ಅಂದರೆ ನ್ಯಾಯಶೀಲನಾದ ರಾಜ್ಯ ಅಥವಾ ಸಮಾಜವನ್ನು ಚಿತ್ರಿಸಿಕೊಂಡರೆ ಅದರಲ್ಲಿಯ ನ್ಯಾಯಶೀಲವಾದ ವ್ಯಕ್ತಿಯನ್ನು ವರ್ಣಿಸಲು ನಮಗೆ ಹೆಚ್ಚು ಅನುಕೂಲ. ಕಣ್ಣಿನ ಕಸುವನ್ನು ದೃಷ್ಟಿ ಶಕ್ತಿಯನ್ನು ಪರೀಕ್ಷಿಸಲಿಕ್ಕೆ ಮೊದಲು ದೊಡ್ಡ ಆಮೇಲೆ ಹೆಚ್ಚು-ಹೆಚ್ಚು ಚಿಕ್ಕ ಅಕ್ಷರಗಳನ್ನು ಓದಿಸುವದಿಲ್ಲವೇ ? ಅದೇ ರೀತಿ ನ್ಯಾಯವನ್ನು ಒಮ್ಮೆಲೇ ವೈಯಕ್ತಿಕ ವರ್ತನೆಯ ಚಿಕ್ಕ ಆಯದ ಬದಲು ಸಾಮಾಜಿಕ ವರ್ತನೆಯ ದೊಡ್ಡ ಗಾತ್ರದಲ್ಲಿ ವಿಶ್ಲೇಷಣೆ ಮಾಡುವದು. ಹೆಚ್ಚು ಸುಗಮ–ಎನ್ನುತ್ತಾನೆ ಪ್ಲೇಟೋ.

ಆದರೆ ಪಾಶ್ಚಾತ್ಯ ದರ್ಶನ ಶಾಸ್ತ್ರದ ಈ ಪರಾತ್ಪರ ಗುರುವು ಇಲ್ಲಿ ಒಂದು ಕೈಚಳಕದಿಂದ ಎರಡು ಗ್ರಂಥಗಳನ್ನು ಒಂದಾಗಿ ಹೊಲಿಯಲು ಹವಣಿಸುತ್ತಾನೆ.

ಈ ಹೊಲಿಗೆಯ ಸೂಲು ಮೇಲೆ ಹೇಳಿದ ಪ್ರತಿಪಾದನೆ. ಪ್ಲೇಟೋ ವೈಯಕ್ತಿಕ ನೀತಿಯ ಸಮಸ್ಯೆಗಳೊಂದಿಗೆ ಸಾಮಾಜಿಕ ಮತ್ತು ರಾಜಕೀಯ ಪುನರ್ಘಟನೆಯ ಸಮಸ್ಯೆಗಳನ್ನು ಸಂಬಂಧಿಸಿ ಚರ್ಚಿಸಲು ಬಯಸುತ್ತಾನೆ. ಏಕೆಂದರೆ ಅವನ ಕಂಕುಳದಲ್ಲಿ 'ಆದರ್ಶರಾಜ್ಯ'ದ ಕನ್ನಡಿಗಂಟಿದೆ. ಅದುವೇ ಪ್ಲೇಟೋನ ಎಲ್ಲ ಪ್ರತಿಪಾದನೆಯ ಕೇಂದ್ರ ಪ್ರಮೇಯ. ಅವನ ಗ್ರಂಥಗಳ ಒಳತಿರುಳು. ಬೆಲೆಯುಳ್ಳ ಹರಳು.

# ವ್ಯಕ್ತಿ ಮತ್ತು ಸಂಸ್ಕಾರ

ನಮ್ಮ ನಿವೃತ್ತ ರಾಷ್ಟ್ರಾಧ್ಯಕ್ಷ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರ ಕುರಿತು ಪ್ರಶಂಸೆಯ ಉದ್ಗಾರಗಳನ್ನು ತೆಗೆಯುವಾಗೆಲ್ಲ ಒಂದು ಮಾತು ಮತ್ತೆ-ಮತ್ತೆ ಮೊಳಗುವದು ಕೇಳಬರುತಿತ್ತು. ಆ ಮಾತೆಂದರೆ 'ದಾರ್ಶನಿಕ ದೊರೆ' ಡಾ. ರಾಧಾಕೃಷ್ಣನ್ ಆದರ್ಶ ರಾಷ್ಟ್ರಪತಿಗಳಾಗಿ ಹೋದರು. ಅಂದಾಗೆಲ್ಲ ಆ ಆದರ್ಶವು ದಾರ್ಶನಿಕ-ದೊರೆತನದ್ದಾಗಿತ್ತು. ದಾರ್ಶನಿಕನೇ ದೊರೆಯಾಗಲು ಯೋಗ್ಯ. ತತ್ತ್ವವೇತ್ತನೇ ರಾಜನಾಗಬೇಕು, ಜನಕನಂತೆ, ಧರ್ಮರಾಜನಂತೆ, ಜ್ಞಾನಿಯೇ ರಾಜ್ಯವಾಳಲು ಅರ್ಹ. ಈ ವಿಚಾರಸರಣಿಯನ್ನು ಆಧುನಿಕ ಜಗತ್ತಿನಲ್ಲಿ ರೂಪಿಸಿ-ರೂಢಿಗೊಳಿಸಿದ ದಾರ್ಶನಿಕ ಪ್ಲೇಟೋ.

ಪ್ಲೇಟೋ ಸಾಕ್ರೆಟಿಸನ ಪಟ್ಟಶಿಷ್ಯ. ಪ್ಲೇಟೋನಿಂದಲೆ ನಾವು ಇಂದು ಸಾಕ್ರೆಟಿಸನನ್ನು ಪಡೆದುಕೊಂಡದ್ದು. ಒಬ್ಬ ಸಚ್ಛಿಷ್ಯನು ಸಿಗುವದು ಗುರುವಿಗೆ ದೊಡ್ಡ ಭಾಗ್ಯ. ಸಾಕ್ರೆಟಿಸನಿಗೆ ಪ್ಲೇಟೋ ಸಿಕ್ಕಿದ್ದು ಜಗತ್ತಿಗೆ ಒಂದು ಭಾಗ್ಯೋದಯವಾಯಿತು. ಸಾಕ್ರೆಟಿಸನ ಭೆಟ್ಟಿಯಿಂದ ಪ್ಲೇಟೋನ ಬದುಕಿನಲ್ಲಿಯೇ ಒಂದು ಅದ್ಭುತ ಕ್ರಾಂತಿಯು ಒದಗಿಬಂದಿತು. ಆತನಕ ಪ್ಲೇಟೋ ಒಳ್ಳೆಯ ಸುಖ-ವಿಲಾಸದಲ್ಲಿ ಸಂಪನ್ನತೆಯಲ್ಲಿಯೂ ಇರಬಹುದು-ಬೆಳೆದ ಪಿಂಡ. ಒಳ್ಳೆಯ ಚೆಲುವ ಸುಭಗನೂ ಅಹುದು. ಬಲಶಾಲಿಯಾದ ದೃಢಕಾಯ ತರುಣ. 'ಪ್ಲೇಟೋ' ಎಂಬ ಹೆಸರು ಅವನಿಗೆ ಬಿದ್ದದ್ದೇ ಅವನ ಅಗಲವಾದ ಹೆಗಲುಗಳಿಂದಾಗಿ. ಆತ ಹರಯದಲ್ಲಿ

ಸೈನಿಕನಾಗಿ ಇಸ್ಥಮಿಯಾದ ಪಂದ್ಯಾಟಗಳಲ್ಲಿ ಎರಡು ಸಲ ಬಹುಮಾನ ಗೆದ್ದ ಓಣಿಯ ಹುದ್ದರಿಯಾಗಿ ಮಿಕ್ಕ ಯುವಕರನ್ನೆಲ್ಲ ಮೀರಿದ ವಿಕ್ರಮಿ.

ಸಾಮಾನ್ಯವಾಗಿ ಇಂಥ ವೀರಬಂಟರೊಳಗಿಂದ, ಅಂಗಸಾಧಕರೊಳಗಿಂದ ಜ್ಞಾನಿಗಳು, ತತ್ವಚಿಂತಕರು ಹೊಂಚುವದು ಅಪರೂಪವೇ. ಆದರೆ ಇದಕ್ಕೆ ಈ ರೂಪ ಯೌವನಶಾಲಿಯಾದ ಯೋಧನು ಅಪವಾದವಾಗಿದ್ದನು. ಪ್ಲೇಟೋನ ದೇಹದಷ್ಟೇ ಆತ್ಮವೂ ಹುರಿಕಟ್ಟಾಗಿತ್ತು. ತೀಕ್ಷ್ಣ ಬುದ್ಧಿ, ತೀವ್ರ ಪ್ರಜ್ಞೆಯುಳ್ಳದ್ದಾಗಿತ್ತು. ಆತ ಪಂದ್ಯಾಟಗಳಲ್ಲಿ ಹೇಗೋ, ಕುಸ್ತಿಯ ಕಾಳಯುದ್ಧದಲ್ಲಿ ತರ್ಕದ ಗರಡಿಯಲ್ಲಿಯೂ ಅಷ್ಟೇ ಆಸಕ್ತಿಯನ್ನು, ಆನಂದವನ್ನು, ಉತ್ಸಾಹವನ್ನು ತಾಳಿದನು.

ಸಾಕ್ರೆಟಿಸ ತನ್ನನ್ನು ಸಗಣಿಯ ಸೊಳ್ಳೆ (ಗ್ಯಾಡ್ ಫ್ಲಾಯ್) ಎಂದು ಕರೆದುಕೊಳ್ಳುತ್ತಿದ್ದನು ! ಈ ಸೊಳ್ಳೆ ಎಂಥೆಂಥ ದನಗಳನ್ನೂ, ಕುದುರೆಗಳನ್ನೂ, ಕಡಿದು ಕೆರಳಿಸುತ್ತದೆ. ಈ ಸೊಳ್ಳೆಯು ಪ್ಲೇಟೋನನ್ನು ಕಡಿದು ಅವನಿಗೆ ವೈಚಾರಿಕ ಜ್ವರವನ್ನು ಹಚ್ಚಿತು. ಬರೆ ಒಣ ತರ್ಕ ಚರ್ಚೆ, ಚರ್ವಣದಿಂದ ಪ್ಲೇಟೋ ಗಂಭೀರ ವಿಶ್ಲೇಷಣೆಗೆ ತಾತ್ವಿಕ ಮೀಮಾಂಸೆಗೆ ಹಾಯ್ದನು. ಅವನು ಸ್ನಾಯುಗಳನ್ನು ಪೋಷಿಸಿದಂತೆ ಮಿದುಳನ್ನೂ ಜೋಪಾನ ಮಾಡಿದನು. ಅದಕ್ಕಾಗಿ ಜ್ಞಾನದ ಉಪಾಸನೆ ನಡೆಯಿಸಿದನು. ಜ್ಞಾನವನ್ನು ಮನಸಾರೆ ಪ್ರೀತಿಸಹತ್ತಿದನು. ಜ್ಞಾನಿಗಳ ಗುರುವಾದ ಸಾಕ್ರೆಟಿಸನ ಮೇಲೂ ಅವನಿಗೆ ಅನನ್ಯ ಶ್ರದ್ಧಾಭಕ್ತಿಗಳು ನೆಲೆಸಿದವು. 'ನಾನು ಕಾಡುಮನುಷ್ಯನಾಗದೆ ಗ್ರೀಕನಾದೆ; ಗುಲಾಮನಾದೆ; ಸ್ವತಂತ್ರ ನಾಗರಿಕನಾದೆ; ಹೆಣ್ಣಾಗದೆ ಗಂಡನಾದೆ; ಅದಕ್ಕೂ ಹೆಚ್ಚಾಗಿ ಸಾಕ್ರೆಟಿಸನ ಕಾಲದಲ್ಲಿ ಹುಟ್ಟಿಬಂದೆ ! ಅದಕ್ಕಾಗಿ ದೇವರಿಗೆ ಧನ್ಯವಾದಗಳು !' ಎಂದಿದ್ದಾನೆ ಧರ್ಮಜ್ಞನೂ, ಕೃತಜ್ಞನೂ ಆದ ಪ್ಲೇಟೋ.

ಸಾಕ್ರೆಟಿಸನಿಗೆ ದೇಹಾಂತ ಶಿಕ್ಷೆ ಆದಾಗ ಪ್ಲೇಟೋನಿಗೆ ಇಪ್ಪತ್ತೆಂಟು ವರ್ಷ ಪ್ರಾಯ. ಈ ಒಂದು ಘೋರ ದುರಂತ ಘಟನೆಯು ತರುಣ ಪ್ಲೇಟೋನ ಜೀವನದ ಭಾವನೆಯ ಎಲ್ಲ ಅಂಗಗಳ ಮೇಲೂ ನಂಜಿನ ಅಚ್ಚನ್ನು ಒತ್ತಿತು. ಸಾಕ್ರೆಟಿಸನಂಥ ಪರಮ ಜ್ಞಾನಿಯನ್ನು ನಿಸ್ಪೃಹ, ನಿತ್ಯಯುಕ್ತ ಸಾಧುವನ್ನೂ ಮೂರ್ಖರ ರಾಜಕೀಯ ಸತ್ತೆಯು ವಿಷವುಣಿಸಿ ಸಾಯಿಸುವದೆಂದರೇನು ? ಆತ್ಮದ ಜ್ಞಾನ, ಸಮಾಜದ ಸತ್ತೆ–ಇವುಗಳಲ್ಲಿ ಯಾವದು ಶ್ರೇಷ್ಠ ?

ಪ್ಲೇಟೋನಿಗೆ ಪ್ರಜಾಪ್ರಭುತ್ವದ ಬಗೆಗೆ, ಜನಜಂಗುಳಿಯ ಮೂರ್ಖ ಸತ್ತೆಯ

ಬಗೆಗೆ ತಿರಸ್ಕಾರವೆನಿಸಿತು. ಪ್ರಜಾಪ್ರಭುತ್ವವು ನಾಶವಾಗಬೇಕು. ಅದರ ಸ್ಥಾನದಲ್ಲಿ ಉತ್ತಮರು, ಸತ್ತೆಯುರು, ಪರಮ ಜ್ಞಾನಿಗಳು ಆಳುವಂತೆ ಆಗಬೇಕು. ಅದು ಹೇಗೆ ಸಾಧ್ಯ ? ಪ್ರಾಜ್ಞಶ್ರೇಷ್ಠನನ್ನು, ಸಜ್ಜನ ಶ್ರೇಷ್ಠನನ್ನೂ ಆರಿಸಿಕೊಳ್ಳುವದು ಹೇಗೆ ಅಂಥವರನ್ನು ರಾಜ್ಯದ ಆಡಳಿತ ನಡೆಯಿಸಲು ಒಲಿಸಿಕೊಳ್ಳುವದು ಹೇಗೆ ? ಅವರ ಆಳಿಕೆಗೆ ಅನುಕೂಲಮಾಡಿಕೊಡುವದು ಹೇಗೆ ?–ಇದೊಂದೇ ಪ್ಲೇಟೋನ ಜೀವಮಾನದ ಜಾಜ್ವಲ್ಯ ಸಮಸ್ಯೆ ಆಗಿ ಬಿಟ್ಟಿತು. ಅವನ ಪ್ರಜ್ಞೆ–ಪ್ರತಿಭೆ ಎಲ್ಲವೂ ಇದೊಂದು ಸಮಸ್ಯೆಯ ಮನನಕ್ಕೆ ಮಂಥನಕ್ಕೆ ಮೀಸಲಾಯಿತು.

ಆದರೆ ಈ ನಡುವೆ ಲೌಕಿಕ ಜೀವನದಲ್ಲಿ ಪ್ಲೇಟೋ ಅಥೇನ್ಸದ ಸರಕಾರದ ರೋಷಕ್ಕೆ ಪಾತ್ರನಾದನು. ಸಾಕ್ರೆಟಿಸನನ್ನು ರಕ್ಷಿಸಲು ಆತ ಪ್ರಯತ್ನಮಾಡಿ ನೋಡಿದ್ದನು. ಅದು ಸರಕಾರದ ಅನುಮಾನಕ್ಕೆ ಅವಕೃಪೆಗೆ ಕಾರಣವಾಯಿತು. ಪ್ಲೇಟೋನ ಗೆಳೆಯರು ಅವನಿಗೆ ಸಲಹೆಯಿತ್ತರು–ನಗರದಿಂದ ಕಾಲುಕೀಳಲಿಕ್ಕೆ, ಜೀವ ಉಳಿಸಿಕೊಳ್ಳಲು ಕಣ್ಮರೆಯಾಗಲಿಕ್ಕೆ.

ಪ್ರಪಂಚವನ್ನು ಸುತ್ತಾಡಿ ವಿಶಾಲ ಲೋಕಾನುಭವವನ್ನು ಸಂಗ್ರಹಿಸಿಕೊಂಡು ಬರಲಿಕ್ಕೆ ಇದೇ ಅನಾಯಾಸವಾಗಿ ಒದಗಿಬಂದ ಅನುಕೂಲ ಸಂಧಿಯೆಂದು ವಿವೇಕಿಯಾದ ಪ್ಲೇಟೋ ಮನಗಂಡನು. ವಿಕ್ರಮದ ಮುಕ್ಕಾಲು ಪಾಲು ಇರುವದು ವಿವೇಕದಲ್ಲಿ ! ಆದ್ದರಿಂದ ಕ್ರಿ. ಪೂ. ೩೯೯ ನೆಯ ವರ್ಷ ಆತನು ಅಥೇನ್ಸ ಬಿಟ್ಟು ಸಂಚಾರಕ್ಕಾಗಿ ಹೊರಟನು.

ಮೊದಲು ಆತ ಇಜಿಪ್ತಕ್ಕೆ ಹೋದನು. ಅಲ್ಲಿ ಪುರೋಹಿತ (ಅರ್ಚಕ) ವರ್ಗವೇ ಆಳುತ್ತಿತ್ತು. ಅವರ ಅಭಿಪ್ರಾಯದಲ್ಲಿ ಗ್ರೀಕದೇಶವಿನ್ನು ಬಾಲ್ಯದಲ್ಲಿದ್ದ ರಾಷ್ಟ್ರ ! ಗ್ರೀಸದಲ್ಲಿ ಇನ್ನೂ ಸ್ಥಿರವಾದ ಸಂಪ್ರದಾಯಗಳಾಗಲಿ, ಪ್ರತಿಷ್ಠಿತ ಪರಂಪರೆಗಳಾಗಲಿ ಗಹನವಾದ ಸಂಸ್ಕೃತಿಯಾಗಿ ಹೆಪ್ಪುಗಟ್ಟಿದ್ದಿಲ್ಲ. ನೀಲನದಿಯ ದಂಡೆಯ ಈ ಸ್ಫಿಂಕ್ಸ್–ಮುದ್ರೆಯ ಪೂಜ್ಯ ಪಂಡಿತರು ತನ್ನ ನಾಡಿನ ಬಗೆಗೆ ತೋರ್ಪಡಿಸಿದ ಈ ಭಾವವನ್ನೂ ಕಂಡು ಪ್ಲೇಟೋ ತುಸು ತಬ್ಬಿಬ್ಬಾದನು. ಆದರೆ ಇಂಥ ಆಘಾತವೂ ಒಂದು ಶಿಕ್ಷಣಕ್ರಮ. ಪ್ಲೇಟೋನ ತಲೆಯಲ್ಲಿ ಇಜಿಪ್ತದ ಪಾಮರ ಕೃಷಿಕ ಜನತೆಯನ್ನು ಭದ್ರವಾಗಿ ಆಳುವ ಈ ಪಂಡಿತ ಶ್ರೇಷ್ಠವರ್ಗದ ಸತ್ತೆಯ ಚಿತ್ರವು ಮುದ್ರೆಯೊತ್ತಿತು. ಮುಂದೆ ಅವನ 'ಆದರ್ಶ ರಾಜ್ಯ'ದಲ್ಲಿ, ಕಲ್ಪನೆಯಲ್ಲಿ ಇದರ ಗೆರೆಗಳು ಮೂಡಿದವು.

ಇಜಿಪ್ತದಿಂದ ಪ್ಲೇಟೋ ಸಿಸಿಲಿಗೆ, ಅಲ್ಲಿಂದ ಇಟಲಿಗೆ ಹೋದನು. ಅಲ್ಲಿ ಮಹಾ

ಗಣಿತಜ್ಞ ಪೈಥೊಗೊರಸನ ಶಾಲೆಯಲ್ಲಿ ಕೆಲಕಾಲ ವ್ಯಾಸಂಗ ನಡೆಯಿಸಿದನು. ಪೈಥೊಗೊರಸನಂಥ ಜ್ಞಾನಿಗಳ ಚಿಕ್ಕ ಗುಂಪು 'ಬ್ರಹ್ಮಬಲ'ದಿಂದ ಸಮಾಜವನ್ನು ಆಳುತ್ತಲೇ ತೀರ ಸಾದಾ ಬದುಕನ್ನು ಬಾಳುತ್ತ ಏಕಾಂತಸೇವೆಯಾಗಿ ಸಾಮಾನ್ಯ ಜೀವಿಯಾಗಿ ಇರುವುದರ ಚಿತ್ರವೂ ಪ್ಲೇಟೋನ ಚಿತ್ರಭಿತ್ತಿಯಲ್ಲಿ ಅಚ್ಚೊತ್ತಿ ನಿಂತಿತು.

ಅಲ್ಲಿಂದ ಆತ ಜುದೆಯ ದೇಶಕ್ಕೆ-ಯಾಹೂದಿಗಳ ನಾಡಿಗೆ ಹೋಗಿ ಸಮಾಜ ಸತ್ತಾವಾದಿಗಳಾದ ಅಲ್ಲಿಯ ಪ್ರವಾದಿಗಳ ಸಂಪ್ರದಾಯದ ಸಂಸ್ಕಾರವನ್ನು ಪಡೆದಿರಬೇಕು. ಅಲ್ಲದೆ ಮುಂದೆ ಭಾರತಕ್ಕೂ ಬಂದು ಗಂಗಾತೀರದಲ್ಲಿ ನಮ್ಮ ತಪಸ್ವಿಗಳಿಂದ ಧ್ಯಾನಯೋಗವನ್ನು, ಉಪನಿಷತ್ತಿನ ಸಿದ್ಧಾಂತಗಳನ್ನು ಕಲಿತು ಕೊಂಡಿರಬೇಕು. ಏಕೆಂದರೆ ಪ್ಲೇಟೋನ ಒಂದು ಮಾತಿನಲ್ಲಿ ಆತ್ಮರಥಿ, ಶರೀರ ರಥ, ಮನಸ್ಸು ಪ್ರಗ್ರಹ, ಇಂದ್ರಿಯಗಳು, ಕುದುರೆಗಳು ಎಂಬ ಉಪ ನಿಷತ್ತಿನೊಳಗಿನ ಪ್ರಸಿದ್ಧ ರೂಪಕವೊಂದು ತದ್ರೂಪವಾಗಿ ಬಂದಿದೆ !

ಹೀಗೆ ಸುಮಾರು ೧೨ ವರ್ಷ ಈ ಜ್ಞಾನಭಿಕ್ಷುವು ಜಗತ್ಪರ್ಯಟನಮಾಡಿ ಜೇನೊಣದ ಜಿದ್ದಿನಿಂದ, ಹಲವು ಮೂಲಗಳಿಂದ ತತ್ವವಿಚಾರ, ಅನುಭವಗಳನ್ನೂ ಹೀರಿಕೊಳ್ಳುತ್ತ, ಪರಿಪಕ್ವ-ಪ್ರೌಢ ವಯಸ್ಕನಾಗಿ ೪೦ ವರ್ಷ ಪ್ರಾಯಕ್ಕೆ ಕ್ರಿ. ಪೂ. ೩೮೭ ರಲ್ಲಿ ಅಥೇನ್ಸಿಗೆ ಹಿಂದಿರುಗಿ ಬಂದನು.

ಈಗ ಏರುಂಜವ್ವನದ ರೂಪು-ಕೊಡ ಕಡಿಮೆಯಾಗಿ ವಿಚಾರದ ಆಳ-ಅಗಲ ಹೆಚ್ಚಾಗಿತ್ತು. ದೃಷ್ಟಿಗೂ, ಮಾತಿಗೂ ಒಂದು ಹದಬಂದಿತ್ತು. ಅತಿವಾದವೆಲ್ಲ ಅರ್ಧಸತ್ಯವೆಂಬ ಅರಿವು ಮೂಡಿತ್ತು. ಸತ್ಯಕ್ಕೆ ಪ್ರತಿಯೊಂದು ಸಮಸ್ಯೆಗೆ ಹಲವು ಮಗ್ಗಲು ಇರಬಲ್ಲವು. ಅವೆಲ್ಲವಕ್ಕೂ ನ್ಯಾಯ ಸಲ್ಲಬೇಕು-ಎಂಬ ವಿವೇಕ ಕೊನರಿತ್ತು. ಆಗ ಪ್ಲೇಟೋನಲ್ಲಿ ಜ್ಞಾನ ಮತ್ತು ಕಲೆ ಎರಕವಾಗಿದ್ದವು. ಕವಿಯೂ ತತ್ವ ದಾರ್ಶನಿಕನೂ ಒಂದೇ ಮನಸ್ಸಿನಲ್ಲಿ ಮನೆಮಾಡಿ ಕೊಂಡಿದ್ದರು !

# ಪ್ಲೇಟೋನ ಗ್ರಂಥಗಳ ಶೈಲಿ-ಶೋಭೆ

ಪ್ಲೇಟೋ ಅಥೇನ್ಸಿಗೆ ಮರಳಿದಾಗ ಅವನ ಮಿದುಳು ಮಾಗಿತ್ತು. ಪ್ರೌಢಿಮೆಗೆ ಪಕ್ವತೆ ಬಂದಿತ್ತು. ಕಲಿತದ್ದು ಕಳಿತಿತ್ತು. ವಿಚಾರದಲ್ಲಿ ಒಂದು ಅನುಪಾತ ಪ್ರಮಾಣಬಂಧ ಉಂಟಾಗಿತ್ತು. ಈ ಪ್ರಮಾಣಬದ್ಧತೆಯೂ ಪ್ರತಿಯೊಂದು ಅತಿವಾದವೂ ಒಂದು ಅರ್ಧಸತ್ಯವಾಗಿ ಕಾಣುತ್ತಿತ್ತು. ಪ್ರತಿಯೊಂದು ಪ್ರಮೇಯದ ಹಲವು ಮಗ್ಗಲುಗಳು ಸತ್ಯದ ಪ್ರತಿಯೊಂದು ಪಾರ್ಶ್ವದೊಂದಿಗೆ ಹೊಂದಿಕೆ ಸಾಧಿಸುವಂತೆ ನ್ಯಾಯದ ದೃಢವಿಭಾಜಕವನ್ನು ಪಡೆದಿದ್ದವು.

ಈಗ ಪ್ಲೇಟೋನಿಗೆ ಶಾಸ್ತ್ರವೂ ಗೊತ್ತು, ಕಲೆಯೂ ಗೊತ್ತು. ಜ್ಞಾನಿಯೂ, ಕವಿಯೂ ಕೂಡಿಯೇ ಅವನ ಆತ್ಮದಲ್ಲಿ ಮನೆಮಾಡಿಕೊಂಡಿದ್ದರು ಮತ್ತು ತನ್ನ ಅಭಿಪ್ರಾಯದ ಅಭಿವ್ಯಕ್ತಿಗಾಗಿ ಆತನು ನಿರ್ಮಿಸಿಕೊಂಡ ಶೈಲಿ-ಮಾಧ್ಯಮಗಳಲ್ಲಿ ಸತ್ಯ-ಸೌಂದರ್ಯಗಳೆರಡೂ ಅವಕಾಶವನ್ನೂ ಚೆಲ್ಲಾಟವನ್ನೂ ಪಡೆಯುವಂತಾಯಿತು.

ಈ ಮಾಧ್ಯಮವೇ 'ಸಂವಾದ'ಗಳು. ಪ್ರಶ್ನೋತ್ತರಗಳ ಲಲಿತಚತುರ ಉಪನಿಷತ್ತು. ಪ್ಲೇಟೋನ ಮುಂಚೆ ತತ್ವಜ್ಞಾನವು, ದರ್ಶನವು ಇಂಥ ಉಜ್ವಲ ರೂಪವನ್ನು, ವೇಷವನ್ನು ಹಿಂದೆಂದೂ ತೊಟ್ಟಿದ್ದಿಲ್ಲ. ಅವನ ನಂತರವೂ ಇಲ್ಲವೆಂದರೆ ಜಂಭದ ಮಾತಾಗಲಿಕ್ಕಿಲ್ಲ. ಭಾಷಾಂತರದಲ್ಲಿಯೂ ಈ ಸಂವಾದಗಳ ಶೈಲಿಯು ಹೊಳೆಯುತ್ತದೆ, ಮಿಂಚುತ್ತದೆ. ಚಿಮ್ಮುತ್ತದೆ. ಚೆಲುವಿನಿಂದ ಚೆಲ್ಲುವರಿಯುತ್ತದೆ.

ಮತ್ತು ಪ್ಲೇಟೋನನ್ನು ಚೆನ್ನಾಗಿ ಅರಿತುಕೊಳ್ಳುವ ದಾರಿಯಲ್ಲಿ ದೊಡ್ಡ ತೊಡಕೆಂಬುದೇ ಈ ವ್ಯಾಮಿಶ್ರ-ಶೈಲಿ ಜ್ಞಾನ ಮತ್ತು ಕಾವ್ಯದ, ಶಾಸ್ತ್ರ ಮತ್ತು ಕಲೆಯ ಸಂಮೋಹಕವಾದ, ಉನ್ಮಾದಕವಾದ ಮಿಶ್ರಣ! ಅವನ ಸಂವಾದಗಳ ಯಾವ ಪಾತ್ರದ ಮುಖದಿಂದ ಈ ದಾರ್ಶನಿಕನು ಮಾತಾಡುತ್ತಿದ್ದನೆಂಬುದೆ ಅನೇಕ ಸಲ ತಿಳಿಯದಂತಾಗುತ್ತದೆ. ಯಾವ ರೂಪದಲ್ಲಿ ಅವನ ವಿಚಾರ ವ್ಯಕ್ತವಾಗುತ್ತದೆಂಬುದೂ ಕೆಲ ಸಲ ಗೊತ್ತಾಗುವದಿಲ್ಲ! ಆತನು ಅಕ್ಷರಶಃ ಸತ್ಯವನ್ನು ಸಾರುತ್ತಿರುವನೋ. ರೂಪಕಗಳಲ್ಲಿ ನುಡಿಯುತ್ತಿರುವನೋ, ಗೇಲಿ ಮಾಡುತ್ತಿರುವನೋ, ಗಂಭೀರ-ಗೌರವದಿಂದ ಮಾತಾಡುತ್ತಿರುವನೋ-ಎಂದು ಇತಿಬಿತಿಗೆ ಬೀಳುತ್ತೇವೆ. ವಿನೋದ, ವ್ಯಂಗ್ಯ, ಕಥೆ. ಪೌರಾಣಿಕ ಕಲ್ಪನೆ ಇವುಗಳ ಬಗೆಗೆ ಪ್ಲೇಟೋನಿಗಿದ್ದ ಪ್ರೀತಿಯು ನಮ್ಮನ್ನು ಬಹಳೊಮ್ಮೆ ದಿಗ್ಭ್ರಮೆಗೊಳಿಸುತ್ತದೆ. ರೂಪಕ ಕಥೆಗಳಲ್ಲಿ ಅಡಗಿದ ಪ್ಲೇಟೋ ಬೋಧಿಸುವದೇ ಇಲ್ಲವೆಂದರೂ ತಪ್ಪಾಗಲಾರದು.

ಹೀಗೇಕೆ ? ಪ್ಲೇಟೋ ಈ ಸಂವಾದಗಳನ್ನು ಸಾರ್ವಜನಿಕರ ಓದಿಗಾಗಿ ಬರೆದ ನೆಂದು ಹೇಳಲಾಗುತ್ತದೆ. ತತ್ವವನ್ನು, ಜ್ಞಾನವನ್ನು ಒಂದು ವಿಲಾಸದ ಸಾಮಗ್ರಿ ಯಂತೆ ರುಚಿಯ ವೈಚಿತ್ರದಂತೆ ಭೋಗಿಸಬೇಕೆಂದು ಬಯಸುವ ಶ್ರೀ ಸಾಮಾನ್ಯನ ತಿಳುವಳಿಕೆಯ ತೆಕ್ಕೆಯಲ್ಲಿ ತತ್ವಜ್ಞಾನವನ್ನು ತರುವದಕ್ಕಾಗಿ ಆತ ಹೀಗೆ ಪ್ರಶ್ನೋ ತ್ತರಗಳ ರೂಪದಲ್ಲಿ, ಚುರುಕು ಚರ್ಚೆಯ ರೀತಿಯಲ್ಲಿ ತನ್ನ ಪ್ರತಿಪಾದನೆಗಳನ್ನು ಬರೆ ದನು. ಮಹತ್ವದವುಗಳನ್ನು ಮತ್ತೆ-ಮತ್ತೆ ಬರೆದನು. ಆದ್ದರಿಂದ ಈಸಂವಾದಗಳಲ್ಲಿ ರೂಪಕಾತ್ಮಕವಾಗಿದ್ದು, ಲೀಲಾವಿನೋದಿಯಾದದ್ದು ಅಂದಿನ ಸಾಮಾಜಿಕ, ಸಾಹಿತ್ಯಕ ಸಂದರ್ಭದ ವಿವರಗಳನ್ನು ಬಲ್ಲವರಿಗಷ್ಟೇ ಅರ್ಥವಾಗುವಂತಹದು ಬಹಳಷ್ಟು ಬರು ತ್ತದೆ. ಇಂದು ಅಂಥ ಹಲವಷ್ಟು ವಿವರಗಳು ಅಪ್ರಸ್ತುತವಾಗಿ ಅನುಬಂಧವು ಆಗಿ, ಕಟ್ಟು-ಕಲ್ಪನೆಯೂ ಆಗಿ ಕಾಣಬಹುದು. ಆದರೆ ಪ್ಲೇಟೋ ಅವನ್ನು ಬರೆದಾಗ ಅವೆ ಲ್ಲವೂ ಪ್ರಾಸಂಗಿಕ ವಿನೋದದಿಂದ ಮಾರ್ಮಿಕ ಪರಿಹಾಸದಿಂದ ದಾರ್ಶನಿಕ ಪ್ರಶ್ನೆ- ಪ್ರಮೇಯಗಳ ಜಡವಾದ ಖಾದ್ಯಕ್ಕೆ ನಂಜಿಕೊಳ್ಳುವ ತಿನಿಸನ್ನು ತುಂಬುವಂತಿತ್ತು.

ಪ್ಲೇಟೋನು ಇತರರಲ್ಲಿ ದೋಷವೆಂದು ಟೀಕಿಸಿದ ಎಲ್ಲ ಗುಣಗಳನ್ನು ತನ್ನ ಸಂವಾದಗಳಲ್ಲಿ ಪ್ರಕಟಿಸಿದ್ದುಂಟು ! ಆತ ಕವಿಗಳನ್ನು ಅವರ ಕಪೋಲ-ಕಲ್ಪನೆ ಗಳನ್ನು ಹಳಿಯುತ್ತಾನೆ. ಆದರೆ ತಾನೇ ಒಬ್ಬ ಕವಿಯಾಗಿದ್ದಾನೆ. ಇನ್ನೂ ನೂರಾರು ಕಲ್ಪನೆಗಳನ್ನು ಕಾವ್ಯ ಪ್ರಪಂಚಕ್ಕೆ ಹೊಸದಾಗಿ ಸೇರಿಸಿದ್ದಾನೆ. ಆತ ಅರ್ಚಕರನ್ನೂ ಟೀಕಿಸುತ್ತಾನೆ. ಆದರೆ ಸ್ವತಃ ಒಬ್ಬ ಅರ್ಚಕನಂತೆ. ದೇವತಾ ಶಾಸ್ತ್ರಜ್ಞನಂತೆ. ಧರ್ಮೋಪದೇಶಕನಂತೆ, ಮಹಾ ನೀತಿ ಭೋಧಕನಂತೆ ಮಾತಾಡುತ್ತಾನೆ. ಕಲೆ ಯನ್ನು ಜರೆದು ವೈಲಾಸಿಕ ವಿಷಯಗಳನ್ನೆಲ್ಲ ಬೆಂಕಿಗೆ ಹಾಕಲು ಹೇಳುತ್ತಾನೆ ! ಹೋಲಿಕೆಗಳಲ್ಲಿ ಹೊಲ್ಲವೆನ್ನುವ ಪ್ಲೇಟೋ ಉಪಮೇಯಿಂದ ಉಪಮೆಗೆ ದೃಷ್ಟಾಂತ ದಿಂದ, ದೃಷ್ಟಾಂತಕ್ಕೆ ಜಾರುತ್ತ ಹೋಗುತ್ತಾನೆ. ವಿತಂಡವಾದಿಗಳ ಶಬ್ದಛಲವನ್ನು ಧಿಃಕರಿಸುವ ದಾರ್ಶನಿಕನು ತರ್ಕದ ಜರಡಿಯಲ್ಲಿ ಮಾತುಗಳನ್ನು ಮನವಾರೆ ಕೇರು ತ್ತಾನೆ. ಒಂದೊಂದು ವಿಚಾರವನ್ನು ಯುಕ್ತಿಯ ಸಾಣೆಗೆ ಹಿಡಿದು ಮಸೆಯುತ್ತಾನೆ.

ಆದರೆ ಇಷ್ಟೆಲ್ಲ ಅಂದರೂ ಪ್ಲೇಟೋನ ಸಂವಾದಗಳು ಪ್ರಪಂಚದ ಅಮೂಲ್ಯ ನಿಧಿಗಳಲ್ಲಿ ಒಂದಾಗಿವೆ. ಅವುಗಳಲ್ಲಿ ಅತ್ಯುತ್ತಮವಾದದ್ದು 'ರಿಪಬ್ಲಿಕ್' (ಗಣರಾಜ್ಯ) ಉಳಿದವುಗಳಲ್ಲಿ ಮಹತ್ವದವು. ಸಾಕ್ರೆಟಿಸನ ಕ್ಷಮಾಪತ್ರ, ಕ್ರಿಟೊ, ಫೇಡೊ, ಸಿಂಪೋಜಿಯಂ (ಪರಿಸಂವಾದ) ಫೀಡ್ರಸ, ಗೋರ್ಜಿಯಸ್, ಪಾರ್ಮಿ ನಾಯಿಡ್ಸ ಮತ್ತು ಸ್ಟೇಟ್ಸಮನ್ (ಮುತ್ಸದ್ದಿ) 'ರಿಪಬ್ಲಿಕ್' ಎಂಬುದು ಪ್ಲೇಟೋ ನನ್ನೆ ಒಂದು ಪುಸ್ತಕದಲ್ಲಿ ಭಟ್ಟಿಇಳಿಸಿದಂತೆ ! ಇಲ್ಲಿ ಅವನ ಭೌತತತ್ವಜ್ಞಾನ. ದೇವತಾ ವಿಚಾರ, ನೀತಿಶಾಸ್ತ್ರ. ಮನಸ್ತತ್ವ, ಶಿಕ್ಷಣಶಾಸ್ತ್ರ, ರಾಜಕಾರಣ ಮತ್ತು

ಕಲೆಯ ಸಿದ್ಧಾಂತಗಳು ಅಡಕವಾಗಿವೆ. ಇಲ್ಲಿ ಆಧುನಿಕತೆಯ 'ಮಣ್ಣಿನವಾಸನೆ' ಬಳಿವ ನಮ್ಮ ಸಮಕಾಲೀನ ರುಚಿಯ ವಿಚಾರಗಳು ಅಂದೇ ಬಂದು ಹೋಗಿವೆ. ಕಮ್ಯೂನಿಝಂ, ಸೋಶಲಿಝಂ, ಸ್ತ್ರೀಯರ ಸಮಾನಾಧಿಕಾರ, ಕುಟುಂಬ ಯೋಜನೆಯು ಕೂಡ ಪ್ಲೇಟೋನ ಉಚ್ಛಿಷ್ಟ! ಆಧುನಿಕ ಮತಸ್ಥಾಪಕರೆನಿಸಿಕೊಂಡ ನೀಟ್ಸೆ, ರೂಸೊ, ಬರ್ಗಸಾಂ, ಫ್ರಾಯ್ಡ್ ಎಲ್ಲರನ್ನೂ ಪ್ಲೇಟೋ 'ರಿಪಬ್ಲಿಕ್'ದಲ್ಲಿ ಹಿಂದೆಯೇ ಸೂಚಿಸಿಬಿಟ್ಟಂತಿದೆ! ಜಗತ್ತೆಲ್ಲ ವ್ಯಾಸನ ಎಂಜಲೆಂಬಂತೆ 'ಜ್ಞಾನಾಮೃತಂ ಭೋಜನಂ' ಎಂಬ ವರ್ಣನೆ 'ರಿಪಬ್ಲಿಕ್' ಗ್ರಂಥಕ್ಕೆ ಪೂರ್ತಿ ಸಲ್ಲುತ್ತದೆ. ಮೇಧಾವಿಗೆ ಇದೊಂದು ಮೇಜವಾನಿ, ಇಲ್ಲಿ ಯಜಮಾನನೂ ಕೊಡಗೈದೊರೆ ಮನಮೆಚ್ಚುವಷ್ಟು, ಮನೆ ಮುಚ್ಚುವಷ್ಟು ಉಣಬಡಿಸಿದ್ದಾನೆ. ಅದಕ್ಕೆ ಅಮೇರಿಕನ್ ದಾರ್ಶನಿಕ ಎಮರ್ಸನ್ ಅಂದಿದ್ದು 'ದರ್ಶನವೆಂದರೆ ಪ್ಲೇಟೋ, ಪ್ಲೇಟೋ ಎಂದರೆ ದರ್ಶನ'

ವ್ಯಾಸಮಹರ್ಷಿಯು ಮಹಾಭಾರತದ ಕುರಿತು ತೆಗೆದ ಉದ್ಗಾರ ಪಾಶ್ಚಾತ್ಯ ತತ್ವ ಪ್ರಪಂಚದ ಮಟ್ಟಿಗೆ 'ರಿಪಬ್ಲಿಕ್'ಗೆ ಅನ್ವಯಿಸುವಂತಿದೆ. 'ಯತ್ ಇಹ ಅಸ್ತಿ ತತ್ ಅನ್ಯತ್ರಯತ್ ನ ಇಹ ಅಸ್ತಿ ನ ತತ್ ಕ್ವಚಿತ್ !' (ಇಲ್ಲಿ ಇದ್ದದ್ದು ಬೇರೆಡೆಗೆ ಇದೆ. ಇಲ್ಲಿ ಇಲ್ಲದ್ದು ಎಲ್ಲಿಯೂ ಇಲ್ಲ !)

ಮಹಮ್ಮದನ ನಂತರ ಒಂದು ಕೈಯಲ್ಲಿ ಬಿಚ್ಚುಗತ್ತಿ ಇನ್ನೊಂದು ಕೈಯಲ್ಲಿ 'ಕುರಾನ' ಗ್ರಂಥವನ್ನು ಹಿಡಿದುಕೊಂಡು ಧರ್ಮದಿಗ್ವಿಜಯದ ದಂಡಯಾತ್ರೆಗೆ ಹೊರಟ ಓಮರ ಸೇನಾಪತಿ ಕಾಯರೋದ ಶ್ರೇಷ್ಠ ಗ್ರಂಥಾಲಯವನ್ನು ಸುಡಲಿಕ್ಕೆ ಕಟ್ಟಪ್ಪಣೆ ಇತ್ತಾಗ ಅಂದಿದ್ದನು 'ಗ್ರಂಥಾಲಯಗಳಿಗೆ ಬೆಂಕಿಹಚ್ಚಿರಿ ಅವುಗಳ ಸಾರವೆಲ್ಲ ಈ ಒಂದು ಗ್ರಂಥವಲ್ಲಿದೆ !' ಪ್ಲೇಟೋನ 'ರಿಪಬ್ಲಿಕ್' ಗ್ರಂಥವನ್ನು ಹೀಗೆಯೇ ಹೊಗಳಬಹುದು.

ಈ ಸಂವಾದಗಳ ಸ್ವಾರಸ್ಯ ಇಷ್ಟು ರುಚಿಕಟ್ಟಾಗಲಿಕ್ಕೆ ಒಂದು ಕಾರಣ ಈ ದಾರ್ಶನಿಕನು ಆರಂಭದಲ್ಲಿ ನಾಟಕಗಳನ್ನು ಬರೆದಿದ್ದನು. ನಾಟಕೀಯ ಸಂಭಾಷಣೆಗಳ ಹುರಿಕಟ್ಟಿನಸವ ಈ ಸಂವಾದಗಳಿಗೂ ಕಳೆಯೇರಿಸಿದೆ. ದೃಷ್ಟಾರನ ದೀಪ್ತಿ, ಆದರ್ಶವಾದಿಯ ಆವೇಶ, ಚಿಕಿತ್ಸಕನ ಚಾತುರ್ಯ, ಕವಿಯ ಪ್ರಸಾದ, ಜ್ಞಾನಿಯ ವಿಶಾಲ ಲೋಕಾನುಭವ, ಪೌರುಷದ ತೇಜಸ್ಸು, ಪ್ರವಾದಿಯ ವಾಗ್ಮಿತೆ, ರಸಿಕನ ಮಾರ್ಮಿಕತೆ, ವಿಮರ್ಶಕನ ತೀಕ್ಷ್ಣ ತರ್ಕ, ಬಹುಶ್ರುತನ ವಿದ್ವತ್ತೆಯ ಅರ್ಕ, ಈ ಎಲ್ಲ ಲಕ್ಷಣಗಳಿಂದಲೂ ಪ್ಲೇಟೋನ 'ರಿಪಬ್ಲಿಕ್' ಭಗವದ್ಗೀತೆಯಂತೆ ಅಕ್ಷರ ವಾಙ್ಮಯವಾಗಿದೆ. ●

# ಮನೋ ವೈಜ್ಞಾನಿಕ ಸಮಸ್ಯೆ

ಹಾಗಿದ್ದರೆ ತತಃ ಕಿಂ ? ಮಾಡಬೇಕಾದದ್ದೇನು ? ಎಲ್ಲ ರಾಜಕೀಯ ಸಮಸ್ಯೆಗಳ ಹಿಂದೆ ಮಾನವ ಸ್ವಭಾವವಿರುತ್ತದೆ. ರಾಜ್ಯದ ಮೂಲ ಧರ್ಮ; ಧರ್ಮದ ಮೂಲ ಅರ್ಥ ಎಂದನು ಕೌಟಿಲ್ಯ. ಆದರೆ ಪ್ಲೇಟೋನ ಹೇಳಿಕೆ ಬೇರೆ. ಅದಕ್ಕೂ ಮೂಲಗಾಮಿ. ರಾಜ್ಯದ ಮೂಲ ಮಾನವ ಸ್ವಭಾವ. 'ಪ್ರಕೃತಿಃ ತ್ವಾಂ ನಿಯೋಕ್ಷತಿ' ಅಂದಿಲ್ಲವೇ ಭಗವದ್ಗೀತೆ ? 'ಯಥಾ ಪ್ರಜಾಃ ತಥಾ ರಾಜ್ಯ' ಎಂದಿದ್ದಾನೆ ಪ್ಲೇಟೋ. ಮಂದಿಯ ಸ್ವಭಾವಶೀಲಗಳಲ್ಲಿ ವ್ಯತ್ಯಾಸವಾದಂತೆ ಅವರು ಕಟ್ಟುವ ರಾಜ್ಯಗಳಲ್ಲಿ ಸರಕಾರಗಳಲ್ಲಿ ಶಾಸನಸಂಘಟನೆಗಳಲ್ಲಿ ವ್ಯತ್ಯಾಸವಾಗುತ್ತದೆ. ನಾಗರಿಕರ ಗುಣದೋಷಗಳ ಎರಕದಲ್ಲಿ ಅವರ ರಾಜ್ಯಸತ್ತೆ ರೂಪಗೊಳ್ಳುತ್ತದೆ.

ಅಂದರೆ ಮಂದಿಯನ್ನು ತಿದ್ದಿದ ಹೊರತು ರಾಜ್ಯವನ್ನು ಸರಕಾರವನ್ನೂ ತಿದ್ದಲು ಬರುವಂತಿಲ್ಲ. ಮಾನವರು ಉತ್ತಮರಾದ ಹೊರತು ರಾಜ್ಯಶಾಸನ ಉತ್ತಮವಾಗಲಾರದು. ಆತನಕವೂ ಮಿಕ್ಕ ಎಲ್ಲ ಬದಲಾವಣೆ ಸುಧಾರಣೆಗಳು ಮೂಲಭೂತ ಅಂಶವನ್ನು ಇದ್ದಂತೆಯೇ ಇರಲು ಬಿಟ್ಟಂತೆ. ಹೆಗ್ಗಣವನ್ನು ಒಳಗಿಟ್ಟು ಬಿಳವನ್ನು ಮುಚ್ಚಿ ಮಣ್ಣು ಲೇಪಿಸಿದಂತೆ. ಕಾಯಿಲೆಗೆ ಚಿಕಿತ್ಸೆ ಮಾಡದೆ ಅದರ ಲಕ್ಷಣಗಳಿಗೆ ಮೇಲುಪಚಾರ ಮಾಡಿದಂತೆ. ಅದರಿಂದ, ಡಾಕ್ಟರರ ಬಿಲ್ಲಿನೊಂದಿಗೆ ಬೇನೆಯ ಬಲವೂ ಬೆಳೆಯುತ್ತ ಹೋಗುತ್ತದೆ, ಒಂದು ಯೋಜನೆ. ಒಂದು ಕಾಯಿದೆ ಒಂದು ಸುಧಾರಣೆ ಮಾನವ ಕೋಟಿಯ ಅಪ್ರಾಮಾಣಿಕತೆ ಪಶುತನಗಳ ಕೋಟಲೆಯನ್ನು ಕೀಳುವದೆಂದರೆ ರಾವಣನ ತಲೆಗಳನ್ನು ಕತ್ತರಿಸಿ ಚೆಲ್ಲಲು ಹೊರಟಂತೆಯೇ.

ಆದ್ದರಿಂದ ರಾಜಕೀಯ ತತ್ವಜ್ಞಾನಕ್ಕೆ ಅಡಿಗಲ್ಲಾದ ಈ ಮಾನವೀಯ ವಸ್ತುದ್ರವ್ಯವನ್ನು ಪ್ಲೇಟೋ ಮೊದಲಿಗೆ ಪರಿಶೀಲಿಸುತ್ತಾನೆ. ಈ ಮಾನವನ ವರ್ತನೆ ಮೂರು ಮುಖ್ಯ ಉಗಮಗಳಿಂದ ಹರಿಯುತ್ತದೆ ಎನ್ನುತ್ತಾನೆ ಪ್ಲೇಟೋ. ಈ ಉಗಮಗಳೆಂದರೆ–ಕಾಮ, ಭಾವ, ಮತ್ತು ಜ್ಞಾನ. ಕಾಮ–ಹಸಿವೆ ಹೆದ್ದಾಸೆ, ಪ್ರೇರಣೆ, ಪ್ರವೃತ್ತಿ ಇವೆಲ್ಲ ಒಂದು. ಭಾವ–ಚೈತನ್ಯ, ಸ್ಫೂರ್ತಿ, ಮಹತ್ವಾಕಾಂಕ್ಷೆ, (ಅಭೀಪ್ಸೆ) ಧೈರ್ಯ ಇವೆಲ್ಲ ಒಂದು. ಜ್ಞಾನ–ವಿಚಾರ, ಬುದ್ಧಿ, ವಿವೇಕ, ಇವು ಒಂದು. ಕಾಮದ ಅಧಿಷ್ಠಾನ ಕಟಿಭಾಗ, ಅದು ಜೀವಸತ್ವದ ಚಿಮ್ಮುವ ಬುಗ್ಗೆ, ಮುಖ್ಯತಃ ಲೈಂಗಿಕ ಭಾವದ ಸ್ಥಾನ ಹೃದಯ. ರಕ್ತದ ಪರಿಚಲನದಲ್ಲಿ. ಇದು

ಅನುಭವ ಮತ್ತು ಕಾಮನೆಗಳಿಗೆ ಶರೀರವು ಕೊಡುವ ಸಂಯುಕ್ತ ಪ್ರತಿಕ್ರಿಯೆ. ಜ್ಞಾನದ ಕೇಂದ್ರ ಮಸ್ತಕ, ಇದು ಕಾಮನೆಗೆ ಕಣ್ಣು. ಭಾವನೆಗೆ ಚುಕ್ಕಾಣಿ. ಆತ್ಮಕ್ಕೆ ದಿಕ್‌ಸೂಚಿ.

ಇವೆಲ್ಲ ಶಕ್ತಿಗಳು ಎಲ್ಲ ಮಾನವರಲ್ಲಿಯೂ ಇರುತ್ತವಾದರೂ ಎಲ್ಲರಲ್ಲಿಯೂ ಸರಿ ಸಮವಾಗಿ ಇರುವದಿಲ್ಲ. ಕೆಲವರು ಕೇವಲ ಕಾಮಮಯರು. ಸದಾ ಚಂಚಲ ಚಿತ್ತರು. ಸಂಗ್ರಾಹಕ ಜೀವಿಗಳು. ಇವರು ಒಂದಿಲ್ಲೊಂದು ಹುಡುಕಾಟದಲ್ಲಿ ಹೋರಾಟದಲ್ಲಿ ಸೆಳೆದಾಟದಲ್ಲಿ ತೊಡಗಿರುವರು. ವಿಲಾಸದ ವ್ಯಾಮೋಹ, ಪ್ರದರ್ಶನದ ಪ್ರೀತಿ ಇವರಲ್ಲಿ ಉರಿಯುತ್ತಿರುವದು. ಇವರ ಲೋಭಕ್ಕೆ ಯಾವ ಲಾಭವೂ ಸಾಲದು. ಗಳಿಕೆಗಿಂತ ಎಣಿಕೆ ಯಾವಾಗಲೂ ಇವರದು ಮಿಗಿಲೇ. ಉದ್ದಿಮೆ, ವ್ಯವಸಾಯುಗಳ ಪಾರುಪತ್ಯ ಅಧಿಪತ್ಯಕ್ಕಾಗಿ ಹೆಣಗಾಡುವ ಮಂದಿ ಇವರೇ.

ಇನ್ನು ಕೆಲವರು ಭಾವನಾಮಯರು. ಭಾವ ಮತ್ತು ಸಾಹಸಗಳ ಮಂದಿರಗಳು. ಪ್ಲೇಟೋನ ವರ್ಣನೆಯಂತೆ. ಇವರಿಗೆ ಗೆಲುವಿಗಿಂತ ಹೋರಾಟ, ಗೆದ್ದ ವಸ್ತು ವಿಗಿಂತ ಗೆಲ್ಲುವ ಹಿಗ್ಗು ಯಾವಾಗಲೂ ಮುಖ್ಯ. ಇವರಿಗೆ ಸಂಗ್ರಹಕ್ಕಿಂತ ಸಂಕಲ್ಪ. ಸೊತ್ತಿಗಿಂತ ಸತ್ತೆ ಆಳ್ವಿಕೆ ಅಗ್ಗಳಿಕೆಗಳೇ ಮೇಲು ಮತ್ತು ಲೇಸು. ಇವರಿಗೆ ಸಂತೆ ಪೇಟೆಗಿಂತ ಕದನದ ಕಣ ಹೆಚ್ಚು ಮೋಹಕ. ಇಂಥವರೇ ಪ್ರಪಂಚದ ಸೇನಾದಲ ನೌಕಾದಲಗಳನ್ನು ಸೇರಿ ಪರಾಕ್ರಮ ಮೆರೆಯಿಸುವವರು.

ಇನ್ನು ಕೆಲವರು ಬುದ್ಧಿ ಪ್ರಧಾನರು. ಜ್ಞಾನಮಯರು. ತಾಳ್ಮೆ ತಿಳುವಳಿಕೆ ಜಾಣ್ಮೆ ಚಿಂತನೆ ವ್ಯಾಸಂಗ ವಿಚಿಕಿತ್ಸೆಗಳಲ್ಲಿಯೇ ಇವರಿಗೆ ಮೆಚ್ಚಿಗೆ ಮತ್ತು ತೃಪ್ತಿ. ಇವರಿಗೆ ಸಂತೆಪೇಟೆ ಸಂಗ್ರಾಮ ರಂಗ ಎರಡೂ ಬೇಡ. ಇವರು ಏಕಾಂತ ಜೀವಿಗಳು ಅವರಿಗೆ ಸೊತ್ತು, ಸತ್ತೆಗಳಿಗಿಂತ ನಿತ್ಯದ ಸೆಳೆತ ಹೆಚ್ಚು. ಇವರ ಸಂಕಲ್ಪಶಕ್ತಿ ಒಂದು ಉಗ್ರಜ್ವಾಲೆ ಅಲ್ಲ. ಪ್ರಶಾಂತ ಜ್ಯೋತಿ. ಇವರು ಜ್ಞಾನಿಗಳು. ಪ್ರಾಜ್ಞರು. ಪ್ರಪಂಚದ ದಿನಬಳಕೆಯ ಜಿನಸಲ್ಲ.

ವ್ಯಕ್ತಿಯ ಜೀವನದಲ್ಲಿ ವೈಯಕ್ತಿಕ ಚಟುವಟಿಕೆಯಲ್ಲಿ ಪರಿಣಾಮಕಾರಿಯಾದ ನಡತೆಯೆಂದರೆ, ಕಾಮನೆಯು ಭಾವನೆಯು ಕಾವನ್ನು ಕೆಚ್ಚನ್ನು ಪಡೆದು ಜ್ಞಾನ ದಿಂದ ದಿಗ್ದರ್ಶಿತವಾಗಬೇಕು. ಬುದ್ಧಿಯ ಬೆಳಕಿನಲ್ಲಿ ದಾರಿಯನ್ನು ಕಾಣಬೇಕು. ವ್ಯಷ್ಟಿಯ ಈ ನಿಯಮ ಸಮಷ್ಟಿಗೂ ಅನ್ವಯಿಸುತ್ತದೆ. ಮಾದರಿಯ ರಾಜ್ಯದಲ್ಲಿ

ಪರಿಪೂರ್ಣ ಶಾಸನ ಸತ್ತೆಯಲ್ಲಿ ಔದ್ಯಮಿಕ ಶಕ್ತಿಗಳು ಉತ್ಪಾದನೆ ಮಾಡಬೇಕೇ ಹೊರತು ಆಳುವದಲ್ಲ; ಸೈನಿಕ ಶಕ್ತಿಗಳು ಸಂರಕ್ಷಣೆ ಮಾಡಬೇಕೇ ಹೊರತು ಆಳತಕ್ಕವಲ್ಲ. ಜ್ಞಾನದ, ವಿಜ್ಞಾನದ ದಾರ್ಶನಿಕ ಶಕ್ತಿಗಳು ರಕ್ಷಿಸಲ್ಪಡಬೇಕು. ಪೋಷಿಸಲ್ಪಡಬೇಕು ಮತ್ತು ಅವೇ ಆಳತಕ್ಕದ್ದು.

ಜ್ಞಾನದಿಂದ ದಾರಿ ಕಾಣಿಸಲ್ಪಡದಿದ್ದ ಜನ ಜಂಗುಳಿ ವ್ಯವಸ್ಥೆ ಇಲ್ಲದ ಹಿಂಡು, ಸಮುದಾಯ. ಚೆಲ್ಲಾ ಪಿಲ್ಲಿ ಕಾಮನೆಗಳಂತೆ ; ಕಾಮನೆಗಳಿಗೆ ಹೇಗೆ ಜ್ಞಾನದ ಅಂಕೆ ಅಂತ್ಯವೋ ಹಾಗೆಯೇ ಜನತೆಗೆ ತತ್ವವೇತ್ತರ ದಾರ್ಶನಿಕರ ನಿಯಂತ್ರಣ ನಿಯಮನ ಅಗತ್ಯ. 'ಹಣ ಕಂಡರೆ ಹಿಗ್ಗುವ ವ್ಯಾಪಾರಿಯು ಸಂಪತ್ತಿಗೆ ಸಂತೋಷ ಪಟ್ಟು ಸೋಲುವ ವರ್ತಕನು ಶಾಸಕನಾದಾಗ (ಅಂಥ ವರ್ಗದ ಕೈಗೊಂಬೆ ಪಕ್ಷವು ಸರಕಾರ ಕಟ್ಟಿದಾಗ ಎನ್ನಬಹುದು !) ದೇಶಕ್ಕೆ ದುರಿತ ದುರ್ದಶೆಗಳು ದಾಳಿ ಇಕ್ಕುವವು.' ಎಂದಿದ್ದಾನೆ ಪ್ಲೇಟೋ ! ಇದೇ ದುರ್ದಶೆ ಸೇನಾಪತಿಯು ಸರ್ವಾಧಿಕಾರ ಸ್ಥಾಪಿಸಲಿಕ್ಕೆ ತನ್ನ ಪಡೆಗಳನ್ನು ಹೂಡಿದಾಗ ಬರುವದು.

ಉತ್ಪಾದಕನು ಆರ್ಥಿಕ ಕ್ಷೇತ್ರದಲ್ಲಿ ಯೋಧನು ಯುದ್ಧರಂಗದಲ್ಲಿ, ಉತ್ತಮ ಸೇವೆ ಸಲ್ಲಿಸಬಲ್ಲರು. ಸಾರ್ವಜನಿಕ ಶಾಸನದ ಕಚೇರಿಯಲ್ಲಿ ಅವರು ನುಗ್ಗಿ ಕೂತರೆ ಅವರದು ಅತ್ಯಂತ ಅಧಮ ಸೇವೆ ! ಅಂಥವರ ಕೈಯಲ್ಲಿ ಮುತ್ಸದ್ದಿತನವು ನೀತಿನೈಪುಣ್ಯವು ರಾಜಕಾರಣದ ರಣರಗಳೆಯಲ್ಲಿ ಮುಳುಗಿ ಹೋಗುತ್ತದೆ. ಮುತ್ಸದ್ದಿತನವು ರಾಜನೀತಿಯು ಒಂದು ಶಾಸ್ತ್ರ. ಅದೊಂದು ಕಲೆ. ಅದಕ್ಕಾಗಿಯೇ ಬಹಳ ದೀರ್ಘಕಾಲ ಪಳಗಿರಬೇಕು. ಮಂತ್ರಿಯಾಗುವವನು ಶಾಸಕನಾಗುವವನು. ಆದ್ದರಿಂದ ಪ್ಲೇಟೋನ ವಿಚಾರದಲ್ಲಿ ರಾಷ್ಟ್ರವನ್ನು ಆಳಲು ಸರದಾರಿಯಲ್ಲಿ ಒಯ್ಯಲು ದಾರ್ಶನಿಕ ದೊರೆಯೊಬ್ಬನೇ ಅರ್ಹನು. ಅಂಥವನನ್ನೆ ನಮ್ಮ ಪೂರ್ವಿಕರು 'ರಾಜರ್ಷಿ' ಎಂದದ್ದು. ಜ್ಞಾನಿಯು ದಾರ್ಶನಿಕನು ರಾಜನಾಗಬೇಕು. ಅಥವಾ ರಾಜನಾಗುವವನಲ್ಲಿ ತತ್ವಜ್ಞಾನಿಯ ಸತ್ವ ಮತ್ತು ಸಾಮರ್ಥ್ಯ ಇರಬೇಕು. ವಿಚಕ್ಷಣತೆ ವಿವೇಕಗಳೂ ರಾಜಕೀಯ ಧುರೀಣತ್ವವೂ ಒಬ್ಬನಲ್ಲಿಯೇ ಕೂಡಿ ಬರಬೇಕು. ಇಲ್ಲವಾದರೆ ನಗರಗಳು ಅರಿಷ್ಟಗಳಿಂದ ನಿವಾರಣೆ ಹೊಂದಲಾರವು. ಮಾನವ ಜನಾಂಗವೂ ಅದೇ ರೀತಿ–ಪ್ಲೇಟೋನ ರಾಜಕೀಯ ವಿಚಾರಸರಣಿಯ ಒಳಹಂದರವಾದ ಮನೋಧರ್ಮದ ಜಾಡಿನ ಜೀವಸೂತ್ರವಿದು. ●

# ಪ್ಲೇಟೋನ 'ಆದರ್ಶ ರಾಜ್ಯ' :

## ರಾಜಕೀಯ-ಸಮಸ್ಯೆ

ಪ್ಲೇಟೋ ಅನ್ನುತ್ತಾನೆ. ಮಂದಿ ಎಲ್ಲ ಸಾದಾ ಸರಳರಿದ್ದರೆ ನ್ಯಾಯದ ವಿಚಾರವೂ ಸರಳವಾಗುತ್ತಿತ್ತು. ಜನಕ್ಕೆ ಲೋಕಕ್ಕೆ ಅವಶ್ಯಕ ಸಮತಾವಾದವೇ ಸಾಲುತ್ತಿತ್ತು. ಇಂಥ ಸಮತಾವಾದೀ ಸಮಾಜದ ಅನಿರ್ಬಂಧ ಅನಿಯಂತ್ರಿತ ಸ್ವಯಂಚಾಲಿತ ಸ್ವಚ್ಛಂದ ಸ್ವಾತಂತ್ರ್ಯದ ಚಿತ್ರವನ್ನು ಆತ ಬಣ್ಣಿಸಿದ್ದಾನೆ.

ನಮಗೆ ಬೇಕಾದ ಧಾನ್ಯ ಖಾದ್ಯ. ಬಟ್ಟೆ ಬೂಟು, ಮನೆ, ಮಠಗಳನ್ನು ಎಲ್ಲರೂ ಒಟ್ಟಿಗೆ ದುಡಿದು ಬೆಳಿಸಿ ಒದಗಿಸಿ, ಬೇಸಿಗೆಯಲ್ಲಿ ಬರಿಮೈಯಿಂದ, ಚಳಿಯಲ್ಲಿ ಬೆಚ್ಚಗೆಹೊದ್ದು ತೊಟ್ಟು ಕೆಲಸ ಮಾಡುತ್ತ ಉಂಡು ತಿಂದು. ವಿರಾಮ ವಿಲಾಸಗಳನ್ನು ನಲಿದು ಬಾಳಿ ಹಬ್ಬಗಳಲ್ಲಿ ಹಿಗ್ಗಿ ದೇವತೆಗಳನ್ನು ಸ್ತೋತ್ರ ಮಾಡುತ್ತ ಒಂದು ಸಮಾಜವಾಗಿ ಜನರು ಬದುಕುವರು. ತಮ್ಮ ಸಾಧನ ಸಂಪತ್ತಿಗೂ ಮಿಕ್ಕಿ ಕುಟುಂಬಗಳನ್ನು ಬೆಳೆಯಿಸದೆ ಇತ್ತ ದಾರಿದ್ರ್ಯಃ ಅತ್ತ ಯುದ್ಧ ಇವೆರಡನ್ನು ತಪ್ಪಿಸಿಕೊಳ್ಳುವರು. ರುಚಿಯಿಂದ ಶಾಂತಿಯಲ್ಲಿ ತುಂಬ ಮುಪ್ಪಿನವರೆಗೂ ಬಾಳಿ ತಮ್ಮ ಮಾದರಿಯ ಬದುಕನ್ನು ತಮ್ಮ ಮಕ್ಕಳು ಮರಿಮಕ್ಕಳಿಗಾಗಿ ಎಲ್ಲ ಬಿಟ್ಟು ಹೋಗುವರು...

ಈ ಚಿತ್ರದಲ್ಲಿ ಅತ್ಯಾಧುನಿಕ ಕುಟುಂಬ ಯೋಜನೆಯ ಸೂಚನೆಯೂ ಬಂದಿದ್ದು ಮಾರ್ಮಿಕ. ಅದೇರೀತಿ ಶಾಕಾಹಾರ, ನಿಸರ್ಗಶುದ್ಧ ಜೀವನಗಳ ಉಲ್ಲೇಖವೂ ಮೂಲದ ವಿವರಗಳಲ್ಲಿ ಇದೆ. ಇಂಥ ಸಾದಾ ಸಾಧು ಸರಳ ಜೀವನದ ಚಿತ್ರವನ್ನಷ್ಟೆ ಕೊಟ್ಟು ಪ್ಲೇಟೋ ತಡೆಯುವದಿಲ್ಲ. ಅಷ್ಟು ಬೋಳೆಭಾವನೆಯವನಲ್ಲ ಪ್ಲೇಟೋ. ಆತ ಮುಂದಿನ ಪ್ರಶ್ನೆಗೆ ಹಾಯುತ್ತಾನೆ. ಹೀಗೆ ಚಿತ್ರಿಸಿದ ಸಾದಾ ಸರಳ ಕಲ್ಪನಾರಮ್ಯವಾದ ಸ್ವರ್ಗದಂಥ ಈ ಜೀವನದ ಸ್ವಪ್ನಲೋಕದಲ್ಲಿ ಸತ್ಯಸೃಷ್ಟಿಯಲ್ಲಿ ಸಾಕಾರವಾಗುವದಿಲ್ಲವೇಕೆ ? ಈ ಚಿತ್ರವಾಸ್ತವವಾಗಿ ನೆಲೆಗೊಳ್ಳುವದಿಲ್ಲವೇಕೆ ? ಈ ಆದರ್ಶ ರಾಜ್ಯಗಳು ಪ್ರಪಂಚದ ಭೂಪಟಗಳಲ್ಲಿ ಎಲ್ಲಿಯೂ ಕಾಣಿಸಿಕೊಳ್ಳುವದಿಲ್ಲವೇಕೆ ?

'ಲೋಭ ಮೂಲಾನಿ ಪಾಪಾನಿ' ಅಂದಿತು ಗೀತೆ. ಅದನ್ನೇ ಹೇಳುತ್ತಾನೆ ಪ್ಲೇಟೋ. ಆದರ್ಶವು ಅನುಕೂಲಕ್ಕೆ. ಗುಣಗೌರವವು ಗತಾನುಗತಿಕತೆಗೆ

ಇಂಬು ಕೊಡಲು ಕಾರಣ ಎರಡು–ಲೋಭ ಮತ್ತು ಲೋಲುಪತೆ. ಮುಂದಿಗೆ ಸಾದಾ ಸರಳ ಜೀವನದಲ್ಲಿ ಸಮಾಧಾನವಿಲ್ಲ. ಅವರಲ್ಲಿ ಸಂಗ್ರಹವೃತ್ತಿ, ಮಹದಾಕಾಂಕ್ಷೆ ಸ್ಪರ್ಧೆ ಮತ್ತು ಈರ್ಷೆ ತಲೆ ಎತ್ತುತ್ತವೆ. ಇದ್ದುದರಲ್ಲಿ ತೃಪ್ತಿ ಉಳಿಯುವದಿಲ್ಲ, ಇಲ್ಲದಿದ್ದುದಕ್ಕೆ, ಅಲ್ಲ ಇನ್ನೊಬ್ಬರಲ್ಲಿ ಇದ್ದುದಕ್ಕೆ ಮನಸ್ಸು ತುಡಿಯುತ್ತದೆ. ಇನ್ನೊಬ್ಬರದಾದ ಹೊರತು ಒಂದು ಒಡವೆ ಬದುಕು ಅವರಿಗೆ ತಮಗೆ ಬೇಕೆಂದೆನಿಸುವದಿಲ್ಲ. ಪರಾಸ್ವಾಪಹರಣವೆ ಪೌರುಷಕ್ಕೆ ಪರಾಕ್ರಮವಾಗಿ ಕಾಣುತ್ತದೆ.

ಇದರ ಫಲವೆಂದರೆ, ಒಂದು ಗುಂಪು ಇನ್ನೊಂದರ ಸೀಮೆಯನ್ನು ಆಕ್ರಮಿಸುವದು. ಸೀಮೋಲ್ಲಂಘನವೆ ಇತಿಹಾಸಕ್ಕೆ ನಾಂದಿ ಆಗುತ್ತದೆ. ಮಣ್ಣಿಗಾಗಿ, ಹೊನ್ನಿಗಾಗಿ ಹೆಣ್ಣಿಗಾಗಿ, ಯುದ್ಧಗಳು ಜರುಗುತ್ತವೆ. 'ರುಧಿರಪ್ರದಿಗ್ಧ ಭೋಗಗಳೇ' ಭೋಗ್ಯವೆನಿಸುತ್ತವೆ. ಜತೆಗೆ ಹೊಸ ಸೀಮೆಗಳೊಂದಿಗೆ ವ್ಯಾಪಾರ ವಾಣಿಜ್ಯ ಹಣಕಾಸಿನ ವ್ಯವಹಾರ ಬೆಳೆಯುತ್ತದೆ. ಇದರಿಂದ ಏಕವರ್ಣ ಸಮಾಜವು ಬಹುವರ್ಣಕವಾಗುತ್ತದೆ. ವರ್ಗವಿಂಗಡಣೆ ರೂಢವಾಗುತ್ತದೆ. ಕಾರ್ಲಮಾರ್ಕ್ಸ ಹುಟ್ಟುವ ಸಾವಿರಾರು ವರ್ಷಗಳ ಹಿಂದೆಯೇ ಪ್ಲೇಟೋ 'ಆದರ್ಶ ರಾಜ್ಯ' ದಲ್ಲಿ ಬರೆದಿದ್ದಾನೆ. 'ಸಾಮಾನ್ಯ ಒಂದು ನಗರವು ವಸ್ತುತಃ ಎರಡು ನಗರಗಳಿಂದ ಕೂಡಿದೆ. ಒಂದು ಬಡವರ ನಗರ, ಇನ್ನೊಂದು ಸಿರಿವಂತರ ನಗರ. ಒಂದು ಇನ್ನೊಂದರೊಂದಿಗೆ ಹೋರಾಟದಲ್ಲಿ ತೊಡಗಿಯೇ ಇರುತ್ತದೆ. ಇನ್ನೂ ಈ ಒಂದೊಂದು ನಗರದೊಳಗೂ ಮತ್ತೆ ನಗರಗಳು ಇರುತ್ತವೆ. ಆದ್ದರಿಂದ ಅವನ್ನೆಲ್ಲ ಒಂದೆ ನಗರವೆಂದು ನೀವು ಭಾವಿಸುವದು ತಪ್ಪು !'

ಕ್ರಮೇಣ ವಿಕ್ರಮದ ಬೆನ್ನಿಗೆ ವಿಕ್ರಯವು ಬರುತ್ತದೆ. ವ್ಯಾಪಾರೀವರ್ಗವು ಮೇಲ್ತರಗತಿಯ ಮಧ್ಯಮ ವರ್ಗವಾಗಿ ಬೆಳೆಯುತ್ತದೆ. ಈ ವರ್ಗದ ಜನಕ್ಕೆಹಣವೊಂದೆ ಮಾನದಂಡ. ಹಣಕ್ಕೆಮಾನ ಮಿಕ್ಕುದೆಲ್ಲ ದಂಡ. ಇವರು ಸಾಮಾಜಿಕ ಪ್ರತಿಷ್ಠೆಯನ್ನು ತಮ್ಮ ಧನಾಢ್ಯತೆಯಿಂದ ಆಢ್ಯತೆಯ ದುಂದು ವೆಚ್ಚದಿಂದ ಗಳಿಸಲು ಹೆಣಗಾಡುತ್ತಾರೆ. 'ಅವರು ತಮ್ಮ ಹೆಂಡಂದಿರ ಮೇಲೆ ಹೇರಳ ಹಣ ವೆಚ್ಚಮಾಡುತ್ತಾರೆ' ಅಂದಿದ್ದಾನೆ ಪ್ಲೇಟೋ.

ಹಣದ ಹಂಚಾಣಿಕೆ ಸಂಪತ್ತಿನ ವಿವರಣೆಯನ್ನ ಬೇಕಾದರೆ–ಎಲ್ಲ ಬದಲಾವಣೆ ಯಾವಂತೆ ರಾಜಕೀಯ ಹೊಂದಾಣಿಕೆಗಳಲ್ಲಿಯೂ ಬದಲಾವಣೆಗಳುಂಟಾಗುತ್ತವೆ. ಭೂಮಿಯೊಂದೆ ಸಂಪತ್ತಿನ ಸಾಧನವಿದ್ದಾಗ ಸರದಾರಿಕೆ ಪರಂಪರೆಯ ಪ್ರತಿಷ್ಠೆ ಸಮಾಜದಲ್ಲಿ ಶ್ರೇಷ್ಠವಾಗುತ್ತದೆ. ಆದರೆ ವ್ಯಾಪಾರಿವರ್ಗದ ಸಂಪತ್ತು ಭೂಮಿ

ಒಡೆಯರ ಐಶ್ವರ್ಯವನ್ನು ಮೀರಿ ಬೆಳೆದೊಡನೆ ಸರದಾರಿಕೆಯ ನಾಯಕತ್ವ ಶ್ರೇಷ್ಠತೆ ಹಿಂದೆಬಿದ್ದು ಧನಿಕವಣಿಕ್ ಸತ್ತೆ ಶ್ರೇಷ್ಠಸತ್ತೆ ಸ್ಥಾಪಿತವಾಗುತ್ತದೆ. ಧನಾಢ್ಯ ವರ್ತಕರೂ ಸಾವುಕಾರರೂ ಸರಕಾರಕ್ಕೆ ಸಾಲ ಕೊಡಬಲ್ಲ ತ್ರಾಣಿಕರೂ ರಾಜ್ಯವನ್ನು ಆಳಹತ್ತುವರು–ಹತ್ತದೆಯೂ ಆಳುವರು.

ಆಗ ಮುತ್ಸದ್ದಿತನದ ರಾಜನೀತಿಯ ಸ್ಥಾನದಲ್ಲಿ ರಾಜಕಾರಣವು ವಿಜೃಂಭಿಸ ತೊಡಗುತ್ತದೆ. (ಮುತ್ಸದ್ದಿತನದ ನೀತಿ ಮುಂದಿನ ಪೀಳಿಗೆಯನ್ನು ನೋಡುತ್ತದೆ. ಆದರೆ ರಾಜಕಾರಣವು ಮುಂದಿನ ಚುನಾವಣೆಯ ಮೇಲೆ ಕಣ್ಣಿಟ್ಟಿರುತ್ತದೆ. ಅಷ್ಟೇ ಭೇದ !) ಸಾಮಾಜಿಕ ಶಕ್ತಿಗಳ ಸಮನ್ವಯವನ್ನು ಅನುಬಂಧವನ್ನು ಸಾಧಿಸುವದು, ಸಮಾಜದ ವಿಕಾಸಕ್ಕೆ ಅದರ ಶಾಸನದ ಧೋರಣೆಯನ್ನು ಹೊಂದಿಸಿಕೊಳ್ಳುವದು ಮುತ್ಸದ್ದಿತನದ ರಾಜನೀತಿ. ಆದರೆ ಅಧಿಕಾರದ ಭಕ್ಷ್ಯವನ್ನು ಹಂಚಿಕೊಳ್ಳುವ ದಾಹ, ಮಂದಿಯನ್ನು ಆಳಬೇಕೆಂಬ ಮೋಹ. ಅದಕ್ಕಾಗಿ ಪಕ್ಷೋಪಪಕ್ಷಗಳ ವ್ಯೂಹಕಟ್ಟುವ ಸನ್ನಾಹ–ಇದು ರಾಜಕಾರಣ. ಧನಿಕ ಮೇಲ್ವರ್ಗದ ಧುರೀಣತ್ವವು ಮುತ್ಸದ್ದಿತನದ ಬದಲು ರಾಜಕಾರಣದ ದ್ಯೂತಕರ್ಮಕ್ಕೆ ಇಂಬುಗೊಡುತ್ತದೆ.

ಇದೆಲ್ಲವನ್ನು ಆಧುನಿಕ ರಾಜ್ಯಶಾಸ್ತ್ರಜ್ಞರು ಬರೆದದ್ದಲ್ಲ. ಪ್ಲೇಟೋ ಚಿತ್ರಿಸಿದ್ದು.

ರಾಜ್ಯಸತ್ತೆಯ ಯಾವ ಶಾಸನ ಪದ್ಧತಿಯೂ ಕೊನೆಗೆ ತನ್ನ ತಳಹದಿಯ ತತ್ವದ ಅತೀರೇಕದಿಂದಲೆ ನಾಶ ಹೊಂದುತ್ತದೆ. ಸರದಾರಿಕೆಯ ಸ್ವಾಮಿಸತ್ತೆ ಕೂಲಿ ಗೌರವದ ಶ್ರೇಷ್ಠತೆಯ ಸತ್ತೆ ತನ್ನ ಮಡಿವಂತಿಕೆಯ ಅತಿರೇಕದಿಂದ ಅಧಿಕಾರವನ್ನು ಆದಷ್ಟು ತನ್ನವರೊಳಗೆ ಇದ್ದುಕೊಳ್ಳಬೇಕೆಂಬ ಹವ್ಯಾಸದಿಂದ ತನ್ನ ವರ್ಚಸ್ಸಿನ ವಲಯವನ್ನು ಸಂಕೋಚಗೋಳಿಸಿಕೊಳ್ಳುತ್ತ ಅವರಿಂದಲೇ ನಾಶ ಹೊಂದುತ್ತದೆ. ಅದೇ ರೀತಿ ಧನಿಕರ ಶ್ರೇಷ್ಠ ಸತ್ತೆ ಆವಷ್ಟು ಬೇಗ ಆದಷ್ಟು ಹೆಚ್ಚು ಸಂಪತ್ತನ್ನು ಸಂಗ್ರಹಿಸಬೇಕೆಂಬ ಹೆದ್ದಾಸೆಯಿಂದ ಪರಿವೆಗೆಟ್ಟು ಪೈಪೋಟಿಗೆ ಬಿದ್ದು ತನಗಾಗಿ ತಗ್ಗು ತೋಡಿಕೊಳ್ಳುತ್ತದೆ. ಉಭಯ ಪಕ್ಷದಲ್ಲಿಯೂ ಕೊನೆಗೆ ಕಟ್ಟಿಟ್ಟದ್ದು ಕ್ರಾಂತಿ. (ಇಲ್ಲಿ ಕ್ರಾಂತಿಯೆಂದರೆ ವಿಪ್ಲವ. ಆಕಸ್ಮಿಕವಾಗಿ ಬಲಾತ್ಕಾರದಿಂದ ಹಿಂಸೆ ರಕ್ತ ಪಾತಗಳಲ್ಲಿ ಒದಗಿಬರುವ ಸಾಮಾಜಿಕ ರಾಜಕೀಯ ಸ್ಥಿತ್ಯಂತರ.)

ಇಂಥ ಕ್ರಾಂತಿಯು ಬರುವಾಗ ಊಸುತ್ತ ಬಾರಿಸುತ್ತ ಬರುವದಿಲ್ಲ. ಚಿಕ್ಕ ನಿಮಿತ್ತಗಳಿಂದ, ಪುಟ್ಟ ನೆವಗಳಿಂದ, ಕ್ಷುಲ್ಲಕ ಲಹರಿಗಳಿಂದ ಅದು ಎದ್ದಂತೆ ತೋರುವದು. (ಕಾಡು ತೂಸಿನ ನೆಣ 'ಶಿಪಾಯರ ಬಂಡಾಯ'ಕ್ಕೆ ಕಾರಣ ವಾದಂತೆ.) ಆದರೆ ಹೀಗೆ ಕ್ಷುಲ್ಲಕ ಕಾರಣದಿಂದ ಹುಟ್ಟುವಂತೆ ಕಂಡರೂ ಅದರ

ಬೆನ್ನಿಗೆ ಗಂಭೀರವಾದ ಬಹು ಕಾಲದ ಅನ್ಯಾಯಗಳ ಅಸಹನೆಯ ರುದ್ರ ಒತ್ತಾಯ ವಿರುತ್ತದೆ. ದೇಹವು ದುರ್ಬಲವಿದ್ದಾಗ ಬೇನೆಗಳು ಉಪೇಕ್ಷೆಯಿಂದ ಹುದುಗಿರುವಾಗ ಬರೆ ಚಳಿಗಾಳಿಗೆ ಬರಿಮೈಯೊಡ್ಡಿದಕ್ಕೆ ಕಾಯಿಲೆಗೆ ಕಾರಣವಾಗುವದಿಲ್ಲವೇ ? 'ಈಗ ಪ್ರಜಾಪ್ರಭುತ್ವವು ಬರುತ್ತದೆ. ತಮ್ಮ ವಿರೋಧಿಗಳನ್ನು ಬಗ್ಗುಬಡಿಯುತ್ತಾರೆ. ಅವರಲ್ಲಿ ಕೆಲವರನ್ನು ಕೊಲೆಮಾಡುತ್ತಾರೆ. ಉಳಿದವರನ್ನು ಗುಳೆಕಿತ್ತು ಓಡಿಸುತ್ತಾರೆ ಮತ್ತು ಜನತೆಗೆ ಸತ್ತೆಯ ಮತ್ತು ಸ್ವಾತಂತ್ರದ ಸಮಪಾಲನ್ನು ಹಂಚಿಕೊಡುತ್ತಾರೆ.' ಎನ್ನುತ್ತಾನೆ ಪ್ಲೇಟೋ. ಈ ವರ್ಣನೆ ನಾವು ಗುರುತಿಸುವ ಪ್ರಜಾಪ್ರಭುತ್ವಕ್ಕಿಂತ ಕಮ್ಯುನಿಸ್ಟ ಕ್ರಾಂತಿಯ ಪರಿಣಾಮವನ್ನೆ ಚಿತ್ರಿಸುವಂತಿದೆ !

ಆದರೆ ಪ್ಲೇಟೋ ಪ್ರಜಾಪ್ರಭುತ್ವದ ಕುರುಡ ಪೂಜಾರಿಯಲ್ಲ. ಅವನ ಅಭಿಪ್ರಾಯದಂತೆ ಪ್ರಜಾಪ್ರಭುತ್ವವೂ ತನ್ನನ್ನು ತಾನೇ ಅಳಿಸಿಬಿಡಬಲ್ಲದು.... ಪ್ರಜೆಗಳ ಪ್ರಭುತ್ವ ಅತಿರೇಕಕ್ಕೆ ಹೋದರೆ. ಯಾವದಕ್ಕೂ ಮಿತಿಯೆ ಗುಣ; ಅತಿಯೆ ದೋಷ.

ಪ್ರಜಾಪ್ರಭುತ್ವದ ಮೂಲಭೂತ ತತ್ವವು ಅಧಿಕಾರ ವಹಿಸಲು ಸಾರ್ವಜನಿಕ ಆಡಳಿತದ ಧೋರಣೆಯನ್ನು ರೂಪಿಸಲು ಎಲ್ಲರಿಗೂ ಸಮಾನಹಕ್ಕು. ಇದು ಸಕೃದ್ದರ್ಶನಕ್ಕೆ ಮೊದಲು ನೋಟಕ್ಕೆ ತುಂಬ ಸೊಗಸಾದ ವಾದ. ಆದರೆ ಇದು ಮುಂದೆ ಅನರ್ಥಕಾರಿ. ಏಕೆಂದರೆ, ಪ್ರಜೆಗಳೆಲ್ಲರೂ ಉತ್ತಮ ಶಾಸಕರನ್ನು ಅತಿಸಾಧು ಶಾಸನ ನೀತಿ ಪದ್ಧತಿಯನ್ನೂ ಆಯ್ದುಕೊಳ್ಳಲಿಕ್ಕೆ ಯೋಗ್ಯ ಅರ್ಹತೆ ಸಜ್ಜಿಕೆ ಪಡೆದಿರುವದಿಲ್ಲ. 'ಜನತೆಗೆ ತಿಳುವಳಿಕೆ ಎಂಬುದು ಇರುವದಿಲ್ಲ. ಅವರ ಆಳರಸರು ಅವರಿಗೆ ಹೇಳಲು ಇಷ್ಟಪಟ್ಟದ್ದನ್ನೆಲ್ಲ ಅವರು ತಿರುಗಿ ಹೇಳುತ್ತಾರೆ,' ಅನ್ನುತ್ತಾನೆ ಪ್ಲೇಟೋ ! ಪ್ರಜಾಪ್ರಭುತ್ವದಲ್ಲಿ ಒಂದು ಸಿದ್ಧಾಂತವನ್ನು ಜನತೆ ಸ್ವೀಕರಿಸುವಂತೆ ಧಿಃಕರಿಸುವಂತೆ ಮಾಡಲು ಒಂದೇ ಆಗತ್ಯದ ಉಪಾಯವೆಂದರೆ, ಅದನ್ನು ಜನಜಂಗೂಳಿಗೆ ಹಿಡಿಸುವ ರೀತಿಯಲ್ಲಿ ಹೊಗಳುವದು ಅಥವಾ ತೆಗಳುವದು. (ಪ್ಲೇಟೋನ ಕಾಲದಲ್ಲಿ ಅರಿಸ್ಟೊಫೆನಿಸ್ ಎಂಬ ಜನಪ್ರಿಯ ನಾಟಕಕಾರನಿದ್ದನು. ಆತ ಯಾವ ಹೊಸ ವಿಚಾರ ಪ್ರಚಾರದಲ್ಲಿ ಬಂದರೂ ಅದನ್ನು ತನ್ನ ನಾಟಕಗಳಲ್ಲಿ ನಗೆಗೀಡಗೊಳಿಸಿ ಜನಪ್ರಿಯತೆ ಗಳಿಸಿದ್ದನು.)

ಪ್ಲೇಟೋನ ಹೇಳಿಕೆಯೆಂದರೆ ಜನಪ್ರಿಯತೆ, ಮಂದಿ ಮೆಚ್ಚಿದೆಯೆಂಬ ಸಂಗತಿ ಯಾವದೇ ನೀತಿಯ ತತ್ವದ, ಶಾಸನಸತ್ತೆಯ ಆಧಾರವಾಗಬಾರದು. ಜನ ಜಂಗುಳಿಯ ಮರುಳು ಮೆಚ್ಚಿಗೆಯನ್ನು ಅವಲಂಬಿಸಿದ ಆಳಿಕೆಯು ಒಂದು

ಕೆರಳಿದ ಕಡಲು. ಅದರಲ್ಲಿ ತೇಲುವದು ರಾಜ್ಯ ನೌಕೆಗೆ ಕ್ಷೇಮವಲ್ಲ. ಈ ಕಡಲನ್ನು ಯಾವದೇ ವಾಗ್ಮಿಯ ಆವೇಶದ ಗಾಳಿಯು ಕ್ಷೋಭಗೊಳಿಸಬಲ್ಲದು. ಅದರಿಂದ ನೌಕೆಯು ಹೊಯ್ದಾಡಬಹುದು. ಹಾಯ ಹರಿದು ಹುಟ್ಟ ಜಾರಿ ಚುಕ್ಕಾಣಿ ಮುರಿದು ದಿಕ್ಕುಗೆಡಬಹುದು.

ಅಂಥ ಪ್ರಜಾಪ್ರಭುತ್ವದ ಫಲಿತಾಂಶ ದಬ್ಬಾಳಿಕೆ-ಒಬ್ಬಾಳಿಕೆ. ಜನಸ್ತೋಮಕ್ಕೆ ಪ್ರಶಂಸೆ. ಮುಖಸ್ತುತಿಯೆಂದರೆ ಬಲು ಸವಿ. ಅದು 'ಜೇನಿಗೆ ಹಸಿದ ಜೀವ' ಅತಿ ಧೂರ್ತರ ಕಪಟಪಟು ನೀತಿಭ್ರಷ್ಟ ಪ್ರಶಂಸಕನು 'ಲೋಕಪಾಲಕ'ನೆಂದು ತನ್ನನ್ನು ಕರೆದುಕೊಂಡು ಸರ್ವಾಧಿಕಾರಕ್ಕೆ ಪರಮಸತ್ತೆಗೆ ಏರಬಲ್ಲನು. (ಹಿಟ್ಲರ ಸರ್ವಾಧಿಕಾರಿಯಾದದ್ದು ಪ್ರಜಾಪ್ರಭುತ್ವದ ಬಹುಮತದ ಬಲದಿಂದಲೇ.)

ಪ್ಲೇಟೋನ ಆಕ್ಷೇಪ ಹೀಗೆ-ತೀರ ಸಾದಾ ವಿಷಯಗಳಲ್ಲಿಯು ನಾವು ತಜ್ಞರನ್ನೇ ಕೇಳುತ್ತೇವೆ. ಚಪ್ಪಲಿ ಹರಿದರೆ ಚಮಗಾರನನ್ನೆ ಕಾಣುತ್ತೇವೆ. ನಮ್ಮ ಉದ್ದೇಶ ಸಾಧನೆಗೆ ತರಬೇತಿ ಪಡೆದವರನ್ನೆ ಹುಡುಕಿಕೊಂಡು ಹೋಗುತ್ತೇವೆ. ಆದರೆ ರಾಜಕೀಯದಲ್ಲಿ ಮಾತ್ರ ಮತಗಿಟ್ಟಿಸಿಕೊಳ್ಳಬಲ್ಲ ಪ್ರತಿಯೊಬ್ಬನಿಗೂ ಆಡಳಿತ ನಡಿಸಲು ಬರುತ್ತದೆಂದು ನುಣ್ಣಗೆ ಭಾವಿಸಿ ನಡೆಯುತ್ತೇವೆ! ಮತಗಳನ್ನು ಸಂಪಾದಿಸುವ ತಂತ್ರ ಬೇರೆ. ನಗರದ ರಾಜ್ಯದ ಆಡಳಿತವನ್ನು ನಡೆಯಿಸುವ ತಂತ್ರ ಬೇರೆ. ಅಲ್ಲಿ ನಿಲ್ಲುವವರು ಇಲ್ಲಿಯೂ ನಿಲ್ಲಬೇಕೆಂದಿಲ್ಲ. ಆದರೂ ನಾವು ಹಾಗೆ ನಂಬಿ ಕೆಡುತ್ತೇವೆ! 'ಕಿಂ ಆಶ್ಚರ್ಯಂ ಅತಃ ಪರಂ?'

ನಾವು ಬೇನೆಬಿದ್ದಾಗ ತಜ್ಞವೈದ್ಯನನ್ನು ಕರೆಯುತ್ತೇವೆ. ಹೊರತು ಅತಿ ಸುಂದರ ಅತಿ ವಾಗ್ಮಿಯಾದ ವೈದ್ಯನನ್ನಲ್ಲ. ಮದ್ದುಗಾರಿಕೆ ರೋಗನ್ನಿದಾನಗಳಲ್ಲಿ ತರಬೇತಿ ಪಡೆದ ಅಧಿಕಾರ ಪತ್ರವೇ ಅಲ್ಲಿ ಮುಖ್ಯ. ಅವನ ರೂಪ-ಯೌವನ ಇತರ ಗುಣ ಲಕ್ಷಣಗಳು ಅಲ್ಲಿ ತೀರ ಗೌಣ. ಆದರೆ ಇಡಿಯ ರಾಜ್ಯವೇ ಕಾಯಿಲೆ ಬಿದ್ದಾಗ, ಈ ರಾಜ್ಯದ ಜೀವನಕ್ಕೆ ಅಸ್ವಾಸ್ಥ್ಯವಿದ್ದಾಗ ನಾವು ಅತಿ ಉತ್ತಮನೂ ಪ್ರಾಜ್ಞನೂ ಆದ ವ್ಯಕ್ತಿಯ ಮಾರ್ಗದರ್ಶನವನ್ನೂ ಸೇವೆಯನ್ನೂ ಅಪೇಕ್ಷಿಸುವದೂ ಪಡೆಯುವದೂ ಉಚಿತವಲ್ಲವೇ?

ಅಂದಾಗ ಸಾರ್ವಜನಿಕ ಅಧಿಕಾರಸ್ಥಾನದಿಂದ ಕೈತವ (ಕಾಪಟ್ಯ)ವನ್ನೂ ಅಕ್ಷಮತೆಯನ್ನೂ ತಪ್ಪಿಸಿ, ಉತ್ತಮರನ್ನೆ ಆಯ್ದು ಅವರನ್ನು ಸರ್ವಸಾಮಾನ್ಯ ಹಿತಕ್ಕಾಗಿ

ಸಾರ್ವಜನಿಕ ಕಲ್ಯಾಣಕ್ಕಾಗಿ ಆಳಲು ಅಣಿಗೊಳಿಸುವ ಒಂದು ಪದ್ಧತಿಯನ್ನು ಕಂಡು ಹಿಡಿಯುವದೆ ರಾಜಕೀಯ ತತ್ವಶಾಸ್ತ್ರದ ಕೇಂದ್ರ ಸಮಸ್ಯೆಯಾಗಿದೆ. ಪ್ಲೇಟೋನ ಈ ಆಕ್ಷೇಪ ಈ ಅಪೇಕ್ಷೆ ಇಂದು ನಮ್ಮದೂ ಆಗಿದೆ. ●

## ಆದರ್ಶ ರಾಜ್ಯಕರ್ತರಿಗಾಗಿ ತರಬೇತಿ

ಜ್ಞಾನಿಯು ರಾಜನಾಗಬೇಕು, ಅಥವಾ ರಾಜನು ಜ್ಞಾನಿಯಾಗಿರಬೇಕು. ಆದರೆ ಇದು ಹೇಗೆ ಸಾಧ್ಯ ? ರಾಜನಾಗಬಲ್ಲವನು ಜ್ಞಾನಿಯೂ ಆಗಿರಬಲ್ಲನೇ ? ಆಗಿರಲಾರ. ಆದರೆ ಆಗುವಂತೆ ಏರ್ಪಾಡು ಇರಬೇಕು. ಅದು ಹೇಗೆ? ಪ್ಲೇಟೋನ ಉತ್ತರ-ಯೋಜನೆ ಅದಕ್ಕೆ ಸಿದ್ಧ. ಯೋಜನಾಬದ್ಧ ಶಿಕ್ಷಣ ಪದ್ಧತಿಗೆ ಅವನೇ ಆದ್ಯನು.

ಹತ್ತು ವರ್ಷ ಪ್ರಾಯ ಮಿಕ್ಕವರನ್ನೆಲ್ಲ ನಗರ ರಾಜ್ಯದಿಂದ ಹೊರತಳ್ಳಬೇಕು. ಮತ್ತು ಈ ಮಕ್ಕಳನ್ನು ಒಳಪಡಿಸಿಕೊಂಡು ಅವರಿಗೆ ಅವರ ತಾಯ್ತಂದೆಗಳ ಚಟಗಳಿಂದ, ನಡಾವಳಿಗಳಿಂದ ಕಾಪಾಡಬೇಕು. ಹಿರಿಯರ ಉದಾಹರಣೆಯಿಂದ ಹೆಜ್ಜೆ-ಹೆಜ್ಜೆಗೆ ಕೆಡುವ ಹರಯದವರಿಂದ ಆದರ್ಶ ರಾಜ್ಯವನ್ನು ಕಟ್ಟುವದು ಶಕ್ಯವಿಲ್ಲ. ಇಂಥ ಶಿಕ್ಷಣ ಯೋಜನೆ, ಶಿಶುವಿನ ಸಮಗ್ರ ಶಿಕ್ಷಣದ ಯೋಜನೆ, ಮಾಡಲು ಅನುಕೂಲ ಮಾಡಿಕೊಡಬಲ್ಲ ಒಬ್ಬ ಬುದ್ಧಿವಂತ ದೊರೆ ಎಂದಾದರೂ ಹುಟ್ಟಬಹುದು. ಕಾಲಿದಾಸನ ಮಾತಿನಲ್ಲಿ 'ಸಪಿತಃ ಪಿತರಃ ತೇಷಾಂ ಕೇವಲಂ ಜನ್ಮ ಹೇತವಃ' ಇಂಥ ದೊರೆಯೇ ಅಂಥ ಮಕ್ಕಳ ನಿಜವಾದ ತಂದೆ. ಅವರವರ ತಂದೆ-ತಾಯಿಗಳು ಬರೆ ಅವರ ಹುಟ್ಟಿಗೆ ಕಾರಣರು, ನಿಮಿತ್ತ ಮಾತ್ರರು !

ಅಂದರೆ ಪ್ಲೇಟೋನ ಆದರ್ಶ ರಾಜ್ಯದ ಪ್ರಥಮ ಸೋಪಾನ ಸಾರ್ವತ್ರಿಕ ಶಕ್ತಿ ಶಿಕ್ಷಣ. ಪ್ರತಿಯೊಂದು ಶಿಶುವಿಗೆ ಆರಂಭದಲ್ಲಿ ಶೈಕ್ಷಣಿಕ ಅವಕಾಶದ ಮಟ್ಟಿಗೆ ಪೂರ್ತಿ ಸಮಾನತೆಯನ್ನು ಒದಗಿಸಬೇಕು. ಅಲ್ಲಿ ವರ್ಣ, ವೃತ್ತಿ, ವರ್ಗವಿಶೇಷತೆಗಳಿಂದ ಯಾವ ಪ್ರಪಂಚವೂ ಆಗಕೂಡದು.

ಈ ಆರಂಭದ ಶಿಕ್ಷಣ ಎಂತಹದಿರಬೇಕು ? ಪ್ಲೇಟೋನ ಅಭಿಪ್ರಾಯದಂತೆ ಅದು ಮುಖ್ಯವಾಗಿ ಶಾರೀರಿಕ. 'ದಶವರ್ಷಾಣಿ ತಾಡಯೇತ್'-ಇದು ನಮ್ಮ ಪೂರ್ವಿಕರು ಹಾಕಿ ಕೊಟ್ಟ ಪಥ್ಯೆ. ಆದರೆ ಇದು ಈ ೧೦ ವರ್ಷ ೫ ವರ್ಷಗಳ ಮುದ್ದಾಟದ ನಂತರ-೧೫ ವರ್ಷಗಳ ವರೆಗೆ. ಪ್ಲೇಟೋ ಹಾಕಿ ಕೊಡುವ ಅಭ್ಯಾಸ ಪತ್ರಿಕೆಯಲ್ಲಿ ಮೊದಲಿನ ಹತ್ತು ವರ್ಷಗಳಲ್ಲಿ ಆಟ-ಪಾಟ, ಆರೋಗ್ಯ ದೇಹದಾರ್ಢ್ಯಗಳಿಗೆ ಪೂರ್ತಿ ಪ್ರಾಧಾನ್ಯ. ಪ್ರತಿಯೊಂದು ಶಾಲೆಗೂ ಒಂದು ವ್ಯಾಯಾಮ ಶಾಲೆ, ಗರಡಿಮನೆ ಮತ್ತು ಆಟದ ಬಯಲು ಏರ್ಪಡಲೇಬೇಕು. ಮುಂದಿನ ಆಯುಷ್ಯಕ್ಕೆ ಅಗತ್ಯವಾದ ಶಾರೀರಿಕ ಸಾಮರ್ಥ್ಯವನ್ನು, ಆರೋಗ್ಯ ಸಂಪತ್ತನ್ನು ಈ ಆರಂಭದ ೧೦ ವರ್ಷಗಳಲ್ಲಿಯೇ ಶಿಶುವು ಸಂಗ್ರಹಿಸಿಕೊಳ್ಳ ತಕ್ಕದ್ದು.

ಪ್ಲೇಟೋನಿಗೆ ದೀರ್ಘಾವಧಿ ಔಷದೋಪಚಾರದಲ್ಲಿ ತುಂಬ ತಿರಸ್ಕಾರ. 'ನಮ್ಮ ಈಗಿನ ಔಷಧ ವೈದ್ಯಕೀಯ ವಿಧಾನವು ರೋಗಗಳಿಗೆ ತರಬೇತಿ ಕೊಡುತ್ತದೆ!' ಎಂದಿದ್ದಾನೆ ಪ್ಲೇಟೋ ಸಾವಿರಾರು ವರ್ಷಗಳ ಹಿಂದೆಯೇ ! ಸಿರಿವಂತ ಸೋಮಾರಿ ಗಳಿಗೆ ಈ ರೋಗದ ಆರೋಗ್ಯತೆ ಒಪ್ಪುವದು. ಬಡ ದುಡಿಮೆಗಾರರಿಗೆ ಬೇನೆ ಬೀಳಲು ಬಿಡುವೆಲ್ಲಿದೆ ? ಆದ್ದರಿಂದ ನಿತ್ಯ ರೋಗಿಗಳು, ನಿರುಪಯೋಗಿಗಳು ನಮ್ಮ ರಾಷ್ಟ್ರವಾಗಬಾರದು. ಆದರ್ಶ ರಾಜ್ಯದ ಆರಂಭ ಆರೋಗ್ಯಶಾಲಿಯಾದ, ಸಾಮರ್ಥ್ಯಶಾಲಿಯಾದ ಶರೀರದಲ್ಲಿ ಆಗಬೇಕು.

ಇನ್ನು ಬರೆ ಅಂಗಸಾಧನೆ. ವ್ಯಾಯಾಮ, ಆಟ-ಪಾಟಗಳ ಪಟುತ್ವ ಸಾಲದು, ಇದು ಮನುಷ್ಯನಿಗೆ ಒಮ್ಮೆಲೆಯ ಬೆಳವಣಿಗೆ ಕೊಡುತ್ತದೆ. ಬಲಸಾಹಸದೊಂದಿಗೆ ಶಾರೀರಿಕ ಧೈರ್ಯದೊಂದಿಗೆ ಮಾನಸಿಕ ಸ್ಥೈರ್ಯವನ್ನು ಸೌಮ್ಯ ಸ್ವಭಾವವನ್ನು ಒದಗಿಸುವದು ಹೇಗೆ ? ದೈತ್ಯನ ಶಕ್ತಿ ಸಮಗೆ ಬೇಕು. ಆದರೆ ಅದರ ಹಿಂದೆ ದೇವನ ಸತ್ವವೂ ಇರಬೇಕು. ಇಲ್ಲವಾದರೆ ಆ ಶಕ್ತಿ ದೈತ್ಯಕೃತ್ಯಕ್ಕೆ ದುಡುಕಬಹುದು ! ನಮ್ಮ ರಾಷ್ಟ್ರ ಬರೆ ಪಂದ್ಯಾಟ ಗೆಲ್ಲುವ ಹುದ್ದರಿಗಳಿಂದ ಭಾರ ಎತ್ತುವ ಜಟ್ಟಿಗಳಿಂದ ತುಂಬಿರಬಾರದು.

ಪ್ಲೇಟೋ ಸಾತ್ವಿಕ, ಅಂತರಿಕ ಸಂಸ್ಕೃತಕ್ಕಾಗಿ ಸಂಗೀತವು ಈ ಶಿಕ್ಷಣ ಪದ್ಧತಿಯ ಅವಶ್ಯಕ ಅಂಗವಾಗಬೇಕೆಂದು ಹೇಳಿದ್ದಾನೆ. ಸಂಗೀತದಲ್ಲಿ ಶ್ರುತಿ-ತಾಲ-ಲಯಗಳ ಸಾಮಂಜಸ್ಯವಿರಲೇಬೇಕು. ಈ ಸಾಮಂಜಸ್ಯಕ್ಕೆ ಪಳಗಿದ ಮನಸ್ಸಿಗೆ ಪ್ರಮಾಣ ಬದ್ಧತೆ, ಸಾಮರಸ್ಯದ ವೃತ್ತಿ, ಬಾಳಿನ ಒಂದು ಹದವಾದ ಲಯಕಾರಿಕೆ, ಸಮ

ತ್ತೋಲ ಬುದ್ಧಿ ಕೆಲಮಟ್ಟಿಗೆ ವ್ಯಾಯಾಮ ವೃತ್ತಿಯೂ ಬಲಿತು ಬರಬಹುದೆಂದು ಪ್ಲೇಟೋನ ಪ್ರತಿಪಾದನೆ. 'ಸಂಗೀತವು ಶೀಲವನ್ನು ರೂಪಿಸಬಲ್ಲದು. ಈ ಮೂಲಕ ಸಾಮಾಜಿಕ. ರಾಜಕೀಯ ಪ್ರಶ್ನೆಗಳ ಮೇಲೆಯೂ ಪ್ರಭಾವ ಬೀರಬಲ್ಲದು. ಸಂಗೀತದ ರೀತಿ-ನೀತಿಗಳು ಬದಲಾದಂತೆ ರಾಜ್ಯದ ಮೂಲ ಭೂತನೇಮ-ನಿಯಮಗಳೂ ಬೇರೆ ಆಗಬಲ್ಲದು.'

ಪ್ಲೇಟೋನ ನಂಬಿಗೆಯಂತೆ ಸಂಗೀತವು ಬರೆ ಶೀಲಕ್ಕೆ ಸಂಸ್ಕಾರ, ಭಾವಕ್ಕೆ ಪರಿಷ್ಕಾರ ಮಾತ್ರವಲ್ಲ. ದೇಹಕ್ಕೆ ಆರೋಗ್ಯ ಸ್ವಾಸ್ಥ್ಯವನ್ನು ಕೊಡಬಲ್ಲದು. ಸಂಗೀತದಿಂದಲೇ ಗುಣಪಡಿಸಲು ಸಾಧ್ಯವಾಗುವಂಥ ಅನೇಕ ರೋಗಗಳಿರುತ್ತವೆ. ವಿಶೇಷತಃ ಉನ್ಮಾದ ಪ್ರಕಾರದವು. ಏಕೆಂದರೆ ಇಂಥ ರೋಗಗಳಿಗೆ ಮಾನಸಿಕ ಚಿಕಿತ್ಸೆಯೇ ಮುಖ್ಯ. ಮತ್ತು ಸಂಗೀತದ ಪ್ರಭಾವ ಮೂಲತಃ ಮತ್ತು ಮುಖ್ಯವಾಗಿ ಮಾನಸಿಕ.

ಈ ಕುರಿತು ಚರ್ಚಿಸುವಾಗ ಪ್ಲೇಟೋ ಅಭಾವಿತವಾಗಿಯೇ ಆಧುನಿಕ ಮನೋ ವಿಶ್ಲೇಷಣೆ ಶಾಸ್ತ್ರದ ವಿಚಾರಸರಣಿಯನ್ನೆ ಧ್ವನಿಸುವಂತಿದೆ! ಅಂತರ್ಮನಸ್ಸು, ಅಜಾಗ್ರತಸ್ಥಿರ, ಮನೋದಮನ, ಸ್ವಪ್ನ ಸಿದ್ಧಾಂತ ಇವೆಲ್ಲವುಗಳ ಉಲ್ಲೇಖ ಇಂದಿನ ಶಾಸ್ತ್ರೀಯ ಪರಿಭಾಷೆಯ ತೊಡಕು ಗೊಂದಲಗಳಿಲ್ಲದೆ ಪ್ಲೇಟೋ ಬಣ್ಣಿಸಿದ್ದಾನೆ. ನಿದ್ದೆಯಲ್ಲಿ ಬುದ್ಧಿ ಮತ್ತು ಕಾನೂನುಗಳ ಅಂಕೆ ಸಡಲಿಸಿದಾಗ ನಮ್ಮ ಒಳಗಿನ ಕಾಡುಪಶು ತನ್ನ ವಿಕಾರಗಳ ಉಕ್ಕಂದವನ್ನು ತಣಿಸಿಕೊಳ್ಳಲು ಎಂಥ ಅನೈತಿಕ ಅಸ್ವಾಭಾವಿಕ ಅಮಾನುಷ ಚೇಷ್ಟೆಯನ್ನು ಮಾಡಲು ಹೇಸು ವದಿಲ್ಲವೆಂಬುದನ್ನು ಪ್ಲೇಟೋ ಗುರುತಿಸಿದ್ದಾನೆ ಇರಲಿ.

ಹೀಗೆ ಅಂಗಸಾಧನೆ, ಆಟ-ಪಾಟ, ಆರೋಗ್ಯ ಸಂಪಾದನೆ ಮತ್ತು ಸಂಗೀತ ತಾಲಬದ್ಧ ಲಯಕಾರಿತೆಯ ಸಂಸ್ಕಾರ ಇಷ್ಟೇ ಸಾಕೆ? ಇಲ್ಲ. ಸಂಗೀತವು ಅತಿಯಾದರೂ ಮನಸ್ಸು ಕರಗಿ ದುರ್ಬಲವಾಗುತ್ತದೆ. ಬರೇ ಅಂಗಸಾಧನೆ ಪುಂಡ ಪಶುವನ್ನಾಗಿಟುಮಾಡುತ್ತದೆ. ಬರೆ ಸಂಗೀತ ಮನೋದೌರ್ಬಲ್ಯಕ್ಕೆ ಮುಳುವಾಗಿಬಿಡುತ್ತದೆ, ವಿಪರೀತ ಭಾವೋದ್ದೀಪನೆಯಿಂದ. ಆದ್ದರಿಂದ ಇವೆರಡೂ ಕೂಡಿದ ತರಬೇತಿಯು ಹದಿನಾರನೇ ವರ್ಷದ ನಂತರ ತಡೆಯಬೇಕು. ಅನಂತರ ವೈಯುಕ್ತಿಕ ಗಾಯನ-ವಾದನ ನಿಲ್ಲಿಸಿ ಸಾಮೂಹಿಕ ಗೀತ-ನೃತ್ಯಗಳನ್ನು ಇಟ್ಟು ಕೊಳ್ಳಬಹುದು-ಒಂದು ಸಾಂಘಿಕ ಶಿಸ್ತಿಗಾಗಿ.

ಈ ವಯಸ್ಸಿಗೆ ಗಣಿತ, ಇತಿಹಾಸ ಮತ್ತು ವಿಜ್ಞಾನ (ಶಾಸ್ತ್ರೀಯ ವಿಷಯ)ಗಳ

ತರಬೇತಿ ಸಿಗಬೇಕು. ಇವನ್ನು ಸ್ವಾರಸ್ಯಕ್ಕಾಗಿ ಸಂಗೀತಮಯವಾಗಿ ಮಾಡಬಹುದು. ಅಂದರೆ ಈ ವಿಷಯಾಭ್ಯಾಸಕ್ಕೂ, ಸಕ್ತಿ ಕಡ್ಡಾಯವಿರಕೂಡದು. ವಿದ್ಯೆಯೊಂದು ಮಧುವ್ರತ-ಮಧುಕರೀವೃತ್ತಿ. ಹೂವಿಂದ-ಹೂವಿಗೆ ಹಾರಿ ತುಂಬಿಯು ಬಂಡನ್ನುಂಡಂತೆ ಶಿಶುವಿನ ಮನಸ್ಸು ಸ್ವಚ್ಛಂದವಾಗಿ ಜ್ಞಾನವನ್ನು ಹೀರಿಕೊಳ್ಳಬೇಕು. ಒತ್ತಾಯದಿಂದ ಬಲವಂತಕ್ಕೆ ಗಳಿಸಿದ ಜ್ಞಾನವು ಮನಸ್ಸಿನೊಂದಿಗೆ ಎರಕವಾಗುವದಿಲ್ಲ. ಅದು ಕಲಿಯುವವನ ಒಳಸೊತ್ತಾಗಿ ಅಂತಃಸತ್ತ್ವವಾಗಿ ನಿಲ್ಲುವದಿಲ್ಲ. ಆದ್ದರಿಂದ ಆರಂಭದ ಶಿಕ್ಷಣವೆಲ್ಲ ಲೀಲಾರೂಪವಾಗಿ ವಿಲಾಸಗಾರಿಕೆಯಂತೆ ರೋಚಕ, ರಂಜಕ ರೀತಿಯಲ್ಲಿಯೇ ನಡೆಯತಕ್ಕದ್ದು. ಅಂದಾಗಲೇ ಆಯಾ ಬಾಲಕನ ಸ್ವಾಭಾವಿಕ ಬಲವನ್ನು ಅರಿತುಕೊಳ್ಳಲು ಅನುಕೂಲವಾಗುವದು.

ಹೀಗೆ ಸ್ವಚ್ಛಂದವಾಗಿ, ಚಿಕ್ಕಂದವಾಗಿ ಮೈ-ಮನಗಳೆರಡೂ ಬಲಿತು-ಬೆಳೆದು ಹೃಷ್ಟ ಪುಷ್ಟವಾದ ಮೇಲೆ ನಮ್ಮ ಆದರ್ಶ ರಾಜ್ಯಕ್ಕೆ ಭವ್ಯವಾದ ಶಾರೀರಿಕ ಮತ್ತು ಮಾನಸಿಕ ತಳಪಾಯ ಕಟ್ಟಿಕೊಟ್ಟಂತೆ ಆಗುವದು. ಅದರ ಮೇಲೆ ಮುಂದೆ ಯಾವದೇ ವಿಕಾಸಕ್ಕೆ ಅನುಕೂಲ. ಆದರೆ ಇವಿಷ್ಟು ಸಾಲವು, ಈ ರಾಜ್ಯಕ್ಕೆ ಸಮಾಜ ಜೋಪಾನದ ವಿಕಾಸಕ್ಕೆ ನೈತಿಕ ತಳಪಾಯವೂ ಅಗತ್ಯ. ಸಮಾಜದ ಘಟಕರೆಲ್ಲ ಒಂದು ಭಾವೈಕ್ಯವನ್ನು ಪಡೆಯಬೇಕು. ಬಿಡತನ ಕಳೆದು ಒಡಿತನ ಬರಬೇಕು. ಸಮಾಜವೆಂದರೆ ಬರೆ ಸಮುದಾಯವಲ್ಲ. ಅದಕ್ಕೆ ಸಾಮೂಹಿಕತೆ ಸಮನ್ವಯದ ಅಖಂಡತೆ, ಏಕಾತ್ಮತೆ ಒಡಮೂಡಬೇಕು. ಅಂಗಾಂಗಿತನ ಕೂಡಬೇಕು.

ಇದು ಹೇಗೆ ಶಕ್ಯ ? ಮಾನವರು ಪ್ರಕೃತಿಯಿಂದಲೆ ಅಗ್ರಹಿಗಳು, ಆಕ್ರಮಕರು, ಲೋಭಿಗಳು, ಮತ್ಸರಿಗಳು ವಿರಾಟ-ಹೋರಾಟಕ್ಕೆ ಆತುರರು. ಕಾಮುಕರು, ವಿಕಾರವಶರು. ಅಂದಾಗ ಇಂಥ ಸಿಡುಕರನ್ನು ಒಂದು ಸಮಾಜವಾಗಿ ಕಟ್ಟುವ ಸೂತ್ರ ಯಾವದು ? ಪೋಲೀಸನು ಬೀಸುವ ದೊಣ್ಣೆಯೇ ? ಅದು ಪಶುಪಾಲನೆ, ಅಲ್ಲದೆ ಬಹಳ ವೆಚ್ಚದ್ದು. ಭಾರಿಕ್ಷೋಭಕಾರಿ. ಕೇವಲ ದಂಡದಿಂದ ಸಮಾಜ ಐಕ್ಯ ಸ್ವಾಸ್ಥ್ಯಗಳನ್ನು ಸಂಘಟಿಸುವದು ಶಕ್ಯವೂ ಇಲ್ಲ, ಇಷ್ಟವೂ ಅಲ್ಲ.

ದಂಡಕ್ಕಿಂತ ಮಿಗಿಲಾದ ಉಪಾಯ ಒಂದಿದೆ. ಅದು ಧರ್ಮ, ಲೌಕಿಕವನ್ನು ಮೀರಿದ ಪರಲೌಕಿಕ ಅಧಿಸತ್ತೆಯ ಅಧಿಷ್ಠಾನವನ್ನು ಜನರ ನೈತಿಕ ಅವಶ್ಯಕತೆಗಳಿಗೆ ಕೊಡುವದು. ಆಹಾರ, ನಿದ್ರಾಭಯ, ಮೈಥುನಗಳನ್ನು ಆಳಲಿಕ್ಕೆ

ಅಂಕೆಯಲ್ಲಿ ಇಡಲಿಕ್ಕೆ 'ಧರ್ಮೋ ಹಿತೇಷಾಂ ಅಧಿಕೋ ವಿಶೇಷಃ'–ಎಂಬುದು ಪ್ಲೇಟೋನ ಹೇಳಿಕೆಯೂ ಅಹುದು.

ಪ್ಲೇಟೋ ಅಂದಿದ್ದಾನೆ–'ದೇವರಲ್ಲಿ ನಂಬಿಗೆಯಿಲ್ಲದೆ ಒಂದು ರಾಷ್ಟ್ರವೂ ಬಲಿಷ್ಠ ವಾಗದು' ಆ ದೇವರು ಎಂತಹದು ? ಬರೆ ಅತಿ ಭೌತಿಕ ಶಕ್ತಿ, ಪರಬ್ರಹ್ಮ ವಸ್ತು ಜಗತ್ತಿನ ಆದಿಕಾರಣ. ಅಂತಃಸ್ಫೂರ್ತಿ ಮುಂತಾದ ನಿರ್ಗುಣ ನಿರಾಕಾರ ತತ್ವವಲ್ಲ. ಅಂಥ ತತ್ವ ದುಃಖಿತರಿಗೆ, ದಲಿತರಿಗೆ ಸಾಂತ್ವನೆ ಕೊಡಲಾರದು. ಬದುಕಿನ ಹೋರಾಟದಲ್ಲಿ ಸಿಕ್ಕಿಬಿದ್ದ ಜೀವಿಗಳಿಗೆ ಧೈರ್ಯ ತರಲಾರದು. ಅಂಥ ವರಿಗೆ ಬೇಕು ಜೀವಂತ ದೇವರು. ತತ್ವವಾಗಿ ಅಲ್ಲ, ವೈಯಕ್ತಿಕ ಸತ್ವವಾಗಿ ಸಗುಣ ಸಾಕಾರ ಸ್ವರೂಪದಲ್ಲಿ. ಇಂಥ 'ಮಾನುಷೀ ತನುಮಾಶ್ರಿತ' ದೇವರು ಪಾಪಿಗೆ ಧೃತಿಗೆಡಿಸಬಹುದು. ದುರ್ಜನನ ಕೈತಡೆಯಬಹುದು. ಸಜ್ಜನನಿಗೆ ಧೈರ್ಯ ನೀಡಬಹುದು. ಇಂಥ ದೇವರನ್ನು ಆಶ್ರಯಿಸಿದ ಧರ್ಮದ ಸ್ವಲ್ಪ ಪ್ರೇರಣೆಯೂ 'ತ್ರಾಯತೇ ಮಹತೋ ಭಯಾತ್.'

ಚಕ್ರವರ್ತಿ ಆದನಂತರ ನೆಪೋಲಿಯನ್ ಗರ್ಜಿಸಿದ್ದನು. 'ಜಗತ್ತಿನಲ್ಲಿ ದೇವರು ಇಲ್ಲದಿದ್ದರೆ ನಾವೆ ಒಬ್ಬ ದೇವರನ್ನು ನಿರ್ಮಿಸಬೇಕಾದೀತು. ಇಲ್ಲವಾದರೆ ಈ ಜನತೆಯನ್ನು ಆಳುವದು ಕಷ್ಟ !'

ಈ ದೇವ–ಧರ್ಮ ಶ್ರದ್ಧೆಯೊಂದಿಗೆ ಇನ್ನೊಂದು ಶ್ರದ್ಧೆ–ಆತ್ಮದ ಅಮರತ್ವದಲ್ಲಿ ಶ್ರದ್ಧೆಯೂ ಬೇಕೆನ್ನುತ್ತಾನೆ ಪ್ಲೇಟೋ. ಮುಂದಿನ ಜನ್ಮದಲ್ಲಿ ಆದರೂ ತನಗೆ ಸುಖ ಸಿಗುತ್ತದೆ. ಈಗಿನ ದುಃಖ–ದುರಿತಗಳಿಗೆ ಕೊನೆ ಸಿಗುತ್ತದೆ ಎಂಬ ನಂಬಿಗೆಯೂ ಬೇಕು. ಮನುಷ್ಯನಿಗೆ ಸಹನೆ ತುಂಬಲಿಕ್ಕೆ ಜೊತೆಗೆ ಇವೆಲ್ಲ ಕಷ್ಟ–ನಷ್ಟ ತಾಪತ್ರಯಗಳು ಕೇವಲ ದೇಹಕ್ಕೆ, ನಮ್ಮ ಆತ್ಮ ಇವುಗಳಿಂದ ಅಲಿಪ್ತ, ಸ್ವತಂತ್ರ–ಎಂಬ ಭಾವನೆಯೂ ಅಷ್ಟೇ ಸಮಾಧಾನಕಾರಿ ! ವಿಶೇಷತಃ ಆತ್ಮದ ಅಮರತ್ವ ಹಾಗೂ ಜನ್ಮಾಂತರದ ಅಸ್ತಿತ್ವ ಇವುಗಳಲ್ಲಿ ಶ್ರದ್ಧೆಯಿದ್ದರೆ ನಮ್ಮ ಸ್ವಂತದ ಹಾಗೂ ಪ್ರಿಯ ಜನರ ಮರಣವನ್ನು, ವಿಯೋಗವನ್ನು ಸಹಿಸಲಿಕ್ಕೆ ನಮಗೆ ಧೈರ್ಯ ಬರುತ್ತದೆ. ದೇವರೂ ಜನ್ಮಾಂತರ ಇವೆಲ್ಲವೂ ಭ್ರಮೆ, ಸುಳ್ಳು–ಪ್ರಮಾಣಸಿದ್ಧವಲ್ಲ, ಪ್ರತ್ಯಕ್ಷವಲ್ಲ ಎಂದು ಇಟ್ಟುಕೊಂಡರೂ ಈ ನಂಬಿಗೆ, ಈ ಆಶೆ ಭಾವಿಕ ಹೃದಯಕ್ಕೆ ತ್ರಾಣವನ್ನು ತುಂಬದೆ ಇರುವದಿಲ್ಲ. ದೇವರೆಂಬುದು ಕೇವಲ ನಮ್ಮ ಪ್ರೀತಿ ಮತ್ತು ಆಶೆಗಳ ಒಂದು ಮೂರ್ತೀಕರಣ, ವ್ಯಕ್ತೀ ಕರಣವೆಂತಾದರೂ ಅದನ್ನು ನಂಬುವವರಲ್ಲಿ ನಷ್ಟವೇನೂ ಇಲ್ಲ. ಅದಕ್ಕೆ ನಮ್ಮ ಸುಭಾಷಿತಕಾರರು ಹೇಳಿಲ್ಲವೇ ? 'ನಾಸ್ತಿ ಚೇತ್ ನಾಸ್ತಿನೋ ಹಾನಿಃ । ಅಸ್ತಿ

ಚೇತ್‌ನಾಸ್ತಿಕೋ ಹತಃ' (ಇಲ್ಲವೆಂದರೆ ನಮಗೇನು ಹಾನಿಯಿಲ್ಲ. ಆದರೆ ನಿಜವಾಗಿಯೂ ಆತ್ಮ ಪರಮಾತ್ಮ ಇತ್ಯಾದಿ ಇರುವದೇ ಆದರೆ ನಾಸ್ತಿಕನು ಕೆಟ್ಟ !)

ಬೆಳೆಯುವ ಮಕ್ಕಳಿಗೆ ಅವರ ಎಳೆಯ ಸರಳ ಮನಸ್ಸಿಗೆ ಎಲ್ಲವನ್ನೂ ತಿಳಿಸಿ ಹೇಳುವದು ಬಿಟ್ಟಿ-ಬಿಡಿಸಿ ಮನಗಾಣಿಸುವದು ಕಷ್ಟ. ಅದು ಮಕ್ಕಳು ಇಪ್ಪತ್ತು ವರ್ಷ ವಯಸ್ಸಿಗೆ ಬಂದಾಗ ಮೊತ್ತ-ಮೊದಲಿಗೆ ನಾವು ಕೊಟ್ಟ, ಅವರು ಕಲಿತ ಎಲ್ಲ ಕಡ್ಡಾಯದ ಶಿಕ್ಷಣದ ಸತ್ವಪರೀಕ್ಷೆಗೆ ಅವರು ತೊಡಗುತ್ತಾರೆ. ವಿದ್ಯೆಯನ್ನು ಜ್ಞಾನವನ್ನು ಅನುಭವದ ಪ್ರಯೋಗದ ಒರೆಗಲ್ಲಿಗೆ ಹಚ್ಚುತ್ತಾರೆ. ಆಗ ಶಿಕ್ಷಕರಿಗೆ ವಿಪರೀತ ಕಷ್ಟ.

ಆಗಲೇ ಅವರನ್ನು ಕಠನಿಷ್ಠುರವಾಗಿ ಆಯ್ಕೆಗೆ ಒಳಪಡಿಸುವದು. ಅಶಕ್ತರನ್ನು ಅಯೋಗ್ಯರನ್ನು ತಳ್ಳಿ, ದಕ್ಷರನ್ನು, ಸಮರ್ಥರನ್ನು, ಯೋಗ್ಯರನ್ನು ಆದರ್ಶ ರಾಜ್ಯದ ಹೊಣೆಗಾರಿಕೆಗಳಿಗೆ ಅರ್ಹರಾಗಿ ಆರಿಸುವದು. ಈ ಕೊನೆಯ ಸ್ನಾತಕೋತ್ತರ-ಪರೀಕ್ಷೆ ಕೇವಲ ಗ್ರಾಂಥಿಕ ಅಥವಾ ಬೌದ್ಧಿಕವಲ್ಲ. ಪರೀಕ್ಷಾರ್ಥಿಯ ಪ್ರತಿಯೊಂದು ಶಕ್ತಿ, ಸಾಮರ್ಥ್ಯವನ್ನು ಪರೀಕ್ಷಿಸಲಾಗುವದು. ಅವನ ಪ್ರತಿಯೊಂದು ಮೌಢ್ಯವನ್ನು ಬೆಳಕಿಗೆ ತರಲಾಗುವದು. ಅದೊಂದು ನಿಷ್ಠುರ, ನಿರ್ದಯ ನಿಕಷಪ್ರಯೋಗ.

ಈ ಪರೀಕ್ಷೆಯಲ್ಲಿ ಒಬ್ಬನು ರೈತನಾಗಬಲ್ಲನೇ. ಆ ರಾಜ್ಯಾಧಿಕಾರಿಯಾಗಬಲ್ಲನೇ, ಕಸಬುಗಾರನೋ, ಪಂಡಿತನೋ. ಕಲಾಜೀವಿಯೋ-ಎಂಬವನ್ನು ಯಾವ ಆಗ್ರಹ-ಅನುಗ್ರಹವಿಲ್ಲದೆ ವಶೀಲ-ವಶೀಕರಣಕ್ಕೆ ಎಡಗೊಡದೆ ನಿರ್ಣಯಿಸಲಾಗುವದು. ಇಂಥ ಪರೀಕ್ಷೆಯಲ್ಲಿ ತೇರ್ಗಡೆ ಆದವರಿಗೆ ಮತ್ತು ೧೦ ವರ್ಷಗಳ ಶಾರೀರಿಕ, ಮಾನಸಿಕ ತರಬೇತಿ. ಇದಾದ ಮೇಲೆ ಎರಡನೆಯ ಸತ್ವಪರೀಕ್ಷೆ.

ಈ ಪರೀಕ್ಷೆ ಪ್ರಥಮ ಪರೀಕ್ಷೆಗಿಂತಲೂ ನಿಷ್ಠುರ ಬಿಕ್ಕಟ್ಟಿನದು ಮತ್ತು ನಿರ್ಣಾಯಕ. ಇದರಲ್ಲಿ ತೇರ್ಗಡೆ ಆಗದವರು ಎರಡನೆಯ ತರಗತಿಯ ಮುಂದಾಳುಗಳಾಗುವರು. ಅವರು ರಾಜಕರ್ಮಚಾರಿಗಳು, ಸರಕಾರ, ಸೇವೆ ಸಾರ್ವಜನಿಕ ಸೇವೆಯಲ್ಲಿ ಇವರು ಸಹಾಯಕ ಕಾರ್ಯಕರ್ತರು, ಕೆಳಮಟ್ಟದ ಅಧಿಕಾರಿಗಳು.

ಆದರೆ ಇಲ್ಲಿಯೇ ಅತಿ ಮಹತ್ವದ ಗಂಡಾಂತರ. ಈ ಅನುತ್ತೀರ್ಣರೂ ಮೊದಲಿನ

ಪರೀಕ್ಷೆಯಲ್ಲಿ ತಳ್ಳಲ್ಪಟ್ಟ ಅನರ್ಹರು. ಒಟ್ಟಾದರೆ ಅದು ಬಹು ದೊಡ್ಡ ಸಂಖ್ಯೆಯ ಅಸಂತುಷ್ಟರ ಗುಂಪಾಗುವದು. ಈ ಅಸಂತುಷ್ಟರೆಲ್ಲ ಒಟ್ಟಾಗಿ ಆದರ್ಶ ರಾಜ್ಯದ ಈ ಪ್ರಯೋಗವನ್ನೆ ನಾಶಗೊಳಿಸಲಿಕ್ಕೆ ದೊಂಬಿ ಎಬ್ಬಿಸಿದರೆ ? ಈ ಅನರ್ಹರೂ, ಅನುತ್ತೀರ್ಣರೂ ತಮ್ಮ ಭಾಗ್ಯದ ತೀರ್ಮಾನವನ್ನು ತೆಪ್ಪಗೆ ಒಪ್ಪಿಕೊಂಡು ಶ್ರೇಷ್ಠರೊಂದಿಗೆ ಸಹಕರಿಸುವರೆಂಬ ಆಶ್ವಾಸನವೇನು ? ಈ ಜನರು ಮನಸ್ಸು ಮಾಡಿದರೆ (ಅಂದರೆ ಕೆಡಸಿಕೊಂಡರೆ) ಮತ್ತೆ ಹುಂಬರ ಹಿಂಡಿನ ಬುದ್ಧಿ · ಪೌರುಷ, ಯೋಗ್ಯತೆ, ತಜ್ಞತೆಗಳಿಲ್ಲದ ಕೇವಲ ಸಂಖ್ಯಾಬಲದ ಪಶು ಶಕ್ತಿಯು ಪ್ರಜಾ ಪ್ರಭುತ್ವವೆಂಬ 'ಮಾಯಾ ಬಜಾರವನ್ನು ಸ್ಥಾಪಿಸುವ ಸಂಭವವಿದೆ.

ಹಾಗೆ ಅವರು ದೊಂಬಿ ಏಳದಂತೆ ತಮ್ಮ ಭಾಗ್ಯವನ್ನು ಒಪ್ಪಿ ಸಹಕರಿಸುವಂತೆ ಮಾಡಲು ಪಮ್ಮ ಪರಿಹಾರಕ್ಕೆ ಬರಬೇಕಾದ ಪರಮೋಪಾಯವೆಂದರೆ ಹಿಂದೆ ಹೇಳಿದ ದೇವಧರ್ಮಶ್ರದ್ಧೆ. ಈ ಅನುತ್ತೀರ್ಣರಿಗೆ, ಅಸಮರ್ಥರಿಗೆ, ಕೆಳತರಗತಿಯ ಅರ್ಹತೆಯುಳ್ಳವರಿಗೆ ಆಗ ಬಿಂಬಿಸಬೇಕು–ಅದು ಅವರ ದೇವದತ್ತ ಸ್ಥಾನ–ಮಾನ, ಗುಣ–ಕರ್ಮ ವಿಭಾಗದ ಅನುವಂಶಿಕ ಸಂಸ್ಕಾರ ಬಲದಿಂದ ಅವರಿಗೆ ಅಂಥ ತರಗತಿ ದೊರೆತು ತಾರತಮ್ಯಕ್ಕೆ ಒಳಪಡಬೇಕಾಗಿ ಬಂದಿದೆ ಅದು ಈಶ್ವರೀಚ್ಛೆ. ಅದಕ್ಕೆ ಪ್ರತಿಯೊಬ್ಬರೂ ತಲೆದೂಗಬೇಕು ; ತಲೆಬಾಗಬೇಕು.

ದೇವರು ಕೆಲವರನ್ನು ಬಂಗಾರದಂತೆ, ಕೆಲವರನ್ನು ಬೆಳ್ಳಿಯಂತೆ, ಇನ್ನು ಕೆಲವರನ್ನು ಕಂಚಿನಂತೆ, ಉಳಿದವರನ್ನು ಕಬ್ಬಿಣದಂತೆ ನಿರ್ಮಿಸಿದ್ದಾನೆ. ಈ ಧಾತುಗಳು ಶುದ್ಧವಿರುವಲ್ಲಿ ಅಂಥ ಪೀಳಿಗೆ ಶುದ್ಧ ಸತ್ವರಾಗಲಿ. ಕಲಬೆರಕೆ ಆದಲ್ಲಿ 'ವರ್ಣಸಂಕರ ಇದು ನಿಯತಿ. ಇದನ್ನು ಒಪ್ಪುವದೊಂದೇ ಗತಿ. ರೈತರಲ್ಲಿಯೂ ಬಂಗಾರದ ಜೀವ ಹುಟ್ಟಿಬರಬಹುದು. ರಾಜಕಾರಣಿಗಳಲ್ಲಿಯೂ ಕಬ್ಬಿಣದ ಜೀವ ಬರಬಹುದು. ಸೇನಾಪತಿಗಳಲ್ಲಿ ಬೆಳ್ಳಿಯವನು ಬಂದರೆ ಆತ ಬರೆ ಸಿಪಾಯಿ ಆಗಬಲ್ಲ. ಕಂಚು–ಕಬ್ಬಿಣದವರು ಎಂಥ ಒಳ್ಳುಲದಿಂದ ಬಂದರೂ ಅವರಿಂದ ನಗರ ರಾಜ್ಯದ ರಕ್ಷಣೆ ಆಗಲಾರದು. (ಅಂದು ನಗರಕ್ಕೆ ಒಂದು ರಾಜ್ಯ ಇರುತ್ತಿತ್ತು.)

ಅನರ್ಹರನ್ನು ಒಡಂಬಡಿಸಿ, ಅಂಕೆಯಲ್ಲಿಡಲಿಕ್ಕೆ ಪ್ಲೇಟೋ ನಾಗರಿಕರಿಗೆಲ್ಲ ಈ ಲೋಹಗಳ ಕಥೆಯನ್ನು ಮನದಟ್ಟಾಗಿ ಹೇಳಬೇಕೆಂದು ಸೂಚಿಸುತ್ತಾನೆ. ಇದಾಯಿತು. ಎರಡೂ ಪರೀಕ್ಷೆಗಳಲ್ಲಿ ತೇರ್ಗಡೆ ಆದವರ ವ್ಯವಸ್ಥೆ. ತೇರ್ಗಡೆ ಆದ ಉತ್ತಮರ ವಿಚಾರವೇನು ?

ಮನುಷ್ಯನ ಅಸ್ಥೆಗೆ ಯೋಗ್ಯವಾದುದೆಲ್ಲವೂ, ಮನುಷ್ಯರಾಗಿ ಬಿಚ್ಚಿಕೊಳ್ಳಲು ನಮಗೆ ನೆರವಾಗಬಲ್ಲುದೆಲ್ಲವೂ ಗೌರೀಶ ಸಾಹಿತ್ಯಕ್ಕೆ ಮೂಲವಸ್ತುವಾಗಿವೆ. ಇಲ್ಲಿ ಕೆಲಸ ಮಾಡಿರುವುದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗುತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ.

ಕೇವಲ ಬುದ್ಧಿ ಆಗಿದ್ದದ್ದು ಮನಸ್ಸಾಗಿ. ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವದರ ಕಡೆಗೆ ಗೌರೀಶ ಸಾಹಿತ್ಯದ ತುಡಿತವಿದೆ ಎನ್ನುವುದೇ ಅದರ ಹೆಚ್ಚುಗಾರಿಕೆ ಆಗಿದೆ. ಮಾನವ ವಿಕಾಸದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಮತ್ತು 'ನೈತಿಕತೆ' ಪ್ರಜ್ಞಾವಂತ ಸ್ಥಿತಿಯಲ್ಲಷ್ಟೇ ಸಾಧ್ಯವೆಂಬುದೇ ಅದರ ಮುಖ್ಯ ನಂಬಿಕೆಯಾಗಿದೆ.

'ಪ್ರಶ್ನೆ' ಸ್ವತಃ ತಾನೇಪ್ರಜ್ಞೆಯಲ್ಲ, ಆದರೆ ಪ್ರಜ್ಞೆಯಸ್ಥಿತಿ ಮುಟ್ಟಿ ಬೆಳಕು ಕಾಣುವ, ತಾನೇ ಬೆಳಕಾಗುವ ಅಭೀಷ್ಟವುಳ್ಳದ್ದು. ಗೌರೀಶ ಸಾಹಿತ್ಯದ ಅಭೀಷ್ಟ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ, ಶ್ರೇಷ್ಠ ಮಾನವತಾವಾದಿಯಾಗುವ ಈ ಅಂಥ ಬಗೆ ಕನ್ನಡ ದಲ್ಲಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು.

ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆ ಒಯ್ಯುವ ಹಂಬಲಪೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲಲ್ಲಿ ಅ ಡ ಗಿ ರ ಬೇ ಕಾ ಗಿ ಬಂದಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ಒಪ್ಪಿಕೊಂಡರೆ ಈ 'ಪ್ರಕಾಶನ'ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯಬಹುದು.

– ಯಶವಂತ ಚಿತ್ತಾಲ